ಸಂ. ೧೫

# ಶಿವಾನುಭವ

೧೯೪೦.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ] ಅಕ್ಟೋಬರ ೧೯೪೦. [ ಸಂಚಿಕೆ ೧

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೫ | ಜನವರಿ ೧೯೪೧. | ಸಂಚಿಕೆ ೪


## ಮಹಾದೇವಿಯಮ್ಮನ ವಚನಗಳು.


(ಬರಹಗಾರರು:— ಶ್ರೀ. ಸಿದ್ಧವೀರದೇವರು ಹೊಸಮಠ ಹುಬ್ಬಳ್ಳಿ)


ಹಿಂದೂಸಮಾಜವು "ನಸ್ತ್ರೀಸ್ವಾತಂತ್ರ್ಯಮರ್ಹತಿ" ಎಂಬ ಭಾರಿಯ ತೊಳನಳವಡಿಸಿ ಸ್ತ್ರೀ ಜನಾಂಗಕ್ಕೆ ಅಪಾರ ಅನ್ಯಾಯಮಾಡಿದ. ಸ್ತ್ರೀಯರಿಗೂ ವೇದಾಧಿಕಾರವನ್ನು ಕೊಡದೆ ಆತ್ಮವಿಚಾರದ ತಿಳವಳಿಕೆಯತ್ತ ತೆರಳಲು ತೆರವಿಲ್ಲವೆಂದು ತಡೆಯನ್ನುಂಟುಮಾಡಿದೆ. ಅವರನ್ನು ಅಕರುಣೆಯಿಂದ ಹಿಂದುಳಿದ ಪಂಗಡಕ್ಕೆ ತಳ್ಳಿದೆ. ತೂರಿದೆ. ಸ್ತ್ರೀಜೀವನವೆಲ್ಲ ಪುರುಷನ ಸೇವೆಯಲ್ಲಿಯೇ ಕಳೆದುಹೋಗಬೇಕು. " ಉದ್ಧರೇದಾತ್ಮನಾತ್ಮಾನಂ ನಾತ್ಮಾನ ಮವಸಾದಯೇತ್ " ಇದು ಸ್ತ್ರೀ ಜನಾಂಗಕ್ಕೆ ಅನ್ವಯಿಸದೆಂದು ಅದರ ಮೇಲೆ ಅಡ್ಡಗೆರೆಯನ್ನು ಕೊರೆದಿದೆ. ಸ್ತ್ರೀಯು ಅಬಲೆ, ಪುರುಷನಿಲ್ಲದೆ ಗತಿಯಿಲ್ಲ. ಮತಿಯಿಲ್ಲ. ಸೃಷ್ಟಿ, ಪರಮಾತ್ಮ, ಜೀವ, ಆತ್ಮ ಮುಂತಾದ ಸೂಕ್ಷ್ಮ ವಿಚಾರಗಳನ್ನು ತಿಳಿಯುವ, ಪೂಜಿಸುವ ಮತ್ತು ಸಾಕ್ಷಾತ್ಕಾರ ಮಾಡಿಕೊಳ್ಳುವ ಬಾಧ್ಯತೆ ಸ್ತ್ರೀಯರಿಗಿಲ್ಲವೆಂದು ಸಾರಿತು ಶಾಸನಂಗೈಯಿತು. ಇಷ್ಟಕ್ಕೆ ಶಾಂತವಾಗದೆ ಇನ್ನೂ ಮುಂದೆ ಸಾಗಿ ಮಾನವಕೋಟಿಯಿಂದತ್ತತ್ತ. ತೂರಿಬಿಟ್ಟಿದೆ. 'ಹೆಣ್ಣುಮಾಯೆ ಹೆಣ್ಣುರಕ್ಕಸಿ ಹೆಣ್ಣುಮಾರಿ' ಮುಮುಕ್ಷುತ್ವಕ್ಕೆ ಅಡ್ಡಿಯಾಗುವಳು ಎಂದು ಮುಂತಾದ ಹೀನಾಯಮಾನಗಳಾದ ಮಾತುಗಳಿಂದ ದೂಷಿಸಿತು. ದೂರೀಕರಿಸಿತು. ಇದರಿಂದ ಸ್ತ್ರೀ ಜನಾಂಗವು

ಪ್ರಪಂಚದ ವಸ್ತುಜ್ಞಾನವನ್ನು ಸಾಹಿತ್ಯವನ್ನು ಸಂಸ್ಕೃತಿಯನ್ನು ಕಲಿಯನ್ನು ಮತ್ತು ಮನುಷ್ಯತ್ವದ ಗುಟ್ಟಿನ ಗುರಿಯನ್ನು ಗುರುತಿಸಲು ಮತಿಮಂದವಾಗಿ ಅವುದೂ ಅರಿಯದಂತಾಯಿತು. ಆದುದರಿಂದ ಹಿಂದೂ ಜನಾಂಗದ ಅರ್ಧಸಂಸ್ಕೃತಿಯನ್ನು ನಾಶಮಾಡಿದ, ಅರ್ಧಜನಾಂಗವನ್ನು ಪಶುಪಂಕ್ತಿಗೆಳೆದ ಪಾಪವು ಹಿಂದೂ ಧರ್ಮಶಾಸ್ತ್ರಕಾರರ ಮಡಲಿನಲ್ಲಿ ಕಟ್ಟಿದೆ ಎಂದು ತಿಳಿಯಬೇಕಾಗಿದೆ.

ಆದರೆ ವೀರಶೈವ ಧರ್ಮಶಾಸ್ತ್ರಕಾರರು ಸ್ತ್ರೀಯರಿಗಾಗಿರುವ ಈ ಅನ್ಯಾಯದಿಂದ ಹೀನಸೆಯಿಂದ ದೂಷಣೆಯಿಂದ ಬಹಳ ದೂರವಾಗಿ ಸರಿದಿದ್ದಾರೆ. "ದಯೆಯಿಲ್ಲದ ಧರ್ಮ ಅದಾವುದಯ್ಯಾ, ಸಕಲಜೀವಾತ್ಮರಿಗೆ ಲೇಸನೇ ಬಯಸುವನು ಕುಲಜನು" ಎಂದು ಸಮಾನತೆಯನ್ನು ಸರಳತೆಯನ್ನು ಸಾರಿದ್ದಾರೆ. ಸಾಧಿಸಿದ್ದಾರೆ. ಅಧ್ಯಾತ್ಮ ತತ್ವವನ್ನರಿತು ಆಚರಿಸಿ ಮುಕ್ತಿಯನ್ನು ಪಡೆಯಲು ಮಾರ್ಗವನ್ನು ತೋರಿದ್ದಾರೆ. ಕೈಹಿಡಿದೊಯ್ದು ಮುಕ್ತಿಮಂದಿರಕ್ಕೆ ಮುಟ್ಟಿಸಿದ್ದಾರೆ. ಉದಾರ ಹೃದಯರಾಗಿದ್ದಾರೆ. ಸ್ತ್ರೀ ಜನಾಂಗಕ್ಕೆ ಉಪಕೃತರಾಗಿದ್ದಾರೆ.

ಪುರುಷನಂತೆಯೇ ಸ್ತ್ರೀಯೂ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ವ್ಯಕ್ತಿ. ಪುರುಷನು ಹಿರಿದು ಸ್ತ್ರೀ ಕಿರಿದು ಎಂಬುದಕ್ಕೆ ಏನೂ ಕಾರಣ ಕಾಣದು. ಸ್ತ್ರೀಯನ್ನು ರಾಕ್ಷಸಿಯೆಂದು ಕರೆಯುವಾಗ ಪರಮಾತ್ಮನ ಸೃಷ್ಟಿಗೆ ಅವಮಾನಮಾಡಿದಂತಾಗುತ್ತದೆ. ಪರಮಾತ್ಮನಿಂದ ನಿರ್ಮಿತವಾದ ಈ ಸಜೀವ ವ್ಯಕ್ತಿಗಳಿಗೆ ಇಂಥ ಆರೋಪಗಳು ಸರ್ವಥಾ ಸಲ್ಲವು. ಪುರುಷನಂತೆ ಸ್ತ್ರೀಯೂ ಸಹ ಅಧ್ಯಾತ್ಮ ವಿಚಾರದಲ್ಲಿ ಪ್ರವೇಶಿಸಬಹುದು. ಲಿಂಗಾಂಗ ಸಾಮರಸ್ಯವನ್ನು ಪಡೆಯಬಹುದು. ಪುರುಷನು ಅಮಾರ್ಗದಲ್ಲಿಯಿಟ್ಟರೆ ಅವನನ್ನು ತಿದ್ದಿ ಬೋಧಕಳಾಗಬಹುದು. ಸತಿಪತಿಗಳೊಂದಾಗಿ ಭಕ್ತಿಯನ್ನು ಸಾಧಿಸಬಹುದು. ಸತಿಪತಿಗಳೊಂದಾದ ಭಕ್ತಿ ಹಿತವಾಗಿದೆ, ವಿಹಿತವಾಗಿದೆ. ಸತಿಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷಬೆರಸಿದಂತೆ ವಿರಸವಾಗುವದು.

"ಗಂಡ ಶಿವಲಿಂಗ ದೇವರ ಭಕ್ತ
ಹೆಂಡತಿ ಮಾರಿ ಮಸಣೆಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆಮಾಂಸ

ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಿಕೆಯ ಹೊರಗೆ ತೊಳೆದಂತೆ "

ಇಂತಾಗುವದು ಯಾವ ಧರ್ಮ? 'ಧರ್ಮಾರ್ಥಕಾಮ'ಗಳಲ್ಲಿ ಸತಿ ಪತಿಗಳು ಒಟ್ಟಾಗಿ ಭಾಗವಹಿಸುವದಷ್ಟೇ ಅಲ್ಲದೆ ಮೋಕ್ಷದಲ್ಲೂ ಸಹ ಸಮಾನವಾದ ಅಧಿಕಾರವಿದೆಯೆಂದು ವೀರಶೈವ ಧರ್ಮಶಾಸ್ತ್ರಕಾರರು ಸಾರಿ ಸಾರಿ ಹೇಳಿದ್ದಾರೆ. ಸ್ತ್ರೀಸ್ವಾತಂತ್ರ್ಯಾಪಹೃತ ಶಾಸ್ತ್ರಕಾರರನ್ನು ದೂರಿದ್ದಾರೆ. ಅವರಿಗೆ ಮಾರುತ್ತರವನ್ನು ಕೊಟ್ಟಿದ್ದಾರೆ. "ಹೆಣ್ಣು ಹೆಣ್ಣಲ್ಲ ರಾಕ್ಷಸಿಯಲ್ಲ ಹೆಣ್ಣು ಪುರುಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ" "ಹೆಣ್ಣು ಮಾಯೆಯೆಂಬರು, ಮಣ್ಣು ಮಾಯೆಯೆಂಬರು, ಹೊನ್ನು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯಲ್ಲ. ಹೊನ್ನು ಮಾಯೆಯಲ್ಲ. ತನ್ನ ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ" "ಎಲ್ಲಿ ನೋಡಿದಲ್ಲಿ ಮನ ವೆಳಿಸಿದರೆ ಆಣೆ ನಿಮ್ಮ ಪ್ರಮಥರಾಣೆ ಪರವಧುವನು ಮಹಾದೇವಿಯೆಂಬೆ. ಕೂ. ಸಂ. ದೇವ" ಎಂದು ತಮ್ಮ ಉದಾತ್ತ ಉಚ್ಚ ತತ್ವಗಳನ್ನು ತೋರ್ಪಡಿಸಿದ್ದಾರೆ. ಸ್ತ್ರೀಯರಿಗೆ ಹಿರಿಮೆಯನ್ನು ಧಾರ್ಮಿಕ ಸ್ವಾತಂತ್ರ್ಯತೆಯನ್ನು ಕೊಟ್ಟಿದ್ದಾರೆ. ಮಹಾಮಾತೆಯೆಂದು ಮನ್ನಿಸಿದ್ದಾರೆ, ಮಾನಿಸಿದ್ದಾರೆ. ಕೈಮುಗಿದಿದ್ದಾರೆ.

ಈ ತೆರನಾಗಿ ವೀರಶೈವ ಧರ್ಮಶಾಸ್ತ್ರಕಾರರು ಸ್ತ್ರೀಯರಿಗೆ ಸರಿಯಾದ ಸ್ಥಾನ ಗೌರವಗಳನ್ನು ಕಲ್ಪಿಸಿಕೊಟ್ಟದ್ದರಿಂದ ಅನೇಕ ಜನ ಶರಣೆಯರು ಸುಂದರವಾದ ಸರಸವಾದ ಮೃದುವಾದ ಮುದ್ದಾದ ಕಾವ್ಯಗಳನ್ನು ವಚನಗಳನ್ನು ಬರೆದು ಕವಿತ್ರಿಯರಾದರು. ವಚನಕಾರರಾದರು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಮರ್ಮವನ್ನರಿದಾಚರಿಸಿದರು ವೇದ ಸ್ಮೃತಿಗಳು ಕೊಡದ ಅಧಿಕಾರವನ್ನು ಹೊಂದಿ ಮನುಷ್ಯತ್ವದ ಗುರಿಯನ್ನು ಗುರುತಿಸಿದರು. ಸಾಧಿಸಿದರು. ಬೋಧಿಸಿದರು. ಪ್ರಪಂಚದ ಸ್ತ್ರೀ ಜನಾಂಗಕ್ಕೆ ಆದರ್ಶರಾದರು. "ರೂಪದಲ್ಲಿ ಹೆಣ್ಣಾದರೇನು ? ಭಾವಿಸಲು ಗಂಡು ರೂಪು" ಎಂದು ಧೀರತನದಿಂದ ನುಡಿದರು. ನಡೆದರು ತಮ್ಮ ಮಹತ್ತರಗಳಾದ ಜೀವನಗಳಿಂದ ಹೆಸರಾದರು. ಅವರ ಪ್ರಭಾವವು ಕನ್ನಡ ತೆಲಗು ತಮಿಳು ಇತಿಹಾಸಗಳಲ್ಲಿ ಮತ್ತು ವೀರಶೈವ ಮತ ಗ್ರಂಥಗಳಲ್ಲಿ ತೇಜಃಪುಂಜವಾಗಿದೆ ಪುಣ್ಯಪ್ರದವಾಗಿದೆ.

ಅವರಲ್ಲಿ ಮಹಾದೇವಿಯಮ್ಮಗಳು ಒಬ್ಬರು. ಒಂದರು ದೇಶ (ಕಾಶ್ಮೀರ)ದ ಮಾಂಡವ್ಯಪುರವನ್ನು ಮಹಾದೇವನೆಂಬ ಅರಸು ಆಳುತ್ತಿದ್ದನು. ಅವನಿಗೆ ಮಹಾದೇವಿಯೆಂಬ ಪತ್ನಿಯಿದ್ದಳು. ಅವರು ಶಿವಭಕ್ತರಾಗಿ ದಿನದಿನವೂ ಆರು ಸಾವಿರ ಜಂಗಮರಿಗೆ ಆರೋಗಣೆಯನ್ನೀಯುತ್ತಿದ್ದರು. ಒಮ್ಮೆ ಕಲ್ಯಾಣದ ಬಸವನಿಗೆ ಜಂಗಮರ ಬೇಕಾದುದರಿಂದ ಶೆಟ್ಟಿಯ ವೇಷವನ್ನು ಧರಿಸಿ ಮಾಂಡವ್ಯಪುರದ ಅರಮನೆಯಲ್ಲಿ ನುಗ್ಗಿ ಜಂಗಮರನ್ನು ಅಪಹರಿಸಿಕೊಂಡು ಹೋದನು ಈ ಸಂಗತಿಯನ್ನು ಅರಸು ಅರಿದು ಕೆರಳಿದನು ಸಿಡಿಮಿಡಿಗೊಂಡನು. ಇಬ್ಬರು ಚಾರರನ್ನು ಕರೆದು ಅವರ ಕತ್ತಿಗೆ ಬದನೆಯ ಕಾಯಿಗಳನ್ನು ಕಟ್ಟಿ ವೇಷಧಾರಿ ಜಂಗಮರನ್ನು ಮಾಡಿ ಬಸವನನ್ನು ಇರಿದುಕೊಲ್ಲಲು ಅವರ ಕೈಗೆ ಕಠಾರಿಯನ್ನಿತ್ತು ಕಳುಹಿದನು. ಅವರು ಕಲ್ಯಾಣವನ್ನು ಸೇರಿ ಶರಣರೊಡಗೂಡಿ ಕುಳಿತಿರಲು ಅವರ ಸಟೆಯಾದ ಲಿಂಗಗಳು ದಿಟವಾದ ಲಿಂಗಗಳಾಗಿವೆ. ೧ ಸತ್ಯ ಶರಣರಾಗಿದ್ದಾರೆ. ಈ ಸಂಗತಿಯನು ಅರಸನಿಗರುಹಲು,—

"ಹಿರಿಯರ ದರ್ಶನ ನಯನಕ್ಕೆ ಚಲುವು
ಸತ್ಪಾತ್ರಕ್ಕಿಡುವದು ಹಸ್ತಕ್ಕೆ ಚಂದ
ಸತ್ಯವನುಡಿವುದು ವಾಕ್ಯಕ್ಕೆ ಭೂಷಣ
ಶಿವಸ್ತುತಿ ಕೇಳುವದು ಕರ್ಣಕ್ಕೆ ಅಲಂಕಾರ
ಶರಣರೊಡನೆ ಸಂಭಾಷಣೆ ಪ್ರಾಣಕ್ಕೆ ಶೃಂಗಾರ

ಇಂತಿಲ್ಲದವನ ಬಾಳು ಹೊಲತಿಯ ಜೋಗತಿಯ ಕೈಯ ಪಾತ್ರೆಯಿಂದ ಕಡೆ " ಎಂದು ಅರಸೊತ್ತಿಗೆಯ ಆಶೆಯನ್ನು ಅಳಿದು ಮಹಾದೇವಿಯೊಡನೆ ಕಲ್ಯಾಣ ಪಟ್ಟಣವನ್ನು ಪ್ರವೇಶಿಸಿದನು ಎಂದು ಚೋರಬಸವ ಪುರಾಣ ಮುಂತಾದ ಗ್ರಂಥಕಾರರು ಹೇಳಿದ್ದಾರೆ. ಇದನ್ನೇ ಕವಿಚರಿತ್ರೆಕಾರರು ಒಪ್ಪಿಕೊಂಡು ಎತ್ತಿಕೊಂಡಿದ್ದಾರೆ.

ಮಹಾದೇವಿಯಮ್ಮನು ಅರಸಿಯಾಗಿದ್ದ ಸಂಗತಿಯನ್ನು ಅವಳ ವಚನಗಳೇ ಸೂಚಿಸುತ್ತವೆ.

---

(೧) ಇವರಲ್ಲಿ ಒಬ್ಬನು 'ನಿಜಲಿಂಗ ಚಿಕ್ಕಯ್ಯ' ನೆಂಬ ಹೆಸರಿನಿಂದ ಹೆಸರಾಗಿದ್ದಾನೆ. ಇವನ ನಿಜವಲ್ಲದ ಲಿಂಗವು ನಿಜಲಿಂಗವಾದುದಾಗಿ ನಿಜಲಿಂಗ ಚಿಕ್ಕಯ್ಯನೆಂಬ ಹೆಸರು ಬಂದಿರಬೇಕು. ಇವನನ್ನು ಹರಿಹರ ಮೊದಲಾದ ಕವಿಗಳು ಕೊಂಡಾಡಿದ್ದಾರೆ.

"ದುಕೂಲ ಮುಂತಾದ ವಸ್ತ್ರಂಗಳಲ್ಲಿ
ಹೇಯ ಮುಂತಾದ ಆಭರಣಂಗಳಲ್ಲಿ
ಮೌಕ್ತಿಕ ಮುಂತಾದ ಪಾಷಾಣಂಗಳಲ್ಲಿ
ಚಂದನ ಮುಂತಾದ ವಾಸನೆಯಲ್ಲಿ
ಅಂದಣ ಛತ್ರಚಾಮರ ಕರಿ ತುರಗಂಗಳು
ತಾನು ಸೋಂಕುವ ವೈಭವ ಮುಂತಾದ ಸಕಲ ಸುಖಂಗಳು
ಲಿಂಗಕ್ಕೆಂದು ಕಲ್ಪಿಸಿ ಅಂಗೀಕರಿಸುವನ ಇರವು
ವಾರಿಸಿಲೆ ನೋಡನೋಡಲಿಕ್ಕೆ ನೀರಾದಂತೆ......"

"ಕಾಷ್ಠವ ಸುವರ್ಣವ ಮಾಡಿಹೆನೆಂಬ ಘಾತಕತನವೆ? ನಿಮ್ಮ ಭಕ್ತಿ ಸಕಲ ದೇಶ ಕೋಶ ವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದಿಹೆನೆಂಬ ಕೈಕೂಲಿಯೇ ನಿಮ್ಮ ಭಕ್ತಿ ?"

ಇದು ಪೂರ್ವಾನುಭೂತ ರಾಜೋಪಯೋಗ್ಯವಿಷಯಂಗಳನ್ನು ನೆನೆನೆನೆದು ಹಾಡಿಕೊಂಡಿರುವದರಿಂದ ಮೊದಲು ನಾಡಿನ ನಾಡನೊಡೆಯನ ರಾಣಿಯಾಗಿ ಬಳಿಕ ಪರಮ ಶರಣೆಯಾದಳು.

ಉಡುತಡಿಯ ಅಕ್ಕಮಹಾದೇವಿಯು ಕಲ್ಯಾಣಕ್ಕೆ ಬಂದಾಗ ಅವಳ ದರ್ಶನಕ್ಕೆ ಬಂದ ಶರಣೆಯರ ಹೆಸರುಗಳಲ್ಲಿ ಮಹಾದೇವಿಯಮ್ಮಗಳ ಹೆಸರಿದೆಯಾದ್ದರಿಂದ ಅಮ್ಮನು ಅರಸೊತ್ತಿಗೆಯ ಆಶೆಯನ್ನು ಅತಿಗಳೆದು ಅಕ್ಕನಿಗಿಂತ ಮುಂದೆ ಬಂದು ಕಲ್ಯಾಣದ ಶರಣೆಯಾಗಿದ್ದಳು ಶರಣೆಯರಲ್ಲಿ ಮಹಾದೇವಿಯಮ್ಮನಿಗಿರುವ ಘನತೆ ಗೌರವಗಳು ಅಕ್ಕನಿಗಿಂತ ಕಡಿಮೆಯವಲ್ಲ. ಒಂದು ದೃಷ್ಟಿಯಿಂದ ಇನ್ನೂ ಮಿಗಿಲೆಂದರೂ ಸಲ್ಲುವದು. ಏಕೆಂದರೆ ಉಡುತಡಿಯ ಅಕ್ಕನು ಸ್ವತಃ ಅರಸುಮನೆತನದವಳಲ್ಲ ಅರಸೊತ್ತಿಗೆಯ ಸುಖವನ್ನು ಉಂಡವಳೂ ಅಲ್ಲ. ಕಾಶ್ಮೀರದ ಮಹಾದೇವಿಯು ಸ್ವತಃ ಅರಸಿ ಅರಸುಮನೆಯ ಹಲವಾರು ಸುಖಗಳನ್ನು ಅರಸನೊಡನೆ ಉಂಡುಟ್ಟು ಬಾಳಿದವಳು. ಅನುಭವಿಸುತ್ತಿರುವ ರಾಜಸುಖಗಳನ್ನು ಒಮ್ಮೆಗೆ ಒಮ್ಮನದಿಂದ ತಳ್ಳಿತೂರಿ ಶರಣೆಯಾದವಳು. ಹೀಗಾಗುವದು ಸರ್ವಸಾಧಾರಣವಾದ ಮಾತಲ್ಲ. ಅನುಭವಿಸಲಾಗದಿರುವ ಸುಖಸೌಲಭ್ಯಗಳನ್ನು ಬಿಡಬಹುದು. ಅನುದಿನವು ಅನುಭವಿಸುತ್ತಿರುವದನ್ನು ಬಿಟ್ಟುಬಿಡುವದು ತೀರಕಷ್ಟಸಾಧ್ಯ

ವಾದ ಮಾತು. ಇದು ಕಾರಣ "ಉಟ್ಟ ಸೀರೆಯು ತೊರೆದು ಬಟ್ಟಬಯಲಾದರು ನೋಳಿಗೆಯ ಮಾರಯ್ಯನ ರಾಣಿಯರು" ಎಂದು ಮುಂತಾಗಿ ಶರಣರು ತುತಿಸಿರುವರು. ಮಹಾದೇವಿಯಮ್ಮ ಮಹಾದೇವಿಯಕ್ಕನಿಗಿಂತ ವಿರತಿಯಲ್ಲಿ ಕೊಂಚ ಉನ್ನತಸ್ಥಾನವಿದೆಯೆಂದು ಹೇಳಿದರೆ ಏನೂ ತಪ್ಪಾಗಲಿಕ್ಕಿಲ್ಲ; ಅಥವಾ ಇಬ್ಬರು ಮಹಾದೇವಿಯರೆ. ಅವಳು ಅಕ್ಕ ಇವಳು ಅಮ್ಮ ಅಷ್ಟೇ!

ಮಹಾದೇವಿಯಮ್ಮನು ತನ್ನ ಜೀವನದಲ್ಲುಂಟಾದ ಜಾಜ್ವಲ್ಯವಾದ ಸ್ವಾನುಭಾವದಿಂದ ತತ್ವಪೂರಿತವಾಗಿ ಹೊರಹೊಮ್ಮಿದ ಕೆಲವು ವಚನಗಳಿವೆ. ೬೩ ಮಾತ್ರ ಸದ್ಯಕ್ಕೆ ದೊರೆತಿವೆ. 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ" ಎಂಬ ಮುದ್ರಿಕೆಯಿಂದ ಮೂಡಿವೆ. ಪ್ರತಿಯೊಂದು ವಚನದಲ್ಲಿಯೂ ಅಪಾರವಾದ ಅರ್ಥ ಅಡಕವಾಗಿದೆ. ಸೂಕ್ಷ್ಮ ತತ್ವ ತುಂಬಿದೆ. ಇವುಗಳ ಶಬ್ದವಿನ್ಯಾಸ ವಾಕ್ಯರಚನೆ ಉಪಮಾನೋಪಮೇಯಾದ್ಯಲಂಕಾರಗಳು ಅಂದವಾಗಿವೆ. ಮೃದುವಾದ ಮುದ್ದಾದ ಶಬ್ದಗಳು ಸಾಹಿತಿಗಳಿಗೆ ಮುದವನ್ನು ತೋರುತ್ತವೆ. ಇವು ಸಾಮಾನ್ಯರಿಂದ ಅರಿತುಕೊಳ್ಳಲು ಕೊಂಚ ಕಷ್ಟಸಾಧ್ಯವಾದರು ತತ್ವ ಜಿಜ್ಞಾಸುಗಳಿಗೆ ತುಂಬ ಸಂತೋಷವನ್ನುಂಟು ಮಾಡುವಂತಿವೆ.

ಶ್ರದ್ಧೆ, ಸನ್ಮಾರ್ಗ, ಭಕ್ತಿಹೀನಂಗೆ ವಿಶ್ವಾಸ ಘಾತಕಂಗೆ ವಂದಿಸಿ ನಿಂದಿಸುವಂಗೆ ದೇವದೂರನೆಂದುಒತ್ತಿಬಿತ್ತರಿಪ ಬಗೆಯನ್ನಿಲ್ಲಿ ನೋಡಿ. "ಕಲ್ಲಬಿತ್ತಿನೀರನೆರೆದಲ್ಲಿ ಪಲ್ಲವಿಸುವದು ದಿಟವೇ! ಬೀಜ ವೃಕ್ಷದಂತೆ?

ಶ್ರದ್ಧೆ ಸನ್ಮಾರ್ಗ ಭಕ್ತಿಯಿಲ್ಲದಲ್ಲಿ
ಗುರುಭಕ್ತಿ, ಲಿಂಗಪೂಜೆ, ಚರಸೇವೆ
ಈ ತ್ರಿವಿಧ ಇತ್ತಲೇ ಉಳಿಯಿತ್ತು
ಮತ್ತೆ ನಿಜವಸ್ತು ಎತ್ತಣ ಸುದ್ದಿ ನಿಮಗೆ

ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲಿ ವಿಶ್ವಾಸ ಬೇಕು." ಮತ್ತಂ "ಬಿತ್ತಿದ ಬಿತ್ತು ಪೃಥುವಿಯ ಕೂಟ ಅಪ್ಪುವಿನ ದ್ರವದಿಂದ ಮಸ್ತಕ ಒಡೆವುದಲ್ಲದೆ,

ಉಷ್ಣದ ಡಾವಗಕ್ಕೆ ಬೆಂಕಿಯ ಬೇಗಿಗೆ ಮಸ್ತಕ ಒಡೆವುದುಂಟೇ?
ಲಿಂಗವು ಭಕ್ತಿಯ ಶ್ರದ್ಧೆಗೆ, ವಿಶ್ವಾಸದ ಸುಸಂಗಿಗೆ

ನಿಶ್ಚಯವಪ್ಪಲಿಂಗ ದೃಷ್ಟವಪ್ಪುದಲ್ಲದೆ
ಉನ್ಮತ್ತನಪ್ಪ ವಿಶ್ವಾಸ ಘಾತಕಂಗೆ ವಂದಿಸಿ ನಿಂದಿಸುವಂಗೆ,
ಹಿಂದೆ ಮುಂದೆ ಬಂದುದ ಬಾಯಿಗೆಡುವವಂಗೆ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗ
ಸಂದಿಸನವರಿಗೆ''

ಈಶ್ವರನು ಯಲ್ಲೆಡೆಯೊಳುಂ ನಿಲ್ಲದೆ ಬಲ್ಲಿದನಾಗಿ ಸಲ್ಲೀಲೆಯಿಂದೊಪ್ಪುತಿಹನೆಂದು ಹೇಳುವ ವಚನವಿದು—

''ಪೂಜಿಸಿ ಕಂಡಿಹೆನೆಂದರೆ ಪೂಜೆಗೆ ತನ್ಮಯ ಮೂರ್ತಿ ನೀನು
ನೆನಹಿನಲ್ಲಿ ಅನುಕರಿಸಿ ಕಂಡಿಹೆನೆಂದಡೆ ಆ ನೆನಹಿಂಗೆ ಆತ್ಮಸ್ವರೂಪನು ನೀನು
ಎಲ್ಲಾ ಕಡೆಯಲ್ಲಿ ಭಿನ್ನವಮಾಡಿಕೊಂಡಿಹೆನೆಂದರೆ
ಅಣೋರಣೀಯಾನ್ ಮಹತೋಮಹೀಯ ನೀನು
ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದಿಪ್ಪೆ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಚನ್ನಮಲ್ಲಿಕಾರ್ಜುನನು
ವಿಶ್ವಾಸ ಎಲ್ಲಿಪ್ಪುದು ಅಲ್ಲಿ ತಪ್ಪದಿಪ್ಪನು''

ಮತ್ತಂ— ''ಮಣ್ಣನಿತ್ತು ನಿನ್ನ ಕಂಡಿಹೆನೆಂದಡೆ ಜಗದ್ಭರಿತ ನೀನು
ಹೊನ್ನನಿತ್ತು ನಿಮ್ಮ ಕಂಡಿಹೆನೆಂದಡೆ ಮನೋಮಯ ಮೂರ್ತಿ ನೀನು
ಹೆಣ್ಣನಿತ್ತು ನಿಮ್ಮ ಕಂಡಿಹೆನೆಂದಡೆ ತ್ರಿವಿಧಶಕ್ತಿ ಮೂರ್ತಿ ನೀನು,
ಮನವನಿತ್ತು ನಿಮ್ಮ ಕಂಡಿಹೆನೆಂದಡೆ ಹಿರಣ್ಮಯ ಮೂರ್ತಿ ನೀನು,
ಎನಗೇನು ನಿಮಗಿತ್ತು ಕಾಂಬ ಕಾಣಿಕೆ ?
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ''

ಸ್ಥೂಲ, ಸೂಕ್ಷ್ಮ, ಕಾರಣ, ಲಕ್ಷಣವನುಳ್ಳ ಪರಶಿವನು ಅನುಭಾವಿಯಾದ ಶರಣನ ಲಕ್ಷಣವನಿಲ್ಲಿ ಹೇಳಿಹರು—

''ಬೀಜದೊಳಗಣ ವೃಕ್ಷದ ಹಣ್ಣ ಅದನಾರು ಮೆಲಬಹುದು ?
ಸಸಿಯೊಳಗಣ ಲತೆಪರ್ಣ ತಲೆದೋರದನ್ನ ಸುಗಂಧಿನ
ಕುಸುಮವನದಾರು ಮುಡಿಯುವರು ?
ಇಂತೀ ಅರುವಿನ ಅರುಹ ಕುರುಹಿಟ್ಟು ಕಂಡವನೇ ಲಿಂಗಾಂಗಿ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಯ
ಸನ್ನದ್ಧಸ್ಥಲ.''

ಮಾಡುವ ಮಾಟವು ಕ್ರಿಯಾಜ್ಞಾನ ಸಮೇತವಾಗಿರಬೇಕೆಂಬುದಕ್ಕೆ

"ನೀರು ನೆಲನಿಲ್ಲದೆ ಇರಬಹುದೆ?
ಬೀಜನೆಲನಿಲ್ಲದೆ ಹುಟ್ಟಬಹುದೆ?
ಜ್ಞಾನಕ್ರಿಯಿಲ್ಲದೆ ಅರಿಯಬಹುದೆ?
ಚಿತ್ ಚಿತ್‌ಯಿಲ್ಲದೆ ವಸ್ತುಲಕ್ಷಿಸಿ ಗ್ರಹಿಸಬಹುದೆ?
ಇಂತೀ ಕ್ರಿಜ್ಞಾನ ಸಂಬಂಧ ಸ್ಥಲಭಾವ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನಲ್ಲಿ ಉಭಯ
ಸ್ಥಲಭೇದ."

"ಎಸೆವರ ಬಲ್ಲೆ. ಎಚ್ಚ ಬಾಣ ತಿರುಗಿ ಬಪ್ಪಂತೆ ಎಸೆವರ ಕಾಣೆ.
ಪೂಜಿಸುವರ ಬಲ್ಲೆ. ಪೂಜಿಸಿದ ಲಿಂಗ ಅಭಿಮುಖವಾಗಿ ಸರ್ವಾಂಗದಲ್ಲಿ
ವೇದಿಸುವರ ಕಾಣೆ.
ಆ ನುಡಿಗೆ ನಡೆ. ಆ ನಡೆಗೆ ನುಡಿ. ಉಭಯವ ವೇದಿಸುವರ ಕಾಣೆ
ಈ ಉಭಯವು ಸಿದ್ಧಿಯಾಗಿ ಸಿದ್ಧಾಂತವಾದಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ
ನಿಃಕಳಂಕ ಮಲ್ಲಿಕಾರ್ಜುನನು ಕ್ರಿಯಾನಿರತವಾದವಂಗಲ್ಲದೆ ಸಾಧ್ಯನಲ್ಲ.

## ಲಿಂಗಾಂಗಿಯು ಇರವೆಂತು?

"ಲಿಂಗಭೋಗೋಪಭೋಗಿಯೆಂದು ತಾ ಮುನ್ನ ಬಿಟ್ಟುದ ಮುಟ್ಟಬಹುದೆ?
ತನ್ನ ಸುಖಕ್ಕೆ ತಾ ಭೋಗಿಸಿ ಲಿಂಗಮುಂತಾಗಿ ಕೂಡಿದೆನೆನ್ನಬಹುದೆ?
ಲಿಂಗದಂಗವನರಿತು ತಾ ಕೂಡಬಲ್ಲಡೆ ತನ್ನ ಇಂದ್ರಿಯಂಗಳ ಇಚ್ಛೆಯುಂಟೆ?

ತಾ ಕದ್ದ ಕಳವ ಪರಿಹರಿಸಿಕೊಳ್ಳಲರಿಯದೆ
ಇದಿರು ನೀವು ಬನ್ನಿ ಎಂಬ ಕಳ್ಳಗಾರನಂತೆ
ಈಸ್ವಯ ಇದಿರಿಡಬಾರದ ಕುರುಹು
ಲಿಂಗಭೋಗೋಪಭೋಗಿ ತಾನಾದಡೆ
ಉರಿಗೂಡಿ ಕರಗುವ ಕರ್ಪುರದಿರವಿನಂತಿರಬೇಕು

ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಚನ್ನಮಲ್ಲಿಕಾರ್ಜುನನ
ಸಂಗಗೂಡಿಯೇ ಸುಖಿಸುವ ಲಿಂಗಾಂಗಿಯ ಇರವು"
ಹೊರಗಣ ಕ್ರಿಯೆಯು ಒಳಗಣ ಜ್ಞಾನವು ಬಾಹ್ಯದ ಅಂಗ
ಅಂತರಂಗದ ಲಿಂಗವು ಒಂದಾಗಬೇಕೆಂದು ಬೋಧಿಸಿದ ವಚನ-

"ಆವ ಬೀಜವ ಬಿತ್ತಿದಡು ಪೃಥುವಿಗೆ ಬೇರು

ಬಯಲಿಂಗೆ ಶಾಖೆ ತಲೆದೋರುವಂತೆ
ಐಕ್ಯಕ್ಕೆ ಮರೆ ಕ್ರಿಗೆ ಬಾಹ್ಯ ಉಭಯದ ಭೇದ ಉಳ್ಳನ್ನಕ್ಕ ಭಕ್ತಿಯ
ಹೋರಾಟ ಬಿಡದು
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ."

ದೇವಲೋಕ ಮರ್ತ್ಯಲೋಕ ಬೇರಿಲ್ಲವೆಂದು ಕೈಲಾಸದ ಹಂಗು ಹರಿದಿರುವದನ್ನು ನೋಡಿ

"ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ
ಕಾಯವೆರಸಿ ಕೈಲಾಸಕ್ಕೆ ಹೋದಿಹೆನೆಂಬುದು ಮತವಲ್ಲ
ಘನಲಿಂಗ ಕರಸ್ಥಲದಲ್ಲಿಪ್ಪ ಅನುವನರಿಯದೆ
ಇಲ್ಲಿಗೆ ಕರ್ಮ ಅಲ್ಲಿಗೆ ನಿಃಕರ್ಮವೆ?
ಹೋಮದ ಮಾಟದ ಒಳಹೊರಗಿನಂತೆ
ಮರ್ತ್ಯ ಕೈಲಾಸವೆಂಬ ಕಟ್ಟಳೆಯಿಲ್ಲ
ಆತ್ಮನಿಶ್ಚಯವಾದಲ್ಲಿಯೇ ಕೈಲಾಸ
ಮಹಾತತ್ವವಾದಲ್ಲಿಯೇ ಮರ್ತ್ಯದೊಳಗು
ಈ ಗುಣ ಸದಮಳ ಭಕ್ತಿಯ ಯುಕ್ತಿ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಇಕ್ಕಿದ ಗೊತ್ತು"
ವ-ತ್ರಂ— "ಕಾಯಭ್ರಮೆಯಿಂದ ಕೈಲಾಸ
ಜೀವದ ಭ್ರಮೆಯಿಂದ ಮಹದ ಕೂಟವೆಂಬುದು
ಕಾಯದ ಜೀವದ ಭೇದವರಿತಲ್ಲಿ
ಅತ್ತಲಿತ್ತಲೆಂದು ಮತ್ತೆ ಹಲಬಲಿಲ್ಲ ಇದು ನಿಶ್ಚಯದ ಕೂಟ
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ"

ಈತೆರನಾಗಿ ಮಹಾದೇವಿಯಮ್ಮನ ಪ್ರತಿಯೊಂದು ವಚನಗಳು ಸಾಹಿತ್ಯದಿಂದ ತತ್ವದಿಂದ ತುಂಬಿವೆ.

ಅಮ್ಮನ ಭಕ್ತಿ ಜ್ಞಾನ ವೈರಾಗ್ಯಗಳನ್ನು ತಿಳಿಸುತ್ತವೆ.

ಅಧ್ಯಾತ್ಮ ಮಾರ್ಗದಲ್ಲಿ ಅಸ್ವಾತಂತ್ರತೆಯ ಸ್ತ್ರೀ ಜನಾಂಗಕ್ಕೆ ಮಾರ್ಗ ದರ್ಶಕವಾಗಿವೆ.

ಮಾತೆಯ ವಚನದಂತೆ ಮಹಾದೇವಿಯಮ್ಮಗಳ ವಚನಗಳು ಹಿತವಾಗಿವೆ, ವಿಹಿತವಾಗಿವೆ.

---

# ಮೊರೆ.

(ಸೂಃ— ಶ್ರೀಮಾನ್ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ಸಿದ್ಧಗಂಗಾ)

——ಃ೦ಃ——

ಹಿಮವಂಶಃ— ಓಂ ನಮೋ ಜಗದೀಶ ಸದ್ಭಕ್ತ ಹೃದಯೇಶ
ನಿತ್ಯಮಹಿಮಾಧಾರ ಸತ್ಯ ಗುಣಮಂದಾರ !
ಜಗಕೆ ನೀಂ ಕಾರಣನು ಕಾರಣವು ನಿನಗಿಲ್ಲ,
ಅಂತಕನು ನೀಂ ಜಗಕೆ ನೀನನಂತನು ದೇವ,
ಜಗಕೆ ನೀಂ ಮೊದಲಿಗನು ನಿನಗೆ ಮೊದಲಿನ್ನುಂಟೆ!
ಲೋಕಗಳನುದ್ಧರಿಸಿ ತನ್ನ ತಾ ನೆನೆಯುತಲಿ,
ನಿನ್ನಿಂದ ಜೀವಿಗಳ ಸೃಜಿಸುತಿಹೆಯನವರತ,
ಕಡೆಗೆ ನೀನವುಗಳನು ತನ್ನೊಳಗು ಮಾಡುತಿಹೆ,
ನೀರಾಗಿ ಬಿರುಸಾಗಿ ಹಿರಿದಾಗಿ ಕಿರಿದಾಗಿ
ಹಗುರುರಾಗಿ ಹೊರೆಯಾಗಿ ಕಂಡು ಕಾಣದೆ ಮೆರೆವೆ,
ವೇದಗಳ ಮೊದಲಿನೊಳಗೋಂಕಾರ ನೀನಲ್ತೆ!
ನಾದ ಮೂರುತಿ ನೀನು ಭವ ಮುರಿದು ಪೊರೆ ದೇವ.
ಪುಟ್ಟಲ್ಲದೊಂದಾಗಿ ಕೆಂಕರಿದು ಬಿಳಿದೆಂಬ
ಮೂರು ಗುಣಬೆರಕೆಯಿಂ ಪ್ರಕೃತಿಯಾಗಿಹೆ ನೀನು,
ಪ್ರಕೃತಿಯನು ಪರಿಕಿಸುವ ಸಾಕ್ಷಿ ನೀಂ ನಿರ್ಲಿಪ್ತ
ಪುರುಷನೆಂದನವರತ ಮುನಿನಿಕರ ತುತಿಸುತಿದೆ,
ಪಿತರುಗಳ ಪಿತ ನೀನು ದೇವರಿಗೆ ದೇವತೆಯು,
ಪರಕೆ ನೀಂ ಪರತರನು ಬೊಮ್ಮರಿಗೆ ಬುಡ ನೀನು,
ಬಾನ್ನಾಳಿಯುರಿ ನೀರುತಿರೆ ಶಶಿಗಳಿನ ನೊಡೆಯಂ
ರೆಂಬೆಂಟು ಮೈಯಿಂದ ತುಂಬಿರುವೆ ಸರ್ವೇಶ !
ಜಗದಂತರಾತ್ಮ ನೀಂ ಕರುಣಿಸುತೆ ಪೊರೆ ಜಗವ,
ನಿನ್ನೊಲವಿನಿಂದೆಮ್ಮ ಕುಲವು ಪಾವನವಾಯ್ತು,
ಸರ್ವಮಂಗಳೆ ದಯದಿ ಧನ್ಯರಾದೆವು ದೇವ !

ನಂದಿಃ—ಕೊರಲೊಳಗೆ ಮಿರುಗುತಿಹ ಪೆರ್ಮಣಿಯ ಮರೆದಿಳೆಯ
ಧೂಳಿಯಲಿ ಪುಡುಕುತಿಹ ತೆರನಂತೆ ಮದನಾರಿ!

ನಿಜಮನದಿ ತುಂಬಿರುವ ನಿನ್ನಿರವ ನರಿಯದಲೆ
ಜಲದೊಳಗೆ ಶಿಲೆಯೊಳಗೆ ಹುಡುಕುವರು ಗಾವಿಲರು
ಬ್ರಹ್ಮಾಂಡಗಳ ತುಂಬಿದಾಗಸವನರಿಯದಲೆ
ಮನೆಕಿಟಿಗೆಗೆಡೆ ಮಾಡಿ ಬಣ್ಣಿಸುವ ತೆರನಂತೆ,
ಪೆರಿದಲೆಯ! ನಿನ್ನಿರವ ನಿರದಿತರ ಸುರರೊಡನೆ
ಸಮಮಾಡಿ ಬಣ್ಣಿಸುವ ಮರುಳತೆಯ ನೇನೆಂಬೆ!
ಬಿಡಿಸಲಸದಳವಾದ ಗೂಢಾರ್ಥ ಗ್ರಂಥಿಗಳ
ಶೃತಿವಚನ ತತಿಗಳಿಂ, ಮೇಧಾವಿಗಳ ಮತಿಗೆ
ಏಕಾರ್ಥವಾಗದಿಹ ತಂತ್ರಗಳ ತಂಡದಿಂ,
ಪುರಾಣ ಪುಂಜದಿಂ, ವಿಫಲ ಕಲಹಗಳಿಂದ
ಬಡಬಡಿಪ ಶಾಸ್ತ್ರಗಳ ಒಣವಾತಿನಿಂದೆಂತು
ನಿಜನಿರವಿನರಿವಹುದು! ವಿದ್ಯೇಶ! ಸತ್ಕರ್ಮ
ದಿಂ ಬೆಂದು ಶುದ್ಧಾತ್ಮರಾದವರ ಬಿಡುಗಡೆಗೆ
ನೀನೊಲಿಯದಿರೆ ಬೇರೆ ಗತಿಯುಂಟೆ ದೇವೇಶ!
ತಾರೇಶ ತಲೆದೊಡವು, ಕೊರಲ ಮಣಿವರಗರಲ,
ತಣ್ಗೈಲಕ ಪಾವ್ಕಡಗಕೊರೆಯೊಡವೆ. ಹರಿಶರವು,
ಗಿರಿಮನೆಯು, ಗಿರಿಜೆಯರೆ ಮೈಯಿಂದ, ಮೆರೆವರಸೆ!
ಲೋಕಗಳಿಗಾಧಾರ ನಿನ್ನೊಲವು ಪೊರೆದೇವ ಕರುಣದೊಳು

ಬ್ರಹ್ಮ:—ಓರೋರ್ವರೆಸಗಿರ್ದ ವಿಪುಲ ತಪಸಿನ ಫಲಕೆ
ದೋರೋರ್ವ ರೆಡೆಯಾಗಿ ಮೂಲೋಕ ಜೀವಿಗಳ
ತಂದೆ ತಾಯಿಗಳಾಗಿ ಮೆರೆವಗಜೆ ಶಂಕರರೆ!
ಪೊಡಮಡುವೆ; ಕರುಣಿಸುತೆ ಮನ್ನಿಪುದು ಬಿನ್ನಪವ
ತಾರಕನ ಬಾಧೆಯಿಂ ಮೂಜಗವು ತಪಿಸುತಿದೆ
ಎನ್ನಿಂದ ವರವಡೆದು ಬಳೆದು ಮಲೆವಸುರನಂ!
ನಾನಿಂದು ಮರ್ದಿಪುದು ತರವಲ್ಲ ದೇವೇಶ!
ಮುಳ್ಳು ಗಿಡವಾದೊಡಂ ಬೆಳೆಸಿ ಕಡಿದವರುಂಟೆ!
ದಳಪತಿಯು ಸೃಜಿಸುತಲಿ ದೀನರನು ಕಾಪಾಡು
ಸುರಸೇನೆಗಳ ಪೊರೆವ ದಳಪತಿಯ ನೆರವಿಂದ
ಸುರಪತಿಯು ಜಯಸಿರಿಯ ಸೆರೆಗೈದು ತರುವನಿದೊ,

(ಕೈತೋರಿಸಿ)ದೇವಗಣ ನಿಮ್ಮಡಿಯ ನೆನೆಯುತಿದೆ ಸರ್ವೇಶ !
ಮರುಕದಿಂ ದೀನರನ್ನು ಕೈಹಿಡಿದು ಕಾಪಾಡು,
ಮೊರೆಗೇಳಿಯಣುಗರೊಳು ಮುನಿವ ಮಾತೆಯರುಂಟೆ ?
ವರವಿತ್ತು ಪೊರೆದೇವ ಶರಣಜನ ಸುರಭೂಜ.

---

## ಷಟ್‌ಸ್ಥಲಸಾರ.

(ಲೇಖಕ— ಶ್ರೀ. ಕಲ್ಯಾಣಪ್ಪಾ ಬ್ಯಾಳಿ ಬಿ. ಎ. ಬಿ. ಟಿ. ವಿಜಾಪುರ.)

---

ಅಂಗನು ಅಂದರೆ ಜೀವಾತ್ಮನು ಲಿಂಗದಲ್ಲಿ ಅಂದರೆ ಪರಮಾತ್ಮನಲ್ಲಿ ಐಕ್ಯವಾಗಬೇಕಾದರೆ ನಮ್ಮವರು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಅವಸ್ಥೆಗಳನ್ನು ಕಲ್ಪಿಸಿರುವರು. ಈ ಅವಸ್ಥೆಗಳಿಗೆ ಷಟ್‌ಸ್ಥಲಗಳೆಂಬ ಹೆಸರು. ಷಟ್‌ಸ್ಥಲಜ್ಞಾನವೆಂದರೂ ಒಂದೇ, ಲಿಂಗಾಂಗಸಾಮರಸ್ಯವೆಂದರೂ ಒಂದೇ ನಮ್ಮ ಷಟ್‌ಸ್ಥಲಗಳು ಲೌಕಿಕ ಪಾರಮಾರ್ಥಗಳೆರಡನ್ನೂ ಒಳ್ಳೆ ಜಾಣ್ಮೆಯಿಂದ ಕೂಡಿಕೊಂಡು ಹೋಗುತ್ತವೆ. ಷಟ್‌ಸ್ಥಲವೆಂದರೆ ಆಚಾರವಿಲ್ಲದೆ ಬರೇ ಶಾಸ್ತ್ರಾರ್ಥಪ್ರತಿಪಾದಿಸುವ ಗೊಳ್ಳು ವೇದಾಂತವಲ್ಲ. ಅನುಭವವಿಲ್ಲದ ಕೇವಲ ಅಂಧಶ್ರದ್ಧೆಯನ್ನು ಪ್ರತಿಪಾದಿಸುವ ಮರುಳು ಸಿದ್ಧಾಂತವಲ್ಲ. ನಮ್ಮ ಷಟ್‌ಸ್ಥಲದಲ್ಲಿ ಸುಲಲಿತವಾದ ವೇದಾಂತವೂ ಸುಗಮವಾದ ಸಿದ್ಧಾಂತವೂ ಕೂಡಿಕೊಂಡಿವೆ. ಷಟ್‌ಸ್ಥಲಮಾರ್ಗದಲ್ಲಿ ಅದ್ವೈತಿಗಳಂತೆ ಕೇವಲ ಜ್ಞಾನಕ್ಕಷ್ಟೇ ಮಹತ್ವವಿಲ್ಲ. ದ್ವೈತಿಗಳಂತೆ ಕೇವಲ ಭಕ್ತಿಗಷ್ಟೇ ಪ್ರಾಧಾನ್ಯವಿಲ್ಲ. ಬೌದ್ಧ ಮತದಂತೆ ನೀತಿಗಷ್ಟೇ ಪ್ರಶಸ್ತಿಯಿಲ್ಲ ಆದರೆ ಭಕ್ತಿ, ನೀತಿ, ಜ್ಞಾನಗಳ ಸಮುಚ್ಚಯವೇ ಷಟ್‌ಸ್ಥಲಮಾರ್ಗದ ರಹಸ್ಯವು.

ಪರಮಾತ್ಮನು ತನ್ನ ಲೀಲಾಮಾತ್ರದಿಂದ ಜೀವಜಗತ್ತುಗಳನ್ನು ನಿರ್ಮಿಸಿದ ವಿಕಾಸವಾದವೂ ಆ ಜೀವಜಗತ್ತುಗಳನ್ನು ತನ್ನೊಳಗೆ ಅಳವಡಿಸಿಕೊಳ್ಳುವ ಆಕುಂಚನವಾದವೂ ಷಟ್‌ಸ್ಥಲದಲ್ಲಿ ಅಡಕವಾಗಿವೆ. ವಿಕಾಸವಾದಕ್ಕೆ ಪರಮಾತ್ಮನ ಪ್ರವೃತ್ತಿಮಾರ್ಗವೆಂದೂ ಆಕುಂಚನವಾದಕ್ಕೆ

ನಿವೃತ್ತಿಮಾರ್ಗವೆಂದೂ ಹೇಳುವದುಂಟು. ಇನನ್ನೀ ಬೇರೆ ರೀತಿಯಲ್ಲಿ ಹೇಳಬೇಕಾದರೆ ಷಟ್‌ಸ್ಥಲಗಳು ಏಕತ್ವದಲ್ಲಿ ಅನೇಕತ್ವವನ್ನೂ ಅನೇಕ ತ್ವದಲ್ಲಿ ಏಕತ್ವವನ್ನೂ ಪ್ರತಿಪಾದಿಸುತ್ತವೆ. ಏಕತ್ವವು ಅನೇಕತ್ವವಾಗುವ ದೆಂದರೆ ನಿರಾಕಾರವಾದ ಆ ಪರವಸ್ತುವು ಸಾಕಾರವನ್ನು ಹೊಂದು ವದು. ಅನೇಕತ್ವವು ಏಕತ್ವವಾಗುವದೆಂದರೆ ಸಾಕಾರವು ನಿರಾಕಾರದಲ್ಲಿ ಬೆರೆಯುವದು.

ಈ ಷಟ್‌ಸ್ಥಲಗಳ ವಿವರಣೆಯು ಸೂಕ್ಷ್ಮಾಗಮ, ಪಾರಮೇಶ್ವರಾ ಗಮ ವಾತುಲಾಗಮಾದಿಗಳಲ್ಲಿ ಪ್ರತಿಪಾದಿತವಾಗಿರುವದೇನೋ ನಿಜ. ಆದರೆ ಆ ಷಟ್‌ಸ್ಥಲಗಳು ವಚನವಾಙ್ಮಯದಲ್ಲಿ ಸ್ವಲ್ಪ ಮಾರ್ಪಾಟ ಹೊಂದಿ ಒಳ್ಳೆ ರಸಭರಿತವಾಗಿಯೂ ಸ್ಫೂರ್ತಿದಾಯಕವಾಗಿಯೂ ವಿವರಿ ಸಲ್ಪಟ್ಟಿವೆ. ಬೇಕಾದ ಶಿವಶರಣರ ವಚನಗಳನ್ನು ತೆಗೆದುಕೊಂಡರೂ ಅವು ಸ್ಥಲಮೆಟ್ಟುಗಳ ಅಸ್ತಿವಾರದ ಮೇಲೆ ನಿಂತಿರುತ್ತವೆ. ವಚನಗ ಳನ್ನು ಷಟ್‌ಸ್ಥಲಗಳಿಗನುಸರಿಸಿ ವಿವೇಚಿಸುವದೇ ವೀರಶೈವ ಮತದ ವೈಶಿಷ್ಟ್ಯವು. ಆದರೆ ವಚನಗಳನ್ನು ಭಗವದ್ಗೀತೆಯಂತೆ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ ಇತ್ಯಾದಿ ಕ್ರಮಗಳಿಂದ ವಿಂಗಡಿಸುವದು ಸಮಂಜಸವಲ್ಲ. ರಾ॥ ಸಾ॥ ಹಳಕಟ್ಟಿಯವರು ಇತ್ತೀಚೆಗೆ ಹೊರಡಿಸಿದ "ವಚನಶಾಸ್ತ್ರಸಾರ ಭಾಗ ೨"ರಲ್ಲಿ ಈ ಷಟ್‌ಸ್ಥಲಗಳ ವಿವರವು ಒಳ್ಳೆ ಪರಿಪೂರ್ಣವಾಗಿಯೂ ಹೃದಯಂಗಮವಾಗಿಯೂ ಇದ್ದದ್ದು ಕಂಡುಬ ರುತ್ತದೆ. ಷಟ್‌ಸ್ಥಲಗಳ ಮಾಧುರ್ಯವನ್ನು ಸವಿಯಬೇಕೆಂಬ ರಸಿಕರು ಆ ವಚನಶಾಸ್ತ್ರಸಾರಗ್ರಂಥವನ್ನು ಅವಶ್ಯವಾಗಿ ಓದಬೇಕು.

ಪರಮಾತ್ಮನು ಮೊದಲು ತನ್ನ ಲೀಲಾಮಾತ್ರದಿಂದ ಲಿಂಗ ಮತ್ತು ಅಂಗರೂಪದಿಂದ ಕ್ರಮೇಣ ಜಗತ್ತಿನಲ್ಲಿ ಹೇಗೆ ತೋರುವನೆಂಬದನ್ನಷ್ಟು ವಿಚಾರಿಸೋಣ. ಪರಶಿವನು ಮೊದಲು ಭಾವಲಿಂಗವಾಗಿಯೂ ಬಳಿಕ ಪ್ರಾಣಲಿಂಗವಾಗಿಯೂ ಅನಂತರ ಇಷ್ಟಲಿಂಗವಾಗಿಯೂ ಪರಿಣಮಿಸಿ ದನು. ಆ ಭಾವಲಿಂಗವು ಕ್ರಿಯಾಭೇದದಿಂದ ಮಹಾಲಿಂಗ, ಪ್ರಸಾದ ಲಿಂಗ ಎಂಬೆರಡು ತೆರನಾಯಿತು. ಆ ಪ್ರಾಣಲಿಂಗವು ಜಂಗಮಲಿಂಗ ಶಿವಲಿಂಗ ಎಂಬೆರಡು ರೂಪದಿಂದ ಕಂಗೊಳಿಸಿತು. ಇಷ್ಟಲಿಂಗವು ಗುರುಲಿಂಗ ಆಚಾರಲಿಂಗ ಎಂಬೆರಡು ಭೇದವುಳ್ಳದ್ದಾಯಿತು. ಒಟ್ಟ ಪರವಸ್ತುವು ಕ್ರಿಯಾ ಭೇದದಿಂದ ಮೊದಲು ಮೂರಾಗಿ ಕೊನೆಗೆ ಆರಾದ ಪ್ರವೃತ್ತಿಗೆ ಲಿಂಗ ಷಟ್‌ಸ್ಥಲವೆಂಬ ಹೆಸರು.

ಆ ಪರವಸ್ತುವು ಆರುಲಿಂಗಗಳಾಗಿ ಆರುಶಕ್ತಿಗಳನ್ನು ಕೂಡಿಕೊಂಡು ಮುಂದೆ ಆರು ಅಂಗಗಳಾಗಿ ಪರಿಣಮಿಸಿತು. ಅದು ಹೇಗೆಂದರೆ ಮಹಾಲಿಂಗವು ಚಿಚ್ಛಕ್ತಿಯ ಸಹಾಯದಿಂದ ಐಕ್ಯಸ್ಥಲವಾಯಿತು. ಪ್ರಸಾದಲಿಂಗವು ಪರಾಶಕ್ತಿಯ ಸಹಾಯದಿಂದ ಶರಣಸ್ಥಲವಾಯಿತು. ಜಂಗಮಲಿಂಗವು ಆದಿಶಕ್ತಿಯ ಸಹಾಯದಿಂದ ಪ್ರಾಣಲಿಂಗಿಸ್ಥಳವಾಯಿತು ಶಿವಲಿಂಗವು ಇಚ್ಛಾಶಕ್ತಿಯ ಸಹಾಯದಿಂದ ಪ್ರಸಾದಿಸ್ಥಲವಾಯಿತು. ಗುರುಲಿಂಗವು ಜ್ಞಾನಶಕ್ತಿಯ ಸಹಾಯದಿಂದ ಮಹೇಶಸ್ಥಲವಾಯಿತು. ಆಚಾರವು ಕ್ರಿಯಾಶಕ್ತಿಯ ಸಹಾಯದಿಂದ ಭಕ್ತಸ್ಥಲವಾಯಿತು. ಇದಕ್ಕೂ ಮೊದಲು ಪರವಸ್ತುವು ಭಾವಪ್ರಾಣ ಇಷ್ಟಲಿಂಗಗಳಿಗನುಸರಿಸಿ ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂಬ ಮೂರು ಅಂಗಗಳಾಗಿ ಕೊನೆಗೆ ಮೇಲ್ಕಂಡ ಆರು ಅಂಗಗಳಾಗಿ ಆಳವಟ್ಟ ರೀತಿಗೆ ಅಂಗಷಟ್‌ಸ್ಥಲವೆನ್ನುವರು.

ಈ ಮೇರೆ ಒಬ್ಬ ಪರಮಾತ್ಮನು ಕ್ರಿಯಾಭೇದದಿಂದ ೩ ಲಿಂಗಗಳಾಗಿ ಕೊನೆಗೆ ೬ ಲಿಂಗಗಳಾಗಿಯೂ ೬ ಶಕ್ತಿಗಳ ಸಹಾಯದಿಂದ ಮೊದಲು ೩ ಅಂಗಗಳಾಗಿ ಕೊನೆಗೆ ೬ ಅಂಗಗಳಾಗಿಯೂ ಜಗತ್ತಿನಲ್ಲಿ ತೋರಿದ ಸ್ಥಿತಿಗೆ ಪರಮಾತ್ಮನ ಪ್ರವೃತ್ತಿಮಾರ್ಗವೆಂಬ ಹೆಸರು.

ಇನ್ನು ಅಂಗವು ಲಿಂಗವಾಗುವ ರೀತಿಗೆ ಪರಮಾತ್ಮನ ನಿವೃತ್ತಿಮಾರ್ಗವೆನ್ನುವರು. ಅದು ಪ್ರವೃತ್ತಿಮಾರ್ಗದ ವಿರುದ್ಧ ಕ್ರಮದಲ್ಲಿ ಸಾಗುತ್ತದೆ. ಅಂಗನು ಲಿಂಗದಲ್ಲಿ ಬೆರೆಯಲಿಕ್ಕೆ ಅಂದರೆ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯಹೊಂದಲಿಕ್ಕೆ ಕ್ರಿಯಾಭೇದದಿಂದ ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲವೆಂದು ಮೂರು ಸ್ಥಲಗಳನ್ನು ಕಲ್ಪಿಸಿಕೊಂಡನು. ಗುರುಸ್ಥಲದಲ್ಲಿ ಭಕ್ತ-ಮಹೇಶಸ್ಥಲಗಳು ಅಡಗುತ್ತವೆ. ಲಿಂಗಸ್ಥಲದಲ್ಲಿ ಪ್ರಸಾದಿ ಪ್ರಾಣಲಿಂಗಿಸ್ಥಲಗಳು ಕೂಡಿಹೋಗುತ್ತವೆ. ಜಂಗಮಸ್ಥಲದಲ್ಲಿ ಶರಣ ಐಕ್ಯಸ್ಥಲಗಳು ಸಮಾವೇಶಹೊಂದುತ್ತವೆ.

ಈ ಷಡಂಗಗಳು ಷಡ್ವಿಧ ಭಕ್ತಿಯಿಂದ ಕೂಡಿಕೊಂಡು ಷಡ್ಲಿಂಗಗಳಲ್ಲಿ ಸಮರಸವಾಗುವವು. ಅದು ಹೇಗೆಂದರೆ ಭಕ್ತನು ಶ್ರದ್ಧಾಭಕ್ತಿಯಿಂದ ಆಚಾರಲಿಂಗದಲ್ಲಿಯು ಮಹೇಶನು ನಿಷ್ಠಾಭಕ್ತಿಯಿಂದ ಗುರುಲಿಂಗದಲ್ಲಿಯೂ ಪ್ರಸಾದಿಯು ಅವಧಾನ ಭಕ್ತಿಯಿಂದ ಶಿವಲಿಂಗದಲ್ಲಿಯೂ ಪ್ರಾಣಲಿಂಗಿಯು ಅನುಭಾವ ಭಕ್ತಿಯಿಂದ ಜಂಗಮಲಿಂಗದ

ಲ್ಲಿಯೂ ಶರಣನು ಆನಂದ ಭಕ್ತಿಯಿಂದ ಪ್ರಸಾದಲಿಂಗದಲ್ಲಿಯೂ ಐಕ್ಯನು ಸಮರಸ ಭಕ್ತಿಯಿಂದ ಮಹಾಲಿಂಗದಲ್ಲಿಯೂ ಅಡಗುವರು. ಮುಂದೆ ಆಚಾರ ಲಿಂಗವು ಗುರುಲಿಂಗದಲ್ಲಿಯೂ, ಗುರುಲಿಂಗವು ಶಿವಲಿಂಗದಲ್ಲಿಯೂ ಶಿವಲಿಂಗವು ಜಂಗಮದಲ್ಲಿಯೂ, ಜಂಗಮಲಿಂಗವು ಪ್ರಸಾದ ಲಿಂಗದಲ್ಲಿಯೂ, ಪ್ರಸಾದಲಿಂಗವು ಮಹಾಲಿಂಗದಲ್ಲಿಯೂ ಸಮರಸ ಹೊಂದುವವು. ಅರ್ಥಾತ್ ಇಷ್ಟವು ಪ್ರಾಣದಲ್ಲಿ, ಪ್ರಾಣವು ಭಾವದಲ್ಲಿ ಬೆರೆಯುವವೆಂಬರ್ಥ ಇದಕ್ಕೇ ನಿವೃತ್ತಿಮಾರ್ಗವೆನ್ನುವರು.

ನಾವು ಇಲ್ಲಿ ಪ್ರತಿಪಾದಿಸತಕ್ಕ ವಿಷಯವು ಪ್ರವೃತ್ತಿಮಾರ್ಗದ್ದಲ್ಲ ಆದರೆ ನಿವೃತ್ತಿಮಾರ್ಗದ್ದಾಗಿರುತ್ತದೆ. ಅಂದರೆ ಅಂಗನು ಲಿಂಗದಲ್ಲಿ ಸಮರಸ ಹೊಂದುವದಕ್ಕೆ ಅವಶ್ಯವಾದ ಆಯಾಯ ಅವಸ್ಥೆಗಳನ್ನು ವಿವರಿಸುವದಾಗಿರುತ್ತದೆ. ಈ ಅವಸ್ಥೆಗಳು ಪರಸ್ಪರವುಳ್ಳವುಗಳಾಗಿವೆ. ಒಂದನ್ನು ಬಿಟ್ಟು ಇನ್ನೊಂದಕ್ಕೆ ಅಸ್ತಿತ್ವವಿಲ್ಲ. ಅವು ಅಷ್ಟು ಓತಪ್ರೋತವಾಗಿ ಹೆಣೆಯಲ್ಪಟ್ಟಿವೆ. ಮಾನವ ಶರೀರದಲ್ಲಿ ಬಾಲ್ಯ, ತಾರುಣ್ಯ,, ವಾರ್ಧಕ್ಯಗಳೆಂಬ ಅವಸ್ಥೆಗಳಿರುತ್ತವೆ. ಈ ಅವಸ್ಥೆಗಳು ಒಂದಕ್ಕೊಂದು ಸಂಬಂಧಬಟ್ಟಿದ್ದರೂ ಒಂದೊಂದರ ವೈಶಿಷ್ಟ್ಯವೇ ಬೇರೆ ಪ್ರತಿಯೊಂದು ತನ್ನ ಕಾರ್ಯಕ್ಷೇತ್ರದಲ್ಲಿ ಪರಿಪೂರ್ಣವಾಗಿರುತ್ತದೆ. ಅದೇ ಮೇರೆಗೆ ಷಟ್‌ಸ್ಥಲಗಳ ಪರಿಯೂ ಉಂಟು. ಅಂದಬಳಿಕ ನಾವು ಒಂದು ಸ್ಥಲವು ಇನ್ನೊಂದು ಸ್ಥಲಕ್ಕಿಂತ ಹೆಚ್ಚು ಅಥವಾ ಕಡಿಮೆಯೆಂದು ಭಾವಿಸಬಾರದು. ಒಂದು ಅವಸ್ಥೆಯು ವಿಕಾಸಹೊಂದಿ ಇನ್ನೊಂದಾಗಿರುತ್ತದೆ. ಆದರೆ ಅವು ಬೇರೆ ಬೇರೆಯಲ್ಲ. ಆದಕಾರಣ ಭಕ್ತಸ್ಥಲವು ಎಲ್ಲಕ್ಕೂ ಕಡಿಮೆಯಲ್ಲ. ಐಕ್ಯಸ್ಥಲವು ಎಲ್ಲಕ್ಕೂ ಹೆಚ್ಚಲ್ಲ. ಹಾಗೆ ಭಾವಿಸುವದು ಶುದ್ಧ ತಪ್ಪು. ಈ ವಿಚಾರವನ್ನು ತಿಳಿಸಿಕೊಡುವದಕ್ಕಾಗಿಯೇ ಶಿವಶರಣರು ಭಕ್ತಸ್ಥಲದಲ್ಲಿ ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ ಹೀಗೆ ಷಟ್‌ಸ್ಥಲಗಳನ್ನೂ ಮಾರ್ಪಡಿಸಿರುವರು. ಅದರಂತೆ ಉಳಿದ ಪ್ರತಿಯೊಂದು ಸ್ಥಲದಲ್ಲಿಯೂ ಈ ಬಗೆಯ ಆರಾರು ಸ್ಥಲಗಳು ನೇರ್ಪಟ್ಟು ಒಟ್ಟು ೩೬ ಸ್ಥಲಗಳು ನಿರ್ಮಿತವಾಗಿವೆ. ಈ ೩೬ ಸ್ಥಲಗಳು ಮುಂದೆ ೪೪ ಅಂಗಸ್ಥಲ, ೫೭ ಲಿಂಗಸ್ಥಲ ಹೀಗೆ ೧೦೧ ಸ್ಥಲಗಳಾಗಿ ವಿವರಿಸಲ್ಪಟ್ಟಿವೆ. ಈ ವಿವರವು ಕೆಳಗಿನಂತಿದೆ.

## ಅಂಗಸ್ಥಲ.

| | ಭಾಗ | | ಭಾಗ |
|---|---|---|---|
| (೧) ಭಕ್ತ ಸ್ಥಲ | ೧೫ | (೪) ಪ್ರಾಣಲಿಂಗಿ ಸ್ಥಲ | ೫ |
| (೨) ಮಹೇಶ ಸ್ಥಲ | ೯ | (೫) ಶರಣ ಸ್ಥಲ | ೪ |
| (೩) ಪ್ರಸಾದಿ ಸ್ಥಲ | ೭ | (೬) ಐಕ್ಯಸ್ಥಲ | ೪ |
| | | | ೪೪ |

## ಲಿಂಗಸ್ಥಲ.

| | ಭಾಗ | | ಭಾಗ |
|---|---|---|---|
| (೧) ಆಚಾರಲಿಂಗ | ೯ | (೪) ಜಂಗಮಲಿಂಗ | ೧೨ |
| (೨) ಗುರುಲಿಂಗ | ೯ | (೫) ಪ್ರಸಾದಲಿಂಗ | ೯ |
| (೩) ಶಿವಲಿಂಗ | ೯ | (೬) ಮಹಾಲಿಂಗ | ೯ |
| | | | ೫೭ |

ಜಗತ್ತಿನ ಜೀವರುಗಳೆಲ್ಲ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ ಎಂಬ ಆರು ತತ್ವಗಳಿಂದ ಹುಟ್ಟಿರುತ್ತವೆ. ಈ ತತ್ವಗಳು ನಮ್ಮ ದೇಹದಲ್ಲಿ ನೆಲಸಿರುತ್ತವೆಂದು ಶಾಸ್ತ್ರಕಾರರು ಹೇಳುತ್ತಾರೆ. ಹೇಗೆಂದರೆ ಪೃಥ್ವಿಯೇ ನಾಸಿಕವು, ಅಪ್ಪುವೇ ಜಿಹ್ವೆಯು, ತೇಜವೇ ನೇತ್ರವು, ವಾಯುವೇ ತ್ವಚವು, ಆಕಾಶವೇ ಶ್ರೋತ್ರ, ಆತ್ಮವೇ ಹೃದಯ. ಈ ಆರು ಇಂದ್ರಿಯಗಳು ಆರು ಸ್ಥಲಗಳೆಂದು ಗ್ರಹಿಸಲ್ಪಟ್ಟಿವೆ. ಅದು ಹೇಗೆಂದರೆ ಭಕ್ತಸ್ಥಲವೇ ನಾಸಿಕವು. ಮಹೇಶ ಸ್ಥಲವೇ ಜಿಹ್ವೆಯು. ಪ್ರಸಾದಿ ಸ್ಥಲವೇ ನೇತ್ರವು. ಪ್ರಾಣಲಿಂಗಿ ಸ್ಥಲವೇ ತ್ವಚವು, ಶರಣಸ್ಥಲವೇ ಶ್ರೋತ್ರವು. ಐಕ್ಯಸ್ಥಲವೇ ಹೃದಯವು. ಇವೇ ಅಂಗಸ್ಥಲಗಳು ಇವುಗಳ ಭೌತಿಕತ್ವವನ್ನು ಕಳೆದು ಶಿವತತ್ವಮಯವಾಗಿ ಮಾಡುವದೇ ಲಿಂಗಾಂಗ ಸಾಮರಸ್ಯವು. ಅಂದರೆ ಅಂಗಗುಣಗಳನ್ನಳಿದು ಆತ್ಮನು ಲಿಂಗಗುಣಿಯಾಗಬೇಕೆಂಬುದೇ ಅದರ ಅರ್ಥ.

ಅಂಗನು ನಾಸಿಕವನ್ನು ಆಚಾರಲಿಂಗವನ್ನಾಗಿಯೂ, ಜಿಹ್ವೆಯನ್ನು ಗುರುಲಿಂಗವನ್ನಾಗಿಯೂ, ನೇತ್ರವನ್ನು ಶಿವಲಿಂಗವನ್ನಾಗಿಯೂ, ತ್ವಚವನ್ನು ಜಂಗಮಲಿಂಗವನ್ನಾಗಿಯೂ, ಶ್ರೋತ್ರವನ್ನು ಪ್ರಸಾದಲಿಂಗವನ್ನಾಗಿಯೂ, ಹೃದಯವನ್ನು ಮಹಾಲಿಂಗವನ್ನಾಗಿಯೂ ಮಾಡಬೇಕು. ಅರ್ಥಾತ್ ಇಂದ್ರಿಯಗಳ ಪ್ರವೃತ್ತಿಯನ್ನು ಉದಾತ್ತಗೊಳಿಸುವದೇ

ಲಿಂಗಾಂಗ ಸಾಮರಸ್ಯವು. ಇದೇ ಷಟ್ಸ್ಥಲ ಸಿದ್ಧಾಂತದ ಸೊಬಗು ಸೌಂದರ್ಯ.

ಜೀವಾತ್ಮನು ಪ್ರಪಂಚದಲ್ಲಿದ್ದುಕೊಂಡೇ ಪರಮಾರ್ಥವನ್ನು ಸಾಧಿಸಬೇಕಾಗಿರುವದರಿಂದ ಅವನು ಪ್ರಾಪಂಚಿಕ ವ್ಯವಹಾರಗಳನ್ನು ಸರ್ವಥಾ ಬಿಡಲಾಗದು. ಭಗವದ್ಗೀತೆಯಲ್ಲಿ "ಸನ್ಯಾಸಃ ಕರ್ಮಯೋಗಶ್ಚ ನಿಶ್ರೇಯಸಕರಾವುಭೌ । ತಯೋಸ್ತು ಕರ್ಮ ಸನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ॥" ಅಂದರೆ ಸಂಸಾರವನ್ನು ಬಿಟ್ಟು ಸನ್ಯಾಸಿಯಾಗುವದೂ ಲೋಕದಲ್ಲಿದ್ದು ಜನಸೇವೆ ಮಾಡುವದೂ ಇವೆರಡೂ ಮೋಕ್ಷಕ್ಕೆ ಸಾಧನಗಳಾಗಿದ್ದರೂ ಸನ್ಯಾಸಿ ಯಾಗುವದಕ್ಕಿಂತ ಕರ್ಮಯೋಗಿಯಾಗುವದೇ ಹೆಚ್ಚಿನದೆಂದು ಹೇಳಿದೆ. ಷಟ್ಸ್ಥಲದಲ್ಲಿಯಾದರೋ ಸನ್ಯಾಸಕ್ಕೆ ಇಂಬಿಲ್ಲ. ಅದರಲ್ಲಿ ಕರ್ಮಯೋಗವೇ ಪ್ರಾಮುಖ್ಯವಾದುದು. ವೀರಶೈವನು ಇಷ್ಟಪ್ರಾಣಭಾವಲಿಂಗಗಳ ಸಹಾಯದಿಂದ ಭಕ್ತಿ, ಯೋಗ, ಜ್ಞಾನಗಳನ್ನು ಬೆಳಿಸಿಕೊಂಡು ತನ್ನ ಆತ್ಮವನ್ನು ಉದ್ಧಾರವನ್ನು ಮಾಡಿಕೊಂಡರೆ ಮುಗಿಯಲಿಲ್ಲ. ಅವನು ಸಮಾಜ ಪ್ರಾಣಿಯಾದುದರಿಂದ ಸಮಾಜ ಮತ್ತು ಲೋಕ ಹಿತದ ಕೆಲಸಗಳನ್ನು ಮಾಡಬೇಕೆಂದೇ ಷಟ್ಸ್ಥಲವು ಬೋಧಿಸುತ್ತದೆ. ಗುರುಲಿಂಗಜಂಗಮ ಸೇವಾರ್ಥವಾಗಿ ಮಾಡುವ ಕರ್ಮಕ್ಕೇ ನಮ್ಮವರು ಕಾಯಕವೆಂದು ಕರೆದಿರುವರು. "ಕಾಯಕವೇ ಕೈಲಾಸ" ವೆಂದು ಹೇಳಿರುವರು. ಆದುದರಿಂದ ವೀರಶೈವನು ಲೋಕದಲ್ಲಿ ಆಯಾಯ ಸ್ಥಲಗಳಿಗನುಸರಿಸಿ ಯಾವ ಯಾವ ಕ್ರಿಯೆಗಳನ್ನಾಚರಿಸುತ್ತಾನೆಂಬದನ್ನು ಇದರಡಿಯಲ್ಲಿ ಸ್ವಲ್ಪ ವಿವೇಚಿಸೋಣ.

## ಭಕ್ತಸ್ಥಲ.

ಭಕ್ತನಿಗೆ ಆಚಾರಲಿಂಗವೇ ಪ್ರಾಮುಖ್ಯವಾಗಿರುವದರಿಂದ "ಆಚಾರಃ ಪ್ರಥಮೋ ಧರ್ಮಃ" ಎಂಬಂತೆ ಆತನು ಯಾವಾಗಲೂ ಸದಾಚಾರಿಯಾಗಿರತಕ್ಕದ್ದು. ಭಕ್ತನ ನಡೆನುಡಿಗಳು ಶುದ್ಧವಾಗಿರತಕ್ಕದ್ದು. "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗ ತಾ ಘಟಸರ್ಪ ನೋಡಾ" ಎಂದು ಶರಣರು ಅಪ್ಪಣೆ ಕೊಡಿಸಿದ್ದಾರೆ. ಲಿಂಗ ಮುಟ್ಟಿದ ಕೈ ಮೀಸಲು, ಲಿಂಗ ಧರಿಸಿದ ದೇಹ ದೇವಾಲಯವೆಂದು ತಿಳಿದು ಭಕ್ತನು ದುಶ್ಚಟ ದುರಾಚಾರಗಳಿಗಿಂಬುಗೊಡದೆ ಸದಾಚಾರ

ದಿಂದಲೇ ನಡೆಯಬೇಕು. ಭಕ್ತನು ಕೃಷಿ ವಾಣಿಜ್ಯ ಮೊದಲಾದ ಒಂದಿಲ್ಲೊಂದು ಕಾಯಕವನ್ನು ಕೈಕೊಂಡು ಗುರುಲಿಂಗ ಜಂಗಮ ದಾಸೋಹಕ್ಕಾಗಿಯೂ ಸ್ವಧರ್ಮೋನ್ನತಿಗಾಗಿಯೂ ತನ್ನ ತನು ಮನ ಧನಗಳನ್ನರ್ಪಿಸಬೇಕು. ಭಕ್ತನು ಭಿನ್ನ ಭಿನ್ನ ಕಾಯಕವ ಮಾಡುವ ಇತರ ಭಕ್ತರಲ್ಲಿ ಕುಲವನ್ನೆಣಿಸಬಾರದು. ಲಿಂಗಧಾರಿಗಳಾದ ಭಕ್ತರೆಲ್ಲರೂ ಸರಿಸಮಾನರು. “ಲಿಂಗಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವನಾರಿಸಿದರೆ ನಿಮ್ಮ ರಾಣಿವಾಸದಾಣೆ” ಎಂದು ಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ. ಈಗ ಅಜ್ಞಾನದ ಮೂಲಕ ಸಮಾಜದಲ್ಲಿ ನೆಲೆಗೊಂಡ ಒಳಪಂಗಡಗಳನ್ನೆಲ್ಲ ಬದಿಗೊತ್ತಿ ಭಕ್ತರೆಲ್ಲರೂ ಒಂದೇ ಎಂಬ ವಿಚಾರವನ್ನು ಆಚರಣೆಯಲ್ಲಿ ತರುವದೇ ಭಕ್ತಸ್ಥಲದ ಗುಟ್ಟು. ಇದೇ ಆಚಾರಲಿಂಗಪೂಜೆಯು

## ಮಹೇಶಸ್ಥಲ.

ಮಹೇಶನು ಗುರುವಿನಲ್ಲಿ ವಿಶೇಷವಾಗಿ ನಿಷ್ಠಾಭಕ್ತಿಯುಳ್ಳವನಾಗಿರುತ್ತಾನೆ. ಯಾಕಂದರೆ ಮಹೇಶಸ್ಥಲಕ್ಕೆ ಗುರುಲಿಂಗವೇ ಮುಖ್ಯ. ಮಹೇಶನು ಗುರುವಿನಿಂದ ತ್ರಿವಿಧ ದೀಕ್ಷಾಸಂಪನ್ನನಾಗಿ ಗುರುವು ಹೇಳಿಕೊಟ್ಟ ವ್ರತ ನೇಮಾದಿಗಳನ್ನು ತಪ್ಪದೆ ಆಚರಿಸುತ್ತ ಹೋಗುವನು. ಎಂಥ ವಿಘ್ನಗಳು ಬಂದರೂ ಆತನು ಹಿಡಿದ ವ್ರತವನ್ನೆಂದಿಗೂ ಬಿಡುವವನಲ್ಲ. ಮಹೇಶನು ಪರನಾರಿಯರನ್ನು ಕಣ್ಣೆತ್ತಿ ನೋಡನು. ಪರದ್ರವ್ಯವನ್ನು ಕೈಯಿಂದ ಮುಟ್ಟನು. ಅನ್ಯ ದೈವಕ್ಕೆಂದಿಗೂ ಎರಗನು. ತೀರ್ಥ ಯಾತ್ರೆಗಳಿಗೆಂದಿಗೂ ಹೋಗನು. ಪ್ರಾಯಶ್ಚಿತ್ತಗಳನ್ನೆಂದಿಗೂ ತೆಗೆದುಕೊಳ್ಳನು. ಗುರುಲಿಂಗ ಜಂಗಮನಿಂದೆಯನ್ನೆಂದಿಗೂ ಸೈರಿಸನು. ಜ್ಯೋತಿಷ್ಯ, ಶಕುನ, ಸೂತಕಗಳನ್ನು ನಂಬನು. ಯಜ್ಞಯಾಗ, ಬಲಿದಾನ ಮೊದಲಾದ ಹಿಂಸೆಗಳನ್ನೆಷ್ಟು ಮಾತ್ರವೂ ಸಹಿಸನು. ವೇಷವೃತ್ತಿಯನ್ನು ಜರಿಯುವನು. ಮಠ ಅಥವಾ ಸಂಸ್ಥೆಯ ಅಧಿಕಾರಿಯಾಗಿ ಸಮಾಜಕ್ಕೆ ಹಿತವಾಗುವ ವ್ಯಾಖ್ಯಾನ, ಕೀರ್ತನ, ಪ್ರವಚನ, ಲೇಖನ ಮುಂತಾದ ಕಾರ್ಯಗಳನ್ನು ನೆರವೇರಿಸುವನು. ಸಮಾಜ ಸೇವೆಯೇ ಮಹೇಶಸ್ಥಲದ ಲಕ್ಷಣವು.

## ಪ್ರಸಾದಿ ಸ್ಥಲ.

ಪ್ರಸಾದಿಯು ಶಿವಾರ್ಪಣ ಬುದ್ಧಿಯಿಂದ ಶಿವಲಿಂಗವನ್ನು ಪೂಜಿಸುವಂತೆ ಲೋಕಹಿತದ ಕಾರ್ಯಗಳನ್ನು ಶಿವಾರ್ಪಣ ಬುದ್ಧಿಯಿಂದ ಮಾಡುವನು. ಆತನು ಮಾಡುವದು, ಉಣ್ಣುವದು, ಕೊಡಕೊಂಬುವದು ಮೊದಲಾದ ಸರ್ವ ಕಾರ್ಯಗಳು ಶಿವಾರ್ಪಣ ಬುದ್ಧಿಯಿಂದಲೇ ಜರುಗುತ್ತವೆ. ಪ್ರಸಾದಿಯು ಯಾವಾಗಲೂ ಪ್ರಸನ್ನಚಿತ್ತನಾಗಿರುತ್ತಾನೆ. "ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ" ಎಂಬ ಮಾತು ಪ್ರಸಾದಿಗೆ ಸಮನ್ವಯಿಸುವದು. ಪ್ರಸಾದಿಯು ಲೋಕ ಸಂಗ್ರಹ ಕಾರ್ಯಗಳನ್ನು ಮಾಡುವಾಗ ನಾನು ಮಾಡಿದೆನೆಂದು ಅಹಂಭಾವ ತಾಳದೆ ಶಿವನೇ ಮಾಡಿದನೆಂಬ ಉದಾತ್ತಭಾವವನ್ನು ತಾಳುತ್ತಾನೆ.

## ಪ್ರಾಣಲಿಂಗಿಯ ಸ್ಥಳ.

ಪ್ರಾಣಲಿಂಗಿಯು ಜಂಗಮಲಿಂಗ ಪೂಜಕನು. ಅಂದರೆ ಜಗತ್ತಿನ ಜೀವರಾಶಿಗಳನ್ನೆಲ್ಲ ಆತನು ಲಿಂಗರೂಪಾಗಿ ಕಾಣುವನು. 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಂಡಿತಃ' ಎಂಬ ಮಾತು ಪ್ರಾಣಲಿಂಗಿಗೆ ಅನ್ವಯಿಸುತ್ತದೆ. ಭೂತ ದಯಾ ಗುಣವು ಪ್ರಾಣಲಿಂಗಿಯಲ್ಲಿ ಕೊನೆಯ ಸೀಮೆಯನ್ನು ಮುಟ್ಟಿರುತ್ತದೆ. ಸಕಲ ಚರಾ ಚರಾತ್ಮಕ ವಸ್ತುಗಳನ್ನು ಲಿಂಗವೆಂದು ಭಾವಿಸಿ ತನ್ನ ಪ್ರಾಣದಂತೆ ಕಾಣುವನಾದ್ದರಿಂದಲೇ ಆತನಿಗೆ ಪ್ರಾಣಲಿಂಗಿಯೆಂಬ ಹೆಸರು ಪ್ರಾಪ್ತವಾಗಿರುತ್ತದೆ. ವಿಶ್ವಪ್ರೇಮವು ಪ್ರಾಣಲಿಂಗಿ ಸ್ಥಲದ ಹೆಗ್ಗುರುತು. ಸಕಲ ಪ್ರಾಣಿಗಳ ಹಿತವೇ ಪ್ರಾಣಲಿಂಗಿಯ ಶಿವಯೋಗವು.

## ಶರಣ ಸ್ಥಲ.

ಆನಂದ ಭಕ್ತಿಯಿಂದ ಪ್ರಸಾದಲಿಂಗವಾಗುವವನೇ ಶರಣನು. ಶರಣನು ತಾನು ಸತಿ ಲಿಂಗವು ಪತಿಯೆಂಬ ಭಾವದಿಂದ ಲಿಂಗಯ್ಯನಲ್ಲಿ ಆನಂದ ಭಕ್ತಿಯುಳ್ಳವನಾಗುವನು. ಈ ವಿಶ್ವದ ಸ್ಥಿತಿಯನ್ನು ಮೀರಿದ್ದೇ ಭಾವಲಿಂಗವು. ಆ ನಿರಾಕಾರದಲ್ಲಿ ಬೆರೆದು ಶರಣನು ಆನಂದ ಸಾಗರದಲ್ಲಿ ಮುಳುಗುವನು. ಅವನು ಜಗತ್ತಿನ ವ್ಯವಹಾರಗಳನ್ನು ದಾಟಿದವನಾದ್ದರಿಂದ ಜಗತ್ತಿನ ದುಃಖ ಸುಖಗಳಿಂದ ಆತನು ನಿರ್ಲಿಪ್ತನಾಗಿ

ರುತ್ತಾನೆ. ಆದಾಗ್ಯೂ ಜಗತ್ತಿನ ಕಾರ್ಯಗಳನ್ನು ಆಚರಿಸುತ್ತಲೇ ಇರುತ್ತಾನೆ. ಶರಣನು ತನ್ನ ದೃಷ್ಟಿ ಮಾತ್ರದಿಂದ ಪತಿತರನ್ನು ಪಾವನರನ್ನಾಗಿ ಮಾಡಲು ಸಮರ್ಥನಾಗಿರುತ್ತಾನೆ. ಶರಣನಿರ್ದ ಸ್ಥಲವೇ ಕ್ಷೇತ್ರ. ಶರಣನು ಮಿಂದ ಜಲವೇ ತೀರ್ಥ. ಶರಣನು ನುಡಿದ ವಾಕ್ಯವೇ ವೇದ. ಶರಣನು ನಡೆದದ್ದೇ ಸತ್ಪಥ. ಶರಣನ ಅಂಗಣವೇ ಕೈಲಾಸ. ಶರಣನು ಚರಿಸಿದ್ದೇ ಧರ್ಮ. ತ್ಯಜಿಸಿದ್ದೇ ಅಧರ್ಮ. ಶರಣರೊಡನೆ ಸರಸವಾಡಿದರೆ ಕೇಡು ತಪ್ಪದು. ಒಟ್ಟಿನ ಮೇಲೆ ಶರಣನು ಜೀವನ್ಮುಕ್ತ ಸ್ಥಿತಿಯಲ್ಲಿರುತ್ತಾನೆ.

## ಐಕ್ಯಸ್ಥಲ.

ಸಮರಸ ಭಕ್ತಿಯಿಂದ ಮಹಾಲಿಂಗವಾದವನೇ ಐಕ್ಯನು. ಅಂದರೆ ಲೋಕದ ಸ್ಥಿತಿ ಗತಿಗಳನ್ನು ಮೀರಿ ಲಿಂಗದಲ್ಲಿ ನಿರಂತರ ನಿರ್ವಿಕಲ್ಪ ಸಮಾಧಿಯನ್ನು ಪಡೆದವನು ಐಕ್ಯನು. ಶರಣನು ಕೆಲಕಾಲ ನಿರ್ವಿಕಲ್ಪ ಸಮಾಧಿ ಪಡೆದರೆ ಐಕ್ಯನು. ನಿರಂತರ ಲಿಂಗಮಯನೇ ಆಗಿರುತ್ತಾನೆ. ಈ ಸ್ಥಿತಿಯನ್ನು ಮೀರಿ ಬೇರೊಂದು ಅವಸ್ಥೆಯಿಲ್ಲ. ಈತನೇ ಸರ್ವಾಂಗ ಲಿಂಗಮಯನು. ಈತನೇ ಸಚ್ಚಿದಾನಂದ ನಿತ್ಯ ಪರಿಪೂರ್ಣನು. ನಿರಂಜನ ಪ್ರಣವ ಸ್ವರೂಪನು. ನಿತ್ಯಾನಂದ ನಿರ್ವಿಕಲ್ಪ ಸಮಾಧಿಸ್ಥನೇ ಐಕ್ಯನು.

---

# ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆ.

ಲೇಖಕ:— ಜೀರಗೆ ಕ. ಬಸವಪ್ಪ ಬಿ. ಏ ಬೆಂಗಳೂರ ನಗರ.

ಕೀರ್ತನಕೇಸರಿ ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳವರು ೧೯೪೦ನೆಯ ಇಸ್ವಿಯ ಅಗಸ್ಟ ತಿಂಗಳ ತಮ್ಮ "ಶರಣಸಾಹಿತ್ಯ" ಸಂಚಿಕೆಯಲ್ಲಿ "ಲಿಂಗಧಾರಣ ಮತ್ತು ಶಿವದೀಕ್ಷೆ" ಎಂಬ ಒಂದು ಲೇಖನವನ್ನು ಬರೆದು ಅದರಲ್ಲಿ ಈ ಮುಂದೆ ಕಂಡಂತೆ ಟೀಕೆ ಮಾಡಿದ್ದಾರೆ—"ಇಂದು ವೀರಶೈವ ಸಮಾಜದಲ್ಲಿ ಹಲವರು ದೀಕ್ಷಾಹೀನರಾಗಿರುವುದನ್ನು ನಾವು ನೋಡುತ್ತಿದ್ದೇವೆ. ಇದು ನಿಜವಾಗಿಯೂ ದುಃಖಕರವಾದ ಸಂಗತಿಯೇ ಸರಿ. ಮತ್ತೆ ಕೆಲವರು ಲಿಂಗಧಾರಣವೇ ಶಿವದೀಕ್ಷೆಯೆಂದು ಭ್ರಾಂತಿಪಟ್ಟಿದ್ದಾರೆ. ಇದು ಆಶ್ಚರ್ಯಕರವಾದ ಸಂಗತಿಯೇ ಸರಿ. ಇದಕ್ಕೆಲ್ಲ ವೀರಶೈವ ಧರ್ಮದ ತಿಳಿವಳಿಕೆಯೂ ನಡೆವಳಿಕೆಯೂ ಇಲ್ಲದುದೇ ಕಾರಣವೆನಿಸಿದೆ." ಈ ವಿಚಾರ ಸರಣಿಯಲ್ಲಿ ಅವರು ಎರಡು ಹೊಸ ಸಿದ್ಧಾಂತಗಳನ್ನು ಸಮರ್ಥನೆ ಮಾಡುವದಕ್ಕೆ ಪ್ರಯತ್ನಿಸಿದ್ದಾರೆ. ವೀರಶೈವ ಸಮಾಜದಲ್ಲಿ ಈಗ ಅನೇಕರು ಶಿವದೀಕ್ಷಾ ಹೀನರಾಗಿದ್ದಾರೆಂಬುದು ಒಂದು ಸಿದ್ಧಾಂತ. ಲಿಂಗಧಾರಣವು ಶಿವದೀಕ್ಷೆಯಲ್ಲವೆಂಬುದು ಮತ್ತೊಂದು ಸಿದ್ಧಾಂತ. ಮೊದಲನೆಯ ಸಿದ್ಧಾಂತಕ್ಕೆ ಎರಡನೆಯ ಸಿದ್ಧಾಂತವೇ ಆಧಾರ. ಲಿಂಗಧಾರಣ ಶಿವದೀಕ್ಷೆಗಳು ಭಿನ್ನವಾದವುಗಳೆಂಬ ಕೀರ್ತನ ಕೇಸರಿಗಳ ತಿಳುವಳಿಕೆಯಿಂದ ವೀರಶೈವ ಸಮಾಜದ ಬಹುಮಂದಿಗಳು ಶಿವದೀಕ್ಷಾ ಹೀನರಾಗಿ ಬಿಟ್ಟಿದ್ದಾರೆ. ಲಿಂಗಧಾರಣ ಶಿವದೀಕ್ಷೆಗಳ ನಿಜವಾದ ಅರ್ಥವನ್ನೂ, ಸಂಬಂಧವನ್ನೂ, ಕಾರ್ಯಾಚರಣೆಯನ್ನೂ ಮತ್ತು ಪರಿಣಾಮವನ್ನೂ ತಿಳಿಯದಿರುವುದೇ ಈ ತಿಳುವಳಿಕೆಗೆ ಕಾರಣವಾಗಿದೆ.

ವಿಚಾರ ಮಾಡಿ ನೋಡಿದರೆ ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ತಿಳಿದಂತೆ ಲಿಂಗಧಾರಣ ಶಿವದೀಕ್ಷೆಗಳು ಭಿನ್ನವಾದವುಗಳಲ್ಲ. ಶಿವಶರಣರ ಅನಂತ ವಚನಗಳ ಪ್ರಕಾರವೂ ಸಿದ್ಧಾಂತ ಶಿಖಾಮಣಿಯೇ ಮುಂತಾದ ಅನಂತ ಸ್ವತಂತ್ರ ಗ್ರಂಥಗಳ ಪ್ರಕಾರವೂ ಲಿಂಗಧಾರಣ

ಶಿವದೀಕ್ಷೆಗಳಿಗೆ ಯಾವ ಭೇದವೂ ಇಲ್ಲ. ಒಂದರ ಕಾರ್ಯಕ್ರಮದಲ್ಲಿ ಮತ್ತೊಂದು ಹಾಸುಹೊಕ್ಕುಗಳಂತೆ ಹೆಣೆದುಕೊಂಡಿದೆ. ಶಿವದೀಕ್ಷೆಯನ್ನು ಬಿಟ್ಟು ಲಿಂಗಧಾರಣವಿಲ್ಲ. ಲಿಂಗಧಾರಣವನ್ನು ಬಿಟ್ಟು ಶಿವದೀಕ್ಷೆಯಿಲ್ಲ. ಶಿವದೀಕ್ಷೆಯು ಲಿಂಗಧಾರಣೆಯಲ್ಲಿ ಮುಕ್ತಾಯಗೊಳ್ಳಬೇಕು. ಲಿಂಗ ಧಾರಣವು ಶಿವದೀಕ್ಷೆಯಲ್ಲಿ ಆಚರಿಸಲ್ಪಡಬೇಕು. ಲಿಂಗಧಾರಣ ಮಾಡದೆ ಶಿವದೀಕ್ಷೆಯನ್ನು ನಡೆಯಿಸುವದಕ್ಕಾಗುವುದಿಲ್ಲ. ಶಿವದೀಕ್ಷೆಯಲ್ಲಲ್ಲದೆ ಲಿಂಗ ವನ್ನು ಧಾರಣಮಾಡುವುದಕ್ಕಾಗುವುದಿಲ್ಲ. ಹೇಗೆ ವಿವಾಹವು ಮಾಂಗಲ್ಯ ಧಾರಣೆಯಲ್ಲಿ ಮುಕ್ತಾಯಗೊಳ್ಳಬೇಕೋ ಹಾಗೆ ಶಿವದೀಕ್ಷೆಯು ಲಿಂಗ ಧಾರಣೆಯಲ್ಲಿ ಮುಕ್ತಾಯಗೊಳ್ಳಬೇಕು. ವಿವಾಹದಲ್ಲಲ್ಲದೆ ಮಾಂಗಲ್ಯ ವನ್ನು ಹೇಗೆ ಕಟ್ಟುವದಕ್ಕೆ ಬರುವುದಿಲ್ಲವೋ ಹಾಗೆ ಶಿವದೀಕ್ಷೆಯಲ್ಲಲ್ಲದೆ ಲಿಂಗವನ್ನು ಧಾರಣ ಮಾಡುವುದಕ್ಕೆ ಬರುವುದಿಲ್ಲ. ವಿವಾಹದಲ್ಲಿ ಹೇಗೆ ಪುರೋಹಿತನು ವಧುವರರಿಗೆ ವಿವಾಹಮಾಡಿ ಮಾಂಗಲ್ಯಧಾರಣೆಯನ್ನು ಮಾಡಿಸುತ್ತಾನೆಯೋ ಹಾಗೆ ಶಿವದೀಕ್ಷೆಯಲ್ಲಿ ಗುರುವು ಅಂಗಲಿಂಗ ಗಳ (ಶಿವಜೀವರ) ಸಂಬಂಧವನ್ನು ಮಾಡಿಸಿ ಲಿಂಗಧಾರಣವನ್ನು ಮಾಡುತ್ತಾನೆ.

ಈ ವಿಚಾರವು ಶಿವಶರಣರ ಅನಂತ ವಚನಗಳಲ್ಲಿ ಪ್ರತಿಪಾದಿತ ವಾಗಿದೆ.

"ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಆವ ಜಾತಿ ಯಲ್ಲಿ ಹುಟ್ಟಿದಾತನಾದರೂ ಆಗಲಿ, ಗುರು ಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿದ ಆಚಾರಸಂಪನ್ನ ಸತ್ಕ್ರಿಯು ನಾದ ಮಹಾತ್ಮನೇ ಮೂರು ಲೋಕಕ್ಕೆ ಅಧಿಕಾರಿಯು ನೋಡಾ ಅಖಂಡೇಶ್ವರಾ"

ಈ ವಚನದಲ್ಲಿ "ಅಂಗದ ಮೇಲೆ ಲಿಂಗವ ಧರಿಸಿದ" ಎಂಬ ಪದಗಳು ಲಿಂಗ ಧಾರಣವನ್ನು ಸ್ಪಷ್ಟಪಡಿಸುತ್ತವೆ. ಮತ್ತೆ—

"ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇನಯ್ಯಾ ? ಲಿಂಗ ದೇವನ ಪೂಜಿಸಿ ಕುಲವನರಸುವರೇನಯ್ಯಾ ? "

ಇಲ್ಲಿ "ಲಿಂಗದೇವನ ಪೂಜಿಸಿ" ಎಂಬ ಪದಗಳು ಲಿಂಗಧಾರಣ ವನ್ನು ಸೂಚಿಸುತ್ತವೆ. ಮತ್ತೆ—

"ಆಣವಮಲ, ಮಾಯಾಮಲ, ಕಾರ್ಮಿಕಮಲ, ಎಂಬ ಮಲತ್ರಯಂಗಳ ಕಳೆದು ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ ಈ ಏಳನು ಕಾಯಕ್ಕೆ ಉಪದೇಶವ ಮಾಡುವುದು. ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಆಧ್ಯಾತ್ಮಿಕ, ಅನುಗ್ರಹ, ಸತ್ಯಶುದ್ಧಿ ಈ ಏಳನು ಪ್ರಾಣಕ್ಕೆ ಉಪದೇಶವ ಮಾಡುವುದು. ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಮನೋರ್ಲಯ, ಲಿಂಗನಿಜ, ಸದ್ಯೋನ್ಮುಕ್ತಿ ಏಳನು ಮನಕ್ಕೆ ಉಪದೇಶವ ಮಾಡುವುದು. ಈ ಕ್ರಮವನರಿದು ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯಾ"

ಇಲ್ಲಿ "ಲಿಂಗಾಯತ ಲಿಂಗಸ್ವಾಯತ" ಎಂಬ ಪದಗಳನ್ನು ಅವಲೋಕಿಸಬೇಕು. ಚನ್ನಬಸವಣ್ಣನವರು ಈ ಅತುಲವಾದ ವರ್ಣನೆಯಲ್ಲಿ ಲಿಂಗಧಾರಣವು ಶಿವದೀಕ್ಷೆಯಲ್ಲಿ ಯಾವ ಸ್ಥಾನವನ್ನು ಪಡೆದಿದೆಯೆಂಬುದನ್ನು ಸ್ಪಷ್ಟ ಪಡಿಸಿದ್ದಾರೆ. ಮತ್ತೆ—

"ಶ್ರೀಗುರುಸ್ವಾಮಿ ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ ಕರಸ್ಥಲಕ್ಕೆ ಕೊಟ್ಟ ಬಳಿಕ ಬೇರೆ ಯೋಗವುಂಟೆ ?"

ಮತ್ತೆ

"ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ಕರತಳಾಮಳಕದಂತೆ ಮಾಡಿ ಎನ್ನ ಕರಸ್ಥಲಕ್ಕೆ ಕ್ರಿಯಾಲಿಂಗವ ಕೊಟ್ಟು ಶ್ರೀಗುರುಚನ್ನ ಬಸವಣ್ಣ ಹೆಸರಿಟ್ಟ ಲಿಂಗದ ಹೆಸರ ಹೇಳುವೆನು ಕೇಳಯ್ಯ"

ಮತ್ತೆ

"ಎನ್ನ ಸುಜ್ಞಾನದ ಕಾಯದ ಮಸ್ತಕದಲ್ಲಿ ಹಸ್ತವನಿರಿಸಿ ಮನಭಾವ ಕರಣೇಂದ್ರಿಯಗಳ ಸ್ವರೂಪೀಕರಿಸಿ ದೃಷ್ಟಿಗೆ ತೋರಿ ಕೈಯಲ್ಲಿ ಲಿಂಗವ ಕೊಟ್ಟ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯಾ"

ಈ ವಚನಗಳಿಂದ ಶಿವದೀಕ್ಷೆಯಲ್ಲಿ ಲಿಂಗಧಾರಣವೇ ಬಹು ಮುಖ್ಯವಾದ ಕಾರ್ಯಕ್ರಮವಾಗಿರುತ್ತದೆಯೆಂಬುದು ಸ್ಪಷ್ಟವಾಗಿ ಕಂಡು ಬರು

ತ್ತದೆ. ಅಷ್ಟೇ ಏಕೆ? ಶಿವದೀಕ್ಷೆಯು ಗುರಿಯೇ ಲಿಂಗಧಾರಣೆಯಾಗಿದೆಯೆಂಬುದು ವಿದಿತವಾಗುತ್ತದೆ.

ಇನ್ನು ಈ ವಿಚಾರದಲ್ಲಿ ಸ್ವತಂತ್ರ ಗ್ರಂಥಗಳು ಏನು ಹೇಳುತ್ತವೆಯೆಂಬುದನ್ನು ನೋಡೋಣ. ಶ್ರೀ ಶಿವಯೋಗಿ ಶಿವಾಚಾರ್ಯನು ರೇಣುಕಾಗಸ್ತ್ಯ ಸಂವಾದ ರೂಪದಲ್ಲಿ ರಚಿಸಿರುವ ಸಿದ್ಧಾಂತ ಶಿಖಾಮಣಿಯು ಎಲ್ಲರಿಗೂ ಪರಿಚಯವಾದ ಗ್ರಂಥ. ವೀರಶೈವ ಧರ್ಮತತ್ವ ನಿರ್ಣಯಕ್ಕೆ ಈ ಗ್ರಂಥವೂ ಒಂದು ಮುಖ್ಯ ಆಧಾರವಾಗಿದೆ. ಈ ಗ್ರಂಥದಲ್ಲಿ ಏಕೋತ್ತರ ಶತಸ್ಥಲಗಳೆಂದು ಪ್ರಸಿದ್ಧವಾದ ನೂರೊಂದು ಸ್ಥಲಗಳು ವರ್ಣಿಸಲ್ಪಟ್ಟಿವೆ. ಈ ನೂರೊಂದು ಸ್ಥಲಗಳೇ ವೀರಶೈವನು ತನ್ನ ಜೀವನದಲ್ಲಿ ಇಡಬೇಕಾದ ನೂರೊಂದು ಹೆಜ್ಜೆಗಳು. ಈ ರೀತಿ ಪ್ರಸಿದ್ಧವಾದ ನೂರೊಂದು ಸ್ಥಲಗಳಲ್ಲಿ ಲಿಂಗಧಾರಣಸ್ಥಲವೆಂಬುದು ಒಂದು ಮುಖ್ಯವಾದ ಸ್ಥಲ. ಇದು ನೂರೊಂದು ಸ್ಥಲಗಳಲ್ಲಿ ಐದನೆಯ ಸ್ಥಲ. ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕಾರುಣ್ಯಸ್ಥಲ, ಇವುಗಳೇ ಮೊದಲನೆಯ ನಾಲ್ಕು ಸ್ಥಲಗಳು. ಈ ನಾಲ್ಕು ಸ್ಥಲಗಳಾದ ಮೇಲೆ ಬರತಕ್ಕುದೇ ಮೇಲೆ ಹೇಳಿದ ಪ್ರಸಿದ್ಧವಾದ ಲಿಂಗಧಾರಣಸ್ಥಲ. ಈ ಸ್ಥಲದಲ್ಲಿ ಗುರುವು ಶಿಷ್ಯನಿಗೆ ಶಿವದೀಕ್ಷೆಯನ್ನು ಅನುಗ್ರಹಿಸುವ ವಿಚಾರವು ಸಂಪೂರ್ಣವಾಗಿ ವರ್ಣಿಸಲ್ಪಟ್ಟಿದೆ ಲಿಂಗಧಾರಣವೇ ಬೇರೆಯಾಗಿ ಶಿವದೀಕ್ಷೆಯೇ ಬೇರೆಯಾಗಿದ್ದ ಪಕ್ಷದಲ್ಲಿ ಈ ಸ್ಥಲಕ್ಕೆ ಶಿವಯೋಗಾಚಾರ್ಯನು ಲಿಂಗಧಾರಣಸ್ಥಲವೆಂದು ಹೆಸರಿಟ್ಟು ಅದರಲ್ಲಿ ಶಿವದೀಕ್ಷೆಯನ್ನು ಏಕೆ ವರ್ಣಿಸುತ್ತಿದ್ದನು? ಮತ್ತು ಶಿವಮೂರ್ತಿ ಶಾಸ್ತ್ರಿಗಳು ಹೇಳುವಂತೆ (ಶರಣಸಾಹಿತ್ಯದ ೪೬೫ ನೆಯ ಪುಟದ ೧೦ ನೆಯ ಮತ್ತು ೧೧ ನೆಯ ಪಂಕ್ತಿಗಳನ್ನು ನೋಡಿ) ಲಿಂಗಧಾರಣವಾದ ನಂತರ ಶಿವದೀಕ್ಷೆಯು ನಡೆಯಬೇಕಾದುದು ನಿಜವಾಗಿದ್ದ ಪಕ್ಷದಲ್ಲಿ ಶಿವಯೋಗಾಚಾರ್ಯನು ತನ್ನ ಸಿದ್ಧಾಂತ ಶಿಖಾಮಣಿಯಲ್ಲಿ ಲಿಂಗಧಾರಣಸ್ಥಲವಾದ ನಂತರ ಶಿವದೀಕ್ಷಾಸ್ಥಲವೆಂಬ ಒಂದು ಸ್ಥಲವನ್ನೇಕೆ ನಿರ್ಮಿಸಲಿಲ್ಲ? ಲಿಂಗಧಾರಣೆಗಾಗಿಯೇ ಒಂದು ಸ್ಥಲವನ್ನು ಮೀಸಲಾಗಿಟ್ಟ ಶಿವಯೋಗಾಚಾರ್ಯನು ಶಿವದೀಕ್ಷೆಗಾಗಿ ಏಕೆ ಒಂದು ಸ್ಥಲವನ್ನು ಮೀಸಲಾಗಿಡಬಾರದಾಗಿತ್ತು? ಇದಕ್ಕೆ ಉತ್ತರವಿಷ್ಟೇ. ಲಿಂಗಧಾರಣ ಶಿವದೀಕ್ಷೆಗಳು ಭಿನ್ನವಾದವುಗಳಲ್ಲ. ಲಿಂಗ

ಧಾರಣ ಶಿವದೀಕ್ಷೆಗಳೆರಡೂ ಒಂದೇ. ಈ ವಿಚಾರದಲ್ಲಿ ಶಿವಯೋಗಾಚಾರ್ಯನು ಶಿವಶರಣರ ಮಾರ್ಗವನ್ನೇ ಅನುಸರಿಸಿರುತ್ತಾರೆ.

ಇನ್ನು ಈ ಸಿದ್ಧಾಂತ ಶಿಖಾಮಣಿಯಲ್ಲಿ ವಿವರಿಸಲ್ಪಟ್ಟ ಶಿವದೀಕ್ಷೆಯು ಅರ್ಥಾತ್ ಲಿಂಗಧಾರಣೆಯು ವಿವರಣೆಯನ್ನೂ ಮತ್ತು ಕ್ರಿಯಾಚರಣೆಯನ್ನೂ ಅವಲೋಕಿಸುವ. "ಶಕ್ತಿಪಾತಂ ಸಮಾಲೋಕ್ಯ ದೀಕ್ಷಾಯಾಯೋಜಯೇದಮುಂ । ದೀಯತೇ ಚ ಶಿವಜ್ಞಾನಂ ಕ್ಷೀಯತೆ ಪಾಶಬಂಧನಂ॥" ಎಂದರೆ ಯಾವುದರಿಂದ ಪರಬ್ರಹ್ಮ ಪರಶಿವಾಭಿಧಾನವುಳ್ಳ ಮಹಾಲಿಂಗದ ಜ್ಞಾನವು ಉಂಟುಮಾಡಿಕೊಡಲ್ಪಡುತ್ತದೆಯೋ ಯಾವುದರಿಂದ ಮಲಮಾಯಾ ಕರ್ಮಬಂಧವು ಕ್ಷೀಣಿಸಿ ಹೋಗುತ್ತದೆಯೋ ಅಂಥ ಜ್ಞಾನಕ್ರಿಯಾತ್ಮಕವಾದ ಶಕ್ತಿಯೇ "ದೀಕ್ಷೆ" ಯೆಂದು ದೀಕ್ಷೆಯ ಅರ್ಥವನ್ನು ವಿವರಿಸಿ ಇಂಥ ದೀಕ್ಷೆಯು ವೇಧಾ, ಮಂತ್ರ, ಕ್ರಿಯಾ ಎಂದು ಮೂರು ತೆರನಾಗಿದೆಯೆಂದೂ ಶ್ರೀಗುರುವು ತನ್ನ ಕೃಪಾದೃಷ್ಟಿಯಿಂದ ಜೀವನನ್ನು ನೋಡಿ ತನ್ನ ಶಿವಹಸ್ತವನ್ನು ಜೀವನ ಮಸ್ತಕದಲ್ಲಿ ಸಂಯೋಜಿಸಿ ತನ್ನ ಕರಕಮಲದಿಂದ ಜೀವನು ಸಮುತ್ಪನ್ನನಾಗುವಂತೆ ಮಾಡುವುದೇ ವೇಧಾ ದೀಕ್ಷೆಯೆಂದೂ ಜೀವನ ಕರ್ಣದಲ್ಲಿ ಪಂಚಾಕ್ಷರೀ ಮಂತ್ರವನ್ನು ಉಪದೇಶ ಮಾಡುವುದೇ ಮಂತ್ರ ದೀಕ್ಷೆಯೆಂದೂ ಕಲಶ ಬಂಧವನ್ನು ಮಾಡಿ ಸ್ವಸ್ತಿಕ ಮಂಡಲವನ್ನು ರಚಿಸಿ ಜೀವನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ಕ್ರಮವಾಗಿ ಇಷ್ಟ ಪ್ರಾಣಭಾವವೆಂಬ ಲಿಂಗತ್ರಯುವನ್ನು ಪ್ರತಿಷ್ಠಿಸುವುದೇ ಕ್ರಿಯಾದೀಕ್ಷೆಯೆಂದೂ ಶಿವಯೋಗಾಚಾರ್ಯನು ಬಹು ಸ್ಪಷ್ಟವಾಗಿ ವರ್ಣಿಸಿದ್ದಾನೆ. ಇದರಿಂದ ಶಿವದೀಕ್ಷೆ ಲಿಂಗಧಾರಣೆಗಳು ಭಿನ್ನವಾದವುಗಳಲ್ಲವೆಂಬುದು ಸ್ವಚ್ಛವಾಗಿ ಕಾಣುತ್ತದೆ.

ಇನ್ನು ಕನ್ನಡ ನಾಡಿನ ಸುಪ್ರಸಿದ್ಧ ಯೋಗಿಯೂ ಷಟ್ಸ್ಥಲ ಜ್ಞಾನಾನುಭಾವಿಯೂ ಉದ್ದಾಮ ಕವಿಯೂ ಆದ ಶ್ರೀ ತೋಂಟದ ಸಿದ್ಧಲಿಂಗ ಯತಿಯು ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯ ವಿಚಾರದಲ್ಲಿ ಹೇಳುವುದೇನೆಂಬುದನ್ನು ನೋಡೋಣ.

"ವೇಧಾ ದೀಕ್ಷೆ ಮಂತ್ರ ದೀಕ್ಷೆ ಕ್ರಿಯಾ ದೀಕ್ಷೆ ಎಂಬ ದೀಕ್ಷಾತ್ರಯಂಗಳಿಂದ ತನುತ್ರಯಂಗಳ ಪೂರ್ವಾಶ್ರಯವ ಕಳೆದು ಲಿಂಗ

ತ್ರಯಗಳ ಸಂಬಂಧಿಸಿದನು. ಅದೆಂತೆಂದಡೆ ವೇಧಾ ದೀಕ್ಷೆಯೆಂದು ಶ್ರೀಗುರು ತನ್ನ ಹಸ್ತವ ಶಿಷ್ಯನ ಮಸ್ತಕದಲ್ಲಿ ಸಂಯೋಗವ ಮಾಡಿದುದು ಮಂತ್ರ ದೀಕ್ಷೆಯೆಂದು ಶ್ರೀ ಗುರು ಪ್ರಣವ ಪಂಚಾಕ್ಷರಿಯ ಮಂತ್ರವ ಕರ್ಣದಲ್ಲಿ ಉಪದೇಶಿಸಿದುದು. ಕ್ರಿಯಾದೀಕ್ಷೆಯೆಂದು ಆಮಂತ್ರ ಸ್ವರೂಪವನೆ ಇಷ್ಟಲಿಂಗ ಸ್ವರೂಪವ ಮಾಡಿ ಕರಸ್ಥಲದಲ್ಲಿ ಸಂಬಂಧಿಸಿದುದು. ಇದು ಕಾರಣ ವೇಧಾ ದೀಕ್ಷೆಯಿಂದ ಕಾರಣ ತನುವಿನ ಪೂರ್ವಾಶ್ರಯವಳಿದು ಭಾವಲಿಂಗ ಸಂಬಂಧವಾಯಿತ್ತು. ಮಂತ್ರ ದೀಕ್ಷೆಯಿಂದ ಸೂಕ್ಷ್ಮ ತನುವಿನ ಪೂರ್ವಾಶ್ರಯವಳಿದು ಪ್ರಾಣಲಿಂಗವಾಯಿತ್ತು. ಕ್ರಿಯಾ ದೀಕ್ಷೆಯಿಂದ ಸ್ಥೂಲತನುವಿನ ಪೂರ್ವಾಶ್ರಯವಳಿದು ಇಷ್ಟಲಿಂಗ ಸಂಬಂಧವಾಯಿತ್ತು. ಹೀಗೆ ಅಂಗ ತ್ರಯಂಗಳಲ್ಲಿ ಲಿಂಗ ತ್ರಯಂಗಳ ಧರಿಸಿದನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಮತ್ತು

ಎಷ್ಟು ಅರುಹಾದೆರೂ ಅಂಗದ ಮೇಲೆ ಶಿವಲಿಂಗ ಧಾರಣವಿಲ್ಲದಿದ್ದರೆ ಅರುಹಲ್ಲ. ಅದು ನಮ್ಮ ಪುರಾತನರ ಮತವಲ್ಲ. ಸಾಕ್ಷಾತ್ ಪರಶಿವನು ತಾನಾದರೂ ಆಗಲಿ ಅಂಗದ ಮೇಲೆ ಲಿಂಗಧಾರಣವಿಲ್ಲದಿದ್ದರೆ ಅವನ ಮುಖವ ನೋಡಲಾಗದು ಕಾಣಾ. ಅದೇನು ಕಾರಣವೆಂದರೆ ಅದು ಶಿವಾಚಾರದ ಪಥವಲ್ಲದ ಕಾರಣ.........”

ಈ ವಚನಗಳಿಂದ ತೋಂಟದ ಸಿದ್ಧಲಿಂಗ ಯತಿಗಳೂ ಸಹ ಲಿಂಗಧಾರಣೆ ಶಿವದೀಕ್ಷೆಗಳೆರಡೂ ಒಂದೇ ಎಂಬ ಅಭಿಪ್ರಾಯವನ್ನೇ ಸಮರ್ಥಿಸಿದ್ದಾರೆಂಬುದು ವಿದಿತವಾಗುತ್ತದೆ. ಲಿಂಗಧಾರಣ ಶಿವದೀಕ್ಷೆಗಳ ವಿಚಾರದಲ್ಲಿ ವಚನಕಾರರ ಮತ್ತು ಸ್ವತಂತ್ರ ಗ್ರಂಥಕಾರರ ಅಭಿಪ್ರಾಯಗಳು ಈ ರೀತಿಯಿರುವಲ್ಲಿ ಶಿವದೀಕ್ಷೆಯೇ ಬೇರೆ ಲಿಂಗಧಾರಣವೇ ಬೇರೆ ಎಂದು ಸಿದ್ಧಾಂತಮಾಡಲಿಕ್ಕೆ ಹೋಗುವುದು ಭ್ರಾಂತಿಯೇ ಸರಿ.

ಇನ್ನು ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯು ಯಾವ ಯಾವ ಸನ್ನಿವೇಶಗಳಲ್ಲಿ ಮತ್ತು ಹೇಗೆ ಆಚರಿಸಲ್ಪಡುತ್ತದೆಯೆಂಬ ವಿಚಾರವನ್ನೂ ಮತ್ತು 'ಶಿವದೀಕ್ಷೆ' ಮತ್ತು 'ಲಿಂಗಧಾರಣ' ಪದಗಳು ಯಾವ ಯಾವ

ಸನ್ನಿವೇಶಗಳಲ್ಲಿ ಮತ್ತು ಹೇಗೆ ಪ್ರಯೋಗಿಸಲ್ಪಡುತ್ತವೆಯೆಂಬ ವಿಚಾರವನ್ನೂ ಅವಲೋಕಿಸೋಣ. ಸಾಮಾನ್ಯವಾಗಿ ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಗೆ ಎರಡು ಸನ್ನಿವೇಶಗಳು ಒದಗುತ್ತವೆ. ಒಂದು ಲಿಂಗಧಾರಿಗಳಾದವರ ಹೊಟ್ಟೆಯಲ್ಲಿ ಮಕ್ಕಳು ಜನಿಸಿದಾಗ ಒದಗತಕ್ಕ ಸನ್ನಿವೇಶ. ಮತ್ತೊಂದು ಅಲಿಂಗಿಗಳು ಎಂದರೆ ವೀರಶೈವೇತರರು ಎಂದರೆ ಭವಿಗಳು ವೀರಶೈವ ಧರ್ಮವನ್ನು ಸ್ವೀಕಾರಮಾಡಬೇಕೆಂದು ಬಯಸಿ ಬಂದಾಗ ಒದಗತಕ್ಕ ಸನ್ನಿವೇಶ. ಈ ಎರಡೂ ಸನ್ನಿವೇಶಗಳಲ್ಲಿಯೂ ನಡೆಯಿಸಬೇಕಾದ ಶಿವದೀಕ್ಷೆ ಅಥವಾ ಲಿಂಗಧಾರಣೆಯ ಕಾರ್ಯಕ್ರಮವು ಒಂದೇ ಆಗಿರುತ್ತದೆ. ಆದರೆ ಸನ್ನಿವೇಶಗಳು ಮಾತ್ರ ಬೇರೆ ಬೇರೆ. ಒಂದರಲ್ಲಿ ದೀಕ್ಷಾಪೇಕ್ಷಿಯು ಮಗುವಾಗಿರುತ್ತಾನೆ. ಮತ್ತೊಂದರಲ್ಲಿ ಅವನು ವಯಸ್ಕನಾಗಿರುತ್ತಾನೆ. ಮೊದಲನೆಯ ಸನ್ನಿವೇಶದಲ್ಲಿ ಎಂದರೆ ಲಿಂಗಧಾರಿಗಳಾದವರ ಹೊಟ್ಟೆಯಲ್ಲಿ ಮಕ್ಕಳು ಜನಿಸಿದ ಸನ್ನಿವೇಶದಲ್ಲಿ ನಡೆಯುತಕ್ಕ ಶಿವ ದೀಕ್ಷೆಯನ್ನು ನಾವು ರೂಢಿಯಲ್ಲಿ ಲಿಂಗಧಾರಣೆಯೆಂದು ಕರೆಯುತ್ತೇವೆ. ಎರಡನೆಯ ಸನ್ನಿವೇಶದಲ್ಲಿ ಎಂದರೆ ವೀರಶೈವೇತರರು ವೀರಶೈವ ಧರ್ಮವನ್ನು ಸ್ವೀಕಾರ ಮಾಡಲು ಅಪೇಕ್ಷಿಸಿದ ಸನ್ನಿವೇಶದಲ್ಲಿ ನಡೆಯುತಕ್ಕ ಶಿವದೀಕ್ಷೆಯನ್ನು ಶಿವದೀಕ್ಷೆಯೆಂದೇ ಕರೆಯುತ್ತೇವೆ. ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯು ನಡೆಯುತಕ್ಕ ಬೇರೆ ಬೇರೆ ಸನ್ನಿವೇಶಗಳನ್ನು ಸೂಚಿಸುವುದಕ್ಕೋಸ್ಕರ ಈ ರೀತಿಯಲ್ಲಿ ನಾವು ಲಿಂಗಧಾರಣೆಯೆಂದು ಒಂದು ಸನ್ನಿವೇಶದಲ್ಲಿಯೂ ಶಿವದೀಕ್ಷೆಯೆಂದು ಮತ್ತೊಂದು ಸನ್ನಿವೇಶದಲ್ಲಿಯೂ ಶಬ್ದಪ್ರಯೋಗ ಮಾಡುತ್ತೇವೆ. ಆದರೆ ಈ ಎರಡು ಸನ್ನಿವೇಶಗಳಲ್ಲಿಯೂ ನಡೆಯುತಕ್ಕ ಕ್ರಿಯಾಚರಣೆಗಳು ಮಾತ್ರ ತತ್ವದಲ್ಲಿಯೂ ಮತ್ತು ಪರಿಣಾಮದಲ್ಲಿಯೂ ಒಂದೇ ಆಗಿವೆ.

ಲಿಂಗಧಾರಿಗಳಾದವರ ಹೊಟ್ಟೆಯಲ್ಲಿ ಮಕ್ಕಳು ಜನಿಸಿದಾಗ ನಡೆಯತಕ್ಕ ಲಿಂಗಧಾರಣ ಕಾರ್ಯಕ್ರಮಗಳನ್ನು ನಾವೆಲ್ಲರೂ ಅನೇಕ ವೇಳೆ ನೋಡಿರುತ್ತೇವೆ. ಶಿವದೀಕ್ಷೆಯ ಮೂರು ಮುಖ್ಯ ಪ್ರಭೇದಗಳಾದ ವೇಧಾ, ಮಂತ್ರ, ಕ್ರಿಯಾ, ಎಂಬ ತ್ರಿವಿಧ ದೀಕ್ಷೆಗಳು ಶಿಶುವಿನ ಶಿವದೀಕ್ಷೆಯಲ್ಲಿ ಗುರುವಿನಿಂದ ಶಿಶುವಿಗೆ ಅನುಗ್ರಹಿಸಲ್ಪಡುತ್ತವೆ. ಅಲ್ಲದೆ ಶಿಶುವಿನ ಶಿವದೀಕ್ಷೆಯಲ್ಲಿ ಅಷ್ಟಾವರಣಗಳು ಎಂದರೆ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಎಂಬ

ಎಂಟು ಆವರಣಗಳು ತಮ್ಮ ತಮ್ಮ ಪವಿತ್ರ ಕರ್ತವ್ಯಗಳನ್ನು ನೆರವೇರಿಸಿ ಶಿಶುವಿನ ಶಿವದೀಕ್ಷೆಯನ್ನು ಶೋಭಾಯಮಾನವಾಗಿ ಮಾಡುತ್ತವೆ. ಗುರುವು ವಿಧಿವತ್ತಾಗಿ ದೀಕ್ಷೆಯ ಪ್ರಥಮ ಕಾರ್ಯಕ್ರಮಗಳನ್ನು ಕೈಗೊಂಡು ಸೂತ್ರವನ್ನು ಹಿಡಿದು ಶಿಶುವನ್ನು ಕರೆಯಿಸಿಕೊಂಡು ಶಿಶುವಿನ ಹಸ್ತಮಸ್ತಕ ಸಂಯೋಗ ಮಾಡಿ ಶಿಶುವಿನ ಕಾರಣ ತನುವಿನ ಪೂರ್ವಾಶ್ರಯವನ್ನು ಕಳೆಯು ಭಾವಲಿಂಗ ಸಂಬಂಧವನ್ನು ಮಾಡಿ, ಶಿಶುವಿನ ಕಿವಿಯಲ್ಲಿ ಮಂತ್ರವನ್ನು ಉಪದೇಶಮಾಡಿ, ಶಿಶುವಿನ ಸೂಕ್ಷ್ಮ ತನುವಿನ ಪೂರ್ವಾಶ್ರಯುವನ್ನು ಕಳೆಯು ಪ್ರಾಣಲಿಂಗ ಸಂಬಂಧವನ್ನು ಮಾಡಿ, ಲಿಂಗವನ್ನು ಶಿಶುವಿಗೆ ಧಾರಣ ಮಾಡಿ ಶಿಶುವಿನ ಸ್ಥೂಲ ತನುವಿನ ಪೂರ್ವಾಶ್ರಯುವನ್ನು ಕಳೆದು ಇಷ್ಟಲಿಂಗ ಸಂಬಂಧವನ್ನು ಮಾಡುವನು. ಈ ಕಾರ್ಯಕ್ರಮಗಳೇ ಮೇಲೆ ಹೇಳಿದ ಸಿದ್ಧಾಂತ ಶಿಖಾಮಣಿಯೇ ಮುಂತಾದ ಆಧಾರಗಳ ರೀತ್ಯಾ ಕ್ರಮವಾಗಿ ವೇಧಾ ಮಂತ್ರ ಮತ್ತು ಕ್ರಿಯಾ ದೀಕ್ಷೆಗಳೆನಿಸಿಕೊಳ್ಳುವವು. ಇದು ಯಾರಿಗಾದರೂ ಅರ್ಥವಾಗತಕ್ಕ ಮಾತಾಗಿದೆ. ಇನ್ನು ಅಷ್ಟಾವರಣಗಳು ಶಿಶುವಿನ ಶಿವದೀಕ್ಷೆಯಲ್ಲಿ ಹೇಗೆ ಆಚರಿಸಲ್ಪಡುತ್ತವೆಂಬುದನ್ನು ನೋಡೋಣ. ಅಷ್ಟಾವರಣವೆಂದರೆ ಗುರು, ಲಿಂಗ, ಜಂಗಮಲಿಂಗ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದಗಳೆಂಬುದು ಹಿಂದೆಯೇ ಹೇಳಲಾಗಿದೆ. ಶಿಸುವಿಗೆ ಲಿಂಗವನ್ನು ಧರಿಸುವವನೇ ಗುರು. ಶಿಶುವಿನ ಕಿವಿಯಲ್ಲಿ ಉಪದೇಶಿಸಲಾಗುವ ಮಂತ್ರವೇ ಮಂತ್ರ. ಶಿಶುವಿಗೆ ಧಾರಣೆ ಮಾಡಲಾಗುವ ಲಿಂಗವೇ ಲಿಂಗ. ಲಿಂಗವನ್ನು ಧರಿಸುವದಕ್ಕೆ ಮುಂಚಿತವಾಗಿಯೇ ಗುರುವು ಶಿಶುವಿಗೆ ವಿಭೂತಿಯನ್ನು ಪೂಸಿ ರುದ್ರಾಕ್ಷಿಯನ್ನು ಧರಿಸುವನು. ಈ ವಿಭೂತಿ ರುದ್ರಾಕ್ಷಿಗಳೇ ವಿಭೂತಿ ರುದ್ರಾಕ್ಷಿ. ಲಿಂಗಧಾರಣೆಯಾದ ಮೇಲೆ ಶಿಶುವನ್ನು ಜಂಗಮ ಪಾದದ ಮೇಲೆ ಇಟ್ಟು ನಮಿಸಲಾಗವುದು. ಈ ಜಂಗಮವೇ ಜಂಗಮ. ಈ ಜಂಗಮದ ಪಾದವನ್ನು ಉದಕದಿಂದ ಅಭಿಷೇಕಿಸಿ ಆ ಉದಕವನ್ನು ಶಿಶುವಿನ ಲಿಂಗದ ಮೇಲೆ ಬರೆದು ಆ ಉದಕವನ್ನು ಶಿಶುವಿನ ಬಾಯಿಗೆ ಕೊಡಲಾಗುವದು. ಈ ಉದಕವೇ ಪಾದೋದಕ. ಅನಂತರ ಜಂಗಮಕ್ಕೆ ಉಣಬಡಿಸಿ ಆ ಜಂಗಮ ಒಕ್ಕು ಮಿಕ್ಕ ಪದಾರ್ಥವನ್ನು ಶಿಶುವಿನ ಲಿಂಗಕ್ಕೆ ನಿವೇದಿಸಿ ಆ ಪದಾರ್ಥವನ್ನು ಶಿಶುವಿನ ಬಾಯಿಗೆ ಕೊಡಲಾಗುವದು. ಇದೇ ಪ್ರಸಾದ. ಇದೀಗ ಶಿಶುವಿನ ಶಿವದೀಕ್ಷೆಯಲ್ಲಿ ಅಷ್ಟಾವರಣಗಳು ತಮ್ಮ ತಮ್ಮ ಪವಿತ್ರ ಕೆಲ

ಸಗಳನ್ನು ಮಾಡುವ ಕ್ರಮ. ಈ ರೀತಿಯಲ್ಲಿ ಲಿಂಗಧಾರಿಗಳ ಹೊಟ್ಟೆಯಲ್ಲಿ ಮಕ್ಕಳು ಹುಟ್ಟಿದಾಗ ಮಾಡತಕ್ಕ ಲಿಂಗಧಾರಣ ಕಾರ್ಯಕ್ರಮವು ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಹೇಳುವಂತೆ ಶಿವದೀಕ್ಷೆ ಎನಿಸಿಕೊಳ್ಳದಿದ್ದರೆ— ಶಿವಶರಣರ "ಲಿಂಗ ಮುಟ್ಟಲೊಡನೆ ಶಿವಕುಲವ ಹುದು ತಪ್ಪದು, "ಲಿಂಗಭಕ್ತನೇ ಕುಲಜ, "ಲಿಂಗವಿದ್ದವರ ಮನೆ ಕೈಲಾಸ" ಇವೇ ಮುಂತಾದ ಅಸಂಖ್ಯಾತ ಶಿವಶರಣರ ಅಭಯ ಸಂಪತ್ತುಗಳು ಪುಸಿಯಾಗಿ ಹೋಗುವುದಿಲ್ಲವೇ? ಎಂದ ಮೇಲೆ ಶಿಶುವಿನ ಶಿವದೀಕ್ಷೆಯು ಮೇಲೆ ಕಂಡ ಎಲ್ಲ ಕಾರಣಗಳಿಂದ ವೀರಶೈವ ಧರ್ಮಸ್ವೀಕಾರದ ಶಿವದೀಕ್ಷೆಯಷ್ಟೇ ಪರಿಪೂರ್ಣವಾದುದೂ ಫಲಕಾರಿಯಾದುದೂ ಆಗಿದೆಯೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಯಿತು.

ಈ ಸಂದರ್ಭದಲ್ಲಿ ಯಾರಾದರೂ ಒಂದು ಕುಂಟು ಆಕ್ಷೇಪಣೆಯನ್ನು ಒಡ್ಡಬಹುದಾಗಿದೆ. ಶಿಶುವಿನ ಶಿವದೀಕ್ಷೆಯು ವೀರಶೈವ ಧರ್ಮಸ್ವೀಕಾರದ ಶಿವದೀಕ್ಷೆಯಷ್ಟು ದೀರ್ಘವಾಗಿಯೂ ಆಡಂಬರವಾಗಿಯೂ ನಡೆಯದೆ ಸ್ಥೂಲವಾಗಿ ನಡೆಯುತ್ತದೆ ಎಂಬುದೇ ಆ ಕುಂಟು ಆಕ್ಷೇಪಣೆ. ಆದರೆ ಈ ಸ್ಥೂಲತೆಗೆ ಸಪ್ರಮಾಣವಾದ ಮತ್ತು ಸಶಾಸ್ತ್ರೀಯವಾದ ಕಾರಣವುಂಟು. ತಂದೆತಾಯಿಗಳು ಲಿಂಗಧಾರಿಗಳಾದುದರಿಂದ ಶಿಶುವಿನ ಬೆಳವಣಿಗೆಯು ಲಿಂಗಧಾರಿಯಾದ ತಾಯಿಯ ಗರ್ಭದಲ್ಲಿಯೂ ಜನನವಾದ ಮೇಲೆ ಲಿಂಗಧಾರಿಗಳಾದ ತಾಯಿತಂದೆಗಳ ಮತ್ತು ಬಂಧುಗಳ ಸಮೂಹದಲ್ಲಿ ನಡೆಯುತ್ತದೆ. ಲಿಂಗಧಾರಿಗಳ ಆಚರಣೆಯನ್ನು ಅದು ಸದಾ ನೋಡುತ್ತದೆ, ಕೇಳುತ್ತದೆ, ಮತ್ತು ಅನುಕರಣಮಾಡುತ್ತದೆ. ತಂದೆತಾಯಿಗಳು ಪ್ರತಿದಿನವೂ ಸ್ನಾನಶಿವಪೂಜೆಗಳನ್ನು ಮಾಡುವ ಕಾಲಕ್ಕೆ ಮಗುವಿಗೂ ಸ್ನಾನಮಾಡಿಸಿ ಹತ್ತಿರ ಕೂಡಿಸಿಕೊಂಡು ಅದಕ್ಕೂ ವಿಭೂತಿ ರುದ್ರಾಕ್ಷಿ ಧಾರಣಗಳನ್ನು ಮಾಡಿ ತಮ್ಮ ಲಿಂಗಪೂಜೆಯ ಜೊತೆಗೆ ಶಿಶುವಿನ ಲಿಂಗಕ್ಕೂ ಅಭಿಷೇಕ ಮಾಡಿ ಪೂಜೆಮಾಡುತ್ತಾರೆ. ಶಿಶುವು ಇದಲ್ಲವನ್ನೂ ನೋಡುತ್ತದೆ. ಸ್ವಲ್ಪ ಬೆಳವಣಿಗೆಯಾದ ಮೇಲೆ ಸ್ನಾನವಾದ ಕೂಡಲೆ ಅದು ಮೌನವಾಗಿಯೇ ಶಿವಪೂಜೆಯ ಮನೆಗೆ ಹೋಗಿ ತಂದೆತಾಯಿಗಳ ಪಕ್ಕದಲ್ಲಿ ಕುಳಿತು ಅವರನ್ನು ಅನುಕರಣಮಾಡುತ್ತ ವಿಭೂತಿ, ರುದ್ರಾಕ್ಷಿಗಳನ್ನು ತಾನೇ ಧಾರಣಮಾಡಿಕೊಳ್ಳುತ್ತದೆ. ವಯಸ್ಸು ಹೆಚ್ಚಿದಂತೆಲ್ಲ ತಂದೆತಾಯಿಗಳು ಹೇಳುವ ಶಿವ

ಪೂಜಾಮಂತ್ರ ಮಂಗಳಾರತಿ ಪದ ವಚನ ಶ್ರೀ ರುದ್ರ ನಮಕ ಚಮಕಾದಿಗಳನ್ನು ಹೃದ್ಗತಮಾಡಿಕೊಳ್ಳುತ್ತದೆ. ಸಂಪೂರ್ಣ ವಯಸ್ಸಿಗೆ ಬಂದ ಮೇಲೆ ತಂದ ತಾಯಿಗಳ ಸಹಾಯವಿಲ್ಲದೆ ಸ್ವತಂತ್ರವಾಗಿ ಶಿವಪೂಜೆ ಮುಂತಾದ ವೀರಶೈವ ಕ್ರಿಯೆಗಳನ್ನು ಆಚರಿಸಲು ಅದು ಸಮರ್ಥವಾಗುತ್ತದೆ. ಈ ರೀತಿಯಲ್ಲಿ ಶಿಶು ದೆಸೆಯಲ್ಲಿ ಗುರುವು ಕರುಣಿಸಿದ ದೀಕ್ಷೆಯ ಪ್ರಭಾವವು ಶಿಶುವು ಬೆಳಬೆಳದಂತೆಲ್ಲ ಹೆಚ್ಚುತ್ತ ಹೋಗಿ ಶಿಶುವು ಉತ್ತಮ ಲಿಂಗಾಂಗಿಯಾಗಿಯೂ ಷಟ್‌ಸ್ಥಲ ಸಂಪನ್ನನಾಗಿಯೂ ಪರಿಣಮಿಸುತ್ತದೆ. ಶಿಶುವಿನ ಶಿವದೀಕ್ಷೆಯು ಸ್ಥೂಲವಾಗಿ ನಡೆಯಿಸಲ್ಪಟ್ಟರೂ ಅದು ಇಷ್ಟೊಂದು ಫಲಕಾರಿಯಾಗಿ ಪರಿಣಮಿಸುವುದಕ್ಕೆ ಕಾರಣವೆಂದರೆ ದೀಕ್ಷೆಯನ್ನು ಶಿಶುದೆಸೆಯಲ್ಲಿ ಕೊಟ್ಟುದೇ. ಶಿಶುದೆಸೆಯಲ್ಲಿ ಯಾವುದು ಬಹು ಜಾಗ್ರತೆಯಾಗಿಯೂ ಪರಿಣಾಮಕಾರಿಯೂ ಹಿಡಿಯುತ್ತದೆ, ಇದನ್ನು ಮನಶ್ಶಾಸ್ತ್ರಜ್ಞರು ಒಪ್ಪಿಕೊಂಡಿರುತ್ತಾರೆ. "*Child is the father of the man*" ಎಂಬುದೇ ಅವರ ಸಿದ್ಧಾಂತ. ಇದರಿಂದಲೇ ಶಿಶು ಹುಟ್ಟಿದಾಗಲೇ ಏಕೆ ಶಿಶುವು ಗರ್ಭದಲ್ಲಿರುವಾಗಲೇ ಎಂಟನೆಯ ತಿಂಗಳಿನಲ್ಲಿ ಎಂದರೆ ಗರ್ಭದಲ್ಲಿ ಶಿಶುವಿಗೆ ಜ್ಞಾನೋದಯವಾದಾಗ್ಗೆ ಶಿವದೀಕ್ಷೆಯನ್ನು ಮಾಡುವುದು ಶ್ರೇಷ್ಠವಾದುದೆಂದು ಪ್ರಾಜ್ಞರ ಮತವಿದೆ. ಈ ವಿಚಾರಕ್ಕೆ ವೀರ ಅಭಿಮನ್ಯು, ಚಕ್ರವರ್ತಿ ನೇಪೋಲಿಯನ್, ಛತ್ರಪತಿ ಶಿವಾಜಿ, ಷಟ್‌ಸ್ಥಲಸ್ಥಾಪನಾಚಾರ್ಯ ಚನ್ನಬಸವೇಶ್ವರ ಇವರುಗಳೇ ಒಳ್ಳೆಯ ಉದಾಹರಣೆಗಳಾಗಿದ್ದಾರೆ. ಈ ಎಲ್ಲ ಕಾರಣಗಳಿಂದ ಶಿಶುದೆಸೆಯಲ್ಲಿ ಲಿಂಗಧಾರಣದ ಹೆಸರಿನಲ್ಲಿ ಮಾಡತಕ್ಕ ಶಿವದೀಕ್ಷೆಯು ವೀರಶೈವ ಧರ್ಮ ಸ್ವೀಕಾರದ ಕಾಲದಲ್ಲಿ ಶಿವದೀಕ್ಷೆಯ ಹೆಸರಿನಲ್ಲಿ ಮಾಡತಕ್ಕ ಶಿವದೀಕ್ಷೆಯಷ್ಟೇ ಪರಿಪೂರ್ಣವಾದುದೂ ಪರಿಣಾಮಕಾರಿಯಾದುದೂ ಆಗಿದೆ.

ಶಿವದೀಕ್ಷೆಗೆ ಸಂಬಂಧಪಟ್ಟ ಇನ್ನು ಒಂದೆರಡು ವಿಚಾರಗಳನ್ನು ಪ್ರತಿಪಾದಿಸಿ ಈ ಲೇಖನವನ್ನು ಮುಗಿಸುತ್ತೇನೆ. ಕೆಲವು ವೀರಶೈವರಲ್ಲಿ ಇತ್ತೀಚೆಗೆ ಒಂದು ಹೊಸಪದ್ಧತಿಯು ಪ್ರಾರಂಭವಾಗಿದೆ. ಲಿಂಗಧಾರಿಗಳ ಹೊಟ್ಟೆಯಲ್ಲಿ ಹುಟ್ಟಿ ಲಿಂಗಧಾರಣವನ್ನು ಪಡೆದವರಿಗೇ ಮತ್ತೊಮ್ಮೆ ಲಿಂಗಧಾರಣವನ್ನು ಮಾಡುವುದೇ ಆ ಪದ್ಧತಿ. ಹೀಗೆ ಎರಡನೆಯ ಸಲ ಮಾಡತಕ್ಕ ಲಿಂಗಧಾರಣೆಗೆ ಅವರು ಶಿವದೀಕ್ಷೆಯೆಂದು ಹೆಸರಿಟ್ಟಿದ್ದಾರೆ. ಮೊದಲನೆಯ ಸಲ ಮಾಡಿದ ಎಂದರೆ ಶಿಶು ದೆಸೆಯಲ್ಲಿ ಮಾಡಿದ ಲಿಂಗ

ಧಾರಣವು ಶಿವದೀಕ್ಷೆಯಲ್ಲವೆಂಬ ಭ್ರಾಂತಿಯೇ ಇದಕ್ಕೆ ಕಾರಣ. ಲಿಂಗ ಕಟ್ಟಿಕೊಂಡವರಿಗೇ ಮತ್ತೊಮ್ಮೆ ಲಿಂಗ ಕಟ್ಟಲಿಕ್ಕೆ ಹೋಗತಕ್ಕ ಈ ಕಾರ್ಯವು ಅರ್ಥವಿಲ್ಲದ ವ್ಯರ್ಥ ಕಾರ್ಯವಾಗಿದೆ. "ತಲೆಶಿರೋಭಾರ" ದಂತೆ ಭಾರವಾಗಿದೆ. ಹಾಡಿದ್ದೇ ಹಾಡುವ ದಾಸಣ್ಣನ ಕಥೆಯಾಗಿದೆ. ಭಕ್ತರನ್ನೇ ಮತ್ತೊಮ್ಮೆ ಭಕ್ತರನ್ನಾಗಿ ಮಾಡತಕ್ಕ ಈ ಪದ್ಧತಿಯು ಕೆಲ ವರಿಗೆ ಒಂದು ಪುಣ್ಯದ ಕೆಲಸವಾಗಿಯೇ ಪರಿಣಮಿಸಿದೆ. ಈ ಕಾರ್ಯ ವನ್ನು ಕೆಲವು ವೀರಶೈವರು ಸಾಮೂಹಿಕವಾಗಿಯೂ ಮತ್ತೆ ಕೆಲವರು ವೈಯ್ಯಕ್ತಿಕವಾಗಿಯೂ ನಡೆಯಿಸುತ್ತಿದ್ದಾರೆ. ಶಿವದೀಕ್ಷೆಯೆಂದರೇನು, ಶಿವದೀಕ್ಷೆಯನ್ನು ಯಾರಿಗೆ ಯಾವ ಸನ್ನಿವೇಶದಲ್ಲಿ ಯಾವ ರೀತಿಯಲ್ಲಿ ಅನುಗ್ರಹಿಸಬೇಕು, ಶಿವದೀಕ್ಷೆಯ ಮಹತ್ವವೇನು, ಅದರ ಗುರಿಯೇನು, ಫಲ ವೇನು, ಎಂಬಿವೇ ವಿಚಾರಗಳನ್ನು ನಾವೀಗ ಮರೆತು ಬಿಟ್ಟಿದ್ದೇವೆ. ಶಿವಶರ ಣರ ದೀಕ್ಷಾ ಪದ್ಧತಿಯನ್ನು ನಾವೀಗ ಬದಿಗೊತ್ತಿ ಬಿಟ್ಟಿದ್ದೇವೆ. ಶಿವಶರಣರು ದೀಕ್ಷೆಗೆ ಬಹಳವಾದ ವ್ಯಾಪ್ತಿಯನ್ನು ಕೊಟ್ಟಿದ್ದರು. ಅವರು ದೀಕ್ಷೆಯನ್ನು ಮತ ಪ್ರಚಾರಕ್ಕಾಗಿಯೇ ನಿರ್ಮಿಸಿದರು. ಭಾರತ ಭೂಮಿಯ ಪ್ರತಿ ಯೊಬ್ಬ ಭಾರತೀಯನನ್ನೂ ಪುನೀತನನ್ನಾಗಿ ಮಾಡಬೇಕೆಂಬುದೇ ಅವರ ಪವಿತ್ರ ಉದ್ದೇಶವಾಗಿತ್ತು. ಪತಿತರನ್ನು ಪಾವನರನ್ನಾಗಿಯೂ ಪಾಪಿಗ ಳನ್ನು ಪುಣ್ಯವಂತರನ್ನಾಗಿಯೂ ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿಯೂ ಮಾಡಿ ಲೋಕ ಸೇವೆ ಮಾಡಬೇಕೆಂಬುದೇ ಅವರ ಜೀವನದ ಉಸಿರಾಗಿ ದ್ದಿತು. ಇದಕ್ಕಾಗಿಯೇ ಅವರು ದೀಕ್ಷೆಯನ್ನು ಏರ್ಪಡಿಸಿದರು. ಶಿವ ಶರಣರ ಯಾವ ವಚನಗಳನ್ನು ನೋಡಿದರೂ ಅವುಗಳಲ್ಲಿ 'ಭವಿಗಳನ್ನು ಭಕ್ತನನ್ನಾಗಿ ಮಾಡುವುದು, ಅಲಿಂಗಿಗಳನ್ನು ಲಿಂಗಿಗಳನ್ನಾಗಿ ಮಾಡು ವುದು, ಮಾಂಸ ಶರೀರಗಳನ್ನು ಮಂತ್ರ ಶರೀರಗಳನ್ನಾಗಿ ಮಾಡುವುದು' ಈ ವಿಚಾರಗಳೇ ತುಂಬಿ ತುಳುಕುತ್ತವೆ. ಈ ಕಾರಣದಿಂದಲೇ ಶಿವ ಶರಣರು ಶಿವದೀಕ್ಷೆಯನ್ನು ಪುಣ್ಯದ ಕೆಲಸವೆಂದು ಭಾವಿಸಿ ಅದನ್ನು ಪ್ರತಿಯೊಬ್ಬ ವೀರಶೈವನೂ ತನ್ನ ಶಕ್ತಿಯಿದ್ದ ಮಟ್ಟಿಗೆ ಆಚರಣೆಗೆ ತಂದು ಲೋಕೋಪಕಾರ ಮಾಡಬೇಕೆಂದು ಕಟ್ಟು ಮಾಡಿದರು. ಅವರ ಕಾಲದಲ್ಲಿ ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯ ಮೂಲಕ ಲಕ್ಷೋಪ ಲಕ್ಷ ಜನರು ಲಿಂಗವಂತ ಧರ್ಮಕ್ಕೆ ಸೇರಿಕೊಂಡು ಪುನೀತರಾದರು. ಆದರೆ ಈ ಹೊತ್ತಿಗೆ ಆ ಶಿವಶರಣರ ಶಕ್ತಿ ಸಾಹಸಗಳೂ ಉತ್ಸಾಹ ಔದಾರ್ಯಗಳೂ ತ್ಯಾಗ ಬುದ್ಧಿ ವಿಶಾಲ ಭಾವನೆಗಳೂ ನಮ್ಮಲ್ಲಿಲ್ಲದೆ

ಹೋಗಿದೆ. ಶಿವಶರಣರು ಆಚರಿಸಿದ 'ಭವಿಗಳನ್ನು ಭಕ್ತರನ್ನಾಗಿ' ಮಾಡ ತಕ್ಕ ಕಾರ್ಯಕ್ರಮವನ್ನು ಆಚರಿಸಲು ನಮಗೆ ಔದಾರ್ಯವೂ ಶಕ್ತಿಯೂ ಸಾಲದೆ ಅಥವಾ ಇಲ್ಲಿಗೆ ಲಿಂಗ ಕಟ್ಟಿಕೊಂಡವರಿಗೆ ಮತ್ತೊಮ್ಮೆ ಲಿಂಗ ಕಟ್ಟುವ ಅಪಹಾಸ್ಯಕ್ಕೆ ಗುರಿಯಾಗಿದ್ದೇವೆ. ಹೊಟ್ಟೆ ತುಂಬಿದವರಿಗೆ ಅನ್ನವನ್ನು ಹಾಕುವ ಜಾಣತನಕ್ಕೆ ಪಕ್ಕಾಗಿದ್ದೇವೆ. ಈ ವಿಚಾರವನ್ನು ದೀರ್ಘವಾಗಿ ಪರ್ಯಾಲೋಚಿಸಿದಲ್ಲಿ ವೀರಶೈವರ ಶಕ್ತಿ ಎಷ್ಟರಮಟ್ಟಿಗೆ ಕಂದಿ ಕುಂದಿ ಕುಗ್ಗಿಹೋಗಿದೆಯೆಂಬುದು ವ್ಯಕ್ತವಾಗುತ್ತದೆ. ಲಿಂಗ ಕಟ್ಟಿಕೊಂಡವರಿಗೇ ಮತ್ತೊಮ್ಮೆ ಲಿಂಗ ಕಟ್ಟುವುದಕ್ಕೆ ಹೋಗತಕ್ಕ ಕಾರ್ಯಕ್ರಮವನ್ನು ಶಿವದೀಕ್ಷೆಯೆನ್ನುವದಕ್ಕಿಂತಲೂ "ವೀರಶೈವರ ಅಶಕ್ತಿ ಪ್ರದರ್ಶನ" ವೆಂದಾಗಲೀ ಅಥವಾ "ವೀರಶೈವ ಸಂಸ್ಕೃತಿಯು ಅವರೋಹಣ" ವೆಂದಾಗಲೀ ಅಥವಾ "ಶಿವದೀಕ್ಷೆ ಅಥವಾ ಲಿಂಗಧಾರಣೆಯ ಅಪಭ್ರಂಶ" ವೆಂದಾಗಲೀ ಕರೆದರೆ ಹೆಚ್ಚು ಒಪ್ಪುವುದಿಲ್ಲವೇ? ಕ್ಷಮಿಸಿ. ಈ ವಿಚಾರಗಳನ್ನು ನಾನು ಯಾರ ಮನಸ್ಸನ್ನೂ ನೋಯಿಸಬೇಕೆಂದು ಹೇಳುತ್ತಿಲ್ಲ. ವೀರಶೈವರ ಅಶಕ್ತಿಯನ್ನೂ ವೀರಶೈವ ಧರ್ಮದ ಕ್ಷೀಣತೆಯನ್ನೂ ನೋಡಿ ಕಣ್ಣೀರಿಡುತ್ತಾ ಈ ಮಾತುಗಳನ್ನು ಹೇಳುತ್ತಿದ್ದೇನೆ. ಈಗಲಾದರೂ ವೀರಶೈವರು ಜಾಗ್ರತರಾಗಿ ತಮ್ಮ ಕರ್ತವ್ಯವೇನೆಂಬುದನ್ನು ಅರಿಯಬೇಕು. ತಮ್ಮ ಕೈಲಾದಮಟ್ಟಿಗೆ ಲೋಕ ಸೇವೆಯನ್ನು ಮಾಡಲು ಮುಂದೆ ಬರಬೇಕು. ಶಿವಶರಣರನ್ನು ನೆನೆಸಿಕೊಂಡು ಧೈರ್ಯದಿಂದ ಮುಂದೆ ಅಡಿಯಿಡಬೇಕು.

ಇನ್ನು ಒಂದೇ ಒಂದು ವಿಚಾರ. ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ತಮ್ಮ ಲೇಖನದಲ್ಲಿ "ವೀರಶೈವರು ವೈದಿಕರ ಷೋಡಶ ಕರ್ಮಗಳಲ್ಲಿ ಶ್ರಾದ್ಧಾದಿ ಷಟ್ಕರ್ಮಗಳನ್ನು ಬಿಟ್ಟು, ನಾಮಕರಣ, ಲಿಂಗಧಾರಣ, ವಿವಾಹ, ಶಿವದೀಕ್ಷೆ (ಉಪನಯನ) ಮೊದಲಾದ ದಶಸಂಸ್ಕಾರಗಳನ್ನು ಅಂಗೀಕರಿಸಿದ್ದಾರೆ." ಎಂದು ಬರೆದು "ಶಿವದೀಕ್ಷೆ" ಎಂಬ ಪದದ ಪಕ್ಕದಲ್ಲಿ ಆವರಣ ಚಿಹ್ನೆಯೊಳಗೆ "ಉಪನಯನ" ಎಂಬ ಪದವನ್ನು ಕಾಣಿಸಿ ಶಿವದೀಕ್ಷೆಯು ಉಪನಯನವೇ ಆಗಿದೆ ಎಂಬ ಅಥವಾ ಉಪನಯನಕ್ಕೆ ಸಮವಾದುದಾಗಿದೆಯೆಂಬ ಅರ್ಥಬರುವಂತೆ ಮಾಡಿದ್ದಾರೆ. ವಿಚಾರಮಾಡಿ ನೋಡಿದರೆ ಶಿವದೀಕ್ಷೆಯು ಉಪನಯನವೂ ಆಗುವುದಿಲ್ಲ. ಉಪನಯನಕ್ಕೆ ಸಮಾನವೂ ಆಗುವುದಿಲ್ಲ. ಈ

ವಿಚಾರದಲ್ಲಿ ಪಂಡಿತ ಶ್ರೀ ವೈ. ನಾಗೇಶ ಶಾಸ್ತ್ರಿಗಳವರಿಂದ ಟೀಕಿಸಲ್ಪಟ್ಟು ಶಿವಾನುಭವ ಗ್ರಂಥಮಾಲೆಯಲ್ಲಿ ೧೮ನೆಯ ಗ್ರಂಥವಾಗಿ ಪ್ರಕಟಿಸಲ್ಪಟ್ಟ ಮೊಗ್ಗೆಯ ಮಾಯಿದೇವ ಕೃತ "ಶಿವಾನುಭವ ಸೂತ್ರ"ದ ಒಂದು ಭಾಗ ವನ್ನು ಇಲ್ಲಿ ಉದ್ಧರಿಸುತ್ತೇನೆ.—

ಗರ್ಭಾಷ್ಟಮೇಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಯನಂ" ॥ಮನುಸ್ಮೃತಿ॥ ಎಂದು ಅಷ್ಟಮ ವರ್ಷದಲ್ಲಿ ಉಪನಯನ ಸಂಸ್ಕಾ ರವು ಹೇಳಲ್ಪಡುವುದು. ಈ ಸಂಸ್ಕಾರದಿಂದ ಶರೀರವು ಕರ್ಮಾ ಧಿಕೃತವಾಗುವುದು. ಆದರೆ ಶರೀರದ ಜಡಭಾವವು ಹಿಂಗುವು ದಿಲ್ಲ. ಆದುದರಿಂದಲೇ ಬ್ರಹ್ಮೋಪನಿಷತ್ತಿನಲ್ಲಿ "ಕರ್ಮಣ್ಯಧಿಕೃ ತಾ ಯೇ ತು ವೈದಿಕೇ ಬ್ರಾಹ್ಮಣಾದಯಃ । ತೈಃ ಸಂಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ" ಉಪನಯನ ಸಂಸ್ಕಾರ ದಿಂದಾದ ಯಜ್ಞೋಪವೀತ ಧಾರಣವು ಯಾಗಾದಿ ವೈದಿಕ ಕರ್ಮಾ ಧಿಕಾರಪ್ರದವೆಂದು ಹೇಳಲ್ಪಟ್ಟಿದೆ. ಈ ಕರ್ಮಕಲಾಪಕ್ಕೆ ಸ್ವರ್ಗಾದಿ ಲೋಕಪ್ರಾಪ್ತಿರೂಪವಾದ ಫಲವಲ್ಲದೆ ಅನ್ಯವಿಲ್ಲವು. ಇದನ್ನು ತಿಳಿದ ಪ್ರಾಕೃತ ಬ್ರಾಹ್ಮಣನು ಪುಣ್ಯಕ್ಷಯಾನಂತರದಲ್ಲಿ ದುಃಖಪ್ರದವಾದ ಸ್ವರ್ಗಾದಿ ಲೋಕವನ್ನುಂಟು ಮಾಡುವ ಶಿಖಾಯಜ್ಞೋಪವೀತ ವನ್ನೂ ಯಜ್ಞಸಹಧರ್ಮಚಾರಿಣಿಯಾದ ಪತ್ನಿಯನ್ನೂ ತ್ಯಜಿಸಿ, ಜ್ಞಾನನಿಷ್ಠನಾಗಿ ಮುಕ್ತನಾಗಲು ಹವಣಿಸುವನು. ತತ್ತ್ವೈರೇಭಿರ್ನಿ ಬದ್ಧಾತ್ಮಾ ಸರ್ವಧರ್ಮೈಶ್ಚ ಸಂಯುತಃ। ನಾನ್ಯೇನ ಶಕ್ಯತೇ ಮೋಕ್ತುಂ ಮುಕ್ತ್ವಾ ದೀಕ್ಷಾಂ ಶಿವಾತ್ಮಿಕಾಂ ॥" ಸರ್ವಜ್ಞಾನೋ ತ್ತರ ಸೂತ್ರ॥ ಇತ್ಯಾದಿ ಪ್ರಮಾಣದಿಂದ ಶಿವನ ಶಕ್ತಿರೂಪವಾದ ಶಿವದೀಕ್ಷೆಯನ್ನು ಬಿಟ್ಟು ಆತ್ಮೈಕತ್ವ ಜ್ಞಾನಾದಿಯಾದ ಮತ್ತೊಂದು ಪಾಯದಿಂದ ಮಲಪಾಕಾದಿ ಸರ್ವಧರ್ಮಗಳಿಂದಲೂ ತತ್ತ್ವಗಳಿಂ ದಲೂ ಬಂಧಿಸಲ್ಪಟ್ಟ ಆತ್ಮನು ಬಂಧಮುಕ್ತತೆಗೋಸುಗ ಸಮರ್ಥ ನಾಗಿ ಮಾಡಲ್ಪಡಲಾರನು ಎಂಬುದಾಗಿ ತಿಳಿದುಬರುವುದು. ತತ್ತ್ವಮಸ್ಯಾದಿ ವಾಕ್ಯದಿಂದ ಪಡೆಯುವ ಜ್ಞಾನೋಪದೇಶವು ಈ ದೀಕ್ಷಾಂಗವಾಗಿರುವುದಲ್ಲದೆ ಬೇರಿಲ್ಲವೆಂಬುದು ಸೂತ್ರಪ್ರತಿಪಾದಿತ ವಿಷಯದಿಂದಲೇ ತಿಳಿದುಬರುವುದು. ದೀಕ್ಷಿತನೆಂದರೆ ಮುಕ್ತಾತ್ಮ ನೆಂಬುದೇ ವೀರಶೈವ ಸಂಪ್ರದಾಯವು. ದೀಕ್ಷಾನಂತರದಲ್ಲಿ ಆಚ

ರಿಸುವ ಜ್ಞಾನಕ್ರಿಯೆಗಳು ಲೋಕಹಿತಾರ್ಥವಾದವುಗಳೆಂದು ಹೇಳಲ್ಪಡುವವು. ಆದುದರಿಂದ ದೀಕ್ಷಾಸಂಸ್ಕಾರವು ಉಪನಯನ ಸಂಸ್ಕಾರಕ್ಕೆ ಸಮಾನವಾದುದಲ್ಲವು. ಪ್ರಾಕೃತನು ಉಪನಯನದಲ್ಲಿ ಹೊಂದಿದ ಶಿಖಾಯಜ್ಞೋಪವೀತವನ್ನು ಸನ್ಯಾಸ ಸ್ವೀಕಾರ ಕಾಲಕ್ಕೆ ತ್ಯಜಿಸುವಂತೆ ವೀರಶೈವನು ದೀಕ್ಷಿತನಾಗಿ ತ್ಯಜಿಸಿತಕ್ಕುದಾವುದಿಲ್ಲವು. ಆತನು ತ್ಯಜಿಸತಕ್ಕ ಪ್ರಾಕೃತಾಚಾರಗಳನ್ನು ದೀಕ್ಷಾ ಪೂರ್ವದಲ್ಲಿಯೇ ತ್ಯಜಿಸಿರುವನು. ಈ ಕಾರಣದಿಂದಲೇ ಯಥಾ ಮತೇಷು ತುರೀಯತ್ವೇನ ಶಸ್ಯತೇ॥ ಸನ್ಯಾಸ ಇತ್ಯಯಂ ದೇವಿ ವೀರಶೈವಸ್ತಥಾಶ್ರಮಃ॥" ಅಂದರೆ ಪ್ರಾಕೃತಮತಗಳಲ್ಲಿ ಚತುರ್ಥಾಶ್ರಮವೆಂದು ಪ್ರಶಸ್ತಿಯನ್ನು ಪಡೆದ (ಮುಕ್ತಿ ಹೇತುವಾದ ಜ್ಞಾನದ ಆರ್ಜನೆಗೆ ಮುಖ್ಯವಾದುದೆಂದು ನೆಗಳ್ತೆವಡೆದ) ಯಾವ ಸನ್ಯಾಸವಿದೆಯೋ ಅದರಂತೆಯೇ ಈ ವೀರಶೈವಾಶ್ರಮವಿರುವುದು. ಅಂದರೆ ಸನ್ಯಾಸವನ್ನು ಗ್ರಹಿಸಿದ ಪ್ರಾಕೃತನಿಗೂ ದೀಕ್ಷಿತನಾದ ವೀರಶೈವನಿಗೂ ಸಾಮ್ಯವಿರುವುದೆಂದು ಪಾರಮೇಶ್ವರಾಗಮವು ಹೇಳುತ್ತಿರುವುದು. ಇದರಿಂದ ದೀಕ್ಷೆಯು ಉಪನಯನಕ್ಕೆ ಸಮಾನವು ಅಥವಾ ದೀಕ್ಷೆಯೇ ಉಪನಯನವು ಎಂದು ಹೇಳುವುದು ಅವಿಚಾರ ರಮಣೀಯವಾಗಿರುವುದು." (ಶಿವಾನುಭವ ಸೂತ್ರ ೫೩ ಮತ್ತು ೫೪ ನೆಯ ಪುಟಗಳು.)

ಈ ಕಾರಣದಿಂದ ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯು ಉಪನಯನವೂ ಅಲ್ಲ, ಉಪನಯನಕ್ಕೆ ಸಮಾನವೂ ಅಲ್ಲ.

## ಉಪಸಂಹಾರ.

ಈ ರೀತಿಯಲ್ಲಿ ವಿವೇಚಿಸಲಾದ ಸಪ್ರಮಾಣವಾದ ಮತ್ತು ಸಶಾಸ್ತ್ರೀಯವಾದ ಮೇಲೆ ಕಂಡ ಎಲ್ಲ ಕಾರಣಗಳಿಂದ ಶಿವದೀಕ್ಷೆ ಲಿಂಗಧಾರಣೆಗಳು ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಹೇಳುವಂತೆ ಭಿನ್ನವಾದವುಗಳಲ್ಲ. ಅವೆರಡೂ ಒಂದೇ ಕಾರ್ಯಕ್ರಮವಾಗಿವೆ. ಶಿವದೀಕ್ಷೆಯಲ್ಲಿ ಲಿಂಗಧಾರಣವಿದೆ. ಲಿಂಗಧಾರಣೆಯಲ್ಲಿ ಶಿವದೀಕ್ಷೆಯಿದೆ. ಶಿವದೀಕ್ಷೆಯು ಲಿಂಗಧಾರಣೆಯಲ್ಲಿ ಮುಕ್ತಾಯಗೊಳ್ಳಬೇಕು. ಲಿಂಗಧಾರಣವು ಶಿವದೀಕ್ಷೆಯಲ್ಲಿ ಆಚರಿಸಲ್ಪಡಬೇಕು. ಒಂದನ್ನು ಬಿಟ್ಟು ಮತ್ತೊಂದಿಲ್ಲ. ಅವು

ಹಾಸುಹೊಕ್ಕುಗಳಂತೆ ಒಂದಕ್ಕೊಂದು ಹೆಣೆದುಕೊಂಡಿವೆ. ಎಂದಮೇಲೆ "ಇಂದು ವೀರಶೈವ ಸಮಾಜದಲ್ಲಿ ಹಲವರು ದೀಕ್ಷಾಹೀನರಾಗಿರುವುದನ್ನು ನಾವು ನೋಡುತ್ತಿದ್ದೇವೆ" ಎಂಬ ಶ್ರೀ ಶಿವಮೂರ್ತಿ ಶಾಸ್ತ್ರಿಗಳವರ ಮಾತು ನ್ಯಾಯುವಾದುದಲ್ಲ.

---

# ಕನ್ನಡ ಸಂಸ್ಕೃತಿಯು ಮುಖ್ಯಾಂಗಗಳಾವುವು ?

ಲೇಖಕಃ— ಪುರಾಣಿಕ ಬುದ್ಧಯ್ಯಾ ಸ್ವಾಮಿಗಳು ಧಾರವಾಡ.

---

ಕರ್ನಾಟಕ ದೇಶದ ಸಂಸ್ಕೃತಿಯು ಮುಖ್ಯಾಂಗಗಳೇ ಕನ್ನಡ ಸಂಸ್ಕೃತಿಯು ಮುಖ್ಯಾಂಗಗಳಾಗಿರುವವು. ಅವುಗಳಲ್ಲಿ ಧರ್ಮ, ವಾಙ್ಮಯ, ತತ್ವಜ್ಞಾನ, ಶಿಲ್ಪಕಲೆ, ರಸಾಯುನ ಶಾಸ್ತ್ರ, ಅರಸು ಮನೆತನಗಳು, ರಾಜ್ಯಾಡಳತೆ. ರಾಜಕಾರಣ ಹಾಗೂ ಗಾಯನ ಕಲೆ, ಮೊದಲಾದವುಗಳೇ ಬಹಳೇ ಪ್ರಾಮುಖ್ಯವಾಗಿರುವವು. ಇದರ ಸತ್ಯತೆಯುನ್ನು ಓದುಗರು ಕೆಳಗೆ ಕಾಣಿಸಿದ ಅರಸುಮನೆತನಗಳ ಪ್ರಾಚೀನ ಇತಿಹಾಸದಿಂದ ಮನಗಾಣಬಹುದು.

ಕ್ರಿ. ಶ. ೨೦೫ ವರ್ಷಗಳ ಪೂರ್ವದಲ್ಲಿ ಎಲೆಲಾ ಎಂಬುವ ಚೋಳದೇಶದ ಅರಸನು ಮೈಸೂರ ದಂಡಿನ ಸಹಾಯುದಿಂದ ಸಿಲೋನವನ್ನು ಗೆದ್ದನು. ೫ನೆಯು, ೬ನೆಯು, ೭ನೆಯು ಶತಮಾನಗಳಲ್ಲಿ ಆಳುತ್ತಿದ್ದ ಕೊಂಕಣದ ಮಯೂರರರಸರು ಪಾಂಡ್ಯರ ಸೇನಾನಾಯುಕನಾದ ಮೊಹರನಮೇಲೆ ಸಾಗಿ ಹೋಗುವ ಕೋಸರರಿಗೆ ಸಹಾಯು ಮಾಡಿದವರು ಕರ್ನಾಟಕಸ್ಥರೇ. ೭ನೆಯು ಶತಮಾನದಲ್ಲಿ ಪಾಂಡ್ಯದೇಶವನ್ನು ಕೈವಶ ಮಾಡಿಕೊಂಡ ಕಲಭ್ರ ಅರಸರು ಕರ್ನಾಟಕದವರೇ. ೮ನೆಯು ಶತಮಾನದ ಮಧ್ಯದಲ್ಲಿ ಕಂಚಿಯು ಪಲ್ಲವ, ಕೇರಳ, ಪಾಂಡ್ಯ, ಚೋಳ ಅರಸರನ್ನು ಸೋಲಿಸಲು ಸಹಾಯು ಮಾಡಿದವರು ಕರ್ನಾಟಕದ ದಂಡಾಳುಗಳೆಂದು ಪ್ರತೀತಿಯಿದೆ.

ಮೊದಲಿನ ಕಾಲದ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯಸಳ, ಸೇವುಣ, ಕಲಭೂರ್ಯ, ಕಲಚೂರ್ಯ, ರಟ್ಟ, ಶಿಲಾಹಾರ, ಕೊಂಗಾಳ್ವ, ಚೆಂಗಾಳ್ವ, ಸೈಂದ, ಬಾಣ, ನೋಣಂಬ, ವೈದುಂಬ, ಸಾಂತರ, ಸೇನಾವರೆ, ಪುನ್ನಾಡ, ವಿಜಯನಗರ, ಮೈಸೂರ, ಕುರ್ಗ, ಕೆಳದಿ, ಬೀಳಗಿ, ಹಾಗಲವಾಡಿ, ಉಮ್ಮತ್ತೂರು, ನುಗ್ಗೇಹಳ್ಳಿ, ಬೇಲೂರ, ಸುಗಟೂರ, ಹದಿನಾಡು, ಮುಡಿಗೇರೆ, ಚಿತ್ರಕಲ್ಲದುರ್ಗ, ನಿಡುಗಲ್ಲು, ಚನ್ನಪಟ್ಟಣ, ಮಾಗಡಿ, ಎಲಹಂಕ, ಸಂತೆಬೆನ್ನೂರ, ಪಿರಿಯಪಟ್ಟಣ, ಸ್ವಾದಿ, ಚಿಕ್ಕನಾಯಕನಹಳ್ಳಿ, ಮದ್ಗಿರಿ, ಬಿಜ್ಜಾವರ ಮೊದಲಾದ ಅರಸರು ಹಾಗೂ ಪಾಳೆಯಗಾರರು ಕರ್ನಾಟಕದವರೇ. ಸದ್ಯದಲ್ಲಿ ಕರ್ನಾಟಕದೊಳಗೆ ಜೀವಿಸಿರುವ ದೇಸಾಯರಾದರೂ ಹಿಂದಿನ ಕಾಲದ ಕರ್ನಾಟಕದ ಸಣ್ಣದೊಡ್ಡ ಅರಸರ ವಂಶಜರೇ.

ನೇಪಾಳ ಹಾಗು ಗುಜರಾತದ ಅರಸುಮನೆತನಗಳು ಕರ್ನಾಟಕ ದೇಶದವು. ಬಂಗಾಲದ ಸೇನರು ತಾವು ಕರ್ನಾಟಕದ ಅರಸು ಮನೆತನದವರ ವಂಶಿಕರೆಂದು ಹೇಳಿಕೊಳ್ಳುವರು. ಕನೋಜ ಅರಸರು ಕರ್ನಾಟಕದ ನಂದಪಾಲ ಅರಸರ ವಂಶಿಕರೆಂದು ಹೇಳುವರು. ಜೋಧಪುರ ಹಾಗೂ ಬಿಕಾನೇರದ ರಾಠೋಡರಸರು ಕರ್ನಾಟಕದ ಅರಸು ಮನೆತನದವರೆಂದು ಹೇಳುವರು. ಕಳಿಂಗ ದೇಶದ ಗಂಗರು ಹಾಗೂ ಕದಂಬರು ಕರ್ನಾಟಕ ದೇಶದ ಗಂಗ ಹಾಗೂ ಕದಂಬ ಅರಸರ ವಂಶಿಕರೆಂದು ಹೇಳಿಕೊಳ್ಳುವರು. ಪೂರ್ವ ಬಂಗಾಲದ ಅರಸರಾದರೂ ಕರ್ನಾಟಕದವರೇ. ಇದರಂತೆ ಅನೇಕ ಧರ್ಮ ಸಂಸ್ಥಾಪಕರೂ ಭಾಷ್ಯಕಾರರೂ ಕರ್ನಾಟಕದವರೇ ಆಗಿರುವರು. ಇದನ್ನೆಲ್ಲ ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿದರೆ ಕನ್ನಡ ಸಂಸ್ಕೃತಿಯು ಕರ್ನಾಟಕ ದೇಶದ ಸಂಸ್ಕೃತಿಯು ಹೊರ್ತು ಬೇರಿಲ್ಲೆಂಬುವದು ಗೊತ್ತಾಗುವದು.

ಇನ್ನು ಕನ್ನಡ ಸಾಹಿತ್ಯ ಪ್ರೇಮಿಗಳು ಸದ್ಯಕ್ಕೆ ಕನ್ನಡ ಸಂಸ್ಕೃತಿಯ ಬಗ್ಗೆ ಮಾಡತಕ್ಕ ಮುಖ್ಯ ಕಾರ್ಯಗಳು ಯಾವವು ಎಂಬುದನ್ನೇ ವಿಚಾರಿಸುವದು ಈ ಲೇಖನದ ಮುಖ್ಯೋದ್ದೇಶವಾಗಿರುವದು. (೧) ಕನ್ನಡ ಸಂಸ್ಕೃತಿಯ ಮುಖ್ಯಾಂಗಗಳಲ್ಲಿ, ಹಳೇ ಗದ್ಯ ಪದ್ಯಾತ್ಮಕ ಗ್ರಂಥಗಳ, ಶಿಲಾಶಾಸನಗಳ ಹಾಗೂ ಲಾವಣಿ (ಜನಪದ ಸಾಹಿತ್ಯ) ಮೊದಲಾದ ಪದಗಳ ಸೂಚೀಪತ್ರವನ್ನು ತಯಾರಿಸುವದು. (೨) ಆದಕ್ಕನು

ಸರಿಸಿ ಒಂದು ಮಧ್ಯವರ್ತಿ ಪುಸ್ತಕಾಲಯವನ್ನು ಏರ್ಪಡಿಸಿ ಅದರಲ್ಲಿ ಮೇಲಿನ ಎಲ್ಲ ಪುಸ್ತಕಗಳನ್ನು ಸಂಗ್ರಹಿಸುವದು. ಇವುಗಳನ್ನು ಪುಕ್ಕಟೆಯಾಗಿ ಇಲ್ಲವೆ ಮಾರತೆಗೆದುಕೊಂಡು ಇಲ್ಲವೆ ಪ್ರತಿ ಮಾಡಿಸಿ ದೊರಕಿಸಿ ಇಡುವದು. (೩) ಆಮೇಲೆ ಪಂಡಿತರಿಂದ ಅವುಗಳ ವಿಷಯಾನುಸಾರವಾಗಿ ವರ್ಗೀಕರಿಸುವದು. ಈ ರೀತಿ ಹಿಂದಕ್ಕೆ ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯವರು ಒಬ್ಬ ಪ್ರಚಾರಕನನ್ನು ನೇಮಿಸಿ ಸ್ವಲ್ಪ ದಿನಗಳಲ್ಲಿ ಸುಮಾರು ೨೦೦೦ ಹಳೆಯ ಗ್ರಂಥಗಳ ಸೂಚೀಪತ್ರವನ್ನು ತಯಾರಿಸಿರುವರು. ಮತ್ತು ಅವುಗಳಲ್ಲಿಯ ವಿಷಯುಗಳ ವರ್ಗೀಕರಣವನ್ನು ಮಾಡಿ ಒಂದು ಲೇಖವನ್ನು ಡಾ॥ ಎಸ್. ಸಿ. ನಂದೀಮಠರವರು ಪ್ರಸಿದ್ಧಿಸಿರುವರು. (೪) ತದನಂತರ ಒಂದೊಂದು ವಿಷಯುದಲ್ಲಿ ಪ್ರಾವೀಣ್ಯವನ್ನು ದೊರಕಿಸುವ ಸಲುವಾಗಿ ವಿಶ್ವವಿದ್ಯಾಲಯುದವರ ಕಡೆಯಿಂದ ತಕ್ಕ ವಿದ್ಯಾರ್ಥಿಗಳಿಗೆ ಅನುಕೂಲತೆಗಳನ್ನು ಒದಗಿಸಿ ಕೊಡುವದು.

ಈ ಮೇಲಿನ ಎಲ್ಲ ಕೆಲಸಗಳನ್ನು ಸಂಘ ಶಕ್ತಿಯಿಂದ ಮಾಡಿದರೆ ಹಾ ಹಾ ಎನ್ನುವಷ್ಟರಲ್ಲಿ ಕನ್ನಡದ ಏಳಿಗೆಯಾಗಬಹುದು. ಈ ದಾರಿಯನ್ನು ಮೊದಲು ನಮಗೆ ತೋರಿಸಿ ಕೊಟ್ಟವರು ದಿವಂಗತರಾದ ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವಬಹಾದ್ದೂರ ಆರ್. ನರಸಿಂಹಾಚಾರ್ಯರವರು. ಇದರಲ್ಲಿ ಇವರೇ ಕನ್ನಡಿಗರಿಗೆ ಆದ್ಯ ಮಾರ್ಗದರ್ಶಕರು. ಇವರು ಕನ್ನಡ ಕವಿಗಳ ಚರಿತ್ರೆಗಳನ್ನು ಮೂರು ಭಾಗವಾಗಿ ಪ್ರಕಟಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿರುವರು. ಅವುಗಳಲ್ಲಿ ೧೪೪ ಕವಿಗಳ ನಾಮನಿರ್ದೇಶವು ಮಾಡಲ್ಪಟ್ಟಿದೆ. ಅದರಲ್ಲಿ ೯೩೩ ಕವಿಗಳು ಪುರಾತನರಿರುವರು. ಅವರ ವಿವರವು—

| ಕ. ಭಾಗ | ಜೈನರು | ವೀರಶೈವರು | ಬ್ರಾಹ್ಮಣರು | ಇತರರು | ಅಂತೂ |
|---|---|---|---|---|---|
| ೧ | ೯೫ | ೯೦ | ೪೫ | ೫೦ | ೨೮೦ |
| ೨ | ೫೬ | ೧೪೫ | ೭೬ | ೨೪ | ೩೦೧ |
| ೩ | ೨೩ | ೧೯೧ | ೧೦೮ | ೩೦ | ೩೫೨ |
| | ೧೭೪ | ೪೨೬ | ೨೨೯ | ೧೦೪ | ೯೩೩ |
| ಹೊಸಬರು | ೧ | ೨೭ | ೧೫೯ | ೨೮ | ೨೧೫ |
| | ೧೭೫ | ೪೫೩ | ೩೮೮ | ೧೩೨ | ೧೧೪೮ |

ಈ ಮಹಾ ವ್ಯಕ್ತಿಯು ಪ್ರಯತ್ನವನ್ನು ನೋಡಿದರೆ ನಮಗೆ ದಂಗು ಬಡಿಯುವಂತಿದೆ. ಇವರಂತೆ ವಿಜಾಪುರದ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರು ಶಿವಶರಣರ ವಚನಗಳನ್ನು ಹೊರಗೆಡವಿ ತಮ್ಮ ಜನ್ಮವನ್ನು ಸ್ವಾರ್ಥಕಗೊಳಿಸಿಕೊಂಡರಲ್ಲದೆ ಉಳಿದವರಿಗೆ ದೊಡ್ಡ ಉಪಕಾರ ಮಾಡಿದರು. ಶಿವಾನುಭವ ಮಾಸಪತ್ರಿಕೆಯ ದ್ವಾರದಿಂದ ಈ ವರೆಗೆ ಸುಮಾರು ಒಂದು ೧೦೦ ಗ್ರಂಥಗಳನ್ನು ಇವರು ಅಚ್ಚು ಮಾಡಿಸಿ ಹೊರಗೆಡವಿರುವರು. (*Charity begins at home*) ಎಂಬ ನಾಣ್ಣುಡಿಯಂತೆ ಅದು ಕೇವಲ ವೀರಶೈವರ ವಿಷಯುಕವಾಗಿದ್ದರೂ ಇವರ ಕೆಲಸದಿಂದ ಕರ್ನಾಟಕ್ಕದ ಮೇಲೆ ದೊಡ್ಡ ಉಪಕಾರವಾಗಿರುವದು. ಇತ್ತೀಚೆಗೆ ವಿ॥ ಎಸ್. ಶ್ರೀಕಂಠ ಶಾಸ್ತ್ರಿ ಎಮ್. ಎ. ರವರು ಮೈಸೂರು ವಿಶ್ವ ವಿದ್ಯಾಲಯದ ಸಹಾಯದಿಂದ (*Sources of Karanataka History Volume I*) ಎಂಬುದೊಂದು ಗ್ರಂಥವನ್ನು ಅಚ್ಚು ಮಾಡಿಸಿ ಕರ್ನಾಟಕಸ್ಥರಿಗೆ ಮಹದುಪಕಾರ ಮಾಡುತ್ತಿರುವರು. ಇದಕ್ಕೂ ಹೆಚ್ಚಿನ ಗ್ರಂಥಗಳನ್ನು ಅಚ್ಚು ಮಾಡಿಸುವ ಸಾಮರ್ಥ್ಯವು ಅವರಿಗೆ ದೇವರು ದಯಪಾಲಿಸಲೆಂದು ಆ ದಯಾಘನನಾದ ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸುವೆವು.

ಇಂಥ ಅಮೌಲ್ಯವಾದ ಪೂರ್ವಿಕರ ಸಂಸ್ಕೃತಿಯು ಇಡಿಗಂಟು ಕರ್ನಾಟಕದವರಿಗೆ ಇದ್ದಂತೆ ಭಾರತದೊಳಗಣ ಇನ್ನುಳಿದ ಯಾವ ಪ್ರಾಂತದವರಿಗೂ ಇರಲಿಕ್ಕಿಲ್ಲವೆಂದು ತರ್ಕಿಸಿದರೆ ಅಷ್ಟೇನು ದೊಡ್ಡ ತಪ್ಪಾಗಲಿಕ್ಕಿಲ್ಲ. ಇಂಥ ಪ್ರಾಚೀನ ಸಂಸ್ಕೃತಿಯನ್ನು ಉಪೇಕ್ಷಿಸಿ ಉಳಿದವರಂತೆ ನಡೆಯುವದೆಂದರೆ ಮಳೆ ನೀರು ಬಿಟ್ಟು ಮಂಜಿನ ನೀರಿಗೆ ಕೈವೊಡ್ಡಿದಂತೆ ಹಾಸ್ಯಾಸ್ಪದ ಹಾಗುವದಲ್ಲದೆ ಪಿತೃದ್ರೋಹದ ಪಾಪವು ಸಂಭವಿಸುವದು. "ಮನೆ ಗೆದ್ದು ಮಾರು ಗೆದೆ" ಎಂಬ ನಾಣ್ಣುಡಿಯಂತೆ ಮೊದಲು ನಮ್ಮ ಪೂರ್ವ ಸಂಸ್ಕೃತಿಯನ್ನು ಬೆಳಕಿಗೆ ತರಬೇಕು. ಆಮೇಲೆ ಅವಶ್ಯ ಬಿದ್ದಂತೆ ಅನ್ಯರ ಸಂಸ್ಕೃತಿಯನ್ನು ಅಪೇಕ್ಷಿಸಬೇಕು. ಮೊದಲಿನ ಕೆಲಸ ಮಾಡದೆ ಮತ್ತು ಕರ್ನಾಟಕ ಮಾತೆಯ ಋಣವನ್ನು ತೀರಿಸಬೇಕೆಂಬ ಹೊಣೆಗಾರಿಕೆಯನ್ನು ಅರಿಯದೆ ಕನ್ನಡ ಸಾಹಿತಿಗಳು ಮನಬಲ್ಲಂತೆ ಕುಣಿದಾಡಿದರೆ ಇತ್ತೀಚೆಗೆ ಸಂಗೀತ ನಾಟಕ ಸಿನೇಮಾಗಳು ಬಂದು ದಕ್ಷಿಣದ ಪ್ರಾಚೀನ ಗಾಯನ ಕಲೆಯನ್ನು ಹದಗೆಡಿಸುವ ಹಾಗೆ

ಆಗುವದು. ಇದಲ್ಲದೆ "ಇದ್ದ ಕೂಸೂ ಎಣ್ಣೆ ಕಾಣದು, ಇನ್ನೊಂದು ಕೊಡು ಮಹಾರಾಯಾ" ಎಂಬಂತೆ ಅತಿ ಪ್ರಸಂಗ ದೋಷವೂ ಬರುವದು.

ಕವಿಚರಿತೆಯ ೩ನೆಯ ಭಾಗದ ಮೇಲಿಂದ ನೋಡಲು ೨೦ನೆಯ ಶತಮಾನದಲ್ಲಿ ಮೇಲೆ ತೋರಿಸಿದಂತೆ ಒಟ್ಟು ೨೧೫ ಗ್ರಂಥಕರ್ತರು ಆಗಿರುವರು. ಅಂದ ಮೇಲೆ ಬರಹಗಾರರಿಗೇನೂ ಕೊರತೆ ಇಲ್ಲ. ಆದರೆ ಇಂಗ್ಲಿಷ ಸರಕಾರದವರ ಆಳಿಕೆಯು ಪ್ರಾರಂಭವಾದಂದಿನಿಂದ ಈ ವರೆಗೂ ಮೊದಲು ಸುಶಿಕ್ಷಿತರಾದವರಲ್ಲಿ ಪರಧರ್ಮ ಸಹಿಷ್ಣುತೆ ಇಲ್ಲದಿರುವದರಿಂದ ಹಿಂದಿನ ಕನ್ನಡ ಸಂಸ್ಕೃತಿಯು ಬೆಳಕಿಗೆ ಬರಲೊಲ್ಲದು. ಇದಕ್ಕೆ ಉದಾಹರಣೆ ಎಂದರೆ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರು ಹರಿಹರನ ರಗಳೆಗಳನ್ನು ಅಚ್ಚು ಹಾಕಲುದ್ಯುಕ್ತರಾಗಿ ಈ ಮೊದಲು ಎಷ್ಟೋ ಹೊರಗೆಡವಿರುವರು. ಈ ರಗಳೆಗಳ ಭಾಷೆಯ ವಿಷಯವಾಗಿ ಹೆಚ್ಚಿಗೆ ಹೇಳಬೇಕಾಗಿಲ್ಲ. ದಿವಂಗತರಾದ ಪ್ರೋಫೆಸರ್ ಟಿ. ಎಸ್. ವೆಂಕಣ್ಣಯ್ಯನವರು ಹೇಳಿದ್ದೇ ಸಾಕು. ಅಂದಮೇಲೆ ನಿಜವಾದ ಭಾಷಾಪ್ರೇಮಿಗಳು ಈ ಕವಿಯನ್ನು ಇಷ್ಟರಲ್ಲಿ ತಮ್ಮ ತಲೆಯ ಮೇಲೆ ಹೊತ್ತುಕೊಂಡು ಕುಣಿದಾಡಬೇಕಾಗಿತ್ತು. ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಶೇಕ್ಸಪಿಯರನ ನಾಟಕಗಳ ಮುದ್ರಣವು ಹೊರಟಂತೆ ಈ ರಗಳೆಯ ಮುದ್ರಣವಾದರೂ ಹೊರಡಬೇಕಾಗಿತ್ತು. ಹಾಗಿಲ್ಲದದರಿಂದ ಇಲ್ಲಿಯವರೆಗೆ ಹರಿಹರನ ವಿಷಯವಾಗಿ ಇಷ್ಟು ಉಪೇಕ್ಷೆಯು ತೋರಬೇಕಾದರೆ ಈ ಕವಿಯು ಭಾರತದಲ್ಲಿ ಹುಟ್ಟದೆ ಬೇರೆ ದೇಶದಲ್ಲಿ ಹುಟ್ಟಿದ್ದರೆ ಇಲ್ಲವೆ ಲಿಂಗಾಯತೇತರನಾಗಿದ್ದರೆ ಒಳಿತಾಗುತ್ತಿತ್ತೆಂದೆನ್ನಬೇಕಾಗುತ್ತದೆ. ಆದರೂ ಇತ್ತೀಚೆಗೆ ಸಾಹಿತ್ಯ ವಿಷಯದಲ್ಲಿ ಜಾತ್ಯಾಭಿಮಾನವು ಕಡಿಮೆಯಾಗುತ್ತಿರುವದರಿಂದ ಇಂಥ ಉಪೇಕ್ಷೆಯು ಬಹಳ ದಿವಸ ಉಳಿಯಲಾರದು.

ಕವಿಚರಿತೆಕಾರರಂತೆ ಕನ್ನಡ ಭಾಷಾಸೇವೆ ಮಾಡಿ ಸುಶಿಕ್ಷಿತರಾದವರು ಇಂಥ ಅಭಿಮಾನವನ್ನು ಹಿಡಿಯದೆ ಯಶಃಕಾಯರಾಗಿ ಉಳಿಯುವಂತೆ ಮಾಡಬೇಕು. ಕರ್ನಾಟಕಸ್ಥರಲ್ಲಿ ಹುರುಪು ಕಡಿಮೆ ಇಲ್ಲ. ಹಣದ ಕೊರತೆಯಿಲ್ಲ. ಕೆಲಕೆಲವು ಪ್ರಸಂಗಗಳಲ್ಲಿ ಹಣದ ಅಪವ್ಯಯವಾಗುವದನ್ನು ನಿಲ್ಲಿಸಿ ಅದರ ಸದ್ವಿನಿಯೋಗವನ್ನು ಮಾಡಿದರೆ ಸಾಕು. ಕನ್ನಡ ಭಾಷೆಯ ಸೇವೆಯಂತೆ ಸಂಸ್ಕೃತ ಭಾಷೆಯ

ಸೇವೆಯನ್ನಾದರೂ ಮಾಡಬೇಕು. ಏಕೆಂದರೆ ಕರ್ನಾಟಕದಲ್ಲಿ ಅನೇಕ ಸಂಸ್ಕೃತ ಗ್ರಂಥಕರ್ತರು ಆಗಿ ಹೋಗಿರುವರು. ಆ ಗ್ರಂಥಗಳ ಸಂಖ್ಯೆಯಾದರೂ ಕರ್ನಾಟಕದಲ್ಲಿ ಕನ್ನಡಕ್ಕಿಂತಲೂ ಕಡಿಮೆ ಇಲ್ಲ. ಹಿಂದಕ್ಕೆ ಸೊಲ್ಲಾಪುರದ ಲಿಂಗೈಕ್ಯರಾದ ರಾವಬಹಾದ್ದೂರ ಶ್ರೀಮಂತ ಮಲ್ಲಪ್ಪಾ ಬಸಪ್ಪಾ (ಅಪ್ಪಾಸಾಹೇಬ) ವಾರದರವರು ಸುಮಾರು ಒಂದು ಲಕ್ಷ ರೂಪಾಯಿ ವೆಚ್ಚಮಾಡಿ ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ಸುಮಾರು ಒಂದು ನೂರು ಸಂಸ್ಕೃತ ಗ್ರಂಥಗಳನ್ನು ಅಚ್ಚುಮಾಡಿಸಿರುವರು. ಇದರಂತೆ ಅನ್ಯ ಮತೀಯರು ಈ ಗ್ರಂಥಗಳನ್ನು ಬೆಳಕಿಗೆ ತರಬೇಕು.

(ಧಾರವಾಡ ೨೫ನೆಯ ಸಾಹಿತ್ಯ ಸಮ್ಮೇಲನದ
ತ್ರೈಸಾಹಿತ್ಯಗೋಷ್ಠಿಗೆ ಕಳಿಸಿದ ಲೇಖನ)

---

## ನೀ ಕೆಚ್ಚಿನಿಂ ದೂರ ತಳ್ಳುವರನೆಲ್ಲ !

ನಾ ಹೆಚ್ಚು ನೀ ಕಡಿಮೆ ಎಂಬವರನೆಲ್ಲ
ನೀ ಕೆಚ್ಚಿನಿಂ ದೂರ ತಳ್ಳುವರನೆಲ್ಲ ॥ ಪಲ್ಲ ॥

ನಾವು ಪಲ್ಲಕ್ಕಿಯೊಳು ಕುಳ್ಳಿರಲು ಪುಟ್ಟಿಹೆವು
ನೀವು ಪಲ್ಲಕ್ಕಿಯನು ಹೊರಲು ಪುಟ್ಟಿಹಿರೆಂಬ
ತೀವಿದ ಅಹಂಕಾರ ಭಾವದಿಂ ಮೆರೆವವರ
ನಾವಾಗಲೂ ದೂರ ತಳ್ಳುವುದು ಧೀರ! ॥ ೧ ॥

ನಾ ಹೆಚ್ಚು ನೀ ಕಡಿಮೆ ಎಂಬವರನೆಲ್ಲ........
ಭುವನದೊಳಗಿಹ ಭಕ್ತತತಿಲಿ ಎಲ್ಲ ಸಮನೆಂಬ
ಶಿವಶಾಸ್ತ್ರದನುಭವವ ಕೇಳರಿಯೆಯಾ ?
ಆವ ಗುರುವಿಗೆ ತಾನೆ ಭಕ್ತಿಯಿರಬೇಡವೇ ?
ಈ ವಿಧದೆ ಭಕ್ತಿ ರಹಿತರು ಗುರುಗಳಹರೆ ? ॥ ೨ ॥

—ನಾ ಹೆಚ್ಚು ನೀ ಕಡಿಮೆ ಎಂಬವರನೆಲ್ಲ...............
ನಾವು ಭಿಕ್ಷವ ಬೇಡಿ ಪಾಲಿಸಲು ಪುಟ್ಟಿಹೆವು
ನೀವು ಭಿಕ್ಷವ ನೀಡಿ ಮುಕ್ತಿ ಪಡೆಯಿರಿ ಎಂಬ
ಜೀವಗಳ್ಗರ ಮಾತಿಗಳುಕದಂಜದೆ ನೀನು
ಠೀವಿಯಿಂದವರ ಬುದ್ಧಿಯತಿದ್ದಿ ಕಳಿಸುವುದು ॥ ೩ ॥

ಶ್ರೀ ವೀರೇಶ್ವರ ಬೆಂಗಳೂರು ನಗರ.

---

# ಬಸವೇಶ್ವರನಕ್ಕಿಂತಲೂ ಮೊದಲಿನ ವೀರಶೈವ ಧರ್ಮ.

ರಾವಬಹಾದ್ದೂರ ಪಿ. ಜಿ. ಹಳಕಟ್ಟಿ. ಬಿ. ಎ ಎಲ್. ಎಲ್. ಬಿ. ವಿಜಾಪುರ.

[ಹಿಂದಿನಿಂದ ಮುಂದೆ ಸಾಗಿದ್ದು]

---

ನಾವು ಹಿಂದಿನ ಸಂಚಿಕೆಯಲ್ಲಿ ಮೇಲ್ಕಂಡ ವಿಷಯುವನ್ನು ಕುರಿತು ವಿವೇಚಿಸುವಲ್ಲಿ ಬಸವೇಶ್ವರನಕಿಂತಲೂ ಮೊದಲು ಆಗಿಹೋದ ಶಿವಶರಣರ ವಿಚಾರಗಳೇನಿದ್ದವೆಂಬುದನ್ನು ಕಂಡುಹಿಡಿಯುವದು ಬಹು ಮಹತ್ವದ್ದೆಂದು ಉಲ್ಲೇಖಿಸಿದ್ದು ವಾಚಕರ ಸ್ಮರಣೆಯಲ್ಲಿರಬಹುದು. ಅದರಲ್ಲಿ ನಾವು ಹಿಂದಿನ ಶಿವಶರಣರಲ್ಲಿ ದೇವರದಾಸಿಮಯ್ಯ, ಶಂಕರ ದಾಸಿಮಯ್ಯ, ಬಾಹೂರು ಬೊಮ್ಮಯ್ಯ ಮೊದಲಾದರಿರುವರೆಂದು ವಿವರಿಸಿದ್ದೇವೆ. ಆದ್ದರಿಂದ ಇವರ ಚರಿತ್ರೆಗಳಿಂದ ಯಾವ ಮತತತ್ವಗಳು ಹೊರಪಡುತ್ತವೆಂಬದನ್ನು ಕುರಿತು ವಿವೇಚಿಸುವುದು ಪ್ರಸ್ತುತ ಲೇಖದ ಮುಖ್ಯ ಉದ್ದೇಶವಾಗಿರುತ್ತದೆ. ಇವರಲ್ಲಿ ದೇವರದಾಸಿಮಯ್ಯನು ಕೇವಲ ಕಾಲ್ಪನಿಕ ಪುರುಷನಿರದೆ ಐತಿಹಾಸಿಕ ಪುರುಷನಿದ್ದನೆಂಬದು ಅವನ ಉಲ್ಲೇಖಗಳಿದ್ದ ಕೆಲವು ಶಿಲಾಶಾಸನಗಳಿಂದ ದೃಢಪಡುತ್ತದೆ. ಇವುಗಳಲ್ಲಿ ನಿಜಾಮ ಇಲಾಖೆಯುಲ್ಲಿರುವ ಗೊಬ್ಬೂರು ಗ್ರಾಮದಲ್ಲಿಯ ಶಾಸನವು ಬಹು ಮುಖ್ಯವಾಗಿರುತ್ತದೆ, ಇದು ೧೧೪೮ನೇ ಇಸ್ವಿಯದು. ಅಂದರೆ ಬಸ

ವೇಶ್ವರನು ಪ್ರಸಿದ್ಧಿಗೆ ಬರುವದಕ್ಕಿಂತಲೂ ಇದು ಮೊದಲಿನದಾಗಿದೆ. ಇದರ ವಿಷಯವಾಗಿ ಶಿವಾನುಭವ ಸಂಪುಟ ೫ ಸಂಚಿಕೆ ೯ ಪುಟ ೩೨೯ ನೋಡತಕ್ಕದ್ದು. ಈ ದೇವರದಾಸಿಮಯ್ಯನು ೧೦೮೮ ರಿಂದ ೧೧೪೦ರ ವರೆಗೆ ಆಳಿದ ಚಾಲುಕ್ಯ ಜಯಸಿಂಹರಾಜನ ಕಾಲದಲ್ಲಿ ಪ್ರಸಿದ್ಧಿಗೆ ಬಂದನೆಂದು ತಿಳಿದುಬರುತ್ತದೆ.

## ಪರಮಾತ್ಮನ ಸ್ವರೂಪು.

ಒಂದು ಧರ್ಮದ ವೈಶಿಷ್ಟ್ಯವು ಅದರಲ್ಲಿ ಪರಮಾತ್ಮನ ಸ್ವರೂಪು ಹೇಗೆ ವಿವರಿಸಲ್ಪಟ್ಟಿರುತ್ತದೆಂಬದರ ಮೇಲೆ ಬಹಳ ಅವಲಂಬಿಸಿರುತ್ತದೆ. ಹಿಂದೂ ಧರ್ಮದಲ್ಲಿ ಅನೇಕ ಪಂಗಡಗಳೂ, ಜಾತಿಗಳೂ, ಪಂಥಗಳೂ ಇವೆ. ಅವುಗಳಲ್ಲಿ ಅನೇಕವುಗಳು ಅವು ಮನ್ನಿಸುತ್ತಿರುವ ದೇವತೆಗಳ ಹೆಸರುಗಳನ್ನೇ ತಮ್ಮ ಹೆಸರನ್ನಾಗಿ ಇಟ್ಟುಕೊಂಡಿರುವದು ಕಂಡುಬರುತ್ತದೆ. ಉದಾ— ಶೈವ, ವೈಷ್ಣವ, ಗಾಣಪತ್ಯ, ಶಾಕ್ತ, ಜೈನ ಇತ್ಯಾದಿ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ವಚನಕಾರರ ವಿಚಾರಗಳು ಪರಮಾತ್ಮನ ಬಗ್ಗೆ ಆವವಿದ್ದವು ಮತ್ತು ಅವೇ ವಿಚಾರಗಳು ಅವನ ಪೂರ್ವದಲ್ಲಿಯೂ ಕೂಡ ಇದ್ದವೋ ಹೇಗೆ ಎಂಬದನ್ನು ಕಂಡು ಹಿಡಿಯುವದು ಬಹು ಮಹತ್ವದ ವಿಷಯವಾಗಿದೆ. ಬಸವೇಶ್ವರನ ಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ, ಅವನು ಸರ್ವವ್ಯಾಪಿಯಾಗಿದ್ದಾನೆ, ಅವನು ಎಲ್ಲೆಲ್ಲಿಯೂ ಇದ್ದಾನೆ, ಎಂಬ ವಿಚಾರಗಳು ಪ್ರಾಮುಖ್ಯವಾಗಿದ್ದುದು ತೋರಿಬರುತ್ತದೆ. ಈ ಬಗ್ಗೆ ಅಸಂಖ್ಯ ವಚನಗಳನ್ನು ನಾವು ಉದಹರಿಸಬಹುದು. ಅವುಗಳನ್ನು ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ (೨ನೇ ಆವೃತ್ತಿ) ಪುಟ ೧ರಿಂದ ೪೦ರ ವರೆಗೆ ವಾಚಕರು ನೋಡಬಹುದು. ಈ ಕಾಲದಲ್ಲಿ ವೀರಶೈವರು ಜನಸಾಮಾನ್ಯರಲ್ಲಿ ಪ್ರಚಲಿತವಿದ್ದ ಅಸಂಖ್ಯ ದೇವತೆಗಳನ್ನು ನಿರಾಕರಿಸಿದರು. ಇಷ್ಟೇ ಅಲ್ಲ, ತ್ರಿಮೂರ್ತಿಗಳನ್ನೂ ಸಹ ಅವರು ಮನ್ನಿಸಲಿಲ್ಲ. ಆದರೆ ಈ ಬಗೆಯ ವಿಚಾರಗಳು ಬಸವೇಶ್ವರನಕಿಂತಲೂ ಮೊದಲು ಸಹ ರೂಢವಾಗಿದ್ದವೋ ಹೇಗೆಂಬುದನ್ನು ಗೊತ್ತುಪಡಿಸುವದು ಬಹು ಮಹತ್ವದ ವಿಷಯವಾಗಿರುತ್ತದೆ. ಈ ವಿಷಯವಾಗಿ ದೇವರದಾಸಿಮಯ್ಯನ ಚರಿತ್ರೆಯಿಂದ ಕಂಡುಬರುವ ಸಂಗತಿಗಳನ್ನು ನಾವು ಇಲ್ಲಿ ಉಲ್ಲೇಖಿಸುತ್ತೇವೆ.

## ದೇವರದಾಸಿಮಯ್ಯ.

ಇವನ ಕಾಲದಲ್ಲಿ ದೇವರ ಸ್ವರೂಪು ಹೇಗಿರುತ್ತದೆಂಬದರ ಬಗ್ಗೆ ಕರ್ನಾಟಕದಲ್ಲಿ ಬಹು ನಿಕರವಾದ ವಾದಗಳಿದ್ದ ಹಾಗೆ ತೋರುತ್ತದೆ. ಈ ಕಾಲದಲ್ಲಿ ಜೈನ ಧರ್ಮದ ಸಂಸ್ಕೃತಿಯು ಪ್ರಾಬಲ್ಯವಿದ್ದದ್ದೇ ಇದಕ್ಕೆ ಮುಖ್ಯ ಕಾರಣವು. ಯಾಕಂದರೆ ಜೈನರು ಪರಮಾತ್ಮನ ಅಸ್ತಿತ್ವ ವನ್ನು ಅಲ್ಲಗಳೆದು ಅವನು ಶೂನ್ಯನಾಗಿದ್ದನೆಂದು ಅಭಿಪ್ರಾಯಪಡು ತ್ತಾರೆ. ಆದರೆ ಈ ಬಗೆಯ ವಿಚಾರಗಳನ್ನು ಆಗಿನ ಪುರಾತನ ಶಿವಶರಣರು ಅಂಗೀಕರಿಸದೆ ಪರಮಾತ್ಮನು ಜಗತ್ತಿನಲ್ಲೆಲ್ಲ ಹರಡಿದ್ದಾನೆ ಮತ್ತು ಜೀವನು ಕಡೆಗೆ ಪರಮಾತ್ಮನಲ್ಲಿಯೇ ಬೆರೆದು ಹೋಗುತ್ತಾನೆ ಎಂದು ಭಾವಿಸಿದರು. ಇದು ದೇವರದಾಸಿಮಯ್ಯನ ಜೀವನಚರಿತೆಯಿಂದ ನಮಗೆ ತಿಳಿದು ಬರುತ್ತದೆ. ಈ ವಿಷಯವಾಗಿ ಜಯಸಿಂಹರಾಯನ ಆಸಾ ನದಲ್ಲಿ ನಡೆದ ವಿವಾದಗಳು ಬಸವಪುರಾಣ ಆರನೆಯ ಸಂಧಿಯಲ್ಲಿ ವಿಸ್ತೃತ ವಾಗಿ ಕೊಡಲ್ಪಟ್ಟಿವೆ. ಈ ವಾದವು ಅಲ್ಲಿ ನಡೆದು ಅದರ ಅಂತ್ಯದಲ್ಲಿ ಶ್ರಾವ ಕರು ಒಂದು ಘಟಸರ್ಪನನ್ನು ಒಂದು ಗಡಿಗೆಯಲ್ಲಿ ತಂದಿರಿಸಿ ಅದ ರಲ್ಲಿ ಪರಮಾತ್ಮನನ್ನು ತೋರಿಸೆಂದು ದೇವರದಾಸಿಮಯ್ಯನನ್ನು ಆಹ್ವಾ ನಿಸುವರು. ಆಗ ದೇವರದಾಸಿಮಯ್ಯನು ಆ ಗಡಿಗೆಯಲ್ಲಿ ಕೈಹಾಕಿ ಅದ ರಲ್ಲಿಯ ಘಟಸರ್ಪನನ್ನು ಮುಟ್ಟಲು ಅದು ಅವನ ಭಕ್ತಿಯ ಪ್ರಭಾವದಿಂದ ಸ್ಫಟಿಕಲಿಂಗವಾಯಿತು. ಇದೇ ಕಥಾನಕವು ಶಿವಶರಣರ ಅನೇಕ ಚರಿತ್ರ ಗ್ರಂಥಗಳಲ್ಲಿ ಇವನ ವಿಷಯವಾಗಿ ಬಂದಿರುತ್ತದೆ. ಈ ಕಥೆಯ ಮುಖ್ಯ ಭಾವವೇನೆಂಬುವನ್ನು ಮಾತ್ರ ವಾಚಕರು ವಿಚಾರಮಾಡಬೇಕು. ಇದ ರಲ್ಲಿ ಪರಮಾತ್ಮನು ಜಗತ್ತಿನಲ್ಲೆಲ್ಲ ತುಂಬಿಕೊಂಡಿದ್ದಾನೆ, ಅವನನ್ನು ಭಕ್ತಿಯಿಂದ ಜನರು ಪ್ರಕಟಮಾಡಿಕೊಳ್ಳಬಹುದು ಎಂಬ ಅಭಿಪ್ರಾಯ ವಿದೆಂಬುದು ಸ್ಪಷ್ಟವದೆ. ಈ ಅಭಿಪ್ರಾಯವನ್ನು ದೇವರದಾಸಿಮಯ್ಯನು ಕೆಳಗೆ ಕಾಣಿಸಿದ ತನ್ನ ವಚನದಲ್ಲಿಯೂ ಸ್ಪಷ್ಟವಾಗಿ ಹೇಳಿದ್ದಾನೆ.

"ಇಂತೆಂದ ಭೂಮಿಯು, ಇಂತೆಂದ ಗಗನವ, ಇಂತೆಂದ ಸಪ್ತ ಸಾಗರವ, ಇಂತೀ ಲೋಕದೊಳಗೆ ತಿಂಥಿಣಿಯಾಗಿಪ್ಪ ಅಚಿಂತ್ಯನ ನಾರು ಬಲ್ಲರೈ ರಾಮನಾಥಾ?"

ಮಹಾದೇವಿಯಕ್ಕನಾದರೂ ಶ್ರೀಶೈಲದ ಅರಣ್ಯದಲ್ಲಿ ಹೋಗುತ್ತಿರು ವಾಗ್ಗೆ ನವಿಲುಗಳಲ್ಲಿ ಗಿಳಿಗಳಲ್ಲಿ ಹಂಸೆಗಳಲ್ಲಿ ಕೊಳನಲ್ಲಿ ಪರಮಾತ್ಮ

ನ್ನನ್ನೇ ದೃಷ್ಟಿಸುತ್ತ ಹೋದದ್ದು ಆಕೆಯ ವಚನದಿಂದ ತಿಳಿದುಬರುತ್ತದೆ. ಅದೇ ಅಭಿಪ್ರಾಯದ ಬಸವನ ವಚನಗಳಾದರೂ ಅನೇಕವಿವೆ. ಅವನು ಒಂದು ಕಡೆಯಲ್ಲಿ 'ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ ಸಕಲ ವಿಸ್ತಾರದ ರೂಹು ನೀನೇ ದೇವಾ' ಎಂದು ಮೊದಲಾಗಿ ಹೇಳಿದ್ದಾನೆ. ಬಸವೇಶ್ವರನ ಕಾಲದಲ್ಲಿದ್ದ ಈ ವಿಚಾರಗಳು ಅವನ ಕಾಲಕ್ಕಿಂತಲೂ ಮೊದಲು ೧೦೦-೧೫೦ ವರ್ಷಗಳ ಪೂರ್ವದಲ್ಲಿಯೂ ಕೂಡ ಪ್ರಚಲಿತವಾಗಿದ್ದವೆಂಬುದು ದೇವರದಾಸಿಮಯ್ಯನು ಜಯಸಿಂಹನ ಆಸ್ಥಾನದಲ್ಲಿ ಪ್ರಸ್ತಾಪಿಸಿದ ವಿಷಯಗಳಿಂದ ಕಂಡುಬರುತ್ತದೆ. ಹೀಗೆ ಪ್ರಸ್ತಾಪಿಸಿದವನು ಅವನೊಬ್ಬನೇ ಅಲ್ಲ, ಅವನಂತೆ ಇನ್ನೂ ಅನೇಕರು ಇರುವದಾಗಿ ಕಂಡುಬರುತ್ತದೆ. ಅವರಲ್ಲಿ ಬಾಹೂರು ಬೊಮ್ಮಯ್ಯನು ಒಬ್ಬನಾಗಿದ್ದಾನೆ. ಈ ಶಿವಶರಣನು ವಿಜಾಪುರ ಜಿಲ್ಲಾ ಮುದ್ದೇಬಿಹಾಳ ತಾಲೂಕಿನಲ್ಲಿರುವ ಬಾಹೂರು ಎಂಬ ಗ್ರಾಮದವನು. ಇವನ ವಿಷಯವಾಗಿ ಹರಿಹರನು ರಚಿಸಿದ ರಗಳೆಯು ಈಗ ಪ್ರಸಿದ್ಧವಾಗಿದೆ. (ಶಿವಾನುಭವ ಸಂಪುಟ ಸಂಚಿಕೆ ೨ ನೋಡಿರಿ) ಅವನ ಚರಿತ್ರೆಯಿಂದ ಕೆಳಗೆ ಕಾಣಿಸಿದ ಸಂಗತಿಗಳು ವ್ಯಕ್ತವಾಗುತ್ತವೆ.

## ಬಾಹೂರು ಬೊಮ್ಮಯ್ಯ.

ಬಾಹೂರು ಬೊಮ್ಮಯ್ಯನು ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದನು. ಈ ಪೆರ್ಮಾಡಿಯು ೧೧೨೬ರಲ್ಲಿ ಚಾಲುಕ್ಯ ರಾಜನಾದ ಇನೆಯ ಸೋಮೇಶ್ವರನಿಗೆ ಮಾಂಡಲಿಕನಾಗಿ ತರ್ದೆವಾಡಿ (ವಿಜಾಪುರ ಜಿಲ್ಲೆಯ ಉತ್ತರ ಭಾಗ)ಯಲ್ಲಿ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ. ಆದ್ದರಿಂದ ಇವನ ಕಾಲಕ್ಕಿದ್ದ ಬಾಹೂರು ಬ್ರಹ್ಮಯ್ಯನು ಬಸವನಕಿಂತಲೂ ಸ್ವಲ್ಪ ಹಿಂದಿನವನು. ದೇವರದಾಸಿಮಯ್ಯನ ಕಾಲದಲ್ಲಿ ಪರಮಾತ್ಮನ ಸ್ವರೂಪದ ಬಗ್ಗೆ ಯಾವ ಚರ್ಚೆಗಳು ನಡೆದಿದ್ದವೋ ಅವೇ ಚರ್ಚೆಗಳು ಪೆರ್ಮಾಡಿರಾಯನ ಕಾಲದಲ್ಲಿಯೂ ನಡೆದಿದ್ದವೆಂದು ಈ ಬಾಹೂರುಬ್ರಹ್ಮಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. ಹರಿಹರ ಕವಿಯು ತನ್ನ ರಗಳೆಯಲ್ಲಿ ಈತನ ಬಗ್ಗೆ ಹೇಳಿರುವದೇನಂದರೆ:— ಒಂದು ಸೋಮವಾರ ದಿವಸ ಬ್ರಹ್ಮಯ್ಯನು ಪುರಹರನ ಧ್ಯಾನವನ್ನು ಮನದೊಳಗೆ ಮುಂದಿಟ್ಟುಕೊಂಡು ಬಾಹೂರು

ಗ್ರಾಮದಿಂದ ಕಲ್ಯಾಣಪುರಕ್ಕೆ ಬಂದು ಪುರದ ವೀಧಿಯಿಂದ ಬರುತ್ತಾ ಇದ್ದನು. ಆಗ ಅಲ್ಲಿ ಒಬ್ಬ ಶ್ರವಣ ವರ್ತಕನು ಬಿಳಿಯ ಜೋಳದ ರಾಶಿಯನ್ನು ತನ್ನ ಮುಂದಿಟ್ಟುಕೊಂಡು ಮಾರಲಿಕ್ಕೆ ಕುಳಿತಿದ್ದನು. ಅವನು ತನ್ನೆದುರಿಗೆ ಹಾದು ಹೋಗುತ್ತಿದ್ದ ಆ ಬ್ರಹ್ಮಯ್ಯನನ್ನು ಕಂಡು ಅವನಿಗೆ ಹಾಸ್ಯಮಾಡಬೇಕೆಂದುದ್ದೇಶಿಸಿ, ಎಲೈ ಜನಗಳೇ ಇದು (ಜೋಳದ ರಾಶಿ) ಅಮೃತಮಯಧಾನ್ಯ, ಶಂಕರಗಂಡನು, ಇದನ್ನು ತೆಗೆದುಕೊಂಡು ಚೆನ್ನಾಗಿ ಬದುಕಿರಿ' ಎಂದು ಕೂಗಿ ಬೀದಿಯಲ್ಲಿ ಹೋಗುವ ಜನರಿಗೆ ಹೇಳುತ್ತಿದ್ದನು. ಆ ಶ್ರವಣ ವ್ಯಾಪಾರಿಯು ಆ ಜೋಳದ ರಾಶಿಗೆ ಹೀಗೆ ಪರಮಾತ್ಮನ ಹೆಸರನ್ನಿಟ್ಟು ಜನರನ್ನು ಕೂಗಿ ಕರೆಯುತ್ತ ಪುನಃ ಅಂದದ್ದು 'ಈ ಜೋಳದಲ್ಲಿ ಪರಮಾತ್ಮನನ್ನು ಪ್ರತ್ಯಕ್ಷವಾಗಿ ತೋರಬಲ್ಲವರುಂಟೇ? ಈ ಜೋಳವನ್ನು 'ಓ' ಎಂದೆನಿಸುವವರುಂಟೇ?' ಎಂದು ಬ್ರಹ್ಮಯ್ಯನನ್ನು ಕುರಿತು ಆಹ್ವಾನಿಸಿ ನುಡಿದನು. ಈ ಆಹ್ವಾನವನ್ನು ಬ್ರಹ್ಮಯ್ಯನು ಕೇಳಿದೊಡನೆಯೇ ತಾನು ಹತ್ತಿದ್ದ ದಂಡಿಗೆಯನ್ನಿಳಿದು 'ಎಲೋ ಅರುಹತನೇ, ಏನು ಬೊಗಳುತ್ತ ಇರುವಿ' ಎಂದೆನುತ್ತ ಅಲ್ಲಿ ನೆರೆದಿದ್ದ ಜನಸಮೂಹಕ್ಕೆ 'ಎಲೈ ಜನಗಳೇ ಈ ಜೋಳದ ರಾಶಿಯಲ್ಲಿ ಪರಮಾತ್ಮನನ್ನು ತೋರಿಸಿಕೊಡುವೆನು' ಎಂದು ನುಡಿದು, ಅವನು ಆ ರಾಶಿಯ ಸುತ್ತಲೂ ಪ್ರದಕ್ಷಿಣೆಯನ್ನು ಹಾಕಿ ತನ್ನ ನಿಶ್ಚಲವಾದ ಧ್ಯಾನದಿಂದ ಪರಮಾತ್ಮನನ್ನು ಆಹ್ವಾನಿಸಿ, 'ಎಲೈ ಪರಮಗುರುವೇ ಶಂಕರಾ, ಶಂಕರಾ' ಎಂದು ಕರೆಯಲು ಜಗತ್ತು ಪ್ರಣವಮಯವಾದುದೆಂದು ತಿಳಿಯುವಂತೆಯೂ ಪರಮಾತ್ಮನು ಭಕ್ತನನ್ನು ಉದ್ಧರಿಸುವನೆಂಬುದನ್ನು ಎಲ್ಲರಿಗೂ ತೋರುವಂತೆಯೂ ಆ ರಾಶಿಯಲ್ಲಿ 'ಓ' ಎಂಬ ದನಿಯು ಗಟ್ಟಿಯಾಗಿ ಹೊರಸೂಸಿತು! ಇದನ್ನು ಅಲ್ಲಿ ನೆರೆದ ಜನಸಮೂದಾಯವು ಕೇಳಿ ಬ್ರಹ್ಮಯ್ಯನನ್ನು ಕೊಂಡಾಡಿ ಅವನನ್ನು ಕಲ್ಯಾಣಪುರದಲ್ಲಿ ಮೆರೆಯಿಸಿದರು. ಈ ಬಗೆಯ ಕಥೆಯನ್ನು ಹರಿಹರನು ತನ್ನ ರಗಳೆಯಲ್ಲಿ ಹೇಳಿದ್ದಾನೆ.

ಬಾಹೂರು ಬ್ರಹ್ಮಯ್ಯನ ಈ ಕಥೆಗೂ ದೇವರದಾಸಿಮಯ್ಯನ ಕಥೆಗೂ ಬಹಳ ಸಾಮ್ಯವಿದೆ. ಅವರಿಬ್ಬರೂ ಜಗತ್ತಿನಲ್ಲಿ ಪರಮಾತ್ಮನೊಬ್ಬನೇ ಇದ್ದಾನೆ, ಅವನು ವಿಶ್ವವ್ಯಾಪಿಯಾಗಿದ್ದಾನೆ, ಅವನನ್ನು ಭಕ್ತಿಯಿಂದ ಕಾಣಬಹುದು, ಎಂಬುದನ್ನು ತಮ್ಮ ತಮ್ಮ ದೃಷ್ಟಾಂತಗಳಿಂದ

ಸಿದ್ಧಪಡಿಸಿಕೊಟ್ಟಿದ್ದಾರೆ. ಈ ದೃಷ್ಟಾಂತಗಳು ಅದ್ಭುತವಾದುವೆಂದು ಅವು ಗಳನ್ನು ವಾಚಕರಲ್ಲಿ ಅನೇಕರು ನಂಬಲಿಕ್ಕಿಲ್ಲ. ಆದರೆ ಅವುಗಳೊಳಗೆ ಒಂದು ಮಹತ್ವದ ಧಾರ್ಮಿಕ ತತ್ವವು ಅಡಕವಾಗಿರುತ್ತದೆಂಬದನ್ನು ಅವರು ವಿಚಾರ ಮಾಡಬೇಕೆಂದು ನಾವು ಸೂಚಿಸುತ್ತೇವೆ. ಬಸವೇಶ್ವರನಕಿಂತ ಮೊದಲು ನಮ್ಮ ನಾಡಿನಲ್ಲಿ ಅನೇಕ ತರದ ದೇವತೆಗಳ ಆರಾಧನೆಗಳು ಪ್ರಚಲಿತವಿದ್ದವೆಂದು ತೋರುತ್ತದೆ. ಈ ದೇವತೆಗಳಿಗೋಸ್ಕರ ಬೇರೆ ಬೇರೆ ಪಂಗಡಗಳಲ್ಲಿ ಪರಸ್ಪರ ಕಲಹಗಳೂ ಏಳುತ್ತಿದ್ದವು. ಆದರೆ ಆಗಿನ ಕಾಲದ ವೀರಶೈವರು ಪರಮಾತ್ಮನು ಒಬ್ಬನೇ ಇದ್ದಾನೆ ಮತ್ತು ಎಲ್ಲದರಲ್ಲಿಯೂ ಅವನು ತುಂಬಿದ್ದಾನೆ. ಎಂಬ ಉಪನಿಷದ್ವಾಕ್ಯಗಳಲ್ಲಿಯ ತತ್ವವನ್ನೇ ಪ್ರತಿಷ್ಠಾಪಿಸಿದರು.

## ಶಂಕರದಾಸಿಮಯ್ಯ.

ಶಂಕರದಾಸಿಮಯ್ಯನು ದೇವರದಾಸಿಮಯ್ಯನಿಗೆ ಸಮಕಾಲೀನನಾಗಿದ್ದನು. ಅವನೂ ಜಯಸಿಂಹರಾಜನ ಆಸ್ಥಾನದಲ್ಲಿ ಪ್ರಸಿದ್ಧಿಗೆ ಬಂದನು. ಅವನ ರಗಳೆಯನ್ನು ಹರಿಹರ ಕವಿಯು ರಚಿಸಿದ್ದಾನೆ. (ಹರಿಹರನ ರಗಳೆಗಳು ಭಾಗ ೩. ನೋಡಿರಿ.) ಅವನ ಚರಿತ್ರೆಯನ್ನು ನಿರೀಕ್ಷಿಸಿದಲ್ಲಿ ಅನೇಕ ದೇವತೆಗಳನ್ನು ಆರಾಧಿಸದೆ ಒಬ್ಬನೇ ದೇವನನ್ನು ಪೂಜಿಸಬೇಕೆಂದು ಅವನೂ ಕೂಡ ಪ್ರತಿಷ್ಠಾಪಿಸಿದುದು ಕಂಡುಬರುತ್ತದೆ. ಈ ಕಾಲದಲ್ಲಿ ಮೈಳಯ ಅಥವಾ ಮೈಲಾರ, ಭೈರವ, ನರಸಿಂಹ, ಮಾರಿಕವ್ವೆ ಎಂಬ ದೇವತೆಗಳನ್ನು ಬಹುಜನ ಸಮಾಜವು ಪೂಜಿಸುತ್ತಿದ್ದ ಹಾಗೆ ತೋರಿಬರುತ್ತದೆ. ಅದೇಮೇರೆಗೆ ಅನೇಕ ಭೂತಪಿಶಾಚಿಗಳ ಆರಾಧನೆಯೂ ನಡೆಯುತ್ತಿತ್ತು. ಆದರೆ ಶಂಕರದಾಸಿಮಯ್ಯನು ಇಂಥ ದೇವತೆಗಳನ್ನು ನಿರಾಕರಿಸಬೇಕೆಂದು ಬೋಧಿಸಿದುದೂ ಹಾಗೆ ಅವನು ನಡೆದುತೋರಿಸಿದುದೂ ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ನಾರಸಿಂಹನ ಪೂಜೆಯು ಅವನ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಬಹು ಪ್ರಬಲವಾಗಿತ್ತು. ಜಯಸಿಂಹರಾಜನ ಆಸ್ಥಾನದಲ್ಲಿದ್ದ ಇದರ ಪೂಜೆಯನ್ನು ಇವನು ನಿರಾಕರಿಸಿದನು. ಈಗಿನಂತೆಯೇ ಮೈಲಾರನ ಪೂಜೆಯೂ ಜನರಲ್ಲಿ ಹೆಚ್ಚಿತ್ತು. ನಾಯಾಗಿ ಬೊಗಳುವದು ಈ ದೇವತೆಯ ಒಂದು ವಿಧದ ಭಜನೆಯಾಗಿತ್ತು. ಬಸವನ ಕಾಲದ ವಚನಕಾರರು ಈ ವಿಧವನ್ನು ತಮ್ಮ ವಚನಗಳಲ್ಲಿ ಬಹು ಕಟುವಾದ ಶಬ್ದಗಳಿಂದ ಹಳಿದಿದ್ದಾರೆ. ಆದರೆ ಬಸವನ ಮೊದಲು

ಇದ್ದ ಶಂಕರದಾಸಿಮಯ್ಯನು ಈ ಮೈಲಾರನನ್ನು ಧಿಕ್ಕರಿಸಿದ್ದಾನೆ. ಮೈಲಾರನ ಕಡೆಯಿಂದ ಅವನು ತನಗೆ ಕೊಡೆಹಿಡಿಸಿಕೊಂಡಿದ್ದು ಅವನ ಚರಿತ್ರೆಯಲ್ಲಿದೆ. ಭೈರವನ ಪೂಜಕರೂ ಈ ಕಾಲದಲ್ಲಿ ಹೆಚ್ಚಾಗಿದ್ದರು. ಡಮರುಗವನ್ನು ಹಿಡಿದು ತಲೆಗೆದರಿ ಅಲಗನ್ನು ತಿವಿದುಕೊಳ್ಳುತ್ತ ತಿರುಗುವದು ಭೈರವದೇವನ ಒಂದು ವಿಧದ ಪೂಜೆಯಾಗಿತ್ತು. ಇದು ನಿಜ ಭಕ್ತಿಯಲ್ಲೆಂದು ಶಂಕರದಾಸಿಮಯ್ಯನು ಸಾರಿದನು. ಅವನ ಪ್ರಭಾವಕ್ಕೆ ಭೈರವದೇವನು ಬೆದರಿ ಅವನ ಪದತಳಕ್ಕೆ ನಮಸ್ಕರಿಸಿದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಹಾಗೆಯೇ ಮಾರಿ ಮಸಣಿಗಳನ್ನೂ ಭಜಿಸಕೂಡದೆಂದು ಶಂಕರದಾಸಿಮಯ್ಯನು ಪುರಜನರಲ್ಲಿ ಸಾರಿದನು. ಇಂಥ ಕ್ಷುದ್ರ ದೇವತೆಗಳು ಮನುಷ್ಯನು ನಿಜಭಕ್ತಿಯುಳ್ಳವನಿದ್ದರೆ ಅವನಿಗೆ ಎಂದಿಗೂ ಕೇಡು ಮಾಡಲಾರವು, ಇಷ್ಟೇ ಅಲ್ಲ. ಅವನಿಗೆ ಅವು ಆಳಾಗಿ ದುಡಿಯುವವೆಂಬದನ್ನು ಶಂಕರದಾಸಿಮಯ್ಯನು ತೋರಿಸಿಕೊಟ್ಟನು. ಶಂಕರದಾಸಿಮಯ್ಯನಿಗೋಸ್ಕರ ಈ ದೇವತೆಗಳು ಕೊಟ್ಟಣವನ್ನು ಕುಟ್ಟಿತಂದು ಹಾಕಿದವೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಈ ಪ್ರಕಾರ ಶಂಕರದಾಸಿಮಯ್ಯನಾದರೂ ದೇವರದಾಸಿಮಯ್ಯ, ಬಾಹೂರ ಬೊಮ್ಮಯ್ಯಗಳಂತೆ ಪರಮಾತ್ಮನಾರು, ಅವನ ಸ್ವರೂಪವೇನು, ನಿಜಭಕ್ತಿಯಾವುದು, ಎಂಬುದನ್ನು ತನ್ನ ನಡೆನುಡಿಯಿಂದ ಸಿದ್ಧಪಡಿಸಿದ್ದಾನೆ. ಅವನ ಚರಿತ್ರೆಯಿಂದ ಪರಮಾತ್ಮನೊಬ್ಬನೇ ಇದ್ದಾನೆಂಬ ತತ್ವವು ಬಸವೇಶ್ವರನಕಿಂತಲೂ ಮೊದಲು ರೂಢವಾಗಹತ್ತಿತ್ತೆಂಬುದು ತಿಳಿದುಬರುತ್ತಿದೆ.

ಪುರಾತನ ಶಿವಶರಣರು ಇಂಥ ಧಾರ್ಮಿಕ ತತ್ವಗಳನ್ನು ಪ್ರಚಾರ ಮಾಡುವಲ್ಲಿ ಅವರಿಗೆ ಅನೇಕ ತೊಂದರೆಗಳು ಉದ್ಭವಿಸಿದವು. ಆದರೆ ಇವರು ಪರಸಮಯಿಗಳನ್ನು ಶಾಸ್ತ್ರಾಧಾರದಿಂದ ಖಂಡಿಸಿದ್ದಲ್ಲದೆ ತಮ್ಮ ವರ್ತನೆಯಿಂದಲೂ ತಮ್ಮ ಈ ಸಿದ್ಧಾಂತವನ್ನು ನೆಲೆಗೊಳಿಸಿದರು. ದೇವರ ಸಂಬಂಧದ ಅವರ ಈ ವಿಶಾಲವಾದ ತತ್ವವನ್ನು ಮುಂದೆ ಬಸವನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಶಿವಶರಣರು ಮತ್ತಿಷ್ಟು ಹೆಚ್ಚಿಗೆ ಬಲಪಡಿಸಿದರು.

ಅನೇಕರು ಬಸವೇಶ್ವರನು ವೀರಶೈವ ಧರ್ಮಸ್ಥಾಪಕನೆಂದು ಹೇಳುವದುಂಟು. ಆದರೆ ಅವನಕಿಂತಲೂ ಮೊದಲು ದೇಶದಲ್ಲಿ ವೀರಶೈವ ಧಾರ್ಮಿಕ ಜಾಗ್ರತಿಯು ತಲೆದೋರಹತ್ತಿತ್ತೆಂಬುದು ಅವನ ಹಿಂದಿನ ಈ ಶಿವಶರಣರ ಚರಿತ್ರೆಗಳನ್ನು ನಿರೀಕ್ಷಿಸಿದರೆ ಕಂಡುಬರದೆ ಇರಲಾ

ರದು. ಈ ಶಿವಶರಣರಲ್ಲಿ ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಪ್ರಭುದೇವ, ರೇವಣಸಿದ್ಧ, ಬಾಹೂರು ಬ್ರಹ್ಮಯ್ಯ ಇವರೇ ಮೊದಲಾದವರು ಮುಖ್ಯರಿದ್ದ, ಇವರ ಚರಿತ್ರಗಳನ್ನು ನಾವು ಪರಿಶೀಲಿಸಿದಲ್ಲಿ ಈ ಸಂಗತಿಯು ದೃಢಪಡುತ್ತಿದೆ. ಆದರೆ ಮುಂದೆ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಉದ್ಭವಿಸಿ ಅವರು ವೀರಶೈವ ಧರ್ಮಕ್ಕೆ ಒಂದು ವ್ಯವಸ್ಥಿತ ಸ್ವರೂಪವನ್ನು ತಂದುಕೊಟ್ಟರು. ಆದರೆ ಬಸವೇಶ್ವರನು ಬಹಳ ವರ್ಷಗಳ ವರೆಗೆ ಜೀವಿಸಲಿಲ್ಲ. ಅವನ ಕಾಲದಲ್ಲಿ ಅನೇಕ ವಿಪ್ಲವಗಳು ಉಂಟಾದವು. ಆದರೂ ಅವನ ತರುವಾಯ ಅವನು ಪ್ರಾರಂಭಿಸಿದ ಮಹತ್ವದ ಕಾರ್ಯಗಳು ಮತ್ತಿಷ್ಟು ಹೆಚ್ಚಿಗೆ ಪ್ರಬಲವಾದವು. ಆಗ ಅಸಂಖ್ಯ ವಚನಕಾರರು ದೇಶದಲ್ಲಿ ಉದ್ಭವಿಸಿ ಬಸವೇಶ್ವರನ ತತ್ವಗಳನ್ನು ಮತ್ತಿಷ್ಟು ಬಲವಾಗಿ ಪ್ರಸಾರಮಾಡಿದರು. ಅವುಗಳಲ್ಲಿ ಪರಮಾತ್ಮನ ಬಗ್ಗೆ ಶುದ್ಧ ಸಾತ್ವಿಕ ವಿಚಾರಗಳನ್ನು ಅವರು ಪ್ರಸಾರಪಡಿಸಿದ್ದು ಅತಿ ಮಹತ್ವದ್ದಾಗಿದೆ.

ಪರಮಾತ್ಮನು ಸರ್ವವ್ಯಾಪಿಯೂ, ನಿರಾಕಾರನೂ ಇದ್ದಾನೆಂಬ ಸಿದ್ಧಾಂತವು ಈ ಪ್ರಕಾರ ಸ್ಥಾಪನೆಯಾದ ಬಳಿಕ ಅವನನ್ನು ಹೇಗೆ ಪೂಜಿಸಬೇಕು ಮತ್ತು ಅವನೊಡನೆ ಹೇಗೆ ಸಾಮರಸ್ಯವನ್ನು ಹೊಂದಬೇಕು, ಎಂಬ ವಿಚಾರಗಳು ಸ್ವಾಭಾವಿಕವಾಗಿ ಮುಂದೆ ಬರುತ್ತವೆ. ಹಿಂದೂ ಸಮಾಜದಲ್ಲಿ ಶಿವ, ವಿಷ್ಣು, ಬ್ರಹ್ಮ, ಈ ತ್ರಿಮೂರ್ತಿಗಳ ಮೂಲಕ ಪರಮಾತ್ಮನನ್ನು ಆರಾಧಿಸುವದುಂಟು. ಆದರೆ ವೀರಶೈವರು ತಮ್ಮ ಆರಾಧನೆಯಲ್ಲಿ ಒಂದು ವಿಶಿಷ್ಟತೆಯನ್ನು ತೋರಿಸಿದ್ದಾರೆ. ಇದು ಯಾವುದೆಂಬದನ್ನು ಕುರಿತು ನಾವು ಮುಂದಿನ ಲೇಖದಲ್ಲಿ ವಿವರಿಸುತ್ತೇವೆ.

(೩೮) ಚಕ್ರಗಳು:— ಇವು ಮೂಲ ಚಿತ್ತುವಿನ ಮೂಲಕ ಮಿದುಳಿನಲ್ಲಿ ಉಂಟಾಗುವ ಚೈತನ್ಯಕ್ಕೆ ಕೇಂದ್ರಸ್ಥಾನಗಳೆಂದು ಹೇಳಬಹುದು. ಇವು ಒಟ್ಟು ೯ ಇವೆ. ಮಿದುಳಿನಲ್ಲಿ ಮೂರು ಮತ್ತು ಶರೀರದ ಉಳಿದ ಭಾಗಗಳಲ್ಲಿ ಆರು ಹೀಗೆ ಇವೆ. ಗುದದಲ್ಲಿ ಆಧಾರ ಚಕ್ರ, ಗುಹ್ಯದಲ್ಲಿ ಸ್ವಾಧಿಷ್ಠಾನ ಚಕ್ರ, ಉದರ ಅಥವಾ ನಾಭಿಸ್ಥಾನದಲ್ಲಿ ಮಣಿಪೂರಕಚಕ್ರ, ಹೃದಯ ದಲ್ಲಿ ಅನಾಹತಚಕ್ರ, ಕಂಠದಲ್ಲಿ ವಿಶುದ್ಧಿ ಚಕ್ರ, ಲಲಾಟದಲ್ಲಿ ಆಜ್ಞಾಚಕ್ರ ಹೀಗೆ ಇವೆ. ಮಿದುಳಿನ ಮಧ್ಯಭಾಗದಲ್ಲಿ ಅಂದರೆ ನೆತ್ತಿಯಲ್ಲಿ ಬ್ರಹ್ಮಚಕ್ರ, ಇದರ ತರುವಾಯ ಮಸ್ತಕಾಗ್ರದಲ್ಲಿ ಶಿಖಾಚಕ್ರ ಮತ್ತು ಇದಕ್ಕೂ ಮುಂದೆ ತಲೆಯ ಹಿಂಭಾಗದಲ್ಲಿ ಪಶ್ಚಿಮಚಕ್ರ. ಮಿದುಳಿನಲ್ಲಿ ಮೊದಲು ಚಲನೆ ಗಳುಂಟಾಗುತ್ತವೆ. ಈ ಚಲನೆಗಳು ಸ್ನಾಯು (*nerves*) ಗಳ ಮೂಲಕ ಶರೀರದಲ್ಲೆಲ್ಲ ಹರಡುತ್ತವೆ. ಹೀಗೆ ಪಸರಿಸುವಲ್ಲಿ ನರಗಳು ಅಥವಾ ಸ್ನಾಯುಗಳೊಳಗಿಂದ ಅವು ಮೊದಲು ಬೆನ್ನೆಲುವಿನ ರಂಧ್ರದೊಳಗೆ ಪ್ರವೇಶ ಮಾಡುತ್ತವೆ. ಅಲ್ಲಿಂದ ಅವು ಮೇಲ್ಕಂಡ ಚಕ್ರಗಳಲ್ಲಿಗೆ ಹೋಗಿ ಅಲ್ಲಿಂದ ಶರೀರದಲ್ಲೆಲ್ಲ ಪಸರಿಸಿ ಅದರ ಅನೇಕ ಕ್ರಿಯೆಗಳಿಗೆ ಕಾರಣ ವಾಗುತ್ತವೆ. ಈ ಚಲನೆಗಳಿಗೋಸ್ಕರ ಈ ಚಕ್ರಗಳು ರೇಲ್ವೆಯ ಜಂಗ ಶನ್ನುಗಳೆಂದು ಹೇಳಬಹುದು. ಇಲ್ಲಿಗೆ ಹೇಗೆ ಅನೇಕ ದಿಕ್ಕುಗಳಿಂದ ರೇಲ್ವೆ ಗಳು ಬಂದು ಮುಟ್ಟುತ್ತವೋ ಮತ್ತು ಅಲ್ಲಿಂದ ಅವು ಬೇರೆ ಬೇರೆ ಸ್ಥಾನಗಳಿಗೆ ಹೋಗುತ್ತವೋ, ಹಾಗೆಯೇ ಈ ಚಕ್ರಗಳ ಕಾರ್ಯಗಳಿರು ತ್ತವೆ. ಮಿದುಳಿನಿಂದ ಬರುವ ಚಲನೆಗಳು ಈ ಚಕ್ರಗಳಿಗೆ ಮೊದಲು ಬರು ತ್ತವೆ. ಮಿದುಳಿನಲ್ಲಿರುವ ಬ್ರಹ್ಮಚಕ್ರವು ಆಧಾರಸ್ವಾಧಿಷ್ಠಾನಚಕ್ರಗಳಿಗೆ, ಶಿಖಾಚಕ್ರವು ಮಣಿಪೂರಕ ಅನಾಹತ ಚಕ್ರಗಳಿಗೆ ಮತ್ತು ಪಶ್ಚಿಮ ಚಕ್ರವು ವಿಶುದ್ಧಿ, ಆಜ್ಞಾಚಕ್ರಗಳಿಗೆ ಪ್ರತ್ಯಕ್ಷ ಸಂಬಂಧಪಡುತ್ತವೆ. ಮಿದು ಳಿನಲ್ಲಿ ಉತ್ಪನ್ನವಾಗುವ ಈ ಚಲನೆಗಳು ಆಯಾ ಚಕ್ರಗಳ ದ್ವಾರಾ ಬೇರೆ ಬೇರೆ ಅವಯವಗಳಿಗೆ ಪಸರಿಸುತ್ತವೆ. ಹೀಗೆ ಚಕ್ರಗಳು ಶಕ್ತಿಯನ್ನು ವ್ಯವಸ್ಥೆಗೊಳಿಸುವ ಕಾರ್ಯಮಾಡುತ್ತವೆ.

ಈ ಚಕ್ರಗಳಿಗೆ ಅನುಕ್ರಮವಾಗಿ ೪, ೬, ೧೦, ೧೨, ೧೬, ೨ ದಳಗಳಿವೆ. ಈ ದಳಗಳಲ್ಲಿ ೫೦ ಅಕ್ಷರಗಳಿರುತ್ತವೆ. ಆಧಾರಚಕ್ರದ ದಳಗಳಲ್ಲಿ ವ ಶ ಷ ಸ ಅಕ್ಷರಗಳು, ಸ್ವಾಧಿಷ್ಠಾನದ ದಳಗಳಲ್ಲಿ ಬ ಭ ಯ ರ ಲ ಅಕ್ಷರಗಳು, ಮಣಿ ಪೂರಕದಲ್ಲಿ ಡ ಢ ಣ ತ ಥ ದ ಧ ನ ಪ ಫ ಅಕ್ಷರಗಳು, ಅನಾಹತ

ಚಕ್ರದಲ್ಲಿ, ಕ ಖ ಗ ಘ ಙ ಚ ಛ ಜ ಝ ಞ ಟ ಠ ಅಕ್ಷರಗಳು, ವಿಶುದ್ಧಿ ಚಕ್ರದಲ್ಲಿ, ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಅಕ್ಷರಗಳು ಇವೆ. ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ ೨ ದಳ ಗಳಿವೆ. ಅವುಗಳಲ್ಲಿ ಹಂ ಸಂ ಎಂಬ ಅಕ್ಷರಗಳು ಇವೆ. ಬ್ರಹ್ಮಚಕ್ರವು ಸಹಸ್ರದಳವುಳ್ಳದ್ದು. ಅದು ಸಹಸ್ರಾಕ್ಷರ ಅನಂತವೇದಗಳನ್ನೊಳಕೊಂಡಿದೆ. ಮಸ್ತಕಾಗ್ರದಲ್ಲಿರುವ ಶಿಖಾಚಕ್ರಕ್ಕೆ ೩ ದಳಗಳು ಇವೆ. ಪಶ್ಚಿಮಚಕ್ರ ದಲ್ಲಿ ಒಂದು ದಳವಿದೆ. ಈ ಯಾವತ್ತು ಚಕ್ರಗಳಲ್ಲಿ ಶಕ್ತಿಗಳಿಗೆ ಕಾರ ಣವಾದ ಪ್ರಣವಾಕ್ಷರಗಳಿರುತ್ತವೆ. ಆಧಾರಚಕ್ರದಲ್ಲಿ ನಕಾರವು, ಸ್ವಾಧಿ ಷ್ಠಾನದಲ್ಲಿ ಮಕಾರವು, ಮಣಿಪೂರಕದಲ್ಲಿ ಶಿಕಾರವು ಅನಾಹತದಲ್ಲಿ ವಕಾರವು, ವಿಶುದ್ಧಿಯಲ್ಲಿ ಯಕಾರವು, ಅಜ್ಞೆಯಲ್ಲಿ ಓಂಕಾರವು ಇರು ತ್ತವೆ. ಬ್ರಹ್ಮಚಕ್ರದಲ್ಲಿ ಬಕಾರವು, ಶಿಖಾಚಕ್ರದಲ್ಲಿ ಕ್ಷಕಾರವು, ಪಶ್ಚಿಮ ಚಕ್ರದಲ್ಲಿ ಹಕಾರವು ಇರುತ್ತವೆ. ಈ ಪ್ರಣವಾಕ್ಷರಗಳ ಮೂಲಕವೇ ಮಿದುಳಿನ ಚಲನೆಗಳು ಸ್ನಾಯುಗಳೊಳಗಿಂದ ಶರೀರದಲ್ಲಿ ಸಂಚರಿಸು ತ್ತವೆ. ಅವು ಶಕ್ತಿಗಳ ರೂಪದಲ್ಲಿ ತೋರುತ್ತವೆ. ೫೦ ಅಕ್ಷರಗಳಿಗೆ ಮೂಲ ವಾದುದು ಲಲಾಟ ಚಕ್ರದಲ್ಲಿರುವ ಓಂಕಾರವೇ ಇರುತ್ತಿದೆ. ಮಿದುಳಿ ನಲ್ಲಿ ಉಂಟಾಗುವ ಚಲನೆಗಳು ಈ ಪ್ರಣವಾಕ್ಷರಗಳ ಮೂಲಕ ನಾಡಿ ಗಳ ದ್ವಾರಾ ಶರೀರದಲ್ಲಿರುವ ಆಯಾ ಚಕ್ರಗಳಿಗೆ ತಲ್ಪಿ ಅಲ್ಲಿಂದ ಶರೀ ರದ ಆಯಾ ಅವಯವಗಳ ಕಡೆಗೆ ಹರಿದುಹೋಗುತ್ತಿವೆ.

ಯೋಗಾಭ್ಯಾಸಿಗಳು ಈ ಚಕ್ರಗಳ ಜ್ಞಾನವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡಿಕೊಂಡು ಅವುಗಳನ್ನು ಲಿಂಗಸಾಧನೆಯ ಮೂಲಕ ಉತ್ತೇ ಜನಗೊಳಿಸಬೇಕು. ಈ ರೀತಿಯನ್ನು ವೀರಶೈವರು ಒಪ್ಪಿಕೊಂಡಿದ್ದಾರೆ. ಹೀಗೆ ಮಾಡಿದಲ್ಲಿ ಮನುಷ್ಯನಿಗೆ ಸಿದ್ಧಿಗಳು ಪ್ರಾಪ್ತವಾಗುವವು. ಆದರೆ ಲಿಂಗನಿಷ್ಠರಾದ ವೀರಶೈವರು ಈ ಸಿದ್ಧಿಗಳನ್ನು ಮಾಡಕೂಡದು. ಅವರು ಚಕ್ರಗಳ ಮೂಲಕ ಹರಿಯುವ ನಾನಾಬಗೆಯ ಶಕ್ತಿಗಳನ್ನು ಲಿಂಗ ಮುಖವನ್ನಾಗಿ ಮಾಡಿ ತಮ್ಮ ಕ್ರಿಯೆಗಳನ್ನು ಮಾಡತಕ್ಕದ್ದು. ಶಿವ ಯೋಗಿಗಳಿಗೂ ಇತರಯೋಗಿಗಳಿಗೂ ಇರುವ ಭೇದವು ಇದೇ ಇದೆ. ಶಿವಯೋಗಿಯು ಆಯಾ ಚಕ್ರಗಳಲ್ಲಿ ಆಯಾ ಲಿಂಗಗಳನ್ನು ಬರಮಾಡಿ ಕೊಳ್ಳತಕ್ಕದ್ದು. ಈ ರೀತಿಯನ್ನು ಅವನು ಷಟ್‌ಸ್ಥಲಾಚರಣೆ, ಅಷ್ಟಾ ವರಣಗಳು ಇವುಗಳ ಮೂಲಕ ಸಾಧಿಸತಕ್ಕದ್ದು. ಕಷ್ಟಕರವಾದ ಹಠ

ಯೋಗ ಮೊದಲಾದವುಗಳ ಮೂಲಕವಲ್ಲ. ಹೀಗೆ ಲಿಂಗಮುಖ ಮಾಡಿದಲ್ಲಿ ಆಧಾರದಲ್ಲಿ ಆಚಾರಲಿಂಗವು, ಸ್ವಾಧಿಷ್ಠಾನದಲ್ಲಿ ಗುರುಲಿಂಗವು, ಮಣಿಪೂರಕದಲ್ಲಿ ಶಿವಲಿಂಗವು, ಅನಾಹತದಲ್ಲಿ ಜಂಗಮಲಿಂಗವು, ವಿಶುದ್ಧಿಯಲ್ಲಿ ಪ್ರಸಾದಲಿಂಗವು, ಆಜ್ಞೆಯಲ್ಲಿ ಮಹಾಲಿಂಗವು ನೆಲೆಗೊಳ್ಳುತ್ತವೆ. ಬ್ರಹ್ಮರಂಧ್ರದಲ್ಲಿ ನಿಷ್ಕಲ ಲಿಂಗವು, ಶಿಖಿಯಲ್ಲಿ ನಿಶ್ಶೂನ್ಯಲಿಂಗವು, ಪಶ್ಚಿಮದಲ್ಲಿ ನಿರಂಜನಲಿಂಗವು ಪ್ರಕಟವಾಗುವವು. ಈ ಲಿಂಗಗಳ ಪ್ರಕಾಶದಿಂದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಮೊದಲಾದವುಗಳ ಕ್ರಿಯೆಗಳು ಶರೀರದಲ್ಲಿ ನಡೆಯುವವು.

ಈ ಲಿಂಗಗಳ ಸಾಧನೆಗೋಸ್ಕರ ಹಿಂದೆ ಹೇಳಿದಂತೆ ಷಟ್‌ಸ್ಥಲದ ಆಚರಣೆಯು ಮನುಷ್ಯನಿಗೆ ಅವಶ್ಯವಾದುದು. ಅದರ ಆಚರಣೆಗಳ ಮೇರೆಗೆ ಅವನು ಜಗತ್ತಿನಲ್ಲಿಯ ತನ್ನ ವ್ಯಾಪಾರಗಳನ್ನು ನಿರ್ವರ್ತಿಸತಕ್ಕದ್ದು. ಅವುಗಳಂತೆಯೇ ಅವನು ಸಾಧನೆಗಳನ್ನು ಮಾಡತಕ್ಕದ್ದು. ಈ ಸಾಧನೆಗೆ ಅಷ್ಟಾವರಣಗಳು ಸಹಾಯಕಾರಿಗಳು. ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮಗಳು ಮುಖ್ಯವಾದವುಗಳು. ಇವುಗಳ ಸಾಧನೆಯನ್ನು ಸಾಧಿಸತಕ್ಕದ್ದು. ಇವುಗಳನ್ನು ಅವನು ಅನುಕ್ರಮವಾಗಿ ಇಷ್ಟ ಪ್ರಾಣ ಭಾವಲಿಂಗಗಳ ಮೂಲಕ ತನ್ನಲ್ಲಿ ಸಾಧಿಸತಕ್ಕದ್ದು. ಇಷ್ಟಲಿಂಗದಿಂದ ಗುರುವನ್ನೂ ಪ್ರಾಣಲಿಂಗದಿಂದ ಲಿಂಗವನ್ನೂ ಭಾವಲಿಂಗದಿಂದ ಜಂಗಮವನ್ನೂ ಸಾಧಿಸತಕ್ಕದ್ದು. ಗುರುಕೊಟ್ಟದ್ದೇ ಇಷ್ಟಲಿಂಗವು ಈ ಇಷ್ಟಲಿಂಗದ ಧ್ಯಾನದಿಂದ ಹೃದಯಕಮಲದಲ್ಲಿದ್ದ ಪ್ರಾಣಲಿಂಗವು ಅರಳುತ್ತದೆ. ಈ ಹೃದಯಕಮಲದಲ್ಲಿ ಜೀವನು ವಾಸವಾಗಿರುತ್ತಾನೆ. ಅವನು ಪ್ರಾಣಲಿಂಗದೊಡನೆ ಬೆರೆಯಲು ಭಾವಲಿಂಗವು ಪ್ರಜ್ವಲಿಸಹತ್ತುತ್ತದೆ. ಇದು ಹಣೆಗಣ್ಣಿನಲ್ಲಿದೆ. ಅದು ಓಂಕಾರ ರೂಪವಾದುದು. ಅದುವೆ ಆಜ್ಞಾಚಕ್ರವು. ಈ ಭಾವಲಿಂಗದಿಂದ 'ಮುಂದೆ ಮಿದುಳಿನಲ್ಲಿ ತ್ರಿವೇಣೀ ಸಂಗಮವಿದ್ದು ಅಲ್ಲಿಗೆ ಹೋಗತಕ್ಕದ್ದು. ಅದು ಸಂಗಮ ಕ್ಷೇತ್ರವೆಂತಲೂ ಹೇಳಲ್ಪಡುತ್ತದೆ. ಅಲ್ಲಿ ಎಡಕ್ಕೆ ಬಲಕ್ಕೆ ಎರಡು ದಾರಿಗಳಿವೆ. ಅವುಗಳಲ್ಲಿ ಹೋಗದೆ ಮಧ್ಯ ಮಾರ್ಗವನ್ನು ಹಿಡಿಯಬೇಕು. ಅದು ಬಹು ಸೂಕ್ಷ್ಮವಾದುದು. ಅದು ತಲೆವಾಗಿಲವೆಂತಲೂ ಹೇಳಲ್ಪಡುವದು. ಅಲ್ಲಿಂದ ಮುಂದೆ ಹೋಗಲು ನಿಷ್ಕಲಲಿಂಗವು ತೋರುವದು. ಅದು ನಿರುಪಾಧಿಕಜ್ಯೋತಿಯು.

ನಿರಾಳ ಲಿಂಗವ. ಅದನ್ನು ಪೂಜೆಮಾಡಬೇಕು. ಅಂದರೆ ಪರಶಿವನಲ್ಲಿ ಬೆರೆಯುತ್ತಾನೆ. ಇದನ್ನು ಸಾಧಿಸುವದೇ ಶಿವಯೋಗವು.

ಈ ಸಾಧನೆಯನ್ನು ಯೋಗ್ಯ ಆಸನ, ಪ್ರಾಣಾಯಾಮ, ಮತ್ತು ಲಿಂಗಧ್ಯಾನದಿಂದ ಸಾಧಿಸಬೇಕು. ಲಿಂಗಪೂಜೆಯನ್ನು ಈ ಧ್ಯೇಯುವನ್ನಿಟ್ಟುಕೊಂಡು ಭಕ್ತನು ನಿತ್ಯ ಆಚರಿಸಬೇಕು. ಆದ್ದರಿಂದ ವೀರಶೈವನ ಲಿಂಗಪೂಜೆಯು ಆ ಶಿವಯೋಗಕ್ಕೆ ಸಾಧಕವಾಗಿದೆ.

ವೀರಶೈವರು ಈ ಪ್ರಕಾರ ಯೋಗಾಭ್ಯಾಸದ ಮುಖ್ಯ ತತ್ವಗಳನ್ನು ಸ್ವೀಕರಿಸಿದ್ದಾರೆ. ಆದರೆ ಸಾಧನೆಯಲ್ಲಿ ಹಠಯೋಗಿಗಳ ಕ್ಲೇಶಕರವಾದ ಮಾರ್ಗವನ್ನು ಅವರು ಕೈಕೊಳ್ಳುವದಿಲ್ಲ. ಅಂದರೆ ಇಂದ್ರಿಯಗಳನ್ನು ಕ್ಲೇಶಪಡಿಸಬಾರದು. ಅಥವಾ ನಿರ್ಜನ ಪ್ರದೇಶಗಳಿಗೆ ಹೋಗಬಾರದು. ನಿತ್ಯದ ತನ್ನ ಆಚರಣೆಗಳನ್ನು ಷಟ್‌ಸ್ಥಲಶಾಸ್ತ್ರದ ತತ್ವಗಳಂತೆ ಜರುಗಿಸಬೇಕು. ಈ ಷಟ್‌ಸ್ಥಲದ ಆಚರಣೆಗಳಂತೆ ನಡೆದರೆ ಚಕ್ರಗಳಲ್ಲಿ ಲಿಂಗಜ್ಯೋತಿಯು ತಾನಾಗಿಯೇ ಬೆಳಗಹತ್ತುತ್ತದೆ. ಈ ಆಚರಣೆಗಳಾವವೆಂಬುದು ವಚನಶಾಸ್ತ್ರಸಾರ ಭಾಗ ೨ ಪುಟ ೧೭೩ ರಲ್ಲಿ ಹೇಳಲ್ಪಟ್ಟಿದೆ. ಇದು 'ಶಬ್ದಕೋಶ' ಮಾತ್ರ ಇರುವದರಿಂದ ಅವುಗಳನ್ನು ಇಲ್ಲಿ ಸವಿಸ್ತಾರವಾಗಿ ನಿರೂಪಿಸುವದು ಅನಾವಶ್ಯಕವು.

ಈ ರೀತಿಯಾಗಿ ವರ್ತಿಸಿದಲ್ಲಿ ಲಿಂಗಾಂಗ ಸಾಮರಸ್ಯವು ಪ್ರಾಪ್ತವಾಗುತ್ತದೆ. ಇದರಲ್ಲಿ ಶುದ್ಧ ನೈತಿಕಾಚಾರ, ವೀರಶೈವಾಚರಣೆಗಳು, ಮಂತ್ರಗಳ ಮೂಲಕ ಧ್ಯಾನ, ಇವೇ ಮೊದಲಾದವುಗಳು ಮುಖ್ಯವಾಗಿರುತ್ತವೆ. ಇವುಗಳಿಂದ ಮನುಷ್ಯನು ಲಿಂಗ ಶರೀರಿಯಾಗುವನು.ಆಗ ಆಯಾ ಚಕ್ರಗಳಲ್ಲಿ ಲಿಂಗವು ಬೇರೆ ಬೇರೆ ರೂಪದಿಂದ ಬೆಳಗಹತ್ತುವದು. ವಿಶ್ವವೆಲ್ಲ ಲಿಂಗಮಯವಾಗಿ ತೋರಹತ್ತುವದು ಮತ್ತು ಕಡೆಗೆ ಪರಶಿವನಲ್ಲಿ ಬೆರೆಯುವನು.

ಈ ಚಕ್ರಗಳಿಗೆ ವರ್ಣಗಳಿವೆ. ಅವು ಅನುಕ್ರಮವಾಗಿ ಪೀತವರ್ಣ ಶ್ವೇತವರ್ಣ, ಹರಿತವರ್ಣ, ಮಾಂಜಿಷ್ಟವರ್ಣ, ಕಪೋತವರ್ಣ, ಮಾಣಿಕ್ಯವರ್ಣ, ಇವುಗಳಿವೆ. ಕಡೆಯ ೩ ಚಕ್ರಗಳಿಗೆ ಜ್ಯೋತಿರ್ವರ್ಣ, ಮಹಾಜ್ಯೋತಿರ್ವರ್ಣ, ಅಗಣಿತ ಮಹಾಜ್ಯೋತಿರ್ವರ್ಣ ಇವುಗಳಿವೆ.

ಈ ಚಕ್ರಗಳಿಗೆ ಅಧಿದೇವತೆಗಳಿದ್ದಾರೆ. ಅವರು ಅನುಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹೇಶ್ವರ ಇವರು ಇರುವರು. ಮತ್ತು ಕಡೆಯ ಮೂರು ಚಕ್ರಗಳಲ್ಲಿ ಪರಮೇಶ್ವರ ಸರ್ವೇಶ್ವರ ಮತ್ತು ಮಹಾದೇವ ಎಂದು ಹೇಳಲ್ಪಡುತ್ತಾರೆ.

ಈ ಚಕ್ರಗಳು ಸಾದಾಖ್ಯಗಳೆಂತಲೂ ಹೇಳಲ್ಪಡುತ್ತವೆ. ಅವು ಅನುಕ್ರಮವಾಗಿ ಕರ್ಮ, ಕರ್ತೃ, ಮೂರ್ತಿ, ಅಮೂರ್ತಿ, ಶಿವ ಮತ್ತು ಮಹಾಸಾದಾಖ್ಯಗಳು ಮತ್ತು ಕಡೆಯ ಸಾದಾಖ್ಯಗಳು ಅಗಮ್ಯ, ಅಗೋಚರ, ಅಪ್ರಮಾಣವೆಂದಿವೆ.

ಆತ್ಮನ ವಿಕಾಸವೂ ಅದರಂತೆಯೇ ಹೆಚ್ಚುತ್ತ ಹೋಗುತ್ತದೆ. ವಿಕಾಸ ಹೊಂದಿದ ಹಾಗೆ ಆತ್ಮನು ಅನುಕ್ರಮವಾಗಿ ಜೀವಾತ್ಮ, ಅಂತರಾತ್ಮ, ಪರಮಾತ್ಮ, ನಿರ್ಮಲಾತ್ಮ, ಶುದ್ಧಾತ್ಮ, ಜ್ಞಾನಾತ್ಮ, ಎಂದು ಹೇಳಲ್ಪಡುತ್ತಾನೆ. ಮತ್ತು ಕಡೆಯ ಮೂರು ಆತ್ಮನ ಸ್ಥಿತಿಗಳು ಮಹಾತ್ಮ, ದಿವ್ಯಾತ್ಮ, ಮತ್ತು ಚಿನ್ಮಯಾತ್ಮ ಎಂದು ಹೇಳಲ್ಪಡುತ್ತವೆ.

ಈ ಚಕ್ರಗಳಿಗೆ ಆಕೃತಿಗಳೂ ಉಂಟು. ಅವು ಯಾವವೆಂದರೆ ತಾರಕಾಕೃತಿ, ದಂಡಕಾಕೃತಿ, ಕುಂಡಲಾಕೃತಿ, ಅರ್ಧ ಚಂದ್ರಾಕೃತಿ, ದರ್ಪಣಾಕೃತಿ, ಜ್ಯೋತಿರಾಕೃತಿ, ಇವುಗಳಿವೆ. ಮತ್ತು ಕಡೆಯ ಚಕ್ರಗಳಿಗೆ ಅನುಕ್ರಮವಾಗಿ ನಿಷ್ಕಳಾಕೃತಿ, ನಿಶ್ಶೂನ್ಯಾಕೃತಿ, ನಿರಂಜನಾಕೃತಿ ಎಂಬ ಹೆಸರುಗಳಿವೆ.

ಕಲೆಗಳು ಇವೆ. ಅವು ಯಾವವೆಂದರೆ, ನಿವೃತ್ತಿ, ಪ್ರತಿಷ್ಠಾ, ವಿದ್ಯಾ ಶಾಂತಿ, ಶಾಂತ್ಯಾತೀತ, ಶಾಂತ್ಯಾತೀತೋತ್ತರ ಇವು ಇವೆ. ಕಡೆಯವುಗಳು ಅನುಕ್ರಮವಾಗಿ ಅನಾದಿ, ನಿರ್ವಾಯ, ಅನಿರ್ವಾಚ್ಯ ಎಂಬವುಗಳಿವೆ.

ಆಯಾ ಚಕ್ರಗಳನ್ನು ಒಳಕೊಂಡ ಹಾಗೆ ಶಿವಯೋಗಿಗೆ ನಾದಗಳು ಕೇಳಿಸುತ್ತವೆ. ಅವು ಅನುಕ್ರಮವಾಗಿ ಭ್ರಮರ, ವೇಣು, ಘಂಟಾ, ಭೇರಿ, ಮೇಘ ಮತ್ತು ಪ್ರಣವ ಇವುಗಳು ಮತ್ತು ಕಡೆಯ ಮೂರು ನಾದಗಳು ದಿವ್ಯನಾದ, ಸಿಂಹನಾದ ಮತ್ತು ಮಹಾನಾದ ಎಂದು ಇವೆ.

ಆದರೆ ಮೇಲೆ ಹೇಳಿದ ಕಲೆಗಳು, ಪ್ರಣವಾಕ್ಷರಗಳು, ಪಂಚಾಕ್ಷರಗಳು, ಚಕ್ರಗಳು, ಚಕ್ರಗಳಿಗೆ ಸಂಬಂಧಿಸಿದ ದಳಗಳು, ದಳಗಳಲ್ಲಿ

ರುವ ಅಕ್ಷರಗಳು, ವರ್ಣಗಳು, ಬೆಳಕುಗಳು, ಆಕೃತಿಗಳು, ನಾದಗಳು ಅಧಿ ದೇವತೆಗಳು, ಇವುಗಳನ್ನು ಶರೀರದಲ್ಲಿ ಹುಡುಕಲಿಕ್ಕೆ ಹೋದರೆ ಅಲ್ಲಿ ದೊರೆಯಲಾರವು. ಅಲ್ಲಿ ಬರೇ ರಕ್ತ, ಮಾಂಸ ಇವುಗಳೇ ಕಾಣ ಬರುವದು ನಿಶ್ಚಯವು. ಇವುಗಳನ್ನು ಕಾಣಲಿಕ್ಕೆ, ಮುಟ್ಟಲಿಕ್ಕೆ, ಕೇಳ ಲಿಕ್ಕೆ ಅಂತರ್ಜ್ಞಾನವೇ ಬೇಕು. ಈ ಜ್ಞಾನವು ಆತ್ಮನಿಗೆ ಸಂಬಂಧಿಸಿ ರುತ್ತದೆ. ಪ್ರಯೋಗದಿಂದ ಅಥವಾ ಅನುಭಾವದಿಂದ ಅಥವಾ ಪರಿಣಾಮ ದಿಂದ ಅವುಗಳನ್ನು ಮನುಷ್ಯನು ತಿಳಿಯಬೇಕು. ಆದರೆ ಮುಂದೆ ಹೇಳ ತಕ್ಕ ನಾಡಿಗಳು ಮತ್ತು ವಾಯುಗಳು ಇವುಗಳಿಗಿಂತಲೂ ಹೆಚ್ಚಿಗೆ ಸ್ಥೂಲವಾಗಿರುತ್ತವೆ. ಅವುಗಳ ಕ್ರಿಯೆಗಳಾದರೂ ಹೆಚ್ಚಿಗೆ ಸ್ಥೂಲತರ ವಾದವುಗಳು.

(೩೯) ನಾಡಿಗಳುः— ನಾಡಿಗಳು ದೇಹದಲ್ಲೆಲ್ಲ ಪಸರಿಸಿರುತ್ತವೆ. ಅವು ಜೀರ್ಣವಾದ ಅರಳಿಯ ಪರ್ಣದಂತೆ ಇರುತ್ತವೆಂದು ವಚನಕಾರರು ವರ್ಣಿಸುವದುಂಟು. ಅವು ಅಸಂಖ್ಯಾತವಾಗಿವೆ. ಆದರೂ ಅವುಗಳಲ್ಲಿ ಮುಖ್ಯವಾದವುಗಳು ೭೨ ಸಾವಿರ. ಅವುಗಳಲ್ಲಿ ೧೫೦೦ ನಾಡಿಗಳು ಕಾರಣ ನಾಡಿಗಳೆಂದು ಹೇಳಲ್ಪಡುತ್ತವೆ. ಅವುಗಳಲ್ಲಿ ೭೦೦ ನಾಡಿಗಳು ಮುಖ್ಯ ವಾದವುಗಳು. ಅವುಗಳಲ್ಲಿ ೧೦೦ ನಾಡಿಗಳು ಮುಖ್ಯ ನಾಡಿಗಳು. ಅವು ಗಳಲ್ಲಿ ೫೦ ನಾಡಿಗಳು ಪ್ರಧಾನವಾದವುಗಳು. ಅವುಗಳಲ್ಲಿ ೨೮ ನಾಡಿ ಗಳು ಪ್ರಯೋಜನನಾಡಿಗಳೆಂದು ಹೇಳಲ್ಪಡುತ್ತವೆ. ಅವುಗಳಲ್ಲಿ ೧೦ ನಾಡಿಗಳು ಅತ್ಯಧಿಕವಾದವುಗಳು. ಅವು ಈಡಾ, ಪಿಂಗಳ, ಸುಷುಮ್ನ ಗಾಂಧಾರಿ, ಹಸ್ತಿ ಜಿಹ್ವೆ, ಪೂಷ, ಪಯಸ್ವಿನೀ, ಲಕುಹ, ಅಲಂಬು, ಶಂಕಿನೀ ಹೀಗೆ ಇವೆ. ಇವುಗಳಲ್ಲಿ ಈಡಾ ಪಿಂಗಳ ಸುಷುಮ್ನಗಳೇ ಅತ್ಯಂತ ಬೀಜನಾಡಿಗಳೆಂದು ಭಾವಿಸಲ್ಪಟ್ಟಿರುತ್ತವೆ. ಈ ನಾಡಿಗಳ ಕ್ರಿಯೆ ಗಳು ಶರೀರದಲ್ಲಿರುವ ನರಗಳೊಳಗಿಂದ (Nerves) ನಡೆಯುತ್ತಿವೆ. ಶರೀರವು ಉಸುರಾಡಿಸುವದು, ನಿರೀಕ್ಷಿಸುವದು. ಕೇಳುವದು, ಹಸಿವೆ ಯಾಗುವದು, ಆಹಾರದಿಂದ ಅದಕ್ಕೆ ಶಾಂತಿಯಾಗುವದು ಇವು ಅತ್ಯಂ ತ ಆವಶ್ಯವಾದವುಗಳಷ್ಟೇ. ಇವು ಈ ನಾಡಿಗಳ ಮೂಲಕವೇ ಚಲನೆ ಹೊಂದುತ್ತವೆ. ಈಡಾ ಇದು ನಾಸಾಪುಟದ ಎಡಭಾಗ. ಅದು ವಾಯು ವನ್ನು ಹೊರಗೆ ಹಾಕುತ್ತದೆ. ಪಿಂಗಳ ಇದು ನಾಸಾಪುಟದ ಬಲ ಭಾಗ. ಇದು ವಾಯುವನ್ನು ಒಳಕ್ಕೆ ಎಳೆದುಕೊಳ್ಳುತ್ತಿದೆ. ಸುಷುಮ್ನವು

ಇವುಗಳಿಗೆ ಮಧ್ಯವಾಗಿದ್ದುಕೊಂಡು ತಲೆ ಮಿದುಳಿನಲ್ಲಿ ಪ್ರವೇಶಿಸುತ್ತದೆ. ಅ೯ು ವಾಯುವನ್ನು ಕುಂಭದಂತೆ ತಡೆಯುತ್ತದೆ. ಗಾಂಧಾರೀ ಇದು ಬಲದ ನೇತ್ರ. ನಿರೀಕ್ಷಣ ಕೃತ್ಯವನ್ನು ಮಾಡುತ್ತದೆ. ಹಸ್ತಿ ಜಿಹ್ವೆ ಇದು ಎಡದ ನೇತ್ರ. ನಿದ್ರಾವ್ಯಸನಕ್ಕೆ ಕಾರಣವಾಗಿದೆ. ಪೂಷ ಇದು ಬಲದ ಕರ್ಣ. ನಾದಾದಿ ಶಬ್ದಗಳನ್ನು ಕೇಳಿಸುತ್ತದೆ. ಪಯಸ್ವಿನೀ ಇದು ಎಡದ ಕರ್ಣ. ವಾದ್ಯಾದಿಗಳನ್ನು ಕೇಳಿಸುತ್ತದೆ. ಲಕುಹ ಇದು ಗುದ ದಲ್ಲಿದ್ದು ದೇಪದ ಭಾರಣೆಯನ್ನು ಹೊರುತ್ತದೆ. ಅಲಂಬು ಇದು ಮೇಢ್ರ ದಲ್ಲಿದ್ದು ಕ್ಷುಧಾದಿಗಳನ್ನು ಉಂಟು ಮಾಡುತ್ತದೆ. ಶಂಕಿನೀ ಇದು ನಾಭಿಯಲ್ಲಿದ್ದು ಕ್ಷುಧಾದಿಗಳನ್ನು ಉಪಶಮನ ಮಾಡುತ್ತದೆ. ಇವುಗ ಳಿಗೂ ಬೇರೆ ಬೇರೆ ಅಧಿದೇವತೆಗಳು ಇರುತ್ತಾರೆ. ಇವುಗಳಲ್ಲಿ ಸುಷುಮ್ನ ನಾಡಿಯ ಮಹತ್ವವು ವಿಶೇಷವಿದೆ. ಅದು ಗುದಸ್ಥಾನದಿಂದ ಬೆನ್ನೆಲು ವಿನ ನಡುವೆ ತಂತಿಯಂತೆ ಕಪಾಲ ಪರಿಯಂತರ ಉದ್ದವಾಗಿ ಇರು ತ್ತದೆ. ಇದಕ್ಕೆ ಬಲಗಡೆ ಇರುವದು ಪಿಂಗಳ ನಾಡಿ. ಅದು ಸಹ ಕಪಾಲ ಪರಿಯಂತರ ಬಂದು ಅಲ್ಲಿಂದ ಮಿದುಳಿನಲ್ಲಿ ಸೂರ್ಯ ಮಂಡ ಲವನ್ನು ವ್ಯಾಪಿಸಿಕೊಂಡು ಬಲಮೂಗಿನಿಂದ ಹೊರಟು ಹೋಗುತ್ತದೆ. ಈಡೆಯು ಸುಷುಮ್ನ ನಾಡಿಯ ಎಡಗಡೆಯಿಂದ ಮೂಲಾಧಾರದಿಂದ ಕಪಾಳಪರಿಯಂತರ ಹೋಗಿ ಮಿದುಳಿನಲ್ಲಿ ಚಂದ್ರಮಂಡಲವನ್ನು ವ್ಯಾಪಿ ಸಿರುತ್ತದೆ. ಅದರ ಮೂಲಕ ಎಡಮೂಗಿನಿಂದ ಉಸುರು ಹೊರಟು ಹೋಗುತ್ತದೆ. ಸುಷುಮ್ನ ನಾಡಿಯ ಅಗ್ನೇಯದಲ್ಲಿ ಸೂಕ್ಷ್ಮವಾದ ರಂಧ್ರ ವಿರುತ್ತದೆ. ಅದೇ ಬ್ರಹ್ಮ ರಂಧ್ರ. ಈ ಸುಷುಮ್ನ ನಾಡಿಯನ್ನು ಚೈತ ನ್ಯಗೊಳಿಸುವದರಿಂದ ಮನುಷ್ಯನ ಯೋಗ ಸಾಮರ್ಥ್ಯವು ಹೆಚ್ಚುವದು. ಆಸನ ಮತ್ತು ಪ್ರಣಾಯಾಮ ಇವುಗಳೊಡನೆ ಕೂಡಿದ ಯೋಗ ಸಾಧ ನೆಯಿಂದ ಈ ನಾಡಿಯು ಉತ್ತೇಜಿತವಾಗುವದು, ೯ ವಿಧ ಚಕ್ರಗಳಿಗೂ ಈ ನಾಡಿಗಳಿಗೂ ನಿಕಟ ಸಂಬಂಧವಿರುತ್ತದೆ. ಚಕ್ರಗಳೊಳಗಿಂದ ಹೊರ ಡುವ ಶಕ್ತಿಗಳು ಅತ್ಯಂತ ಸೂಕ್ಷ್ಮ ಸ್ಥಿತಿಯಲ್ಲಿದ್ದು ಅವು ನಾಡಿಗಳ ಮೂಲಕವೇ ಶರೀರದಲ್ಲಿ ಪ್ರಕಟವಾಗುತ್ತವೆ. ಆದ್ದರಿಂದ ಈ ನಾಡಿಗಳನ್ನು ಬಲಪಡಿಸಿ ಅವುಗಳನ್ನು ಅಂಕಿತದಲ್ಲಿಟ್ಟುಕೊಳ್ಳತಕ್ಕದ್ದು. ಇದರಿಂದ ಶರೀರದ ಬಾಹ್ಯ ಕ್ರಿಯೆಗಳೂ ಚಕ್ರಗಳೂ ಪರಸ್ಪರವಾಗಿ ಸುವ್ಯವಸ್ಥೆ ಯಿಂದ ನಡಿಯುವವು.

(೪೦) ವಾಯುಗಳುಃ— ಇವು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಮತ್ತು ನಾಗ; ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂದು ಹತ್ತು ಇವೆ. ಮೊದಲಿನ ಐದು ಪ್ರಾಣ ವಾಯುಗಳೆಂದು ಹೇಳಲ್ಪಡುತ್ತಿವೆ. ಈ ಎಲ್ಲ ವಾಯುಗಳು ಶರೀರದ ರಕ್ಷಣೆಗೋಸ್ಕರ ಆವಶ್ಯಕವಾದವುಗಳು. ಇವಿಲ್ಲದಿದ್ದರೆ ಮನುಷ್ಯನು ಮೃತನಾಗುತ್ತಾನೆ. 'ಮನುಷ್ಯನು ಉಸಿರಾಡಿಸುವದು ಶರೀರದಲ್ಲಿಯ ಕಶ್ಮಲಗಳನ್ನು ಹೊರ ದೂಡುವದು ಅನ್ನವನ್ನು ಜೀರ್ಣಿಸಿ ಅದು ಶರೀರದಲ್ಲೆಲ್ಲ ಹಂಚಿಹೋಗುವಂತೆ ಮಾಡುವದು ಇವೇ ಮೊದಲಾದ ಕಾರ್ಯಗಳು ದೇಹ ಪುಷ್ಟಿಗೆ ಅವಶ್ಯವಾದವುಗಳು. ಶರೀರದಲ್ಲಿ ಉಗಮ ಹೊಂದುವ ಆಯಾ ಶಕ್ತಿಗಳು ನಾಡಿಗಳ ಮುಖಾಂತರ ನರಗಳಲ್ಲಿ ಪಸರಿಸುತ್ತಲೂ ಮುಂದೆ ಈ ವಾಯುಗಳ ಮೂಲಕ ಶರೀರದ ಆಯಾ ಭಾಗಗಳಲ್ಲಿ ಚಲನೆಗಳನ್ನುಂಟುಮಾಡುತ್ತಲೂ ಇರುತ್ತವೆ. ಈ ವಾಯುಗಳು ಚೈತನ್ಯವನ್ನುಂಟು ಮಾಡಿದ ಕೂಡಲೆ ಮೇಲ್ಕಂಡ ಕ್ರಿಯೆಗಳು ಜರಗುತ್ತವೆ.

ಪ್ರಾಣವಾಯುವು ಎಲ್ಲ ನಾಡಿಗಳನ್ನು ಸುತ್ತಿಕೊಂಡು ಮೂಲಾಧಾರದಲ್ಲಿ ಹೊರಟು ನಾಭಿಚಕ್ರವನ್ನು ತಾಕಿ, ಈಡಾಪಿಂಗಳದಲ್ಲಿ ಹೋಗಿ ಕಪಾಳದಲ್ಲಿ ಸುತ್ತಿಕೊಂಡು ಅಲ್ಲಿಂದ ಮೂಗಿನಿಂದ ಹೊರಟು ಉಶ್ವಾಸನಿಶ್ವಾಸವನ್ನುಂಟು ಮಾಡುತ್ತಿದೆ. ಅಪಾನವಾಯುವು ಗುದಸ್ಥಾನದಲ್ಲಿದ್ದು ದೇಹದಲ್ಲಿಯ ಕಶ್ಮಲಗಳು ಹೊರಗೆಹೋಗುವಂತೆ ಮಾಡುತ್ತಿದೆ. ಮತ್ತು ಅನ್ನರಸವ್ಯಾಪ್ತಿಯನ್ನು ಮಾಡುತ್ತಿದೆ. ವ್ಯಾನವಾಯುವು ಚರ್ಮದಲ್ಲಿದ್ದು ತನ್ನ ಸೋಂಕಿದ್ದನ್ನು ಅರಿಯುವಂತೆ ಮಾಡುತ್ತಿದೆ. ಅನ್ನವನ್ನು ಭಕ್ಷಿಸುವಂತೆ ಅದು ಮಾಡಿ ೭೨ ಸಾವಿರ ನಾಡಿಗಳನ್ನು ಸಂಬಂಧಿಸಿಕೊಂಡು ಶರೀರವನ್ನು ಅನ್ನಪಾನದಿಂದ ರಕ್ಷಿಸುತ್ತದೆ. ಉದಾನವಾಯು ಕಂಠದಲ್ಲಿದ್ದು ಅನ್ನ ರಸದ ಸ್ಥಾಪನೆ ಮಾಡುತ್ತಿದೆ. ಅದು ಸ್ವಪ್ನಾವಸ್ಥೆಯನ್ನುಂಟು ಮಾಡುತ್ತಿದೆ. ಸೀನುವಂತೆ ಮಾಡುತ್ತಿದೆ. ಸಮಾನವಾಯು ನಾಭಿಯಲ್ಲಿದು ಅನ್ನರಸವನ್ನು ರೋಮನಾಳಗಳಲ್ಲಿ ಹಂಚಿಹಾಕುತ್ತಿದೆ. ನಾಗವಾಯು ದುಃಖ ಮಾಡುವದನ್ನು ಉಮ್ಮಳಿಸುವದನ್ನು ಮಾಡಿಸುತ್ತದೆ. ಕೂರ್ಮವಾಯು ಉದರಲಲಾಟದಲ್ಲಿ ಇದ್ದು ಮೋರೆಯನ್ನು ಮೇಲೆ ಕೆಳಗುಮಾಡುವದು, ಮನುಷ್ಯನು ನಗುವುದು, ಕಣ್ಣುಗಳನ್ನು ಮುಚ್ಚುವದು, ತೆರೆಯುವದು. ಆಕಳಿಕೆ ಬರುವದು ಇವುಗಳನ್ನು ಮಾಡಿಸುತ್ತಿದೆ. ಕೃಕರವಾಯು

ನಾಸಿಕಾಗ್ರದಲ್ಲಿದ್ದು ಕ್ಷುಧೆಯನ್ನು ಮಾಡಿಸಿ ಗಮನಾಗಮನವನ್ನು ಮಾಡಿಸುತ್ತಿದೆ. ದೇವದತ್ತವಾಯು ಗುಹ್ಯ ಮತ್ತು ಕಟಿಯಲ್ಲಿದ್ದು ಏಳುವದು, ಕುಳ್ಳಿರುವದು, ಮಾತನಾಡುವದು, ಸುತ್ತಿಕೊಂಡು ಬೀಳುವದು, ಹೀಗೆ ಚೈತನ್ಯವನ್ನು ಮಾಡಿಸುತ್ತದೆ. ಧನಂಜಯ ವಾಯುವು ಬ್ರಹ್ಮರಂಧ್ರದಲ್ಲಿದ್ದು ಸಮುದ್ರದಂತೆ ಘೋಷವನ್ನು ಮಾಡಿಸಿ ಮರಣ ಕಾಲದಲ್ಲಿ ಸ್ತಬ್ಧವಾಗುವದು. ಬಾಹ್ಯದಲ್ಲಿ ಈ ಕಾರ್ಯಗಳಾಗುವದು ವಾಯುಗಳಿಂದಲೇ. ಇಲ್ಲಿ ವಾಯು ಎಂದರೆ ವಾತಾವರಣದಲ್ಲಿ ನಾವು ಉಸುರಾಡಿಸುವ ವಾಯುವೆಂಬ ಅರ್ಥವಲ್ಲ. ಇವುಗಳು ಚಕ್ರಗಳೊಳಗಿಂದ ನಾಡಿಗಳಲ್ಲಿ ಹರಿಯುತ್ತಿರುವ ಚೈತನ್ಯವನ್ನು ಶರೀರದ ಆಯಾ ಭಾಗಗಳಿಗೆ ಒಯ್ಯುವ ಸಾಧನಗಳೆಂದು ಹೇಳಬಹುದು.

(೪೧) ಅವಸ್ಥೆಗಳು:— ಜಾಗ್ರತ್, ಸ್ವಪ್ನ, ಸುಷುಪ್ತಿ, ತೂರ್ಯ, ತೂರ್ಯಾತೀತ ಎಂದು ೫ ಅವಸ್ಥೆಗಳಿರುತ್ತವೆ. ಮನುಷ್ಯನ ಪ್ರಗತಿಯನ್ನು ಇವುಗಳ ಮೂಲಕ ವಿವರಿಸುವ ವಾಡಿಕೆಯುಂಟು. ಮನುಷ್ಯನಿಗೆ ಅಂತರಂಗ ಬಹಿರಂಗವೆಂಬವೆರಡು ಇರುತ್ತವೆ. ಇವುಗಳಲ್ಲಿ ಬಹಿರಂಗದ ಕ್ರಿಯೆಗಳು ಜಾಗ್ರಾವಸ್ಥೆಯನ್ನು ಸೂಚಿಸುತ್ತವೆ. ಇದು ಸ್ಥೂಲವು ಅಂತರಂಗವು ವಿಕಾಸಹೊಂದುವಾಗ ಬಾಹ್ಯಕ್ರಿಯೆಗಳ ಮೇಲಿನ ಲಕ್ಷ್ಯವು ಹೊರಟು ಹೋಗಿ ಅದು ಜಾಗ್ರತವಾಗುತ್ತದೆ. ಇದು ಸ್ವಪ್ನಾವಸ್ಥೆಯು. ಮುಂದೆ ಬಾಹ್ಯ ಕ್ರಿಯೆಗಳೂ ಅಂತರಂಗ ಕ್ರಿಯೆಗಳೂ ನಷ್ಟವಾಗಿ ಮನುಷ್ಯನು ಯಾವಾಗಲೂ ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗುತ್ತಾನೆ. ಇದು ಅತ್ಯಂತ ಉಚ್ಚತರ ಸ್ಥಿತಿಯು ಎಂದು ಹೇಳಲ್ಪಡುತ್ತದೆ. ಇದು ಸುಷುಪ್ತಾವಸ್ಥೆಯು. ಇದರಲ್ಲಿ ಮನುಷ್ಯನಿಗೆ ನಿಜ ಸುಖವು ತಲೆದೋರುತ್ತದೆ. ಆಗ ಅವನಿಗೆ ಅಂತರಂಗ ಬಹಿರಂಗವೆಂಬ ಭೇದಗಳು ಉಳಿಯುವದಿಲ್ಲ. ಇದೇ ತೂರ್ಯಾವಸ್ಥೆಯು. ಇದರ ಮುಂದೆ ಪ್ರಗತಿಯುಂಟಾದಲ್ಲಿ ಈ ಸುಖವೂ ಅಸ್ತಿತ್ವದಲ್ಲಿ ಉಳಿಯುವದಿಲ್ಲ. ಇದು ತೂರ್ಯಾತೀತಾವಸ್ಥೆಯು. ಆದರೆ ವೀರಶೈವರು ತಮ್ಮ ಪ್ರಗತಿಯನ್ನು ಈ ರೀತಿಯಾಗಿ ಭಾವಿಸುವದಿಲ್ಲ. ಮೇಲ್ಕಂಡ ಶಬ್ದಗಳು ವಚನಗಳಲ್ಲಿ ಆಗಿಂದಾಗ್ಗೆ ಬರುವದಿಲ್ಲ. ವಚನಕಾರರು ಅಂತರಂಗ ಬೇರೆ, ಬಹಿರಂಗ ಬೇರೆ ಎಂದು ಅವುಗಳಲ್ಲಿ ಭೇದ ಎಣಿಸುವದಿಲ್ಲ ಯಾಕಂದರೆ ಅಂತರಂಗದಲ್ಲಿ ಯಾವ ಶಕ್ತಿಗಳು ವಿಕಾಸ ಹೊಂದುತ್ತವೋ ಅವುಗಳ ಉಪಯೋಗವನ್ನು ಮನುಷ್ಯನು ಬಹಿ

ರಂಗದಲ್ಲಿಯೂ ಕೂಡ ಮಾಡಬೇಕೆಂದು ಅವರ ಮುಖ್ಯ ತತ್ವವಿದೆ. ಅಂದರೆ ಮನುಷ್ಯನಿಗೆ ಬಹಿರಂಗವನ್ನು ಅಂದರೆ ಬಾಹ್ಯ ಕ್ರಿಯೆಗಳನ್ನು ಬಿಡಲಿಕ್ಕೆ ಬರಲಾರದು. ಇಷ್ಟೇ ಅಲ್ಲ, ಈ ಬಹಿರಂಗದ ಕ್ರಿಯೆಗಳ ಸಹಾಯದಿಂದಲೇ ಅವನು ಅಂತರಂಗದ ಗುಣಗಳನ್ನು ಅಂದರೆ ಇಂದ್ರಿಯ, ಮನಸ್ಸು, ಬುದ್ಧಿ ಈ ಮೊದಲಾದವುಗಳನ್ನು ವಿಕಾಸವಮಾಡಿಕೊಳ್ಳತಕ್ಕದ್ದು. ಹೀಗೆ ಅಂತರಂಗ ಬಹಿರಂಗಗಳು ಪರಸ್ಪರಾವಲಂಬಿಗಳಾಗಿವೆ. ಆದ್ದರಿಂದ ಅವರು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥೆಗಳಲ್ಲಿ ಭೇದ ಮಾಡುವದಿಲ್ಲ. ತೂರ್ಯ ಎಂಬ ಶಬ್ದವನ್ನು ಅವರು 'ಲಿಂಗಸುಖ' ಎಂಬ ಭಾವದಲ್ಲಿ ಆಗಿಂದಾಗ್ಗೆ ಉಪಯೋಗಿಸುವದುಂಟು. ಇದು ವಚನಗಳಲ್ಲಿ ಬರುತ್ತದೆ. ತೂರ್ಯಾತೀತ ಈ ಶಬ್ದವನ್ನು ಅವರು ಶೂನ್ಯ ಎಂಬ ಅರ್ಥದಲ್ಲಿ ಉಪಯೋಗಿಸುವದುಂಟು. ಆದರೆ ಮನುಷ್ಯನ ವಿಕಾಸವನ್ನು ಅವರು ಮೇಲ್ಕಂಡ ಅವಸ್ಥೆ ಸೂಚಕ ಶಬ್ದಗಳಿಂದ ಹೇಳುವದಿಲ್ಲ. ಆದರೆ ಅವರು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಈ ಶಬ್ದಗಳಿಂದ ಹೇಳುವದುಂಟು. ಮೊದಲಿನ ಎರಡು ಶಬ್ದಗಳಿಂದ ಅಂದರೆ ಆಚಾರಲಿಂಗ, ಗುರುಲಿಂಗ ಇವುಗಳಿಂದ ಮನುಷ್ಯನ ಬಾಹ್ಯ ಕ್ರಿಯೆಗಳ ವಿಕಾಸತೆಯನ್ನು ಅವರು ನಿರ್ದೇಶಿಸುತ್ತಾರೆ. ಮುಂದಿನ ಎರಡು ಶಬ್ದಗಳು ಅಂದರೆ ಶಿವಲಿಂಗ, ಜಂಗಮಲಿಂಗ ಇವುಗಳಿಂದ ಮನುಷ್ಯನ ಅಂತರಂಗದ ವಿಕಾಸತೆಯನ್ನು ಹೇಳುತ್ತಾರೆ. ಮತ್ತು ಕಡೆಯ ಶಬ್ದಗಳಾದ ಪ್ರಸಾದಲಿಂಗ, ಮಹಾಲಿಂಗ ಇವುಗಳಿಂದ ಮನುಷ್ಯನ ತೂರ್ಯಾವಸ್ಥೆಯನ್ನು ಅವರು ಹೇಳುತ್ತಾರೆ. ಮತ್ತು ಈ ಲಿಂಗಗಳ ತರುವಾಯ ಶೂನ್ಯ ಲಿಂಗಗಳೆಂಬುವಿವೆ. ಇವುಗಳ ಮೂಲಕ ಅವರು ತೂರ್ಯಾತೀತಾವಸ್ಥೆಯನ್ನು ಹೇಳುತ್ತಾರೆ. ಈ ಪ್ರಕಾರ ಲಿಂಗಶಬ್ದದಿಂದ ಅವರು ಬೇರೆ ಬೇರೆ ಅವಸ್ಥೆಗಳನ್ನು ಸೂಚಿಸುತ್ತಾರೆ.

(೪೨) ಶಾಂಭವಯೋಗ:— ಶಿವನಲ್ಲಿ ಮನಸ್ಸನ್ನು ಏಕಾಗ್ರತೆಯಾಗಿರಿಸುವದೇ ಶಾಂಭವಯೋಗವೆಂದು ಹೇಳಲ್ಪಡುತ್ತದೆ. ಈ ಮನಸ್ಸು ಪರಮಾತ್ಮನಲ್ಲಿ ದೃಢಪಡಬೇಕು. ಇದೇ ಈ ಶಾಂಭವ ಯೋಗದ ಉದ್ದೇಶವಿರುತ್ತದೆ. ಆಗ ತಾನು ನಿಜವಸ್ತುವಲ್ಲ, ಆದರೆ ಶಿವನೇ ನಿಜವಸ್ತುವು ಮತ್ತು ಸತ್ಯನು ಎಂಬ ಭಾವವು ಬಲಿಯಬೇಕು. ಭಕ್ತನು ಇದರಲ್ಲಿ ಪ್ರಣಾಯಾಮವನ್ನು ಆಚರಿಸಿ ಆಸನವನ್ನು ಬಲಿದು ಏಕಾಗ್ರ

ಚಿತ್ತನಾಗಬೇಕು. ಆ ಮೇಲೆ ತನ್ನ ಕರದಲ್ಲಿಯ ಇಷ್ಟಲಿಂಗವನ್ನು ಧ್ಯಾನಿಸಬೇಕು. ಅದು ಅರುಹಿನ ಕುರುಹೆಂದು ಅವನು ಅದನ್ನು ಭಾವಿಸಬೇಕು. ಅಂದರೆ ಈ ಲಿಂಗವು ಚಿದ್ಘನಲಿಂಗವೆಂತಲೇ ಅವನು ತಿಳಿಯಬೇಕು. ಸಾಧಕನು ಹೀಗೆ ಹೃತ್‌ಕಮಲದಲ್ಲಿ ಅದನ್ನು ಸರಿಯಾಗಿ ನೆಲೆಗೊಳಿಸಬೇಕು. ಈ ಕಮಲಕ್ಕೆ ೧೨ ದಳಗಳಿವೆ. ಪೂರ್ವದಳವನ್ನೇರಲು ಗುಣಿಯಾಗಿರುವನು. ಅಗ್ನಿದಳವನ್ನೇರಲು ಹಸಿವೆಯಾಗುವದು. ದಕ್ಷಿಣದಳವನ್ನೇರಲು ಕ್ರೋಧಿಯಾಗುವನು. ನೈಋತ್ಯದಳವನ್ನೇರಲು ಅಸತ್ಯವಂತನಾಗುವನು. ವರುಣದಳವನ್ನೇರಲು ನಿದ್ರೆಗೆಯ್ಯುವನು. ವಾಯುದಳವನ್ನೇರಲು ಚಂಚಲನಾಗುವನು. ಉತ್ತರ ದಳವನ್ನೇರಲು ಧರ್ಮಿಷ್ಠನಾಗುವನು. ಈಶಾನ್ಯ ದಳವನ್ನೇರಲು ಕಾಮಾತುರನಾಗಿರುವನು. ಈ ೮ ದಳಗಳ ಮೇಲೆ ಹರಿದಾಡುವ ಜೀವನ ಸ್ಥಿತಿಯನ್ನು ತೊಲಗಿಸಿ ಅದನ್ನು ನಡುಮಧ್ಯದಲ್ಲಿ ತಂದಿರಿಸಲು ಸಂಸಾರ ರಹಿತನಾಗುವನು. ಹೀಗೆ ನೆಲೆಗೊಂಡ ಕೂಡಲೆ ಆ ಜೀವನಲ್ಲಿ ಲಿಂಗ ಕಳೆಯು ಬೆಳಗುವದು. ಅದೇ ಪ್ರಾಣಲಿಂಗವೆನಿಸುವದು. ಆ ಮೇಲೆ ಸಾಧಕನು ಅದನ್ನು ಮಸ್ತಕದಲ್ಲಿರುವ ಕಳೆಯಲ್ಲಿ ಅಂದರೆ ಭಾವಲಿಂಗದಲ್ಲಿಟ್ಟರೆ ಅದು ಶಾಂಭವಯೋಗವೆಂದೆನಿಸುವದು. ಆಗ ಅರಿವಾತನು, ಅರಿವು, ಮತ್ತು ಅರಿಯತಕ್ಕ ಪರಶಿವನು, ಇವರಲ್ಲಿ ಪರಸ್ಪರ ಐಕ್ಯತೆಯುಂಟಾಗುವದು. ಹಾಗೆಯೇ ನೆನೆವಾತನು ನೆನಹು, ಮತ್ತು ನೆನೆಯತಕ್ಕ ಶಿವನು, ಮತ್ತು ನೋಡುವಾತನು, ನೋಟ, ಮತ್ತು ನೋಡತಕ್ಕ ವಸ್ತು, ಇವೆಲ್ಲವೂ ಏಕಾಕಾರವಾಗುವವು. ಇದನ್ನು ಸಾಧಿಸಿದಲ್ಲಿ ಅದೇ ಶಾಂಭವ ಯೋಗವು.

(೪೩) ಮುದ್ರೆಗಳುಃ— ಇವು ಧ್ಯಾನ ಮುದ್ರೆ, ಖೇಚರ ಮುದ್ರೆ, ಷಣ್ಮುಖಮುದ್ರೆ, ಶಾಂಭವ ಮುದ್ರೆ ಎಂದು ನಾಲ್ಕು ಇರುತ್ತವೆ. ಇವು ಪರಮಾತ್ಮ ದರ್ಶನಕ್ಕೆ ಸಹಾಯಕಾರಿಗಳೆಂದು ಭಾವಿಸಲ್ಪಟ್ಟವೆ. ಒಬ್ಬನು ಶುಚಿಯಾಗಿ ಒಂದು ಸ್ಥಳದಲ್ಲಿ ಪದ್ಮಾಸನದಲ್ಲಿ ಕುಳಿತು ನಾಸಿಕಾಗ್ರದಲ್ಲಿ ದೃಷ್ಟಿಯನ್ನಿಟ್ಟು ಪಂಚಾಕ್ಷರೀ ಮಂತ್ರಜಪವನ್ನು ಶಿವಾರ್ಪಣ ಬುದ್ಧಿಯಿಂದ ಮಾಡುವುದು ಧ್ಯಾನಮುದ್ರೆ ಎಂದೆನಿಸುವುದು. ನಾಸಿಕಾಗ್ರದಲ್ಲಿ ನೋಡುತ್ತ ಧ್ಯಾನಾಸಕ್ತನಾದರೆ ಘಂಟೆ, ಶಂಖ, ವೇಣು, ತಾಳ ಮದ್ದಳೆ, ಭೇರಿ, ಮೇಘ ಹೀಗೆ ಅನೇಕತೆರನಾದ ನಾದಗಳು ಕೇಳಬರುವವು. ಇದರಲ್ಲಿ ಕಡೆಯನಾದವನ್ನು ಕೇಳುತ್ತಲಿರಲು ಪ್ರಣವದ

ಮಹಾಧ್ವನಿಯಾಗುವದು. ಅದರ ಅನುಸಂಧಾನವೇ ಖೇಚರಿ ಮುದ್ರೆ ಎನಿಸುವದು. ಪ್ರಾಣಾಯಾಮವನ್ನು ಮಾಡಿ ಆಸನವನ್ನು ಬಲಿದು ಸುಷುಮ್ನನಾಡಿಯ ಸಂಗಡ ಸಹಸ್ರದಳದ ಪರಿಯಂತರ ಬರಲು ಅಲ್ಲಿ ಜ್ಯೋತಿ ಸ್ವರೂಪವನ್ನು ನೋಡುವುದು ಷಣ್ಮುಖ ಮುದ್ರೆ ಎನಿಸುವದು. ಶಾಂಭವ ಮುದ್ರೆಯಲ್ಲಿ ಶುದ್ಧ ಮನಸುಳ್ಳವನಾಗಿ ನಿಶ್ಚಲ ಚಿತ್ತನಾಗಿರಲು ಕೋಟಿ ಸೂರ್ಯ ಪ್ರಕಾಶವಾಗಿ ಹೊಳೆಯುವ ಪರಮಾತ್ಮನನ್ನು ಕಾಣುತ್ತ ಇರುವನು. ಇದು ಎಲ್ಲಕ್ಕೂ ಶ್ರೇಷ್ಠವಾದುದೆಂದು ಭಾವಿಸಬೇಕು.

(೪೪) ಶಿವಯೋಗ :— ಅಷ್ಟಾಂಗ ಯೋಗದ ರೀತಿಯಾಗಿ ಈ ವಿಷಯವನ್ನು ಹೇಳುವದುಂಟು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಇವು ಯೋಗದ ಅಷ್ಟಾಂಗಗಳಾಗಿವೆ. ಆದರೆ ಶಿವಯೋಗದಲ್ಲಿ ಈ ಅಂಗಗಳಿಗೆ ವೀರ ಶೈವಾಚಾರಕ್ಕನುಗುಣವಾಗಿ ಕ್ರಿಯೆಗಳು ಹೇಳಲ್ಪಡುವದುಂಟು. ಈ ಕ್ರಿಯೆಗಳಂತೆ ಆಚರಿಸಲು ಅದು ಶಿವಯೋಗವೆಂದು ಹೇಳಲ್ಪಡುತ್ತಿದೆ. ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇವೈದನ್ನು ಬಿಟ್ಟು ಲಿಂಗಪೂಜೆಯನ್ನು ಮಾಡುವುದೇ ಯಮಯೋಗವು. ನಿರಪೇಕ್ಷನಾಗಿ ಶಿವಧರ್ಮದಿಂದ ನಡೆಯುತ್ತ ಪ್ರಣವ ಪಂಚಾಕ್ಷರಿಯ ಜಪಮಾಡುತ್ತ ಅಶುಚಿತ್ವವನ್ನು ಬಿಟ್ಟುಕೊಟ್ಟು ಪಾಪಕ್ಕೆ ಭೀತನಾಗಿ ಶಿವಲಿಂಗಾರ್ಚಕನಾಗಿರುವುದೇ ನಿಯಮ ಯೋಗವು. ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧ ಚಂದ್ರಾಸನ, ಪರ್ಯಂಕಾಸನ ಇವುಗಳಲ್ಲೊಂದನ್ನು ಸ್ವೀಕರಿಸಿ ಸ್ಥಿರಚಿತ್ತನಾಗಿ ಶಿವಲಿಂಗಾರ್ಚನೆಯನ್ನು ಮಾಡುವುದು ಆಸನಯೋಗವು. ಈಡಾ ಪಿಂಗಳದಲ್ಲಿ ಚರಿಸುವ ರೇಚಕಪೂರಕಂಗಳ ಭೇದವನ್ನು ತಿಳಿದು ಮನಪವನ ಪ್ರಾಣಗಳ ಮೇಲೆ ಲಿಂಗವನ್ನು ಸಂಬಂಧಿಸಿ ಅವುಗಳನ್ನು ಲಿಂಗಸ್ವರೂಪವನ್ನಾಗಿ ಮಾಡಿ ಹೃದಯ ಕಮಲ ಮಧ್ಯದಲ್ಲಿ ಪ್ರಣವವನ್ನುಚ್ಚರಿಸುತ್ತ ಪರಶಿವನ ಧ್ಯಾನದಲ್ಲಿರುವುದೇ ಪ್ರಾಣಾಯಾಮವಾಗಿರುವದು. ಮನುಷ್ಯನು ವಿಷಯಗಳಿಗೆ ಒಳಗಾಗದೆ ಜ್ಞಾನಿಯೂ ಧರ್ಮಿಷ್ಠನೂ ಆಗಿ ಸರ್ವೇಂದ್ರಿಯಗಳನ್ನು ಲಿಂಗಮುಖದಿಂದ ಸಾವಧಾನ ಮಾಡಿಕೊಂಡಿರುವುದು ಪ್ರತ್ಯಾಹಾರವಾಗಿರುವುದು. ಅಂತರಂಗದ ಶುದ್ಧ ಪರಮಾತ್ಮಲಿಂಗವನ್ನು ಶಿವಲಿಂಗ ಸ್ವರೂಪವನ್ನಾಗಿ ಮಾಡಿ ಕರಸ್ಥಲದ ಲಿಂಗವೇ ಪರಮಾತ್ಮ ಚಿನ್ಮಯವೆಂದರಿದು, ಅದನ್ನು ಆರು ಚಕ್ರ

ಇದನ್ನು ವಿಜಾಪುರದಲ್ಲಿ ರಾ॥ ಬ॥ ಫ. ಗು. ಹಳಕಟ್ಟಿ ಇವರು ತಮ್ಮ
"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು.
ಮತ್ತು ಆವರು ವಿಜಾಪುರದಲ್ಲಿ ಉಪಲೀಬುರಜ ಓಣಿಯಲ್ಲಿರುವ ತಮ್ಮ
೧೬೩೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ. ೩—೬—೦

ಸಂಪುಟ ೧೫ ] ಫೆಬ್ರುವರಿ ೧೯೪೧. [ ಸಂಚಿಕೆ ೫

## ವಿಷಯಾನುಕ್ರಮಣಿಕೆ

# ಶಿವಾನುಭವ.

| ವರ್ಷ ೧೫ | ಫೇಬ್ರುವರಿ ೧೯೪೧. | ಸಂಚಿಕೆ ೫ |
| --- | --- | --- |

## ಲಿಂಗಾಯತ ಸಮಾಜ ರಚನೆ.

(ಲೇಖಕರು—ಶ್ರೀಯುತ ಕಲ್ಯಾಣಪ್ಪ ಬ್ಯಾಳಿ. ಬಿ. ಎ. (ಬಿ ಟಿ.) ವಿಜಾಪುರ)

ಆಧ್ಯಾತ್ಮಿಕ ದೃಷ್ಟಿಯಿಂದ ಲಿಂಗಾಯತರೆಲ್ಲರೂ ಸರಿಸಮಾನರೆಂದೂ ಅವರಲ್ಲಿ ಹೆಚ್ಚುಕಡಿಮೆಯೆಂಬ ಜಾತಿಭೇದಗಳಿಲ್ಲವೆಂದೂ ಆಗಮಗಳೂ ಶಿವಶರಣರ ವಚನಗಳೂ ಘಂಟಾಘೋಷವಾಗಿ ಸಾರುತ್ತವೆ. ಲಿಂಗವಂತ ಸ್ತ್ರೀ ಪುರುಷಬಾಲಕರೆಲ್ಲರಿಗೂ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಿಗನುಸರಿಸಿ ನಡೆದು ಮೋಕ್ಷಪಡೆಯಲು ಸಮಾನವಾದ ಅಧಿಕಾರವಿರುತ್ತದೆ. ಲಿಂಗಧಾರಿಗಳಲ್ಲಿ ಅನ್ನಪಾನ, ಶರೀರಸಂಬಂಧಗಳು ಜಾತಿಭೇದವಿಲ್ಲದೆ ನಡೆಯಲಿಕ್ಕೆ ಶಾಸ್ತ್ರದೃಷ್ಟಿಯಿಂದ ಯಾವ ಅಭ್ಯಂತರವೂ ಕಂಡುಬರುವದಿಲ್ಲ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂದು ಹೇಳಿದಂತೆ ನಮ್ಮ ಪುರಾತನರು ಶ್ರಮವಿಭಾಗತತ್ವವನ್ನನುಸರಿಸಿ ಸಮಾಜ ರಚನೆಯನ್ನು ಮಾಡಿದ್ದರಿಂದ ಅದು ಸರ್ವಾಂಗಸುಂದರವೂ ಪರಿಪೂರ್ಣವೂ ಆಗಿದೆ. ನಮ್ಮ ಸಮಾಜದಲ್ಲಿ ಏನಾದರೂ ತಾರತಮ್ಯಗಳು ಕಂಡುಬಂದರೆ ಅವು ಗುಣ ಕರ್ಮ ಅಧಿಕಾರಗಳ ಮೂಲಕ ಉಂಟಾಗಿರುವವೇ ಹೊರತು ಜಾತಿಯಿಂದಲ್ಲವೆಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಡತಕ್ಕದ್ದು.

ವೀರಶೈವ ಮತ್ತು, ಲಿಂಗಾಯತ ಈ ಶಬ್ದಗಳ ಅರ್ಥವು ಬೇರೆ ಬೇರೆ ಯೆಂದು ತಪ್ಪುತಿಳುವಳಿಕೆಯನ್ನು ಅನೇಕರು ಮಾಡಿಕೊಂಡಿದ್ದಾರೆ. ಆದರೆ

ನನ್ನ ಅಭಿಪ್ರಾಯದಲ್ಲಿ ಅವೆರಡೂ ಒಂದೇ ಅರ್ಥದ ಪರ್ಯಾಯ ಶಬ್ದಗಳು. ವೀರಶೈವರೆಂದರೆ ಉಳಿದ ಶೈವರಂತೆ ಜಾತಿವಿಶಿಷ್ಟವಾದ ವರ್ಣಾಶ್ರಮ ಧರ್ಮಕ್ಕೆ ದಾಸರಾಗದೆ ಅದರ ವಿರುದ್ಧ ಕ್ರಾಂತಿಯನ್ನು ಮಾಡಿ ತಮ್ಮ ವ್ಯಕ್ತಿತ್ವ ವೈಶಿಷ್ಟ್ಯಗಳನ್ನು ಕಾಪಾಡಿಕೊಂಡ ವೀರರು. ಅದೇ ವೀರಶೈವರೇ ಗುಡಿಗುಂಡಾರಗಳಲ್ಲಿರುವ ಸ್ಥಾವರಲಿಂಗಗಳನ್ನು ನಿಷೇಧಿಸಿ ಶ್ರೀಗುರುವು ಕರಸ್ಥಲಕ್ಕೆ ಕರುಣಿಸಿಕೊಟ್ಟ ಇಷ್ಟಲಿಂಗದ ಹೊರತು ಬೇರೆ ದೈವವಿಲ್ಲೆಂದು ಸಾರಿ ಅದನ್ನು ತಮ್ಮ ದೇಹದ ಮೇಲೆ ಧರಿಸಿಕೊಂಡದ್ದರಿಂದ ಲಿಂಗಾಯುತರೆನಿಸಿಕೊಂಡರು. ಆದರೆ ಲಿಂಗಾಯುತ ಶಬ್ದವು ಉತ್ತರ ಕರ್ನಾಟಕದಲ್ಲಿ ಹೆಚ್ಚು ಬಳಿಕೆಯಲ್ಲಿದ್ದಂತೆಯೂ ವೀರಶೈವ ಶಬ್ದವು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಪ್ರಚಾರದಲ್ಲಿದ್ದಂತೆಯೂ ಕಂಡು ಬರುತ್ತದೆ. ಅದು ಸ್ಥಾನಿಕ ವೈಶಿಷ್ಟ್ಯವೇ ಹೊರತು ತತ್ವತಃ ಅವೆರಡು ಪರ್ಯಾಯದಿಂದ ಒಂದೇ ಅರ್ಥದ ಶಬ್ದಗಳಿರುವದರಿಂದ ಅವುಗಳಲ್ಲಿ ಭಿನ್ನತ್ವವನ್ನು ಕಲ್ಪಿಸಬಾರದು.

ಸಮಾಜರಚನೆಗನುಸರಿಸಿ ವೀರಶೈವರಲ್ಲಿ ಅರ್ಥಾತ್ ಲಿಂಗಾಯುತರಲ್ಲಿ ಕ್ರಿಯಾಭೇದದಿಂದ ಮೂರು ವಿಭಾಗಗಳು ಕಲ್ಪಿಸಲ್ಪಟ್ಟಿವೆಯೆಂದು ಶ್ರೀನಿಜಗುಣ ಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯಲ್ಲಿ ಹೇಳಿದ್ದಾರೆ. ಅವು ಯಾವವೆಂದರೆ (೧) ಸಾಮಾನ್ಯವೀರಶೈವ (೨) ವಿಶೇಷ ವೀರಶೈವ (೩) ನಿರಾಭಾರಿ ವೀರಶೈವ. ಇದೇ ವಿಭಾಗವನ್ನು ನಾವು (೧) ಭಕ್ತವರ್ಗ (೨) ಮಾಹೇಶ್ವರ ವರ್ಗ (೩) ನಿರಂಜನ ವರ್ಗವೆಂತಲೂ ಬೇರೆ ರೀತಿಯಾಗಿ ವಿಂಗಡಿಸಬಹುದು.

## ಭಕ್ತವರ್ಗ.

ಸಮಾಜಕ್ಕೆ ಅವಶ್ಯವಾಗಿರುವ ಎಲ್ಲ ತರಹದ ಕಸಬುಕಾಯಕಗಳನ್ನು ಮಾಡಿಕೊಂಡು ಸಮಾಜದ ಸಂಪತ್ತನ್ನು ಬೆಳೆಯಿಸುತ್ತ ಅಷ್ಟಾವರಣ ನಿರತರಾಗಿ ಧರ್ಮಪೋಷಣೆಯನ್ನು ಮಾಡುವವರೆಲ್ಲರೂ ಭಕ್ತರೆಂದು ಸಾಮಾನ್ಯವಾಗಿ ಹೇಳಬಹುದು. ಭಕ್ತವರ್ಗದಲ್ಲಿ ಒಕ್ಕಲಿಗ, ಬಣಜಿಗ, ಗಾಣಿಗ, ಸೆಟ್ಟಿ, ಸಾಹುಕಾರ, ಮಡಿವಳ, ಹಡಪಿಗ, ಉಪ್ಪಾರ, ಹೂಗಾರ, ಕುಂಬಾರ, ಕಂಬಾರ, ಚರ್ಮಕಾರ, ಬಡಿಗ, ಕೂಲಿಕಾರ ಮೊದಲಾದ ಕಸಬುಗಾರರೆಲ್ಲರೂ ಸಮಾವೇಶವಾಗುತ್ತಾರೆ. ಸಮಾಜದಲ್ಲಿ ಇವರಿಗೆ

ಸಾಮಾನ್ಯ ಜನರು (*Mass*) ಎಂದೆನ್ನುವ ಸಾಂಪ್ರದಾಯವುಂಟು. ಆದರೆ ಇವರು ಕಾಯಕಷ್ಟದ ಹೋರೆಗಳನ್ನು ಮಾಡುತ್ತಾರೆಂದು ತಿಳಿದು ಅವರು ಕಡಿಮೆ ಯೋಗ್ಯತೆಯುವರೆಂದೆನ್ನಲಿಕ್ಕೆ ಬರುವದಿಲ್ಲ. ಅವರು ದುಡಿದು ಕಷ್ಟಬಟ್ಟು ಮಾಹೇಶ್ವರ, ನಿರಂಜನ ವರ್ಗದವರನ್ನು ಪೋಷಿಸುವದರಿಂದ ಅವರು ಕಡಿಮೆಯೆನ್ನಲಿಕ್ಕೆ ಸರ್ವಥಾ ಬರುವದಿಲ್ಲ. ಎಲ್ಲರೂ ಕುಳಿತು ಉಣ್ಣುವರಾದರೆ ದುಡಿದು ಹಾಕುವರಾರು? ಅದು ಕಾರಣ ದುಡಿತವು ಕೀಳೆಂದು ಭಾವಿಸದೆ ಮೇಲೆಂದು (*Dignity of Labour*) ತಿಳಿದು ನಮ್ಮ ಶರಣರು "ಕಾಯಕವೇ ಕೈಲಾಸ"ವೆಂದು ಹೇಳಿದ್ದಾರೆ. ಆದ್ದರಿಂದ ಭಕ್ತರು ಸಮಾಜದಲ್ಲಿ ಪವಿತ್ರವಾದ ಮತ್ತು ಪುಣ್ಯಕರವಾದ ಕೆಲಸವನ್ನು ಮಾಡುವ ಮಹಾತ್ಮರೆಂದೇ ತಿಳಿಯುತಕ್ಕದ್ದು. ಪರೋಪಕಾರ ಮಾಡುವವರಿಗೆ ಕಡಿಮೆಯೆಂದು ತಿಳಿಯುವದು ಕೀಳುತನವಲ್ಲವೇ?

## ಮಾಹೇಶ್ವರ ವರ್ಗ

ಭಕ್ತವರ್ಗದವರು ಸಮಾಜದ ಆಚಾರ ಸಂಸ್ಕೃತಿಗಳ ಪರಿಪಾಲನೆ, ಶಿಕ್ಷಣಪ್ರಸಾರ, ವಿಧಿವಿಧಾನ ಮೊದಲಾದ ಕಾರ್ಯಗಳನ್ನು ನಡೆಯಿಸಿಕೊಂಡು ಹೋಗಲು ಸಮರ್ಥರಾದ ಕೆಲವು ಯೋಗ್ಯ ವ್ಯಕ್ತಿಗಳನ್ನು ತಮ್ಮೊಳಗೆ ಆರಿಸಿಕೊಂಡು ಅವರಿಗೆ ಮಾಹೇಶ್ವರರೆಂಬ ಬೇರೆ ಹೆಸರು ಕೊಟ್ಟು ಅವರನ್ನು ಗೌರವಿಸಹತ್ತಿದರು. ಆದರೆ ಕಾಲಾಂತರದಿಂದ ಈ ಮಾಹೇಶ್ವರ ವರ್ಗವು ತಮ್ಮದೊಂದು ಜಾತಿಯನ್ನೇ ಬೇರೆ ಕಲ್ಪಿಸಿಕೊಂಡು ಬರಹತ್ತಿತು. ಆದರೆ ಭಕ್ತರು ಮಾಡಿದ್ದರಿಂದಲೇ ಅವರು ಮಾಹೇಶ್ವರರಾದರೇ ಹೊರತು ಅವರೇನೂ ಸರ್ವಾಧಿಕಾರಿಗಳಲ್ಲ. ದೇವನಿರ್ಮಿತ ನಿರಂಕುಶ ಪ್ರಭುಗಳೂ ಅಲ್ಲ. ಪ್ರಜಾಸತ್ತಾತ್ಮಕ ರಾಜ್ಯದಲ್ಲಿ ಪ್ರಜೆಗಳು ಪ್ರೇಮದಿಂದ ಆರಿಸಿದ ಅಧ್ಯಕ್ಷರಂತೆ ಭಕ್ತರು ಪ್ರೇಮದಿಂದ ಆರಿಸಿ ಅಧಿಕಾರಕೊಟ್ಟ ಪ್ರತಿನಿಧಿಗಳೇ ಮಾಹೇಶ್ವರರು. ಮಾಹೇಶ್ವರತ್ವವು ವಂಶಪರಂಪರಾಗತವಾಗಿ ಬಂದ ಜಾತಿಯ ಸೊತ್ತಲ್ಲವೆಂಬದನ್ನು ಯಾರೂ ಮರೆಯಲಾಗದು.

ಮಾಹೇಶ್ವರರಲ್ಲಿ ಅಧಿಕಾರ ಮತ್ತು ಕಾರ್ಯಭೇದದಿಂದ ಕೆಲವು ತಾರತಮ್ಯಗಳು ಗಣಿಸಲ್ಪಟ್ಟಿವೆ. ಅವುಗಳನ್ನು ಇದರಡಿಯಲ್ಲಿ ಕ್ರಮದಿಂದ ಕೊಡಲಾಗಿದೆ.

೧. ಗುರುವರ್ಗ:— ಈ ವರ್ಗದಲ್ಲಿ ಪಂಚಾಚಾರ್ಯರು, ಪಟ್ಟದದೇವರು, ಚರಂತಿಗಳು, ಹಿರೇಮಠದವರು ಪ್ರವೇಶವಾಗುತ್ತಾರೆ. ಪಂಚಾಚಾರ್ಯರು ಉಜ್ಜಯಿನಿ, ರಂಭಾಪುರಿ, ಪರ್ವತ, ಕೇದಾರ, ಕಾಶಿಯೆಂಬ ಪಂಚಪೀಠಗಳನ್ನು ತಮ್ಮ ಕೇಂದ್ರಗಳನ್ನು ಮಾಡಿಕೊಂಡು ತಮ್ಮ ಶಾಖಾಮಠಗಳನ್ನು ಅಲ್ಲಲ್ಲಿ ಸ್ಥಾಪಿಸಿ ತಮ್ಮ ಪ್ರತಿನಿಧಿಗಳನ್ನು ಅಲ್ಲಿಗೆ ಭಕ್ತರ ಒಪ್ಪಿಗೆಯಿಂದ ನಿಯಮಿಸಿದರು. ಅವರಿಗೆ ಪಟ್ಟದ್ದೇವರೆಂಬ ಹೆಸರು. ಈ ಪಟ್ಟದ್ದೇವರು ತಮ್ಮ ಶಿಷ್ಯಮನೆತನಗಳ ಮೇಲ್ವಿಚಾರಣೆ ಮಾಡಲಿಕ್ಕೆ ತಮ್ಮ ಕೈಕೆಳಗಿನ ಅಧಿಕಾರಿಗಳಾಗಿ ಚರಂತಿಗಳನ್ನು ಅಲ್ಲಲ್ಲಿ ಕಳುಹಿಸಿಕೊಡುತ್ತಿದ್ದರು. ಹಳ್ಳಿಹಳ್ಳಿಗಳಲ್ಲಿ ಸಹ ಪಂಚಾಚಾರ್ಯರ ಸಂಬಂಧವಿರಬೇಕೆಂದು ಆಯಾಯ ಪೀಠ ಹಾಗೂ ಸೂತ್ರಗೋತ್ರಕ್ಕೊಳಪಟ್ಟ ಹಿರೇಮಠಗಳು ಸ್ಥಾಪಿಸಲ್ಪಟ್ಟವು. ಈ ಹಿರೇಮಠದವರು ಗಣಾಚಾರಿ, ಮಠಪತ್ತಿ, ಶೆಟ್ಟಿ ಮತ್ತು ಪ್ರಮುಖ ದೈವದವರನ್ನು ಕೂಡಿಕೊಂಡು ಊರೊಳಗೆ ದೀಕ್ಷೆ. ವಿವಾಹ, ಅಂತ್ಯವಿಧಿ, ಲಿಂಗಧಾರಣ, ನಾಮಕರಣ ಮೊದಲಾದ ಸಂಸ್ಕಾರಗಳನ್ನು ಮಾಡಹತ್ತಿದರು. ಮತ್ತು ಊರೊಳಗಿನ ವ್ಯಾಜ್ಯಗಳನ್ನು ಸಹ ತೀರಿಸುತ್ತಿದ್ದರು. ಈ ರೀತಿಯಾಗಿ ಗುರುವರ್ಗವು ಸಮಾಜವನ್ನು ಒಳ್ಳೇ ಬಂಧುರವಾಗಿಯೂ ಭದ್ರವಾಗಿಯೂ ಇಟ್ಟುಕೊಂಡು ಭಕ್ತರು ಧರ್ಮಭ್ರಷ್ಟರಾಗಿ ಹೋಗದಂತೆ ಜಾಗರೂಕರಾಗಿ ನಡೆದುಕೊಳ್ಳುತ್ತಿದ್ದರು.

೨. ಅಯ್ಯಗಳು:— ಮಾಹೇಶ್ವರ ವರ್ಗದಲ್ಲಿ ಅಯ್ಯನವರೆಂಬ ಇನ್ನೊಂದು ಮಹತ್ವದ ಪಂಗಡವು ಸಮಾವೇಶವಾಗಿರುತ್ತದೆ. 'ಅಯ್ಯ' ಶಬ್ದವು 'ಆರ್ಯ' ಎಂಬದರ ತದ್ಭವವು. ಅಯ್ಯಗಳೆಂದರೆ ಮನೆ ತಿರಿಸುವ ಗಣಂಗಳೆಂದು ಮಾತ್ರ ಭಾವಿಸಬಾರದು. ಅವರು ಸಮಾಜದಲ್ಲಿ ಶಿಕ್ಷಣ ಪ್ರಸಾರದ ಕೆಲಸ ಮಾಡುವ ಪವಿತ್ರವಾದ ಶಾಲಾಗುರುಗಳು. ಅವರಿಗೆ ಭಕ್ತವರ್ಗವು ಕಾಳುಕಡಿ ಬಟ್ಟೆಬರಿಗಳನ್ನು ಕೊಟ್ಟು ಪೋಷಿಸುತ್ತಿದ್ದಿತು. ಹಿಂದಕ್ಕೆ ಅಯ್ಯಗಳ ಶಾಲೆಗಳು ಒಳ್ಳೇ ಹೆಸರಾಗಿದ್ದವು. ಈಗಲೂ ಹಿಂದಿನ ಅವಶೇಷಗಳು ಅಲ್ಲಲ್ಲಿ ಕಂಡುಬರುತ್ತವೆ. ಅವರು ವ್ಯವಹಾರಕ್ಕೂ ತಮ್ಮ ಸಂಸ್ಕೃತಿಗೂ ಉಪಯುಕ್ತವಾದ ಓದು ಬರಹ ಗಣಿತ ಕಾವ್ಯ ಮತತತ್ವ ಮೊದಲಾದ ವಿಷಯಗಳನ್ನು ಚಿಕ್ಕಮಕ್ಕಳಿಗೆ ಕಲಿಸಿಕೊಡುತ್ತಿದ್ದರು. ಪುರಾಣ ಪುಣ್ಯಕಥೆಗಳನ್ನು ಭಕ್ತರಿಗೆ ಹೇಳುತ್ತಿ

ದ್ದರು. ಹಳ್ಳಿಪಳ್ಳಿಗಳಲ್ಲಿ ಈ ಅಯ್ಯಗಳು ಹರಡಿಬಿಟ್ಟಿದ್ದರಿಂದ ಲಿಂಗಾಯತರಲ್ಲಿ ನಿರಕ್ಷರತನವನ್ನು ಹೋಗಲಾಡಿಸಲು ಶಕ್ಯವಾಯಿತು. ವೀರಶೈವರಲ್ಲಿ ಅನೇಕ ಕವಿಗಳೂ, ವಚನಕಾರರೂ, ತತ್ವವೇತ್ತರೂ ಆಗಲಿಕ್ಕೆ ಈ ಅಯ್ಯಗಳು ಕಲಿಸಿದ ಅಕ್ಷರವಿದ್ಯೆಯೇ ಮುಖ್ಯ ಕಾರಣವು.

೩. ಗಣಂಗಳು:— ಮಾಹೇಶ್ವರ ವರ್ಗದಲ್ಲಿ ಗಣಂಗಳೆಂಬದೊಂದು ಶಾಖೆಯು ಅತ್ಯಂತ ಮಹತ್ವದ್ದಾಗಿರುತ್ತದೆ ಸ್ವಧರ್ಮರಕ್ಷಣೆಗಾಗಿಯೂ ಪರಧರ್ಮದವರ ಹಾವಳಿಯನ್ನು ತಗ್ಗಿಸುವದಕ್ಕಾಗಿಯೂ ಗಂಡುಗಲಿಗಳಾಗಿ ವೀರವೃತ್ತಿಯಿಂದ ಜೀವಿಸುತ್ತಿದ್ದರು. ಇವರಿಗೆ ಗಣಂಗಳೆಂಬ ಹೆಸರು. ಭಕ್ತರು ಇವರ ಸಲುವಾಗಿ ವಿವಾಹ, ಮಹೋತ್ಸವ, ಪ್ರಸ್ಥಪ್ರಯೋಜನ ಕಾಲಗಳಲ್ಲಿ ಗಣಾರಾಧನೆ ಮಾಡಿಸುತ್ತಿದ್ದರು. ಶಿವನ ಪ್ರಮಥಗಣಂಗಳು ಶಿವನ ಸೈನಿಕರಾದಂತೆ ಈ ಗಣಂಗಳು ವೀರಶೈವ ಸಮಾಜದ ಸೈನಿಕರಾಗಿದ್ದರು. ಬಸವಣ್ಣನವರ ಬಳಿಯಲ್ಲಿ ೧ ಲಕ್ಷ ೯೬ ಸಾವಿರ ಗಣಂಗಳು (Defence force) ಇದ್ದರೆಂದು ಪುರಾಣಪ್ರಸಿದ್ಧವದೆ ವೀರಶೈವ ಪಂಚಾಚಾರಗಳಲ್ಲಿ ಗಣಾಚಾರವು 'ಗಣ' ಶಬ್ದದ ವೀರವೃತ್ತಿಯನ್ನೇ ವ್ಯಕ್ತಪಡಿಸುತ್ತದೆ. ಬಿಜ್ಜಳನ ಸೈನ್ಯಕ್ಕೂ ನಮ್ಮ ಗಣಂಗಳಿಗೂ ಘೋರ ಸಂಗ್ರಾಮಗಳೆಸಗಿ ಕೊನೆಗೆ ೭೭೦ ಅಮರಗಣಂಗಳು ಉಳಿದು ಬಸವೇಶನಿದ್ದೆಡೆಗೆ ಸಾಗಬೇಕೆಂದು ಸಂಗಮದ ಕಡೆಗೆ ಹೊರಟಿರಲು ಅದಕ್ಕೆ ಸಮೀಪಿಸಿರುವ ಈಗಿನ ಅಮರಗೋಳ ಎಂಬಲ್ಲಿ ಆತನ ಐಕ್ಯದ ಸುದ್ದಿಯನ್ನು ಕೇಳಿ ಅವರೆಲ್ಲರೂ ಅಲ್ಲಿಯೇ ಐಕ್ಯರಾದ್ದರಿಂದ ಆ ಸ್ಥಳಕ್ಕೆ ಅಮರಗೋಳ ಎಂಬ ಹೆಸರು ಬಂದಿತೆಂದು ಕೆಲವರು ಹೇಳುತ್ತಾರೆ. ಬೇರೆ ಕೆಲವರು ಆ ೭೭೦ ಅಮರಗಣಂಗಳು ಚೆನ್ನಬಸವೇಶನ ಅಂಗರಕ್ಷಕರಾಗಿ ಅವನನ್ನು ಕಲ್ಯಾಣದಿಂದ ಉಳವಿಯ ವರೆಗೂ ಉಳಿಸಿಕೊಂಡು ಹೋದರೆಂತಲೂ ಹೇಳುವದುಂಟು. ಏನೇ ಇರಲಿ, ಒಟ್ಟಿನ ಮೇಲೆ ಸುಮಾರು ೨ ಲಕ್ಷ ವೀರಶೈವ ಸೈನ್ಯವು ಬಸವಣ್ಣನವರ ಕಾಲದಲ್ಲಿ ಒಳ್ಳೇ ಸುಸಂಘಟಿತವಾದ ಸುಸ್ಥಿತಿಯಲ್ಲಿತ್ತೆಂಬದು ನಿರ್ವಿವಾದವು. ಆದರೆ ಮುಂದೆ ಈ ಗಣಂಗಳ ಸಂಘಟನೆಯು ಸಡಲಿತು. ಆದರೆ ಆ ಗಣಂಗಳ ವಂಶಜರು ಈಗ ಆ ವೀರ ವೃತ್ತಿ (Martial spirit) ಯನ್ನು ಕಳೆದುಕೊಂಡು ಬಿಟ್ಟಿದ್ದಾರೆ. ವೀರಶೈವರು ಹೆಸರಿನ ಮೇಲಿಂದ ಶಿಖರದಂತೆ ಯುದ್ಧಪ್ರಿಯ ಜನಾಂಗವಿರಲೇ ಬೇಕು.

ಅಂಥ ಹುದುಗಿಕೊಂಡ ವೀರಶ್ರೀಯು ನಮ್ಮನಾಡಿನಲ್ಲಿ ಪುನಃ ಚಲನೆಯನ್ನುಂಟು ಮಾಡಬೇಕಾಗಿದೆ. ಈಗಿನ ಯುದ್ಧ ಪ್ರಸಂಗದಲ್ಲಂತೂ ವೀರಶೈವರದೊಂದು ಪ್ರತ್ಯೇಕವಾದ "ಸೈನ್ಯದಳ"ವಿರುವದು ಅತ್ಯಾವಶ್ಯಕವು.

## ನಿರಂಜನ ವರ್ಗ.

ನಿರಂಜನ ವರ್ಗದವರು ನಿರಧಿಕರಣ ದೀಕ್ಷೆಹೊಂದಿದ ಶಕ್ತಿಪಾತ ಪುನೀತ ಜೀವಾತ್ಮರು. ಅವರು ಸ್ವಯಂಸ್ಫೂರ್ತಿಯಿಂದ ಪ್ರೇರಿತರಾಗಿ ಲೋಕಸಂಗ್ರಹ ಕಾರ್ಯ ಮಾಡುವರು. ಇಂಥ ವ್ಯಕ್ತಿಗಳು ಭಕ್ತವರ್ಗದಲ್ಲಿ ಉದ್ಭವಿಸಬಹುದು. ಇಲ್ಲವೇ ಮಾಹೇಶ್ವರ ವರ್ಗದಲ್ಲಿ ಜನಿಸಬಹುದು. ಇವರು ತಮ್ಮ ಸ್ವಾನುಭವದಿಂದಲೂ ಈಶ್ವರಾನುಗ್ರಹದಿಂದಲೂ ಆಚಾರ ವಿಚಾರ ಉಚ್ಚಾರಗಳಲ್ಲಿ ಶ್ರೇಷ್ಠತರಗತಿಗೇರಿ ಭಕ್ತಮಾಹೇಶ್ವರ ವರ್ಗಗಳಿಗೆಲ್ಲ ಮಾರ್ಗದರ್ಶಿಗಳಾಗಿರುತ್ತಾರೆ. ನಿರಂಜನ ವರ್ಗದಲ್ಲಿ ವಿರಕ್ತರು ಶಿವಯೋಗಿಗಳು, ಶರಣರು, ಎಂಬ ಕ್ರಿಯಾಭೇದಗಳುಂಟು. ಇವರು ಕ್ರಮದಿಂದ ಜ್ಞಾನಮಾರ್ಗ, ಯೋಗಮಾರ್ಗ, ಕರ್ಮಮಾರ್ಗ, ಇವುಗಳ ನೆಲೆಕಲೆಗಳನ್ನರಿತು ಆಚರಿಸಿ ಸಮಾಜಕ್ಕೆ ಅದರ ರುಚಿಯನ್ನು ಹಚ್ಚಿಕೊಡುವಂಥವರಾಗಿರುತ್ತಾರೆ.

೧. ವಿರಕ್ತರುಃ— ಇವರು ಷಟ್‌ಸ್ಥಲ ತತ್ವಗಳನ್ನರಿತು ಆಚರಿಸಿ ಷಟ್‌ಸ್ಥಲ ಬ್ರಹ್ಮಿಗಳೆನಿಸಿಕೊಂಡು ವೀರಶೈವಮತತತ್ವ ಸಂವಾದ ಸಂಶೋಧನ ಕಾರ್ಯಗಳನ್ನು ಮಾಡಿ ಗ್ರಂಥಗಳನ್ನು ಪ್ರಕಟಿಸಿ ಆ ಅಧ್ಯಾತ್ಮ ಜ್ಞಾನಭಾಂಡಾರವನ್ನು ಸಮಾಜದಲ್ಲಿ ಹರಡುವಂಥವರು. ಲಗ್ನವಾದರೆ ಪ್ರಪಂಚದ ಜಂಜಾಟ ಸ್ವಾರ್ಥಗಳು ಬೆಳೆಯಬಹುದೆಂದು ತಿಳಿದು ಆಜನ್ಮ ಬ್ರಹ್ಮಚಾರಿಗಳಾಗಿ ನಿಸ್ವಾರ್ಥಬುದ್ಧಿಯಿಂದ ಇವರು ಲಿಂಗಾಂಗ ಸಾಮರಸ್ಯಜ್ಞಾನ ಪ್ರಸಾರ ಮಾಡುವ ಪವಿತ್ರಕಾರ್ಯವನ್ನು ಕೈಕೊಂಡರು. ಈ ವಿರಕ್ತಸ್ವಾಮಿಗಳು ಕನ್ನಡ ಸಂಸ್ಕೃತ ಭಾಷೆಯಲ್ಲಿ ಎಷ್ಟೋ ಕಾವ್ಯಗಳನ್ನೂ ಮತಗ್ರಂಥಗಳನ್ನೂ ತತ್ವಪದಗಳನ್ನೂ ಬರೆದು ಸಮಾಜಕ್ಕೆ ಮಹದುಪಕಾರ ಮಾಡಿದ್ದಾರೆ.

೨. ಶಿವಯೋಗಿಗಳುಃ— ಇವರು ನಿರಂತರ ಪ್ರಾಣಲಿಂಗಾನುಸಂಧಾನದಿಂದ ಸಮರಸಸುಖವನ್ನನುಭವಿಸಿ ತಮ್ಮ ಅಂತಃಕರಣದ

ಪ್ರಭಾವವನ್ನು ಸಮಾಜದಲ್ಲಿ ಹರಡಿ ಅದಕ್ಕೆ ಸುಖಶಾಂತಿಯನ್ನುಂಟು ಮಾಡುವ ಮಹಾತಪಸ್ವಿಗಳು. ಇವರು ತಮ್ಮ ಸ್ವಾರ್ಥಕ್ಕಾಗಿ ಯೋಗ ವನ್ನು ಬಳಿಸಿಕೊಳ್ಳದೆ ತಮ್ಮ ಅಂತಃಕರಣದ ಪ್ರಕಾಶ ಕಿರಣಗಳನ್ನು ಸಮಾಜದಲ್ಲಿ ಹರಡಿ ಜನತೆಯಲ್ಲಿ ದಿವ್ಯ ಚೇತನವನ್ನುಂಟು ಮಾಡು ವಂಥವರು. ಬಹಿರಂಗವಾಗಿ ಇವರ ಕಾರ್ಯವು ನಡೆಯದಿದ್ದರೂ ಅಂತ ರಂಗಿಕವಾಗಿ ಜನರ ಮನಃ ಪ್ರವೃತ್ತಿಗಳನ್ನು ಪರಿವರ್ತನ ಮಾಡಿಬಿಡು ವರು. ಇವರಿಗೆ ನಾವು ಮಾನಸಶಾಸ್ತ್ರದ ಶಕ್ತಿಮಂದಿರ (Psychic pow er houses) ಗಳೆನ್ನಬಹುದು. ಶಿವಯೋಗಿಗಳು ಯೋಗ ಮಾರ್ಗ ದವರು. ಇವರು ಜನರ ಮನೋವೃತ್ತಿಗಳನ್ನು ಮಾರ್ಪಾಟು ಮಾಡುವ ಮಹಾಮಹಿಮರು.

೩. ಶರಣರುಃ— ವಿರಕ್ತರು ಅವಿವಾಹಿತರಾಗಿದ್ದರೆ ಶರಣರು ವಿವಾ ಹಿತರಾಗಬಹುದು. ಶರಣರು "ನುಡಿದಂತೆ ನಡೆ, ಇದೇ ಜನ್ಮ ಕಡೆ" ಎಂಬ ತತ್ವದಂತೆ ಆಚರಿಸಿ ಜನತೆಗೆ ಒಳ್ಳೆ ಮಾದರಿಯನ್ನು ಹಾಕಿ ಕೊಡುವಂಥವರು. ಲೋಕಸಂಗ್ರಹ ಕಾರ್ಯವೇ ಇವರ ಕಾರ್ಯಕ್ಷೇತ್ರವು. ಇವರು ತಮ್ಮ ಆಚರಣೆಯಿಂದ ಜನತೆಗೆ ನೀತಿ ಸದಾಚಾರ ಸದ್ಭಕ್ತಿ ಗಳನ್ನು ಕಲಿಸಿಕೊಡುತ್ತಾರೆ. ಬಸವಾದಿ ಶಿವಶರಣರು ಶಿವಾನುಭವ ಮಂಟಪದಲ್ಲಿ ಉದಾತ್ತ ತತ್ವಗಳನ್ನು ಚರ್ಚಿಸಿ ಬೆಳಕಿಗೆ ತಂದರು. ಸನ್ಯಾಸಿಗಳಾಗಿ ಲೋಕಸೇವೆ ಮಾಡುವದಕ್ಕಿಂತ ಗೃಹಸ್ಥರಾಗಿ ಮಾಡು ವದಾದರೂ ಶ್ರೇಯಸ್ಕರವೆಂದು ಭಾವಿಸಿ ಜನಕಾದಿಗಳಂತೆ ಬಸವಾದಿ ಶರಣರು ಆಚರಿಸಿ ಲೋಕಪ್ರಿಯರಾದರು. ಶಿವಶರಣರೆಂದರೆ ಲೋಕ ಸಂಗ್ರಹ ಕಾರ್ಯ ಮಾಡುವ ಕರ್ಮಯೋಗಿಗಳು. ಶ್ರೀಕೃಷ್ಣನು ಅರ್ಜು ನನಿಗೆ ತಸ್ಮಾತ್ ಯೋಗೀ ಭವಾರ್ಜುನ" ಎಂದು ಶರಣರ ಕರ್ಮ ಯೋಗವನ್ನುಪದೇಶಿಸಿದ್ದಾನೆ.

ಜಂಗಮರುಃ — ಜಂಗಮರ ಕಾರ್ಯಕ್ಷೇತ್ರವಂತೂ ಕೇವಲ ನಿಃಸ್ವಾ ರ್ಥಮಯವಾಗಿರುವದು. ತಾವು ಅನೇಕ ಕಷ್ಟಗಳನ್ನನುಭವಿಸಿ ಲೋಕ ಹಿತಾರ್ಥವಾಗಿ ನಿರಂತರ ಸಂಚರಿಸಿ ಜನರಲ್ಲಿ ಸದಾಚಾರ ಸದ್ಭಕ್ತಿಗಳು ನೆಲೆಗೊಳ್ಳುವಂತೆ ಮಾಡತಕ್ಕದ್ದು. ಪ್ರಮಥರ ಮಾರ್ಗವನ್ನು ದೇಶವ ತುಂಬೆಲ್ಲ ಹರಡಿದ ಶ್ರೇಯಸ್ಸು ಜಂಗಮರಿಗೇ ಸಲ್ಲುತ್ತದೆ. ವೀರಶೈವ

ಇತಿಹಾಸದಲ್ಲಿ ಜಂಗಮರು ಮಾಡಿದ ಕಾರ್ಯವು ಚಿರಸ್ಮರಣೀಯವಾಗಿರುತ್ತದೆ. ಜಂಗಮರ ಈ ಅಪಾರ ಸೇವೆಗೆ ಮನಸೋತು ಬಸವಣ್ಣನು ಜಂಗಮಪ್ರಾಣಿಯಾದನು. ಹಿಂದಕ್ಕೆ ಜಂಗಮರು ಅವಿಶ್ರಾಂತ ಪರಿಶ್ರಮಬಟ್ಟು ದೇಶದಲ್ಲೆಲ್ಲ ಸಂಚರಿಸಿ ಲಿಂಗಾಯತ ಮತವನ್ನು ಪ್ರಸಾರ ಮಾಡಿದರು.

ಒಟ್ಟಿನ ಮೇಲೆ ಈ ಎಲ್ಲ ವರ್ಗದವರು ನಮ್ಮ ಸಮಾಜಕ್ಕೆ ಮಾಡಿದ ಸೇವೆಯು ಘನತರವಾದುದೂ ಉದಾತ್ತವಾದುದೂ ಆಗಿದೆ. ನಮ್ಮ ಸಮಾಜದಲ್ಲಿ ಉಜ್ವಲವಾದ ಭಕ್ತಿ, ಕರ್ಮ, ಜ್ಞಾನ, ಯೋಗಗಳನ್ನು ಕಾಲಕಾಲಕ್ಕೆ ಈ ವರ್ಗದವರು ಬೆಳೆಯಿಸುತ್ತ ಬಂದದ್ದು ಶ್ಲಾಘನೀಯವಾಗಿದೆ.

---

## “ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ. ”

ಲೇ:— ಶ್ರೀಗುರು ಸಿದ್ಧಸ್ವಾಮಿಗಳು ಸಂಸ್ಕೃತ ಮಹಾಪಾಠಶಾಲಾ ಶ್ರೀಸಿದ್ಧಗಂಗಾಕ್ಷೇತ್ರ.

[ವೇ॥ ಬ್ರ॥ ಶ್ರೀ॥ ತರ್ಕ, ಸಾಹಿತ್ಯ ವೇದಾಂತ ವಿದ್ವಾನ್ ಪಿ. ಚಂದ್ರಶೇಖರಭಟ್ಟರವರ, ತರ್ಕ ಶಾಸ್ತ್ರೋಪಾಧ್ಯಾಯರು ಬೆಂಗಳೂರ ಸಂಸ್ಕೃತ ಕಾಲೇಜ ಇವರು ಶ್ರೀಸಿದ್ಧಗಂಗಾ ಸಂಸ್ಕೃತ ಕಾಲೇಜಿನಲ್ಲಿ ಮಾಡಿದ ಭಾಷಣದ ಸಾರಾಂಶ]

ಪ್ರಪಂಚದಲ್ಲಿ ಅಲ್ಪಸ್ವಲ್ಪ ಜ್ಞಾನವನ್ನು ಪಡೆದು ಅವಿಚಾರತೆಯಿಂದ ಚ್ಯುತರಾದ ಮಾನವ ವ್ಯಕ್ತಿಗಳನ್ನು ಉದ್ಧಾರ ಮಾಡಲು ಅನೇಕ ದರ್ಶನಗಳೂ ಶಾಸ್ತ್ರಗಳೂ ಹೊರಟವೆ. ಈ ದರ್ಶನಗಳು ಆಸ್ತಿಕ ನಾಸ್ತಿಕವೆಂದು ಎರಡು ವಿಧವಾಗಿವೆ. ಇವುಗಳಲ್ಲಿ ಆಸ್ತಿಕ ದರ್ಶನಗಳು ಆರೆಂದೂ ನಾಸ್ತಿಕ ದರ್ಶನಗಳು ಆರೆಂದೂ ವಿಭಾಗಿಸಲ್ಪಟ್ಟಿವೆ. ನಿರ್ದಿಷ್ಟ ಧ್ಯೇಯ ಸಂಪಾದನೆ ಅಂದರೆ ಮೋಕ್ಷ ಸಂಪಾದನೆಗೆ ಸುಗಮವಾದ ಹಾದಿಯನ್ನು ತೋರುವುದೇ ಇವುಗಳ ಮುಖ್ಯ ಧ್ಯೇಯ. ಆದಕಾರಣ ಈ ದರ್ಶನಗಳಿಂದ ಹೊರಟ ಮತಗಳು ಕ್ರಮೇಣ ತಮ್ಮ ತಮ್ಮ ಮತವೇ

ಹೆಚ್ಚೆಂದು ಹೇಳುವುದಲ್ಲದೆ ಇತರ ಮತಗಳನ್ನು ಹೀಯಾಳಿಸಹತ್ತಿದವು. ಇದು ಅವಿಚಾರತೆಯ ಫಲವಲ್ಲದೆ ಜ್ಞಾನಿಗಳು ಎಂದಿಗೂ ಹೀಗೆ ಭಾವಿಸುವುದಿಲ್ಲ. ದರ್ಶನಗಳಲ್ಲಾಗಲಿ, ಶಾಸ್ತ್ರಗಳಲ್ಲಾಗಲಿ ವಿಮರ್ಶಿಸಿ ನೋಡಿದರೆ ಈ ರೀತಿ ಯಾವ ಉಚ್ಚ ನೀಚ ಭಾವನೆಗಳೂ ಕಂಡುಬರುವುದಿಲ್ಲ. ಮತಗಳು ಅನೇಕವಾದರೂ ಅವುಗಳ ಅಂತಿಮ ಧ್ಯೇಯವು ಒಂದೇ ಆಗಿರುತ್ತದೆ. ಒಂದು ನಿರ್ದಿಷ್ಟ ಸ್ಥಾನವನ್ನು ಸೇರಲು ಭಿನ್ನ ಭಿನ್ನ ಮಾರ್ಗಗಳಿದ್ದರೂ ಸೇರುವ ಸ್ಥಳವು ಒಂದೇ ಆಗಿರುತ್ತದೆ. ಇದಕ್ಕಾಗಿ ಇತರರ ಪಂಥಗಳನ್ನಳಿಯ್ಸುವುದು ತರವಲ್ಲ. ಪರಮಾತ್ಮನು ಒಬ್ಬನೇ ಆಗಿದ್ದು ಅವರವರ ಮನೋಭಾವನೆಯಂತೆ ಭಿನ್ನ ಭಿನ್ನ ರೂಪದಲ್ಲಿ ತೋರುತ್ತಾನೆಯೇ ಹೊರತು ವಸ್ತುಸ್ಥಿತಿಯಲ್ಲವನು ಭಿನ್ನನಲ್ಲ. ಉದಾಹರಣೆಯಾಗಿ ಭಿನ್ನ ಭಿನ್ನ ರಸಗಳಲ್ಲಿ ಅಭಿರುಚಿಯುಳ್ಳ ಜನರಿಗೆ ಆಯಾಯ ರಸದಿಂದ ತೃಪ್ತಿ ಎಂಬುದು ಹೇಗೆ ಒಂದಾಗಿರುತ್ತದೆಯೋ ಅಂತೆಯೇ ಅಭಿರುಚಿ ವೈವಿಧ್ಯವುಳ್ಳ ಜನರು ತಮಗಭಿಮತವಾದ ದೇವತೋಪಾಸನಾದಿಗಳಿಂದ ತೃಪ್ತರಾಗುತ್ತಾರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಮತ್ತು ವಿವಿಧ ಬಣ್ಣಗಳ ಹಸುಗಳ ಹಾಲೂ ಒಂದೇ ರೀತಿಯಾಗಿರುವಂತೆ ಪರಮಾತ್ಮನಲ್ಲಿ ಭೇದವಿಲ್ಲದಿರುವದರಿಂದ ಆಯಾಯ ಮತಾವಲಂಬಿಗಳು ತಮ್ಮ ಮತವೇ ಹೆಚ್ಚೆಂದು ಹೇಳಿಕೊಂಡರೂ ಇತರ ಮತಗಳನ್ನು ನಿಂದಿಸಬಾರದು.

ಶಕ್ತಿ ವಿಶಿಷ್ಟಾದ್ವೈತಕ್ಕೇ ಶಿವಾದ್ವೈತವೆಂತಲೂ ಹೇಳುವದುಂಟು. ಇದರಲ್ಲಿ ಮತಪ್ರಕ್ರಿಯೆಗಳನ್ನು ವಿಭಜಿಸುತ್ತಾ ಪ್ರಥಮತಃ ಪತಿ, ಪಶು, ಪಾಶ ಎಂದು ಮೂರು ವಿಭಾಗಗಳನ್ನು ಮಾಡಿರುತ್ತಾರೆ. ಇವುಗಳಲ್ಲಿ ಪತಿ ಎಂಬುವನೇ ಈಶ್ವರ. ಇವನು ಸ್ವತಂತ್ರ. ಸರ್ವನಿಯಾಮಕ, ನಿತ್ಯಮುಕ್ತ. ಅಲ್ಲದೆ ಇವನು ಉದ್ಧಾರಕ ಸಂಕಲ್ಪವುಳ್ಳವನು. ಇವನ ಸ್ವರೂಪವು ಶಕ್ತಿಯುತವಾದುದು. ಜಗತ್ತಿಗೆ ಇವನು ನಿಮಿತ್ತಕಾರಣನೂ ಉಪಾದಾನ ಕಾರಣನೂ ಹೌದು. ಈ ಶಿವನು ಶಕ್ತಿಯುತನೆನ್ನುವುದಕ್ಕೆ "ನ ಶಿವೇನ ವಿನಾ ಶಕ್ತಿಃ ನ ಚ ಶಕ್ತಿರ್ವಿನಾ ಶಿವಃ ವಾಯುರ್ಗಂಧವದನ್ಯೋನ್ಯಂ ಮರುತಾಂಬರ ಯೋರಿವ॥". ಎಂದು ಅನೇಕ ಪ್ರಮಾಣಗಳಿವೆ. ಅದ್ವೈತ ಮತರೀತ್ಯಾ ಈ ಶಕ್ತಿಯನ್ನು ಅವಿದ್ಯೆಯೆಂದರೆ ಜಗತ್ತಿನ ಸೃಷ್ಟಿಯೇ ಇಲ್ಲದಂತಾಗುತ್ತದೆ. ಇದಕ್ಕೆ ನಿದರ್ಶನವಾಗಿ ಈ ಶಕ್ತಿ

ವಿಶಿಷ್ಟಾದ್ವೈತ ಮತದಲ್ಲಿ "ಶಿವಶಕ್ತಿಗಳು ಪರಸ್ಪರ ಕೂಡಿದಲ್ಲೇ ಜಗತ್ ಸೃಷ್ಟಿ" ಎಂಬ ಉಕ್ತಿ ಇದೆ. ಇದರಿಂದ ಜಗತ್ ಸೃಷ್ಟಿಯಾಗಬೇಕಾದರೆ ಶಿವಶಕ್ತಿಗಳು ಪರಸ್ಪರ ಸಂಬಂಧಿಸಿರುತ್ತವೆಂದಾಯಿತು.

ಇಂತಹ ಜಗತ್ ಸೃಷ್ಟಿಯಲ್ಲಿ ಮೋಕ್ಷವನ್ನು ಪಡೆಯಲು ಲಿಂಗಾಂಗ ಸಾಮರಸ್ಯಜ್ಞಾನವೇ ಮುಖ್ಯವಾದ ಸಾಧನವಾಗಿರುತ್ತದೆ. ಇಲ್ಲಿ ಲಿಂಗವು ಆರು ವಿಧವಾಗಿದೆ. ಇದರಲ್ಲಿ ಮಹಾಲಿಂಗವೇ ಪರಮಾತ್ಮ (ಈಶ್ವರ). ಉಳಿದ ಐದು ಲಿಂಗಗಳು ಅವನ ರೂಪಗಳೇ ಆಗಿವೆ. ಸದ್ಯೋಜಾತಾದಿ ಐದು ಲಿಂಗಗಳನ್ನು ಬೋಧಿಸುವ ಐದು ವೇದ ಮಂತ್ರಗಳಿವೆ.

ಚರಾಚರಾತ್ಮಕವಾದ ಪ್ರಪಂಚವು ಲಯವಾದರೆ ಶಕ್ತಿಯಲ್ಲಿ ಅಡಗುವದು. ಮೇಲೆ ಹೇಳಿದ ಮೂರ್ತಿ ಭೇದಗಳಾದರೋ "ಸಾಧಕಸ್ಯತು ಮೋಕ್ಷಾರ್ಥಂ ಮೂರ್ತಿಭೇದಃ ಪ್ರಕಲ್ಪ್ಯತೆ" ಎಂಬಂತೆ ಅನೇಕಾಕಾರಗಳನ್ನು ಭಕ್ತರ ಉದ್ಧಾರಕ್ಕಾಗಿ ಧರಿಸುವದರಿಂದ ಅವು ಸಾಫಲ್ಯವನ್ನು ಹೊಂದಿವೆ. ನಿರಾಕಾರ ವಸ್ತುವು ಅದೃಶ್ಯವಾದ್ದರಿಂದ ಸಾಮಾನ್ಯರ ಮನವರಿಕೆಯಾಗುವುದಿಲ್ಲವಾದ ಪ್ರಯುಕ್ತ ಸಾಕಾರಾವತಾರಗಳನ್ನು ಹೊಂದಿರುತ್ತಾನೆ. ಶಾಸ್ತ್ರರೀತ್ಯಾ "ಆಕಾರವಾನ್ ಸ್ತ್ವಮ-ನಾಕಾರಸ್ತ್ವಮುಜ್ಞಃ" ಎಂದು ಆಕಾರವು ಅವಶ್ಯಕ.

ಅಂಗ ಎಂದರೆ ಉಪಾಸಕನು. ಹಿಂದೆ ಹೇಳಿದ ಲಿಂಗ ಈ ಅಂಗ ಇವರಿಬ್ಬರ ಸಾಮರಸ್ಯವೇ ಮೋಕ್ಷವೆಂದು ವೀರಶೈವ ದರ್ಶನಗಳಲ್ಲಿ ಕಂಠದಿಂದ ಹೇಳಲ್ಪಟ್ಟಿರುತ್ತದೆ.

### ಪಶು.

ಪಶು ಎಂದರೆ ಜೀವನೆಂದೂ ಅವನು ಸುಖದುಃಖಭಾಗಿಯಾಗಿರುವುದರಿಂದಲೂ ಅಸ್ವತಂತ್ರನಾಗಿರುವುದರಿಂದಲೂ ಪಶುವೆಂದು ಕರೆಯಲ್ಪಟ್ಟಿರುವನು. ಈ ಪಶುವನ್ನು ಶಕ್ತಿಗಿಂತ ಕಡಿಮೆಯಾಗಿಯೂ ಪಾಶಕ್ಕಿಂತ ಅಧಿಕನನ್ನಾಗಿಯೂ ಗಣಿಸುವುದರಿಂದ ಇದಕ್ಕೆ ಮಧ್ಯಮಸ್ಥಾನವು ಕೊಡಲಾಗಿದೆ. ಇತರ ಮತಸ್ಥರು ಯಾರೂ ಈ ಜೀವನನ್ನು ಪಶುವೆಂದು ಕರೆಯದಿದ್ದರೂ ವೀರಶೈವರು ಮಾತ್ರ ಜೀವನು ಕರ್ಮದಿಂದ ಸುಖದುಃಖಗಳನ್ನನುಭವಿಸುವುದರಿಂದ ಪಶುವೆಂದು ಕರೆಯುತ್ತಾರೆ. ಅಲ್ಲದೆ

ಈ ಶಕ್ತಿವಿಶಿಷ್ಟಾದ್ವೈತವನ್ನು ಮೂವತ್ತೆರಡು ತತ್ವಗಳನ್ನಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ನಿಯತಿ ಕಾಲ ಕಲಾದಿಸಪ್ತತತ್ವಗಳು ಶುದ್ಧತತ್ವಗಳು. ಮಂತ್ರೇಶ್ವರ, ಅನಂತೇಶ್ವರ, ವಿದ್ಯೇಶ್ವರ ಮುಂತಾದ ಮಹೇಶ್ವರರು ಶುದ್ಧ ಕಲೆಗಳಿಂದ ಬಂಧಿತರು. ಈ ಸಪ್ತತತ್ತ್ವಗಳನ್ನೇ ಸಗುಣ ಲಿಂಗಗಳೆಂದು ಕರೆಯುತ್ತಾರೆ. ಉಳಿದ ೨೫ ಅಶುದ್ಧತತ್ತ್ವಗಳಿಂದ ಆಕ್ರಾಂತರಾದವರನ್ನೇ ಪಶುವೆಂದು ಕರೆಯುತ್ತಾರೆ. ನಿತ್ಯಾನಿತ್ಯವಸ್ತುವಿವೇಕ, ಇಹಪರಾರ್ಥ ಫಲಭೋಗವಿರಾಗ, ಶಮಾದಿಷಟ್ಕ ಸಂಪತ್ತಿ, ಮುಮುಕ್ಷುತ್ವ, ಇವೇ ಸಾಧನ ಚತುಷ್ಟಯಗಳು. ಇತರ ಸಿದ್ಧಾಂತಗಳೂ ಈ ತತ್ವವನ್ನು ಒಪ್ಪುತ್ತವೆ. ಮೋಕ್ಷವನ್ನು ಹೊಂದಲು ಈ ಸಾಧನ ಚತುಷ್ಟಯಸಂಪನ್ನನಾದ ಸಾಧಕನೇ ಅಧಿಕಾರಿಯು. ಸರ್ವ ಶಾಸ್ತ್ರಜ್ಞರು ವಿಷಯಾದಿ ಸುಖಗಳನ್ನು ಕ್ಷಣಿಕವೆನ್ನುತ್ತಾರೆ. ತ್ರಿಕಾಲಾಬಾಧಿತವಾಗಿಯೂ ದುಃಖಸಂಮಿಶ್ರವಿಲ್ಲದೆಯೂ, ನಿತ್ಯವಾಗಿಯೂ, ನಿರಾಲಂಬವಾಗಿಯೂ ಇರುವ ಸುಖವೇ ಶ್ರೇಷ್ಠ ಸುಖವು. ಅಂತಹ ಸುಖವು ಲಭಿಸಬೇಕಾದರೆ ಮೋಕ್ಷದಿಂದಲ್ಲದೆ ಬೇರೆ ಯಾವುದರಿಂದಲೂ ಲಭಿಸಲಾರದು. ಇದನ್ನು ಹೊಂದುವುದೇ ಮನುಷ್ಯನ ಧ್ಯೇಯ.

## ಪಾಶ.

"ಪಾಶ್ಯತೇ ಇತಿ ಪಾಶಃ, ಪಾಶ್ಯತೇ ಅನೇನ ಇತಿ ವಾ ಪಾಶಃ." ಪಶುವನ್ನು ಕಟ್ಟುವದು ಪಾಶವೆಂದರ್ಥ. ಪಾಶವು ಮಲ, ಮಾಯಾ, ರೋಧನ ಶಕ್ತಿ ಎಂದೂ, ಕರ್ಮವೆಂತಲೂ ನಾಲ್ಕು ವಿಧವಾಗಿದೆ. ಮಲ, ಪಾಶವು ಅನರ್ಥ ಪರಂಪರೆಗೆ ಮೂಲಕಾರಣ. ಪೂರ್ವೋಕ್ತ ಜೀವನನ್ನು ವಿಜ್ಞಾನಕಲಾ, ಪ್ರಲಯಕಲಾ, ಸಕಲಕಲಾ ಎಂದು ಮೂರು ತೆರನಾಗಿ ವಿಭಾಗಿಸಿದ್ದಾರೆ. ಇದರಲ್ಲಿ ವಿಜ್ಞಾನಕಲಾ ಎಂಬ ಜೀವನು ಮಲಭರಿತನು ಪ್ರಲಯಕಲಾಜೀವನು ಮಲಪಾಶ ಕರ್ಮಪಾಶಗಳಿಂದ ಬಂಧಿತನು. ರೋಧನ ಶಕ್ತಿಎಂದರೆ ಇದ್ದುದನ್ನು ಮರೆಮಾಚಿ ತನ್ನನ್ನು ತೋರ್ಪಡಿಸಿಕೊಳ್ಳುವಿಕೆ. ಉದಾಹರಣೆಯಾಗಿ ರಾಹು ಗ್ರಹವು ಬೇರೆಯಾಗಿದ್ದಾಗ ಕಾಣದಿದ್ದರೂ ಚಂದ್ರಾವೃತವಾದಲ್ಲಿ ಕಾಣುವಂತೆ ಇಲ್ಲಿಯೂ ತಿಳಿಯಬಹುದು.

ಶಕ್ತಿವಿಶಿಷ್ಟಾದ್ವೈತದಲ್ಲಿರುವ ರೋಧ ಶಕ್ತಿಯನ್ನು ಅದ್ವೈತವು ಮರೆಮಾಡಿರುತ್ತದೆ. ಆದ್ದರಿಂದ ಈ ಪಾಶನಿವೃತ್ತಿಗೆ ಪ್ರಯತ್ನ ಪಡಬೇಕು.

ಇದಕ್ಕೆ ಉಪಾಸನಾತ್ರಯಗಳಾದ ಶ್ರವಣ, ಮನನ, ನಿಧಿಧ್ಯಾಸಗಳು ಅವಶ್ಯಕ.

ನಾಸ್ತಿಕರು ಕ್ಷಣಿಕವಾದ ಜ್ಞಾನೋತ್ಪತ್ತಿಯೇ ಮೋಕ್ಷವೆಂದೂ, ಜೈನರು ಸತತೋರ್ಧ್ವಗಮನವೇ ಮೋಕ್ಷವೆಂದೂ, ಹೇಳುತ್ತಾರೆ. ಇದರಲ್ಲಿ ಯಾವ ಪುರುಷಾರ್ಥವೂ ಸಾಗುವಂತಿಲ್ಲ. ಏಕವಿಂಶತಿ ದುಃಖಧ್ವಂಸವೇ ಮೋಕ್ಷವೆಂದು ನೈಯ್ಯಾಯಿಕರೂ ಅವಿದ್ಯೆಯ ನಾಶವೇ ಮೋಕ್ಷವೆಂದು ವೇದಾಂತಿಗಳೂ, ಆನಂದಾವಿರ್ಭಾವವೇ ಮೋಕ್ಷವೆಂದು ಮತ್ತೆ ಕೆಲವರೂ, ನಿರ್ಗುಣ ಬ್ರಹ್ಮಮಾತ್ರ ಶೇಷವೇ ಮೋಕ್ಷವೆಂದು ಅದ್ವೈತಿಗಳೂ, ಶಕ್ತಿವಿಶಿಷ್ಟಾದ್ವೈತವಾದಿಗಳಾದ ವೀರಶೈವರು ಶಕ್ತಿ ವಿಶಿಷ್ಟನಾದ ಶಿವನಲ್ಲಿ ಷಟ್‌ಸ್ಥಲಾಚರಣೆಯ ಮೂಲಕ ಐಕ್ಯವನ್ನೊಂದುವುದೇ ಅಂದರೆ ಜೀವನು ಶಿವನಲ್ಲಿ ಐಕ್ಯವನ್ನು ಹೊಂದುವುದು ಅರ್ಥಾತ್ ಅಂಗವು ಲಿಂಗ ದೇಹವಾಗುವುದು ಅದನ್ನೇ ಮೋಕ್ಷವೆಂದೂ ಹೇಳುವರು.

ಅದ್ವೈತಕ್ಕೂ ಶಿವಾದ್ವೈತಕ್ಕೂ ಇರುವ ಅಂತರವೇನೆಂದರೆಃ— ಅದ್ವೈತಿಗಳು ನಿರ್ಗುಣ ಬ್ರಹ್ಮನೊಬ್ಬನೇ ಎಂತಲೂ ಶಕ್ತಿ ಎಂಬುದು ಅವಿದ್ಯೆಯೆಂತಲೂ ಕರೆಯುತ್ತಾರೆ. ಅಲ್ಲದೆ ಇವರು ವಿವರ್ತವಾದಿಗಳು. ವೀರಶೈವರು ಪರಿಣಾಮವಾದಿಗಳು. ಉಪಾಸಕನಿಗೆ ಬೇಕಾದ ಸಾಧನ ಚತುಷ್ಟಯಗಳನ್ನು ಮಾತ್ರ ಎರಡೂ ಮತದವರೂ ಅಂಗೀಕರಿಸುತ್ತಾರೆ. ಹೀಗೆ ಈ ಎರಡು ಮತಗಳು ಭಿನ್ನಭಿನ್ನವಾಗಿದ್ದರೂ ಪರಸ್ಪರ ಸಂಬಂಧವಿಂದಿರುತ್ತವೆ.

ಪೂರ್ವೋಕ್ತ ಶಕ್ತಿ ವಿಶಿಷ್ಟಾದ್ವೈತ ಮತಾನುಯಾಯಿಗಳಾದ ವೀರಶೈವರಲ್ಲಿ ಲಿಂಗಧಾರಣವೆಂಬುದು ಬಹು ಮುಖ್ಯವಾದುದು. ಇದು ಅನಾದಿಯಿಂದಲೂ ನಡೆದು ಬಂದಿದೆ. ಇದು ಅನಾದಿ ಎಂಬುದಕ್ಕೆ "ದೇವ ಧಾರಣೋಭೂಯಾಸಂ" "ಅಯಂಮೇಹಸ್ತೋಭಗವಾನಯಂ ಮೇ ಹಸ್ತೋ ಭಗವತ್ತರಃ ಅಯಂಮೇವಿಶ್ವ ಭೇಷಜೋ ಯಂ ಶಿವಾಭಿಮರ್ಶನಃ" ಇತ್ಯಾದಿ ವೇದ ವಾಕ್ಯಗಳೂ ಶೃತಿಗಳೂ ಪ್ರಮಾಣಗಳಾಗಿವೆ. ಅಲ್ಲದೆ ಸರ್ವಾರ್ಥವನ್ನು ಪ್ರಕಾಶಿಸುವ ಸರ್ವಜ್ಞಕಲ್ಪವೆಂದು ಪ್ರಶಸ್ತಿಪಡೆದ ಅನಾದಿಯಾದ ವೇದದಲ್ಲಿ ಉಕ್ತವಾಗಿದೆ ಎಂದ ಮೇಲೆ ಅಲ್ಪಸ್ವಲ್ಪ ಕಾಲ ಅದೃಶ್ಯವಾಗಿದ್ದು ನಂತರ ವಿಶೇಷಾಕಾರವನ್ನು ಹೊಂದಿದ

ಮಾತ್ರದಿಂದಲೇ ನೂತನದಾದುದೆಂದು ಯಾರೂ ಪರಿಗಣಿಸಲಾಗುವು ದಿಲ್ಲ. ಆದ ಕಾರಣ ಈ ವೀರಶೈವ ಮತವು ಮತ್ತು ಅದರಲ್ಲಿನ ಆಚರಣೆಗಳು ವೇದಸಮ್ಮತವಾದುವು ಎಂಬುದಕ್ಕೆ ವೇದಾದಿ ಶೃತಿ ಸ್ಮೃತಿ ಪುರಾಣೋಪನಿಷತ್ತುಗಳನ್ನೇ ಉದಹರಿಸಿ ಹೇಳಿದರು. ಅಲ್ಲದೆ ವೀರಶೈವ ಮತವು ಅವೈದಿಕವೆಂದು ಹೇಳುವುದು ಶಾಸ್ತ್ರಪರಿಚಯವಿಲ್ಲದ ಅಜ್ಞರ ಮಾತಾಗಿದೆ.

---

# ಬಸವೇಶ್ವರನಕಿಂತಲೂ ಮೊದಲಿನ ವೀರಶೈವಧರ್ಮ.

ರಾವಬಹಾದ್ದೂರ ಪಿ. ಜಿ. ಹಳಕಟ್ಟಿ ಬಿ. ಎ ಎಲ್ ಎಲ್. ಬಿ. ವಿಜಾಪುರ.

(ಹಿಂದಿನಿಂದ ಮುಂದೆ ಸಾಗಿದ್ದು)



## ಬ್ರಹ್ಮ ವಿಷ್ಣು ಶಿವ.

ನಾವು ಹಿಂದಿನ ಸಂಚಿಕೆಯಲ್ಲಿ ಬಸವೇಶ್ವರನಕಿಂತ ಪೂರ್ವದಲ್ಲಿ ಪರಮಾತ್ಮನ ಸ್ವರೂಪದ ಬಗ್ಗೆ ಆವ ವಿಚಾರಗಳು ಶಿವಶರಣರಲ್ಲಿ ರೂಢವಾಗಿದ್ದವೆಂಬುದನ್ನು ಕುರಿತು ವಿವೇಚಿಸಿದೆವು. ದೇವರದಾಸಿಮಯ್ಯ, ಬಾಹೂರುಬೊಮ್ಮಯ್ಯ, ಮತ್ತು ಶಂಕರದಾಸಿಮಯ್ಯ ಇವರ ಚರಿತ್ರೆಗಳಿಂದ ಪರಮಾತ್ಮನು ಒಬ್ಬನೇ ಇದ್ದು ಅವನು ಸರ್ವವ್ಯಾಪಿಯಾಗಿಯೂಗಿರುತ್ತಾನೆಂಬ ಅಭಿಪ್ರಾಯವು ಅವರಲ್ಲಿದ್ದದ್ದನ್ನು ನಾವು ಉಲ್ಲೇಖಿಸಿದೆವು. ಆಕಾರರಹಿತನಾದ ಇಂಥ ಪರಮಾತ್ಮನನ್ನು ಹೇಗೆ ಪೂಜಿಸಬೇಕೆಂಬ ವಿಷಯವು ಬಹು ಮಹತ್ವದ್ದಾಗಿದೆ. ಇದು ಉಪಾಸನೆಯ ವಿಷಯವಿದ್ದು ಈ ಬಗ್ಗೆ ಹಿಂದೂ ಸಮಾಜದಲ್ಲಿ ಅನೇಕ ಬಗೆಯ ಭಿನ್ನಾಭಿಪ್ರಾಯಗಳು ಉಂಟಾಗಿರುವದು ಕಂಡುಬರುತ್ತದೆ. ವೈದಿಕ ಕಾಲದಲ್ಲಿ ಯಜ್ಞಯಾಗಾದಿಗಳು ಪ್ರಚಲಿತವಾಗಿದ್ದವು. ಉಪನಿಷತ್ಕಾಲದಲ್ಲಿಯೂ ಕೂಡ ಇದೇ ಪದ್ಧತಿಯು ಮುಂದುವರಿದ ಹಾಗೆ ತೋರುತ್ತದೆ. ಆದರೆ

ಮುಂದೆ ಬೌದ್ಧ ಜೈನ ಶೈವ ಕಾಲಗಳು ಹಿಂದುಸ್ತಾನದಲ್ಲಿ ಪ್ರಾರಂಭ ವಾದವು. ಆಗ ಬೌದ್ಧಾಲಯುಗಳೂ ಚೈತ್ಯಾಲಯುಗಳೂ ಶೈವ ದೇವಾಲಯುಗಳೂ ದೇಶದಲ್ಲೆಲ್ಲ ಪ್ರಾದುರ್ಭವಿಸಿದವು. ಇವುಗಳ ಕಾಲದಿಂದ ಮೂರ್ತಿ ಪೂಜೆಯು ಹಿಂದೂ ಸಮಾಜದಲ್ಲಿ ಪ್ರಸಾರವಾಗಹತ್ತಿತು. ಹೀಗೆ ನಾನಾವಿಧ ಉಪಾಸನೆಗಳು ದೇಶದಲ್ಲಿ ರೂಢವಾದವು.

ಇದೇ ಕಾಲದಲ್ಲಿ ಪೌರಾಣಿಕ ಯುಗವು ಉದಯವಾಗಲಾಗಿ ಬ್ರಹ್ಮ ವಿಷ್ಣು ರುದ್ರ ಈ ದೇವತೆಗಳಿಗೆ ಸಂಬಂಧಿಸಿದ ಅನೇಕ ತರದ ವರ್ಣನೆಗಳಿಂದ ಕೂಡಿದ ಪುರಾಣಗಳು ಪ್ರಚಾರಹೊಂದಿದವು. ಅವುಗಳಲ್ಲಿಯ ಚಿತ್ರವಿಚಿತ್ರ ಕಥೆಗಳು ಬಹುಜನ ಸಮಾಜದ ಮನಸ್ಸನ್ನು ಆಕರ್ಷಿಸಿದವು. ರಾಮ, ಕೃಷ್ಣ ಮೊದಲಾದ ವಿಷ್ಣುವಿನ ದಶಾವತಾರದ ಕಥೆಗಳೂ ಈಶ್ವರನ ಪಂಚವಿಂಶತಿ ಲೀಲೆಗಳೂ ದೇಶದಲ್ಲಿ ರೂಢವಾಗಹತ್ತಿದವು. ಷಣ್ಮುಖ, ವೀರಭದ್ರ, ಗಣಪತಿ, ಪಾರ್ವತಿ, ಸೀತಾ, ರಾಮ, ಕೃಷ್ಣ, ವಿಷ್ಣು, ಶಿವ ಈ ಮೊದಲಾದ ದೇವತೆಗಳ ದೇವಾಲಯುಗಳು ದೇಶದಲ್ಲಿ ಕಟ್ಟಲ್ಪಡಹತ್ತಿದವು. ಈ ದೇವತೆಗಳಲ್ಲಿ ಆವುದಾನೊಂದರ ಉಪಾಸನೆ ಮಾಡದೆ ಇದ್ದ ಒಂದು ಧರ್ಮವಾದರೂ ಈಗ ಹಿಂದೂ ಸಮಾಜದಲ್ಲಿ ದೊರೆಯುವದು ದುರ್ಲಭವಾಗಿರುತ್ತದೆ.

ಈ ಪ್ರಕಾರ ಜನರು ತಮ್ಮ ತಮ್ಮ ದೇವತೆಗಳನ್ನು ಕಲ್ಪಿಸಿಕೊಂಡು ತಮ್ಮ ಭಕ್ತಿಯ ಪ್ರಕಾರ ಉಪಾಸನೆ ಮಾಡಲು ಅವರು ಸ್ವತಂತ್ರರಿರುವರು. ಆದರೆ ಆ ದೇವತೆಗಳ ಹೆಸರಿನಿಂದ ಅವರು ತಮ್ಮ ತಮ್ಮಲ್ಲಿ ಹೋರಾಟವನ್ನೆಸಗುವ ಪರಿಸ್ಥಿತಿಯುಂಟಾಗುವದು ಮಾತ್ರ ಸಮಾಜಕ್ಕೆ ಹಾನಿಕರವಾದದ್ದು. ಬ್ರಹ್ಮ ವಿಷ್ಣು ಶಿವ ಇವರ ಹೆಸರಿನಿಂದ ಕೆಲವೊಂದು ಕಾಲದಲ್ಲಿ ಸಮಾಜದಲ್ಲಿ ವೈಮನಸ್ಸುಗಳೂ, ಹೋರಾಟಗಳೂ ನಡೆದದ್ದು ಇತಿಹಾಸದಿಂದ ತಿಳಿದುಬರುತ್ತದೆ. ಇತ್ತ ಅಜ್ಞ ಬಹು ಜನ ಸಮಾಜವಂತೂ ಮಾರಿ ಮಸಣಿ ಈ ಮೊದಲಾದ ಕ್ಷುದ್ರ ದೇವತೆಗಳ ಮೂರ್ತಿಗಳನ್ನು ಮಾಡಿಕೊಂಡು ಅವುಗಳ ಹೆಸರಿನಿಂದ ಹಿಂಸಾ ಕರ್ಮಗಳನ್ನು ಸಹ ನಡಿಸುತ್ತಿದ್ದುದು ಕಂಡುಬರುತ್ತಿದೆ. ಸಮಾಜಕ್ಕೆ ಈ ಸ್ಥಿತಿಯುಂಟಾಗುವದು ಅದರ ಧಾರ್ಮಿಕ ಅವನತಿಯನ್ನು ತೋರಿಸುತ್ತದೆ.

ಬಸವಾದಿ ಶಿವಶರಣರು ದೇವರ ಬಗ್ಗೆ ಇರುವ ಇಂಥ ವಿಚಾರಗಳನ್ನು ದೂರಮಾಡಿ ಒಬ್ಬನೇ ದೇವರಿದ್ದಾನೆ ಎಂಬ ತತ್ವವನ್ನು ಸಾರಿ

ದರು. ಅವರು ಅನೇಕ ದೇವರುಗಳ ಅಸ್ತಿತ್ವವನ್ನು ಅಲ್ಲಗಳೆದರು. ಶಿವ ಶರಣರು ಪಂಚಮುಖನಾದ ತ್ರಿನೇತ್ರವುಳ್ಳ ಶಿವನನ್ನು ಆರಾಧಿಸುವ ವರೆಂದು ಬಹು ಜನರು ಈಗಲೂ ತಿಳಿದಿದ್ದಾರೆ. ಆದರೆ ಈ ಶಿವಶರ ಣರ ಅಭಿಪ್ರಾಯುಗಳು ತೀರ ಭಿನ್ನವಾದವುಗಳೆಂಬದು ಕೆಳಗೆ ಕಾಣಿಸಿಧ ವಚನಗಳಿಂದ ಕಂಡುಬರುವದು.

"ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ. ದೇವನೊಬ್ಬನೇ ಕಾಣಿರೋ" ಎಂದು ಬಸವೇಶ್ವರನು ಹೇಳಿರುವನು. ಸ್ವತಂತ್ರ ಸಿದ್ಧಲಿಂಗೇಶ್ವರನು "ಇಬ್ಬರು ಮೂವರು ದೇವರೆಂದು ತಬ್ಬು ಬ್ಬಿಕೊಂಡು ನುಡಿಯಬೇಡ. ಒಬ್ಬನೇ ದೇವ ಕಾಣಿರಣ್ಣಾ" ಎಂದು ಹೇಳಿದ್ದಾನೆ. ಮೋಳಿಗಿ ಮಾರಯ್ಯನು "ರುದ್ರನೇ ದೇವರೆಂದು ಆರಾ ಧಿಸಿ ಶಿಲೆಯೊಳಗೆ ಹೊರಟಿಗೊಂಡು ಕೆಟ್ಟರಲ್ಲಾ ಭಕ್ತ ಜನಂಗಳು" ಎಂದು ಹೇಳಿದ್ದಾನೆ. "ಗಂಗಾಧರ ಗೌರೀಶ್ವರ ದೇವರಲ್ಲ. ಶಂಕರ ಶಶಿ ಧರ ದೇವರಲ್ಲ. ಪಂಚಮುಖ ದಶಭುಜವನುಳ್ಳ ನಂದಿವಾಹನರು ದೇವ ವರಲ್ಲ. ತ್ರಿಶೂಲ ಖಟ್ವಾಂಗಧರರು ದೇವರಲ್ಲ" ಎಂದು ಬೇರೊಬ್ಬ ವಚನಕಾರನು ಹೇಳಿದ್ದಾನೆ.

"ವೀರಭದ್ರ ಬಸವಣ್ಣ ಮಲ್ಲಿಕಾರ್ಜುನನೆಂಬ ದೈವಂಗಳಿಗೆ ನಮ್ಮ ಕುಲದೈವಂಗಳೆಂದು ಹೇಳುವವರಿಗೆ ಗುರುವಿಲ್ಲ" ಎಂದು ಚನ್ನಬಸ ವೇಶ್ವರನು ಹೇಳಿದ್ದಾನೆ "ಬೆನಕನು (ಗಣಪತಿ) ಹರನ ಮಗನೆಂಬ ಪಾತಕರು ನೀವು ಕೇಳಿರೋ. ಪಾರ್ವತಿ ಹರನ ಸತಿ ಎಂಬ ಶಿವದ್ರೋ ಹಿಗಳು ನೀವು ಕೇಳಿರೋ. ಸ್ವಾಮಿ ಕಾರ್ತಿಕ ಹರನ ಮಗನೆಂಬ ಲಿಂಗ ದ್ರೋಹಿಗಳು ನೀವು ಕೇಳಿರೋ" ಎಂದು ಇನ್ನೊಬ್ಬ ವಚನ ಕಾರನು ಬಹು ಸ್ಪಷ್ಟ ರೀತಿಯಿಂದ ಈ ವಿಷಯುವನ್ನು ಕುರಿತು ಹೇಳಿದ್ದಾನೆ.

ಈ ಉಕ್ತಿಗಳ ಮೇಲಿಂದ ಬಸವೇಶ್ವರನ ಕಾಲದಲ್ಲಿ ದೇವರ ಬಗ್ಗೆ ಯಾವ ವಿಚಾರಗಳು ಇದ್ದವೆಂಬುದು ಸ್ಪಷ್ಟವಾಗುತ್ತದೆ. ಅವರು ಬ್ರಹ್ಮ ವಿಷ್ಣು ರುದ್ರ ಈ ತ್ರಿಮೂರ್ತಿಗಳಲ್ಲಿ ಯಾವ ದೇವತೆಯನ್ನೂ ಸ್ವೀಕರಿಸಿರುವದಿಲ್ಲ. ಆದರೆ ಅವರ ಈ ವಿಚಾರಗಳು ಅವನಕಿಂತ ಮೊದ ಲಿನ ಕಾಲದಲ್ಲಿ ರೂಢವಾಗಿದ್ದವೋ ಹೇಗೆ, ಅವುಗಳಲ್ಲಿ ಮುಂದೆ ಅವ

ಬದಲಾವಣೆಗಳಾದವು ಎಂಬುದನ್ನು ವಿವೇಚಿಸುವುದು ನಮ್ಮ ಪ್ರಸ್ತುತ ಲೇಖಮಾಲೆಯ ಉದ್ದೇಶವಾಗಿರುತ್ತದೆ.

ಬಸವೇಶ್ವರನಕಿಂತ ಮೊದಲಿನ ಕಾಲವನ್ನು ಐತಿಹಾಸಿಕ ದೃಷ್ಟಿಯಿಂದ ನಿರೀಕ್ಷಿಸಿದಲ್ಲಿ ಬಸವೇಶ್ವರನ ಕಾಲಕ್ಕೆ ದೇವರ ಬಗ್ಗೆ ಇದ್ದ ಉಚ್ಚ ವಿಚಾರಗಳು ಅವನಕಿಂತ ಹಿಂದಿನ ಕಾಲದಲ್ಲಿ ಶಿವಶರಣರಲ್ಲಿ ರೂಢವಾಗಿದ್ದಿಲ್ಲೆಂದು ತೋರುತ್ತದೆ. ಈ ಕಾಲದಲ್ಲಿ ನಾವು ಹಿಂದಿನ ಸಂಚಿಕೆಯಲ್ಲಿ ಹೇಳಿದಂತೆ ಪರಮಾತ್ಮನು ವಿಶ್ವವ್ಯಾಪಿಯಾದವನೆಂಬ ಅಭಿಪ್ರಾಯಗಳಿದ್ದದ್ದು ತೋರಿಬಂದರೂ ಕೂಡ ಆಗ ಶೈವ ವೈಷ್ಣವ ಭೇದಗಳು ದೇಶದಲ್ಲಿ ಬಹು ಪ್ರಬಲವಾಗಿದ್ದವೆಂದು ಕಂಡುಬರುತ್ತದೆ. ಈ ಕಾಲದ ವೀರಶೈವ ಶರಣರು ಶೈವ ಪಕ್ಷಾಭಿಮಾನಿಗಳಾಗಿ ಹೋರಾಡಿದರೆಂದು ತಿಳಿಯುತ್ತಿದೆ. ದಕ್ಷಿಣ ದೇಶದಲ್ಲಿ ಚೋಳರಾಜರು ಶಿವೋಪಾಸನೆಗೆ ಮೆಚ್ಚಿದವರಾಗಿದ್ದರು. ಆದರೆ ಉತ್ತರ ದೇಶದಲ್ಲಿದ್ದ ಅನೇಕ ಚಾಲುಕ್ಯರಾಜರು ವಿಷ್ಣುವಿನ ಉಪಾಸಕರಾಗಿದ್ದರು. ಈ ಉಭಯ ರಾಜಮನೆತನಗಳಲ್ಲಿ ಶಿವ ವಿಷ್ಣುಗಳ ಉಪಾಸನೆಯ ಬಗ್ಗೆ ಕಲಹಗಳಿದ್ದು ವಿಷ್ಣುವಿನ ದೇವಾಲಯಗಳನ್ನು ಈಶ್ವರನ ದೇವಾಲಯಗಳನ್ನಾಗಿ ಮತ್ತು ಈಶ್ವರನ ದೇವಾಲಯಗಳನ್ನು ವಿಷ್ಣುವಿನ ದೇವಾಲಯಗಳನ್ನಾಗಿ ಮಾಡಿದ್ದು ಕಂಡುಬರುತ್ತದೆ. ಈ ಸ್ಥಿತಿಯು ಬಸವೇಶ್ವರನ ಕಾಲದ ವರೆಗೂ ಕರ್ನಾಟಕದಲ್ಲಿ ನಡೆಯಿತು.

ಆದರೆ ಬಸವೇಶ್ವರನ ಕಾಲದಲ್ಲಿ ಅಂದರೆ ಅವನು ಸ್ಥಾಪಿಸಿದ ಶಿವಾನುಭವ ಮಂಟಪದಲ್ಲಿ ಪರಮಾತ್ಮನು ಒಬ್ಬನೇ ಇದ್ದಾನೆಂತಲೂ ಯಾವ ತರದ ಮೂರ್ತಿಗಳನ್ನು ವೀರಶೈವರು ಪೂಜಿಸಬಾರದೆಂತಲೂ ನಿರ್ಧಾರವಾಯಿತು. ಶಿವ, ವಿಷ್ಣು, ಗಣಪತಿ ಈ ಮೊದಲಾದ ಯಾವ ದೇವತೆಗಳನ್ನು ಸಹ ಪೂಜಿಸದೆ ಇಷ್ಟಲಿಂಗ ಒಂದನ್ನೇ ಅವರು ಪೂಜಿಸಬೇಕೆಂಬ ವಿಚಾರಗಳು ಪ್ರಸಾರ ಮಾಡಲ್ಪಟ್ಟವು. ಇಷ್ಟೇ ಅಲ್ಲ, ಸ್ಥಾವರ ಲಿಂಗವುಳ್ಳ ಶಿವಾಲಯಗಳನ್ನು ಸಹ ಅವರು ಮನ್ನಿಸಕೂಡದೆಂದು ಸಾರಲ್ಪಟ್ಟಿತು. ಮತ್ತು ಈ ಅಭಿಪ್ರಾಯವನ್ನು ಒಳಕೊಳ್ಳುವ ಅಸಂಖ್ಯ ವಚನಗಳು ರಚಿಸಲ್ಪಟ್ಟವು. ಈ ಅಭಿಪ್ರಾಯಗಳು ಬಸವೇಶ್ವರನ ತರುವಾಯ ಅವನಿಗೆ ಸಮೀಪವಿರುವ ಕಾಲದಲ್ಲಿ ಅನೇಕ ವಚನಕಾರರಿಂದ ಪ್ರತಿಪಾದಿಸಲ್ಪಟ್ಟಿರುತ್ತವೆ.

ಆದರೆ ಷಟ್‌ಸ್ಥಲಶಾಸ್ತ್ರದ ತತ್ವಗಳ ಬಗ್ಗೆ ವಿವೇಚನೆಗಳು ಬಸವೇಶ್ವರನ ತರುವಾಯ ಅನೇಕ ವರ್ಷಗಳ ವರೆಗೆ ಬಹು ಪ್ರಬಲವಾಗಿ ನಡೆದಂತೆ ನಮಗೆ ತೋರುತ್ತದೆ. ಈ ಕಾಲವು ಸುಮಾರು ೫೦ ರಿಂದ ೧೦೦, ೧೫೦ ವರ್ಷಗಳ ವರೆಗೂ ನಡೆದಿರಲಿಕ್ಕೆಬೇಕು. ಆಗ ಈ ವಿಷಯದ ಬಗ್ಗೆ ಅಸಂಖ್ಯ ಗ್ರಂಥಗಳೂ ವಚನಗಳೂ ರಚಿಸಲ್ಪಟ್ಟವು. ಅವುಗಳಲ್ಲಿ ಮಾತ್ರ ವಿಷ್ಣು, ಬ್ರಹ್ಮ, ರುದ್ರ ಇವರ ವಿಚಾರಗಳ ಬಗ್ಗೆ ಕೆಲವು ಮಾರ್ಪಾಡುಗಳು ಆದದ್ದು ನಮ್ಮ ದೃಷ್ಟಿಗೆ ಬೀಳುತ್ತದೆ. ಸೃಷ್ಟಿಯ ರಚನೆಯ ಕಾರ್ಯದಲ್ಲಿ ಬ್ರಹ್ಮ ವಿಷ್ಣು ರುದ್ರರಿಗೆ ಕೆಲವೊಂದು ಸ್ಥಾನವು ಅವರಿಂದ ಈ ಕಾಲದಲ್ಲಿ ಕೊಡಲ್ಪಟ್ಟಿತು. ಉದಾ:— ಸಾದಾಖ್ಯಗಳಲ್ಲಿ ಈ ತ್ರಿಮೂರ್ತಿಗಳಿಗೆ ಸ್ಥಾನವು ಕಲ್ಪಿಸಿಕೊಡಲ್ಪಟ್ಟಿರುತ್ತದೆ. ಇಷ್ಟೇ ಅಲ್ಲ, ಅಲ್ಲಿ ಸರಸ್ವತಿ ಲಕ್ಷ್ಮೀ ಮತ್ತು ಪಾರ್ವತೀ ಇವರು ಒಂದು ವಿಧದ ಶಕ್ತಿಗಳು ಎಂದು ಭಾವಿಸಿ ಅವರು ಈ ಸಾದಾಖ್ಯಗಳಲ್ಲಿ ಉಲ್ಲೇಖಿಸಲ್ಪಟ್ಟಿರುತ್ತಾರೆ. ಈ ಪ್ರಕಾರ ಪರಮಾತ್ಮನು ಒಬ್ಬನೇ ಇದ್ದಾನೆಂಬ ಮೊದಲಿನ ವಿಚಾರಗಳಲ್ಲಿ ಒಂದು ಬಗೆಯ ಮಾರ್ಪಾಡುಗಳು ಈ ಕಾಲಕ್ಕೆ ಉಂಟಾಗಿರುತ್ತವೆ. ಇವಾದರೂ ಆಯಾ ಸಮಾಜಗಳಲ್ಲಿ ಸಮಾಧಾನವನ್ನುಂಟುಮಾಡುವಂಥ ಶ್ರೇಷ್ಠ ತರದ ವಿಚಾರಗಳೆಂತಲೇ ನಾವು ಭಾವಿಸಬೇಕು.

ಆದರೆ ಬಸವೇಶ್ವರನ ತರುವಾಯ ಸುಮಾರು ೧೦೦—೧೫೦ ವರ್ಷಗಳು ಸಂದಿ ಹೋದಬಳಿಕ ಹೊಸ ವಿಚಾರಗಳು ತಲೆದೋರಹತ್ತಿದವು. ಬಸವೇಶ್ವರನ ಕಾಲಕ್ಕೆ ಉಂಟಾಗಿದ್ದ ವಚನಗಳ ಅಭ್ಯಾಸವು ಮುಂದೆ ಕ್ರಮೇಣ ಕಡಿಮೆಯಾಗಹತ್ತಿತು. ಆಗ ಅವನ ಮತ್ತು ಅವನ ಜೋಡಿಗರಾದ ವಚನಕಾರರ ಉದಾತ್ತ ವಿಚಾರಗಳು ಮರೆತು ಹೋಗಹತ್ತಿದವು. ಜಾತಿ ಭೇದವು ಹೆಚ್ಚು ಹೆಚ್ಚಿಗೆ ರೂಢವಾಗಹತ್ತಿತು. ಅನೇಕ ದೇವತೆಗಳ ಪೂಜೆಯು ಸಮಾಜದಲ್ಲಿ ರೂಢವಾಯಿತು. ಪುರಾತನ ಶಿವಶರಣರ ಚರಿತ್ರೆಗಳಲ್ಲಿ ಬದಲಾವಣೆಗಳು ಮಾಡಲ್ಪಡಹತ್ತಿದವು. ಮತ್ತು ಅವರ ಬಗ್ಗೆ ಅನೇಕ ತರದ ಕಲ್ಪಿತ ಪುರಾಣಗಳು ಬರೆಯಲ್ಪಡಹತ್ತಿದವು. ಆಗ ಶಿವ, ವಿಷ್ಣು ಎಂಬ ಭೇದಗಳು ಪುನಃ ಉದ್ಭವಿಸಿದವು. ಶಿವನ ಲೀಲೆಗಳನ್ನು ವರ್ಣಿಸುವ ಗ್ರಂಥಗಳು ಹೆಚ್ಚಾಗಹತ್ತಿದವು. ವೀರಶೈವರಲ್ಲಿ ಪ್ರಸಿದ್ಧಿಗೆ ಬಂದ ಚನ್ನಬಸವ ಪುರಾಣವು ಬರೇ ಶಿವನ ಲೀಲೆಗಳನ್ನು ವರ್ಣಿಸುವ ಗ್ರಂಥವಿದೆ.

ಆದರೆ ಇಂಥ ವಿಚಾರಗಳು ವೀರಶೈವ ಮತಕ್ಕೆ ಸಂಬಂಧಪಟ್ಟವಾದವುಗಳಲ್ಲ. ಶಿವಶರಣರ ವಚನಗಳ ಅಭ್ಯಾಸವು ಮತ್ತು ಅವುಗಳಂತೆ ಆಚರಣೆಗಳು ಸಮಾಜದಲ್ಲಿ ಕಡಿಮೆಯಾದದ್ದೇ ಈ ಸ್ಥಿತಿಗೆ ಮುಖ್ಯ ಕಾರಣಗಳಾಗಿದೆ.

ಈ ಪ್ರಕಾರ ನಾವು ಈ ವಿಷಯದಲ್ಲಿ ನಾಲ್ಕು ವಿಭಾಗಗಳನ್ನು ಮಾಡುತ್ತೇವೆ. (೧) ಬಸವೇಶ್ವರನ ಪೂರ್ವದ ಕಾಲ (೨) ಬಸವೇಶ್ವರನಕಾಲ (೩) ಬಸವೇಶ್ವರನ ತರುವಾಯ ಆದರೆ ಅವನಿಗೆ ಸಮೀಪವಿರುವ ಕಾಲ (೪) ವೀರಶೈವಪೌರಾಣಿಕ ಕಾಲ. ಈ ಪ್ರತಿಯೊಂದು ಕಾಲದ ಬಗ್ಗೆ ನಾವು ಮುಂದಿನ ಸಂಚಿಕೆಗಳಲ್ಲಿ ಪ್ರಸ್ತಾಪಿಸುತ್ತ ಹೋಗುವೆವು.

# ಪ್ರಸ್ತಾವನೆ.



ಭಂಡಾರಿ ಶಾಂತಯ್ಯನ ವಚನಗಳನ್ನು ನಾವಿಲ್ಲಿ ಪ್ರಸಿದ್ಧಿಸಿದ್ದೇವೆ. ಇವನ ವಚನಗಳು ನಮಗೆ ದೊರೆತವು ೩೨ ಮಾತ್ರ. ಆದರೆ ಇವುಗಳಲ್ಲಿ ಒಂದು ವಿಶಿಷ್ಟತೆ ಇದೆ. ಅವೆಲ್ಲವೂ ಬಹುತರವಾಗಿ ಬೆಡಗಿನ ವಚನಗಳಿವೆ. ಅವುಗಳಿಗೆಲ್ಲ ಟೀಕೆಗಳಿವೆ. ಈ ಟೀಕೆಗಳಲ್ಲಿ ಕೆಲವು ಲಿಂಗಲೀಲಾವಿಲಾಸ ಕರ್ತನಾದ ವಿಜಯನಗರದ ಕಲ್ಲುಮಠದ ಪ್ರಭುದೇವಾರ್ಯನು ಬರೆದವುಗಳು. ಉಳಿದವುಗಳು ಸಟೀಕ ಬೆಡಗಿನ ವಚನಗಳಲ್ಲಿಯವು ಇವೆ. ವಿವೇಚಿಸಿದ ವಿಷಯಗಳು ಹೆಚ್ಚಿನ ತರಗತಿಯವಾಗಿವೆ. ಆಧ್ಯಾತ್ಮಿಕ ಉಚ್ಚ ವಿಚಾರಗಳು ಅವುಗಳಲ್ಲಡಕವಾಗಿವೆ. ಪರಮಾತ್ಮನ ಸ್ವರೂಪ, ಪರಮಾತ್ಮನಿಗೂ ಜೀವನಿಗೂ ಇರುವ ಸಂಬಂಧ, ಜ್ಞಾನ ಕ್ರಿಯೆಗಳ ಪರಸ್ಪರ ಸಂಬಂಧ, ಆಚಾರದ ಸ್ವರೂಪ, ಭಕ್ತಿಯ ಮಹತ್ವ, ಮನಸ್ಸು, ದೇಹ, ಆತ್ಮ ಇವುಗಳೆಂದರೇನು, ಇಂಥ ವಿಷಯಗಳು ಈ ವಚನಗಳಲ್ಲಿ ನಿರೂಪಿಸಲ್ಪಟ್ಟಿವೆ.

ಭಂಡಾರಿ ಶಾಂತಯ್ಯನ ಚರಿತ್ರೆಯು ನಮಗೆ ಉಪಲಬ್ಧವಿಲ್ಲ. ಅವನು ಬಿಜ್ಜಳನ ಕಾಲದಲ್ಲಿ ಭಂಡಾರದ ಮೇಲಿನ ಅಧಿಪತಿಯಾಗಿದ್ದನೆಂದು ಅವನ ಹೆಸರಿನಿಂದ ಊಹಿಸಬಹುದಾಗಿದೆ. ಅವನ ವಚನಗಳಲ್ಲಿ ತೋರುವ ನಿರೂಪಣಾ ಪದ್ಧತಿ ಮತ್ತು ಭಾಷೆ ಇವುಗಳ ಮೇಲಿಂದ ಅವನು ಬಸವನಿಗೆ ಸಮಕಾಲೀನನಾಗಿರಬೇಕೆಂದು ತೋರುತ್ತಿದೆ.

ಈ ವಚನಗಳಲ್ಲಿ ಬಹುತರ ಎಲ್ಲವೂ ತಾತ್ವಿಕ ವಿಚಾರವುಳ್ಳವುಗಳೇ ಇರುವದರಿಂದ ಇವುಗಳಲ್ಲಿ ನಾವು ಷಟ್‌ಸ್ಥಲಗಳಿಗನುಸರಿಸಿ ಭಾಗಗಳನ್ನು ಮಾಡಿರುವದಿಲ್ಲ. ಅಕ್ಷರಾನುಕ್ರಮವಾಗಿ ಎಲ್ಲ ವಚನಗಳನ್ನು ಜೋಡಿಸಿದ್ದೇವೆ.

ಈ ವಚನಗಳು ಒತ್ತಟ್ಟಿಗೆ ನಮಗೆ ದೊರೆತವುಗಳಲ್ಲ. ಸಂಗ್ರಹ ಗ್ರಂಥಗಳೊಳಗಿಂದ ಆಯ್ದುಕೊಂಡು ನಾವು ಈ ಗ್ರಂಥದಲ್ಲಿ ಅಚ್ಚುಹಾಕಿದ್ದೇವೆ.

ವಿಜಾಪುರ.
೧೧-೨-೪೧

ಫ. ಗು. ಹಳಕಟ್ಟಿ
ಸಂಪಾದಕ.

ಟೀಕೆ:— ದೇಹಾತ್ಮರುಗಳು ಮಧ್ಯದಲ್ಲಿ ಎಂಬುದೀಗ ಪೃಥ್ವಿ ಆಕಾಶದ ಮಧ್ಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಾತ್ಮರ ಮಧ್ಯದಲ್ಲಿ ಚಿದಾಕಾಶ ಇರುತ್ತಿಹುದೆಂಬುದೀಗ ಖೇಚರ ಮಂಡಲ ಎಂಬ ಶಬ್ದಕ್ಕರ್ಥ. ಆ ಚಿದಾಕಾಶ ಮಂಡಲದಲ್ಲಿ ಸಕಲ ಕರಣಂಗಳಿಗೆ ಕರ್ತನಾದ ಮಹಾ ಘನಲಿಂಗವೆಂಬರಸು ಒಪ್ಪುತ್ತಿಹನೆಂಬುದೀಗ ಆ ಮಂಡಲದರಸನು ವಿಹಂಗ ರಾಜನೆಂಬ ಶಬ್ದಕ್ಕರ್ಥ. ಸಕಲ ಪ್ರಪಂಚು ನಿವೃತ್ತಿಯು ಸದ್ವಿವೇಕ ಸ್ವರೂಪವನೆಯ್ದಿದ ಮನಸ್ಸೇ ಪ್ರಧಾನವಾಗಿಹುದೆಂಬುದೀಗ ಮರೀಚಿಕ ಪ್ರಧಾನನೆಂಬ ಶಬ್ದಕ್ಕರ್ಥ. ಈ ದೇಹವ ತಾಳಿರ್ದ ಜೀವನು ಏಕಾಗ್ರ ಚಿತ್ಸ್ವರೂಪಿನಿಂದ ಎಚ್ಚತ್ತಿಹ ಕಾರಣ ಮಹಾತಳ ತಳವಾರನೆಂಬ ಶಬ್ದಕ್ಕರ್ಥ. ಸಕಲ ತತ್ವಂಗಳೆಲ್ಲ ಲಿಂಗತತ್ವಂಗಳಾಗಿ ಸುಖಮಯದಿಂದೊಪ್ಪಿತ್ತಿರಲು ಎಂಬುದೀಗ ಇಂತೀ ಮಂಡಲ ಸುರಕ್ಷೆಯಲ್ಲಿರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಹಂ ಎಂಬ ಅದ್ವೈತಜ್ಞಾನದಿಂ ಬಂದು ಆ ಚಿದಾಕಾಶ ಮಂಡಲದಲ್ಲಿರ್ಪ ಪರವಸ್ತುವನವಗ್ರಹಿಸಲು ಆ ಚಿದಾಕಾಶವು ಕಾಯ ಪುರವೆಂಬ ಪಟ್ಟಣವು ಸಾಧ್ಯವಲ್ಲದೆ ಹೋಯಿತ್ತೆಂಬುದೀಗ ಗೋರಕ್ಷನೆಂಬರಸು ಮುತ್ತಿದ ಮಂಡಲ ಪಟ್ಟಣ ಕೋಳು ಹೋಗದು ಎಂಬ ಶಬ್ದಕ್ಕರ್ಥ. ಆ ಅದ್ವೈತ ಜ್ಞಾನಿಗಳು ಸಾಧಿಸುತ್ತಿಹರು ಅವರಿಗೆ ಸಾಧ್ಯವಾಗಿಹುದು ಚಿದಾಕಾಶವೆಂಬುದೀಗ ಮುತ್ತಿದರಸು ಬಿಟ್ಟು ಹೋದನೆಂಬ ಶಬ್ದಕ್ಕರ್ಥ. ಅಂತಪ್ಪ ಅದ್ವೈತ ಜ್ಞಾನಿಗಳಿಗೆ ಸುಜ್ಞಾನ ಬೋಧೆಯು ಬೋಧಿಸಲಂಜಿ ಆ ಶರಣ ವಿಲಕ್ಷಣನಾಗಿ ಶಿವಾದ್ವೈತ ಭಕ್ತಿಯಿಂ ವಾಗದ್ವೈತವ ನಿವೃತ್ತಿ ಮಾಡಿದನೆಂಬುದೀಗ ಇದ ಸಂತೈಸಲಂಜಿ ಅಲೇಖನಾದ ಶೂನ್ಯಕಲ್ಲಿನೊಳ ಹೊಕ್ಕು ಎಲ್ಲರ ಗೆದ್ದನೆಂಬ ಶಬ್ದಕ್ಕರ್ಥ.

೨೩. ಬ್ರಹ್ಮಮೂರ್ತಿಗೂ ಶಿಲೆ ಒಂದೇ. ವಿಷ್ಣುಮೂರ್ತಿಗೂ ಶಿಲೆ ಒಂದೇ. ರುದ್ರಮೂರ್ತಿಗೂ ಶಿಲೆ ಒಂದೇ, ರೂಪಿನವತಾರ ಭಿನ್ನವಾಯಿತ್ತು. ಸ್ಥೂಲ ಸೂಕ್ಷ್ಮ ಕಾರಣದಂತೆ, ಕುಂಭಜಲ ಬಿಂಬದಂತೆ ಇನ್ನಾರನಹುದೆಂಬೆ ಇನ್ನಾರನಲ್ಲ ಎಂಬೆ? ಬ್ರಹ್ಮನ ಕಾಲು, ವಿಷ್ಣುವಿನ ಕೈ, ರುದ್ರನ ಕಣ್ಣು, ಈಶ್ವರನ ತಲೆ, ಸದಾಶಿವನ ಪ್ರಾಣವಾದಲ್ಲಿ ಇವು ಸಮಯ. ಈ ಪಂಚಕೋಶಕ್ಕಾಧಾರ ಪರಮಜ್ಞಾನ. ಅದ ಭೇದಿಸಲರಿಯದೆ ವಾದವ ಮಾಡಿದರೆಲ್ಲರು ನಾದಬಿಂದುಕಳಾತೀತನನರಿ ಅಲೇಖನಾದ ಶೂನ್ಯ ಕಲ್ಲಿನೊಳಗಾದವನ.

೨೪. ಬಾಯಲ್ಲಿ ಕಾಲು ಹುಟ್ಟಿ ಕೈಯ್ಯಲ್ಲಿ ಕಣ್ಣು ಹುಟ್ಟಿ-ನಾಸಿಕ ಕಿವಿಯಾಯಿತ್ತು. ಇಷ್ಟಹೇಳಲಾರದೆ ಅಲೇಖನಾದ ಶೂನ್ಯಕಲ್ಲಿನೊಳಗಾದ.

ಟೀಕು:— ಸುಜ್ಞಾನೋದಯವಾದ ಶರಣನು ಶಿವಾಪೇಕ್ಷೆಯ ಮುಂದುಗೊಂಡಲ್ಲಿ ಶ್ರೀಗುರು ಕರುಣದಿಂದಂಗದಲ್ಲಿ ಮಹಾಘನಲಿಂಗ ಸಂಬಂಧವಾಗಲಾಗಿ ಲಿಂಗದಲ್ಲಿ ಅಭಿನ್ನಕ್ರಿಯಾಚಾರವಳವಟ್ಟಿತ್ತೆಂಬುದೀಗ ಬಾಯಲ್ಲಿ ಕಾಲುಹುಟ್ಟಿ ಎಂಬ ಶಬ್ದಕ್ಕರ್ಥ. ಆ ಲಿಂಗದಲ್ಲಿ ಸತ್ಕ್ರಿಯಾಚಾರವಳವಟ್ಟ ಶರಣನ ಸದ್ಭಾವ ಹಸ್ತದಲ್ಲಿ ಶಿವಜ್ಞಾನ ಸ್ವರೂಪವಾದ ಭಾವಲಿಂಗ ಸಂಬಂಧವಾಯಿತ್ತೆಂಬುದೀಗ ಕೈಯ್ಯಲ್ಲಿ ಕಣ್ಣು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಭಾವಲಿಂಗಸಂಬಂಧವಾದ ಶರಣನ ಸ್ವಾನುಭಾವ ಸದ್ವಾಸನೆ ಪ್ರಣವ ಮಂತ್ರವನೊಳಕೊಂಡು ಅಂತರಂಗದಲ್ಲಿ ಪ್ರಾಣಲಿಂಗ ಸಂಬಂಧವಾಯಿತ್ತೆಂಬುದೀಗ ನಾಸಿಕ ಕಿವಿಯಾಯಿತ್ತು ಇಷ್ಟಹೇಳಲಾರದೆ ಅಲೇಖನಾದ ಶೂನ್ಯ ಕಲ್ಲಿನೊಳಗಾದನೆಂಬ ಶಬ್ದಕ್ಕರ್ಥ.

೨೫. ಬಾಯಿಲ್ಲದ ಪಶು ಬಿತ್ತಿದ ಹೊಲನ ಹೊಕ್ಕು ಹುಟ್ಟಿದ ಸಸಿಯ ಮೇದು ಒಡೆಯನಿಲ್ಲದ ಪರವ ತೊಂಡಕೂಡಿದ ತೊಂಡಿನ ಹಟ್ಟಿಯ ಬಾಗಿಲೊಂದು ಬೀಗ ಒಂಬತ್ತು ಮೂರೆಸಳಿನ ಬೀಗ ಮೂರು ಆರೆಸಳಿನ ಬೀಗ ಮೂರು ಇಪ್ಪತ್ತೈದೆಸಳಿನ ಬೀಗ ಮೂರು ತೆಗೆವ ಕೈಗೆ ನಾಭಿ ಇಲ್ಲ ಸಿಕ್ಕಿತ್ತು ಹಸು ಹಟ್ಟಿಯಲ್ಲಿ ಇನ್ನಾರಿಗೆ ಹೇಳುವೆ ಅಲೇಖನಾದ ಶೂನ್ಯಕಲ್ಲಿನೊಳಗಾದವನ ಬಲ್ಲವರಾರು?

ಟೀಕೆ:— ಭಿನ್ನಾಪೇಕ್ಷೆ ಇಲ್ಲದ ಶಿವಾಪೇಕ್ಷೆಯ ಮುಂದುಗೊಂಡಿರ್ದ ಚಿತ್ತೆಂಬ ಕಾಮಧೇನುವೀಗ ಬಾಯಿಲ್ಲದ ಪಶ ವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಭಿನ್ನಕ್ರಿಯಾಚಾರವಿಲ್ಲದ ಭಕ್ತಿಕ್ಷೇತ್ರದಲ್ಲಿ ನಿಂದು ಎಂಬುದೀಗ ಬಿತ್ತಿದ ಹೊಲನ ಹೊಕ್ಕು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಜನನಾಂಕುರ ನಷ್ಟವಾದ ಸದ್ವಿವೇಕವೆಂಬ ಸಸಿಯ ಸವಿವುತ್ತಿಹನೆಂಬುದೀಗ ಹುಟ್ಟಿದ ಸಸಿಯ ಮೇದು ಎಂಬ ಶಬ್ದಕ್ಕರ್ಥ. ಅಂತು ಸ್ವೀಕರಿಸಿದ ಶರಣನು ಅಹಂ ಎಂಬ ಅದ್ವೈತಜ್ಞಾನವಿಲ್ಲದ ನಿಷ್ಕಲ ಪರಬ್ರಹ್ಮವ ತನ್ನಾಚಾರ ಸ್ವರೂಪವಾದ ತನುಮನ ಪ್ರಾಣಂಗಳಲ್ಲಿ ಅವಗ್ರಹಿಸಿದನೆಂಬುದೀಗ ಒಡೆಯನಿಲ್ಲದ ಪರವ ತೊಂಡಕೂಡಿದನೆಂಬ ಶಬ್ದಕ್ಕರ್ಥ. ಅಂತಪ್ಪ ಆಚಾರಾಂಗವನೊಳಕೊಂಡಿರ್ಪ ಸತ್ಪಥವಾಗಿ

ಒಂದೇ ಎಂಬುದೀಗ ತೊಂಡಿನ ಹಟ್ಟಿಯು ಬಾಗಿಲೊಂದು ಎಂಬ ಶಬ್ದಕ್ಕರ್ಥ. ಅಂತು ಸತ್ಪಥಮಾರ್ಗವಿಡಿದಿರ್ಪ ಶರಣಂಗೆ ತನುತ್ರಯಂಗಳೆಂಬ ಮೂರೆಸಳನೊಳಕೊಂಡಿಹುದೇ ಗುರುತತ್ವ, ಮನತ್ರಯಂಗಳೆಂಬ ಮೂರೆಸಳನೊಳಕೊಂಡಿರ್ಪ ಲಿಂಗತತ್ವ, ಧನತ್ರಯಂಗಳೆಂಬ ಮೂರೆಸಳನೊಳಕೊಂಡಿರ್ಪುದೇ ಜಂಗಮತತ್ವ, ಇಂತೀ ನವವಿಧವನೊಳಕೊಂಡಿರ್ಪುದೇ ಸಚ್ಚಿದಾನಂದ ಸ್ವರೂಪವಾದ ಗುರು ಲಿಂಗ ಜಂಗಮವೆಂಬುದೀಗ ಬೀಗ ಒಂಬತ್ತು ಮೂರೆಸಳಿನ ಬೀಗ ಮೂರು ಎಂಬ ಶಬ್ದಕ್ಕರ್ಥ. ಆ ಶರಣಂಗೆ ಷಡ್ವಿಧಲಿಂಗ ಷಡ್ವಿಧಭಕ್ತಿ ಷಡ್ವಿಧವೆಂಬ ಹದಿನೆಂಟೆಸಳನೊಳಕೊಂಡು ಲಿಂಗತ್ರಯ ತೋರುತ್ತಿಹವೆಂಬುದೀಗ ಆರೆಸಳಿಗೆ ಬೀಗ ಮೂರೆಂಬ ಶಬ್ದಕ್ಕರ್ಥ ಅಂಗಸ್ಥಲವಿಪ್ಪತ್ತೈದು ಲಿಂಗಸ್ಥಲವಿಪ್ಪತ್ತೈದು ಭಕ್ತಿಸ್ಥಲವಿಪ್ಪತ್ತೈದು ಇಂತೀ ಎಪ್ಪತ್ತೈದು ಎಸಳನೊಳಕೊಂಡಿರ್ಪ ಕ್ರಿಯಾ ಜ್ಞಾನ ಭಾವಂಗಳೆಂಬುದೀಗ ಇಪ್ಪತ್ತೈದೆಸಳಿನ ಬೀಗ ಮೂರೆಂಬ ಶಬ್ದಕ್ಕರ್ಥ. ಈ ಸ್ಥಲಕುಳ ಸಂಬಂಧವಾದ ಶರಣನ ಸದ್ಭಾವ ಹಸ್ತಕ್ಕೆ ಭಿನ್ನಜ್ಞಾನ ದೂರವಿಲ್ಲವೆಂಬುದೀಗ ತೆಗೆವ ಕೈಗೆ ನಾಭಿ ಇಲ್ಲವೆಂಬ ಶಬ್ದಕ್ಕರ್ಥ. ಆ ಚಿತ್ತೆಂಬ ಸುರಧೇನು ಶರಣನಾಚಾರಾಂಗದಲ್ಲಿ ಸಂಬಂಧವಾದ ಭೇದವ ದ್ವೈತಾದ್ವೈತಗಳಿಗುಸುರದೆ ಶಬ್ದಮುಗ್ಧವಾಗಿರ್ದನೆಂಬುದೀಗ ಸಿಕ್ಕಿತ್ತು ಹಸು ಹಟ್ಟಿಯಲ್ಲಿ ಇನ್ನಾರಿಗೆ ಹೇಳುವೆ ಅಲೇಖನಾದ ಶೂನ್ಯ ಕಲ್ಲಿನೊಳಗಾದವನ ಬಲ್ಲವರಾರು ಎಂಬ ಶಬ್ದಕ್ಕರ್ಥ.

೨೬. ಮಗನ ಕೊಂದು ತಿಂದ ತಾಯ ಕಂಡೆ. ಬಂಧುಗಳ ಕೊಂದು ನಂಟರಲ್ಲಿ ಕೂಪನ ಕಂಡೆ. ಅತ್ತೆ ಅಳಿಯನ ಒತ್ತಿನಲ್ಲಿ ಮಲಗಿ ಕೂಸು ಹುಟ್ಟಿತ್ತು. ಅಳಿಯ ಅತ್ತೆಯ ನೋಡಿ ಅತ್ತೆ ಅಳಿಯನ ನೋಡಿ ಹೋಯಿತ್ತು ಹೋಗದಿದೆ ಎಂದು ನಗುವರ ಕಂಡೆ. ಅವರಿಬ್ಬರ ಹೆತ್ತ ಕೂಸು ನಾನಿವರಳಿಯನಲ್ಲ ಎಂದು ಹೋಯಿತ್ತು. ಇದ ಕೇಳಿಹರೆಂದು ಹೇಳಲಂಜಿ ಅಲೇಖನಾದ ಶೂನ್ಯಕಲ್ಲಿನೊಳಹೊಕ್ಕ.

ಟೀಕೆಃ— ಮಗನೆಂದಡೆ ಜೀವನು. ಅಂತಪ್ಪ ಜೀವನ ಜೀವಭಾವವ ಜ್ಞಾನಶಕ್ತಿ ನಿವೃತ್ತಿ ಮಾಡಿದಳೆಂಬುದೀಗ ಮಗನ ಕೊಂದು ತಿಂದ ತಾಯ ಕಂಡೆನೆಂಬ ಶಬ್ದಕ್ಕರ್ಥ. ಅಂತು ಜೀವ ಭಾವ ಪ್ರಪಂಚು ನಿವೃತ್ತಿಯಾಗಲು ಸಕಲ ಕರಣಂಗಳ ಪ್ರಕೃತಿಭಾವವ ಸುಜ್ಞಾನಪ್ರಕಾಶದಿಂ ಸಂಹ

ರಿಸಿ ಲಿಂಗ ಸಂಬಂಧವ ಮಾಡಲು ಆ ಕರಣಂಗಳೆಲ್ಲವು ಅಮರ ಗಣತ್ವ ವನೆಯ್ದಿ ನಿತ್ಯ ಸ್ವರೂಪನಾದ ಶರಣಂಗೆ ಸ್ವಯಾತ್ಮ ಬಂಧುಗಳಾಗಿರ್ದ ವೆಂಬುದೀಗ ಬಂಧುಗಳ ಕೊಂದು ನಂಟರಲ್ಲಿ ಕ್ರೂಪನ ಕಂಡೆನೆಂಬ ಶಬ್ದ ಕ್ಕರ್ಥ. ಜ್ಞಾನಶಕ್ತಿ ಹಿಂದೆ ಹುಟ್ಟಿದ ಕ್ರಿಯಾಶಕ್ತಿ ವಲ್ಲಭನೇ ಶರಣ. ಆ ಶರಣನಲ್ಲಿ ಜ್ಞಾನಶಕ್ತಿ ಸ್ವರೂಪನಾದ ಶ್ರೀಗುರು ಆ ಚಿತ್ಸ್ವರೂಪನಾದ ಶಿಷ್ಯನಲ್ಲಿ ದೀಕ್ಷಾತ್ರಯಗಳಿಂದವಿರಳ ಸಂಗವ ಮಾಡಲು ಅತ್ಮಾಂತರ್ಗ ತವಾಗಿರ್ದ ಚಿತ್ಪ್ರಭಾವಾಂಗವೇ ಬಹಿಷ್ಕರಿಸಿ ಇಷ್ಟಲಿಂಗವಾಗಿ ಉದಿಸಿತ್ತೆಂ ಬುದೀಗ ಅತ್ತೆ ಅಳಿಯನ ಬತ್ತಿನಲ್ಲಿ ಮಲಗಿ ಕೂಸು ಹುಟ್ಟಿತ್ತೆಂಬ ಶಬ್ದ ಕ್ಕರ್ಥ. ಸರ್ವಾಂಗ ಲಿಂಗ ಸಂಬಂಧ ಘಟಿಸಿದ ಶರಣನು ತಾನೇ ಪ್ರಾಣ ಚೈತನ್ಯ ಸ್ವರೂಪವಾದ ಶ್ರೀಗುರುತತ್ವ ಸುಜ್ಞಾನ ದೃಷ್ಟಿಯಿಂ, ನಿರೀಕ್ಷಿಸು ತ್ತಿರ್ದನೆಂಬುದೀಗ ಅಳಿಯ ಅತ್ತೆಯ ನೋಡಿ ಎಂಬ ಶಬ್ದಕ್ಕರ್ಥ. ಆ ಶ್ರೀಗುರು ತನ್ನ ಕೃಪಾದೃಷ್ಟಿಯಿಂ ಚಿದ್ರೂಪನಾದ ಶಿಷ್ಯನೇ ಚಿತ್ಪ್ರಭಾಂಗ ಸ್ವರೂಪನೆಂದು ನಿರೀಕ್ಷಿಸುತ್ತಿರ್ದನೆಂಬುದೀಗ ಅತ್ತೆ ಅಳಿಯನ ನೋಡಿ, ಎಂಬ ಶಬ್ದಕ್ಕರ್ಥ. ಆ ಗುರು ಶಿಷ್ಯರೆಂಬ ಭಿನ್ನಭಾವ ನಿವೃತ್ತಿಯಾಗಲು ಆ ಭಿನ್ನ ಭಾವದಿಂ ಶಿಷ್ಯನು ಗುರು ತತ್ವದಲ್ಲತಗಿ ಬ್ರಹ್ಮ ಸ್ವರೂಪನಾಗಿರ್ದ ನೆಂಬುದೀಗ ಹೋಯಿತ್ತು ಹೋಗದಿಪ ಎಂಬ ಶಬ್ದಕ್ಕರ್ಥ. ಇಂತು ಗುರು ಶಿಷ್ಯರ ಸಮರಸದೇಕಾರ್ಥವ ಸಕಲ ಕರಣಂಗಳು ಸುಜ್ಞಾನ ದೃಷ್ಟಿಯಿಂ ಕಂಡು ಶಿವೋಹಂ ಶಿವೋಹಂ ಎಂದು ಪರಮ ಹರುಷತೆಯ ನೆಯ್ದಿತ್ತೆಂಬುದೀಗ ಎಂದು ನಗುವವರ ಕಂಡೆನೆಂಬ ಶಬ್ದಕ್ಕರ್ಥ. ಆ ಗುರು ಶಿಷ್ಯರ ಸಂಪರ್ಕದಿಂದುದಯವಾದ ಭಕ್ತಾಂಗನೆಗೆ ಇಷ್ಟಲಿಂಗವೇ ವಲ್ಲಭನಾದ ಕಾರಣ ಅವರಿಯನೆಂಬುದೀಗ ಅವರಿಬ್ಬರ ಹೆತ್ತ ಕೂಸು ನಾನಿ ವರಳಿಯನಲ್ಲ ಎಂಬ ಶಬ್ದಕ್ಕರ್ಥ. ಆ ಸದ್ರೂಪವಾದ ಇಷ್ಟಲಿಂಗವು ಗುರು ಶಿಷ್ಯರೀರ್ವರನಪಗ್ರಹಿಸಿ ನಿರ್ವಯಲಾಯಿತ್ತೆಂಬುದೀಗ ಹೋಯಿತ್ತು ಎಂಬ ಶಬ್ದಕ್ಕರ್ಥ. ಆ ಗುರು ಶಿಷ್ಯರಿಬ್ಬರು ಮಹಾ ಘನಲಿಂಗ ದಲ್ಲಿ ಏಕಾರ್ಥವಾದ ಭೇದವ ದ್ವೈತಾದ್ವೈತಗಳಿಗುಸುರಲಿಲ್ಲವೆಂಬುದೀಗ ಇದ ಕೇಳಿಹರೆಂದು ಹೇಳಲಂಜ ಅಲೇಖನಾದ ಶೂನ್ಯ ಕಲ್ಲಿನೊಳಹೊಕ್ಕ ನೆಂಬ ಶಬ್ದಕ್ಕರ್ಥ.

೨೭. ಮಾರ್ಜಾಲನ ಹೃದಯದಲ್ಲಿ ಮೂಷಕ ಮನೆಯ ಮಾಡಿತ್ತು. ಅದಕ್ಕೆ ಮಣಿಮಾಡಂಗಳಿಂದ ಆಶ್ರಯ ಒಂದು. ಬಾಗಿಲು ಬೇರೆ.

ಅದಕ್ಕೆ ಹೋಗಿಯಾಡುವ ನಾಟಕಶಾಲೆ ಪವನನೆಂಬ ಸೂಳೆ ಆ ಘಟ ದಿಂದಾಡುತ್ತಿರಲಾಗಿ ಕಾಲು ಜಾರಿ ನೆಲಕ್ಕೆ ಬಿದ್ದಳು. ಬಿದ್ದ ಘಾಯಕ್ಕೆ ಯೋನಿ ಒಡೆಯಿತ್ತು. ಮೊಲೆ ಹರಿಯಿತ್ತು. ಕಿವಿ ಕಿತ್ತು ಕಣ್ಣು ಹಿಂಚು ಮುಂಚಾಯಿತ್ತು. ನೋಡುವ ಅಣ್ಣಾಗಳ ಬಯಕೆ ಹರಿಯಿತ್ತು. ಯೋನಿ ಕಿತ್ತಲ್ಲಿ ಕೂಟಕ್ಕೆ ಸುಖವಿಲ್ಲ. ನೋಟಕ್ಕೆ ಬೆಂಬಳಿಯಿಲ್ಲ. ಪವನನ ಆ ಘಟ ಹೋಯಿತ್ತು. ಕಾಲನ ಕಮ್ಮಟಕ್ಕೆ ಅಲೇಖನಾದ ಶೂನ್ಯ ಕಲ್ಲಿನೊಳಗಾ ಯಿತ್ತು ಬಾರಯ್ಯ.

ಟೀಕೆಃ— ಪಂಚಭೂತಾಶ್ರಯವಾದ ದೇಹಮಧ್ಯದಲ್ಲಿರ್ಪ ಮಾಯಾ ಮಾರ್ಜಾಲನ ಹೃದಯವನೆ ಮನಸ್ಸಾಶ್ರಯವ ಮಾಡಿಕೊಂಡಿತ್ತೆಂಬುದೀಗ ಮಾರ್ಜಾಲನ ಹೃದಯದಲ್ಲಿ ಮೂಷಕ ಮನೆ ಮಾಡಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಷಡಾಧಾರ ಚಕ್ರಂಗಳ ನೊಳಕೊಂಡಿರ್ಪ ದೇಹವೇ ಆಶ್ರಯವಾಯಿತ್ತೆಂಬುದೀಗ ಅದಕ್ಕೆ ಮಣಿಮಾಡಂಗಳಿಂದ ಆಶ್ರಯ ಒಂದೇ ಎಂಬ ಶಬ್ದಕ್ಕರ್ಥ. ಆ ದೇಹಕ್ಕೆ ನವದ್ವಾರಂಗಳೇ ಬಾಗಿಲುವಾಡವಾ ಗೊಪ್ಪುತ್ತಿಹುದೆಂಬುದೀಗ ಬಾಗಿಲು ಬೇರೆ ಎಂಬ ಶಬ್ದಕ್ಕರ್ಥ. ಆ ಷಡಾ ಧಾರ ಚಕ್ರದಲ್ಲಿ ಷಡುಸೋಪಾನವಿಟ್ಟು ಸಾಧಿಸುತ್ತಿಹರು ಯೋಗಿ ಜನಂಗ ಳೆಂಬುದೀಗ ಅದಕ್ಕೆ ಆಡುವ ನಾಟಕಶಾಲೆ ಎಂಬ ಶಬ್ದಕ್ಕರ್ಥ. ಸ್ವಸ್ಥಪದ್ಮಾ ಸನದಲ್ಲಿ ಕುಳಿತು ಅಧೋಮುಖದ ವಾಯುವ ಊರ್ಧ್ವ ಮಾಡಿ ರೇಚಕ ಪೂರಕಂಗಳ ಪ್ರಾಣಾಯಾಮದಿಂ ಕುಂಭದಲ್ಲಿ ನಿಲಿಸಿ ಮನಮಾರು ತಂಗಳ ಒಬ್ಬುಳಿಯಿಂ ಸುಷುಮ್ನದ್ವಾರದಿಂ ಬ್ರಹ್ಮರಂಧ್ರವನೆಯ್ದಿ ಪರದಲ್ಲಿ ಬೆರಸಿಹೆನೆಂಬ ವಾಯುಸಾಧಕರಿಗೆ ಸಾಧ್ಯವಾಗದು ಪರಬ್ರಹ್ಮವೆಂಬುದೀಗ ಪವನನೆಂಬ ಸೂಳೆ ಆ ಘಟದಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನ ಯೋಗಕ್ಕೆ ಮೋಕ್ಷ ಮಾರ್ಗವು ಸಾಧ್ಯವಾಗದೆ ದೇಹಭಾವದಲ್ಲಿ ಲಯವಾದುದೆಂಬುದೀಗ ಕಾಲು ಜಾರಿ ನೆಲಕ್ಕೆ ಬಿದ್ದಳು ಎಂಬ ಶಬ್ದಕ್ಕರ್ಥ. ಅಂತಪ್ಪದೇಹಭಾವದಲ್ಲಿ ಕೂಡಿದಾತ್ಮಂಗೆ ನಿಜ ಸುಷುಪ್ತಿ ಭಗ್ನವಾಯಿ ತ್ತೆಂಬುದೀಗ ಬಿದ್ದ ಘಾಯಕ್ಕೆ ಯೋನಿ ಒಡೆಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ನಿಜ ಸುಷುಪ್ತಿ ಭಿನ್ನವಾದಲ್ಲಿ ಪರಮಾಮೃತಸ್ಥಾನ ನಷ್ಟವಾಯಿ ತ್ತೆಂಬುದೀಗ ಮೊಲೆ ಹರಿಯಿತ್ತೆಂಬ ಶಬ್ದಕ್ಕರ್ಥ. ಆ ಪರಮಾಮೃತಸ್ಥಾನ ನಷ್ಟವಾದಲ್ಲಿ ಅನಾಹತ ಕರ್ಣದ್ವಾರವು ಭಿನ್ನವಾಗಿ ಸುಜ್ಞಾನ ದೃಷ್ಟಿ ಪಲ್ಲಟವಾಯಿತ್ತೆಂಬುದೀಗ ಕಿವಿ ಕಿತ್ತು ಕಣ್ಣು ಹಿಂಚು ಮುಂಚಾಯಿತ್ತೆಂಬ

ಶಬ್ದಾರ್ಥ. ಇಂತಿವೆಲ್ಲವು ನಷ್ಟವಾಗಲು ಪರಶಿವ ತತ್ವವ ನಿರೀಕ್ಷಿಸಬೇಕೆಂಬ ಖಂಡಿತ ಜ್ಞಾನಿಗಳ ಬಯಕೆಯಡಗಿತ್ತೆಂಬುದೀಗ ನೋಡುವ ಅಣ್ಣಗಳ ಬಯಕೆ ಹರಿಯಿತ್ತೆಂಬ ಶಬ್ದಾರ್ಥ. ಆ ನಿಜ ಸುಷುಪ್ತಿ ಸ್ಥಾನ ಭಗ್ನವಾದಲ್ಲಿ ಲಿಂಗಾಂಗದ ಸಮರಸದ ಕೂಟಕ್ಕೆ ತೆರಪಿಲ್ಲದೆ ಹೋಯಿತ್ತೆಂಬುದೀಗ ಯೋನಿ ಕಿತ್ತಲ್ಲಿ ಕೂಟಕ್ಕೆ ಸುಖವಿಲ್ಲ ಎಂಬ ಶಬ್ದಾರ್ಥ. ಆ ಭಿನ್ನ ಯೋಗಿಗಳು ಇನ್ನು ಭಿನ್ನವಿಟ್ಟು ಈಕ್ಷಿಸಿಹೆನೆಂದೊಡೆ ತೆರಪಿಲ್ಲವೆಂಬುದೀಗ ನೋಟಕ್ಕೆ ಬೆಂಬಳಿ ಇಲ್ಲವೆಂಬ ಶಬ್ದಾರ್ಥ. ಪವನ ಯೋಗದಿಂ ಸಾಧಿಸಿಹೆನೆಂಬ ಭಿನ್ನಯೋಗಿಗಳ ಹೆಚ್ಚಿಗೆ ಇಲ್ಲವು ಯಮನ ಮರಣ ಬಾಧೆಗೊಳಗಾಯಿತ್ತೆಂಬುದೀಗ ಪವನನ ಆ ಘಟ ಹೋಯಿತ್ತು ಕಾಲನ ಕಮ್ಮಟಕ್ಕೆ ಅಲೇಖನಾದ ಶೂನ್ಯಕಲ್ಲಿನೊಳಗಾಯಿತ್ತು ಬಾರಯ್ಯ ಎಂಬ ಶಬ್ದಾರ್ಥ.

೨೮. ಶಿವ ಶಿವ ಎಲ್ಲರ ಉಂಟಾದುದ ಹೇಳಿ. ಇಲ್ಲದ ಬಯಲಿಂಗೆ ಮನವನಿಕ್ಕಿದರು. ಎನಗಿನ್ನಾವುದು ಬಟ್ಟೆ ? ಬಸವಣ್ಣನ ಕರುಣೆಯಿಂದ ಕಟ್ಟಿದ ಲಿಂಗಕ್ಕೆ ಹುಟ್ಟು ಮೆಟ್ಟಲರಿಯೆ. ಕೊಟ್ಟಾತ ಹೇಳಿದುದಿಲ್ಲ. ಕಟ್ಟಿಕೋ ಎಂದಾತ ಈ ಬಟ್ಟೆಯಲ್ಲಿರು ಎಂದುದಿಲ್ಲ. ಕಡ್ಡಾಯಕ್ಕೆ ಕಟ್ಟಿದ ಈ ವಡ್ಡಗಲ್ಲಿನ ಮುರಿವ ಎನಗೊಂದು ಬುದ್ಧಿಯ ಹೇಳಾ ಅಲೇಖನಾದ ಶೂನ್ಯಕಲ್ಲಿನೊಳಗೇಕೆ ಆದೆಯಯ್ಯ.

೨೯. ಸ್ಥಳ ಕುಳವ ನರಿಯಬೇಕೆಂಬರು ಭಕ್ತನಾಗಿ. ಮಹೇಶ್ವರನಾಗಬೇಕೆಂಬರು ಮಹೇಶ್ವರನಾಗಿ. ಪ್ರಸಾದಿಯಾಗಬೇಕೆಂಬರು ಪ್ರಸಾದಿಯಾಗಿ. ಪ್ರಾಣಲಿಂಗಿಯಾಗಬೇಕೆಂಬರು ಪ್ರಾಣಲಿಂಗಿಯಾಗಿ. ಶರಣನಾಗಬೇಕೆಂಬರು ಶರಣನಾಗಿ. ಐಕ್ಯನಾಗಬೇಕೆಂಬರು ಐಕ್ಯನಾಗಿ. ಏತರಿಂದ ಕೂಟವ ನಾನರಿಯೆ. ಒಳಗಣ ಮಾತು ಹೊರಹೊಮ್ಮಿಯಲ್ಲದೆ ಎನಗರಿಯಬಾರದು. ಎನಗೈಕ್ಯನಾಗಿ ಶರಣನಾಗಬೇಕು. ಶರಣನಾಗಿ ಪ್ರಾಣಲಿಂಗಿಯಾಗಬೇಕು. ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು. ಪ್ರಸಾದಿಯಾಗಿ ಮಹೇಶ್ವರನಾಗಬೇಕು. ಮಹೇಶ್ವರನಾಗಿ ಭಕ್ತನಾಗಬೇಕು. ಭಕ್ತನಾಗಿ ಸಕಲ ಯುಕ್ತನಾಗಬೇಕು. ಯುಕ್ತಿ ನಿಶ್ಚಯವಾದಲ್ಲಿಯೇ ಐಕ್ಯಸ್ಥಲ. ಒಳಹೊರಗಾಯಿತ್ತು. ಅಲೇಖವಾಯಿತ್ತು. ಎನಗೆ ಕಾಣಬಂದಿತ್ತು. ಅಲೇಖನಾದ ಶೂನ್ಯಶಿಲೆಯ ಹೊರಹೊಮ್ಮಿ ಕಂಡೆ ನಿನ್ನನು.

೩೦. ಸಾಸುವೆಯ ಹಾಲು ಸಾಧಕಾಂಗರ ನಾಸಿಕದ ನೀರ ಬರಿಸಿತ್ತು. ಮೂಷಕನ ಮೀಸೆಯ ಬಿಂದು ಮೂರು ಲೋಕವ ಮುಳುಗಿಸಿತ್ತು. ಕಾಸದ ನೀರು ಬಿಸಿಯಾಗಿ ಕುಡಿವವರ ಮೀಸೆಯು ಸುಟ್ಟಿತ್ತು. ಸಾಸುವೆಯ ಮೂಷಕನ ಮೀಸೆಯ ಬಿಸಿನೀರ ಕುಡಿವಾತನ ಬಾಯೊತ್ತಿನ ಮೀಸೆಯಲ್ಲಿ ಹುಟ್ಟಿತ್ತೊಂದು ಹಾಸರುಗಲ್ಲಿನ ಮೇಲೆ ಕುಳ್ಳಿರ್ದಾತನ ಕೇಳಿಹರೆಂದು ಅದೇತಕ್ಕಡಗದೆ ಅಲೇಖಮಯ ಶೂನ್ಯಕಲ್ಲಿನ ಮನೆಯೊಳಗೆ.

ಟೀಕೆಃ—'' ಶಿವಾದ್ವೈತ ಭಕ್ತಿರಸವೆಂಬುದು ಎಲ್ಲಕ್ಕೂ ಕಠಿಣವಾಗಿಹುದೆಂಬುದೀಗ ಸಾಸುವೆಯ ಹಾಲು ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಿಯಿಂ ಶ್ರೀಕಾರುಣ್ಯವ ಹಡೆದು ಸತ್ಕ್ರಿಯಾಜ್ಞಾನವಿಡಿದಾಚರಿಸುವ ಸದ್ಭಕ್ತಜನಂಗಳೆಂಬುದೀಗ ಸಾಧಕಾಂಗರ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತ ಜನಂಗಳ ಸ್ವಾನುಭಾವ ವಾಸನೆಯಲ್ಲಿ ಅಡಗಿರ್ಪ ಸದ್ವಿವೇಕ ಜಲವ ಪ್ರಭಾವಿಸಿತ್ತೆಂಬುದೀಗ ನಾಸಿಕನೀರ ಬರಿಸಿತ್ತು ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ಜಲವನೊಳಕೊಂಡಿರ್ಪ ಶರಣನ ಮನಸ್ಸಿನಲ್ಲಿ ನೈಷ್ಠಿಕಾ ಸ್ವರೂಪವಾದ ಸಕಲ ಕರಣಂಗಳಲ್ಲಿ ಸಂಬಂಧವಾದ ಚಿದ್ಬಿಂದು ತನುತ್ರಯಂಗಳನೊಳಕೊಂಡು ತೋರುತ್ತಿಹುದೆಂಬುದೀಗ ಮೂಷಕನ ಮೀಸೆಯ ಬಿಂದು ಮೂರು ಲೋಕವ ಮುಳಿಗಿಸಿತ್ತು ಎಂಬ ಶಬ್ದಕ್ಕರ್ಥ. ಅಂತು ಚಿದ್ಬಿಂದು ತನುತ್ರಯಂಗಳನೊಳಕೊಂಡಲ್ಲಿ ತಾಪತ್ರಯಾಗ್ನಿಯಲ್ಲಿ ಕಾಯದೆ ಇರ್ದ ಪರಮಾನಂದ ಜಲವು ಜ್ಞಾನಾಗ್ನಿ ಸ್ವರೂಪವಾಗಿ ಆ ಪರಮಾನಂದ ಜಲವ ಸ್ವೀಕರಿಸುವ ಭಕ್ತಜನಂಗಳ ನೈಷ್ಠೆಯನೊಳಕೊಂಡಿರ್ಪ ಸಕಲ ಕರಣಂಗಳನವಗ್ರಹಿಸಿತ್ತೆಂಬುದೀಗ ಕಾಸದ ನೀರು ಬಿಸಿಯಾಗಿ ಕುಡಿವವರ ಮೀಸೆಯ ಸುಟ್ಟಿತ್ತು ಎಂಬ ಶಬ್ದಕ್ಕರ್ಥ. ಶಿವಾದ್ವೈತ ಭಕ್ತಿರಸವೆಂಬುದೀಗ ಸಾಸುವೆಯ ಎಂಬ ಶಬ್ದಕ್ಕರ್ಥ. ಆ ಭಕ್ತಿಯಲ್ಲಿ ಸಂಬಂಧವಾದ ಶರಣ ಮನಸ್ಸೆಂಬುದೀಗ ಮೂಷಕನ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯದಲ್ಲಿ ನಿಷ್ಠೆಯೊಡನೆ ಕೂಡಿದ ಸಕಲಕರಣಂಗಳೆಂಬುದೀಗ ಮೀಸೆಯ ಎಂಬ ಶಬ್ದಕ್ಕರ್ಥ. ಆ ನಿಷ್ಠೆಯಿಂ ಜ್ಞಾನಾಗ್ನಿ ಸ್ವರೂಪವಾದ ಪರಮಾನಂದ ಜಲವ ಸ್ವೀಕರಿಸುತ್ತಿಹ ಶರಣನ ಎಂಬುದೀಗ ಬಿಸಿನೀರ ಕುಡಿವಾತನ ಎಂಬ ಶಬ್ದಕ್ಕರ್ಥ. ಆ ಪರಮಾನಂದ ಜಲವ ಸ್ವೀಕರಿಸುವ ಶರಣನ ಶಿವಾ

ಪೇಕ್ಷೆಯಲ್ಲಿ ಕೂಡಿರ್ದ ಸಕಲ ಕರಣಂಗಳ ಮಧ್ಯದಲ್ಲಿ ಅನೇಕ ತತ್ವಂಗಳನೊಳಕೊಂಡಿರ್ಪ ಅಖಂಡ ಜ್ಞಾನಚಿತ್ತು ಉದಯವಾಯಿತ್ತೆಂಬುದೀಗ ಬಾಯೊತ್ತಿನ ಮೀಸೆಯಲ್ಲಿ ಹುಟ್ಟಿತ್ತೊಂದು ಹಾಸರುಗಲ್ಲು ಎಂಬ ಶಬ್ದಕ್ಕರ್ಥ. ಆ ಚಿತ್ತಿನ ಮಧ್ಯದಲ್ಲಿ ಸಾಹಿತ್ಯವಾಗಿರ್ಪುದೇ ಮಹಾಘನ ಲಿಂಗವೆಂಬುದೀಗ ಹಾಸರುಗಲ್ಲಿನ ಮೇಲೆ ಕುಳ್ಳಿರ್ದಾತನ ಕೇಳಿಹರೆಂದು ಅದೇತಕ್ಕಡಗಿದೆ, ಅಲೇಖಮಯ ಶೂನ್ಯಕಲ್ಲಿನ ಮೊನೆಯೊಳಗೆ ಎಂಬ ಶಬ್ದಕ್ಕರ್ಥ.

೩೧. ಸಿರಿಯ ಭೂಮಿಯ ಮಧ್ಯದಲ್ಲಿ ಉರಿಯ ಮಡು ಹುಟ್ಟಿತ್ತು. ಆ ಮಡುವಿನ ಮಧ್ಯದಲ್ಲಿ ಐದು ಸರಗೂಡಿದ ಬಾವಿ. ಆ ಬಾವಿಯೊಳಗೆ ಮೂರು ಮುಖದ ಹುಲಿ ಹುಟ್ಟಿತ್ತು. ಒಂದು ಕೊಂದು ತಿಂಬುದು. ಒಂದು ಕೊಲ್ಲದೆ ತಿಂಬುದು. ಒಂದು ಎಲ್ಲರ ನೋಡಿ ತಿಂಬುದು ಅಲ್ಲ ಎಂಬುಹು ಹುಲಿಯ ಬಣ್ಣ ಮೊದಲು ಕಪ್ಪು ನಡುವೆ ಬಾಸುರ ತುದಿಯಲ್ಲಿ ಬಿಳಿದು ಹಗೆವಣ್ಣ ಸಹಿತವಾಗಿ ಹುಟ್ಟಿದ ಹುಲಿ ಉರಿಯ ಮಡುವ ನೀಂಟಿ ರಸದ ಭಾವಿಯ ಕುಡಿದು ತಿಂಬವೆರಡು ಮುಖ ತಿನ್ನದ ಮುಖದಲ್ಲಿ ಕಡೆಕಪ್ಪು ನಡುವಣ ಬಾಸುರ ತುದಿಯ ಬಿಳುಪಿನಲ್ಲಿ ಅಡಗಿ ಒಡಗೂಡಿತ್ತು. ಅದರ ತೊಡಿಗೆಯ ಕೇಳಿಹರೆಂದಂಜಿ ಅಡಗಿದೆ ಅಲೇಖನಾದ ಶೂನ್ಯ ಕಲ್ಲಿನೊಳಗಾಗಿ.

ಟೀಕೆ:— ಪ್ರಾರಬ್ಧ ಭೋಗ ಸಂಬಂಧವಾದ ಸ್ಥೂಲ ದೇಹವೆಂಬುದೀಗ ಸಿರಿಯ ಭೂಮಿಯ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಮಧ್ಯದಲ್ಲಿ ತಾಪತ್ರಯಾಗ್ನಿಯನೊಳಕೊಂಡಿರ್ಪ ಸಂಸಾರ ವಿಷಯ ರಸದ ಘಾತಕವ ಕಾಣಬಾರದೆಂಬುದೀಗ ಮಧ್ಯದಲ್ಲಿ ಉರಿಯ ಮಡು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ರಸದ ಮಧ್ಯದಲ್ಲಿ ಸಂಸಾರ ವಿಷಯ ರಸವನೊಳಕೊಂಡು ಪಂಚ ವಿಷಯಂಗಳೇ ಕೂಪವಾಗಿರುತ್ತಿಹವೆಂಬುದೀಗ ಆ ಮಡುವಿನ ಮಧ್ಯದಲ್ಲಿ ಐದು ಸರಗೂಡಿದ ಭಾವಿಯೆಂಬ ಶಬ್ದಕ್ಕರ್ಥ. ಆ ವಿಷಯ ಕೂಪದಲ್ಲಿ ಅವಸ್ಥಾತ್ರಯಂಗಳೇ ಮುಖವಾಗಿಯುಳ್ಳ ಜೀವನಿಂ ಜೀವತ್ರಯಂಗಳು ಉದಿಸಿದವೆಂಬುದೀಗ ಆ ಭಾವಿಯೊಳಗೆ ಮೂರು ಮುಖದ ಹುಲಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಜಾಗ್ರಾವಸ್ಥೆಯ ಮುಖವಾಗಿರ್ಪ ವಿಶ್ವನು ಸಕಲ ಪ್ರಾಣಿಗಳ ಸಂಹರಿಸಿ

ಭಕ್ಷಿಸುತ್ತಿಹುದೆಂಬುದೀಗ ಬಂದು ಕೊಂದು ತಿಂಬುದು ಎಂಬ ಶಬ್ದಕ್ಕರ್ಥ. ಆ ಸ್ವಪ್ನಾವಸ್ಥೆಯ ಮುಖದಿಂ ತೇಜಸನ್ನು ಇಂದ್ರಿಯಂಗಳಲ್ಲಿ ವಿಷಯ ಸುಖವನನುಭವಿಸುತ್ತಿಹವೆಂಬುದೀಗ ಬಂದು ಕೊಲ್ಲದೆ ತಿಂಬುದು ಎಂಬ ಶಬ್ದಕ್ಕರ್ಥ. ಆ ವಿಶ್ವ ತೇಜಸ್ಸಿನ ವರ್ತನೆಯ ಪ್ರಾಜ್ಞನು ವಿವೇಕ ಮುಖದಿಂ ಕಂಡು ವಿಡಂಬಿಸುತ್ತಿಹುದೆಂಬುದೀಗ ಅಲ್ಲ ಎಂಬುದು ಎಂಬ ಶಬ್ದಕ್ಕರ್ಥ. ಆ ವಿಶ್ವನು ಅಜ್ಞಾನ ಸಂಬಂಧಿಯಾಗಿಹನೆಂಬುದೀಗ ಆ ಹುಲಿಯ ಬಣ್ಣ ಮೊದಲು ಕಪ್ಪು ಎಂಬ ಶಬ್ದಕ್ಕರ್ಥ. ಆ ತೈಜಸನು ಜ್ಞಾನಾ ಜ್ಞಾನಾ ಸಂಬಂಧಿಯಾಗಿಹನೆಂಬುದೀಗ ನಡುವೆ ಬಾಸುರವೆಂಬ ಶಬ್ದಕ್ಕರ್ಥ. ಆ ಪ್ರಾಜ್ಞನು ನಿರ್ಮಲ ಸ್ವರೂಪವಾದ ಸುಜ್ಞಾನಿಯಾಗಿಹ ನೆಂಬುದೀಗ ತುದಿಯಲ್ಲಿ ಬಿಳಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವ ತ್ರಯಂಗಳ ಮಧ್ಯದಲ್ಲಿ ಶಿವಕೃಪೆಯಿಂ ಸಮ್ಯಜ್ಞಾನ ಪ್ರಕಾಶಿಸಲು ಸಕಲ ಕರಣಂಗಳ ವರ್ತನೆಯು ಲಯುವ ಮಾಡುತ್ತಿಹುದೆಂಬುದೀಗ ಹಗೆವಣ್ಣ ಸಹಿತವಾಗಿ ಹುಟ್ಟಿದ ಹುಲಿ ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ಲಯುವ ಮಾಡಿದ ಸುಜ್ಞಾನ ಪ್ರಕಾಶದಿಂ ತಾಪತ್ರಯಾಗ್ನಿಯೊಡನೆ ಕೂಡಿದ ಸಂಸಾರ ವಿಷಯ ರಸದ ಘಾತವನವಗ್ರಹಿಸಿತ್ತೆಂಬುದೀಗ ಉರಿಯ ಮುಖುವನೀಂಟಿ ಎಂಬ ಶಬ್ದಕ್ಕರ್ಥ. ಅಂತು ಪಂಚ ವಿಷಯಂಗಳಲ್ಲಿ ಸಂಸಾರ ವಿಷಯ ರಸವ ನಿವೃತ್ತಿ ಮಾಡಿದನೆಂಬುದೀಗ ರಸದ ಬಾವಿಯ ಕುಡಿದು ಎಂಬ ಶಬ್ದಕ್ಕರ್ಥ. ಅಂತು ಜಾಗ್ರತ್ ಸ್ವಪ್ನಂಗಳಿಂ ಸಕಲ ಪ್ರಪಂಚು ಗ್ರಹಿಸುತ್ತಿರ್ಪ ವಿಶ್ವತೈಜಸನೆಂಬುಭಯವು ಪ್ರಾಜ್ಞನ ಅರು ವಿನಲ್ಲಿ ಲೀಯವಾದವೆಂಬುದೀಗ ತಿಂಬ ಮುಖವೆರಡು ಮುಖ ತಿನ್ನದ ಮುಖದಲ್ಲಿ ಅಡಗಿ ಎಂಬ ಶಬ್ದಕ್ಕರ್ಥ. ಶ್ರೀಗುರು ಕಾರುಣ್ಯದಿಂ ತ್ರಿವಿಧ ಲಿಂಗ ಸಂಬಂಧವಾಗಲು ಇಷ್ಟಲಿಂಗ ಸಂಬಂಧಿಯಾದ ವಿಶ್ವನು ಪ್ರಾಣ ಲಿಂಗ ಸಂಬಂಧಿಯಾದ ತೈಜಸನು ಅರುವಿನಲ್ಲಿ ಸಮರಸವಾಗಿ ಎಂಬು ದೀಗ ಕಡೆ ಕಪ್ಪು ನಡುವಣ ಭಾಸುರವೆಂಬ ಶಬ್ದಕ್ಕರ್ಥ. ಆ ಪ್ರಾಣ ಲಿಂಗ ಸಂಬಂಧಿಯಾದ ಪ್ರಾಜ್ಞನ ಮಹಾಜ್ಞಾನದ ಇರವಿನಲ್ಲಿ ಸಮರಸ ವಾದನೆಂಬುದೀಗ ತುದಿಯ ಬಿಳುಪಿನಲ್ಲಿ ಅಡಗಿ ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನ ಸ್ವರೂಪನಾದ ಪ್ರಾಜ್ಞನು ಭಾವಲಿಂಗದಲ್ಲಿ ಅಡಗಿ ನಿಷ್ಪ ತ್ತಿಯಾಯಿತ್ತೆಂಬುದೀಗ ಒಡಗೂಡಿತ್ತು. ಅದರ ತೊಡಿಗೆಯ ಕೇಳಿಹ ರೆಂದಂಜಿ ಅಡಗಿದೆ ಅಲೇಖನಾದ ಶೂನ್ಯಕಲ್ಲಿನೊಳಗಾಗಿ ಎಂಬ ಶಬ್ದಕ್ಕರ್ಥ.

೩೨. ಹುಟ್ಟದೇ ಬ್ರಹ್ಮನ ಹಂಗಿನಲ್ಲಿ? ಬೆಳೆಯದೇ ವಿಷ್ಣುವಿನ ಹಂಗಿನಲ್ಲಿ? ಸಾಯದೇ ರುದ್ರನ ಬೆಂಬಳಿಯಲ್ಲಿ? ಹರಿಯಿತ್ತು ಬ್ರಹ್ಮನ ಬಲೆ. ಗುರುವಿನ ಕರಸ್ಥಲದಲ್ಲಿ ಬಿಟ್ಟಿತ್ತು. ವಿಷ್ಣುವಿನ ಸುಖ ಲಿಂಗಾರ್ಪಿತದಲ್ಲಿ ಮರೆಯಿತ್ತು. ರುದ್ರನ ಮರಣ ವಸ್ತುವಿನ ಮೂರ್ತಿಯಲ್ಲಿ. ಮತ್ತೆ ನಾನಿನ್ನಾರ ಕೇಳಿಹೆ? ಅಲೇಖನಾದ ಶೂನ್ಯಕಲ್ಲ ಬಿಟ್ಟ ತೆರನ ಕಂಡೆ.

# ಪ್ರಸ್ತಾವನೆ.

ನಾವಿಲ್ಲಿ ರೆಮ್ಮವ್ವೆಯ ವಚನಗಳನ್ನು ಪ್ರಸಿದ್ಧಿಸಿದ್ದೇವೆ. ಈ ವಚನಗಳು ಭಕ್ತನಾದವನು ಮಹೇಶ್ವರ ಸ್ಥಲದವನಾಗಿ ಹೇಗೆ ಆಚರಿಸಬೇಕೆಂಬುದನ್ನರುಹುತ್ತವೆ. ಷಟ್‌ಸ್ಥಲದಲ್ಲಿ ಆರುಸ್ಥಲಗಳಿದ್ದು ಪ್ರತಿಯೊಂದುಸ್ಥಲದಲ್ಲಿ ಪುನಃ ಆರುಸ್ಥಲಗಳಾಗಿ ಒಟ್ಟು ೩೬ ಸ್ಥಲಗಳಾಗುತ್ತವೆ. ಒಂದು ಸ್ಥಲದ ವಿಶಿಷ್ಟತೆಯನ್ನು ಭಕ್ತ, ಮಹೇಶಾದಿ ಆರು ಸ್ಥಲಗಳಿಗನುಸರಿಸಿ ಕಾಯ್ದುಕೊಂಡು ವರ್ತಿಸುವದು ಷಟ್‌ಸ್ಥಲದ ಆಚರಣೆಯಾಗಿರುತ್ತದೆ. ಅಂದರೆ ಭಕ್ತನು ಒಂದು ಸ್ಥಲದಲ್ಲಿದ್ದುಕೊಂಡು ಅದರಿಂದಲೇ ತನ್ನ ಪ್ರಗತಿಯನ್ನುಂಟು ಮಾಡಿಕೊಳ್ಳಬಹುದೆಂದು ಈ ೩೬ ಸ್ಥಲಗಳ ರಚನೆಯಾಗಿದೆಂದು ಕಂಡುಬರುತ್ತಿದೆ. ಈ ಗ್ರಂಥದಲ್ಲಿ ರೆಮ್ಮವ್ವೆಯು ಮಹೇಶ್ವರ ಸ್ಥಲಕ್ಕೆ ಹೊಂದಿಕೆಯಾಗಿರುವ ವ್ರತಾದಿಗಳನ್ನು ಹೇಗೆ ನೆರವೇರಿಸಬೇಕೆಂಬುದನ್ನು ವಿವರಿಸಿದ್ದಾಳೆ. ಆದ್ದರಿಂದ ಈ ವಚನಗಳನ್ನು ನಾವು ಮಹೇಶನ ಭಕ್ತ, ಮಹೇಶನ ಮಹೇಶ ಇತ್ಯಾದಿ ಆರು ವಿಭಾಗಗಳಾಗಿ ವಿಂಗಡಿಸಿದ್ದೇವೆ.

ವೀರಶೈವರು ಅಂಥತೆಯಿಂದ ತಮ್ಮ ಕ್ರಿಯಾದಿಗಳನ್ನು ನೆರವೇರಿಸಿದಲ್ಲಿ ಅವರಲ್ಲಿ ಪ್ರಗತಿಯಾಗಲಾರದೆಂದು ವಚನಕಾರರು ಭಾವಿಸಿರುತ್ತಾರೆ. ಅವುಗಳನ್ನು ಅವರು ಷಟ್‌ಸ್ಥಲಾನುಸಾರವಾಗಿಯೇ ಜರಗಿಸತಕ್ಕದ್ದು. ಈ ಸಂಗತಿಯನ್ನು ನಾವು ರೆಮ್ಮವ್ವೆಯ ವಚನಗಳಲ್ಲಿ ಚನ್ನಾಗಿ ಕಂಡುಕೊಳ್ಳಬಹುದಾಗಿದೆ.

ನಾವು ೧೯೨೩ನೇ ಇಸ್ವಿಯಲ್ಲಿ ವಚನಶಾಸ್ತ್ರಸಾರ ಭಾಗ ೧ ಈ ಗ್ರಂಥವನ್ನು ಪ್ರಸಿದ್ಧಿಸುವಾಗ 'ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ' ಎಂಬ ಮುದ್ರಿಕೆಯು ರೆಮ್ಮವ್ವೆಯದೆಂತಲೂ 'ಏಲೇಶ್ವರಲಿಂಗ' ಎಂಬ ಮುದ್ರಿಕೆಯು ಏಲೇಶಕೇತಯ್ಯನದೆಂತಲೂ ಕೆಲವು ಗ್ರಂಥಗಳ ಆಧಾರದಿಂದ ಭಾವಿಸಿ ಆ ರೀತಿಯಾಗಿ ಅದರ ಪರಿಶಿಷ್ಟ 'ಬ' ಇದರಲ್ಲಿ ಕಾಣಿಸಿದ್ದೇವೆ. ಆದರೆ ೧೯೩೩ನೇ ಇಸ್ವಿಯಲ್ಲಿ ನಾವು ಪ್ರಸಿದ್ಧಿಸಿದ ಅದರ ಎರಡನೆಯ ಆವೃತ್ತಿಯಲ್ಲಿ 'ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ' ಎಂಬ ಮುದ್ರಿಕೆಯು

ಏಲೇಶಕೇತಯ್ಯನದೆಂದು ಸ್ವತಂತ್ರ ಬೇರೊಂದು ಮುದ್ರಿಕಾ ಗ್ರಂಥದ ಆಧಾರದಿಂದ ಭಾವಿಸಿ ಆ ರೀತಿ ಅದರಲ್ಲಿ ಕಾಣಿಸಿ, ಅದಕ್ಕೆ ಟಿಪ್ಪಣಿಯಾಗಿ ಇದು 'ರೆಮ್ಮವ್ವೆ' ಯದೆಂತಲೂ ಬೇರೆ ಆಧಾರಗಳು ದೊರೆಯುತ್ತಿವೆಂದು ಅದರಲ್ಲಿ ಕಾಣಿಸಿದ್ದೇವೆ. ಆದರೆ ಏಲೇಶಕೇತಯ್ಯನ ಗ್ರಾಮವು ಯಾತಗಿರಿಗೆ ಸಮೀಪವಿರುವ 'ಏಳೇರಿ' ಇಂಬುದಿದೆಂದು ನಮಗೆ ಈಚೆಗೆ ತಿಳಿದು ಬಂದಿದೆ. ಇಲ್ಲಿ ಏಲೇಶ್ವರ ದೇವಸ್ಥಾನವಿದ್ದು ಕೇತಯ್ಯನ ಐತಿಹ್ಯವೂ ಅಲ್ಲಿ ಉಂಟು. ಆದ್ದರಿಂದ 'ಏಲೇಶ್ವರಲಿಂಗ' ಇದು ಏಲೇಶಕೇತಯ್ಯನ ಮುದ್ರಿಕೆಯೇ ಇರುತ್ತದೆಂದು ಸ್ಪಷ್ಟವಾಗುತ್ತದೆ. ಒಬ್ಬ ವಚನಕಾರನು ಬೇರೊಬ್ಬ ವಚನಕಾರನ ಮುದ್ರಿಕೆಯನ್ನು ತೆಗೆದುಕೊಳ್ಳುವದಿಲ್ಲ. ಆದ್ದರಿಂದ 'ಆಚಾರವೇ ಪ್ರಾಣವಾದ ಮಹೇಶ್ವರಲಿಂಗ' ಈ ಮುದ್ರಿಕೆಯು ನಾವು ಮೊದಲು ಭಾವಿಸಿದಂತೆ ರೆಮ್ಮವ್ವೆಯದೇ ಇರುತ್ತದೆಂದುತೋರುತ್ತದೆ.

ಕದಿರೀಕಾಯಕದ ರೆಮ್ಮವ್ವೆ ಎಂಬ ಇನ್ನೊಬ್ಬ ಸ್ತ್ರೀವಚನಕಾರಳಿದ್ದಾಳೆ. ಆಕೆಯ ಮುದ್ರಿಕೆಯು "ಕದಿರರೆಮ್ಮೆಯೊಡೆಯ ಗುಮ್ಮೇಶ್ವರಾ" ಎಂದು ಇದೆ. ಆದರೆ ಆಕೆಗೂ ಈಗಿನ ರೆಮ್ಮವ್ವೆಗೂ ಏನೂ ಸಂಬಂಧ ವಿರುವದಿಲ್ಲ.

ರೆಮ್ಮವ್ವೆಯ ಚರಿತ್ರೆಯು ನಮಗೆ ತಿಳಿದು ಬಂದಿಲ್ಲ. ಆಕೆಯು ಪುರಾತನಳಿರುವಳೆಂದು ಆಕೆಯ ವಚನಗಳ ರಚನಾ ಪದ್ಧತಿಯಿಂದ ನಮಗೆ ತೋರುತ್ತಿದೆ.

ಈ ಗ್ರಂಥವನ್ನಾದರೂ ನಾವು ಬೇರೆ ಬೇರೆ ವಚನಗಳ ಸಂಗ್ರಹ ಗ್ರಂಥಗಳೊಳಗಿಂದ ಆಯ್ದು ಸಿದ್ಧಪಡಿಸಿದ್ದೇವೆ.

ವಿಜಾಪುರ<br>೧೨-೩-೧೯೪೧

ಫ. ಗು. ಹಳಕಟ್ಟಿ<br>ಸಂಪಾದಕ.

ಗಳಲ್ಲಿ ಅಂದರೆ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ, ಇವುಗಳಲ್ಲಿ ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವ ಲಿಂಗ, ಜಂಗಮ-ಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಾಗಿ ಧ್ಯಾನಿ ಸುವದು ಧ್ಯಾನಯೋಗವೆನಿಸುವದು. ಹೀಗೆ ಧ್ಯಾನಿಸಿದಲ್ಲಿ ಆಯಾ ಲಿಂಗ ಗಳು ಆಯಾಚಕ್ರಗಳಲ್ಲಿ ಸ್ಥಿರವಾಗುವವು. ಇದರಿಂದ ಭಾವ, ಕರಣ ಮನ ಮುಖ್ಯವಾದ ಸರ್ವಾಂಗದಲ್ಲಿ ಆ ಲಿಂಗವು ತೊಳಗಿ ಬೆಳಗಹತ್ತಲು ಆ ಲಿಂಗದೊಡನೆ ಆಚರಣೆಗಳುಂಟಾಗುವವು. ಇದೇ ಧಾರಣ ಯೋಗವು ಈ ಆರು ಲಿಂಗಗಳು ಇಷ್ಟ ಪ್ರಾಣ ಭಾವಲಿಂಗದೊಳಗಿನವಿದ್ದುದರಿಂದ ಅವುಗಳಲ್ಲಿಯೇ ಬೆರೆದು, ಆಮೇಲೆ ಈ ತ್ರಿವಿಧ ಲಿಂಗಗಳನ್ನು ಪುನಃ ಏಕಾ ಕಾರ ಮಾಡಿ, ಅಖಂಡ ಪರಿಪೂರ್ಣ ಕೇವಲ ಪರಂಜ್ಯೋತಿ ಸ್ವರೂಪವಾ ಗಿರುವ ಮಹಾಲಿಂಗದೊಡನೆ ಸಂಯೋಗವಾಗಬೇಕು. ಇದೇ ಸಮಾಧಿ ಯೋಗವು. ಇತರ ಯೋಗಗಳಲ್ಲಿ ಈ ತೆರದ ಲಿಂಗ ಸಂಬಂಧವಿರುವುದಿಲ್ಲ. ಅವು ಕೇವಲ ಕರ್ಮಕೌಶಲಗಳಾಗಿವೆ. ಆದರೆ ಶಿವಯೋಗಿಯು ತನಗೆ ಗುರುವಿತ್ತ ಇಷ್ಟಲಿಂಗವನ್ನು ದೃಷ್ಟಿಯಿಂದ ಗ್ರಹಿಸುವನು. ಹೀಗೆ ಗ್ರಹಿಸಿ ಪ್ರಾಣಲಿಂಗವನ್ನು ತನ್ನ ಮನಸ್ಸಿನಿಂದ ದೃಢವಾಗಿ ಹಿಡಿದು ಮುಂದೆ ಭಾವಲಿಂಗವನ್ನು ತನ್ನ ಭಾವದಿಂದ ಅರಿಯುವನು. ಹೀಗೆ ತ್ರಿವಿಧ ಲಿಂಗಗಳೊಡನೆ ಆಚರಿಸಿ, ಲಿಂಗದೊಡನೆ ಕೂಡಿ, ಲಿಂಗವೇ ತಾನು ತಾನಾಗಿ ಬಯಲಾಗುವನು. ಇದಕ್ಕೆ ಯಾವುದು ಸಾಧನವೋ ಅದೇ ಶಿವಯೋಗವು.

(೬೫) ಪಂಚಕರ್ಮೇಂದ್ರಿಯುಗಳುಃ—ಇವು ವಾಕ್, ಪಾಣಿ, ಪಾದ, ಗುದ, ಗುಹ್ಯ ಎಂದು ಐದು ಇವೆ. ಇವು ಕ್ರಿಯಾ ರೂಪವಾಗಿರುತ್ತವೆ. ಇವು ಸ್ವತಂತ್ರವಾಗಿರದೆ ಜೀವನಿಗೆ ಅಧೀನವಾಗಿರುತ್ತವೆ. ಜೀವನು ಮನಸ್ಸನ್ನು ಇಂದ್ರಿಯುಗಳೊಡನೆ ಬೆರಿಸಲು ಅವು ವಾಯುವಿನ ಚೈತನ್ಯ ಬಲದಿಂದ ವ್ಯವಹರಿಸುತ್ತವೆ. ವಾಗಿಂದ್ರಿಯವು ಮಾತು ಕಥೆಯಾಡುತ್ತಿದೆ. ಪಾಣೀಂದ್ರಿಯವು ಕೊಡುವದು, ತೆಗೆದುಕೊಳ್ಳುವದು, ಹಿಡಿಯುವದು ಮೊದಲಾದ ಕಾರ್ಯಗಳನ್ನು ಮಾಡುತ್ತಿದೆ. ಪಾದೇಂದ್ರಿಯವು ಹೋಗು ವದು ಬರುವದು ಈ ಮೊದಲಾದ ಕಾರ್ಯಗಳನ್ನು ಮಾಡುತ್ತದೆ. ಗುದೇಂದ್ರಿಯವು ಮಲ ವಿಸರ್ಜನ ಕಾರ್ಯವನ್ನು ಮಾಡುತ್ತಿದೆ. ಗುಹ್ಯೇಂದ್ರಿಯವು ಮೈಥುನ ಕಾರ್ಯ ಮಾಡುತ್ತಿದೆ. ಇವೆಲ್ಲವೂ ಕರ್ಮೇಂ ದ್ರಿಯಗಳು. ಗುಪ್ತ ವಾಯುವೆಂತಲೂ ಹೆಸರಿದೆ.

(೪೬) ಪಂಚಜ್ಞಾನೇಂದ್ರಿಯಗಳು:— ಇವು ಶ್ರೋತ್ರ, ತ್ವಕ್ಕು, ನೇತ್ರ ಜಿಹ್ವೆ, ಘ್ರಾಣ ಇವು ಇವೆ. ಇವುಗಳಿಗೆ ಬುದ್ಧೀಂದ್ರಿಯಗಳೆಂಬ ಹೆಸರೂ ಇದೆ. ಶ್ರೋತ್ರೇಂದ್ರಿಯ ಅಥವಾ ಶ್ರವಣೇಂದ್ರಿಯಕ್ಕೆ ಆಕಾಶ ತತ್ವವು ಮೂಲ ಚೈತನ್ಯವು. ಶಬ್ದವನ್ನು ಈ ಇಂದ್ರಿಯವು ಗ್ರಹಿಸುತ್ತದೆ. ತ್ವಗಿಂದ್ರಿಯಕ್ಕೆ ವಾಯು ತತ್ವವು ಮೂಲ ಚೈತನ್ಯವು. ಇದು ಸ್ಪರ್ಶನ ವಿಷಯವನುಳ್ಳದ್ದು. ನಯನೇಂದ್ರಿಯಕ್ಕೆ ಅಗ್ನಿ ತತ್ವವು ಮೂಲ ಚೈತನ್ಯವು. ಇದಕ್ಕೆ ರೂಪು ವಿಷಯವಾಗಿರುತ್ತದೆ. ಜಿಹ್ವೇಂದ್ರಿಯಕ್ಕೆ ಅಪ್ಪು ತತ್ವವು ಮೂಲ ಚೈತನ್ಯವು ಇದು ರಸ ವಿಷಯವನ್ನು ಗ್ರಹಿಸಿ ಸುರುಚಿ ಕುರುಚಿಗಳನ್ನು ಗ್ರಹಿಸುವದು. ಘ್ರಾಣೇಂದ್ರಿಯಕ್ಕೆ ಪೃಥ್ವಿ ತತ್ವವು ಮೂಲ ಚೈತನ್ಯವು. ಅಲ್ಲಿ ಗಂಧ ವಿಷಯವಿದ್ದು ಅದು ಸುಗಂಧ ದುರ್ಗಂಧವನ್ನರಿಯುವದು.

(೪೭) ಪಂಚ ವಿಷಯಗಳು:— ಇವುಗಳಿಗೆ ತನ್ಮಾತ್ರೆಗಳು ಎಂಬ ಹೆಸರೂ ಇದೆ. ಇವು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಿರುತ್ತವೆ. ಇವುಗಳು ಅನುಕ್ರಮವಾಗಿ ಶ್ರೋತ್ರೇಂದ್ರಿಯ, ತ್ವಗಿಂದ್ರಿಯ, ನಯನೇಂದ್ರಿಯ, ಜಿಹ್ವೇಂದ್ರಿಯ, ಘ್ರಾಣೇಂದ್ರಿಯ ಇವುಗಳಿಗೆ ಸಂಬಂಧಪಡುತ್ತವೆ.

(೪೮) ಕರಣ ಚತುಷ್ಟಯಗಳು:— ಇವು ಮನ, ಬುದ್ಧಿ, ಚಿತ್ತ, ಅಹಂಕಾರ ಇವುಗಳಿರುತ್ತವೆ. ಮನಸ್ಸಿಗೆ ವಾಯುವು ಮೂಲ ಚೈತನ್ಯವು. ಮನಸ್ಸು ಸಂಕಲ್ಪ ವಿಕಲ್ಪಗಳನ್ನು ಮಾಡಿಸುತ್ತದೆ. ಬುದ್ಧಿಗೆ ಅಪ್ಪು ಮೂಲ ಚೈತನ್ಯವು. ನಿಶ್ಚೈಸುವದೇ ಅದರ ಕಾರ್ಯವು. ಚಿತ್ತಕ್ಕೆ ಪೃಥ್ವಿಯೇ ಮೂಲ ಚೈತನ್ಯವು. ಅದು ಸಂಸಾರ ವಿಷಯಕವಾದ ಕಾರ್ಯಗಳನ್ನು ಮಾಡಿಸುತ್ತದೆ. ಅಹಂಕಾರಕ್ಕೆ ಅಗ್ನಿಯೇ ಮೂಲ ಚೈತನ್ಯವು. ಅದು ಅಹಂಭಾವದಿಂದ ಅಹಂಕರಿಸುತ್ತಿದೆ. ಇವು ನಾಲ್ಕು ಕರಣ ಚತುಷ್ಟಯಗಳು. ಇವೆಲ್ಲವೂ ಆತ್ಮನಿಗೆ ಸಂಬಂಧಪಟ್ಟವುಗಳಿರುತ್ತವೆ.

(೪೯) ತ್ಯಾಗಾಂಗ ಭೋಗಾಂಗ ಯೋಗಾಂಗಗಳು:—ಇವು ಭಕ್ತನ ಆಚರಣೆಗಳು: ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಅನುಕ್ರಮವಾಗಿ ಸಂಬಂಧಿಸಿರುತ್ತವೆ. ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಿಂದ ಈ ಮೂರು ಶರೀರಗಳಲ್ಲಿ ಇಷ್ಟ ಪ್ರಾಣ ಭಾವಲಿಂಗಗಳು ಅನುಕ್ರಮ

ವಾಗಿ ನೆಲೆಗೊಳ್ಳುತ್ತವೆ. ಸಂಸಾರದಲ್ಲಿ ಕೆಡಕಾದುದು ಅವುದೋ ಅದನ್ನು ಬಿಡುವುದೇ ತ್ಯಾಗಾಂಗವು. ಕೆಡಕಿನ ಕಡೆಗೆ ತನುಗುಣಗಳ ಪ್ರವೃತ್ತಿ ಇರುತ್ತದೆ. ಈ ಪ್ರವೃತ್ತಿಯನ್ನು ತೊಲಗಿಸಿ ಸದಾಚಾರದ ಕಡೆಗೆ ಮನುಷ್ಯನು ಒಲಿಯಬೇಕು. ಇದೇ ಅವನಲ್ಲಿಯ ತ್ಯಾಗಾಂಗವು. ಲಿಂಗದೊಡನೆ ಮನುಷ್ಯನು ತನ್ನ ಎಲ್ಲ ಸುಖಗಳನ್ನು ಭೋಗಿಸುವದೇ ಭೋಗಾಂಗವು. ಅಂದರೆ ಅವನು ಶಿವಾರ್ಪಣ ಬುದ್ಧಿಯಿಂದ ತನ್ನ ಕೃತ್ಯಗಳನ್ನು ಮಾಡಬೇಕು. ಈ ಬಗೆಯ ಅರ್ಪಣದಿಂದ ಅವನು ಶಿವಪ್ರಸಾದವನ್ನು ಪಡೆದು ಜಗತ್ತಿನಲ್ಲಿವ್ಯವಹರಿಸುತ್ತಾನೆ. ಅವನು ಲಿಂಗ ಭೋಗೋಪಭೋಗಿ ಎಂದೆನಿಸಿಕೊಳ್ಳುತ್ತಾನೆ. ಇದೇ ಭೋಗಾಂಗವು ಮನುಷ್ಯನು ತನ್ನ ನಿಜದಲ್ಲಿ ಬೆರೆಯಲು ಅದು ಯೋಗಾಂಗವು. ತ್ಯಾಗಾಂಗ ಭೋಗಾಂಗಗಳಿಂದ ಮನುಷ್ಯನಲ್ಲಿ ಅವನ ನಿಜವು ಅಳವಡುತ್ತದೆ. ಈ ನಿಜದಲ್ಲಿ ಏಕರೂಪವಾಗಲು ಅದೇ ಯೋಗಾಂಗವೆನಿಸಿಕೊಳ್ಳುತ್ತದೆ.

(೩೦) ಇಷ್ಟಪ್ರಾಣ ಭಾವಲಿಂಗಗಳು:—ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಿಂದ ಮನುಷ್ಯನ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಲ್ಲಿ ಪರಮಾತ್ಮನ ಕಳೆಯು ಪ್ರಜ್ವಲಿಸಹತ್ತುತ್ತದೆ. ಈ ಕಳೆಯೇ ಲಿಂಗವೆನಿಸಿಕೊಳ್ಳುತ್ತದೆ. ಇದೇ ಆ ಮೂರು ಶರೀರಗಳಲ್ಲಿ ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಹೆಸರುಗಳನ್ನು ತಾಳಿ ಪ್ರಕಟವಾಗುತ್ತದೆ. ಇಷ್ಟಲಿಂಗವು ಸತ್‌ಕ್ರಿಯಾ ಸ್ವರೂಪವುಳ್ಳದ್ದಾಗಿರುತ್ತದೆ. ಈ ಕ್ರಿಯೆಗಳಿಗೆ ಸಾಧನವಾಗಿರುವಂಥವು ಇಂದ್ರಿಯಗಳು. ಈ ಇಂದ್ರಿಯಗಳಿಗೆ ಚೈತನ್ಯವಾಗಿರುವದು ಪ್ರಾಣವು. ಈ ಪ್ರಾಣದಲ್ಲಿಯೇ ಪ್ರಾಣಲಿಂಗವು ನೆಲೆಗೊಳ್ಳುತ್ತದೆ. ಈ ಪ್ರಾಣಲಿಂಗಕ್ಕೆ ಪುನಃ ಮೂಲವಾಗಿರುವದು ಭಾವಲಿಂಗವು. ಭ್ರಮೆಗಳು ಮನುಷ್ಯನಲ್ಲಿ ನಷ್ಟವಾಗಿ ಶಿವಾನುಭವವು ನೆಲೆಗೊಳ್ಳಲು ಈ ಭಾವಲಿಂಗವು ಕಾರಣ ಶರೀರದಲ್ಲಿ ಪ್ರಜ್ವಲಿಸಹತ್ತುತ್ತದೆ. ಈ ಪ್ರಕಾರ ಇಷ್ಟಲಿಂಗವು ಅಂಗದಲ್ಲಿ ಅಳವಡುತ್ತದೆ, ಪ್ರಾಣಲಿಂಗವು ಮನದಲ್ಲಿ ಅಳವಡುತ್ತದೆ, ಭಾವಲಿಂಗವು ಭಾವದಲ್ಲಿ ಅಳವಡುತ್ತದೆ. ಅಂದರೆ ಇಷ್ಟ ಲಿಂಗವು ಬಾಹ್ಯಶರೀರದಲ್ಲಿ ತೋರುತ್ತದೆ. ಪ್ರಾಣಲಿಂಗವು ಪ್ರಾಣದಲ್ಲಿ ತೋರುತ್ತದೆ. ಭಾವಲಿಂಗವು ಇವೆಲ್ಲವುಗಳಿಗೂ ಮೇಲಿರುವ ಕಾರಣ ಶರೀರದಲ್ಲಿ ನೆಲೆಗೊಂಡಿರುತ್ತದೆ.

(೫೧) ಭಕ್ತಿಗಳು:– ಇವು ಶ್ರದ್ಧೆ, ನಿಷ್ಠೆ, ಅವಧಾನ, ಅನು ಭಾವ, ಸುಜ್ಞಾನ ಮತ್ತು ಸಮರಸ ಎಂದು ಆರು ವಿಧವಾಗಿವೆ. ಶ್ರದ್ಧೆ ಎಂದರೆ ನಂಬಿಗೆ, ಅಥವಾ ವಿಶ್ವಾಸವು. ದೃಢವಾದ ನಂಬಿಗೆಯೇ ನಿಷ್ಠೆ ಯಾಗಿದೆ. ವಿಶ್ವಾಸವು ಬಲಿಯಲು ನಿಷ್ಠೆ ಎಂದೆನಿಸಿಕೊಳ್ಳುತ್ತದೆ. ವಿಶ್ವಾಸ ವುಳ್ಳವನೇ ಭಕ್ತಸ್ಥಲದವನು. ನಿಷ್ಠೆಯುಳ್ಳವನು ಮಹೇಶ್ವರಸ್ಥಲದವನು. ಇವೆರಡೂ ಸ್ಥೂಲ ಶರೀರಕ್ಕೆ ಸಂಬಂಧಿಸಿವೆ. ಮನಸ್ಸಿಗೆ ಸಂಬಂಧಿಸಿ ದುದು ಅವಧಾನ ಭಕ್ತಿಯು. ಅವಧಾನವೆಂದರೆ ಮನಸ್ಸಿನ ಏಕಾಗ್ರತೆಯು. ಇದು ಪ್ರಸಾದಿಸ್ಥಲಕ್ಕೆ ಸಂಬಂಧಿಸಿದುದು. ಮನಸ್ಸಿನಲ್ಲಿ ಏಕಾಗ್ರತೆ ಯುಂಟಾಗಲು ಅಂತರಂಗದ ಕ್ರಿಯೆಗಳನ್ನು ಸರಿಯಾಗಿ ಜರಗಿಸುವ ಯೋಗ್ಯತೆಯುಂಟಾಗುವದು. ಜೀವನ ಈ ಸ್ಥಿತಿಯೇ ಅನುಭಾವ ಭಕ್ತಿಯು. ಇದು ಪ್ರಾಣಲಿಂಗಿಗೆ ಸಂಬಂಧಿಸಿದುದು. ಇವನಲ್ಲಿ ಅಂತ ರಂಗ ಬಹಿರಂಗವೆರಡೂ ಪರಸ್ಪರತ್ವವನ್ನು ಹೊಂದಿ ಕಾರ್ಯ ಮಾಡು ತ್ತವೆ. ಅವಧಾನ ಭಕ್ತಿ ಮತ್ತು ಅನುಭಾವ ಭಕ್ತಿ ಇವೆರಡೂಸೂಕ್ಷ್ಮ ಶರೀರಕ್ಕೆ ಸಂಬಂಧಿಸಿದವು. ಸುಜ್ಞಾನಭಕ್ತಿ ಮತ್ತು ಸಮರಸಭಕ್ತಿ ಗಳು ಕಾರಣಶರೀರಕ್ಕೆ ಸಂಬಂಧಿಸಿದವು. ಇವುಗಳಲ್ಲಿ ಸುಜ್ಞಾನ ಭಕ್ತಿಯು ಶರಣಸ್ಥಲಕ್ಕೆ ಸಂಬಂಧಿಸಿರುತ್ತದೆ. ಕಾರ್ಯಗಳ ರೀತಿ, ಅವುಗಳ ಮರ್ಮ ಅಥವಾ ಹದವನ್ನು ಅರಿತು ಮಾಡುವದೇ ಸುಜ್ಞಾನ ಭಕ್ತಿ ಎನಿಸಿಕೊಳ್ಳುತ್ತದೆ. ಈ ಭಕ್ತಿಯುಳ್ಳವನು ಪೂರ್ಣ ಅನುಭವವನ್ನು ಹೊಂದಿದವನಿರುತ್ತಾನೆ. ಇವನಲ್ಲಿ ಕ್ರಿಯಾಜ್ಞಾನಗಳ ಭೇದಉಳಿಯುವದಿಲ್ಲ. ಸಮರಸ ಭಕ್ತಿಯು ಐಕ್ಯಸ್ಥಲಕ್ಕೆ ಸಂಬಂಧಿಸಿದುದು. ಇದು ಮನುಷ್ಯನ ಎಲ್ಲ ಶರೀರಗಳಲ್ಲಿ ಉಂಟಾಗುವ ಎಲ್ಲತರದ ಅನುಭವಗಳಲ್ಲಿ ಸಾಮರಸ್ಯತೆ ಯನ್ನುಂಟು ಮಾಡುತ್ತದೆ.

(೫೨) ಹಸ್ತಗಳು:— ಇವು ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ ಎಂದು ಆರು ಇರುತ್ತವೆ. ಸುಚಿತ್ತವು ಸಂಸಾರ ಲೋಲುಪತೆಯನ್ನು ದೂರಮಾಡಿ ವಿಶ್ವಬಂಧುತ್ವಭಾವವನ್ನುಂಟು ಮಾಡುತ್ತದೆ. ಇದು ನೈತಿಕಾಚಾರಕ್ಕೆ ಕಾರಣವಾದುದು. ಸುಬು ದ್ಧಿಯು ಮನಸ್ಸಿನ ಚಾಂಚಲ್ಯವನ್ನು ಹೋಗಲಾಡಿಸಿ ತಿಳುವಳಿಕೆಯನ್ನು ಹುಟ್ಟಿಸುವದು. ನಿರಹಂಕಾರವು ಅಹಂಭಾವವನ್ನು ಹೋಗಲಾಡಿಸಿ ಅರ್ಪಣ ಬುದ್ಧಿಯಿಂದ ಆಚರಿಸುವಂತೆ ಮಾಡುವದು. ಸುಮನವು

ಶುದ್ಧಾಂತಃಕರಣವನ್ನುಂಟು ಮಾಡುತ್ತದೆ. ಸುಜ್ಞಾನವು ಇಂದ್ರಿಯಗಳ ದುಷ್ಟಪ್ರವೃತ್ತಿಗಳನ್ನು ದೂರಮಾಡುತ್ತದೆ. ಲಿಂಗಪ್ರಸಾದವಾಗಿ ಲಿಂಗ ಸಂಸಾರಿಯಾಗಿ ಆಚರಿಸುವಂತೆ ಮಾಡುತ್ತದೆ. ಸದ್ಭಾವವು ಲಿಂಗದಲ್ಲಿ ತಾ ಕೂಡಿ ತನ್ನಲ್ಲಿ ಲಿಂಗವು ಕೂಡಿ ತಾನು ಮತ್ತು ಲಿಂಗ ಎಂಬ ಉಭಯಭಾವವಳಿದು ತಾನು ತಾನಾಗಿರುವಂತೆ ಮಾಡುತ್ತದೆ. ಇವೆಲ್ಲವು ಮನುಷ್ಯನಿಗೆ ಹಸ್ತಗಳಂತೆ ಇರುತ್ತವೆ. ಅಂದರೆ ಇವುಗಳ ಸಹಾಯದಿಂದಲೇ ಅವನು ಆಚರಿಸಿ ಆರು ಸ್ಥಲಗಳ ಪ್ರಕಾರ ಪ್ರಗತಿಯನ್ನು ಹೊಂದುತ್ತಾ ಹೋಗುತ್ತಾನೆ.

(೫೩) ಅಂಗಸ್ಥಲಗಳು:– ಇವು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದಿರುತ್ತವೆ. ಇವೇ ಮುಖ್ಯ ಷಟ್‌ಸ್ಥಲ ವಿಭೇದಗಳು. ಭಕ್ತನು ವಿಶ್ವಾಸವುಳ್ಳವನು, ನೀತಿವಂತನು, ಸದಾಚಾರಿಯು. ಮಹೇಶ್ವರನು ದೃಢಚಿತ್ತನು, ಶೂರನು, ಹಿಡಿದುದನ್ನು ಬಿಡುವವನಲ್ಲ, ವ್ರತನಿಷ್ಠನು, ಧೈರ್ಯವಂತನು, ಏಕಲಿಂಗ ನಿಷ್ಠಾಪರನು, ಸತ್‌ಶೀಲನು, ಅನ್ಯಾಯವನ್ನು ನಿಗ್ರಹಿಸುವವನು, ಸಾಮರ್ಥ್ಯವಂತನು, ಕಷ್ಟಗಳನ್ನು ಲೆಕ್ಕಿಸುವವನಲ್ಲ. ಪ್ರಸಾದಿಯು ಆತ್ಮಾರ್ಪಣ ಭಾವದಿಂದ ವರ್ತಿಸುವವನು, ನಿಷ್ಕಾಮ ಕರ್ಮಿಯು, ಏಕಾಗ್ರಚಿತ್ತನು, ಅಹಂಕಾರವಿರಹಿತನು, ತಾನೆಂಬುದನ್ನು ಬಿಟ್ಟವನು. ಪ್ರಾಣಲಿಂಗಿಯು ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡವನು, ಲಿಂಗದಲ್ಲಿ ಆಸಕ್ತಿಯುಳ್ಳವನು, ಲಿಂಗದೊಡನೆ ಆಚರಿಸುವವನು, ಪ್ರಾಣವೇ ಲಿಂಗವಾಗಿರುವವನು. ಶರಣನು ಶಿವಾನುಭವವನ್ನು ಹೊಂದಿದವನು, ಲಿಂಗದ ಅರಿವುಳ್ಳವನು. ಲಿಂಗದ ಪ್ರಕಾಶದಲ್ಲಿಯೇ ಆಚರಿಸುವವನು, ವಿಶ್ವಕುಟುಂಬಿಯಾಗಿರುವವನು, ತನ್ನದೆಂಬುದನ್ನು ಸಂಪೂರ್ಣ ತೊರೆದವನು, ವಿನಯ ಪೂರ್ಣನು, ಶರಣು ಭಾವವುಳ್ಳವನು ಐಕ್ಯನಲ್ಲಿ ಆವ ತರದ ಭೇದಭಾವವು ಇರುವದಿಲ್ಲ, ತಾನೂ, ತನ್ನ ಕ್ರಿಯೆಗಳೂ, ಜಗತ್ತೂ ಇವುಗಳಲ್ಲೆಲ್ಲ ಸಾಮರಸ್ಯ ಭಾವವುಳ್ಳವನಾಗಿರುತ್ತಾನೆ. ಅವನು ಮನುಷ್ಯನ ಶ್ರೇಷ್ಠತ್ವದ ಪರಮಾವಧಿ ಸ್ಥಿತಿಯನ್ನು ಹೊಂದಿರುತ್ತಾನೆ. ಭಕ್ತನಿಗೆ ಕ್ರಿಯೆ, ಮಹೇಶ್ವರನಿಗೆ ನಿಶ್ಚಯವು, ಪ್ರಸಾದಿಗೆ ಅರ್ಪಣವು, ಪ್ರಾಣಲಿಂಗಿಗೆ ಯೋಗವು, ಶರಣನಿಗೆ ನಿಬ್ಬೆರಗು, ಐಕ್ಯನಿಗೆ ನಿರ್ಲೇಪವೆಂದು ಬೇರೊಂದು ವಿಧವಾಗಿ ಹೇಳಲ್ಪಡುತ್ತದೆ. ಭಕ್ತನಿಗೆ ಕಿಂಕರತ್ವವು, ಮಹೇಶ್ವರನಿಗೆ ಸಾರಾಸಾರ ವಿಚಾರವು, ಪ್ರಸಾ

ದಿಗೆ ತನುಗುಣಲೋಪವು, ಪ್ರಾಣಲಿಂಗಿಗೆ ಅಂತರ್ಲಕ್ಷ್ಯವು, ಶರಣನಿಗೆ ನಿಸ್ಸಂಗತ್ವವು, ಐಕ್ಯಂಗೆ ಬಯಲು ಎಂತಲೂ ಹೇಳಬಹುದು. ಷಟ್ ಸ್ಥಲ ಶಾಸ್ತ್ರದಲ್ಲಿ ಈ ಸ್ಥಲಗಳ ವಿಷಯವಾಗಿ ವಿಸ್ತೃತ ವಿವೇಚನೆಗಳ ರುತ್ತವೆ.

(೫೪) ಉಪಾಂಗಗಳುಃ— ಇವು ಭಕ್ತಿ, ಕರ್ಮಕ್ಷಯ, ಬುದ್ಧಿ, ವಿಚಾರ, ದರ್ಪಸಂಕ್ಷಯ, ಸಮ್ಯಜ್ಞಾನ ಎಂದು ಆರು ಇರುತ್ತವೆ. ಭಕ್ತಿ ಮತ್ತು ಕರ್ಮಕ್ಷಯ ಇವು ಸ್ಥೂಲ ಶರೀರಕ್ಕೆ ಸಂಬಂಧವಾದವು ಗಳು. ಸೂಕ್ಷ್ಮ ಶರೀರಕ್ಕೆ ಸಂಬಂಧವಾದವುಗಳು ಬುದ್ಧಿ ಮತ್ತು ವಿಚಾರ. ಮತ್ತು ಕಾರಣಶರೀರಕ್ಕೆ ಸಂಬಂಧವಾದವುಗಳು ದರ್ಪಸಂಕ್ಷಯ ಮತ್ತು ಸಮ್ಯಜ್ಞಾನ. ಇವು ಆರು ಉಪಾಂಗಗಳು. ಇವು ವಚನಶಾಸ್ತ್ರದಲ್ಲಿ ಬಹು ಕ್ವಚಿತ್ತಾಗಿ ಉಲ್ಲೇಖಿಸಲ್ಪಡುತ್ತವೆ. ಆದರೆ ಕೆಲವು ಆಗಮ ಗ್ರಂಥ ಗಳಲ್ಲಿ ಬರುವದುಂಟು.

(೫೫) ಅಂಗಗಳುಃ— ಇವು ಸರ್ವಜ್ಞತಾ, ತೃಪ್ತಿ, ಅನಾದಿಬೋಧ, ಸ್ವತಂತ್ರತಾ, ಅಲುಪ್ತಾಶಕ್ತಿ, ಅನಂತಶಕ್ತಿ ಎಂದು ಆರು ಇವೆ. ಇವು ಮೇಲೆ ಹೇಳಿದ ಉಪಾಂಗಗಳಿಂದ ಆಯಾ ಸ್ಥಲಗಳಲ್ಲಿ ಆಗುವ ಪರಿಣಾ ಮಗಳೆಂದು ಹೇಳಬಹುದು. ಇವಾದರೂ ವಚನಶಾಸ್ತ್ರ ಗ್ರಂಥಗಳಲ್ಲಿ ಕ್ವಚಿತ್ತಾಗಿ ಬರುತ್ತವೆ. ಆದರೆ ಕೆಲವು ಆಗಮಗ್ರಂಥಗಳಲ್ಲಿ ಇವು ಉಲ್ಲೇ ಖಿಸಲ್ಪಡುವದುಂಟು. ಭಕ್ತಿಯ ಮೂಲಕ ಸರ್ವಜ್ಞತೆಯು, ಕರ್ಮಕ್ಷ ಯುದ ಮೂಲಕ ಅನಾದಿ ಬೋಧವು, ವಿಚಾರದ ಮೂಲಕ ಸ್ವತಂತ್ರ ತೆಯು, ದರ್ಪ ಸಂಕ್ಷಯದ ಮೂಲಕ ಅಲುಪ್ತಾಶಕ್ತಿಯು, ಸಮ್ಯಜ್ಞಾನದ ಮೂಲಕ ಅನಂತಶಕ್ತಿಯು, ಮನುಷ್ಯನಲ್ಲಿ ಅಳವಡುತ್ತವೆಂಬ ಭಾವವು ಇವುಗಳಲ್ಲಿದೆ.

(೫೬) ಷಡ್ಲಿಂಗಗಳುಃ— ಇವು ಆಚಾರಲಿಂಗ, ಗುರುಲಿಂಗ, ಶಿವ ಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದಿವೆ. ಇವು ಅನುಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಇವುಗಳಿಗೆ ಸಂಬಂಧಪಡುತ್ತವೆ. ಅಂದರೆ ಈ ಆರು ಸ್ಥಲಗಳಲ್ಲಿ ಆಯಾ ಲಿಂಗಗಳು ಮನುಷ್ಯನಲ್ಲಿ ಅಳವಡುತ್ತವೆ. ಭಕ್ತಸ್ಥಲದಲ್ಲಿ ಶ್ರದ್ಧಾ ಭಕ್ತಿಯ ಮೂಲಕ ಆಚಾರಲಿಂಗವಳವಡುತ್ತದೆ. ನೈತಿಕ ಉನ್ನತಿಯೇ ಈ

ಆಚಾರಲಿಂಗವಾಗಿರುತ್ತದೆ. ಆಚಾರಲಿಂಗವು ನಿಷ್ಠೆಯಿಂದ ಬಲಪಡಲು ಅದು ಮಹೇಶ್ವರ ಸ್ಥಲದಲ್ಲಿ ಗುರುಲಿಂಗವೆನಿಸಿಕೊಳ್ಳುತ್ತಿದೆ. ಅವಧಾನ ಭಕ್ತಿಯಿಂದ ಲಿಂಗದಲ್ಲಿ ಮನ ಮಗ್ನವಾಗಲು ಹೃದಯದಲ್ಲಿ ಶಿವಲಿಂಗವು ತೋರುವದು. ಮುಂದೆ ಆ ಲಿಂಗದೊಡನೆ ವ್ಯವಹರಿಸಲಾಗಿ ಅದು ಚೈತನ್ಯಾತ್ಮಕವಾದ ಜಂಗಮಲಿಂಗವು. ಮನುಷ್ಯನಲ್ಲೆಲ್ಲ ತಲೆದೋರುವದು. ಶರಣನಲ್ಲಿ ಪ್ರಸಾದಲಿಂಗವಿರುತ್ತದೆ. ಮತ್ತು ಐಕ್ಯನಲ್ಲಿ ಮಹಾಲಿಂಗವಿರುತ್ತದೆ. ಮನುಷ್ಯನಲ್ಲಿ ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನ, ಭಾವಗಳಿರುತ್ತವೆ. ಇವುಗಳಿಂದಲೇ ಮನುಷ್ಯನ ಕ್ರಿಯೆಗಳು ನಡೆಯುತ್ತವೆ. ಲಿಂಗವಶದಿಂದ ಆಚರಿಸುವ ಮನುಷ್ಯನಲ್ಲಿ ಚಿತ್ತಕ್ಕೆ ಆಚಾರಲಿಂಗವು, ಬುದ್ಧಿಗೆ ಗುರುಲಿಂಗವು, ಅಹಂಕಾರಕ್ಕೆ ಶಿವಲಿಂಗವು, ಮನಕ್ಕೆ ಜಂಗಮಲಿಂಗವು, ಜ್ಞಾನಕ್ಕೆ ಪ್ರಸಾದಲಿಂಗವು, ಭಾವಕ್ಕೆ ಮಹಾಲಿಂಗವು ಸಂಬಂಧಪಡುತ್ತವೆ. ಅವುದಾನೊಂದು ಕ್ರಿಯೆಯನ್ನು ಮಾಡುವಲ್ಲಿ, ಮನುಷ್ಯನು ಮೊದಲು ಅದಕ್ಕೆ ಎಳಿಸಲ್ಪಡುವನು, ಆಮೇಲೆ ಅದಕ್ಕೆ ಮೋಹಿಸಲ್ಪಡುವನು, ಆಮೇಲೆ ಅದರಲ್ಲಿ ಕೂಡುವನು, ಕೂಡಿದಬಳಿಕ ಅದರಲ್ಲಿ ಸುಖ ಪಡುವನು, ಸುಖಪಡೆದು ಪರಿಣಾಮತೆಯನ್ನು ಹೊಂದುವನು, ಆ ಮೇಲೆ ಆ ವಿಷಯದಲ್ಲಿ ಏಕಾಕಾರಹೊಂದುವನು, ಹೀಗೆ ಕ್ರಮವಿದೆ. ಈ ಕಾರ್ಯಗಳೆಲ್ಲ ಆಯಾ ಲಿಂಗಗಳಲ್ಲಿ ಸಂಬಂಧಪಡುತ್ತವೆ. ಎಳಿಸಲ್ಪಡುವದು ಆಚಾರಲಿಂಗದ ವಿಷಯು. ಎಳಿಸಿ ಮೋಹಿಸುವದು ಗುರುಲಿಂಗವಿಷಯು. ಮೋಹಿಸಿ ಕೂಡುವದು ಶಿವಲಿಂಗ ವಿಷಯು. ಕೂಡಿ ಸುಖಬಡುವದು ಜಂಗಮಲಿಂಗವಿಷಯು. ಸುಖಬಡೆದು ಪರಿಣಾಮಿಸುವದು ಪ್ರಸಾದ ಲಿಂಗ ವಿಷಯು. ಪರಿಣಾಮಿಸಿ ಏಕಾಕಾರ ಹೊಂದುವದು ಮಹಾಲಿಂಗ ವಿಷಯು. ಈಡಾ ಪಿಂಗಲನಾಡಿಯ ದೆಸೆಯಿಂದ ಶರೀರದಲ್ಲಿ ಚೈತನ್ಯ ಉಂಟಾಗುವದರಿಂದ ನಾಸಿಕಕ್ಕೆ ಆಚಾರಲಿಂಗವು. ಗುರುವು ಮಂತ್ರ ಮೂರ್ತಿಯಾಗಿ ಭಕ್ತನಲ್ಲಿ ನೆಲೆಗೊಳ್ಳುತ್ತಾನೆ. ಈ ಮಂತ್ರವು ಜಿಹ್ವೆಗೆ ಸಂಬಂಧಪಡುವದರಿಂದ ಅದು ಗುರುಲಿಂಗವು. ಸ್ವಯಂ ಪ್ರಕಾಶವು ಶಿವನಾಗಿದ್ದು ಅದು ನೇತ್ರದಲ್ಲಿ ನೆಲಿಸಿರುವದರಿಂದ ನೇತ್ರಕ್ಕೆ ಶಿವಲಿಂಗವು. ತ್ವಕ್ಕು ಸರ್ವಾಂಗದಲ್ಲಿರುವದರಿಂದ ಅದರಲ್ಲಿ ಸರ್ವ ವ್ಯಾಪಿಯಾದ ಜಂಗಮಲಿಂಗವಿದೆ. ಶರಣನಿಗೆ ಮಹಾನಾದವೇ ಪ್ರಸಾದವಾದ ಕಾರಣ ಅದು ಶ್ರೋತ್ರಕ್ಕೆ ಸಲ್ಲುವ ಕಾರಣ ಶ್ರೋತ್ರದಲ್ಲಿ ಪ್ರಸಾದಲಿಂಗ

ವಿರುತ್ತದೆ. ಆತ್ಮನಲ್ಲಿ ಮಹಾಲಿಂಗವಿರುತ್ತದೆ. ಹೀಗೆ ಷಡ್ಲಿಂಗಗಳು ಮನುಷ್ಯನ ಶರೀರ ಮತ್ತು ಕ್ರಿಯೆಗಳಲ್ಲಿ ಅನೇಕ ವಿಧವಾಗಿ ತಲೆದೋರುತ್ತವೆ.

(೫೭) ತ್ರಿವಿಧ ಆಚಾರಲಿಂಗಃ— ಇವು ಸದಾಚಾರ, ನಿಯತಾಚಾರ, ಗಣಾಚಾರ ಎಂದಿವೆ. ಎಲ್ಲ ಜನರು ಅಹುದೆಂಬುದೇ ಸದಾಚಾರವೆಂದು ವಚನಕಾರರ ವ್ಯಾಖ್ಯೆ ಇದೆ. ಕೆಲವೊಂದು ಉದ್ದೇಶ ಅಥವಾ ಧ್ಯೇಯವನ್ನಿಟ್ಟುಕೊಂಡು ಮಾಡುವದು ನಿಯತಾಚಾರವಾಗಿದೆ. ಕೈಕೊಂಡ ಕಾರ್ಯದಲ್ಲಿ ಎಷ್ಟು ಬಿಕ್ಕಟ್ಟುಗಳು ಬಂದರೂ ಕೂಡ ಅವುಗಳನ್ನು ಎದುರಿಸಿ ಧೈರ್ಯದಿಂದ ಕಾರ್ಯ ಮಾಡುವದು ಗಣಾಚಾರವು. ಗಣಾಚಾರದಲ್ಲಿ ಮನುಷ್ಯನು ಅವಶ್ಯವಿದ್ದಲ್ಲಿ ವಿರೋಧಿಗಳನ್ನು ಪ್ರತಿಭಟಿಸಲು ಸಿದ್ಧನಾಗಿರಬೇಕು. ಪ್ರಸಂಗ ಬಂದರೆ ತನ್ನ ಪ್ರಾಣವನ್ನು ಕೊಡಲೂ ಸಿದ್ಧನಾಗಿರಬೇಕು.

(೫೮) ತ್ರಿವಿಧ ಗುರುಲಿಂಗ:— ಇವು ದೀಕ್ಷೆ, ಶಿಕ್ಷೆ, ಅನುಭಾವ ಎಂಬಿವೆ. ಆಚರಿಸುವಲ್ಲಿ ತಿಳಿದವರಿಂದ ಮೊದಲು ಹೇಳಿಸಿಕೊಳ್ಳಬೇಕು. ಇದು ದೀಕ್ಷೆ ಎನಿಸುವದು. ಹೀಗೆ ಹೇಳಿಸಿಕೊಂಡ ಬಳಿಕ ಅದನ್ನು ಮನನ ಮಾಡಬೇಕು. ಇದು ಶಿಕ್ಷೆ ಎನಿಸುವದು. ಮನನ ಮಾಡಿಕೊಂಡ ಬಳಿಕ ಆದರ ಜ್ಞಾನವು ಅವನಿಗೆ ಆಗುವದು. ಇದು ಅನುಭಾವವು.

(೫೯) ತ್ರಿವಿಧ ಶಿವಲಿಂಗಃ— ಇವು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವಿರುತ್ತವೆ. ಕೆಡಕನ್ನು ತ್ಯಜಿಸಿ ಉತ್ತಮವಾದುದು ಆವುದೋ ಅದರಂತೆ ವರ್ತಿಸುವದೇ ಇಷ್ಟಲಿಂಗವಾಗಿರುತ್ತದೆ. ಇಷ್ಟಲಿಂಗಧಾರಣವೇ ಹೀಗೆ ವರ್ತಿಸಲು ಮನುಷ್ಯನಿಗೆ ಒಂದು ಬಗೆಯ ಅಡುವೆಂದು ಹೇಳಬಹುದು. ಪ್ರಾಣಲಿಂಗದಲ್ಲಿ ತನುಗುಣಗಳನ್ನು ಹೋಗಲಾಡಿಸಿಕೊಂಡು ಆತ್ಮಾರ್ಪಣದಿಂದ ತನ್ನಲ್ಲಿ ಲಿಂಗಗುಣಗಳನ್ನು ಬರಮಾಡಿಕೊಳ್ಳಬೇಕು. ಭಾವಲಿಂಗದಲ್ಲಿ ಲಿಂಗವಲ್ಲದೆ ಬೇರೊಂದಾವುದನ್ನೂ ಭಾವಿಸದೆ ಇರುವದು.

(೬೦) ತ್ರಿವಿಧ ಜಂಗಮಲಿಂಗಃ— ಇವು ಸ್ವಯಂ ಚರ ಪರವೆಂದಿರುತ್ತವೆ. ಸ್ವಯಂ ಎಂದರೆ ತಾನು. ಇಲ್ಲಿ ಭಕ್ತನು ಶ್ರೇಷ್ಠತರಗತಿಯುಳ್ಳವನಾಗಿ ತಾನೇ ತಾನಾಗಿ ಆಚರಿಸುತ್ತಾನೆ. ಚರವೆಂದರೆ ತನಗೆ

ಎಂದಡೆ ಸುಖಪ್ರಿಯಂ ಬೊಮ್ಮಯ್ಯನಂ ನೋಡಿ
ನಿಂದು ಮಾತಾಡಿದಂ ಕಟಕಿಗಳನುರೆ ಕೂಡಿ
ಬಗೆವೆಚ್ಚಿ ಜೋಳಮಂ ನುಡಿಯಿಸಿದೆನೆಂದೆಂಬ
ಜಗಪತಿಯ ಆನೆಯಂ ಗಂಡುಗೆಡಿಸಿದೆನೆಂಬ
ಗರ್ವವೆನ್ನೊಡನೇಕೆ ಬಾಹೂರಬೊಮ್ಮಯ್ಯ
ಉರ್ವಿನಿಂಯ್ಯಾಡುವಡೆ ಪೇಳ್ದಪೇಂ ಕೇಳಯ್ಯ

ಎನುತೆ ತನ್ನಯ ಕೆಯ್ಯೊಳಳ್ತಿಯಿಂ ಪಿಡಿದಿರ್ದ
ಮನಸಿಜನ ಕೆಯ್ಯಿಂದ ಸೆಳೆದುಕೊಂಡಂತಿರ್ದ
ಇಕ್ಷುದಂಡಮನಲ್ಲಿ ಹರುಷದಿಂದಂ ನೋಡಿ
ತ್ರ್ಯಕ್ಷನಣುಗನೆನಿಪ್ಪಬೊಮ್ಮಯ್ಯನಂ ನೋಡಿ
ಈ ಕಬ್ಬನೀ ನಂದಿಗಾರ್ಪಿಸೆ ಕೊಡೆ ಬಳಿಕ
ಈ ಕೇಳಿಕೆಯನಳಿದು ಮುಳಿಸು ತಿರುಗುಗು ಬಳಿಕ
ನಿನ್ನ ಸಾಮರ್ಥ್ಯಮಂ ನೋಡುವೆಂ ನಾನೆಂದು
ನಿನ್ನುಬ್ಬಟೆಯ ಭಕ್ತಿಯುಂ ಕಾಣ್ಬೆ ನಾನೆಂದು
ಎನಲಿಕ್ಷುದಂಡಮಂ ಕಳೆದುಕೊಂಡಂ ಧೀರ
ನನುಮಾನವಿಲ್ಲದಪ್ರತಿಮನುನ್ನತ ವೀರ
ನಲ್ಲಿ ನಂದಿಯ ಮುಂದೆ ಕುಳ್ಳಿರುತ್ತಮ್ಮಮ್ಮ
ಬಲ್ಲಿದಂ ಭಾಷೆಗುಡುತಿರ್ದನೊಲಿದಮ್ಮಮ್ಮ
ಒಂದು ಕಬ್ಬಿದುವದೆ ನಂದೀಶ ದೇವಂಗೆ
ಮಂದರಂ ಕೈಲಾಸಮೇರುಸಮಕಾಯಂಗೆ
ಇಲ್ಲಿ ಕಲ್ಯಾಣದ ಬಹಿರ್ನಂದನದೊಳಗೆ ಬೆಳೆದ
ಎಲ್ಲ ರಸಪ್ರಸರಮಧುರಂಗಳಂ ತವೆ ತಳೆದ
ಕಬ್ಬಿನಿತುಮಂ ತರಿಸಿ ಅರ್ಪಿಸಲಿಕ್ಕಿಸುವೆ
ಉರ್ವಿ ಬೆರಗಾಗಲೆನ್ನೊಡನೊಡನೆ ನಡೆಯಿಸುವೆ
ಈಪೂರ ಕೆರೆಯಗ್ಗಣಿಯನೊಲಿದು ಕುಡಿಯಿಸುವೆ
ದೇವಾಲಯಮುಮಂ ಪ್ರದಕ್ಷಿಣಂ ಬರಿಯಿಸುವೆ
ಮುಂತೆ ಹಳೆಯಂತೆ ಹರನಿಳಯದೊಳು ಕುಳ್ಳಿರಿಪೆ
ಇಂತಿದಂ ಜನವೆಲ್ಲ ನೋಡುತಿರೆ ಮಾಡಿದಪೆ
ಮಾಡದೊಡೆ ಮರ್ತ್ಯದೊಳಗಿಹೆನೆಂಬ ಮಾತಿಲ್ಲ

ಮಾಡುವೆಂ ಮಾಡುವೆಂ ಮಾಡುವೆಂ ಪುಸಿಯಲ್ಲ
ಅವಧರಿಪುದೀಶ್ವರನ ಭಕ್ತಾಳಿ ಭಾಷೆಯುಂ
ಶಿವನೊಲಿದು ಕರುಣಿಸುವ ಸಾಮರ್ಥ್ಯರಾಶಿಯುಂ

ಎಂದು ನುಡಿವುತ್ತಮಿರೆ ತಮತಮಗೆ ಹರಿತಂದು
ಬಂದು ಪಟ್ಟಣದ ಹೊರವೊಳಲ ಬನದೊಳು ನಿಂದು
ಪೊಂಗೊಟ್ಟಿ ಕಬ್ಬನಿತುವಂ ಚೇಣಿಯುಂ ಕೊಂಡು
ಅಂಗವಿಸಿಯಡುಕ ತೊಡಗಿತ್ತಲ್ಲಿ ಸಾಲ್ಗೊಂಡು
ಬರಲಲ್ಲಿ ಹರನ ರಾಜಾಂಗಣದೊಳಗೆ ನೋಡೆ
ತರದಿಂದ ಸಣ್ಣ ತಟ್ಟೆಗಳ ಹಾಸುತೆ ಕೂಡೆ
ತೊಳಗುವದಣಿಂಬಂಗಳಂ ಮೇಗೆ ಮಿಗೆ ಹಾಸಿ
ಅಳಿಗಳರಸುವ ಸುಪ್ರಸವಕುಲಮುಮಂ ಹಾಸಿ
ಇಕ್ಷುದಂಡದ ಮೊದಲತುದಿಗಳಂ ಕಳೆವುತಂ
ಪ್ರಕ್ಷಾಲನಂ ಮಾಡಿ ತಂದು ತಂದಿಳುಪುತಂ
ಇರಲೊಂದೆರಳ್ಬಿಟ್ಟದಂತೆ ಕಬ್ಬುಗಳೊಟ್ಟಿ
ಅರುಣೋದಯಂ ಬಂದು ಪೂರ್ವಾದ್ರಿಯಂ ಮುಟ್ಟಿ
ನಂದೀಶ್ವರಂ ಕಬ್ಬನಾರೈಸುವಂದಮುಂ
ಇಂದು ನೋಡುವೆನಿಳೆಗೆ ಪೊಸತೆನಿಪ ಛಂದವುಂ
ಎಂಬಂತೆ ರವಿಯುದಯವಾಗುತಿರೆ ಬೆಳಗುತಂ
ಇಂಬಿನಿಂ ಬಾಹೂರ ಬೊಮ್ಮಯ್ಯನದ್ಭುತಂ
ತ್ರಿಪುರಾಂತಕಪ್ರಭುವಿನಲ್ಲಿ ನೇಮಂ ಮಾಡಿ
ವಿಪುಳವರಕಾರುಣ್ಯವರಶಂಭುವಂ ನೋಡಿ

ದೇವ ನಿಶ್ಚಿಂತಸಜ್ಜನಜನಾಧೀನನೇ
ದೇವ ನಿಜಪದಭಕ್ತಿಯುಕ್ತರಾಧೀನನೇ
ದೇವ ಶಿವಯೋಗಿಗಳ ಮಾನಸಧ್ಯಾನವೇ
ದೇವ ಸದ್ಭಕ್ತಕುಲಹೃತ್ಕಮಲಭಾನುವೇ
ದೇವ ನಿರ್ಗುಣತತ್ವಸುಗುಣಸ್ವರೂಪನೇ
ದೇವ ಭೀಕರತರಪಿನಾಕ್ಯೇಕಚಾಪನೇ
ದೇವ ತ್ರಿಶೂಲ ಡಮರುಗ ವಿಮಲ ಹಸ್ತನೇ
ದೇವ ಭಕ್ತಾವರಣಶರಣಕರಣಸ್ತನೇ

ದೇವ ಪುಣ್ಯಪ್ರಕರಸೇವಿತಪದಾಬ್ಜನೇ
ದೇವ ವೌಲಿನ್ಯಸ್ತವಿಸ್ತರಪದಾಬ್ಜನೇ
ದೇವ ವೃಷಭೇಂದ್ರಂಗೆ ಕರುಣಿಸೆಲೆ ಶಂಕರಾ
ದೇಶ ನಂದೀಶಂಗೆ ಬೆಸಸೆಲೆ ಕೃಪಾಕರಾ
ಎಂದು ಬಿನ್ನೈಸುತಿರೆ ಶಿವನ ಸಿರಿ ಮುಡಿಯಿಂದ
ಒಂದರಲ್ಸರಿಯೆ ಕಾಣುತ್ತ ಸಂತಸದಿಂದ
ಪರಿತಂದು ಪಾದೋದಕ ಪ್ರಸಾದಂಗೊಂಡು
ತಿರುಗಿ ವೃಷಭೇಂದ್ರನಲ್ಲಿಗೆ ಬಂದು ಕೈಕೊಂಡು
ಇದೆ ರುದ್ರನಾದೇಶವವಧರಿಸು ನಂದೀಶ
ಇದೆ ಶಿವನ ಕಾರುಣ್ಯವೇಳಯ್ಯ ನಂದೀಶ
ಸಕಲಮಂ ರಕ್ಷಿಸುವ ಶಿವಧರ್ಮಮೂರ್ತಿಯೇ
ಮಕರಧ್ವಜಾರಿಯ ಮಹಾಪುಣ್ಯಕೀರ್ತಿಯೇ
ಶಂಕರನ ದೃಷ್ಟಿವಾರಿಯ ನೇಮದಚಲಿತನೆ
ಶಂಕರನ ತೊಡೆಮಡಕ್ಕಳವಡುವ ಸನ್ನುತನೆ
ಅಸಮನಯನನ ಸರ್ವಸಾಮರ್ಥ್ಯಸನ್ನಿಭನೆ
ಮುಸುಟಿಯಾ ಚೌಂಡಂಯನ ಮನೋವಲ್ಲಭನೆ
ಬಾರಯ್ಯ ನಂದೀಶ ಬಾರಯ್ಯ ವೃಷಭೇಂದ್ರ
ಬಾರಯ್ಯ ಪುಣ್ಯಮಯ ಬಾರ ನಿರ್ಮಳಚಂದ್ರ

ಎಂಬ ನುಡಿ ವೃಷಭರಾಜನ ಚಿತ್ತದೊಳ್ಪಿರಸೆ
ತ್ರ್ಯಂಬಕಧ್ಯಾನಮುಮನೊತ್ತರಿಸುತಂಕುರಿಸೆ
ಯಳಲ್ವ ಕಿವಿಗಳನೆತ್ತಿ ಧ್ವನಿಯನಾರೈವುತಂ
ಹೊಳೆವ ಶಿವಲಿಂಗಮಂ ನೋಡಿ ಹಾರೈಸುತಂ
ಕೆಲಕೊಮ್ಮೆ ಬಲಕೊಮ್ಮೆ ವದನಮಂ ತಿರುಪುತಂ
ನಲವಿಂದೆ ಶಂಕರಂಗಾನತನುಮಾಗುತಂ
ಸರಸರನೆ ಹಿಂಬೆರಕನ್ನೈಯ್ತಂದು ಬೇಗದಂ
ಪೊರಮಡಲ್ಕನುವಾಗುತಂ ನಿಂದು ರಾಗದಿಂ
ಹೊಳೆವಪರಭಾಗಮಂ ಸಂಗನತ್ತಲ್ತೋರಿ
ಬಾಗಿಲಂ ಕಳೆದು ಬೆಳೆದಂ ನೋಡಲಮ್ಮಮ್ಮ
ಮೇಗೆ ತಾರಾಪಥವ ಮೀರುತಿರಲಮ್ಮಮ್ಮ

ಹೊಳೆವ ಚಂದ್ರಿಕೆಗೆ ಕಿವಿ ಕಾಲ್ಮೊಗಂ ಮೂಡಿತೋ
ಕೈಲಾಸಗಿರಿ ಬಸವನಂಗದೊಳ್ಮೂಡಿತೋ
ಸಕಲ ಲೋಕದ ಸುಕೃತನಿಧಿ ಸೀಮೆಗೊಂಡುದೋ
ಅಕಳಂಕ ಶಿವಕೀರ್ತಿ ಮೂರ್ತಿಯಂ ತಳೆದುದೋ
ಎಂಬಂತೆ ನಿಂದ ನಂದಿಯ ಮೂರ್ತಿಯಂ ಕಂಡು
ಅಂಬರದೊಳಿಂಬಿಲ್ಲೆನಿಪ್ಪ ರೂಪಂ ಕಂಡು

ಬಾಹೂರ ಬೊಮ್ಮಯ್ಯನಕ್ಕರಿಂ ಮೆಯ್ಯಿಕ್ಕಿ
ಸಾಹಸಾಭರಣನಾನಂದದಿಂ ಮೆಯ್ಯಿಕ್ಕಿ
ಅತಿಶಯದ ಘನಮೂರ್ತಿಯಂ ತಳೆದಡೆಂತಯ್ಯ
ಶ್ರುತಿತತಿಗಳೈದದಂತಿರ್ದಡೆನಗೆಂತಯ್ಯ
ಎನ್ನ ಕಣ್ಣಿಂ ಮನಂ ನೋಡಿ ನೆನೆವಂದದಿಂ
ಎನ್ನ ಚಿತ್ತಂ ಧರಿಯಿಸಿರಲಾರ್ಪ ಛಂದದಿಂ
ಕರುಣಿಸಲ್ವೇಳ್ಪುದೆಲೆ ಸಕಲಧರ್ಮಾವರಣ
ಹರನ ಚರಣಾವಲೋಕ ಪ್ರೇಮತರಕರಣ
ಎನಲೆಲ್ಲರಾಲೋಕಿಪ ಪ್ರಮಾಣದೊಳಿರಲು
ಘನಮೂರ್ತಿಯಂ ಮಾಣ್ದು ಸೂಕ್ಷ್ಮ ತನುವಿನೊಳಿರಲು
ಕಂಡು ಬಾಹೂರ ಬೊಮ್ಮಯ್ಯನಾಹಾ ಎಂದು
ತಂಡ ತಂಡದ ಪುಳಕದಿಂದ ಮೂಡಲ್ಬಂದು
ವರ ಚರಣಮಂ ಪತ್ತಿ ಹಾರೈಪ ಶರಣರಂ
ಖುರ ಮುಖವನಪ್ಪಿ ಪುಳುಕಿಸುತಿರ್ಪ ಶರಣರಂ
ನಾಲದಂಡದ ನೆಳಲೊಳಣೆಯುರದೊಳಿರ್ಪರಂ
ಲಾಲಾ ಜಲಂಗಳಿಂ ನಾಂದು ಸುಖಮಿರ್ಪರಂ
ಕರ್ಣ ಪಲ್ಲವದ ನೆಳಲೊಳು ಕುಣಿವುತಿರ್ಪರಂ
ಪೂರ್ಣ ಮಧುರ ಶ್ವಾಸದಿಂ ತಣಿಯುತಿರ್ಪರಂ
ನಿರ್ಮಳ ಕಕುಭಸ್ಥಾನಮಂ ನೋಡಿ ಪೊಗಳ್ವರಂ
ಕೂರ್ಮೆಯಿಂ ವದನಮಂ ಮುಂಡಾಡುತಿರ್ಪರಂ
ನಾಡೆ ಭಕ್ತಾಳಿಯುಂ ಪಾರಿ ನಿಂದಂತಿರಲ್
ಕೂಡೆ ಶರಣರರ್ಕಾತ ಕಲ್ಪ ಕುಜಪಂತಿರಲ್

ಕುಣಿವುತಂ ಬಾಹೂರ ಬೊಮ್ಮಯ್ಯನೆಯ್ತಂದು
ತ್ರಿಣಯನ ಸುವಾಹನಕೆ ಮೆಯಿಕ್ಕುತಂ ನಿಂದು
ದೇವ ಆರೋಗಿಸುವುದಿಕ್ಷುದಂಡಂಗಳಂ
ದೇವ ಕೈಕೊಂಬುದೀ ಸವಿಯ ತಂಡಂಗಳಂ
ಎನಲಲ್ಲಿ ನಂದೀಶ್ವರಂ ಸುಮ್ಮನಿರುತಿರಲ್
ಮನದೊಳಗೆ ಶಿವಲಿಂಗಮಂ ಭಾವಿಸುತ್ತಿರಲ್
ಅರಿದೆನರಿದೇಂ ದೇವ ನಿನ್ನೊಳೊಂದುತ್ತಮಂ
ಅರಿದೆನಭವ ಪ್ರಸಾದಾಸಕ್ತಚಿತ್ತಮಂ
ಎನುತಿಕ್ಷುವೆಲ್ಲವಂ ಲಿಂಗಾರ್ಪಿತಂ ಮಾಡೆ
ಜನವೆಲ್ಲ ಕೌತುಕವಿದೆಂದು ಭರದಿಂ ನೋಡೆ
ಬಳಿಕ ಕೈಕೊಂಡನಾ ನೆರೆದ ಕಬ್ಬೆಲ್ಲವಂ
ಇಳೆ ಬಣ್ಣಿಸುತ್ತಮಿರಲಿಕ್ಷುಗಳನೆಲ್ಲಮಂ
ಉಶ್ವಾಸದೊಳ್ಮಾಯವಾಯ್ತು ಕಬ್ಬಿನ ರಾಶಿ
ನಿಶ್ವಾಸದೋಳ್ ತೆರಳುತಿರ್ದುದಾ ವಾರಾಶಿ

ಆಗಳಾ ಭಕ್ತರೆಲ್ಲರ್ ಕುಣಿದು ಕೊಂಡಾಡೆ
ಮೇಗೆ ದೇವರ್ಕಳೆಲ್ಲರ್ ಕೂಡೆ ನಲಿದಾಡೆ
ದೇವಮಾಯವಧಾರು ಧರೆ ಬಳುಂಕದ ತೆರದಿ
ದೇವ ಉಪ್ಪರ ಉಡುಪ್ರತತಿ ಉದುರದ ತೆರದಿ
ಎಂದು ಬೋಳೈಸುತಂ ಮುಂದೆ ಭಕ್ತಂ ನಡೆಯೆ
ಹಿಂದೆ ಬಸವಂ ಭಕ್ತನೊಡನೆ ನಲವಿಂ ನಡೆಯೆ
ಬಸವನೊಡನೊಡನೆ ಶಿವಭಕ್ತಸಂತತಿ ನಡೆಯೆ
ಎಸೆವ ಭಕ್ತರ ಹಿಂದೆ ಪುರ ಜನಂಗಳ್ ನಡೆಯೆ
ಸುರರುತ್ಸವಂಬಡೆಯೆ ಪರದೈವರೆಫಯೊಡೆಯೆ
ಶರಣತತಿಗಳ್ನಡೆಯೆ ಪರಸಮಯಿಗಳ್ಕಿಡೆಯೆ
ನಡೆದನಣುಗಂ ತಟಾಕದ ತಟಕೆ ಒಲುಮೆಯಿಂ
ವೃಷವಾಹನಂ ಬಂದು ಮೊಗವಿಕ್ಕಿ ನಲ್ಮೆಯಿಂ
ದೇವ ನೀಂ ಕೈಕೊಂಬಡಂಬುಧಿಗಳೈಯ್ದುವವೆ
ದೇವ ನಿಮ್ಮುಸುರನಾನುವ ದೇವ ಕುಲಮೊಳವೆ
ತೆರೆಯುಳಿದು ಜಲವುಳಿವ ತೆರದಿಂದೆ ಕೈಕೊಂಡು

ಮೆರೆವುದೆನ್ನಯ ಭಾಷೆಯುಂ ಸ್ವಾಮಿ ಬಗೆಗೊಂಡು
ಎನುತಮಿರಲಗ್ಗಣಿಯುನಾದರಿಸಿ ತಿರುಗುತಂ
ಮನಸಿಜಾರಿಯ ಭಕ್ತನೊಡನೊಡನೆ ಒದಗುತಂ
ಬಂದು ಶಿವನಿಳಯಮಂ ಬಲವರಿಸಿ ಬರಲಲ್ಲಿ
ತಂದು ಶಿವರಂಗಮಂಟಪದೊಳಗೆ ಇರಿಸಿದಂ

ದೇವ ಮೆರೆಯಿಸಿದಕ್ಕೆ ಕರುಹವೇಳ್ಪುದು ತಂದೆ
ದೇವ ಸಮ್ಮುಖವನೋಸರಿಸಿರ್ಪುದೆಲೆ ತಂದೆ
ಎನುತಡ್ಡವಾಗಿರಿಸಿ ಬಾಹೂರ ಬೊಮ್ಮಯ್ಯ
ಸನಘನಪ್ರತಿಮನಾ ಬಾಹೂರ ಬೊಮ್ಮಯ್ಯ
ಆಗಲು ಸುಖಪ್ರಿಯನ ವದನವಂ ನೆರೆ ನೋಡಿ
ರಾಗದಿಂ ಭಕ್ತಸಂಕುಳಂ ಕೊಂಡಾಡೆ
ಪೇರ್ವಾಡಿರಾಯನತಿ ಕೌತುಕಂಬಡುತಮಿರೆ
ಕೂರ್ಮೆಯಿಂ ಶರಣತತಿ ಗುಡಿಗಟ್ಟಿ ಕುಣಿವುತಿರೆ
ಪೂಮಳೆಗಳೊಳಗೆ ದುಂದುಭಿಕುಳಧ್ವನಿಯೊಳಗೆ
ಏಮಾತೊ ಬಿರುದೆತ್ತಿ ಕರೆವ ಕಹಳೆಗಳೊಳಗೆ
ಬಂದ ಪುಷ್ಪಕವನಾನಂದದಿಂದೇರುತಂ
ಇಂದುಧರ ಶರಣೆನುತೆ ಗಗನಕ್ಕೆ ಏರುತಂ
ಬಂದು ನಂದೀಶ್ವರನ ಬಾಗಿಲೊಳು ನಲ್ಮೆಯಿಂ
ನಿಂದು ಪುಷ್ಪಕವನಿಳಿದಂತಲ್ಲಿ ಒಲ್ಮೆಯಿಂ
ಸದಮಳಶಶಿಪ್ರಭೆಯನಿಳಿಕೈದ ಚರಣಕ್ಕೆ
ಉದಯಾರ್ಕಬಿಂಬವಂ ಕರೆವ ಪದಕಮಲಕ್ಕೆ
ಹರಿಯರಸಿ ಕಾಣಲಾರದ ಪಾದಯುಗಳಕ್ಕೆ
ಶರಣತತಿ ಸ್ಪರುಶನಂ ಮಾಳ್ಪಂಘ್ರಿ ಯುಗಳಕ್ಕೆ
ಮುನಿಗಳ ಮನಂ ಬಯಸಿ ಬಾಯೊರೆವ ಚರಣಕ್ಕೆ
ಮನುಗಳಂತರ್ಧಾನದೊಳು ನೆನೆವ ಚರಣಕ್ಕೆ
ನಿತ್ಯನ ನಿರಾಶ್ರಯನ ನಿರುಪಮನ ಚರಣಕ್ಕೆ
ಅತ್ಯತಿಷ್ಠದ್ದಶಾಂಗುಲನ ಪದಕಮಲಕ್ಕೆ
ಮೆಯ್ಯಿಕ್ಕಿ ಸೈಗೆಡೆಯೆ ಬಾಹೂರ ಬೊಮ್ಮಯ್ಯ
ಒಯ್ಯನೆತ್ತಿದನು ಹರಿಕಮಲಜರ ಮುತ್ತಯ್ಯ

ಎತ್ತಿ ಮೂರ್ಧ್ನಿಘ್ರಾಣಮಂ ಮಾಡಿ ಶಂಕರಂ
ಮತ್ತಲ್ಲಿ ನಂದೀಶನಂ ನೋಡಿ ಶಶಿಧರಂ

ಕೇಳು ನಂದೀಶ ಇಂತಪ್ಪ ಭಕ್ತರುಮುಂಟೆ
ಜೋಳವಂ ಧರಣಿಯೊಳಗೋ ಎನಿಸಿದ್ಧವರುಂಟೆ
ಮದ್ದಾನೆಯಂ ನಿಲ್ತಿ ಕೊಂದು ನೋಡಿದರುಂಟೆ
ಮದವಳಿಯೆ ಮತ್ತೆ ಹರಣಂಗೊಟ್ಟರಿಂತುಂಟೆ
ಬಸವನಂ ಕಬ್ಬಿಂದೆ ತುಷ್ಟಿವಡಿಸಿದರುಂಟೆ
ಎಸೆಯಲಗ್ಗಣಿಗೊಳಿಸಿ ಬಲವರಿಸಿದವರುಂಟೆ
ಭಾಪುರೇ ಮದ್ಭಕ್ತ ಬಾಹೂರ ಬೊಮ್ಮಯ್ಯ
ಭಾಪು ಮಝುಭಾಪುರೇ ಬಾಹೂರ ಬೊಮ್ಮಯ್ಯ
ಎಂದು ಕೊಂಡಾಡುತಂ ಗಣಪದವನೊಲಿದಿತ್ತು
ಮುಂದಿರ್ದ ಪಾರ್ವತಿಗೆ ತೋರಿ ಸುಖಮಂ ಪೊತ್ತು
ನತಜನಸುಖಾವರುಷ ಹರುಷಮಯನೊಪ್ಪಿದಂ
ಶ್ರುತಿಮಸ್ತಕನ್ಯಸ್ತ ಚರಣತಳನೊಪ್ಪಿದಂ
ಜಲಶಯನನಯನಮಂಡಿತಪಾದನೊಪ್ಪಿದಂ
ಜಲಜಭವ ಪಂಚಮಶಿರೋಹಸ್ತನೊಪ್ಪಿದಂ
ಸ್ಮರಕಾಲಪುರಜಲಂಧರ ಮಥನನೊಪ್ಪಿದಂ
ಪರಮಗುರು ಹಂಪೆಯ ವಿರೂಪಾಕ್ಷನೊಪ್ಪಿದಂ

**ಕಂದ॥** ಬಾಹೂರು ಬೊಮ್ಮಿತಂದೆಯ
ನಾಹಾ ನೆರೆ ಮೆರೆದ ಶಂಭುನಿಜ ಭಕ್ತಿಯನು।
ತ್ಸಾಹದೊಳೆನಗೀಗೆ ನತ
ವ್ಯೂಹದಯಾವಾರ್ಧಿ ಹಂಪೆಯ ವಿರೂಪಾಕ್ಷಂ ॥

# ತೆಲುಗು ಜೊಮ್ಮಯ್ಯನ ರಗಳೆ.

ಕಂದ॥ ಗಿರಿಜಾ ವಲ್ಲಭನಂಬರ।
ಪುರಮಥನಂ ದೇವ ಹಂಪೆಯ ವಿರೂಪಾಕ್ಷಂ।
ಕರುಣಂ ಮಿಗೆ ಮೆರೆದಂ ಸಾ।
ದರದಿಂದಂ ತೆಲುಗುಜೊಮ್ಮಿತಂದೆಯ ಸಿಳಿಯೊಳ್॥

## ಪ್ರಥಮಸ್ಥಲ.

### ರಗಳೆ.

ಧರೆಗೆಸೆವ ಕಲ್ಯಾಣವೆಂಬ ಪಟ್ಟಣದೊಳಗೆ
ಹರಭಕ್ತನೋರ್ವನಿರ್ಪಂ ಭಕ್ತಿ ತೊಳತೊಳಗೆ
ನಾಮಂ ತನಗೆ ಜೊಮ್ಮಿತಂದೆ ಎಂದೊಪ್ಪಿರಲ್।
ಭೀಮನಾಥಂಗತಿ ಪ್ರೇಮತರಮಾಗಿರಲ್॥
ಮನ್ನೆಯಂ ಸಾವಂತಪತಿಭಕ್ತಿಭೂಷಣಂ।
ಅನ್ನೆಯಂ ಹೊದ್ದಬಾರದ ಸುಖನಿವೇಷಣಂ
ಏಕನಿಷ್ಠಂ ಶಿವನನಲ್ಲದೊಲ್ಲದ ಮಾನಿ
ಲೌಕಿಕವನೆಳ್ಳನಿತವನುಸರಿಸದಭಿಮಾನಿ
ಸತ್ಯನಚಲಂ ಮಹೋತ್ಸಾಹಿ ಕಲಿ ನಿಷ್ಕಾಮಿ
ನಿತ್ಯಲಿಂಗಾರ್ಚನಾನಿರತನಭವಪ್ರೇಮಿ
ನಿಂದೆಯಂ ಸೈರಿಸದ ನಿತ್ಯತರ ಗುರುಮೂರ್ತಿ
ಇಂದುಧರನ ಪ್ರತಾಪಾರಂಭ ವರಕೀರ್ತಿ
ಉರಿಯಂತೆ ಸಿಡಿಲಂತೆ ಶಿವದೂಷಕಾವಳಿಗೆ
ಸಿರಿಯಂತೆ ಸುಖದಂತೆ ಹರನ ಶರಣಾವಳಿಗೆ
ಭವಿಗಳಂ ಪುಳುವಿಂದೆ ಕಷ್ಟಮಾಗಿಯೆ ಕಂಡು
ಶಿವಭಕ್ತರಂ ಬಂಧುಬಳಗವೆಂದೇ ಕಂಡು

ಇಂತಿರಲ್ ಭೀಮನಾಥಂ ಕನಸಿನೊಳ್ ಬಂದು
ಸಂತತಂ ಮಿಗೆ ಜಂಗಮಾಕಾರದೊಳ್ನಿಂದು

ಎಲೆ ಮಗನೆ ಜೊಮ್ಮಯ್ಯ ನಿನಗೊಂದನರುಪುವೆಂ
ನಲವಿಂದೆ ಸೂಕ್ಷ್ಮಧರ್ಮವನೊಲಿದು ತಿಳುಪುವೆಂ
ಈ ಪಟ್ಟಣದ ಕೆಲದ ಹತ್ತು ಯೋಜನದೊಳಗೆ
ಶಾಪಹತರಾಗಿ ಮೃಗವಾಗಿ ಕಾನನದೊಳಗೆ
ಕಾರಣಿಕ ಋಷಿಯರಿರ್ದಪರಪರನಟ್ಟುವುದು
ಆರೈದು ಮೃಗದ ಜನನದ ಬೇಂಟೆಯಾಡುವುದು
ಮಾಯೆಯುಂ ಕಳೆದು ಕೈಲಾಸಕ್ಕೆ ಕಳಿಪುವುದು
ಕಾಯಮುಂ ಹೊತ್ತಿರ್ಪ ಭಾರಮುಂ ಇಳಿಪುವುದು
ಎಂದು ಕರುಣಿಸಿ ಹರಂ ಶಿವಲಿಂಗದೊಳ್ಪುಗಲ್
ಅಂದು ಜೊಮ್ಮಯ್ಯಂಗೆ ಪುಳುಕಂಗಳ್ಮಿಗೆ ಮಿಗಲ್

ಎಳ್ದು ಕಣ್ದೆರೆದು ಹರುಷಂ ಮಿಕ್ಕು ಹಾರೈಸಿ
ಬಾಳ್ದು ಶಿವನಂ ಕಂಡ ಸುಖದೊಳಗೆ ಪೂರೈಸಿ
ಹರನಾಜ್ಞೆಯಿಂ ಮೃಗದ ಬೇಂಟೆಯಾಡುತ್ತಿರ್ದು
ಪರಮ ಋಷಿಗಳ ಕರ್ಮವಂ ಮಾಣಿಸುತ್ತಿರ್ದು
ಭಕ್ತರ್ಗೆ ಮಾಡಲಿಲ್ಲೆಂದುಮ್ಮಳಂ ಪುಟ್ಟೆ
ಯುಕ್ತಿಯಿಂ ಸೇವಕಾವೃತ್ತಿಗೆ ಮನಂ ಮುಟ್ಟೆ
ಬಂದು ಪೆರ್ಮಾಡಿರಾಯನನಕ್ಕರಿಂ ಕಂಡು
ಒಂದು ತಿಂಗಳ್ಗೆ ಸಾವಿರ ಹೊನ್ನನೆಡೆಗೊಂಡು
ಶರಣರ್ಗೆ ಮಾಡುತಂ ಭಕ್ತಿಯಂ ಸೂಡುತಂ
ಪರಮ ಹರುಷಂ ಮಿಕ್ಕು ಸುಖದೊಳೋಲಾಡುತಂ
ಜೋಳವಾಳಿಯೊಳಿರ್ಪನಾ ಧರಾನಾಥಂಗೆ
ವೇಳೆಯಾಳಿನೋಳಿರ್ಪನಾ ಭೀಮನಾಥಂಗೆ
ಪೇರ್ಮಾಡಿರಾಯಂಗೆ ಪೊಡಮಡಂ ಲೆಕ್ಕಿಸಂ
ಆಮ್ಮಮ್ಮ ಶಂಕರಧ್ಯಾನೈಕಮಾನಸಂ
ಒಲ್ಲೆಸಬಂದಡೆಂದುಂ ಮರೆದು ಕುಳ್ಳಿರಂ
ಆಲೋಕಿಸಂ ದಿಟಂ ಕೈಕೊಳ್ಳನೊಬ್ಬರಂ
ಪುರುಷ ಸಿಂಹವನಾಳ್ವ ಮಾತಂಗಪತಿಯಂತೆ
ಅರಸ ಪೇರ್ಮಾಡಿರಾಯಂ ಭೀತಿಯಿಂದಿಂತೆ
ಪೋಗೆನಲ್ಕಮ್ಮದವನಂ ನೋಡಿ ನಡುಗುವಂ

ಜೇಗದಿಂದಂ ಕರೆಯಿಸಲ್ಕಮ್ಮದಂಜುವಂ
ತನ್ನಿಚ್ಛೆಯೋಳ್ಬಂದು ತನ್ನಿಚ್ಛೆಯೊಳ್ಪೋಗಿ
ಮನ್ನಣೆಯ ಶಿವನ ತೇಜದ ಕಣಿಯ ಕರುವಾಗಿ

ಇರಲಿತ್ತ ಪೇರ್ಮಾಡಿರಾಯನೊಲುಮೆಯ ಕಾಂತೆ
ಪರಮ ಶಿವಲಿಂಗಾರ್ಚನಾನಿರತೆ ಗುಣಶಾಂತೆ
ತನಗೆ ಲಕುಮಾದೇವಿಯೆಂಬ ಪೆಸರೊಪ್ಪಿರಲ್
ಮನಸಿಜಾರಿಯನಕ್ಕರಿಂದರ್ಚಿಸುತ್ತಿರಲ್
ಜೊಮ್ಮಯ್ಯನೇಕ ನಿಷ್ಠೆಯನಚಲ ಬಲುಪಮಂ
ಜೊಮ್ಮಣ್ಣನೆಸೆವ ಶಿವಭಕ್ತಿಯುತ್ಸಾಹಮಂ
ಪುರಹರನ ಪುರಮಪ್ರತಾಪದುರುವಣೆಯುಮಂ
ಹರನ ತೇಜಂ ನೆಲಸಿ ನಿಂದ ಸಂದಣಿಯುಮಂ
ಕೇಳ್ದು ಸಂತೋಷದಿಂ ಪರಮ ಹರುಷಂಗಳಂ
ತಾಳ್ದು ಹೊಸ ಹೊಸ ಪರಿಯ ವಸ್ತ್ರಸಂತತಿಗಳಂ
ಚಂದನಂ ಕರ್ಪೂರವಗಿಲು ಧೂಪಂಗಳಂ
ಮಂದೈಸಿ ಕಂಪಿಡುವ ಸಾಧು ಕಸ್ತುರಿಗಳಂ
ಅಂದಂದು ಬಂದೆಸೆವ ಪೊಚ್ಚ ಪೊಸ ಪೂಗಳಂ
ಇಂದುಧರನಣುಗಂಗೆ ಪರಿಪರಿಯ ಪೂಗಳಂ
ಕಳಿಪುತಿರೆ ಕೈಕೊಂಡು ಜೊಮ್ಮಣ್ಣನಳ್ತಿಯಿಂ
ಪುಳುಕಿಸುತೆ ಪೊಡಮಡುತೆ ಶಿವಭಕ್ತಿಗೊಲ್ಮೆಯಿಂ
ಶಿವ ಸೋದರರದ ತೆರದಿ ಬಂದು ಕೃತ್ಯದೊಳಿರಲ್
ಶಿವನನರ್ಚಿಸುತೆ ಕೆಲವುಂ ದಿವಸವಿರುತಿರಲ್

ಇರ್ದು ಜೊಮ್ಮಯ್ಯಂಗಳೊಂದು ದಿನ ಉದಯದೊಳ್
ಸಾರ್ದು ಮೊಗಪ್ರಕ್ಷಾಲನಂ ಮಾಡಿ ಹರುಷದೊಳ್
ಆಗಮಸ್ಥಾನದೊಳ್ ಭಸಿತಮಂ ತೀವಿಟ್ಟು
ರಾಗದಿಂ ರುದ್ರಾಕ್ಷಿಗಳನಳವಡಲ್ತೊಟ್ಟು
ಸೆಜ್ಜೆಯರಮನೆಯೊಳೊಪ್ಪುವ ಭೀಮನಾಥನಂ
ಸಜ್ಜನಪ್ರೇಮಿ ತನ್ನಯ ಪ್ರಾಣನಾಥನಂ
ಬಾರಯ್ಯ ಬಾರೆನ್ನ ಭಕ್ತಜನಬಂಧುವೇ

ಬಾರಯ್ಯ ಬಾರರಸ ಬಾರೆನ್ನ ಗತಿಮತಿಯೆ
ಬಾರ ನಂಬಿದರೊಲವೆ ಬಾರ ಶರಣರ ಬಲವೆ
ಬಾರ ಪುಣ್ಯದ ಫಲವೆ ಬಾರ ಮುಕ್ತಿಯ ನಿಲವೆ
ಎಂದೆಂದು ಬೋಳೈಸಿ ಕರೆದು ಬಿಜಯಂಗೈಸಿ
ಮಂಡೈಪ ಹರುಷದಿಂದೊಲಿದೊಲಿದು ಹಾರೈಸಿ
ಛಂದದಿಂ ಪಾಡುತಂ ಮಜ್ಜನಕ್ಕೆರೆದೆರೆದು
ಚಂದನವನಿತ್ತಿತ್ತು ನೋಡಿ ಸುಖದೋಳ್ನೆನೆದು
ಪುಳುಕಿಸುತೆ ಸಿಂಹಾಸನಕ್ಕೆ ಬಿಜಯಂಗೈಸಿ
ಎಳಸುವಚ್ಚರಲ್ಗಳಂ ಸಿರಿ ಮುಡಿಯೊಳಗೆ ಸೂಡಿ
ನವಧೂಪ ಧೂಮ್ರದಿಂದೊಸರ್ವ ಪರಿಮಳವಿತ್ತು
ನವ ಕಾಂತಿಗಳನೇಳಿಪಾರತಿಗಳಂ ಪೊತ್ತು
ಕಂಪೆಸೆವ ಅಮೃತಾನ್ನದಾರೋಗಣೆಯನಿತ್ತು
ಕಂಪಿಡುವ ವೀಳೆಯಮನಸಮನಯನಂಗಿತ್ತು
ಸೊಂಪೇರಿ ಶಿವನೇಕನಿಷ್ಠೆಯಂ ಮುಂದಿಟ್ಟು
ಸಾದರಂ ಭೀಮನಾಥನ ಕೃಪೆಯ ಮುಂದಿಟ್ಟು
ಮನೆಯಿಂದ ಪೊರಮಟ್ಟು ಉನ್ನತಾಸನವೇರಿ
ಘನಮಹಿಮೆಯಂ ಮನದೊಳೆಡೆಗೊಂಡು ನಲವೇರಿ
ನಡೆತರುತ್ತರಮನೆಯ ಮುಂದೆ ಭರದಿಂದಿಳಿದು
ಮೃಡನೆ ಶರಣೆಂದೆನುತೆ ಬಾಗಿಲ್ಗಳಂ ಕಳೆದು
ಎಡಬಲದ ರಾಜಪುತ್ರರು ನಡನಡುಗುತಿರೆ
ನಡೆತಂದನಾ ವಿಭೂತಿಯ ವೀರನಮ್ಮಮ್ಮ
ನಡೆತಂದನಲ್ಲಿ ಸುರಗಿಯ ಸುಭಟನಮ್ಮಮ್ಮ

ಬರುತಿರಲ್ಮುಂದೊಂದು ಪಿರಿಯ ಮಾಳಿಗೆಯೊಳಗೆ
ಅರಸನಾ ವಿಷ್ಣುವಂ ಪೂಜಿಸುತ್ತಿರಲೊಳಗೆ
ಪೊರಗೆ ನಿಂದಿರ್ದನಾ ಜೊಮ್ಮಣ್ಣನತಿಬಳಂ
ತೆರಹಿಲ್ಲದಚ್ಚ ಕಲಿ ನೆರೆ ಮನದ ನಿಶ್ಚಳಂ
ನಿಂದರಲ್ಕೆಲದೊಳೋರ್ವಂ ಪುರಾಣಿಕನಲ್ಲಿ
ಸಂದಣಿಸಿ ವೈಷ್ಣವ ಪುರಾಣ ಓದುತ್ತಲ್ಲಿ
ಕಟ್ಟಕ ಪುರಾಣಮಂ ದಿಟ್ಟತನದಿಂ ಪಿಡಿದು

ಕೆಟ್ಟ ಇಟ್ಟಿಯ ಭಂಡನೆನಿಪ ಪಾರ್ವಂ ಪಿಡಿದು
ಆಕಾಶಗಂಗೆ ಮುನ್ನುಳ್ಳುದುದನಟವಟಿಸಿ
ಲೋಕಾಯತಂ ಹುಸಿಯನುಚ್ಚರಿಸಲಳವಡಿಸಿ
ವಿಷ್ಣುಪದವೆಂದು ಗಗನದ ನಾಮವಲ್ಲಿದರ್
ವಿಷ್ಣುಪದಿಯಾದಳೆಂಬರ್ಥಮುಮನರಿದಿದರ್
ವಂಚಿಸಿ ಶಿವದ್ರೋಹಿ ಕಾಳ್ಕೆಡೆವುತಿರುತಮಿರೆ
ಪಂಚಮುಖನಿಂದೆಯಂ ಮಾಡುತ್ತಮಿರುತಮಿರೆ

ಕೇಳ್ದು ಜೊಮ್ಮಣ್ಣನೆಂತೆಂತದೆಂತೊಮ್ಮೊಮ್ಮೆ
ಆಳ್ದನೇ ಧರಿಯಿಸಿದನಿದನಾಡಲಾನಮ್ಮೆ
ಎಲೆಲೆಲೆ ಶಿವದ್ರೋಹಿ ಇಂತು ಪುಸಿ ನುಡಿವರೇ
ಎಲೆ ಪಾಪಿ ಪಾಪಿ ಪಾತಕ ಇಂತು ಬೊಗುಳ್ವರೇ
ಎನುತ ಅಲಗಿಂ ಧೊಪ್ಪನಿರಿದನಾ ದ್ರೋಹಿಯಂ
ತನುವನಿರ್ವ್ಯಗಾಣೆ ನರಕರಂಬಾಹಿಯಂ
ಇರಿದು ಭೋಂಕನೆ ಸೆಳೆಯೆ ಬೀಳ್ದನಾ ವಿದ್ರೂಪಿ
ಒರಗಿ ನೆತ್ತರವ ಕಾರುತ್ತಿರ್ದ ಕಡು ಪಾಪಿ
ಬಲುಗರವು ಹೊಡೆದಂತೆ ಬೆರೆತನಾ ಪಾತಕಂ
ಹಲುಗಚ್ಚಿ ಹೆಣನಾದನೆಂತಾತ್ಮಘಾತಕಂ
ಅಂತಾ ಶಿವದ್ರೋಹಿಯಂ ತೀರ್ಚಿ ಪೊರಮಟ್ಟು
ಕಂತುಮದಮರ್ದನನ ತೇಜಮಂ ಮುಂದಿಟ್ಟು
ಶಿವನಿಂತು ಕೇಳಸಿದನೇ ತನ್ನ ನಿಂದೆಯಂ
ಅವನದಲ್ಲಲ್ಲ ತಪ್ಪಂ ಬರ್ಪುದೆನ್ನಯಂ

ಎನುತೆ ಘೂರ್ಮಿಸುತೆ ನಿಜನಿಳಯಕ್ಕೆ ನಡೆತಂದು
ಮನಸಿಜಾರಿಯ ಶರಣರಂ ಕರೆಯಿಸುತ್ತಂದು
ಎಲ್ಲರಂ ನೆರಪಿ ಗಣತಿಂಥಿಣಿಗೆ ಮೆಯ್ಯಿಕ್ಕಿ
ಎಲ್ಲಾ ಗಣಂಗಳಂ ಬಲವಂದು ಮೆಯ್ಯಿಕ್ಕಿ
ನಿಂದಿರ್ದು ಕೈಮುಗಿದು ಕಣ್ಣನೀರ್ಕಡಲಾಗೆ
ಸಂಗಣಿಸಿ ದುಃಖವೀರ್ಮಡಿಸಿ ನೂರ್ಮಡಿಯಾಗೆ
ಬಿನ್ನೈಸಿದಂ ಜೊಮ್ಮಿತಂದೆಯನುರಾಗದಿಂ

ಬಿನ್ನೈಸಿದಂ ನಿಂದೆ ಕೇಳ್ದ ಕಡುಗೋಪದಿಂ
ಅವಧರಿಪುದಾನಿಂದು ಮಾಡಿದಪರಾಧಮಂ
ಕಿವಿಯಿಂದಲಿಂದಾದ ಗುರುತರ ನಿರೋಧಮಂ
ಶಿವನಿಂದೆಯಂ ಕೇಳ್ದ ಪಾಪಿಗೇನೆಂತಯ್ಯ
ಭವಿಯನೋಲೈಸಿದಪರಾಧಿಗೇನೆಂತಯ್ಯ
ಹರನಿಂದೆಗೇಳಲೇಕೋಲಗಿಸಲೇಕೆನಗೆ
ಹರಭಕ್ತರಲ್ಲದರ ಸಂಗಡವದೇಕೆನಗೆ
ನಿಂದಿಸಿದ ವಿಪ್ರನಂ ಕೊಂದೆ ಎನಗೈದದದು
ಇಂದವನ ವಂಶವಂ ನಟ್ಟು ಹರಗುವೆನೆಂದು
ಪೇಳಿರೇ ಇದಕೆ ಪರಿಹಾರವಂ ಭಕ್ತರಿರ
ಎಂದು ಬಿನ್ನೈಸೆ ಭಕ್ತರ್ಬಂದು ತರ್ಕೈಸೆ
ಇಂದುಧರನಾಜ್ಞೆ ನಿಮಗುಂಟೆಂದು ಹಾರೈಸೆ
ಪಾಪಿಯಂ ಪರಿಹರಿಸಿದಪ್ರತಿಮ ಜೊಮ್ಮಯ್ಯ
ಪಾಪಕರನಂ ದ್ರೋಹಿಯಂ ತೀರ್ಚಿದೆಮ್ಮಯ್ಯ
ಶಿವನಿಂದೆಯಂ ಗೈದನಂ ಕೊಂದೆನಿನ್ನೇನಯ್ಯ
ಶಿವಭಕ್ತ ನಿನಗೊಂದು ತಪ್ಪುಂಟೆ ಬೊಮ್ಮಯ್ಯ
ಎಂದು ಬೆಸಸಿದ ಭಕ್ತರಾಜ್ಞೆಯಂ ಕೈಕೊಂಡು
ಬಂದ ಭಕ್ತಾಳಿಯಂ ಭಯದಿಂ ಬಲಂಗೊಂಡು
ಗಣಪರ್ವದಿಂ ಕೇಳ್ದ ನಿಂದೆಯಂ ನೀಗುತಂ
ತಣಿವಂತೆ ಶರಣತತಿಗಿತ್ತು ಸುಖಿಯಾಗುತಂ
ಭೀಮನಾಥನೊಳಚಲಿತ ಪ್ರಸಾದಂಬಡೆದು
ಶರಣಸಂಗಂ ತನಗೆ ಪಿರಿದು ತುಷ್ಟಿಯನೀಯೆ
ನಿರುಪಮಾನಂದಸುಖಜಲಧಿ ತೆರೆ ಮೇಲ್ವಾಯೆ
ತನ್ನ ನಿಳಯದೊಳು ಜೊಮ್ಮಯ್ಯನೊಪ್ಪುತ್ತಮಿರೆ

**ಪ್ರಥಮ ಸ್ಥಲಂ ಸಮಾಪ್ತ.**

---

## ದ್ವಿತೀಯ ಸ್ಥಲಂ.

ಕಂದ॥ ಹರನಿಂದೆಗೈದನಂ ಸಂ
ಹರಿಸಿ ಹರಜ್ಞಾನಿ ಹರನ ತೇಜೋಭರಣಂ ।
ಹರನಣುಗಂ ಹರನಾಜ್ಞಾ
ಧರನಚಲಂ ಜೊಮ್ಮಿತಂದೆಯಿಪ್ಪವಸರದೊಳ್ ॥

**ಗದ್ಯಃ**— ಹರನಿಂದೆಗೈದ ಶಿವದ್ರೋಹಿಯಂ ತೀರ್ಚಿ ಏಕನಿಷ್ಠೆಯಿಂ ಹರನೊಲವಂ ತೊಡರ್ಚಿ ಪರಿಚ್ಛೇದಮನೊಡರ್ಚಿ ನಿರ್ಮಲ ಶೀಲಂ ಕರ್ಮ ವಿಧ್ವಂಸಿ ಜೊಮ್ಮಿತಂದೆ ಸತ್ಯಶರಣರ ನಡುವೆ ನಿತ್ಯನಾಗಿರಲಿತ್ತ ಪೇರ್ಮಾಡಿರಾಯಂ ಪುರಾಣಭಟ್ಟಂಗೆ ಮನಂ ಸಗೆಯಾದುದಂ ಪುಸಿನುಡಿ ವಿಷವಣಾದುದಂ ಶಿವನಿಂದೆಯೇ ಕೊಂದುದೆಂದರಿಯದೆ ಪರಿಚಾರಕರಂ ಕರೆದು ಪಾರ್ವನೇಕೆ ಪುರಾಣಮಂ ಪೇಳದುಸುರದಿರ್ದಪನೆಂದು ಕೇಳಲೋರ್ವರುಂ ಪೇಳಲಮ್ಮದೆ ಸುಮ್ಮನಿರೆ ಮತ್ತೆ ಮತ್ತಾಕ್ರಮಿಸಿ ಜೊಮ್ಮಿತಂದೆಗಳ್ಕೊಂದರೆಂದು ಪೇಳಲಂಜಿ ಕೈಸನ್ನೆ ಬಾಯಿಸನ್ನೆಯಿಂ ಕೇಳೆ ತೊರ್ಪಾಗಳ್ತಾನರ್ಚಿಸುವ ವಿಷ್ಣು ಪ್ರತಿಮೆ ತನ್ನದೆಸೆಯಿಂದಾದ ಶಿವನಿಂದೆಯಂ ಕೇಳ್ದು ಕಣ್ಣನೀರಿಕ್ಕುತಿರಲದಂ ಕಂಡಿದೇನುತ್ಪಾತವೆಂದರಸಂ ಭೋಂಕನೆ ಪೊರಮಟ್ಟು ನಡೆತರುತ್ತೆ ಕಾಳ್ಪುರಾಣ ಒಂದೆಸೆ ತಾನೊಂದೆಯಾಗಿ ಕರುಳು ಕುಪ್ಪಳಿಸುತ್ತಿರ್ದ ನಿತ್ಯನರಕಿಯಂ ಕಂಡು ಮುಖದ ಕಾಯ್ಪಿಂ ಕಂಗಳ ಕಾಂತಿಯಿಂ ಮನದ ಕೌತುಕದಿಂ ಚಿತ್ತದ ನಿರೋಧದಿಂ ತಲೆದೂಗುತ್ತಂ ಪೇರ್ಮಾಡಿರಾಯಂ ಸಿಂಹಾಸನಾರೂಢನುಂ ಕೋಪಾರೂಢನುಮಾಗಿ ಶೋಭಿತ ಮಕುಟವರ್ಧನುಂ ಪರಿವೃತರಾಜ ಪುತ್ರರುಂ ಪರಿವೇಷ್ಟಿತಮಂತ್ರಿವರ್ಗನುಮಾಗಿ ವಾದವಿಪ್ರನಿಕಾಯನುಂ ಪ್ರಣುತ ಕವಿಜನ ನಿಕಾಯನುಂ ಕೋಪಾಗ್ನಿಕಣಕಲಿತನಿಜೇಕ್ಷಣನುಮಾಗಿ ಪೇರ್ಮಾಡಿರಾಯಂ ಪಡಿಯರರಿಂ ಜೊಮ್ಮಯ್ಯನಂ ಮತ್ತೆಮತ್ತೆ ಕರೆಯ ಕಳಿಪುತಿರಲಿತ್ತಲಾತನ ಧರ್ಮಪತ್ನಿ ಶಿವಲಿಂಗಾರ್ಚನಾನಿರತೆ ಜಂಗಮಸ್ನೇಹಿ ಸತ್ಯಭಕ್ತೆ ಲಕುಮಾದೇವಿ ಶಿವನಿಂದೆ ವಿಪ್ರವಧೆನಿಮಿತ್ತವರಸಂ ಜೊಮ್ಮಣ್ಣಂಗೆ ಮುನಿದು ಕರೆಯಲ್ಕಳುಪಿ ಕುಪಿತನಾಗಿರ್ದಪನೆಂಬ ಕಠಿಣವಾರ್ತೆಯಂ ಕರ್ಣಪರಂಪರೆಯಿಂ ಲಕುಮಾದೇವಿ ಕೇಳ್ದು ಹರಹರ ಹರನೇ ಬಲ್ಲಂ

ಶಿವಭಕ್ತಂಗಳಿವಿಲ್ಲದ ಚಿನ್ಹಂ ಅಡ್ಡವಾಗಲದು ಮುನ್ನೆಂದುಂ ಪೊಡಮಡದ ಜೊಮ್ಮಣ್ಣನಿಂದು ಪೊಡಮಡೆ ತನಗೆ ಪೊಡಮಟ್ಟನೆಂದರಸಂ ಮನ್ನಿಸುವನೆಂಬ ಬಗೆಯಿಂ ತನ್ನ ಪ್ರಾಣಲಿಂಗವಂ ಸಿಂಗರಿಸಿ ಮಾಣಿಕ್ಯದ ಸಿಂಹಾಸನವೆರಸರಸನರಿಯದಂತೆ ಶಿವಭಕ್ತೆಯರು ಸಹಿತೆ ಲಕುಮಾದೇವಿ ಪಿಡಿದಿರ್ಪ ಸಮಯದೊಳು

ಇತ್ತಲ್ಮುಂದೆ ಬರ್ಪರಸಾಳ್ಗಳಿಂ ಪಿಂದೆ ಬರ್ಪ ಪುರಜನದಿಂ ಕೆಲಬಲದೊಳ್ಬರ್ಪ ಭಕ್ತನಿಕರದ ನಡುವೆ ವಿಭೂತಿಯ ಕಾಂತಿ ನಳನಳಿಸೆ ರುದ್ರಾಕ್ಷಿಯ ಉಲಿಪು ಘಲುಘಲಿಸೆ ಕೆಯ್ಯಲಗಿನ ಬೆಳಗು ಬಳ್ವರಿಯೆ ಕಲಿಯುಗ ವೀರಭದ್ರಂ ಪರಸಮಯ ಪರಿಚ್ಛೇದಿ ಪರವಾದಿ ಕೋಲಾಹಲಂ ಜೊಮ್ಮಿತಂದೆ ಒರೆವುಚ್ಚಿದ ತ್ರಿಶೂಲದಂತೆ ತೊಡರ್ಚಿದ ಫಾಳಲೋಚನದಂತೆ ಘುಳುಘುಳಿಸಿ ನಡೆತಂದು ಸಭಾನಿಳಯಮಂ ಪುಗುತರುತಂ ಮೇಲಂ ನೋಡಿ ತೊಳತೊಳಪ ಲಿಂಗಮಂ ಫಳಲನೆ ಕಂಡು ನಿಜಭಕ್ತಿಯ ಭರದಿಂ ಪೊಡಮಡಲ್ಕೈಯೆತ್ತುತ್ತೊಲ್ಲದೆ ನಿಂದು ಭವಿಯ ಪಿಂದಿರಲೇಕೆ ಪೊಡಮಡಿಸಿಕೊಳಲೊಲಿವರೇ ಕೆಲಕ್ಕೆ ಬಿಜಯಂಗೈವುದೆಂದೆತ್ತಿದ ಹಸ್ತಮಂ ಮತ್ತೊಂದೆಸೆಗೆ ಸನ್ನೆದೋರೆ ಶಿವಲಿಂಗಂ ಸಿಂಹಾಸನಮಂ ಬಿಟ್ಟು ಭಕ್ತನ ಕೆಯ್ಯೊಡನೆ ಸರನೆ ತಿರುಗಿ ಸರಿಸಕ್ಕೆ ಬಂದು ಕೆಲಸಾರ್ದು ಗಗನಾಸನಮಂ ಕೈಕೊಂಡಿರೆ ಬಳಿಕ್ಕೆ ಪೊಡಮಟ್ಟು ಸಂತಸಂಬಟ್ಟು ದೇವದೇವ ಸುಕುಮಾರಲಿಂಗ ಸರ್ವಾಭಿಮಾನಿ ಬಿಸಿಲು ಗಾಳಿಯೊಳಿರ್ಪರೇ ಸೆಜ್ಜೆಗೆ ಬಿಜಯಂಗೈವುದೆಂದು ಬಿನ್ನೈಸಿ ಬಿಜಯಂಗೈಸಿ ನಿರ್ಮಳ ಚಿತ್ತಂ ಜೊಮ್ಮಯ್ಯಂ ಸಭೆಯಂ ಲೆಕ್ಕಿಸದೆ ನಿಂದಿರ್ದರವಂ ನೋಡಿ ಮೊದಲೊಳೆ ವಿಷ್ಣುಪ್ರತಿಮೆ ಕಣ್ಣಾ ನೀರಿಕ್ಕಿತಂ ತತ್ಪದವಂ ನೋಡೆ ನೋಡೆ ಶಿವಲಿಂಗವಂ ಕೈಸನ್ನೆಯಿಂ ಬರಿಸಿದ ಸಾಮರ್ಥ್ಯಮಂ ಬಿಜಯಂಗೈಸಿದ ಸ್ನೇಹಮಂ ನಿಂದ ನಿಲವಂ ಬಗೆಯದ ಬಲ್ಪುಮಂ ಲೆಕ್ಕಿಸದ ಗರ್ವತೆಯಂ ಕೈಕೊಳ್ಳದ ಕಡುನಿಷ್ಠೆಯಂ ಕಂಡು ಭೂಪಂಗೆ ಕೋಪವಳಿದು ನಂಬುಗೆ ಬೆಳೆದು ಭೀತಿಯುದ್ಭವಿಸಿ

ಏನಯ್ಯ ಜೊಮ್ಮಯ್ಯ ನಿರಪರಾಧಿ ಪುರಾಣಭಟ್ಟನಂ ಕೊಂದುದಕ್ಕೆ ಕಾರಣವೇನೆನೆ ಕೇಳರಸ ನಿನಗೆ ವಿಚಾರವಿಲ್ಲ ಪುರಾಣಭಟ್ಟನಂ ಕೊಲ್ಲೆ ಶಿವನಿಂದೆಯಂ ಮಾಡಿ ಪುಸಿ ನುಡಿದ ದ್ರೋಹಿಯಂ ಕೊಂದೆ ನಿನ್ನುಂ ತಣಿಯೆನೆಂದು ಪೇಳ್ದ ಜೊಮ್ಮಿತಂದೆಯಂ ಪೇರ್ಮಾಡಿರಾಯಂ

ಕಂಡೀ ಭಕ್ತನಂ ಪರೀಕ್ಷಿಸಿ ನೋಳ್ಪೆನೆಂದಿನ್ನು ಪ್ರತ್ಯಕ್ಷಂ ಕಂಡರೆ ಬಿಡುವೆ ನಲ್ಲದೊಡೆ ದಂಡಿಸುವೆನೆಂದು ನೆನದೆಲೆ ಜೊಮ್ಮಯ್ಯ ಪುರಾಣಭಟ್ಟಂ ಪುಸಿ ನುಡಿದುದಕ್ಕೆ ಪ್ರಮಾಣವಾವುದು ವಿಶ್ವರೂಪ ವಿಷ್ಣುಪುರಾಣಮ ನೋದಲಸತ್ಯಮೆಂದುದಕ್ಕೆ ಪ್ರತ್ಯಕ್ಷಮಂ ಉಳಿಕೆ ವಾಗ್ವಿಡಂಬಮಂ ನಮ್ಮೊಡನಾಡಲಾಗದು ಸದ್ಭಕ್ತಿಯುಳ್ಳೊಡೆ ತೋರ್ಪುದೆಂದು ಪೇರ್ಮಾಡಿರಾಯಂ ನುಡಿಯೆ ಜೊಮ್ಮಯ್ಯಂ ಕೇಳ್ದು ಎಲೆಲೆ ಮರುಳರಸೇ ಹರಭಕ್ತರೊಳ ಸತ್ಯಮುಂಟೇ ದೂಷಕಂ ನರಕಕ್ಕಿಳಿಯಲ್ಪುಸಿ ನುಡಿ ಇಂತಿದಕ್ಕೆ ಪ್ರತ್ಯಕ್ಷ ಮೀಗಳಾ ಪೆಣನಂ ಮುಸುಂಕಿಟ್ಟು ತೆಗೆಯಲ್ಪುಳುವಿನ ರಾಶಿಯಾಗದಿರ್ದೊಡವನಲ್ಲ ನಾನಪರಾಧಿ ಎನ್ನಂ ಶಿಕ್ಷಿಸುದೆನಲರಸನೊಡಂ ಬಟ್ಟು ಜೊಮ್ಮಣ್ಣಂಗೆ ಕೈಗೊಟ್ಟು ಗಳಗಳನೆ ನಡೆತಂದು ಭಕ್ತ ನೀಂ ತೋರ್ಪುದಂ ತೋರಾ ಎನಲ್ಪರಮಶಿವನಿಷ್ಠಾ ನಿಧಿ ಓಪರಿಸದ ಭಾಷೆ ವಂತಂ ಜೊಮ್ಮಯ್ಯನಲಗಂ ಕೀಳ್ತಲೆ ದೇವ ಭೀಮನಾಥ ನಿನಗೆ ಕಟ್ಟಿ ದೊರೆಯನಪಧಾರವಧಾರೆನ್ನ ಬಿನ್ನಪವ ಪರಸಮಯ ದ್ವೇಷದಿಂದಿರಿದೊಡಂ ಭಕ್ತನೆಂಬ ಗರ್ವದಿಂ ಭವಿಯ ಕೊಂದಡಂ ಪೇಳ್ದ ಪುರಾಣ ವಪ್ಪುದಲ್ಲೆಂಬ ಸಂದೇಹದಿಂ ಮಡಿಪಿರ್ದೊಡಂ ನಿನ್ನ ಮೇಲೆ ಸ್ನೇಹ ವಿಲ್ಲದಂ ನ್ಯಾಯದಿಂ ಪ್ರಾಣಿಯ ನೋಯಿಸಿರ್ದಡಂ ನೀನೇ ಸಾಕ್ಷಿ ಇದೇ ದಿಬ್ಯವೆಂದು ಭಾಷೆಗೊಡುತ್ತಂ ಬಂದು ದೂಷಕನ ಪೆಣಂ ಕಾಣ ಲಾಗದೆಂಬಂತೆ ಭೋಂಕನೆ ಪಚಡದಿಂ ಮುಸುಂಕಿಕ್ಕಿ ತೆಗೆಲಮ್ಮಮ್ಮ ನಿಂದಕನವಯವಂ ಕಲಸಿ ಪುಸಿಯ ಪುಂಜಂ ಬಳಸಿ ಬೆಳೆದಂತೆ ನಿಂದೆಯ ಗುಡ್ಡೆ ನಿಮಿರ್ದಂತೆ ಪಾಪದ ಬೀಜ ಒಬ್ಬುಳಿಸಿದಂತೆ ದೋಷದ ಹುತ್ತ ನೆಗೆದಂತೆ ಪುಳುವಿನ ರಾಶಿ ವಿಲಿವಿಲಿಸುತ್ತಿರದಂ ಕಂಡು ಕಣ್ಮುಚ್ಚಿಕೊಂಡು ತೆಗೆತೆಗೆ ಎಂದು ಹೇಸಿ ಪಾಪಕ್ಕೆ ಹೇಡೈಸಿ ಪುಳುವೆಲ್ಲಂ ಪೊರಕ್ಕೆ ಚಲ್ಲಿಸಿ ಪರಿತಂದು ಜೊಮ್ಮಯ್ಯನ ಪದತಳಕ್ಕೆರಗಿ ನಿಮ್ಮಂ ಪರೀಕ್ಷಿಸಿದ ಪಾಪಿಗೆ ಕರುಣಿಪುದೆಂದು ಪೇರ್ಮಾಡಿರಾಯಂ ನಿಂದು ಕೈಮುಗಿದು ನಿಶ್ಚಳ ಭಕ್ತನಂ ಭದ್ರಾಸನದ ಮೇಲಕ್ಕೆ ಬಿಜಯಂಗೈಸಿ ಚರಣಯುಗಳಕ್ಕೆ ಇಚ್ಛಾರ್ಚಿಸಿ ಪೊಂಗಳಂ ಕಾಣ್ಕೆ ಇತ್ತು ಕೊಂಡಾಡುತಿರ್ಪ ಸಮಯದೊಳ್

ಸದ್ಭಕ್ತೆ ಲಕುಮಾದೇವಿಯರಾರಾಧಿಸಿ ಕಳುಪಿದ ಪೊನ್ನ ಪೊಟ್ಟಣಮಂ ಹಾರೈಸಿಕೊಂಡು ರನ್ನದ ತೊಡಿಗೆಗಳಂ ಹರುಷದಿಂ ತೊಟ್ಟು ದಿವ್ಯ ವಸ್ತ್ರಮನುಟ್ಟು ಸಿಂಹಾಸನದೊಳೊಪ್ಪುತ್ತಿರ್ಪ ನಿಸ್ಸೀಮನಂ ಕಂಡ

ಶಿವಾನುಭವ ಗ್ರಂಥಮಾಲಾ ನಂ. ೫೬.

# ಶಿವಾನುಭವ ಸೃಷ್ಟಿಯ ವಚನಗಳು.



ಸಂಪಾದಕರು.

ರಾ॥ ಬ॥ ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

---

ವಿಜಾಪುರ.

೧೯೪೧

ಬೆಲೆ ೬ ಆಣೆ.

# ಪ್ರಸ್ತಾವನೆ.

ಈ ಗ್ರಂಥದಲ್ಲಿ ಮುಕ್ತ್ಯಂಗನಾ ಕಂಠಮಾಲೆ ಮತ್ತು ಜ್ಯೋತಿರ್ಮಯ ಶಾಂಭವೀ ದೀಕ್ಷೆ ಎಂಬೆರಡು ವಚನಗ್ರಂಥಗಳು ಅಡಕವಾಗಿರುತ್ತವೆ. ಇವುಗಳಲ್ಲಿ ೧ನೇ ಗ್ರಂಥದಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರನ ೨೧ ವಚನಗಳಿದ್ದು ಇವುಗಳಿಗೆ ಚನ್ನದೇವನೆಂಬವನು ಟೀಕೆಯನ್ನು ಬರೆದಿದ್ದಾನೆ. ಇದರಲ್ಲಿ ಸೃಷ್ಟಿಯ ಉಗಮವು ಹೇಗೆ ಉಂಟಾಯಿತು, ಪರಮಾತ್ಮನ ಮೂಲ ಚೈತನ್ಯ ರೂಪು ಜಗತ್‌ಸೃಷ್ಟಿಗೆ ಹೇಗೆ ಕಾರಣವಾಯಿತು, ಇವೇ ಮೊದಲಾದ ವಿಷಯಗಳನ್ನು ವಿವರಿಸಿ ಆಮೇಲೆ ಮುಕ್ತಿಗೆ ಸಾಧನವಾದ ಲಿಂಗಧಾರಣ ವಿಷಯವನ್ನು ಹೇಳಿದ್ದಾನೆ. ಆಮೇಲೆ ಅಂಗ ಲಿಂಗಸಂಬಂಧ ಮತ್ತು ಲಿಂಗಭಕ್ತಿಯ ಸ್ವರೂಪ ಇವುಗಳನ್ನು ವಿವರಿಸಿ ಶಿವಾನುಭವದ ಮೂಲಕ ಮೋಕ್ಷವನ್ನೈದಬೇಕೆಂದು ಸೂಚಿಸಿದ್ದಾನೆ.

ಎರಡನೆಯ ಗ್ರಂಥದಲ್ಲಿ ಪ್ರಭುದೇವರ ೩೭ ವಚನಗಳಿವೆ. ಇವುಗಳನ್ನು ಪಾಲ್ಕುರಿಕೆಯ ಸೋಮಾರಾಧ್ಯನು ಆರಿಸಿದಂತೆ ಈ ಗ್ರಂಥದಲ್ಲಿ ಉಲ್ಲೇಖವಿರುತ್ತದೆ. ಇದರಲ್ಲಿ ಸೃಷ್ಟಿಯ ರಚನೆಯ ಬಗ್ಗೆ ಸವಿಸ್ತಾರವಾದ ವಿವೇಚನೆಯೂ ಶಿವಯೋಗದ ಗೂಢತತ್ವಗಳೂ ಹೆಚ್ಚಾಗಿ ನಿರೂಪಿಸಲ್ಪಟ್ಟಿರುತ್ತವೆ. ಸೃಷ್ಟಿಯ ರಚನೆಯಲ್ಲಿ ಶೂನ್ಯ ನಿರಾಲಂಬ ಸೃಷ್ಟಿ, ನಿರಾಳಸೃಷ್ಟಿ, ಮತ್ತು ಈಶಾನ್ಯ ಮೂರ್ತಿಯ ನಿರ್ಮಲ ಸೃಷ್ಟಿ ಹೀಗೆ ಮೂರು ವಿಭಾಗಗಳು ಮಾಡಲ್ಪಟ್ಟಿರುತ್ತವೆ. ಈ ಕಡೆಯ ವಿಭಾಗವು ಪ್ರಮಥ ಸೃಷ್ಟಿಯೆಂತಲೂ ಹೇಳಲ್ಪಡುತ್ತಿದೆ.

ಷಟ್‌ಸ್ಥಲದ ಮರ್ಮವನ್ನು ತಿಳಿಯಲಿಕ್ಕೆ ಜಗದ್ರಚನೆಯ ಜ್ಞಾನವು ಬಹು ಅವಶ್ಯವಾದುದು. ಈ ವಿಷಯವು ಪ್ರಭುದೇವರ ಸೃಷ್ಟಿಯ ವಚನ ಮತ್ತು ಮಹಾದೇವಿಯಕ್ಕನ ಸೃಷ್ಟಿಯ ವಚನ. ಇವುಗಳಲ್ಲಿ ವಿಶೇಷವಾಗಿ ಬಂದಿರುತ್ತದೆ. ಅವುಗಳೊಡನೆ ಈಗಿನ ಗ್ರಂಥದಲ್ಲಿಯ ವಿಷಯಗಳನ್ನೂ, ವಚನಶಾಸ್ತ್ರಸಾರ ಭಾಗ ೨. ಈ ಗ್ರಂಥದ ಪುಟ ೧ರಿಂದ ೭೧ರ ವರೆಗಿನ ಪುಟಗಳಲ್ಲಿರುವ ವಚನಗಳನ್ನೂ ಪರಿಶೀಲಿಸಿದ್ದಾದರೆ ಈ ಮಹತ್ವದ ವಿಷಯದ ಮೇಲೆ ವಿಶೇಷ ಪ್ರಕಾಶವು ಬೀಳುವಂತಿದೆ.

೩

ಈ ಎಲ್ಲ ವಿಷಯುಗಳನ್ನು ನಿರೂಪಿಸಿದ್ದಾದರೆ ಒಂದು ದೊಡ್ಡ ಗ್ರಂಥವೇ ಆಗುವದು. ಆದ್ದರಿಂದ ಈಗಿನ ಗ್ರಂಥದಲ್ಲಿ ಇವೆಲ್ಲ ವಿಷಯುಗಳನ್ನು ನಾವು ವಿಸ್ತಾರವಾಗಿ ವಿವೇಚಿಸಲು ಪ್ರಯತ್ನಿಸಿಲ್ಲ.

ಈ ಎರಡೂ ವಚನಗ್ರಂಥಗಳ ಹಸ್ತಲಿಖಿತ ಪ್ರತಿಗಳು ನಮ್ಮ ಕಡೆಗೆ ಇದ್ದುದ್ದಲ್ಲದೆ ಇವುಗಳನ್ನು ಬೇರೆಯಾಗಿ ಬೇರೆ ಬೇರೆ ಕಾಲಗಳಲ್ಲಿ ಕೆಲ ಮಹನೀಯರು ಪ್ರಸಿದ್ಧಮಾಡಿದ್ದು ನಮಗೆ ಕಂಡುಬಂದಿರುತ್ತಿದೆ. ಇವುಗಳನ್ನು ಮೊದಲು ಮೈಸೂರಿನ ಶ್ರೀ ಡಿ. ಆರ್. ತಿಪ್ಪಯ್ಯ ಶಾಸ್ತ್ರಿಗಳೂ ಈಚೆಗೆ ಜ್ಯೋತಿರ್ಮಯಶಾಂಭವದೀಕ್ಷೆಯನ್ನು ಶ್ರೀ ಚನಮಲ್ಲಪ್ಪನವರು ಎಡಿಟರ ಸದ್ಧರ್ಮ ದೀಪಿಕೆ ಇವರೂ ಪ್ರಸಿದ್ಧಿಸಿದ್ದು ನಮಗೆ ತಿಳದುಬರುತ್ತದೆ. ಆದರೆ ಈ ಎರಡೂ ಗ್ರಂಥಗಳು ಒಂದೇ ವಿಷಯಕ್ಕೆ ಸಂಬಂಧಪಟ್ಟ ವಿರುವದರಿಂದ ಓದುವವರಿಗೆ ಅನುಕೂಲವಾಗಬೇಕೆಂದು ಅವೆರಡನ್ನು ಕೂಡಿಸಿಯೇ ಈ ಗ್ರಂಥದಲ್ಲಿ ನಾವು ಮುದ್ರಣಗೊಳಿಸಿರುತ್ತೇವೆ.

ವಿಜಾಪುರ }
೧೩-೨-೧೯೪೧ }

ಫ. ಗು. ಹಳಕಟ್ಟಿ
ಸಂಪಾದಕ.

ಇದನ್ನು ವಿಜಾಪುರದಲ್ಲಿ ರಾ॥ ಬ॥ ಫ. ಗು. ಹಳಕಟ್ಟಿ ಇವರು ತಮ್ಮ
"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು.
ಮತ್ತು ಅವರು ವಿಜಾಪುರದಲ್ಲಿ ಉಪಲೀಬುರಜ ಓಣಿಯಲ್ಲಿರುವ ತಮ್ಮ
೧೬೭೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ] ಮಾರ್ಚ ೧೯೪೧. [ ಸಂಚಿಕೆ

## ವಿಷಯಾನುಕ್ರಮಣಿಕೆ.

# ಶಿವಾನುಭವ.


| ವರ್ಷ ೧೪ | ಮಾರ್ಚ-೧೯೪೧. | ಸಂಚಿಕೆ ೬ |
| --- | --- | --- |


## ಶಿವದೀಕ್ಷೆ ಅರ್ಥಾತ್ ಲಿಂಗಧಾರಣ.


(ಲೇಖಕಃ- ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ)




ಶ್ರೀಮಾನ್ ಕ. ಬಸವಪ್ಪ ಜೀರಗೆ ಬಿ. ಎ. ಬೆಂಗಳೂರು ಅವರು ಶಿರೋಲೇಖದಲ್ಲಿ ಕಾಣಿಸಿದ ವಿಷಯವನ್ನು ಬರೆದು, ಶಿವಾನುಭವದ ಜನವರಿ (೧೯೪೧) ಸಂಚಿಕೆಯಲ್ಲಿ ಪ್ರಕಟ ಮಾಡಿರುವರಷ್ಟೇ. ಅದರಲ್ಲಿ ಅವರು ಕೀರ್ತನಕೇಸರಿ ಬಿ ಶಿವಮೂರ್ತಿಶಾಸ್ತ್ರಿಗಳು ತಮ್ಮ ಶರಣ ಸಾಹಿತ್ಯದ ಕಳೆದ ಆಗಷ್ಟ ತಿಂಗಳ ಸಂಚಿಕೆಯಲ್ಲಿ "ಲಿಂಗಧಾರಣ ಮತ್ತು ಶಿವದೀಕ್ಷೆ" ಎಂಬ ಶೀರ್ಷಿಕೆಯಲ್ಲಿ ಹುಲುಬಿಸಿದ ಲೇಖವನ್ನು ಪ್ರತಿಭಟಿಸಿ ನಿರಾಕರಿಸಿರುವರು. "ಲಿಂಗಧಾರಣ ಶಿವದೀಕ್ಷೆಗಳು ಭಿನ್ನವಾದವುಗಳಲ್ಲ ಎರಡೂ ಒಂದೆ! ಆ ಕಾರಣ ಲಿಂಗಧಾರಣೆಯಾದ ಮೇಲೆ ಶಿವದೀಕ್ಷೆ ಎಂದು ಪುನಃ ಸಂಸ್ಕರಿಸುವ ಅವಶ್ಯಕತೆಯಿಲ್ಲ" ಎಂದು ಅವರ ಅಂಬೋಣವು. ಇಲ್ಲಿ ಇಬ್ಬರೂ ಬಲ್ಲವರು. ಒಬ್ಬರು ಶಾಸ್ತ್ರಿಗಳು, ಇನ್ನೊಬ್ಬರು ಪದವೀಧರರು ಇವರ ಪ್ರತಿಪಾದನೆಗಳಲ್ಲಿ ಸೇರುವದು ಸಾಧಾರಣವಾದುದೇನೂ ಅಲ್ಲ. ಆದರೂ ಮೌಜು ನೋಡುತ್ತ ಸುಮ್ಮನೆ ಕೂಡ್ರುವದಾದರೂ ಹೇಗೆ? "ವಾದೇ ವಾದೇ ಜಾಯತೇ ತತ್ವ ಬೋಧಃ" ಎಂಬುದನ್ನು ಸ್ಮರಿಸಿ ಶುದ್ಧ ಭಾವನೆಯಿಂದ ಯಥಾಮತಿ ನಿರೂಪಿಸುವುದೇ ಕರ್ತವ್ಯ ಈಗ ಕೈಚಾಚಿರುವೆನು.

ಶ್ರೀಮಾನ್ ಜೋಗಿಯವರು, ನೂರೊಂದು ಸ್ಥಳಗಳಲ್ಲಿ ಲಿಂಗಧಾರಣವು ಐದನೆಯ ಸ್ಥಲವೆಂದೂ ಅದನ್ನು ವೀರಶೈವನು ಹೆಜ್ಜೆಯನಿರಿಸಿ ತನ್ನ ಜೀವನದಲ್ಲಿ ಅನುಸರಿಸಲೇಬೇಕೆಂದೂ ಹೇಳಿರುವುದು ಯೋಗ್ಯವು. ಆದರೆ ಜನ್ಮ ಲಿಂಗಧಾರಣೆ ಹೊಂದಿದ ಕೂಸು ತತ್ಪೂರ್ವದ ನಾಲ್ಕು ಹೆಜ್ಜೆಗಳನ್ನು ಇಕ್ಕಿ ತಾನೇ ಆ ಸ್ಥಲಕ್ಕೆ ಬಂದಿರುವುದೇ ? ಎಂಬುದನ್ನು ಮಾತ್ರ ಅವರು ನೆನೆಯಲಿಲ್ಲ. ಅದನ್ನು ನೆನೆದಿದ್ದರೆ, ಹುಡುಗನು ತಕ್ಕ ಮಟ್ಟಿಗೆ ದೊಡ್ಡವನಾದಮೇಲೆಯೇ ಲಿಂಗಧಾರಣ ಹೊಂದಲಿಕ್ಕೆ ಯೋಗ್ಯನಾಗುವನೆಂಬುದು ಕೂಡಲೆ ಹೊಳೆಯುತ್ತಿತ್ತು. ಆಗ ಶಾಸ್ತ್ರಿಗಳು ಅದೇಕೆ ಜನ್ಮ ಸಂಸ್ಕಾರ (ಔಪಚಾರಿಕವಾಗಿ ಆಗುವ ಲಿಂಗಧಾರಣ) ಮತ್ತು ಶಿವದೀಕ್ಷೆ ಎಂದು ವಿಂಗಡಿಸಿರುವರೆಂಬುದರ ಉತ್ಪತ್ತಿಯು ಗೊತ್ತಾಗದೆ ಇರುತ್ತಿರಲಿಲ್ಲ; ಇರಲಿ ಹೀಗೆ ಹೊಸದಾಗಿ ಶಾಸ್ತ್ರಿಗಳೇ ವಿಭಾಗಿಸಿರುವರೆಂದಲ್ಲಿ ಹಾಗೆ ಮೊದಲಿನವರೇ ಉಂಟು ಮಾಡಿದ್ದಾರೆ. ವೀರಶೈವರಿಗೆ ೬೪ ಶೀಲಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ಶಿವದೀಕ್ಷೆಯೇ ಪ್ರಾಮುಖ್ಯವಾದುದರಿಂದ, ಅದನ್ನು ಈ ಬಗೆಯಾಗಿ ಮೊದಲನೆಯ ಶೀಲವೆಂದು ಹೇಳಿದ್ದಾರೆ. "ಲಿಂಗಪೂಜೆಯು ಹೊರತು ಜನ್ಮ ಜನ್ಮಾಂತರಗಳ ಭಯವು ಹೋಗುವದಿಲ್ಲೆಂದು ತಿಳಿದು, ಗುರುಕರುಣೆಯನ್ನು ಪಡೆದುಕೊಂಡು, ಇಷ್ಟಲಿಂಗದಲ್ಲಿ ಶ್ರದ್ಧೆಯುಳ್ಳವನಾಗಿ, ಅನ್ಯ ದೇವರುಗಳನ್ನು ಮನಸ್ಸಿನಲ್ಲಿ ತಾರದೆ, ಗುರುಲಿಂಗ ಜಂಗಮದಲ್ಲಿ ದೃಢಭಕ್ತಿಯುಳ್ಳವನಾಗಿ ಇರುವದೇ ಮೊದಲನೇ ಶೀಲವು. ಎಂದು ಹೇಳಿದ್ದಾರೆ. ಮುಂದೆ ೧೪ನೆಯದರಲ್ಲಿ "ಹೆಂಡತಿ ಗರ್ಭಿಣಿಯಾದಾಗ ಎಂಟು ತಿಂಗಳಲ್ಲಿ ಗುರುಜಂಗಮರ ಹಸ್ತದಿಂದ ಹೊಟ್ಟೆಯೊಳಗಿನ ಶಿಶುವಿಗೆ ಲಿಂಗಧಾರಣ ಮಾಡಿಸಿ, ವಿಭೂತಿ ಪಟ್ಟವನ್ನು ಕಟ್ಟಿಸುವದು" ಎಂದಿರುವದು. ಇದೇ ಮೇರೆಗೆ ದಶಕರ್ಮ ಪದ್ಧತಿ, ಸ್ವಯಂ ಪುರೋಹಿತ ಮೊದಲಾದ ಆಧುನಿಕ ಪುಸ್ತಕಗಳಲ್ಲಿಯೂ ಅವನ್ನು ಬೇರೆ ಬೇರೆಯಾಗಿಯೇ ವಿವರಿಸಿದ್ದಾರೆ. ಭಕ್ತರಲ್ಲಿ ಬಹುಶಃ ಮುಗ್ಗಿದ್ದರೂ ಮಾಹೇಶ್ವರರಲ್ಲಿ ಜನ್ಮ ಸಂಸ್ಕಾರವಲ್ಲದೆ, ಈಗಲಾದರೂ ಶಿವದೀಕ್ಷೆಯು ನಡೆದೇ ಅದೆ. ಇದೆಲ್ಲವನ್ನು ನೋಡಿದರೆ, ಶಾಸ್ತ್ರಿಗಳು ಅವನ್ನು ಅಗಲಿಸಿ ಬರೆದುದು ಯುಕ್ತವೇ ಸರಿ, ಎಂದು ಹೇಳಬೇಕಾಗುವದು.

ಲಿಂಗಧಾರಣ ಶಿವದೀಕ್ಷೆಗಳು ಹಾಸು ಹೊಕ್ಕುಗಳಂತಿರುವದೇನೂ ಸುಳ್ಳಲ್ಲ. ಸಿದ್ಧಾಂತಶಿಖಾಮಣಿಯೊಳಗಿನ ಲಿಂಗಧಾರಣ ಸ್ಥಲದ ವಿವರಣೆ

ಯಿಂದ, ಅದು ಬಹು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಆದರೆ ಶಿಶುವಿನ ಲಿಂಗಧಾರಣೆಯು (ಐದನೆಯ ಹೆಜ್ಜೆಯಲ್ಲ) ಕೇವಲ ಔಪಚಾರಿಕವು. ತಂದೆತಾಯ್ಗಳು ತಮ್ಮ ಮಗುವಿಗೆ, ಲಿಂಗಾಯತತ್ವದ ಒಲವು ಹೆಚ್ಚು ವುದಕ್ಕಾಗಿಯೂ, ತಮಗೆ ಭವಿಯ (ಅಲಿಂಗಿಯ) ಸಂಗಡ ವ್ಯವಹರಿ ಸಲಿಕ್ಕೆ ಬರುವ ತೊಂದರೆಯನ್ನು ನೀಗಿಸುವುದಕ್ಕಾಗಿಯೂ, ಅದಕ್ಕೆ ಧರಿ ಸಿದ ಲಿಂಗವಿದು. ವೀರಶೈವರು ತಮ್ಮ ಮನೆಗೂ ಮನೆಯೊಳಗಿನ ದನ ಕರುಗಳಿಗೂ ಭಾಂಡಗಳೇ ಮೊದಲಾದ ಉಪಕರಣಗಳಿಗೂ ಲಿಂಗ ಮುದ್ರೆಹಾಕಬೇಕೆಂದು ಶೀಲಗಳಲ್ಲಿ ಆಜ್ಞಾಪಿಸಿರುವಾಗ, ಲಿಂಗಸಂಬಂಧ ವಿಲ್ಲದ ತಮ್ಮ ಶಿಶುವಿನೊಡನೆ ಅವರು ಬಳಕೆಯಿಡುವುದೆಂತು? ಆಕಾರಣ ಮುದ್ರೆಯ ರೂಪವಾಗಿ ಆದು ಶಿಶುವಿಗೆ ಇರುವುದೇ ವಿನಾ ಶಿಶುವು ತಾನಾಗಿ ತನ್ನ ಸಲುವಾಗಿ ನಾಲ್ಕು ಹೆಜ್ಜೆ ಸಾಗಿಬಂದು ಪಡೆದ ಲಿಂಗ ವಲ್ಲ! ಈ ಜನ್ಮಲಿಂಗಧಾರಣೆಗೆ ಸಾಮಾನ್ಯ ಮಹೇಶ್ವರರೇ ಸಾಕು; ಆದರೆ ಶಿವದೀಕ್ಷೆ ವಿಶೇಷರೆಂದೆನಿಸುವ ಪಟ್ಟಚರಾಧಿಕಾರಿಗಳಲ್ಲದೆ ಸಾಗ ದೆಂಬುದನ್ನಾದರೂ ಇಲ್ಲಿ ಗಮನಿಸುವುದು ಅವಶ್ಯವಾಗಿದೆ.

ಶ್ರೀಮಾನ್ ಜೀರಗೆಯವರು ಬರೆದಂತೆ, ಲಿಂಗವಂತರ ಕೂಸು ಬೆಳೆಯಹತ್ತಿದಂತೆಲ್ಲ, ಮನೆಯಲ್ಲಿ ನೋಡಿ ಅನುಕರಣದಿಂದ ತನ್ನ ದೇಹದ ಮೇಲೆ ಧರಿಸಿರುವ ಲಿಂಗದ (ಅದು ದೇವರೆಂಬ) ಕಲ್ಪನೆಯನ್ನು ಪಡೆದು, ಅದನ್ನು ಪೂಜಿಸುತ್ತ ಹೋಗುತ್ತದೆಂಬುದಾದರೂ ಒಪ್ಪುವಂತಹ ಮಾತು. ಮನೆಯ ಹಿರಿಯರು ಲಿಂಗಮಾರ್ಗವನ್ನು ಅರಿತು ಆಚರಿಸು ವವರಿದ್ದರೆ, ಈ ಅನುಕರಣವು ತುಸುಮಟ್ಟಿಗೆ ಪಥ್ಯಕರವಾಗಬಹುದು; ಅವರು ಅರಿಯದವರಿದ್ದರೆ ಹುಡುಗರಾದರೂ ಅದನ್ನೇ ಅನುಕರಿಸು ವರು. ಆದುದರಿಂದ ಈ ಅನುಕರಣವು ಯಾವಾಗಲೂ ಗುಣಕಾರಿ ಯೆಂದೇ ಹೇಳುವದಕ್ಕಾಗುವದಿಲ್ಲ. ತಾಯ್ತಂದೆಗಳು ಆ ಹುಡುಗನ ಪ್ರಶ್ನೆಗೆ ಸಮಯೋಚಿತವಾಗಿ ತಕ್ಕ ಉತ್ತರವನ್ನು ಹೇಳಿ, ಅವನ ಜ್ಞಾನ ವನ್ನು ಕ್ರಮದಿಂದ ಬೆಳಸುತ್ತ ಸಾಗಬೇಕು. ನೀನು ಧರಿಸಿದ ಲಿಂಗವು ದೇವರು (ಪಿಂಡಸ್ಥಲದ ಬೀಜರೂಪ ಕಲ್ಪನೆ) ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ, (ಪಿಂಡಜ್ಞಾನ ಸ್ಥಲದ ಬೀಜರೂಪ ಕಲ್ಪನೆ), ನಮಗೆ ಸುಖ ದುಃಖಗಳೆಲ್ಲ ಅವನಿಂದಲೇ ಪ್ರಾಪ್ತಿಸುತ್ತವೆ. ಆದಕಾರಣ ಅವನನ್ನು ಪೂಜಿಸಬೇಕು. (ಇದೇ ಸಂಸಾರ ಹೇಯಸ್ಥಲದ ಬೀಜರೂಪ ಕಲ್ಪನೆ)

ಇತ್ಯಾದಿಯಾಗಿ ಹೇಳಿ ಅವನಲ್ಲಿ ಲಿಂಗಭಕ್ತಿಯನ್ನು ಜಾಗ್ರತಗೊಳಿಸಬೇಕು. ಆಗ ಲಿಂಗವನ್ನು ಹೇಗೆ ಪೂಜಿಸಬೇಕೆಂದು ಅವನು ಕೇಳುವನು. ಕೂಡಲೆ ಗುರುವಿನ ಕಡೆಗೆ ಬೊಟ್ಟುಮಾಡಿ, ಅವನ ಕಡೆಯಿಂದ ಅದು ಗೊತ್ತಾಗುವದೆಂದು ಹೇಳಿ, ಗುರುವಿನ ವಿಷಯವಾಗಿ ಅವನಲ್ಲಿ ಹಂಬಲವು ಹುಟ್ಟುವಂತೆ ಮಾಡಬೇಕು (ಇದೇ ಗುರುಕಾರುಣ್ಯಸ್ಥಲದ ಬೀಜ ರೂಪ ಭಾವನೆ). ಹೀಗೆ ಅನುಗೊಳಿಸಿದ ಬಾಲಕನು ಮನೆಯು ಹೆಜ್ಜೆಯಾದ ಲಿಂಗಧಾರಣೆಗೆ (ಶಿವದೀಕ್ಷೆಗೆ) ತಕ್ಕವನಾಗುವನು. ಮುಂದೆ ಯೋಗ್ಯಸಮಯ ನೋಡಿ ಅವನಿಗೆ ಶಿವದೀಕ್ಷೆ ಮಾಡಿಸಬೇಕು.

ಇಲ್ಲಿ ಯಾರಾದರೂ, "ಹಿರಿಯರೇ ಹುಡುಗನಿಗೆ ಬೋಧಿಸುವುದನ್ನು ಬಿಟ್ಟು ಗುರುವನ್ನೇಕೆ ತೋರಿಸುವದು?" ಎಂದು ಆಕಾಂಕ್ಷಿಸಬಹುದು. ಹಾಗೆ ಸಮಾಧಾನಕರವಾಗಿ ಬೋಧಿಸಲಿಕ್ಕೆ ಎಲ್ಲ ಮಕ್ಕಳ ಹಿರಿಯರು ಬಲ್ಲವರಾಗಿರುವದಿಲ್ಲ, ಒಂದು ವೇಳೆ ಬಲ್ಲವರಿದ್ದರೂ ಅವರ ಅನೇಕ ಕೆಲಸಗಳಲ್ಲಿ ವೇಳೆ ಸಿಕ್ಕುವುದಿಲ್ಲ. ಸಿಕ್ಕರೂ ಶಿಕ್ಷಣ ವಿಷಯದಲ್ಲಿ ಅವರು ತರಬೇತು ಹೊಂದಿರುವದಿಲ್ಲ. ಹೊಂದಿದ್ದರೂ ಅವರ ಬಳಿಯಲ್ಲಿ ಬೇಕಾದ ಉಪಕರಣಗಳಿರುವದಿಲ್ಲ. ಇದ್ದರೂ ಅತಿಪರಿಚಯ (ಸಲುಗೆ)ಯ ಮೂಲಕ ಅದು ತಕ್ಕಷ್ಟು ಅಲಂಕಾರಿಯಾಗುವದಿಲ್ಲ. ಬೇರೆ ಗೃಹಸ್ಥನಲ್ಲಿ ಹುಟ್ಟುವಂತೆ ನಯಭಯಗಳು ಹುಡುಗನಲ್ಲಿ ತೋರಲಾರವು. ಆದಕಾರಣ ಯೋಗ್ಯ ಗುರುವನ್ನೇ ಹಿಂಬಾಲಿಸುವದು ವಿಹಿತ. ಎಷ್ಟೇ ಕಲಿತವರಿದ್ದರೂ ಈಗ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವದನ್ನು ನಾವು ನೋಡುವುದಿಲ್ಲವೇ!

ಲಿಂಗಧಾರಣೆಗೂ ಶಿವದೀಕ್ಷೆಗೂ ಅಂತರವಿಲ್ಲೆಂದು ಶ್ರೀಮಾನ್ ಜೀರಗೆಯವರು ಹೇಳುವುದು ಸತ್ಯವು. ಆದರೆ ಕೂಸಿಗೆ ಲಿಂಗಧಾರಣವೇ ಆಗಿರುವದಿಲ್ಲ. ಅದು ಲಿಂಗಮುದ್ರೆಯೋ ಸರಿ! ಇನ್ನು ಪಶುಗಳಿಗೆಳೆದಂತೆ ಕುಡವಿಂದೆಳೆಯುವದಿಲ್ಲ. ಪ್ರತ್ಯಕ್ಷ ಲಿಂಗವನ್ನೇ ಮಾಹೇಶ್ವರ ಹಸ್ತದಿಂದ ಕಟ್ಟಿಸುವರು. ಅವರು ಅದಕ್ಕೆ ಕೆಲ ಸಂಸ್ಕಾರ ಮಾಡಿ ಕಟ್ಟುವರಾದರೂ ಅವೆಲ್ಲ ಶಿಶುವಿನ (ಅತ್ಯಂತ ಕಳಲಿನ) ಅರುಹಿನ ಸುಪ್ತಾವಸ್ಥೆಯಲ್ಲಿ ಆಗಿರುವದರಿಂದ ಅವು ಆಗಿಯೂ ಆಗದಂತೆಯೋ ಸೈ! ಶಿಶುದೆಸೆಯಲ್ಲಿ ಮಾಡುವ ಸಂಸ್ಕಾರದ ಮಹಿಮೆಯನ್ನು ಅದೆಷ್ಟು ಕೊಂಡಾಡಿದರೂ, ಆ ಸಂಸ್ಕಾರದಲ್ಲೇ ಬೀಜರೂಪದಿಂದ ಎಲ್ಲವೂ ಬಂದಿರುವು

ದೆಂದು ಅದೆಷ್ಟು ಬಣ್ಣಿಸಿದರೂ ಅದೆಲ್ಲ ವ್ಯರ್ಥ! ಯಾಕಂದರೆ ಅದಕ್ಕೆ ಪ್ರತ್ಯಕ್ಷ ಅನುಭವದ ಬೆಂಬಲವಿಲ್ಲ! ಅದೇ ನಿಜವಾಗಿದ್ದರೆ ನಮ್ಮ ಸಮಾಜವು ಮಿಕ್ಕ ಸಮಾಜಗಳಿಗಿಂತ ಹೆಚ್ಚು ಪ್ರಗತಿಯಲ್ಲಿರಬೇಕಾಗುತ್ತಿತ್ತು; ಹಾಗೇನೂ ಈಗ ಇಲ್ಲೆಂದು ಬೇರೆ ಹೇಳಬೇಕಾಗಿಲ್ಲ. ಭೂಮಿ ಬೀಜಗಳು ಎಷ್ಟೇ ಶುದ್ಧವಿದ್ದರೂ ಮೊಳೆತ ಸಸಿಯ ರಕ್ಷಣೆ ಮಾಡಿ, ಕಾಲಕಾಲಕ್ಕೆ ಕಳೆ ತೆಗೆಯುವದು, ಗೊಬ್ಬರಹಾಕುವದು, ನೀರು ಕೊಡುವದು ಮೊದಲಾದ ಅವಶ್ಯ ಸಂಸ್ಕಾರಗಳನ್ನು ಒದಗಿಸದೆ ಹೋದರೆ, ಅದು ಬೆಳೆದು ದೊಡ್ಡದಾಗಿ ಫಲವನ್ನೆಂತು ಕೊಡುವುದು? ಬಾಲಕನಿಗೆ ಸರಸ್ವತಿಯ ಇಲ್ಲವೆ ಗಣಪತಿಯ ಪೂಜೆ ಮಾಡಿ ಅಕ್ಷರಾಭ್ಯಾಸಕ್ಕೆ ಆರಂಭಿಸಿ "ಮುಂದೆ ನೀನೇ ಶಾಲೆಯಲ್ಲಿ ಅನುಕರಣದಿಂದಲೇ ಕಲಿ" ಎಂದು ಹೇಳಿಬಿಟ್ಟು ಬಿಟ್ಟರೆ, ಅವನು ಪಂಡಿತನಾಗಬಹುದೇ? ಗುರುಗಳು ಕ್ರಮದಿಂದ ಶಿಕ್ಷಣ ಕೊಟ್ಟು ಮುಂದುವರಿಸುವದೇ ಯೋಗ್ಯ. ಬರೇ ಜನ್ಮ ಸಂಸ್ಕಾರ ಅನುಕರಣಗಳಿಂದಲೇ ಉತ್ತಮ ಲಿಂಗಾಂಗಿಯೂ ಷಟ್‌ಸ್ಥಲಜ್ಞಾನ ಸಂಪನ್ನನೂ ಆಗುವನೆಂದು ಹೇಳುವದು ಸರಿಯಲ್ಲ. ಆದರಿಂದ ಬಹಿರಂಗದ ಕೆಲ ಲೌಕಿಕ ಆಚಾರವಿಚಾರಗಳು ಬರಬಹುದು ಆದರೆ ಲಿಂಗವೆಂದರೇನು? ಲಿಂಗಾಯತನೆಂದರೇನು? ಲಿಂಗವು ಶಿವ-ಶಕ್ತಿಯುತವಾಗಿರುವುದು ಹೇಗೆ? ತಾನು ಅದನ್ನು ಧರಿಸಿ ಜ್ಞಾನ-ಕ್ರಿಯಾವಂತನಾಗಿ ಅದು ಹೇಗೆ ವರ್ತಿಸಬೇಕು? ಅದರ ಪ್ರಯೋಜನವೇನು? ಲೋಕದಲ್ಲಿ ತಾನು ಪಡೆಯತಕ್ಕ ಧ್ಯೇಯವೇನು? ಪರಸಮಯದವರ ಮೂರ್ತಿ ಪೂಜೆಗಿಂತ ತನ್ನ ಲಿಂಗಾರ್ಚನವೇ ಶ್ರೇಷ್ಠವೆಂತು? ಇವೇ ಮೊದಲಾದ ಅನೇಕ ಗೂಢ ವಿಷಯಗಳು ತಿಳಿದು, ವೈರಾಗ್ಯವುಂಡು, ಆಚರಿಸಬೇಕಾದರೆ, ಶಿವದೀಕ್ಷೆಯೂ ಅದರ ಶಿಕ್ಷಣವನ್ನು ಸರಿಯಾಗಿ ಕೊಡುವ ಗುರುವೂ ಅವಶ್ಯವಾಗಿ ಬೇಕೇಬೇಕು. ಸಮಯಾಚಾರದಲ್ಲಿ (ಮಾರ್ಗಕ್ರಿಯೆಯಲ್ಲಿ) ನಡಿಸುವದೇ ಶಿಕ್ಷಾಗುರುವಿನ-ಮನೆ ಗುರುವಿನ-ಕರ್ತವ್ಯವು. ಇಲ್ಲಿ ಮಾರ್ಗಕ್ರಿಯೆಯೆಂದರೆ ಬರೇ ಬಹಿರಂಗಲಿಂಗ ಪೂಜಾದಿ ಕ್ರಿಯೆಗಳನ್ನು ಮಾಡಿ, ಆ ವಿಷಯಗಳನ್ನೆಲ್ಲ ಮುಖಪಾಠ ಮಾಡಿ ಬಾಯಿಂದ ಹೇಳಿದರೆ ತೀರಲಿಲ್ಲ; ಆ ಪ್ರಕಾರ ತನ್ನ ಜೀವದಲ್ಲಿ ಆಚರಣೆಗೆ (ಪ್ರತ್ಯಕ್ಷ ವ್ಯವಹಾರದಲ್ಲಿ ಬಳಿಕೆಗೆ) ತರುವದೆಂದು ತಿಳಿಯಬೇಕು. ಹೀಗೆ ಬಹಿರಂಗದ ಕ್ರಿಯೆಗಳಳವಟ್ಟ ಮೇಲೆ ಅಂತರಂಗದ (ಮೀರಿದ) ಕ್ರಿಯೆಗಳನ್ನು ಆರಾಧಿಸುವುದು ಅವಶ್ಯ. ಅದಕ್ಕೆ ಜ್ಞಾನಗುರುವು ಬೇಕು. ಇದೆಲ್ಲ ಜನ್ಮಲಿಂಗಧಾರಣೆಯಷ್ಟರಿಂದಲೇ ಸಾಧ್ಯವಿಲ್ಲ.

ಶಿವದೀಕ್ಷೆಹೊಂದಿ ಈ ವಿಧವಾಗಿ ನಾವು ವೀರಶೈವತ್ವದ ಮರ್ಮ ವರಿಯದೆ, ಬರೇ ಜನ್ಮ ಸಂಸ್ಕಾರವೇ ಮುಖ್ಯವೆಂದೂ ಅದರಲ್ಲೇ ಎಲ್ಲವೂ ಅಡಕವಾಗಿರುವುದೆಂದೂ ಮುಂದೆ ಅನುಕರಣದಿಂದ ತಾನೇ ಪ್ರಾಪ್ತವಾಗುವುದೆಂದೂ ಭ್ರಾಂತಿಪಟ್ಟುಕೊಂಡೇ ಈಗ ಈ ನಿಕೃಷ್ಟಸ್ಥಿತಿಗೆ ಬಂದಿದ್ದೇವೆ. ನಮ್ಮಲ್ಲಿ ಶಿವಭಕ್ತರ ಗುಣಗಳೆಲ್ಲ ಲೋಪವಾಗಿ, ಭವಿಗುಣಗಳಿಗೆ ಮಾತ್ರ ತವರುಮನೆಯಾಗಿದ್ದೇವೆ. ಸಂಘಟನೆ, ಪರಸ್ಪರಪ್ರೇಮ, ಮುಂತಾದುವೇನೂ ಇಲ್ಲದೆ, ಬರೇ ದ್ವೇಷಾಸೂಯೆ, ಸ್ವಾರ್ಥಪರತೆ, ಅಹಂಕಾರಗಳ ಆಗರವಾಗಿದ್ದೇವೆ. ಇನ್ನುಮೇಲಾದರೂ ಎಚ್ಚೆತ್ತು ಕಣ್ದೆರೆದು ನಡೆಯುವಾ ಬನ್ನಿರಿ! ಹೀಗೆ ವಿಚಾರಿಸಿ ನೋಡದಿದ್ದರೆ "ಲಿಂಗಕಟ್ಟಿಕೊಂಡವರಿಗೆ ಮತ್ತೊಮ್ಮೆ ಲಿಂಗಕಟ್ಟುವರು" ಎಂಬ ಆಕ್ಷೇಪಣೆಗೆ ಅವಸರವೇ ಇಲ್ಲವಾಗುವದು. ಹುಡುಗನ ಸ್ವಂತ ಅಪೇಕ್ಷೆಯಂತೆ ಅವನಿಗೆ ಮಾಡುವ ಮೊದಲನೆಯ ಸಂಸ್ಕಾರವೆಂದರೆ ಶಿವದೀಕ್ಷೆಯೇ, ಅರ್ಥಾತ್ ನಿಜವಾದ ಲಿಂಗಧಾರಣವೇ ಸರಿ. ಜನ್ಮ ಸಂಸ್ಕಾರವು ವಿವಾಹದ ಪೂರ್ವದಲ್ಲಿ ಕನ್ಯಾನಿಶ್ಚಯ ಮಾಡುವ ವಿಧಾನದಂತೆ ಇರುವುದೆಂದು ಒಪ್ಪಬಹುದೇ ವಿನಾ ಅದೇ ಶಿವದೀಕ್ಷೆಯೆಂದು ಎಣಿಸಕೂಡದು. ವಾಙ್ನಿಶ್ಚಯದ ಕನ್ಯೆಯೇ ಹೆಂಡತಿಯಾಗತಕ್ಕವಳಾದರೂ ಆಕೆಗೆ ವಿವಾಹ ಸಂಸ್ಕಾರವಾಗಲೇಬೇಕು. ಅದಿಲ್ಲದೆ ಆಕೆ ಹೆಂಡತಿಯಾಗಲಾರಳು. ಅದೇ ಪ್ರಕಾರ ಜನ್ಮಸಂಸ್ಕಾರ ಹೊಂದಿದವರನ್ನು ಶಿವದೀಕ್ಷೆಗೊಳಿಸದೆ ಬಿಟ್ಟರೆ ಅವರು ಲಿಂಗಾಯತರಾಗಲಾರರು. ಬರೇ ಲಿಂಗಮುದ್ರೆಯ ಹಸುವಿನಂತೆ ಭವಿಗಳೇ ಆಹುದು!

ಇಲ್ಲಿ ಇನ್ನೊಂದು ಸಂಗತಿಗೆ ಲಕ್ಷ್ಯಗೊಡುವದು ಅವಶ್ಯವದೆ. ಹಳ್ಳಿ ಪಳ್ಳಿಗಳಲ್ಲಿ ಜನ್ಮಸಂಸ್ಕಾರವು ಅದು ಹೇಗೆ ನಡೆಯುತ್ತದೆಂಬುದೇ ಆ ವಿಷಯ. ಪಟ್ಟಣಿಗರಿಗೆ ಅದರ ಅನುಭವವು ಅಷ್ಟೇನೂ ಇರುವ ಸಂಭವವಿಲ್ಲ. ಶ್ರೀಮಾನ್ ಜೀರಗೆಯವರು ಅದರಲ್ಲೇ ತ್ರಿವಿಧ ದೀಕ್ಷೆಗಳೂ ಅಷ್ಟಾವರಣಗಳೂ ಸಂಕ್ಷೇಪತಃ ಬೀಜರೂಪದಿಂದ ಒದಗುತ್ತವೆಂದು ಹೇಳುವದು ಸರಿ ಇರಬಹುದು. ಆದರೆ ಪ್ರತ್ಯಕ್ಷ ಹಳ್ಳಿಯ ಅನುಭವವಿರುವವರಿಗೆ ಅದು ಸಮ್ಮತವಾಗುವದು ಕಠಿಣವು. ಏಕೆಂದರೆ ಇಲ್ಲಿ ಜನ್ಮ ಸಂಸ್ಕಾರವು ಸರಿಯಾಗಿ ನಡೆಯುವುದಿಲ್ಲ. ಅದಕ್ಕೆ ಅಯ್ಯತನವನ್ನು ಹೊಸದಾಗಿ ಹೊಂದುವ ೧೦ ೧೨ ವರ್ಷದ ಅನನುಭವಿ ಬಾಲ

ಮಹೇಶ್ವರರು ಅನೇಕ ಸಾರೆ ಬರುವುದುಂಟು. ಇವಲ್ಲದೆ ಏನೂ ಅರಿಯದ, ಬರೇ ಹೆಸರಿಗೆ ಮಾತ್ರ ಸ್ವಾಮಿ ಎಂದು ಹೇಳಿಸಿಕೊಳ್ಳುವ, ದೊಡ್ಡ ವಯಸ್ಸಿನ ಅಯ್ಯನವರಾದವರೂ ಬಹು ಜನರಿರುವುದುಂಟು. ಅವರನ್ನು ಬಿಟ್ಟರೆ, ಬೇರೆ ಮಹೇಶ್ವರರೇ ಸಿಗುವುದಿಲ್ಲ. ಮೇಲಾಗಿ ಅವರೇ ಹಿರಿಯ ಮಠದವರೂ ಹಕ್ಕುದಾರರೂ ಸಹ ಆಗಿರುತ್ತಾರೆ. ಇಂತಹರ ಸಂಖ್ಯೆ ಇತ್ತಿತ್ತ ಕಡಿಮೆಯಾಗುತ್ತ ನಡೆದಿದ್ದರೂ, ಇನ್ನೂ ನೋಡಲಿಕ್ಕೆ ಎಷ್ಟೋ ಕಡೆ ದೊರೆಯುವದೇನೂ ಅಪರೂಪವಲ್ಲ. ಇರಲಿ. ಈ ಬಾಲ ಮಹೇಶ್ವರರಾಗಲಿ ಬಲಿತ ಮಾಹೇಶ್ವರರಾಗಲಿ ಸುಮ್ಮನೆ ತಮ್ಮ ಹಸ್ತಸ್ಪರ್ಶನದಿಂದ ಆ ಲಿಂಗ ಕೊಡುವರೇ ವಿನಾ, ಯಾವ ವಿಧಾನ ಮಾಡುವದನ್ನು ಅರಿಯರು. ಪಡೆಯುವದು ಕಳಲು, ಕೊಡುವವರು ಇಂತಹರು, ಹೇಗಾದರೂ ಒಮ್ಮೆ ಸಂಸ್ಕಾರ ಮುಗಿದು ಹೋಗಿ ಊಟಕ್ಕೆ ಮಾರ್ಗವಾಗಲೆನ್ನುವ ಅಶಿಕ್ಷಿತ ತಾಯ್ತಂದೆಗಳು, ಇಂತು ತ್ರಿದೋಷ ಸ್ಥಿತಿಯಲ್ಲಿ ಆ ಸಂಸ್ಕಾರದ ಗತಿ ಏನಾಗುವದೆಂಬುವನ್ನು ಹೇಳಲಿಕ್ಕೆ ಬೇಡ. ಸುಮ್ಮನೆ ಜಗ್ಗಿ ಅದನ್ನು ಶಿವದೀಕ್ಷೆ ಹೇಗಾದರೂ ಹೋಲಿಸಿ ತೋರಿಸಿದಷ್ಟಕ್ಕೆ ಅದು ಸಮುಚಿತವೆನಿಸದು. ಕೂಸಿನ ತಲೆಯ ಮೇಲೆ ಹಸ್ತವಿಡುವದೂ ಕಿವಿಯಲ್ಲಿ ಮಂತ್ರೋಪದೇಶ ಮಾಡುವದೂ ಮುಂತಾದ ವಿಷಯಗಳು, ಇತ್ತ ಕಡೆಯ ಅನುಭವದಿಂದ ನೋಡಿದರೆ, ಕೇವಲ ಕಟ್ಟು ಕಥೆಗಳಂತೆಯೋ ತೋರುತ್ತವೆ. ಎಂಟನೇ ತಿಂಗಳ ಸಂಸ್ಕಾರಕ್ಕಂತೂ ಹೀಗೆ ಸಂಬಂಧಗೊಳಿಸುವದು ಶಕ್ಯವೇ ಇಲ್ಲ. ಜನ್ಮ ಲಿಂಗಧಾರಣವು ಒಂದು ವಿಧದ ಲಿಂಗ ಮುದ್ರೆಯೇ ಎಂಬುದಕ್ಕೆ ಈ ಅಷ್ಟಮಮಾಸ ಸಂಸ್ಕಾರವೇ ಸಾಕ್ಷಿ. ಸಾರಾಂಶವೇನಂದರೆ ಅದು ಶೀಲಾಚಾರಕ್ಕೆ ಅನುವಾಗಲೆಂದು ಧರಿಸಿದುದೇ ಹೊರತು, ಶಿನೇ ಹೆಜ್ಜೆಯೆನಿಸುವ ಲಿಂಗಧಾರಣೆಯಲ್ಲವೆಂದು ಧಾರಳವಾಗಿ ಹೇಳಬಹುದು.

ಈ ವಿವರಣೆಯಲ್ಲಿ ಹೊರಡುವ ಮಥಿತಾರ್ಥವೇನಂದರೆ— (೧) ಜನ್ಮ ಲಿಂಗಧಾರಣವು, ಅಲಿಂಗಿ ಸಂಪರ್ಕ ತಪ್ಪಿಸಿ ಶೀಲಪಾಲನೆ ಮಾಡಿಕೊಳ್ಳುವ ಉದ್ದೇಶದಿಂದ ತಾಯಿತಂದೆಗಳು ಮಾಡಿದ ಯೋಜನೆ. (೨) ಅದಾದರೂ ಕೇವಲ ಅಜ್ಞಾನ ಸ್ಥಿತಿಯಲ್ಲಿ ಕಳಲಿರುವಾಗ ಅದು ಆಗಿಯೂ ಆಗದಂತೆಯೇ ಸರಿ. (೩) ೧೦೧ ಸ್ಥಳಗಳ ಮೊದಲಿನ ನಾಲ್ಕು ಹೆಜ್ಜೆಗಳನ್ನು ನಡೆದ ಬಳಿಕ ಆದುದಲ್ಲ. (೪) ತನಗೋಸುಗ ಇಚ್ಛೆಯಿಂದ

ಕೂಸು ತಾನು ಪಡೆದುದಲ್ಲ (೫) ದೀಕ್ಷಾಕಾಲದ ಸಂಸ್ಕಾರಗಳೆಲ್ಲ ಜನ್ಮ ಲಿಂಗಧಾರಣೆಯಲ್ಲಿ ಬೀಜರೂಪದಿಂದಾದರೂ ಆಗುತ್ತವೆಂದು ನಂಬುವದು ಅಪ್ರಶಸ್ತ. ಒಂದು ವೇಳೆ ನಂಬಿದರೂ ನಿಷ್ಫಲ. ಪ್ರತ್ಯಕ್ಷತೆಯೇ ಇದಕ್ಕೆ ನಿದರ್ಶನ, (೬) ಜನ್ಮ ಸಂಸ್ಕಾರಕ್ಕೆ ಸಾಮಾನ್ಯ ಮಾಹೇಶ್ವರರು ಸಾಕು. ಆದರೆ ಶಿವದೀಕ್ಷೆ ವಿಶೇಷರೆನಿಸುವ ಪಟ್ಟಚರಾಧಿಕಾರಿ ಗುರುವರ್ಗದವರಿಲ್ಲದೆ ನಡೆಯದು (೭) "ಪರಕೀಯರನ್ನು ತಕ್ಕೊಳ್ಳುವದಾದರೆ ಶಿವದೀಕ್ಷೆ ಬೇಕು; ಲಿಂಗಾಯತರಲ್ಲಿ ಹುಟ್ಟಿದವರಿಗೆ ಅದು ಬೇಡ" ಎನ್ನುವದು ಉಚಿತವಲ್ಲ. (೮) ಶಿವದೀಕ್ಷೆಯು ಅನವಶ್ಯವಾಗಿದ್ದರೆ ಮಾಹೇಶ್ವರರು ಹಿಂದೆಯೂ ಈಗಲೂ ಸಹ ಅದನ್ನು ಹೊಂದುತ್ತಿದ್ದಿಲ್ಲ. ಅದು ಅವರಲ್ಲಿ ಸಾರ್ವತ್ರಿಕವಾಗಿದೆ.

ನನಗೆ ತೋರಿದುದನ್ನು ಮೇಲೆ ಹೇಳಿರುವೆನು. ಇದನ್ನೂ ಕೀರ್ತನ ಕೇಸರಿ ಶಿವಮೂರ್ತಿ ಶಾಸ್ತ್ರಿಗಳು ಮತ್ತು ಶ್ರೀಮಾನ್ ಜೀರಗೆಯವರು ಬರೆದುದನ್ನೂ ಸಮಾಲೋಚಿಸಿ, ವಾಚಕರು ತಾವೇ ಒಂದು ನಿರ್ಣಯಕ್ಕೆ ಬರಬೇಕು; ಇಲ್ಲವೆ ತಮ್ಮ ಮತವನ್ನು ಪ್ರಸಿದ್ಧಿಸಬೇಕು. ಒಟ್ಟಿಗೆ ನಿಜವಾದುದು ಜನತೆಯ ಮುಂದೆ ಬರುವದೇ ಇಷ್ಟವಾಗಿದೆ.

# ಇದು ಭಾಗ್ಯವಯ್ಯ!

(ಲೇ:— ಶ್ರೀ. ವೀರೇಶ್ವರ, ಬೆಂಗಳೂರು ನಗರ)

ಇದುಭಾಗ್ಯ ಇದುಭಾಗ್ಯ ಇದುಭಾಗ್ಯವಯ್ಯ ।
ಸದಮಲ ಶಿವಾಚಾರ ಪಥವನರಿದಾಚರಿಸು ॥
ದಿದುಭಾಗ್ಯ ಇದುಭಾಗ್ಯ ಇದುಭಾಗ್ಯವಯ್ಯ ॥ಪ॥

ಸ್ಥೂಲ ಸೂಕ್ಷ್ಮದ ಕಾರಣದ ತನುಗಳೊಳಗಿರುವ
ಮೂಲ ಆಣವ ಮಾಯ ಕಾರ್ಮಿಕ ಮಲವ ಕಳೆದು
ಶೀಲದಿಷ್ಟ ಪ್ರಾಣ ಭಾವ ಲಿಂಗಗಳಿಡುವ ॥೧॥

ಅಮಲ ಲಿಂಗಾಚಾರ ಶಿವ ಗಣಾಚಾರಗಳು
ವಿಮಲ ಭೃತ್ಯಾದಿ ಶೈವಾಚಾರಗಳು ಎನಿಪ
ಸುಮನ ಪಂಚಾಚಾರಗಳ ಸಂಗೊಳಿಸಿಕೊಂಬ ॥೨॥

ಶೂರಹಸ್ತದ ಖಡ್ಗಧಾರೆಯೊಲು ಸೂಕ್ಷ್ಮವಹ
ವೀರಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ
ನೀರಜದೊಲಿಹ ಶರಣ ಐಕ್ಯ ಷಟ್‌ಸ್ಥಲದರಿವು ॥೩॥

ವಿನುತ ಗುರುಲಿಂಗ ಜಂಗಮ ಪಾದುದಕವಾದಿ
ಘನಪ್ರಸಾದವು ಭಸ್ಮ ರುದ್ರಾಕ್ಷಿ ಮಂತ್ರಗಳ
ಮನ ಬುದ್ಧಿ ಚಿತ್ತ ಶರೀರಗಳೊಳವಡಿಪುದಿದು ॥೪॥

ಶಶಿಧರನ ಭಕುತಿಯನು ವಸುಧೆಯೊಳು ಬಿತ್ತಿರುವ
ಅಸಮನಯನನ ರೂಪರೆನಿಸಿಕೊಂಡಿರುವ ಶ್ರೀ
ಬಸವಪ್ರಭು ಗುರುಚನ್ನಬಸವಾದಿಗಳ ನೆನೆವ ॥೫॥

ವೀರಶೈವ ವಸಂತವನದೆ ವಿಹರಿಸುತಿರ್ದು
ಸಾರ ಸಚರಾಚರಕು ಲೇಸ ಬಯಸುತಲಿರುವ
ವೀರೇಶ್ವರನ ಧರ್ಮಸುಧೆಯ ನೀಂಟುತೆ ನಲಿವ ॥೬॥
ಇದುಭಾಗ್ಯ ಇದುಭಾಗ್ಯ ಇದುಭಾಗ್ಯವಯ್ಯ !

# ವೀರಶೈವ ವಾಙ್ಮಯದ ಸ್ವರೂಪ.

(ಲೇಖಕ:— ಕೈ. ವಾ. ಬಿ. ಟಿ. ಗಚ್ಚಿನಮನಿ ಎಮ್. ಎ. ಬಿ. ಟಿ.)

ಜೈನಕವಿಗಳು ಮೊದಲಿನ ಕಾಲದಲ್ಲಿ ಅನೇಕತರದ ಲೌಕಿಕ ಚರಿತ್ರೆಗಳನ್ನು, ಪಾರಮಾರ್ಥಿಕವಾದ ತೀರ್ಥಂಕರ ಪುರಾಣಗಳನ್ನು ಮತ್ತು ಶಾಸ್ತ್ರೀಯವಾದ ಗ್ರಂಥಗಳನ್ನು ಬರೆದು ಕನ್ನಡದ ಮೇಲೆ ತಮ್ಮ ವರ್ಚಸ್ಸನ್ನು ಅಚ್ಚಳಿಯದಂತೆ ಕೂಡ್ರಿಸಿದರು. ಅದರೆ ೧೨ನೆಯ ಶತಮಾನದಲ್ಲಿ ಜನರಲ್ಲಿ ಧರ್ಮಜಾಗ್ರತಿಯೂ ಸ್ವತಂತ್ರ ವಿಚಾರಗಳೂ ತಲೆಯೆತ್ತಿ ಜನರ ಆತ್ಮಿಕ ವಿಚಾರದಲ್ಲಿ ಜೀವನಚರಿತ್ರೆಗಳಲ್ಲಿ ಕ್ರಾಂತಿಯಾದಂತೆ ವಾಙ್ಮಯದಲ್ಲಿಯೂ ಚಳವಳಿಯಾರಂಭಿಸಿತ್ತು. ಅದರ ಪ್ರಚಾರಕರು ಬಸವನೇ ಮೊದಲಾದ ವಚನಕಾರರು ಆಗಿದ್ದರು. ಆಗೊಂದು ತೆರವಾದ ಗದ್ಯವೇ ಹೊಸದಾಗಿ ಪ್ರಾರಂಭಿಸಲ್ಪಟ್ಟಿತು. ಅದು ಜೈನ ಮತದ ನಾಸ್ತಿಕ್ಯದಿಂದ ಸ್ವತಂತ್ರವಾಗಬಯಸಿದ್ದಂಥ, ಭಕ್ತಿಯನ್ನೇ ತಳಹದಿಯಾಗಿ ಮಾಡಿಕೊಂಡಂಥ, ರಾಜರ ಸಭಾಸ್ಥಾನವನ್ನು ಬಹಿಷ್ಕರಿಸಿ ಜನಸಮುದಾಯವನ್ನೇ ಉದ್ದೇಶಿಸುವಂಥ ಗುಣಗಳಿಂದ ಕೂಡಿತ್ತು. ಈಗಿದ್ದ ಶೈಲಿಯು ಬಸವನ ಮುಂದೆ ಉಗಮವಾಗಿ ಬಸವನ ಮತ್ತು ಅವನ ಸರಿಕರಲ್ಲಿ ಪೂರ್ಣದೆಸೆಗೆ ಬಂದು ಬೆಳೆಯಿತು. ಸ್ವಲ್ಪ ಶಬ್ದಗಳಿಂದ ಗೂಢಾರ್ಥವು ವ್ಯಾಪಿಕವಾದ ಮತ್ತು ದೈನಿಕ ಭಾಷೆಯಲ್ಲಿಯೇ ಅಚ್ಚುಕಟ್ಟಾಗಿ ಹೇಳಿದೆ. ಕಾವ್ಯಗುಣವಾದ ನಾದವು ಅದರಲ್ಲಿದ್ದು, ಮುಕ್ತಾಯ ಸ್ವರ-ಅರ್ಥಗಳೊಡನೆ ಕೂಡಿ ಓದಿದೊಡನೆ ಕರ್ಣಗಳಲ್ಲಿಯೂ ಮನದಲ್ಲಿಯೂ ನಿಂತುಕೊಳ್ಳುವಂತಿದೆ. ಕಾವ್ಯದೊಳಗೆ ಗದ್ಯವನ್ನೂ, ಗದ್ಯದೊಳಗೆ ಕಾವ್ಯವನ್ನೂ ಕೂಡಿಸಿ ಹೆಣೆದಿದೆ. ಈ ತರದ ಗದ್ಯವು ಬರೀ ಕನ್ನಡ ಭಾಷೆಯ ವಾಗ್ವೈಖರಿಯನ್ನು ಮಾತ್ರ ತೋರಿಸದೆ ಜಗತ್ತಿನ ಗದ್ಯ ಶೈಲಿಯೊಳಗೆ ಯಾವದಕ್ಕೂ ಕಡಿಮೆಯಾಗದಂಥದೆಂದು ಹೇಳಬಹುದು. ಈ ಕಾಲದ ವಚನವೃಕ್ಷವು ಸರ್ವಜ್ಞನ ವಚನಗಳಲ್ಲಿ ಫಲಬಿಟ್ಟಿತೆಂದು ತಿಳಿಯಬೇಕು. ಈ ವಚನಗಳಲ್ಲಿ ಆಗಮದಲ್ಲಿನ ಸಂಸ್ಕೃತವಾಕ್ಯಗಳುಳ್ಳಂಥ ಸಮುದ್ರದಲ್ಲಿ ಹಚ್ಚನ್ನ ನಡುಗಡ್ಡೆಗಳಂತೆ ಕಂಗೊಳಿಸುವವು. ವಚನ ಪ್ರಪಂಚಕ್ಕೆ ಶರಣರು, ಶರಣೆಯರು ಸಹಾಯ ಮಾಡಿರುವರು. ಅವರಲ್ಲಿ ಅಕ್ಕಮಹಾದೇವಿ, ಬಿಜ್ಜಮಹಾದೇವಿ, ನೀಲಲೋಚನೆ, ಮುಕ್ತಾಯಕ್ಕ, ಕಾಳವ್ವೆ

ಬೊಂತಾದೇವಿ, ಅಕ್ಕನಾಗಾಯಿ, ಮುಸಣಮ್ಮ, ಗೊಗ್ಗವ್ವೆ, ಇವರೇ ಪ್ರಾಮುಖ್ಯರು.

ಜೈನ-ಬ್ರಾಹ್ಮಣಕವಿಗಳು ತಮ್ಮ ಮತ ತತ್ವಗಳನ್ನು ಸಂಸ್ಕೃತ ಭಾಷೆಯಲ್ಲಿಯೇ ವಿಶೇಷವಾಗಿ ಬರೆದಿದ್ದಾರೆ. ಆದರೆ ವೀರಶೈವರು ತಮ್ಮ ಮತ ಸಿದ್ಧಾಂತಗಳನ್ನು ಬೆಳಸುವದಕ್ಕಾಗಿ ಸಂಸ್ಕೃತದಲ್ಲಿ ಅಷ್ಟೊಂದು ಸಾಹಸ ಪಟ್ಟಿರುವದನ್ನು ನಾವು ನೋಡಲಾಗುವದಿಲ್ಲ.

ಮುಖ್ಯವಾಗಿ ವೀರಶೈವ ಮತವಿಷಯಗಳಲ್ಲಿ ಅಂಗಸ್ಥಲ ೪೪, ಲಿಂಗ ಸ್ಥಲ ೫೭ ಹೀಗೆ ನೂರೊಂದು ಸ್ಥಲಗಳು ವೀರಶೈವವನ್ನೆಲ್ಲ ತಿಳಿಸುವು ದರಿಂದ ದೀಕ್ಷಾವಿಧಾನಗಳು, ಪೂಜಾವಿಧಾನಗಳು, ಪ್ರಸಾದ, ವಿಭೂತಿ, ರುದ್ರಾಕ್ಷಿ, ಪಾದೋದಕಾದಿಗಳ ಮಹಿಮೆಯ ನಿರೂಪಣಗಳೂ ಜಂಗ ಮಾರ್ಚನೆ ಸದ್ಭಕ್ತಿ ನಮಸ್ಕಾರಾದಿಗಳ ಫಲವಿವರಣೆಗಳು ಮುಂತಾದವುಗ ಳನ್ನೆಲ್ಲ ಹೇಳಿ ಜನರು ಪ್ರವೃತ್ತಿಮಾರ್ಗವನ್ನು ಬಿಟ್ಟು ನಿವೃತ್ತಿ ಮಾರ್ಗ ಗಾಮಿಗಳಾಗುವಂತೆ ಈ ವಚನಗಳು ಬೋಧಿಸುತ್ತವೆ. ಈ ಷಟ್‌ಸ್ಥಲ ಗಳ ಒಳಭೇದಗಳು ಎಷ್ಟೇ ಆದರೂ ಇಂದ್ರಿಯಗಳನ್ನು ಸ್ವಾಧೀನ ಪಡಿ ಸಿಕೊಂಡು ಅರಿಷಡ್ವರ್ಗಗಳನ್ನು ಗೆದ್ದು ಕರಸ್ಥಲದಲ್ಲಿ ಲಿಂಗವನ್ನಿಟ್ಟು ಕೊಂಡು ಲಿಂಗಾಂಗ ಸಾಮರಸ್ಯವನ್ನು ಹೊಂದಿ ಸುಯಿಧಾನದಿಂದ 'ಶಿವೋಹಂ' ಎಂದು ಸ್ತೋತ್ರಮಾಡುತ್ತ ಮುಕ್ತಿಯನ್ನು ಪಡೆಯಬೇಕೆಂ ಬುದೇ ವಚನಕಾರರ ಉಪದೇಶಸಾರಾಂಶವಾಗಿದೆ. ಅಷ್ಟಾವರಣಾದಿಗಳನ್ನು ಆಚರಣೆಯ ವಿಧಿಗಳನ್ನು ಬಣ್ಣಿಸಿ ಎಲ್ಲರೂ ಭಕ್ತಿ-ಜ್ಞಾನ-ವೈರಾಗ್ಯ ತತ್ಪರ ರಾಗಬೇಕೆಂದು ಒತ್ತಿ ಹೇಳುವದೇ ವಚನಕಾರರ ಸಾಂಪ್ರದಾಯ.

ಶೈಲಿ ದೃಷ್ಟಿಯಿಂದ ವಚನಗಳನ್ನು ಎರಡು ಬಗೆಯಾಗಿ ವಿಂಗಡಿಸ ಬಹುದು. ಒಂದು ರಸ ಸಂಬಂಧವನ್ನು ಹೆಚ್ಚು ಪಡೆದುದು, ಮತ್ತೊಂದು ರಸಸಂಬಂಧವನ್ನಷ್ಟು ಪಡೆಯದೇ ಇದ್ದುದು.

ಮೊದಲಿನ ಪಂಗಡಕ್ಕೆ ಸೇರಿದ ವಚನಗಳಲ್ಲಿ ಮತತತ್ವ ನಿರೂಪ ಣಕ್ಕಾಗಿ ಉಪಯೋಗವಾಗುವುದರಿಂದ ವಚನಗಳಲ್ಲಿ ಅಭಿಪ್ರಾಯವು ಸೂತ್ರಗಳಲ್ಲಿರುವಂತೆ ಅಲ್ಪಾಕ್ಷರಗಳಿಂದ ಪೋಷಿತವಾಗಿ, ಆ ವಚನ ಗಳು ಮಾತಿನ ಬಿಗಿಕಟ್ಟನ್ನು ಹೊಂದಿವೆ. ಭಕ್ತ್ಯತಿಶಯಗಳಿಂದ ಕವಿತಾ ವೇಶವು ತಲೆದೋರಿದಾಗ ವಚನಗಳು ಹೊರಹೊರಡುವದರಿಂದ ಕಾವ್ಯ

ಲಕ್ಷಣವಾದ ರಸಸ್ಫೂರ್ತಿಯನ್ನವು ಪಡೆದಿರುತ್ತವೆ. ಈ ರಸಸ್ಫೂರ್ತಿಯು ದೆಸೆಯಿಂದಲೇ ಪ್ರಾಸಾನುಪ್ರಾಸಗಳು ಅನೇಕ ವಚನಗಳಲ್ಲಿ ನಿರಾಯಾಸವಾಗಿ ಹೊಂದಿಕೊಂಡು ಬಂದಿರುವವು. ಕ್ಲಪ್ತವಾದ ಛಂದೋನಿಯಮಗಳಿಗೆ ಇವು ಒಳಬಾರದಿದ್ದರೂ ವಚನಗಳ ಭಾಗಗಳು ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ, ಸಾಂಗತ್ಯ ಮತ್ತು ಹಾಡುಗಳಿಗೆ ಅವಕಾಶವನ್ನು ಕೊಟ್ಟಿರುತ್ತವೆ. ಕೆಲವು ಗ್ರಂಥಗಳಿಗೆ ವಚನನಾಮವಿದ್ದರೂ ಒಳಗಡೆಯೆಲ್ಲ ಹಾಡುಗಳೇ ಇರುವುದೂ ಹಾಡುಗಳನ್ನು ಸಾಕ್ಷಿತ್ತಾಗಿ ವಚನಗಳೆಂದೇ ಕರೆವುದೂ ಉಪಷ್ಟಂಭಕಗಳಾಗಿವೆ.

ಆಂಗ್ಲೇಯ ಭಾಷೆಯಲ್ಲಿ Enphimistic Stvl ) ಎಂದು ಯಾವದಕ್ಕೆ ಅನ್ನುತ್ತಾರೋ ಸ್ವಲ್ಪ ಹೆಚ್ಚು ಕಡಿಮೆ ಆ ಶೈಲಿಯನ್ನೇ ವಚನಗಳು ಹೊಂದಿವೆಯೆಂದು ಹೇಳಬಹುದು. ವಚನಗಳನ್ನು ಕೇಳುವವರ ಕಿವಿಗೆ ಇಂಪಾಗಿ, ಓದುವವರ ಮನಸ್ಸಿಗೆ ಮನೋಹರವಾಗಿ, ಪದ ವೈಚಿತ್ರಿಯನ್ನು ಹೊಂದಿರುವದಲ್ಲದೆ ಹಾಡುವುದಕ್ಕೂ ಅನುಕೂಲವಾಗಿರುವವೆಂಬುದನ್ನು ಯಾರೂ ಮರೆಯಬಾರದು. ವಚನಗಳಲ್ಲಿ ಉಪಯೋಗವಾಗಿರುವ ಪದಗಳು ಹಳೆಗನ್ನಡದವೆಂದು ಹೇಳುವ ಹಾಗಿಲ್ಲದಿದ್ದರೂ ವಾಕ್ಯಸರಣಿಯು ಕೆಲವು ಮಟ್ಟಿಗೆ ಹಳೆಗನ್ನಡ ಶೈಲಿಯನ್ನೇ ಅನುಸರಿಸಿದೆ ಎಂದು ಹೇಳಬಹುದು. ಬಸವನ ಕಾಲದ ವಚನಗಳಲ್ಲಿ ನಾಲ್ಕು ಭಾಗವಾಗಿ ಅವನ್ನು ವಿಭಾಗಿಸಬಹುದು. (೧) ಬಸವೇಶ್ವರನ ಮಾದರಿಯವು. ಭಕ್ತಿಯ ವಚನಗಳು. (೨) ಚನ್ನಬಸವನ ಮಾದರಿಯವು. ಜ್ಞಾನಮಯ ವಚನಗಳು, (೩) ಅಲ್ಲಮನ ಮಾದರಿಯವು. ಅಧ್ಯಾತ್ಮಿಕ ವಚನಗಳು. (೪) ಅಂಬಿಗರ ಚೌಡಯ್ಯನ ಮಾದರಿಯವು. ನಿಷ್ಠುರವಾದ ವಿಡಂಬಾತ್ಮಕ ವಚನಗಳು.

ಇನ್ನು ಕಾವ್ಯಪ್ರಪಂಚದಲ್ಲಿ ಹರಿಹರ, ಕೆರೆಯ ಪದ್ಮರಸ, ರಾಘವಾಂಕರು ವೀರಶೈವರಲ್ಲಿ ಆದ್ಯಕವಿಗಳು. ಕಲ್ಯಾಣವು ಆಗ ವಚನ ಗ್ರಂಥಗಳಿಗೆ ಕೇಂದ್ರಸ್ಥಾನವಾದಂತೆ ಹಂಪಿಯು ಕಾವ್ಯಕ್ಕೆ ಆಗಿದೆ.

ಹರಿಹರನು ೬೩ ಪುರಾತನರ ಚರಿತೆಯನ್ನೂ ಇನ್ನೂ ಹಲವು ಮಂದಿ ಶಿವಭಕ್ತರ ಚರಿತೆಯನ್ನೂ ರಘಟಾರೂಪದಲ್ಲಿಯೇ ಬರೆದನು.

ನೋಡುವೊಡೊಂದಕ್ಕರಮದು ಮಾಡುವಡುಚ್ಚರಣೆಗರಿದು
ಮೂರುಂತೆರನುಂ ।
ಕೂಡೆ ಕವಿತತಿ ವಿಚಾರಿಸಬೇಡದರಿಂ ರಳಕುಳಕ್ಷಳಂಗಳನಿದಿರೊಳ್ ॥

ಎಂದು ರಳಕುಳ ಭೇದವನ್ನು ಕಿತ್ತೊಗೆದನು. ರಾಘವಾಂಕನು ಕಾವ್ಯಕ್ಕೆ ಸುಲಭವಾದ ರಮಣೀಯವಾದ ಷಟ್‌ಪದೀ ರೂಪವನ್ನು ಕಾವ್ಯ ಪ್ರಪಂಚಕ್ಕೆ ತಂದುಕೊಟ್ಟನು. ಮತ್ತು ಇವನು ಆಗ ಪ್ರಚಾರದಲ್ಲಿದ್ದ ಕಾವ್ಯದ ವಿಪುಲ ವರ್ಣನೆಯನ್ನು ಬಿಟ್ಟುಕೊಟ್ಟು ಕಥಾ ಪ್ರಸಂಗವನ್ನೂ ನೀತಿಬೋಧೆಯನ್ನೂ ಹೆಚ್ಚು ಮಾಡಿದನು. ಪದ್ಮರಸನು ರಘಟೆಯಲ್ಲಿಯೇ ಕಾವ್ಯವನ್ನು ಬರೆದನು. ಪಾಲ್ಕುರಿಕೆ ಸೋಮನಾಥನೂ ರಗಳೆಯಲ್ಲಿಯೇ ಕನ್ನಡ ಕವಿತೆ ಬರೆದನು.

ಭಕ್ತಿರಸವನ್ನೇ ಪ್ರಾಧಾನ್ಯವಾಗಿಟ್ಟುಕೊಂಡ ವೀರಶೈವರಲ್ಲಿ ಒಮ್ಮೊಮ್ಮೆ ಶೃಂಗಾರರಸ ಭೂಯಿಷ್ಠ ಕಾವ್ಯ ಬರೆದವರುಂಟು. ಸೋಮೇಶ್ವರ ಮತ್ತು ಷಡಕ್ಷರದೇವ ಇವರು ಒಮ್ಮೊಮ್ಮೆ ಪ್ರೌಢವಾಗಿಯೂ ಲಕ್ಷಣಬದ್ಧವಾಗಿಯೂ, ಇರುವ ಶೈಲಿಯನ್ನು ಬರೆದು ಇದರಲ್ಲಿ ತಮ್ಮ ವಿದ್ವತ್ತಿನ ಮೇರೆಯನ್ನು ತೋರ್ಪಡಿಸಿದರು. ಇವರಲ್ಲದೆ ಪದ್ಮಣಾಂಕ, ಷಡಕ್ಷರದೇವ, ಸುರಂಗಕವಿ, ವೀರಭದ್ರರಾಜ, ಚಂದ್ರಕವಿ, ಮೊದಲಾದವರು ಚಂಪೂ ಗ್ರಂಥಗಳನ್ನು ಬರೆದವರು. ಸೋಮರಾಜ ೧೨೨೨ ಹರಿಹರ ೧೧೬೦, ಸುರಂಗಕವಿ ೧೫೦೦, ವೀರಭದ್ರರಾಜ ೧೫೩೧, ಮೊದಲಾದವರು ಅತ್ಯಂತ ಪ್ರೌಢತರವಾದ ಗ್ರಂಥಗಳನ್ನು ಬರೆದಿದ್ದಾರೆ. ಅಲ್ಲದೆ ಶೃತಿ ಭಾಗಗಳಿಗೂ ಕನ್ನಡದಲ್ಲಿ ಟೀಕೆಗಳನ್ನು ಬರೆದು ಪ್ರಕಟಪಡಿಸುವ ಪದ್ಧತಿಯನ್ನು ವೀರಶೈವ ಗ್ರಂಥಕರ್ತರೇ ಪ್ರಾರಂಭಿಸಿದಂತೆ ತೊರುತ್ತದೆ. (*B.* ಕೃಷ್ಣಪ್ಪ)

ನೀತಿಶತಕಗಳನ್ನು ಮತ್ತು ಭಕ್ತಿಯುಕ್ತ ಹಾಡುಗಬ್ಬಗಳನ್ನು ಪ್ರಚಾರಕ್ಕೆ ತಂದವರು ವೀರಶೈವ ಕವಿ(ಹರಿಹರ ನಿಜಗುಣಿ)ಗಳೆಂದು ಹೇಳಬಹುದು.

ಮಣಸೋಲಿ, ಅಬ್ಬಲೂರ ಕಳಚೂರ್ಯರ ೧೧-೧೨ ಶತಕಗಳ ಅರ್ಜುನವಾಡ ೧೩ ನೇ ಶತಕದ ಶಾಸನಗಳಿಂದ ಲಿಂಗಾಯತ ಮತ ವಿಷಯಕವಾದ ಶಾಸನಾಂತರ್ಗತ ಆಧಾರವಿದೆಯೆಂದು ವ್ಯಕ್ತವಾಗುತ್ತದೆ. ಮಾದಿರಾಜ ಬಸವರ ಹೆಸರುಗಳಿರುತ್ತವಾದರೂ ಅವರು ತಂದೆ ಮಕ್ಕಳಾಗಿದ್ದರೆಂಬಂತಿಲ್ಲ.

ವೀರಶೈವ ಮತ ಪ್ರಾಬಲ್ಯದಿಂದ ವೀರಶೈವ ಪುರಾಣಗಳೂ ವೀರಶೈವ ವಚನಗಳೂ. ತತ್ವನಿರೂಪಣೆಯ ಗ್ರಂಥಗಳೂ, ಹೇರಳವಾಗಿ ಹೊರ

ಬಿದ್ದವು. ಭಕ್ತಿ ಜ್ಞಾನ ವೈರಾಗ್ಯ ನೀತಿ ಇವುಗಳ ಬೋಧಕಕ್ಕಾಗಿ ಶತಕಗಳನ್ನು ರಚಿಸುವುದಕ್ಕೆ ವೀರಶೈವರೇ ಆದಿಯೆಂದು ದೃಢವಾಗಿ ಹೇಳಬಹುದು. ಹಾಡುಗಳಲ್ಲಿಯೂ ಕೀರ್ತನೆಗಳಲ್ಲಿಯೂ ಇವರು ಬ್ರಾಹ್ಮಣರಂತೆಯೇ ಉತ್ತಮ ರೀತಿಯಲ್ಲಿ ಬರೆದಿರುವರು.

ಬಸವೇಶ್ವರಾದಿಗಳ ಜೀವನ ಚರಿತ್ರೆಯನ್ನು ವೀರಶೈವ ತತ್ವಗಳೊಂದಿಗೆ ತಿಳಿಸುವ ಕಾವ್ಯಗಳನ್ನು ವೀರಶೈವ ಪುರಾಣಗಳೆಂದು ಕರೆಯಬಹುದು. ಆ ಮೇಲೆ ಯಾರು ಯಾರು ಮಹಿಮಾ ಪುರುಷರೆಂದು ತಿಳಿದುಬಂದರೋ ಅವರು ಅಧುನಿಕರಾದರು. ಅವರ ಚರಿತ್ರೆಗಳನ್ನು ಬರೆದು ಪುರಾಣಗಳೆಂದು ಕರೆಯುವದು ವಾಡಿಕೆಯಾಯಿತು.

ಜೀವನ ಚರಿತ್ರೆಗಳನ್ನು ಬರೆಯತೊಡಗಿದಾಗ ಬಸವೇಶ್ವರಾದಿಗಳಲ್ಲದೆ ಹಿಂದಿನ ತಮಿಳು ನಾಡಿನ ಅರವತ್ತು ಮೂರು ಪುರಾತನರಲ್ಲಿ ಹಲವರು ಕಥಾನಾಯಕರಾಗುತ್ತ ಬಂದರು. ಇವರೆಲ್ಲರು ತಮಿಳ ದೇಶದಲ್ಲಿದ್ದ ಶಿವಭಕ್ತರು; ಇವರ ಕಥೆಗಳನ್ನು ಬಸವೇಶ್ವರಾದಿಗಳು ತಮ್ಮ ಶಿಷ್ಯಮಂಡಳಿಯೊಳಗೆ ಪ್ರಸಾರ ಮಾಡಿದರು. ಆ ಪುರಾತನರ ಚರಿತ್ರೆಗಳು ಕೂಡ ವೀರಶೈವ ಪುರಾಣಗಳೆಂದು ಪ್ರಸಿದ್ಧಿ ಪಡೆದಿವೆ.

ಚಂಪೂಶೈಲಿಯನ್ನಾಗಲಿ ಷಟ್ಪದಿ ಶೈಲಿಯನ್ನಾಗಲಿ ಸಾಂಗತ್ಯ ಶೈಲಿಯಲ್ಲಾಗಲಿ ಈ ಪುರಾಣಗಳನ್ನು ಬರೆಯಬಹುದು. ಯಾವ ಯಾವ ಮಠಾಧಿಪತಿಗಳು ಸಂಸ್ಕೃತ ಕನ್ನಡದಲ್ಲಿ ಪಾಂಡಿತ್ಯವನ್ನು ಹೊಂದಿ ಪ್ರೌಢಕಾವ್ಯಗಳನ್ನು ರಚಿಸುವ ಸಾಮರ್ಥ್ಯವುಳ್ಳವರಾಗಿದ್ದಾರೆೋ ಅವರೆಲ್ಲರೂ ಸಾಮಾನ್ಯವಾಗಿ ಚಂಪೂಶೈಲಿಯಲ್ಲಿಯೇ ಪುರಾಣಗಳನ್ನು ಬರೆದರು. ಆದರೆ ಇಂತಹ ಚಂಪೂಪುರಾಣಗಳ ಸಂಖ್ಯೆ ಬಹಳ ಕಡಿಮೆ. ಪುರಾಣಗಳಲ್ಲಿ ಹೆಚ್ಚುಸಂಖ್ಯೆಯವು ಷಟ್ಪದಿಗಳಲ್ಲಿಯೂ ಸಾಂಗತ್ಯದಲ್ಲಿಯೂ ದೊರೆಯುತ್ತವೆ.

ಈ ಪುರಾಣಗಳಲ್ಲಿ ಪಂಚವಿಂಶತಿ ಲೀಲಾಕಥಾನಕಂಗಳೂ ಪುರಾತನ ಚರಿತ್ರೆಗಳೂ, ಲಿಂಗಾಂಗಸಾಮರಸ್ಯ, ವಿಭೂತಿ ಪ್ರಸಾದಾದಿಗಳ ಮಹಿಮಾನಿರೂಪಣವೂ ತುಂಬಿರುತ್ತವೆ. ಕೆಲವು ಪುರಾಣಗಳಲ್ಲಿ ಬ್ರಹ್ಮಾಂಡ ಸೃಷ್ಟಿವಿಷಯಗಳೂ ದಯಾಧರ್ಮಸ್ವರೂಪಗಳೂ ಕಂಡುಬರುತ್ತವೆ. ಈಶ್ವರನ ಮತ್ತು ಬಸವೇಶ್ವರನ ಮತ್ತು ಪುರಾತನರ ಸ್ತೋತ್ರಗಳು ಅಲ್ಲಲ್ಲಿ

ತುಂಬಿರುತ್ತವೆ. ಕೈಲಾಸ ವರ್ಣನೆಯೂ ಈಶ್ವರಸ್ಥಾನ ವರ್ಣನೆಯೂ, ಈಶ್ವರ ಮತ್ತು ಪಾರ್ವತಿ ಇಲ್ಲವೆ ಈಶ್ವರ ಮತ್ತು ನಂದಿ ಇವರುಗಳ ಸಂಭಾಷಣೆಗಳು ಆದಿಯಲ್ಲಿ ಬರುತ್ತವೆ. ಇವಲ್ಲದೆ ಗ್ರಂಥಾರಂಭದಲ್ಲಿ ಈಶ್ವರನ ಸ್ತುತಿಯೂ ಅನಂತರ ಬಸವೇಶ್ವರ, ಸಿದ್ಧರಾಮ, ಅಲ್ಲಮ, ಚನ್ನಬಸವಾದಿಗಳ ಸ್ತೋತ್ರಗಳೂ ಇರುತ್ತವೆ. ಕೆಲವು ಗ್ರಂಥಗಳಲ್ಲಿ ಪವಾಡ ಪುರುಷರು ನಡೆಯಿಸಿದ ವಾಕ್ಯಾರ್ಥಗಳೂ ವೇದ, ಆಗಮ, ಶೃತಿ, ಸ್ಮೃತಿ, ಇತಿಹಾಸ, ಉಪನಿಷದ್ವಾಕ್ಯ ಇವುಗಳಿಂದ ಶಿವಾಧಿಕ್ಯ ಸ್ಥಾಪನೆಯು ಕಂಡುಬರುತ್ತವೆ. ಗ್ರಂಥಾಂತ್ಯದಲ್ಲಿ ಈಶ್ವರನು ಪ್ರತ್ಯಕ್ಷ ನಾಗಿ ಎಲ್ಲರನ್ನೂ ಕೈಲಾಸಕ್ಕೆ ಕರೆದುಕೊಂಡು ಹೋಗುವನು.

ಷಟ್ಪದಿಯ ಗುಟ್ಟನ್ನು ತಿಳಿದು ಅದನ್ನು ಹೇಗೆ ಉಪಯೋಗಿಸ ಬೇಕೆಂಬುದನ್ನು ಪ್ರತ್ಯಕ್ಷ ಪಡಿಸುವದರಲ್ಲಿ ಭೀಮಕವಿಯೇ ಪ್ರಸಿದ್ಧನು. ಚಾಮರಸ, ಕುಮಾರವ್ಯಾಸ, ಕುಮಾರವಾಲ್ಮೀಕಿ ಇವರುಗಳ ಕೈಯಲ್ಲಿ ಭಾಮಿನೀ ಷಟ್ಪದಿಯು ಪರಿಪೂರ್ಣಸೌಂದರ್ಯದಿಂದ ತುಂಬಿ ಭಾವಪ್ರ ದರ್ಶಕವಾಗಿ, ರಸಿಕಜನ ಮನೋಹಾರಿಯಾಗಿ, ಇದು ಶೋಭಿಸಿರುತ್ತದೆ.

ಲಕ್ಕಣ್ಣದಂಡೇಶನು ಶಿವತತ್ವ ಚಿಂತಾಮಣಿಯನ್ನು ರಚಿಸಿದಂದಿ ನಿಂದ ಗುಬ್ಬಿಯ ಮಲ್ಲಣಾರ್ಯನ ವರೆಗೆ ಒಂದು ಕಾಲವೆಂದು, ಅಲ್ಲಿಂದ ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದ ಕಾಲಕ್ಕೆ ಇನ್ನೊಂದು ಕಾಲವೆಂದು ಅನ್ನೋಣ. ಮೊದಲನೇ ಕಾಲದಲ್ಲಿ ಅಂದರೆ ಚಾಮರಸ, ಬೊಮ್ಮರಸ, ಚತುರ್ಮುಖ ಬೊಮ್ಮರಸ, ನೀಲಕಂಠಾಚಾರ್ಯ, ಸಿಂಗಿ ರಾಜ ಇವರುಗಳ ಕಾಲದಲ್ಲಿ ಪ್ರಸಿದ್ಧವಾದ ಸಾಂಗತ್ಯ ಪುರಾಣವಾ ವುದೂ ಇಲ್ಲ. ಎರಡನೇ ಸ್ಥಾನದಲ್ಲಿ ಚೇರಮಾಂಕ ಚೆನ್ನಬಸವಾಂಕ ವಿರಕ್ತತೋಂಟದಾರ್ಯ ಇವರು ಮುಖ್ಯವಾಗಿದ್ದು ಶಿಕ್ಕೇರಿಯಾರಾಧ್ಯನ ನಂಜುಂಡನ ಭೈರವೇಶ್ವರಕಾವ್ಯ, ಒಸವನ ಚಿಕ್ಕಯ್ಯನ ಸಾಂಗತ್ಯ, ದೇವನ ನನ್ನಯ್ಯಗಳ ಚರಿತೆ, ಇವು ಸಾಂಗತ್ಯ ಪುರಾಣಗಳಲ್ಲಿ ಮುಖ್ಯ, ಕ್ರಿ. ಶ. ೧೬೦೦ ರಿಂದ. ಈ ಪುರಾಣಗಳ ಕ್ಷೀಣದೆಸೆಯಾಗುತ್ತ ಹೋಗುತ್ತದೆ. ವೀರಶೈವ ಪುರಾಣಗಳ ಪ್ರಪಂಚಸ್ಥಿತಿಯನ್ನು ಬೇರೆ ವಿಧವಾಗಿ ಭಾವಿ ಸುತ್ತವೆ. ಮತ್ತು ಭಕ್ತಿಯೊಂದರಿಂದ ಮುಕ್ತಿಯಾಗುತ್ತದೆಂದು ಸಾರು ತ್ತವೆ. ಇಹಲೋಕಸೌಖ್ಯವನ್ನು ತ್ಯಜಿಸಬೇಕೆಂದು ಅವುಗಳಲ್ಲಿ ಪ್ರತಿಪಾದಿ ತವಾಗಿಲ್ಲ. ಜನರು ಶುದ್ಧಾಂತಃಕರಣಗಳಿಂದು ಅವು ಬೋಧಿಸುತ್ತವೆ.

ವೀರಶೈವರು ನೂತನ ಸಾಹಿತ್ಯೋಪಕರಣವನ್ನು ತೆಗೆದುಕೊಂಡು ಅದನ್ನು ಸರ್ವಸಾಮಾನ್ಯರೂ ಉಪಯೋಗಿಸುವಂತೆ ಮಾಡಿಕೊಟ್ಟ ಮತ್ತು ಸಮಸ್ತಭಾವಗಳನ್ನು ವಿವರಿಸತಕ್ಕ ಸಾಮಗ್ರಿಯನ್ನಾಗಿ ಮಾಡಿಕೊಟ್ಟ ಉಪಕಾರವು ಪುರಾಣ ಕರ್ತೃಗಳಿಂದಾಗಿರುತ್ತದೆ. ಷಟ್ಪದಿಗಳು ಮೊದಲು ಓದುಗಬ್ಬಗಳಾಗಿ ಬರಬರುತ್ತ ಹಾಡುಗಬ್ಬಗಳಾಗಿ ಹಾಡು ಗಬ್ಬಗಳಲ್ಲಿಯೂ ಕೀರ್ತನೆಗಳಲ್ಲಿಯೂ ಬೆರೆತುಹೋಗಿರುವದನ್ನು ನೋಡಿ ದರೆ ರಸಭಾವಗಳನ್ನು ಹೊರಗೆಡುವುದಕ್ಕೆ ಷಟ್ಪದಿಗಳು ಎಂತಹ ಪ್ರಯೋಜನಕಾರಿಯಾದ ಉಪಕರಣಗಳೆಂಬುದು ತಿಳಿಯದೇ ಇರಲಾ ರದು. ಷಟ್ಪದಿಗಳು ಹಾಡುವದಕ್ಕೂ ರಾಗವಾಗಿ ಹೇಳುವದಕ್ಕೂ ಕಥಾ ವಿವರಣಕ್ಕೂ ಏಕಕಾಲದಲ್ಲಿ ಉಪಯುಕ್ತವಾಗಿರುವುದರಿಂದಲೂ ಅವುಗಳ ಪದಸರಣಿಯು ಸುಲಭಗ್ರಾಹ್ಯವಾಗುವುದರಿಂದಲೂ ಹೆಂಗಸರು ಮಕ್ಕಳು ಮೊದಲುಗೊಂಡು ಎಲ್ಲ ಜನರು ಸಾಹಿತ್ಯದಲ್ಲಿ ಭಾಗಿಗಳಾ ಗಲು ಅನುಕೂಲಿಸಿತು..

ನಮಗೆ ದೊರೆತ ಷಟ್ಪದೀ ಗ್ರಂಥಗಳಲ್ಲಿ ರಾಘವಾಂಕನ ಗ್ರಂಥ ಗಳೇ ಮೊದಲಿನವು. ಆದ್ದರಿಂದ ಷಟ್ಪದಿಗಳು ೧೨ನೆಯ ಶತಮಾನ ದಲ್ಲಿ ಬಳಕೆಯಲ್ಲಿ ಬಂದುವೆಂದು ಹೇಳಬಹುದು. ರಾಘವಾಂಕನ ಪೂರ್ವ ದಲ್ಲಿ ಯಾರೂ ಷಟ್ಪದಿಗಳಲ್ಲಿ ಗ್ರಂಥಗಳನ್ನು ಬರೆದಿರಲಿಲ್ಲವೆಂದೂ ಆತನೇ ಅವುಗಳನ್ನು ನಿರ್ಮಿಸಿದನೆಂದೂ ಸಿದ್ಧನಂಜೇಶನು ಹೇಳುವುದು ನಿಜವಲ್ಲ. ಎಲ್ಲ ಷಟ್ಪದಿಗಳನ್ನು ಅಲ್ಲದಿದ್ದರೂ ಪರಿವರ್ಧಿನಿ ವಾರ್ಧಿಕ ಗಳನ್ನು ನಿರ್ಮಿಸುವಲ್ಲಿ ರಾಘವಾಂಕನ ಅಂಗವಿದ್ದರೂ ಇರಬಹುದು.

ನಾಗವರ್ಮನ ಛಂದೋಂಬುಧಿಯಲ್ಲಿ 'ಮಂದರಧರಗಣ' ಎಂಬು ದೊಂದು ಶರಷಟ್ಪದಿ ಕಾಣಸಿಕ್ಕುವುದು. ರನ್ನನ ಗದಾಯುದ್ಧದಲ್ಲಿರುವ (IX೨೧) 'ಮಾತ್ರಾ ಸಮಕ ಷಟ್ಪದಿ' ಇದು ಪರಿವರ್ಧಿನಿಯೇ ಸರಿ. ಕನ್ನಡ ಷಟ್ಪದಿಗೂ ಕೇದಾರಭಟ್ಟನು ತನ್ನ ವೃತ್ತ ರತ್ನಾಕರದಲ್ಲಿ ಹೇಳಿ ರುವ ಷಟ್ಪದಿಗೂ ಏನೂ ಸಂಬಂಧವಿಲ್ಲ. (T. H. M. ಸದಾಶಿವಯ್ಯ); ಮತ್ತು ಮದನತಿಲಕವು ಶರಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ.

ಕಾಲಜ್ಞಾನಗಳೆಂಬ ಗ್ರಂಥಗಳನ್ನು ವೀರಶೈವಮತಸ್ಥ ಕವಿಗಳೇ ಪ್ರಚಾರಕ್ಕೆ ತಂದರು. (ಬ. ಕೃಷ್ಣಪ್ಪ M. A.) ವೀರಶೈವ ವಾಙ್ಮಯ ಲಕ್ಷಣಗಳು ಆವವೆಂದರೆ:—

(೧) 'ಱ' ಕಾರವನ್ನು ಸಂಪೂರ್ಣವಾಗಿ ಬಿಟ್ಟರು. ಆದರೆ ೞ ಕಾರವು ಮಾತ್ರ ೧೮ ನೇ ಶತಮಾನದ ವರೆಗೆ ಉಳಿದುಕೊಂಡಿತು.

(೨) ಪದಾದಿಯಲ್ಲಿಯೂ ಕ್ರಿಯಾಪದದಲ್ಲಿಯೂ ಪಕಾರಕ್ಕೆ ಹಕಾರಾದೇಶವಾಯಿತು,

(೩) ಲಕ್ಷಣ ಬದ್ಧವಾಗಿ ಬರೆಯುತ್ತಿದ್ದ ಜೈನರಿಗೆ ವಿರೋಧವಾಗಿ ವಾಕ್ಯರಚನೆ, ಪ್ರಯೋಗ, ಪ್ರಾಸ ಇವುಗಳ ಕಡೆಗೆ ದುರ್ಲಕ್ಷ.

(೪) ಚಂಪೂ ಕಾವ್ಯಗಳ ಹೀನಸ್ಥಿತಿ.

(೫) ಕನ್ನಡದ ಹೊಸ ಛಂದಸ್ಸುಗಳು ತಲೆದೋರಿ, ಸಂಸ್ಕೃತ ಛಂದಸ್ಸಿಗೆ ಬದಲಾಗಿ ನಿಂತವು. ತ್ರಿಪದಿ, ಚೌಪದಿ, ಷಟ್ಪದಿ, ರಗಳೆ, ಸಾಂಗತ್ಯಗಳು ಪ್ರಚಾರದಲ್ಲಿ ಬಂದವು.

(೬) ಸಂಸ್ಕೃತಿ ಕಡಿಮೆಯಾಯಿತು.

(೭) ಭವಾಳಿಯಿಂದ ಬೇಸರವಾದವರಿಗೆ ಚರಿತ್ರ ಗ್ರಂಥವಾಗಿ ಹೊಸ ಸ್ವರೂಪವನ್ನು ಮುಂದಿಟ್ಟರು.

(೮) ಹೆಂಗಸರಿಗೂ ಬಾಲಕರಿಗೂ, ಪಾಮರರಿಗೂ ಸಹ ತಿಳಿಯುವಂತೆ ಸುಲಭ ಶೈಲಿಯಲ್ಲಿ ಬರೆದರು.

(೯) ಭಕ್ತಿಯೇ ಪ್ರಾಧಾನ್ಯವಾಯಿತು.

(೧೦) ವಚನವೆಂಬ ಸಾಹಿತ್ಯರೂಪವು ವಿಪುಲವಾಯಿತು.

(೧೧) ರೂಢಿಯಿಂದ ಬಲಹೊಂದಿದ ಷಟ್ಪದಿಯು ಮಾರ್ಪಾಟವಾಯಿತು.

(೧೨) ವಿಷಯ ಉದ್ದೇಶಃ— ಜನರ ಆಚಾರ ವಿಚಾರಗಳಲ್ಲಿ ಕಾಪಟ್ಯವನ್ನೂ ನಿರ್ಬಂಧವನ್ನೂ ಕತ್ತರಿಸಿ ಸ್ವಾತಂತ್ರ್ಯ ಹೊಂದಲಿಕ್ಕೆ ಸರ್ವಸಮರ್ಥತೆಯನ್ನು ಮತ್ತು ವಿಶ್ವಬಂಧುತ್ವವನ್ನು ಬೋಧಿಸಿ ಮನುಷ್ಯ ಜನ್ಮವನ್ನು ಸಂತೋಷದಿಂದಲೂ ಸೌಖ್ಯದಿಂದಲೂ ಕಳೆಯುವಂತೆ ಮಾಡಿದರು.

# ವೀರಶೈವ ಕ್ಷೇತ್ರಗಳು.

(ಸಂಗ್ರಾಹಕರು- ಪುರಾಣೀಕ ಬುದ್ಧಯ್ಯಸ್ವಾಮಿಗಳು ಧಾರವಾಡ.)

---

ಶಿವ ಶಿವ ಶಿವ ಶಿವ ಲಿಂಗ! ದಯಪಾಲಿಸೊ ಗುರುಪ್ರಭುಲಿಂಗ ॥ಪ॥

ಶ್ರೀಕರ ಶುಭದ ಮಹಾಕರುಣಿ ಕೊಲ್ಲಿ ! ಪಾಕಿ ಸೋಮವರಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೧॥

ವಿಶ್ವಂಭರನುತ ಶಾಶ್ವತಕಾಶಿಯ । ವಿಶ್ವನಾಥ ಶಿವಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೨॥

ಸೇತುಬಂಧ ಸುಪುನೀತ ಕ್ಷೇತ್ರ ವಿ । ಖ್ಯಾತ ರಾಮಪತಿಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೩॥

ಬಲ್ಲಿದ ಶ್ರೀಗಿರಿ ಸಲ್ಲಲಿತ ವರದ । ಮಲ್ಲೇಶ್ವರ ಜಯಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೪॥

ಪೆಂಪು ಸೊಂಪು ಸುಖದಿಂ ಪೊಗೊಡುವ ಶ್ರೀ । ಹಂಪೆವಿರೂಪಾಕ್ಷಲಿಂಗ॥
ದಯಪಾಲಿಸೊ ಗುರುಪ್ರಭುಲಿಂಗ ॥೫॥

ಕಾಲ ವಿಜಯ ಕರುಣಾಪಾಲ ಗಣ । ಲೋಲ ಗೋಲಗಿರಿಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೬॥

ಸ್ವರ್ಣಾಲಯಾರ್ಚಿತ ಪರ್ಣಜ ನುತ ಗೋಕರ್ಣ ಮಹಾಬಲಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೭॥

ಕಾಮಿತಜನಸುರ ಭೂಮಿ ಭುಸ್ವಾಗಲ । ಸೋಮನಾಥ ಶಿವಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೮॥

ದಕ್ಷಾಧ್ವರಹರ ಶಿಕ್ಷ ದಿವಿಜವಿರು । ಪಾಕ್ಷಮಹಾಬಲಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೯॥

ಪಾಪಗಿರಿ ಕುಲಿಶ ರೂಪ ಕೇದಾರ । ಗೋಪನಾಥ ಘನಲಿಂಗ ॥
ದಯಪಾಲಿಸೊ ಗುರುಪ್ರಭುಲಿಂಗ ॥೧೦॥

ಕಿಂಕರ ಜನಪಾಲಕ ಬಾಗಿಪುರ । ಬಂಕನಾಥ ಘನಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೧॥

ದೀರ್ಘೋತಿ ಕುಲವರ ನಾಗೇವಮನೋಹರ । ಗಾರ್ಗ್ಯವರದ ಮಹಾಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೨॥

ಮಿತ್ರಕೋಟಿ ರುಚಿಗಾತ್ರಸುಕಲ್ಯಾಣ । ತ್ರಿಪುರಾಂತಕ ಮಹಾಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೩॥

ಶಸ್ತ್ರಭಕ್ತಜಯಸುಸ್ಥಿರಕಾಳ । ಹಸ್ತೀಶ್ವರ ಜಯಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೪॥

ಷಡಗರ ನಂಬಿಗೆ ಪಡಿಹೊನ್ನದೋರಿದ । ವೃಡವಾಲ್ಮಿಕ ಪತಿಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೫॥

ಜಂಬುಜಹರಿಮುಖರಂಜಿಸಿದನುಪಮ । ನಂಜುಂಡೇಶ್ವರಲಿಂಗ ॥
ದಯಪಾಲಿಸೊ ಗುರು ಪ್ರಭುಲಿಂಗ ॥೧೬॥

ನಿರುತಶಂಕರೇಶ್ವರನಗರಾಧಿಪ । ಪರತರಶಂಕರ ಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೭॥

ಜಂಬುದ್ವೀಪಕೆದಿಂಬ ಜಂಬುಪುರ । ಜಂಬುಕೇಶ್ವರ ಘನಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೮॥

ಪಂಚಲಕ್ಷಣವೇ ಸಂಚಿತಮುನಿವಳ್ಳಿ । ಪಂಚಲಿಂಗದಯಪಾಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೧೯॥

ಬಳ್ಳವ ಭಜಿಸಿದ ಮಲ್ಲೀಶಗೊಲಿದ । ಬಳ್ಳೇಶ್ವರ ಜಯಲಿಂಗ ॥
ದಯಪಾಲಿಸೊಗುರುಪ್ರಭುಲಿಂಗ ॥೨೦॥

ಎಲ್ಲ ಕ್ಷೇತ್ರದೊಳು ಚಲ್ವಪುಷ್ಪಗಿರಿ । ಮಲ್ಲಿಕಾರ್ಜುನ ಮಹಾಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೨೧॥

ದೃಢವಧೂಟಿನ ಕಲ್‌ಗಡಗಿಯೊಳುದಿಸಿದ । ಗಡಿಗೀಶ ಬಸವಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೨೨॥

ಮಂಡಿತಾಯು ಮಾರ್ಕಂಡೆಗಿತ್ತ ಶ್ರೀ । ದಂಡನಾಥ ಶಿವಲಿಂಗ ॥
ದಯಪಾಲಿಸೊಗುರು ಪ್ರಭುಲಿಂಗ ॥೨೩॥

ಧೀರ ಓಹಿಲಯ್ಯಗೆ ಸಾರಸ್ವದೋರಿದ । ಸೌರಾಷ್ಟ್ರಕ ಸೋಮಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೪॥

ಪನ್ನಗಶಯನಹ ಉನ್ನತವಡ್ಡಿಜ । ಗನ್ನಾಥ ಮಹಾಶಿವಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೫॥

ರಾಜ ಉಜ್ಜನಿಗೆ ಸೋಜಿಗ ಪರೆಳೀ । ವೈಜನಾಥ ಘನಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೬॥

ಒಲಿದಾವಯ್ಯಗೆ ಖಲರಂ ಗೆಲಿಸಿದ । ಪುಲಿಗೆರೆ ಸೋಮಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೭॥

ನಡಿನುಡಿಒಂದೇ ದೃಢಶರಣರ ವಧು । ಒಡೆಯ ಕಪ್ಪಡಿಯ ಸಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೮॥

ಶೀಲಭಕ್ತಜನ ಲೋಲಹೂಲಿನಗ । ರಾಲಯಗುರು ವೃಷಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೨೯॥

ಎಲ್ಲ ಕ್ಷೇತ್ರದೊಳು ಬಲ್ಲಿದಶೀರ್ಧಳ । ಅಲ್ಲಮಪ್ರಭುಮಹಾಲಿಂಗ॥
ದಯಪಾಲಿಸೊಗುರು ಪ್ರಭುಲಿಂಗ ॥೩೦॥

# ಬಸವೇಶ್ವರನಕಿಂತಲೂ ಮೊದಲಿನ ವೀರಶೈವಧರ್ಮ.

(ಲೇಖಕರು:- ರಾವಬಹಾದ್ದೂರ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)



ಈ ವಿಷಯ ವಿವೇಚನೆ ಮಾಡುವಲ್ಲಿ ನಾವು ಹಿಂದಿನ ಸಂಚಿಕೆಯಲ್ಲಿ ಹೇಳಿದಂತೆ ನಾಲ್ಕು ವಿಭಾಗಗಳನ್ನು ನಾವು ಮಾಡಬಹುದಾಗಿದೆ. ಅವು ಯಾವವೆಂದರೆ (೧) ಬಸವೇಶ್ವರನ ಪೂರ್ವದ ಕಾಲ (೨) ಬಸವೇಶ್ವರನ ಕಾಲ (೩) ಬಸವೇಶ್ವರನ ತರುವಾಯದಲ್ಲಿ ಅವನಿಗೆ ಸಮೀಪವಿರುವ ಕಾಲ (೪) ವೀರಶೈವ ಪೌರಾಣಿಕ ಕಾಲ. ಈ ಕಾಲಗಳಲ್ಲಿ ಬಸವೇಶ್ವರನ ಪೂರ್ವದ ಕಾಲದಲ್ಲಿ ಬ್ರಹ್ಮ ವಿಷ್ಣು ಶಿವ ಈ ತ್ರಿಮೂರ್ತಿಗಳ ವಿಷಯವಾಗಿ ಯಾವ ವಿಚಾರಗಳು ಆಗಿನ ವೀರಶೈವ ಸಮಾಜದಲ್ಲಿ ರೂಢವಾಗಿದ್ದವೆಂಬುದನ್ನು ಕುರಿತು ನಾವು ಇಲ್ಲಿ ವಿವೇಚಿಸಬೇಕೆಂದಿದ್ದೇವೆ.

## ಕರ್ನಾಟಕದಲ್ಲಿ ಹಿಂದುಸ್ತಾನದಲ್ಲಿಯ ವಿದ್ವಜ್ಜನರ ಆಗಮನ.

ಈ ಪೂರ್ವದ ಕಾಲದಲ್ಲಿ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧ ರಾಜಮನೆತನಗಳಾದ ರಾಷ್ಟ್ರಕೂಟ ಈ ವೇಳೆ ಚಾಲುಕ್ಯರು ಆಳುತ್ತಿದ್ದದರಿಂದ ಹಿಂದುಸ್ತಾನದಲ್ಲಿಯ ಮುಖ್ಯ ಧರ್ಮಪ್ರವರ್ತಕರೂ ವಿದ್ವಾಂಸರೂ ಈ ರಾಜರ ಆಸ್ಥಾನಗಳಿಗೆ ಆಗಿಂದಾಗ್ಗೆ ಆಗಮಿಸುತ್ತಾ ಇದ್ದರು. ಕಾಶ್ಮೀರದೇಶದಲ್ಲಿಯ ಶೈವ ಮೊದಲಾದ ಸಮಾಜದವರು ಕರ್ನಾಟಕಕ್ಕೆ ಬಂದು ಇಲ್ಲಿ ಅನೇಕ ಕಡೆಗೆ ವಾಸಮಾಡಿದರು. ಅಲ್ಲಿಯ ಬಿಲ್ಹಣ ಪಂಡಿತನು ಚಾಲುಕ್ಯ ವಿಕ್ರಮಾರ್ಜುನನ ರಾಜನಲ್ಲಿ ಪ್ರಸಿದ್ಧಿಗೆ ಬಂದನು. ಬಸವೇಶ್ವರನು ಅನೇಕ ಜಂಗಮರನ್ನು ಒಂದು ಹಡಬಿಯಲ್ಲಿ ಹಾಕಿಕೊಂಡು ಉತ್ತರ ದೇಶದಿಂದ ಅವರನ್ನು ಕಲ್ಯಾಣಕ್ಕೆ ತಂದನೆಂದು ಒಂದು ದಂತಕಥೆಯುಂಟು. ಈ ಪ್ರಕಾರ ಉತ್ತರ ದೇಶದಲ್ಲಿಯವರಂತೆ, ದಕ್ಷಿಣದವರ ಸಂಬಂಧವೂ ಹೆಚ್ಚಾಗಿತ್ತು. ಕರ್ನಾಟಕದೇಶದ ರಾಜರಿಗೆ ತಮಿಳುದೇಶದ ಚೋಳ ಮತ್ತು ಪಾಂಡ್ಯರಾಜರೊಡನೆ ಯುದ್ಧ ಹೂಡುವ ಪ್ರಸಂಗಗಳು ಆಗಿಂದಾಗೆ ಬರುತ್ತಿದ್ದವು. ಇದರಿಂದ ಕನ್ನಡಿಗರಿಗೂ ತಮಿಳರಿಗೂ ನಿಬಿಡವಾದ ಪರಸ್ಪರ ಸಂಬಂಧವು ಉಂಟಾದದ್ದು ಕಂಡುಬರುತ್ತದೆ. ಉತ್ತರ ದೇಶ

ದಲ್ಲಿ ಮೊದಲು ಪ್ರಾದುರ್ಭವಿಸಿದ ಪಾಶುಪತಮತಸ್ಥರು ಸಹ ಕರ್ನಾಟಕದ ಅನೇಕ ಭಾಗಗಳಲ್ಲಿ ವಾಸವಾಗಿದ್ದರು. ವಿಜಾಪುರ ಜಿಲ್ಹೆಯಲ್ಲಿರುವ ಮುತ್ತಿಗಿ ಗ್ರಾಮದಲ್ಲಿ ಲಕುಲೀಶನೆಂಬ ಅವರ ಒಬ್ಬ ಪ್ರಸಿದ್ಧ ಪುರುಷನು ವಾಸಮಾಡುತ್ತಿದ್ದನು. ಉತ್ತರ ಹಿಂದುಸ್ತಾನದ ಗೋರಕ್ಷ ಪಂಥದ ಜನರ ಅನುಯಾಯಿಗಳು ಕೊಲ್ಹಾಪುರದಲ್ಲಿ ನೆಲಿಸಿದ್ದರೆಂದು ತೋರುತ್ತದೆ. ಜೈನರ ವಸಹಾತುಗಳು ಸಹ ಕರ್ನಾಟಕದಲ್ಲಿ ಅನೇಕ ಕಡೆಗೆ ಉಂಟಾಗಿದ್ದವು. ಹೀಗೆ ಹಿಂದುಸ್ತಾನದಲ್ಲಿಯ ಪ್ರಮುಖ ಮತಗಳ ಅನುಯಾಯಿಗಳು ಕರ್ನಾಟಕದಲ್ಲಿ ಬಹುಕಾಲದಿಂದಲೂ ನೆಲಿಸಹತ್ತಿದ್ದರಿಂದ ಅವರ ಸಂಸ್ಕೃತಿಯ ಪರಿಣಾಮಗಳು ಕರ್ನಾಟಕಸ್ಥರ ಮೇಲೆ ಆಗುತ್ತ ಬರುವದು ಸ್ವಾಭಾವಿಕವಾಗಿರುತ್ತದೆ.

## ಕರ್ನಾಟಕದಲ್ಲಿ ಶೈವ ಧರ್ಮಗಳ ಪ್ರಾಬಲ್ಯ.

ಕರ್ನಾಟಕದಲ್ಲಿಯ ಬಹುಜನ ಸಮಾಜದ ಮೇಲೆ ದಕ್ಷಿಣದಲ್ಲಿಯು ಮತ್ತು ಉತ್ತರ ದೇಶದಲ್ಲಿಯು ಶೈವ ಧರ್ಮಗಳು ಎಲ್ಲಕ್ಕೂ ಹೆಚ್ಚಿಗೆ ಬಹು ಪ್ರಬಲವಾದ ಪರಿಣಾಮಗಳನ್ನುಂಟು ಮಾಡಿದವೆಂದು ಕಂಡು ಬರುತ್ತದೆ. ಇಲ್ಲಿ ಕಾಳಾಮುಖರೆಂಬ ಹೆಸರಿನ ಶೈವ ಸಮಾಜಗಳು ಬಹು ಕಡೆಗೆ ಪ್ರಬಲ ಹೊಂದಿದ ಸಂಗತಿಯು ಶಿಲಾಶಾಸನಗಳಿಂದ ಸ್ಪಷ್ಟವಾಗುತ್ತದೆ. ಇವರ ಶಾಸನಗಳು ದಕ್ಷಿಣಕ್ಕೆ ಬಳ್ಳಿಗಾವಿಯಿಂದ ಉತ್ತರಕ್ಕೆ ವಿಜಾಪುರ ಜಿಲ್ಲೆಯಲ್ಲಿರುವ ಭೀಮಾತೀರದ ವರೆಗೂ ಪಸರಿಸಿರುತ್ತವೆ. ಗುಜರಾಥಪ್ರಾಂತದಲ್ಲಿ ಸೋಮನಾಥನ ದೇವಾಲಯವು ಪ್ರಸಿದ್ಧವಾಗಿದ್ದು ಅದರ ಭಕ್ತನಾದ ಆದಯ್ಯನು ವ್ಯಾಪಾರದ ನಿಮಿತ್ಯ ಪುಲಿಗೆರೆ ಅಂದರೆ ಈಗಿನ ಲಕ್ಷ್ಮೇಶ್ವರಕ್ಕೆ ಬಂದು ವಾಸವಾಗಿದ್ದನು. ಮತ್ತು ಅವನು ಗುಜರಾಥದ ಸೋಮನಾಥ ಲಿಂಗವನ್ನು ಇಲ್ಲಿ ಸ್ಥಾಪಿಸಿದನೆಂಬ ಐತಿಹ್ಯವಿದೆ. ವೀರಶೈವರಲ್ಲಿ ಪ್ರಸಿದ್ಧನಾಗಿರುವ ಶಿವಭಕ್ತನಾದ ಉದ್ಭಟನು ಗುಜರಾಥದಲ್ಲಿ ಬಹು ಪ್ರಖ್ಯಾತಿಯನ್ನ ಹೊಂದಿದ್ದನು ಹರಿಹರನು ಇವನ ಬಗ್ಗೆ ಒಂದು ರಗಳೆಯನ್ನು ಬರೆದಿರುವದಲ್ಲದೆ ' 'ಉದ್ಭಟ ಕಾವ್ಯ' ವೆಂಬ ಪ್ರಸಿದ್ಧ ಗ್ರಂಥವೂ ಉಂಟು. ಹೀಗೆ ಕರ್ನಾಟಕದಲ್ಲಿ ಶೈವಧರ್ಮಗಳು ಪ್ರಬಲ ಸ್ಥಿತಿಯನ್ನು ಹೊಂದಿದ್ದವು. ಆದರೆ ಇದನ್ನು ಸಾಮಾನ್ಯ ಜನರು ಹೆಚ್ಚಾಗಿ ಅನುಸರಿಸುವವರಾಗಿದ್ದರು.

## ಕರ್ನಾಟಕದಲ್ಲಿ ವೈಷ್ಣವ ದೇವಾಲಯುಗಳು.

ಈ ಪ್ರಕಾರ ಕರ್ನಾಟಕದಲ್ಲಿ ಶೈವ ಧರ್ಮಗಳು ಹೆಚ್ಚುತ್ತಿರಲು ಅವುಗಳೊಡನೆ ವೈಷ್ಣವ ಧರ್ಮವೂ ಕೂಡ ಪ್ರಬಲವಾಗಿರಬೇಕೆಂದು ತೋರುತ್ತದ. ಅನೇಕ ಚಾಲುಕ್ಯ ರಾಜರು ವೈಷ್ಣವ ಮತಾನುಯಾಯಿಗಳಾಗಿದ್ದರು. ಅವರ ಧ್ವಜವು ವಿಷ್ಣುವಿನ ಚಿನ್ಹವಾದ ವರಾಹವಿರುತ್ತದೆ ಬದಾಮಿಯಲ್ಲಿರುವ ಬಹು ಸುಂದರವಾಗಿ ಕೊರೆದ ದೇವಾಲಯುವು ವಿಷ್ಣು ದೇವತೆಯುದಾಗಿರುತ್ತದೆ. ಇದೇ ಮೇರೆಗೆ ಅನೇಕ ವೈಷ್ಣವ ದೇವಾಲಯುಗಳೂ ಕರ್ನಾಟಕದಲ್ಲಿ ಪಸರಿಸಿದ್ದವು.

## ಶೈವ ವೈಷ್ಣವ ಕಲಹಗಳು.

ಆದರೆ ಆವುದೋ ಒಂದು ಕಾರಣದಿಂದ ತಮಿಳು ದೇಶದಲ್ಲಿ ಶೈವ ವೈಷ್ಣವ ಮತಸ್ಥರಲ್ಲಿ ಶೀಘ್ರವಾದ ಕಲಹಗಳು ಒಂದು ಕಾಲಕ್ಕೆ ಉಂಟಾಗಿದ್ದವೆಂದು ಕಂಡುಬರುತ್ತದ. ಇವು ಮುಖ್ಯವಾಗಿ ಚೋಳರಾಜರ ಕಾಲದಲ್ಲಿ ಅಂದರೆ ೧೨ನೇ ಶತಮಾನದ ಆದಿ ಮತ್ತು ಮಧ್ಯಭಾಗಗಳಲ್ಲಿ ಬಹು ಹೆಚ್ಚಾಗಿದ್ದಂತೆ ತೋರುತ್ತದೆ ೧೦೬೪ ರಿಂದ ೧೧೧೨ರವರೆಗೆ ಕಾಂಚೀ ಪಟ್ಟಣದಲ್ಲಿ ೧ನೇ ಕುಲೋತ್ತುಂಗಚೋಳನು ರಾಜ್ಯವಾಳುತ್ತಿದ್ದು ಅವನು ವೈಷ್ಣವ ಧರ್ಮಾನಯಾಯಿಗಳ ಮೇಲೆ ಮಾಡಿದ ಉಪಟಳದ ಮೂಲಕ ರಾಮಾನುಜಾಚಾರ್ಯನು ಅವನ ರಾಜ್ಯವನ್ನು ತೊರೆದು ಹೋಗಬೇಕಾಯಿತು. ಈ ರಾಜನು ೬೩ ಪುರಾತನರ ಚರಿತ್ರೆಗಳನ್ನು ಸಂಗ್ರಹಿಸಿ ತಮಿಳಿನಲ್ಲಿ ಪ್ರಸಿದ್ಧಿಸಿದನು. ಈ ಪುರಾತನರು ವೀರಶೈವರಿಗೂ ವಂದ್ಯರಾಗಿದ್ದು ಇವರ ಬಗ್ಗೆ ಆದರ ಪೂರ್ವಕವಾಗಿ ಮಾಡಿದ ಉಲ್ಲೇಖಗಳು ವೀರಶೈವ ವಾಙ್ಮಯದಲ್ಲಿ ಅಸಂಖ್ಯಾತವಾಗಿರುತ್ತವೆ. ಬಸವೇಶ್ವರನ ಉಲ್ಲೇಖವಿದ್ದ ಅರ್ಜುನವಾಡ ಶಿಲಾಶಾಸನದಲ್ಲಿ ಸಹ ಅವನು ಪುರಾತನರ ಬಗ್ಗೆ ಅತ್ಯಂತ ಭಕ್ತಿಭಾವವುಳ್ಳವನಾಗಿದ್ದನೆಂದು ಹೇಳಲ್ಪಟ್ಟಿದೆ. ಈ ಪ್ರಕಾರ ಬಸವೇಶ್ವರನ ಪೂರ್ವದಲ್ಲಿ ವೀರಶೈವರು ಶಿವನನ್ನು ಅತ್ಯಂತ ಭಕ್ತಿಭಾವದಿಂದ ಪೂಜಿಸುತ್ತಿದ್ದರೆಂಬುದು ನಿರ್ವಿವಾದವಾದ ಸಂಗತಿಯಾಗಿರುತ್ತದೆ. ಆದರೆ ಅವರು ತಮಿಳು ದೇಶದ ಪರಿಸ್ಥಿತಿಯನ್ನು ಹಿಂಬಾಲಿಸುವವರಾಗಿ ವಿಷ್ಣುವಿನನ್ನು ಹೀಯಾಳಿಸಲಿಕ್ಕೆ ಹಿಂದುಮುಂದೆ ನೋಡುತ್ತಿರಲಿಲ್ಲವೆಂತಲೂ ಕೂಡ ಕಂಡು ಬರುತ್ತದೆ. ಈ ಕಾಲದಲ್ಲಿ ದಕ್ಷಿಣ ದೇಶದಲ್ಲಿ ಶೈವ ವೈಷ್ಣವ ಕಲಹ

ಗಳು ಮಿತಿಮೀರಿದ್ದವು. ಇವುಗಳ ಸೋಂಕು ಕರ್ನಾಟಕಕ್ಕೂ ತಗ ಲಿತು. ಜೈನರ ಪ್ರಾಬಲ್ಯದ ಮೂಲಕ ಪರಮಾತ್ಮನು ಜಗತ್ತಿನಲ್ಲಿ ಇದ್ದಾನೋ ಇಲ್ಲವೋ ಎಂಬದರ ಬಗ್ಗೆ ಮೊದಲು ವಾದಗಳು ಉಂಟಾ ದವು. ಆದರೆ ಮುಂದೆ ಶಿವನು ಶ್ರೇಷ್ಠನೋ ಅಥವಾ ವಿಷ್ಣುವು ಶ್ರೇಷ್ಠನೋ ಎಂಬುದರ ಬಗ್ಗೆ ಕಲಹಗಳು ಏಳಹತ್ತಿದವು. ಆದರೆ ಇವು ಬಸವೇ ಶ್ವರನ ಕಾಲದಲ್ಲಿ ಮತ್ತು ಅವನ ತರುವಾಯದ ಕಾಲದಲ್ಲಿ ಉಂಟಾ ಗಲು ಕಾರಣವಿದ್ದಿಲ್ಲ. ಯಾಕಂದರೆ ದೇವರು ಒಬ್ಬನೇ ಇದ್ದು ಅವನು ವಿಶ್ವವ್ಯಾಪಿಯಾಗಿದ್ದಾನೆಂಬ ಅಭಿಪ್ರಾಯಗಳು ಆಗ ತಲೆದೋರಿದ್ದವು. ಇದರಿಂದ ಯಾವ ದೇವರು ಹೆಚ್ಚು ಮತ್ತು ಯಾವ ದೇವರು ಕಡಮೆ ಎಂಬ ಪ್ರಶ್ನೆಯೇ ಉದ್ಭವಿಸುವದಿಲ್ಲ. ಈ ಕಾಲದಲ್ಲಿ ಉಂಟಾದ ವಚ ನಗಳಲ್ಲಿ ತ್ರಿಮೂರ್ತಿಗಳೆಲ್ಲರೂ ನಿರಾಕರಿಸಲ್ಪಟ್ಟಿರುವದು ಕಂಡ ಬರುತ್ತದೆ. ಪಂಚಮುಖ ಪಾರ್ವತೀವಲ್ಲಭನಾದ ಶಿವನನ್ನು ಸಹ ಶಿವಶರಣರು ಅಲ್ಲಗಳೆ ದಿದ್ದಾರೆ. ಅವರು ಸ್ಥಾವರಲಿಂಗವಿದ್ದ ಶಿವಾಲಯಗಳನ್ನು ಮನ್ನಿಸುವದಿಲ್ಲ. ಅವರು ಇಷ್ಟಲಿಂಗವನ್ನ ಮಾತ್ರ ಮನ್ನಿಸುವವರು. ಇಂಥವರಿಗೆ ಬ್ರಹ್ಮ ವಿಷ್ಣು ಶಿವ ಇವರಲ್ಲಿ ಯಾರು ಅಧಿಕರು, ಯಾರು ಕಡಿಮೆಯವರು ಎಂಬುದನ್ನು ಗೊತ್ತುಪಡಿಸುವ ವಿಷಯವು ಅಪ್ರಸ್ತುತವಾದದ್ದು. ಆದರೆ ಇಂಥ ಉದಾತ್ತ ವಿಚಾರಗಳು ಬಸವೇಶ್ವರನಕಿಂತ ಮೊದಲು ಆಗಿಹೋದ ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುವದಿಲ್ಲ. ಇದು ಕೆಳಗಿನ ಉದಾ ಹರಣೆಗಳಿಂದ ವಾಚಕರಿಗೆ ಕಂಡುಬರುವದು.

## ಶಂಕರದಾಸಿಮಯ್ಯ.

ಶಂಕರ ದಾಸಿಮಯ್ಯನು ದೇವರದಾಸಿಮಯ್ಯನಿಗೆ ಸಮಕಾಲೀನ ನಾಗಿ ೧೧ನೇ ಶತಮಾನದ ಪ್ರಥಮಾರ್ಧ ಭಾಗದಲ್ಲಿ ರಾಜ್ಯ ಮಾಡಿದ ಚಾಲುಕ್ಯ ಜಯಸಿಂಹರಾಯನ ಆಳಿಕೆಯಲ್ಲಿ ಪ್ರಸಿದ್ಧಿಗೆ ಬಂದನು. ಹರಿಹರ ಕವಿಯು ಇವನ ವಿಷಯವಾಗಿ ಒಂದು ರಗಳೆಯನ್ನು ಬರೆದಿದ್ದಾನೆ. ಇದರಿಂದ ತಿಳಿಯುವದೇನಂದರೆ, ಕಲ್ಯಾಣ ಪಟ್ಟಣದಲ್ಲಿ ಒಂದು ನೃಸಿಂಹ ದೇವಾಲಯವಿದ್ದು ಅಲ್ಲಿಯ ಬ್ರಾಹ್ಮಣರು ಅರಸನೆಡೆಗೆ ಹೋಗಿ ಶಂಕರ ದಾಸಿಮಯ್ಯನೆಂಬವನು ಈಗ ಮುದುನೂರೊಳಗಿದ್ದು ಅವನು ಪರದೈವದ ಪ್ರತಿಮೆಗಳನ್ನು ತನ್ನ ನೊಸಲಗಣ್ಣಿನಿಂದ ದಹಿಸುತ್ತಿರುವನು. ಅವನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ನಮ್ಮ ನರಸಿಂಹಮೂರ್ತಿಯನ್ನು ನೋಡಿ

ಸಬೇಕೆಂದು ಬಿನ್ನಹ ಮಾಡಿದರು. ಆಗ ರಾಜನು ಶಂಕರದಾಸಿಮಯ್ಯನನ್ನು ಕಲ್ಯಾಣಕ್ಕೆ ಕರೆಯಿಸಿ, ಆವನಿಗೆ ನೀವು ನೃಸಿಂಹ ಪ್ರತಿಮೆಯನ್ನು ನಿಮ್ಮ ನೊಸಲುಗಣ್ಣಿನಿಂದ ನೋಡಬೇಕು, ಅಂದರೆ ಅದರ ಘನ ಪ್ರತಿಷ್ಠೆಯಾಗುವದು, ಹೀಗೆ ನೋಡಿ ಕರುಣಿಸಿರಿ, ಎಂದು ಹೇಳಿಕೊಳ್ಳಲು ಆಗ ಶಂಕರದಾಸಿಮಯ್ಯನು ಅರಸನ ಅಭಿಪ್ರಾಯವನ್ನರಿತು ಕೋಪದಿಂದ ತನ್ನ ಕಣ್ಣನ್ನು ತೆರೆಯಲು, ಆ ನೃಸಿಂಹ ಪ್ರತಿಮೆಯು ಉರುಹಿ ಹೋಗಿ ನೆಲಕ್ಕುರುಳಿತು. ಹೀಗೆ ಕಥಾನಕವಿದ್ದು ಇದರ ಮೇಲಿಂದ ಬಸವೇಶ್ವರನಕಿಂತ ಹಿಂದೆ ಆಗಿ ಹೋದ ಶಿವಶರಣರು, ಶಿವ ಮತ್ತು ವಿಷ್ಣು, ಈ ದೇವತೆಗಳ ಬಗ್ಗೆ ಉಂಟಾದ ಕಲಹಗಳಲ್ಲಿ ಶೈವರ ಪಕ್ಷ ವಹಿಸಿ ವಿಷ್ಣುದೇವಾಲಯಗಳನ್ನು ಶಿವದೇವಾಲಯಗಳನ್ನಾಗಿ ಮಾಡುವದರಲ್ಲಿ ತೊಡಗಿದ್ದರೆಂದು ಕಂಡು ಬರುತ್ತದೆ.

## ರೇವಣಸಿದ್ಧ.

ರೇವಣಸಿದ್ಧನು ಆವ ಕಾಲಕ್ಕೆ ಇದ್ದನೆಂಬ ವಿಷಯವಾಗಿ ನಾವು ಶಿವಾನುಭವ ಸಂಪುಟ ೧೪ ಸಂಚಿಕೆ ೪ ಪುಟ ೨೧೧ ಇದರಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅದರಲ್ಲಿ ನಾವು ಆವನು ೧೧೨೮ರಿಂದ ೧೧೫೦ರ ವರೆಗೆ ಕಾಂಚೀ ಪಟ್ಟಣದಲ್ಲಿ ರಾಜ್ಯವಾಳಿದ ೨ನೇ ಕುಲೋತ್ತುಂಗ ಚೋಳ ರಾಜನಲ್ಲಿ ಪ್ರಸಿದ್ಧಿಗೆ ಬಂದಿರಬೇಕೆಂದು ಊಹಿಸಿದ್ದೇವೆ. ಇವನಕಿಂತಲೂ ಮೊದಲು ರಾಜ್ಯವಾಳಿದ ವಿಕ್ರಮ ಚೋಳನು ವಿಷ್ಣುವಿನ ಪಕ್ಷಪಾತಿಯಾಗಿದ್ದರಿಂದ ದೇಶತ್ಯಾಗ ಮಾಡಿದ್ದ ರಾಮಾನುಜಾಚಾರ್ಯನು ಮರಳಿ ತನ್ನ ಕಾಂಚೀ ಪಟ್ಟಣಕ್ಕೆ ಆಗ ಬಂದು ಅಲ್ಲಿ ವಾಸವಾಗಿದ್ದನು. ಆದರೆ ಈ ರಾಜನ ತರುವಾಯ ಪಟ್ಟವೇರಿದ ಈ ೨ನೇ ಕುಲೋತ್ತುಂಗಚೋಳನ ಕಾಲದಲ್ಲಿ ರೇವಣಸಿದ್ಧೇಶ್ವರನು ಇವನ ರಾಜಧಾನಿಗೆ ಬಂದು ವಿಷ್ಣು ದೇವತೆಯ ಸ್ಥಾನದಲ್ಲಿ ಶಿವನನ್ನು ಸ್ಥಾಪಿಸಿದ್ದರ ವಿವರಣೆಯು ಹರಿಹರನ ರಗಳೆಯಲ್ಲಿ ಬಂದಿರುತ್ತದೆ. ಈ ಪ್ರಕಾರ ರೇವಣಸಿದ್ಧನ ಕಾಲದಲ್ಲಿಯೂ ದೇಶದಲ್ಲಿ ಶಿವ ವಿಷ್ಣು ಈ ವಿಷಯವಾಗಿ ವಿರೋಧಗಳು ಉತ್ಪನ್ನವಾಗಿದ್ದವು. ಇದಕ್ಕೋಸ್ಕರ ರಾಮಾನುಜಾಚಾರ್ಯನು ದೇಶತ್ಯಾಗ ಸಹ ಮಾಡಬೇಕಾಯಿತು, ಅವನಿಗೆ ಸಮಕಾಲೀನನಾದ ರೇವಣಸಿದ್ಧೇಶ್ವರನು ಶಿವನ ಪಕ್ಷಪಾತಿಯಾಗಿ ಶಿವದೇವಾಲಯಗಳ ಪ್ರತಿಷ್ಠಾಪನೆಗೋಸ್ಕರ ಪ್ರಯತ್ನಿಸುತ್ತಿದ್ದನೆಂಬುದು ಸ್ಪಷ್ಟವಾಗುತ್ತಿದೆ.

## ತೆಲುಗು ಜೊಮ್ಮಯ್ಯ.

ಹರಿಹರನು ತೆಲುಗು ಜೊಮ್ಮಯ್ಯನ ಬಗ್ಗೆಯೂ ಒಂದು ರಗಳೆಯನ್ನು ಬರೆದಿದ್ದಾನೆ. ಇವನು ೧೧೨೮ರಿಂದ ೧೧೩೮ರ ವರೆಗೆ ತರ್ದೆವಾಡಿ ನಾಡಿನಲ್ಲಿ ಮಹಾಮಂಡಲೇಶ್ವರನಾಗಿ ಆಳಿದ ಬಿಜ್ಜಳನ ತಂದೆಯಾದ ಪೆರ್ಮಾಡಿ ರಾಯನಲ್ಲಿ ಮಂತ್ರಿಸ್ಥಾನವನ್ನು ಹೊಂದಿದ್ದನು. ತೆಲುಗು ಜೊಮ್ಮಯ್ಯನು ಶಿವಶರಣರಲ್ಲೊಬ್ಬನಾಗಿ ವೀರಶೈವರಲ್ಲಿ ಪ್ರಸಿದ್ಧನಾಗಿದ್ದಾನೆ. ಒಂದು ದಿವಸ ಪೆರ್ಮಾಡಿರಾಯನ ಆಸ್ಥಾನದಲ್ಲಿ ಒಬ್ಬ ಪುರಾಣಿಕನು ಪುರಾಣವನ್ನು ಹೇಳುತ್ತಿರುವಲ್ಲಿ, ಅವನು ಶಿವನ ನಿಂದೆಯಾಗುವಂತೆ ಅದರ ಅರ್ಥಮಾಡಿ ಜನರಿಗೆ ಹೇಳುತ್ತಿದ್ದನು. ಆಗ ಜೊಮ್ಮಯ್ಯನು ಅವನನ್ನು ಅಲ್ಲಿಯೇ ಕಡಿದುಹಾಕಿ ಬಿಟ್ಟನು. ಹೀಗೆ ಈತನ ಬಗ್ಗೆ ಕಥೆ ಇದೆ. ಜೊಮ್ಮಯ್ಯನು ಬಸವೇಶ್ವರನ ಪೂರ್ವದವನಾಗಿದ್ದು ಇವನ ಕಾಲದಲ್ಲಿಯೂ ವಿಷ್ಣು ಮತ್ತು ಶಿವ ಇವರ ನಡುವೆ ಕಲಹಗಳು ಹೆಚ್ಚಾಗಿದ್ದವೆಂಬುದು ಕಂಡುಬರುತ್ತದೆ.

## ವರದಾನಿಗುಡ್ಡವ್ವೆ

ವರದಾನಿಗುಡ್ಡವ್ವೆಯು ಚರಿತ್ರೆಯಾದರೂ ಶೈವ ವೈಷ್ಣವ ಕಲಹಗಳನ್ನು ವ್ಯಕ್ತಪಡಿಸುತ್ತದೆ. ಈಕೆಯು ಉಲ್ಲೇಖವಿದ್ದ ಶಿಲಾಶಾಸನವನ್ನು ಪ್ರೊ. ಕೆ. ಜಿ. ಕುಂದಣಗಾರ ಎಮ್. ಎ. ಇವರು ತಮ್ಮ "ಉತ್ತರ ಕರ್ನಾಟಕದ ಮತ್ತು ಕೊಲ್ಲಾಪೂರ ಸಂಸ್ಥಾನದೊಳಗಿನ ಶಿಲಾಶಾಸನಗಳು" ಎಂಬ ಹೆಸರಿನ ಇಂಗ್ಲಿಷ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ. ಈ ಶಾಸನವು ೧೨೭೮ನೇ ಇಸ್ವಿಯದು ಇರುತ್ತದೆ. (ಶಿವಾನುಭವ ಸಂಪುಟ ೧೩, ಸಂಚಿಕೆ ೧೧, ಪುಟ ೪೮೫ ನೋಡಿರಿ.) ಇದರಿಂದ ಈ ಶಿವಶರಣೆಯು ಬಸವೇಶ್ವರನ ಕಾಲಕ್ಕೆ ಸಮೀಪಸ್ಥಳಾಗಿದ್ದಳೆಂದು ಕಂಡುಬರುತ್ತದೆ. ಈಕೆಯ ಒಂದು ಪುರಾಣವು ನಮಗೆ ಉಪಲಬ್ಧವಾಗಿದ್ದು ಅದರ ಸಾರವನ್ನು ನಾವು ಶಿವಾನುಭವ ಪತ್ರಿಕೆಯ ೧೨ನೇ ಸಂಪುಟ ೬ನೇ ಸಂಚಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅದರ ಮೇಲಿಂದ ಈಕೆಯು ಬಸವೇಶ್ವರನಿದ್ದ ಕಾಲದಲ್ಲಿ ಕಲ್ಯಾಣ ಪಟ್ಟಣದಲ್ಲಿ ಕೆಲವು ಕಾಲ ವಾಸವಾಡಿದಳೆಂದು ತಿಳಿದುಬರುತ್ತದೆ. ವೀರಶೈವರಲ್ಲಿ ಅತಿ ಪ್ರಸಿದ್ಧ ಕವಿಯಾದ ಲಕ್ಕಣ್ಣ ದಂಡೇಶನಾದರೂ ತನ್ನ 'ಶಿವತತ್ವ ಚಿಂತಾಮಣಿ' ಎಂಬ ಗ್ರಂಥ

ದಲ್ಲಿ ಈಕೆಯ ಚರಿತ್ರೆಯನ್ನು ಕೊಟ್ಟಿದ್ದಾನೆ. (ಈ ಪುಸ್ತಕವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧವಾಗಿದೆ.) ಆದರೆ ಈಕೆಯು ಬಸವೇಶ್ವರನಿಗೆ ಸಮಕಾಲೀನಳೆಂಬುದು ಸಂದೇಹಾಸ್ಪದವು. ಯಾಕಂದರೆ ವೀರಶೈವರಲ್ಲಿ ಆಗಿಹೋದ ಎಲ್ಲ ಶಿವಶರಣರು ಬಸವೇಶ್ವರನ ಕಾಲದಲ್ಲಿಯೇ ಇದ್ದರೆಂತಲೂ, ಅವರು ಕಲ್ಯಾಣ ಪಟ್ಟಣದಲ್ಲಿಯೇ ವಾಸಿಸಿದರೆಂತಲೂ ಅವರವರ ಪುರಾಣಗಳಲ್ಲಿ ವರ್ಣಿಸುವ ವಾಡಿಕೆಯು ಇರುತ್ತಿದೆ. ಉದಾಃ— ದೇವರದಾಸಿಮಯ್ಯ, ಶಂಕರದಾಸಿಮಯ್ಯ, ಇವರನ್ನು ಸಹ ಬಸವೇಶ್ವರನಿಗೆ ಸಂಬಂಧಿಸಿ ಕೆಲವು ಗ್ರಂಥಕಾರರು. ಅವರ ಬಗ್ಗೆ ಪುರಾಣಗಳನ್ನು ಬರೆದದ್ದುಂಟು. ಆದ್ದರಿಂದ ಇಂಥ ಉಲ್ಲೇಖಗಳನ್ನು ನಾವು ಕೂಡಲೆ ನಂಬದೆ ಈ ಶಿವಶರಣರ ಚರಿತ್ರೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವದು ಬಹು ಅವಶ್ಯವಿರುತ್ತದೆ. ಹೀಗೆ ನಾವು ವಿವೇಚಿಸಿದಲ್ಲಿ ಕೆಲವು ಶಿವಶರಣರು ಬಸವೇಶ್ವರನಕಿಂತಲೂ ಮೊದಲಿನವರೆಂತಲೂ, ಅನೇಕರು ಅವನ ಸಮಕಾಲೀನರೆಂತಲೂ ತಿಳಿದು ಬರುತ್ತದೆ. ಈ ವಿಷಯವನ್ನು ಕುರಿತು ನಾವು ವಿಸ್ತೃತವಾಗಿ ಶಿವಾನುಭವ ಸಂಪುಟಗಳ ಇದರಲ್ಲಿ ಅನೇಕ ಲೇಖಗಳನ್ನು ಪ್ರಸಿದ್ಧಿಸಿದ್ದೇವೆ. ವರದಾನಿ ಗುಡ್ಡವ್ವೆಯು ಚರಿತ್ರೆಯನ್ನು ನಾವು ಪರಿಶೋಧಿಸಿದಲ್ಲಿ ಆಕೆಯು ಇತರ ಕೆಲವು ಸ್ತ್ರೀ ವಚನಕಾರರಂತೆ ಬಸವೇಶ್ವರನ ಶಿವಾನುಭವ ಮಂಟಪದಲ್ಲಿದ್ದದ್ದರ ಉಲ್ಲೇಖವು ಎಲ್ಲಿಯೂ ಇರುವದಿಲ್ಲ. ಆಕೆಯು ಚರಿತ್ರೆ ಮತ್ತು ಶಿಲಾಶಾಸನ ಇವುಗಳ ಮೇಲಿಂದ ನೋಡಿದರೆ ಅವಳು ಬಸವೇಶ್ವರನಕಿಂತಲೂ ಸ್ವಲ್ಪ ಹಿಂದೆ ಅಂದರೆ ರೇವಣಸಿದ್ಧೇಶ್ವರನ ಕಾಲದಲ್ಲಿಯೇ ಇರಬೇಕೆಂದು ನಮಗೆ ತೋರುತ್ತದೆ. ಆಕೆಯು ಚರಿತ್ರೆಯಿಂದ ಶಿವ ವಿಷ್ಣು ಇವರ ವಿಷಯವಾಗಿ ಜಗಳಗಳಿದ್ದು ಅವುಗಳ ಬಗ್ಗೆ ತಿಳಿದು ಬರುವದೇನಂದರೆಃ— ಮಲಾಪಹಾರೀ ನದಿಯ ದಂಡೆಯ ಮೇಲೆ ಇದ್ದ ಅಲಂಪುರ ಎಂಬ ಗ್ರಾಮದಲ್ಲಿ ಬ್ರಹ್ಮೇಶ್ವರ ಲಿಂಗವೆಂಬ ಶಿವಾಲಯವನ್ನು ಅಲ್ಲಿಯ ವೈಷ್ಣವರು ಕಿತ್ತು ಹಾಕಿದ್ದರು. ಆದ್ದರಿಂದ ಅವಳು ಒಂದು ಸೈನ್ಯವನ್ನು ಕೂಡಿಸಿಕೊಂಡು ಅಲ್ಲಿಗೆ ಹೋಗಿ ವಿರೋಧಿಗಳನ್ನು ಯುದ್ಧದಲ್ಲಿ ಸೋಲಿಸಿ ಪುನಃ ಆ ದೇವಾಲಯದಲ್ಲಿ ಬ್ರಹ್ಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದಳೆಂದು ತಿಳಿಯುತ್ತದೆ. ಇವಳ ಚರಿತ್ರೆಯಿಂದ ಈ ಕಾಲದಲ್ಲಿ ಶಿವ, ವಿಷ್ಣು ಈ ದೇವತೆಗಳ ವಿಷಯವಾಗಿ ಬರೇ ಒಡಕುಗಳಷ್ಟೇ ಅಲ್ಲ, ಒಮ್ಮೊಮ್ಮೆ

ಯುದ್ಧಗಳೂ ಕೂಡ ನಡೆದಿದ್ದು ಕಂಡು ಬರುತ್ತದೆ. ಆದರೆ ಈ ಸ್ಥಿತಿಯು ಬಸವೇಶ್ವರನಕಿಂತಲೂ ಮೊದಲು ಮಾತ್ರ ಇದ್ದ ಹಾಗೆ ನಮಗೆ ತೋರುತ್ತದೆ.

## ಬಸವೇಶ್ವರ.

ಆದರೆ ಈ ವಿಲಕ್ಷಣ ಪರಿಸ್ಥಿತಿಯು ಬಸವೇಶ್ವರನ ಕಾಲದಲ್ಲಿ ಬದಲಾವಣೆಯಾಯಿತೆಂದು ನಮಗೆ ತೋರುತ್ತದೆ. ಅವನ ಕಾಲದಲ್ಲಿ ಪರಮಾತ್ಮನ ಬಗ್ಗೆ ಉಚ್ಚ ವಿಚಾರಗಳು ಉಂಟಾದವು. ಆದರೆ ಈ ಪರಿಸ್ಥಿತಿಯುಂಟಾಗಲು ಕೆಲವು ಕಾಲ ಗತಿಸಿರಲಿಕ್ಕೆಬೇಕು.

## ಬಸವೇಶ್ವರನ ಆರಂಭದ ಕಾಲ.

ಬಸವೇಶ್ವರನು ಚಿಕ್ಕವಯಸ್ಸಿನವನಿದ್ದಾಗ ರೇವಣಸಿದ್ಧೇಶ್ವರ, ವರದಾನಿಗುಡ್ಡಮ್ಮ, ತೆಲುಗು ಜೊಮ್ಮಯ್ಯ, ಇವರು ಮಂಗಳವಾಡ ನಾಡಿನಲ್ಲಿ ಪ್ರಸಿದ್ಧರಾಗಿದ್ದರು. ಆಗ ಶಿವ, ವಿಷ್ಣು ಈ ದೇವತೆಗಳ ಸಂಬಂಧವಾಗಿ ಜನತೆಯಲ್ಲಿ ಕ್ಷೋಭೆಗಳುಂಟಾಗಿ ಒಂದು ಕಡೆಗೆ ಬಾಹ್ಮಣರು ಮತ್ತೊಂದುಕಡೆಗೆ ಶಿವಸಾಂಪ್ರದಾಯಕರು ಇವರ ನಡುವೆ ಹೋರಾಟಗಳು ನಡೆಯುತ್ತಿದ್ದವು. ಇವುಗಳ ಪರಿಣಾಮಗಳು ಬಸವೇಶ್ವರನ ಮನಸ್ಸಿನ ಮೇಲೆ ಅವನು ಚಿಕ್ಕವನಾಗಿದ್ದಾಗ, ಅಂದರೆ ಅವನು ಮಂಗಳವಾಡದಲ್ಲಿರುವ ವರೆಗೆ, ಆಗಿರಲಿಕ್ಕೆಬೇಕು. ಆ ಪಟ್ಟಣದಲ್ಲಿ ಅವನು ಮಹಾಮಂಡಲೇಶ್ವರನಾದ ಬಿಜ್ಜಳನ ಕೈಕೆಳಗೆ ಲೇಖಕನಾಗಿ ಕೆಲವು ವರ್ಷ ಕೆಲಸ ಮಾಡಿದನು. ಇದೇ ಕಾಲದಲ್ಲಿಯೇ ರೇವಣಸಿದ್ಧೇಶ್ವರನು ಬಿಜ್ಜಳನ ಆಸ್ಥಾನದಲ್ಲಿ ಬಹು ಪ್ರಬಲ ಪುರುಷನಾಗಿದ್ದನು. ಆದ್ದರಿಂದ ಈ ಜಗಳಗಳ ಪರಿಸ್ಥಿತಿಯು ಬಿಜ್ಜಳನು ಕಲ್ಯಾಣದಲ್ಲಿ ಪಟ್ಟವೇರುವ ವರೆಗೂ ಹೆಚ್ಚು ಕಡಿಮೆ ಪ್ರಮಾಣದಿಂದ ನಡೆದಿರಲಿಕ್ಕೆಬೇಕು.

## ಬಸವೇಶ್ವರನು ಪ್ರಧಾನಿಯಾದ ಬಳಿಕಿನ ಕಾಲ.

ಮುಂದೆ ಬಿಜ್ಜಳನು ಚಾಲುಕ್ಯರಾಜನನ್ನು ಸಿಂಹಾಸನದಿಂದ ತಳ್ಳಿ ತಾನೇ ಪಟ್ಟವೇರಿದನು. ಆಗ ಬಸವೇಶ್ವರನು ಅವನ ಮಂತ್ರಿಯಾಗಿ ನೇಮಿಸಲ್ಪಟ್ಟನು. ದೇವರದಾಸಿಮಯ್ಯನ ಕಾಲದಿಂದ ೧೦೦-೧೫೦ ವರ್ಷಗಳಿಂದಲೂ ವೀರಶೈವ ಧರ್ಮದ ಚಳವಳಿಗಳು ಉತ್ಪನ್ನವಾಗಿದ್ದವು.

ಬಸವೇಶ್ವರನಿಗೆ ರಾಜ್ಯದಲ್ಲಿ ಮಹತ್ವದ ಸ್ಥಾನವು ದೊರೆತ ಕೂಡಲೆ ಆಗ ದೇಶದಲ್ಲಿದ್ದ ಶಿವಶರಣರು ಅವನಿದ್ದೆಡೆಗೆ ಬರಹತ್ತಿದರು. ಅವರಲ್ಲಿ ಪ್ರಭುದೇವ, ಮಡಿವಾಳಮಾಚಿದೇವ, ಸಿದ್ಧರಾಮ, ಮಹಾದೇವಿಯಕ್ಕ ಇವರೇ ಮೊದಲಾದವರು ಮುಖ್ಯರಾಗಿದ್ದರು. ಆಗ ಶಿವಾನುಭವ ಕೂಟವು ಕಲ್ಯಾಣದಲ್ಲಿ ಸ್ಥಾಪಿತವಾಯಿತು. ಅಲ್ಲಿ ಹಿಂದಿನ ಶೈವಧರ್ಮಗಳ ಪರಿಶೀಲನೆ ನಡೆದು ವೀರಶೈವ ಧರ್ಮದ ಪುನರ್ರಚನೆಯಾಯಿತು. ಮತ್ತು ಶಿವಾನುಭವದ ಉಚ್ಚವಿಚಾರಗಳು ಸ್ಥಿರಗೊಳಿಸಲ್ಪಟ್ಟವು. ಅವುಗಳಲ್ಲಿ ಪರಮಾತ್ಮನ ಬಗ್ಗೆ ವಿಚಾರಗಳು ಬಹು ಮಹತ್ವದವೆಂದು ನಮಗೆ ತೋರುತ್ತದೆ. ಅವುಗಳಾವವಿದ್ದವೆಂಬುದನ್ನು ನಾವು ಹಿಂದೆಯೇ ವಿವರಿಸಿದ್ದೇವೆ.

ಈ ಕಾಲದಲ್ಲಿ ಈ ಹೊಸ ಪರಿಸ್ಥಿತಿಯುಂಟಾದ ಮೂಲಕ ಬಸವೇಶ್ವರನ ವಚನಗಳಲ್ಲಿ ತ್ರಿಮೂರ್ತಿಗಳನ್ನು ಪೂರ್ಣವಾಗಿ ಅಲ್ಲಗಳೆದಂಥವುಗಳು ಅನೇಕವು ದೊರಕುತ್ತವೆ. ಆದರೆ ಅವುಗಳೊಡನೆ ಬ್ರಾಹ್ಮಣರನ್ನೂ ವಿಷ್ಣುವಿನನ್ನೂ ಜರಿದಂಥವಾದರೂ ಕೂಡ ದೊರೆಯುತ್ತವೆ. ಆದರೆ ನಿಂದಾಯುಕ್ತ ಈ ಎರಡನೇ ತಂದ ವಚನಗಳು ಬಸವೇಶ್ವರನು ಶಿವಾನುಭವ ಮಂಟಪವನ್ನು ಸ್ಥಾಪಿಸುವದಕ್ಕಿಂತ ಮೊದಲಿನವು, ಅಂದರೆ ಅವನು ಇನ್ನೂ ಮಂಗಳವಾಡದಲ್ಲಿ ಇದ್ದಾಗಿನವು, ಇರಲಿಕ್ಕೆಬೇಕೆಂದು ನಾವು ಊಹಿಸುತ್ತೇವೆ. ಆದರೆ ಕಲ್ಯಾಣಪಟ್ಟಣದಲ್ಲಿ ಮುಂದೆ ಶಿವಾನುಭವ ಮಂಟಪವು ಸ್ಥಾಪಿತವಾದ ಬಳಿಕ ಅಲ್ಲಿ ಈ ವಿಷಯದ ಬಗ್ಗೆ ವಿಶೇಷ ಚರ್ಚೆಗಳಾಗಿ ಪರಮಾತ್ಮನ ಸ್ವರೂಪ ಮತ್ತು ಇಷ್ಟಲಿಂಗದ ಅವಶ್ಯಕತೆ ಇವುಗಳು ಹೆಚ್ಚಿಗೆ ವಿವೇಚಿಸಲ್ಪಟ್ಟವು. ಈ ಸಂಗತಿಯು ಶೂನ್ಯಸಂಪಾದನೆಯೊಳಗಿನ 'ಸಿದ್ಧರಾಮೇಶ್ವರನ ಸಂಪಾದನೆ' ಮತ್ತು ಇತರ ಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆ. ಇದರ ಪರಿಣಾಮವಾಗಿ ಈ ಕಾಲದಲ್ಲಿ ದೇವರು ಒಬ್ಬನೇ ಇದ್ದಾನೆ, ಮತ್ತು ಅವನೊಬ್ಬನನ್ನೇ ವೀರಶೈವರು ಮನ್ನಿಸತಕ್ಕದು, ಎಂಬ ತತ್ವವು ಜನತೆಯಲ್ಲಿ ಪ್ರಚಾರ ಮಾಡಲ್ಪಟ್ಟಿತು.

## ಬಸವೇಶ್ವರನ ಕಾಲದ ಶಿವಶರಣರ ವಿಚಾರಗಳು.

ಆದರೆ ಹೀಗೆ ಪ್ರಚಾರ ಮಾಡಲ್ಪಟ್ಟ ಈ ತತ್ವವು ಆಗಿನ ವೀರಶೈವರಿಗೆ ಹೊಸದಾದದ್ದೆಂದು ತಿಳಿಯಲಿಕ್ಕೆ ಬರಲಾರದೆಂದು ನಾವು ಇಲ್ಲಿ ಹೇಳುವದು

ಅವಶ್ಯವದೆ. ಅದು ಮೊದಲಿನಿಂದಲೂ ಅವರಲ್ಲಿ ರೂಢವಾಗಹತ್ತಿತ್ತೆಂಬುದು ದೇವರದಾಸಿಮಯ್ಯ ಬಾಹೂರುಬೊಮ್ಮಯ್ಯ ಇವರ ಚರಿತ್ರೆಗಳಿಂದ ಕಂಡು ಬರುತ್ತದೆ. ಆದರೂ ಕೆಲವೊಂದು ಆಗಂತುಕ ವಿಶಿಷ್ಟ ಕಾರಣಕ್ಕೋಸ್ಕರ ಹರ-ಹರಿ ಅಥವಾ ಶಿವ-ವಿಷ್ಣು ಎಂಬ ಕಲಹಗಳು ಈ ಶತಮಾನದ ಮಧ್ಯ ದಲ್ಲಿ ಉತ್ಪನ್ನವಾಗಿ ಅವು ದೇಶದಲ್ಲಿ ಬಹಳ ಕೋಲಾಹಲವನ್ನುಂಟು ಮಾಡಿದವು. ಈ ಮೂಲಕ ವಿಪ್ಲವಗಳು, ಕರ್ನಾಟಕ ದೇಶದಲ್ಲಿ ಮತ್ತು ತಮಿಳ ದೇಶದಲ್ಲಿ, ಸಂಭವಿಸಿದವು. ಆದರೆ ಬಸವೇಶ್ವರನು ಮಂತ್ರಿಪದ ವನ್ನು ಸ್ವೀಕರಿಸಿದ ಬಳಿಕ ಅವನ ಸಮಕಾಲೀನರಾಗಿದ್ದ ವಚನಕಾರರು ಈ ವೈಷಮ್ಯ ಭಾವವನ್ನು ತೊಲಗಿಸಿ, ಸಮಾಜದಲ್ಲಿ ನೆಮ್ಮದಿಯನ್ನುಂಟು ಮಾಡಿದರು. ಪ್ರಭುದೇವ, ಸಿದ್ಧರಾಮೇಶ್ವರ, ಚನ್ನಬಸವ, ಮೋಳಿಗೆಯ ಮಾರಯ್ಯ, ಮಹಾದೇವಿಯಕ್ಕ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ, ಇವರು ಶಿವಾನುಭವ ಮಂಟಪದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದವರಾಗಿದ್ದರು. ಅವರೆಲ್ಲರೂ ಪರಮಾತ್ಮನ ಬಗ್ಗೆ ಶ್ರೇಷ್ಠತರದ ಉದಾರ ವಿಚಾರಗಳನ್ನೇ ತಮ್ಮ ವಚನಗಳಲ್ಲಿ ಹೊರಗೆಡವಿದ್ದಾರೆ

ಉದಾಃ— ಪ್ರಸಿದ್ಧ ವಚನಕಾರನಾದ ಮೋಳಗಿಮಾರಯ್ಯನು ಶಿವಾ ನುಭವ ಮಂಟಪದಲ್ಲಿದ್ದು ಅವನು ತನ್ನ ವಚನಗಳಲ್ಲಿ ಒಂದೆಡೆಗೆ "ರುದ್ರನೇ ದೇವರೆಂದು ಆರಾಧಿಸಿ ಶಿಲೆಯೊಳಗೆ ಹೊರಟಿಗೊಂಡು ಕೆಟ್ಟರಲ್ಲಾ ಭಕ್ತ ಜನಂಗಳು. ವಿಷ್ಣುವೇ ದೇವರೆಂದು ಆರಾಧಿಸಿ ಮರನ ಸುತ್ತಿ ಕೆಟ್ಟರಲ್ಲಾ ಭೂಸುರಾದಿಗಳು" ಎಂದು ನುಡಿದಿದ್ದಾನೆ. ಇಲ್ಲಿ ಅವನು 'ಭಕ್ತ ಜನಂ ಗಳು' ಎಂದರೆ ವೀರಶೈವರೆಂದೇ ಅವನ ಅಭಿಪ್ರಾಯವಿದ್ದು ಅವನು ತನ್ನ ಸಮಾಜದವರನ್ನೇ ಇಲ್ಲಿ ನಿಂದಿಸಿದ್ದಾನೆ. ದೇವರ ಬಗ್ಗೆ ಇಂಥ ಅಭಿಪ್ರಾಯವುಳ್ಳ ಅಸಂಖ್ಯ ವಚನಗಳು ಈ ಕಾಲದಲ್ಲಿ ರಚಿಸಲ್ಪಟ್ಟಿರು ತ್ತವೆ. ಅವುಗಳಲ್ಲಿ ಅನೇಕವುಗಳು ವಚನಶಾಸ್ತ್ರಸಾರ ಭಾಗ ೧ ಇದರಲ್ಲಿ ಕೊಡಲ್ಪಟ್ಟಿವೆ.

## ಶಿವಶರಣರು ಶಿವಾಲಯಗಳನ್ನು ಸ್ಥಾಪಿಸಲಿಲ್ಲ.

ಬಸವೇಶ್ವರನ ಕಾಲದಲ್ಲಿ ಈ ಪ್ರಕಾರ ದೇವರು ಒಬ್ಬನೇ ಇದ್ದಾನೆ ಮತ್ತು ಅವನನ್ನು ಇಷ್ಟಲಿಂಗದ ಮೂಲಕವಾಗಿಯೇ ಆರಾಧಿಸಬೇಕೆಂಬ ತತ್ವವು ಸಾರಲ್ಪಟ್ಟಿದ್ದರಿಂದ ದೇವಾಲಯಗಳನ್ನು ಕಟ್ಟಿಸುವ ಪದ್ಧತಿಯು

ಆಗಿನ ವೀರಶೈವರಲ್ಲಿ ನಿಂತು ಹೋಯಿತು. ಸಿದ್ಧರಾಮೇಶ್ವರನು ಸುಂದರವಾದ ದೇವಾಲಯಗಳನ್ನು ಕಟ್ಟುವದರಲ್ಲಿ ಬಹಳ ಮಗ್ನನಾಗಿದ್ದನು. ಆದರೆ ಅಲ್ಲಮಪ್ರಭುವು ಅವನನ್ನು ಕಂಡು "ಹೀಗೆ ಗುಡಿಗಳನ್ನು ಕಟ್ಟಿಸಬೇಡ. ದೇಹವೇ ದೇಗುಲವಾಗಿದ್ದು ಅಲ್ಲಿಯೇ ಪರಮಾತ್ಮನನ್ನು ಕಾಣು" ಎಂದು ಬೋಧಿಸಿದನು. ಆದರೆ ಈ ಕಾಲದಲ್ಲಿ ಜೈನರೂ, ಕಾಳಾಮುಖ ಮೊದಲಾದ ಶೈವ ಪಂಥಿಗಳೂ, ಶಿವಾಲಯ ಮತ್ತು ವಿಷ್ಣು ದೇವಾಲಯಗಳನ್ನು ವಿಶೇಷವಾಗಿ ಕಟ್ಟಿಸುತ್ತಾ ಇದ್ದರು. ಕರ್ನಾಟಕವು ಆಗ ಶಿಲ್ಪಶಾಸ್ತ್ರದಲ್ಲಿ ಬಹಳ ಮುಂದುವರಿದ ದೇಶವಾಗಿತ್ತು. ಆದರೆ ಬಸವೇಶ್ವರ ಮೊದಲಾದ ಶಿವಶರಣರೂ ಅವರ ತರುವಾಯ ಉತ್ಪನ್ನರಾದ ವಚನಕಾರರೂ ಹೀಗೆ ದೇವಾಲಯಗಳನ್ನು ವೀರಶೈವರು ಕಟ್ಟಿಸಕೂಡದೆಂಬ ಅಭಿಪ್ರಾಯವನ್ನು ಪ್ರಸಾರ ಮಾಡಿದರು. ಇದರ ಪರಿಣಾಮವಾಗಿ ಬಸವೇಶ್ವರನ ಕಾಲದಲ್ಲಿ ಶಿವಾಲಯಗಳನ್ನು ಕಟ್ಟಿಸುವದು ಅಥವಾ ವಿಷ್ಣು ದೇವಾಲಯಗಳನ್ನು ಕೆಡಿಸುವದು ಸ್ವಾಭಾವಿಕವಾಗಿ ನಿಂತು ಹೋಯಿತು.

## ಶಿವಶರಣರು ಮಠಗಳನ್ನು ಸ್ಥಾಪಿಸಿದರು

ಆದರೆ ಬಸವಾದಿ ಪ್ರಮಥರ ಕಾಲದ ವೀರಶೈವರು ದೇವಾಲಯಗಳನ್ನು ಕಟ್ಟಿಸುವದರ ಬದಲು ಗ್ರಾಮಾಂತರಗಳಲ್ಲಿ ಮಠಗಳನ್ನು ಸ್ಥಾಪಿಸುತ್ತಾ ಹೋದರು. ಇದು ವೀರಶೈವ ಸಮಾಜದ ಒಂದು ವೈಶಿಷ್ಟ್ಯವು. ಈ ಮಠಗಳಲ್ಲಿ ಅವರು ಜಂಗಮರನ್ನು ಇಟ್ಟು ತತ್ವಬೋಧೆಯು ಮತ್ತು ಶಿಕ್ಷಣ ಪ್ರಸಾರದ ಕಾರ್ಯಗಳು ದೇಶದಲ್ಲೆಲ್ಲ ನಿರಂತರ ನಡಿಯುವ ಯೋಜನೆಯನ್ನು ಮಾಡಿದರು. ಇಲ್ಲಿ ಮಠಾಧಿಪತಿಗಳು ಶಿವಶರಣರ ವಚನ ಗ್ರಂಥಗಳ ಸಂಗ್ರಹವನ್ನು ಮಾಡಿ ಜನರಲ್ಲಿ ಧರ್ಮದ ಪ್ರಭಾವವನ್ನು ಬೀರುವ ಕಾರ್ಯವನ್ನು ಕೈಕೊಂಡರು. ಇದರಿಂದ ವೀರಶೈವರು ವಾಸವಾಗಿರುವ ಭಾಗಗಳಲ್ಲೆಲ್ಲ ಮಠಗಳು ಸ್ಥಾಪಿಸಲ್ಪಟ್ಟವು. ಅವುಗಳಿಗೆ ಆಗಿನ ಜನರು ಸ್ಥಿರತರವಾದ ಆದಾಯಗಳನ್ನು ಕಲ್ಪಿಸಿ ನಿರಂತರ ಧರ್ಮಕಾರ್ಯಗಳೂ ಧರ್ಮಬೋಧೆಯೂ ನಡೆಯುವ ಏರ್ಪಾಡು ಮಾಡಿದರು. ಬಸವೇಶ್ವರನ ಕಾಲದಲ್ಲಿ ಯಾವ ಶಿವಾನುಭವ ಮಂಟಪವು ಉದಯವಾಯಿತೋ ಅದರ ಸ್ವರೂಪು ಮುಂದೆ ಗ್ರಾಮಾಂತರಗಳಲ್ಲಿ ಸ್ಥಾಪಿಸಲ್ಪಟ್ಟ ಮಠಗಳಲ್ಲಿ ಚಿರಸ್ಥಾಯಿಯಾಗಿ ಉಳಿಯಿತು. ಈ ಮಠಗಳ ಮೂಲಕ ದೇವಗಿ

ರಿಯ ಯಾದವ ರಾಜರು ಉತ್ತರ ಕರ್ನಾಟಕದಲ್ಲಿ ಮತ್ತು ಹೊಯ್ಸಳ ರಾಜರು ದಕ್ಷಿಣ ಕರ್ನಾಟಕದಲ್ಲಿ ರಾಜ್ಯವಾಳುವ ವರೆಗೂ ವಚನಕಾರರ ತತ್ವಗಳು ದೇಶದಲ್ಲೆಲ್ಲ ಪ್ರಚಾರ ಮಾಡಲ್ಪಟ್ಟವು. ಆದರೆ ಮುಂದೆ ಮುಸಲ್ಮಾನರ ದಾಳಿಗಳು ಬರಲು ಈ ಎರಡೂ ರಾಜ್ಯಗಳು ಲಯವನ್ನು ಹೊಂದಿದವು. ಆಗ ಮಾತ್ರ ಕೆಲವು ಕಾಲ ದೇಶದಲ್ಲಿ ಅವ್ಯವಸ್ಥೆಯುಂಟಾಗಿ ಶಿವಶರಣರ ವಚನ ವಾಙ್ಮಯವನ್ನು ಅಭ್ಯಾಸ ಮಾಡುವದು ನಿಂತು ಹೋಯಿತು.

ಈ ಮೇರೆಗೆ ಈ ವಿಷಯದ ಐತಿಹಾಸಿಕ ವಿವೇಚನೆಯು ಇದ್ದು ಮುಂದಿನ ಸಂಚಿಕೆಯಲ್ಲಿ ನಾವು ಬಸವೇಶ್ವರನ ತರುವಾಯದ ಕಾಲ ವನ್ನು ಕುರಿತು ಹೆಚ್ಚಿಗೆ ಪ್ರಸ್ತಾಪಿಸುವೆವು

---

## ಶೋಚನೀಯ ನಿಧನ.

ಗುಳೇದಗುಡ್ಡ ಮುನಸಿಪಲ್ ಎಸ್. ಎಮ್. ಸ್ಕೂಲಿನ ಶಿಕ್ಷಕರಾದ ಶ್ರೀಮಾನ್ ಬಿ. ಟಿ. ಗಚ್ಚಿನಮನಿ ಎಮ್. ಎ. ಬಿ. ಟಿ ಇವರು ತಾರೀಖು ೨೨-೨-೪೧ ನೇ ದಿವಸ ಕೈಲಾಸವಾಸಿಗಳೆಂದು ತಿಳಿಸಲು ನಮಗೆ ತುಂಬಾ ವ್ಯಸನವಾಗುತ್ತದೆ. ಇವರು ಬಡತನದಲ್ಲಿ ಹುಟ್ಟಿ ಬೆಳೆದು ಉಚ್ಚ ಶಿಕ್ಷಣ ವನ್ನು ಪಡೆದು ಆದರ್ಶ ಶಿಕ್ಷಕರೆನಿಸಿಕೊಂಡರು. ಇವರು ತಾವು ಪಡೆದ ಶಿಕ್ಷಣಕ್ಕನುಗುಣವಾಗಿ ವಾಙ್ಮಯ ಸೇವೆಯಲ್ಲಿ ನಿರತರಾಗಿದ್ದರು. ಐಹೊಳೆಯಲ್ಲಿ ದೊರೆತ ಶಿಲಾಶಾಸನಗಳ ಆಧಾರದಿಂದ "ಪಾಳೆಯಗಾರ" ಎಂಬ ಐತಿಹಾಸಿಕ ಕಾದಂಬರಿಯನ್ನು ಬರೆದಿದ್ದಾರೆ. ಅಲ್ಲದೆ ಅವರು ಕನ್ನಡ ವಾಙ್ಮಯವನ್ನು ಚನ್ನಾಗಿ ಅಭ್ಯಾಸಿಸಿ "ಕಲ್ಪವೃಕ್ಷ" ಎಂಬ ಸಂಶೋಧನಾತ್ಮಕ ಗ್ರಂಥವನ್ನು ಬರೆದು ಅದರ ಹಸ್ತಲಿಖಿತ ಪ್ರತಿಯನ್ನು ನಮ್ಮ ಕಡೆಗೆ ಅಭಿಪ್ರಾಯಕ್ಕೋಸ್ಕರ ಕಳಿಸಿದ್ದರು. ಅದರಲ್ಲಿಯ ಕೆಲವು ಪುಟ ಗಳನ್ನು ನಾವು ಈ ಸಂಚಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ. ಇಷ್ಟರಲ್ಲಿಯೇ ಅವರು ಅಕಸ್ಮಾತ್ತಾಗಿ ಶಿವಾಧೀನರಾದದ್ದು ನಮಗೆ ತಿಳಿಯಬಂದಿದೆ. ಇದಕ್ಕೋಸ್ಕರ ನಾವು ಬಹಳ ವಿಷಾದ ಪಡುತ್ತೇವೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನೀಲಿ.

— ಸಂಪಾದಕ

# ವೈಯಾಕರಣ ಭೀಮ ಅಥವಾ ಭೀಮಸೇನ.

ಲೇಖಕರು:— ಪ್ರೊಫೆಸರ ಕೆ. ಜಿ. ಕುಂದಣಗಾರ ಎಮ್. ಎ.
(ರಾಜಾರಾಮ ಕಾಲೇಜ ಕೊಲ್ಹಾಪೂರ.)

---

ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ ಕನ್ನಡದ ಧಾತು ಕೋಶವನ್ನು ಬರೆಯಲಾರಂಭಿಸುವಾಗ—

ವೇದಸಮನಾಗಿ ಭೀಮನಿ
ನಾದುದು ಸಂಸ್ಕೃತದ ಧಾತುಪಾಠರದಿಂದಂ ॥
ಯಾದವ ಕಟಕಾಚಾರ್ಯನಿ
ನಾದುದು ಕರ್ಣಾಟಧಾತು ಕವಿಕೇಶವನಿಂ ॥

ಎಂಬ ಪದ್ಯದಿಂದ ಸರ್ವಸಮ್ಮತವಾದ **ಭೀಮನ** ಸಂಸ್ಕೃತದ ಧಾತು ಕೋಶವನ್ನು ಅನುಸರಿಸಿ ತಾನು ಈ ಕೋಶವನ್ನು ರಚಿಸಿದಂತೆ ಹೇಳುತ್ತಾನೆ. ಆದರೆ ಈ ಸಂಸ್ಕೃತದ ಕೋಶವನ್ನು ರಚಿಸಿದ ಭೀಮನು ಯಾರೆಂಬುದನ್ನು ತನ್ನ ವೃತ್ತಿಯಲ್ಲಿ ಹೇಳಿಲ್ಲ. ಕನ್ನಡಪಂಡಿತರಾರೂ ಈತನ ಬಗ್ಗೆ ಬರೆದಂತೆ ತಿಳಿದುಬರುವುದಿಲ್ಲ. ಆದುದರಿಂದ ಈ ಭೀಮನು ಯಾರೆಂಬುದನ್ನು ಇಲ್ಲಿಯ ವರೆಗೆ ನನಗೆ ಹೇಳಲುಬರುತ್ತಿರಲಿಲ್ಲ. ಈಗ ಶ್ರೀಮಾನ್ ಪಿ. ಕೆ. ಗೋಡೆಯವರು *New Indian Antiquary* ಎಂಬ ಮಾಸಿಕದ ಸಂಪುಟ ೨ ಸಂಚಿಕೆ ೨ರಲ್ಲಿ ಈತನ ಬಗ್ಗೆ ಒಂದು ಪುಟ್ಟ ಲೇಖವನ್ನು ಬರೆದಿದ್ದಾರೆ. ಅದರ ಆಧಾರದಿಂದ ಈ ಲೇಖನವು ಬರೆಯಲಾಗಿದೆ.

ಡಾ॥ ಎಸ್. ಕೆ. ಬೆಳವಳಕರರವರು ತಮ್ಮ *Systems of Sanskrit Grammar* ಎಂಬ ಪುಸ್ತಕದ 'ಧಾತುಪಾಠ' ಎಂಬ ಪರಿಚ್ಛೇದದಲ್ಲಿ ಹೀಗೆಂದಿದ್ದಾರೆ:- (ಅದರ ಭಾಷಾಂತರವು ಇಲ್ಲಿ ಕೊಡಲಾಗಿದೆ.)

'ಮಾಧವೀಯ ಧಾತುವೃತ್ತಿಯು ಅದೇ ವಿಷಯವನ್ನು ವಿವೇಚಿಸುತ್ತಿದೆ. ಅದನ್ನು ಬರೆದವರು ಮಾಧವಾಚಾರ್ಯರಿರಬಹುದು, ಅಥವಾ ವೇದಭಾಷ್ಯಕಾರರಾದ ಸಾಯಣಾಚಾರ್ಯರಿರಬಹುದು. ಅವರು (ಸಾಯಣಾಚಾರ್ಯರು) ೩ ತಮ್ಮಕ್ಕಿಂತ ಪೂರ್ವದಲ್ಲಿ ಇದ್ದ ವೈಯಾಕರಣರ

ದುಡಿಮೆಯ ಫಲಗಳನ್ನು ಒಪ್ಪಿಕೊಂಡು ಅಲ್ಲಿ ಉಪಯೋಗಿಸಿಕೊಂಡಿದ್ದಾರೆ; ಮತ್ತು ಅವರೆಲ್ಲರ ಹೆಸರುಗಳನ್ನು ಹೇಳಿದ್ದಾರೆ. ಅವರಲ್ಲಿ **ಪಾಣಿನಿಯ ಮಾರ್ಗವನ್ನು ಅನುಸರಿಸಿದ ಭೀಮಸೇನ, ಮೈತ್ರೇಯ ರಕ್ಷಿತರ** ಹೆಸರುಗಳನ್ನು ಪ್ರಾಮುಖ್ಯವಾಗಿ ಹೇಳಬಹುದು.

ಸಾಯಣಾಚಾರ್ಯರು ಸು. ಕ್ರಿ. ಶ. ೧೩೫೦ ರಲ್ಲಿದ್ದವರು. ಆದುದರಿಂದ ಅವರು ಆಧುನಿಕ ಸೌಕರ್ಯಗಳಿಲ್ಲದ ಆ ಕಾಲದಲ್ಲಿ ಭೀಮಸೇನನ ಹೆಸರನ್ನೆತ್ತಿ ಹೇಳಬೇಕಾದರೆ ಆತನು ಸು. ೧೩೦೦ಕ್ಕಿಂತಲೂ ಪೂರ್ವದವನಾಗಿರಬೇಕು. ಆ ಕಾರಣ ೧೩೦೦ ಆತನ ಕಾಲದ ಈಚೆಯ ಮಟ್ಟು ಎಂದು ಭಾವಿಸಬಹುದು. ಇನ್ನು ಪೂರ್ವದ ಮಟ್ಟನ್ನು ಶೋಧಿಸುತ್ತಿರುವಾಗ ಕೆಲವು ಆಧಾರಗಳು ದೊರೆಯುತ್ತವೆ.

ಆಫ್ರೆಷ್ಟನು ತನ್ನ ಕ್ಯಾಟಾಲೊಗೊಸ್ ಕ್ಯಾಟಾಲೊಗೊರಮ್ ಎಂಬ ಪುಸ್ತಕದಲ್ಲಿ **ಭೀಮಸೇನನ ಧಾತುಪಾಠದ** ಕೆಲವು ಪ್ರತಿಗಳ ವಿವರವನ್ನು ಹೇಳಿದ್ದಾನೆ; ಮತ್ತು ಆತನು **ಭೈಮಿವ್ಯಾಕರಣದ** ಕರ್ತೃವೆಂದೂ, ರಾಯಮುಕುಟ ಮತ್ತು ಪದ್ಮನಾಭರು ಆಗ್ರಂಥದಿಂದ ಉದಹರಿಸಿದಂತೆಯೂ ಹೇಳುತ್ತಾನೆ. ಭಾಂಡಾರಕರ ಓರಿಯೆಂಟಲ್ ರಿಸರ್ಚ ಇನ್ಸ್ಟಿಟ್ಯೂಟದ (ಭಾಂಡಾರಕರ ಪೌರ್ವಾತ್ಯ ಸಂಶೋಧಕ ಸಂಸ್ಥೆಯ)ಲ್ಲಿನ ಹಸ್ತಲಿಖಿತ ಗ್ರಂಥಸಂಗ್ರಹದಲ್ಲಿ **ಭೀಮಸೇನನ** ಧಾತುಪಾಠದ ಮೂರು ಪ್ರತಿಗಳಿವೆ. ಇವುಗಳ ಬಗ್ಗೆ ಡಾ. ಬೆಳವಳಕರವರು ಹೀಗೆನ್ನುತ್ತಾರೆ.

'ಧಾತುಗಳ ಪಟ್ಟಿಯನ್ನು ಪಾಣಿನಿಯು ರಚಿಸಿದ್ದಾನೆ. **ಭೀಮಸೇನನು** ಆಧಾತುಗಳಿಗೆ ಅರ್ಥ ಬರೆದಿದ್ದಾನೆ. ಈಭೀಮಸೇನನು ಪ್ರಾಚೀನನು. ಈಧಾತುಪಾಠದ ಮೇಲೆ ಆತನು ಪ್ರದೀಪವೆಂಬ ಟೀಕೆಯನ್ನು ಬರೆದಿದ್ದಾನೆ.'

ಮ. ಮ. ಹರಪ್ರಸಾದ ಶಾಸ್ತ್ರಿಯವರು ಬಂಗಾಲ ರಾಯಲ್ ಏಸಿಯಾಟಿಕ್ ಸೊಸಾಯಟಿಯ ಗ್ರಂಥಸಂಗ್ರಹಾಲಯದೊಳಗಿನ ಧಾತುಪಾಠಗಳ ಪ್ರತಿಗಳ ಬಗ್ಗೆ ಹೀಗೆ ಬರೆದಿರುವರು. '೪೩೫೪ನೆಯ ನಂಬರಿನ ಪ್ರತಿಯು ಮೈತ್ರೇಯರಕ್ಷಿತನದು. ಆತನು ಬೌದ್ಧನು. ಪಾಣಿನಿಯ ಧಾತುಗಳ ಪಟ್ಟಿಗೆ ಟೀಕಾಕಾರನವನು. **ಭೀಮಸೇನನಿಗಿಂತ** ಈಚೆಯ

ವನು.' ತ್ರಿಶಬಾಬುವಿನ ಅಭಿಪ್ರಾಯದ ಮೇರೆಗೆ ವೈ
ಕಾಲ ಸು. ೧೧೦೦. ಭೀಮಸೇನನು ಇವನ ಪೂರ್ವ
ದರಿಂದ ಈ ಆಧಾರದಿಂದ ಅವನು ೧೧೦೦ ಕ್ಕಿಂತ ಸ
ಎಂದಾಯಿತು. ಅಂದರೆ ಅವನ ಕಾಲ ೧೩೦೦ ರಿಂದ ೨೦೦ ವರ್ಷ
ಹಿಂದೆ ಹೋದಂತಾಯಿತು.

ಭೀಮಸೇನನ ಕಾಲವನ್ನು ಇನ್ನೂ ಹಿಂದಕ್ಕೊಯ್ಯಲು ಮತ್ತೊಂದು ಬಲವಾದ ಆಧಾರವಿದೆ. ಉಮಾಸ್ವಾತ್ಯಾಚಾರ್ಯರು ತತ್ವಾರ್ಥಸೂತ್ರ ವೆಂಬ ಆಗಮಗ್ರಂಥವನ್ನು ರಚಿಸಿರುವರಷ್ಟೇ. ಅವರ ಕಾಲ ಕ್ರಿ. ಶ. ದ ೧ನೆಯ ಮತ್ತು ೪ನೆಯ ಶತಮಾನಗಳ ಮಧ್ಯದಲ್ಲಿ ಎಲ್ಲಿಯೋ ಇರಬಹುದೆಂದು ಪ್ರೊ ಎಚ್. ಆರ್. ಕಪಾಡಿಯಾರವರು ನಿರ್ಣಯಿಸುತ್ತಾರಾದರೆ ಸತೀಶಚಂದ್ರವಿದ್ಯಾಭೂಷಣರು ಅವರು ಕ್ರಿ. ಶ. ೧ರಿಂದ ೮೫ರ ಮಧ್ಯೆ ಇದ್ದರೆಂದು ನಿರ್ಣಯಿಸುತ್ತಾರೆ. ಅದು ಹೇಗೆಯೇ ಇದ್ದರೂ ಉಮಾಸ್ವಾತ್ಯಾಚಾರ್ಯರು ೪ನೆಯ ಶತಮಾನಕ್ಕೆ ಹಿಂದೆ ಇದ್ದವರೆಂಬುದು ನಿರ್ವಿವಾದದ ಮಾತು. ಇನ್ನು ಸಿದ್ಧಸೇನ ಗಣಿಯವರು ಆಚಾರ್ಯರ ತತ್ವಾರ್ಥಸೂತ್ರ ಭಾಷ್ಯಕ್ಕೆ ವಿಸ್ತಾರವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಸಿದ್ಧಸೇನಗಣಿಯವರು ಕ್ರಿ. ಶ. ೭ನೆಯ ಶತಮಾನಕ್ಕೆ ಈಚೆಯವರಲ್ಲವೆಂದು ಪ್ರೊ ಕಾಪಾಡಿಯಾರವರು ಆಪುಸ್ತಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ಸತೀಶಚಂದ್ರ ವಿದ್ಯಾಭೂಷಣರಾದರೋ ತಮ್ಮ *History of Indian Logic* ಎಂಬ ಪುಸ್ತಕದ ಪು. ೧೮೩ರಲ್ಲಿ ಸಿದ್ಧಸೇನಗಣಿಯವರ ಸು. ೬೦೦. ರಲ್ಲಿ ಇದ್ದವರೆಂದು ನಿರ್ಣಯಿಸಿದ್ದಾರೆ. ಈಸಿದ್ಧಸೇನಗಣಿಯವರ ವ್ಯಾಖ್ಯಾನದಲ್ಲಿ ವೈಯಾಕರಣ **ಭೀಮಸೇನನನ್ನು** ಆಧರಿಸಿರುವದರಿಂದ ಭೀಮಸೇನನ ಕಾಲವನ್ನು ಸು. ಕ್ರಿ. ಶ. ೬೦೦ಕ್ಕೆ ತುಸು ಹಿಂದೆ ಒಯ್ಯಲು ಆಧಾರದೊರೆತುದಾಗಿದೆ. ಇದೇ ಪೂರ್ವದ ಮಟ್ಟು ಎಂದು ಗ್ರಹಿಸಬಹುದು.

ಉಮಾಸ್ವಾತ್ಯಾಚಾರ್ಯರ ಭಾಷ್ಯವು ಹೀಗಿದೆಃ—

**"चिती संज्ञानविशुद्धयोः धातुः । तस्य चित्तमिति भवति निष्ठान्तमौणादिकंच ।"**

ಇದರ ಮೇಲೆ ಸಿದ್ಧಸೇನಗಣಿಯವರ ವ್ಯಾಖ್ಯಾನವುಃ—

" चिती संज्ञानविशुद्धयोर्धातुरित्यादि । भीमसेनात्परतोऽन्यै-वैयाकरणैरर्थद्वये पठितो धातुः संज्ञाने विशुद्धौच । इह विशुद्धर्थस्य सह सञ्ज्ञानेन ग्रहणम् । अथवानेकार्था धातवः इति सञ्ज्ञाने पठितो विशुद्धावपि वर्तते । भाष्यकृता चोप युज्यमानमेवार्थमाभिसन्धाय विशुद्धिरपि पठिता तस्य चित्तमिति रूपं भवति निष्ठान्तमौणादिकं च चेततीति चित्तं विशुद्धयतीत्यर्थः "

ಇಲ್ಲಿ ಭೀಮಸೇನನನ್ನು ಆಧರಿಸಿರುವುದು ಧಾತುಪಾಠದ ಭೀಮಸೇನನೆಂಬುದು ಸ್ಪಷ್ಟವಾಗಿದೆ. ಸಿದ್ಧಸೇನಗಣಿಯವರ ವ್ಯಾಖ್ಯಾನದಲ್ಲಿ ಭೀಮಸೇನನಿಂದ ತೆಗೆದುಕೊಂಡ ಬೇರೆ ಆಧಾರಗಳಿರಬಹುದು. ಸಂಶೋಧಕರು ಅವುಗಳನ್ನು ಶೋಧಿಸುವುದು ಆವಶ್ಯಕ. ಈತನ ವಿಷಯವಾಗಿ ಮತ್ತೆ ಯಾವ ಸಂಗತಿಗಳೂ ತಿಳಿಯುವುದಿಲ್ಲ.

ಮೇಲಿನ ವಿವೇಚನೆಯಿಂದ ಕೆಳಗಿನ ನಿರ್ಣಯಗಳನ್ನು ಕಂಡುಕೊಳ್ಳಬಹುದು.

೧ ವೈಯಾಕರಣ ಭೀಮ ಅಥವಾ **ಭೀಮಸೇನನು** ಧಾತುಪಾಠವನ್ನು ರಚಿಸಿದ್ದಾನೆ. ಅವನು ಕ್ರಿ. ಶ. ೬೦೦ಕ್ಕೆ ತುಸು ಹಿಂದೆ ಇದ್ದವನು. **ಕೇಶಿರಾಜನು** ತನ್ನ ಧಾತುಕೋಶದಲ್ಲಿ ಈತನನ್ನು ಅನುಸರಿಸಿದ್ದಾನೆ.

೨ ಈತನು ಯಾವ ಮತದವನೆಂಬುದು ತಿಳಿದುಬಂದಿಲ್ಲ. ಒಂದು ವೇಳೆ ಜೈನನಲ್ಲೆಂದು ಭಾವಿಸುವುದಾದರೆ ೬ನೆಯ ಶತಮಾನದಲ್ಲಿ ತತ್ವಾರ್ಥಸೂತ್ರದಂತಹ ಆಗಮಗ್ರಂಥದ ವ್ಯಾಖ್ಯಾನದಲ್ಲಿ ಮತದ್ವೇಷವೇನೂ ಇಲ್ಲದೆ ಭೀಮಸೇನನ ಧಾತುಪಾಠದ ಆಧಾರವನ್ನು ಗ್ರಹಿಸುವುದು ಧರ್ಮಸಹಿಷ್ಣುತೆಯ ಉದಾಹರಣೆ. ಇದೆಲ್ಲ ಊಹೆ ಮಾತ್ರ.

೩ ಅದನ್ನು ಸರ್ವಸಮ್ಮತವೆಂದು ಕೇಶಿರಾಜನು ಒಪ್ಪಿಕೊಳ್ಳುವುದು ಆತನ ಗುಣಗ್ರಾಹಕತೆ.

೪ ಇದರಿಂದ ಕೇಶಿರಾಜನು ಸಂಸ್ಕೃತ ಪಂಡಿತನೆಂದೂ, ಆತನು ಸಿದ್ಧಸೇನನ ವ್ಯಾಖ್ಯಾನವನ್ನು ಓದಿದವನೆಂದೂ ಊಹಿಸಿದರೆ ತಪ್ಪಾಗದು.

---

# ರೆಮ್ಮವ್ವೆಯ ವಚನಗಳು.

## ಮಹೇಶ್ವರನ ಭಕ್ತ.

(೧) ವ್ರತವೆಂಬುದೇನೋ? ವಸ್ತುವ ಕಾಂಬುದಕ್ಕೆ ನಿಚ್ಚಣಿಗೆ. ವ್ರತವೆಂಬುದೇನೋ ಇಂದ್ರಿಯಂಗಳ ಸಂದ ಮುರಿವ ಕುಜಕುಠಾರ. ವ್ರತವೆಂಬುದೇನೋ ಸಕಲ ವ್ಯಾಪಾರಕ್ಕೆ ದಾವಾನಲ. ವ್ರತವೆಂಬುದೇನೋ ಸರ್ವದೋಷನಾಶಕ. ವ್ರತವೆಂಬುದೇನೋ ಚಿತ್ತ ಸುಯಿಧಾನದಿಂದ ವಸ್ತುವ ಕಾಂಬುದಕ್ಕೆ ಸಾಧಕ. ವ್ರತವೆಂಬುದೇನೋ ಆಚಾರವೇ ಪ್ರಾಣವಾದ ರಾಮೇಶ್ವರನ ಲಿಂಗವು ಅವರಿಗೆ ಚೊಚ್ಚಲುಮಗನಾಗಿಪ್ಪನು.

(೨) ಆಚಾರ ಭಾವಕ್ಕೆ ಒಳಗಾಗದ ವಸ್ತು, ಆಚಾರ ಭ್ರಮೆಗೆ ಹೊರಗಾದ ವಸ್ತು, ಆಚಾರಾಚಾರಕ್ಕೆ ಒಳಗಾಗದ ವಸ್ತು, ಆಚಾರನಾಚಾರಕ್ಕೆ ಹೊರಗಾದ ವಸ್ತು. ಆಚಾರ ಶ್ರದ್ಧೆ ಇದ್ದಲ್ಲಿ ನೀನೆಂಬೆ. ಆಚಾರಕ್ಕೆ ಪ್ರಾಣವಾದ ರಾಮೇಶ್ವರಲಿಂಗ ಆ ಗುಣವಿಲ್ಲದಿರ್ದಡೆ ನೀನು ಎನ್ನವನಲ್ಲ ಎಂಬೆ.

(೩) ಗುರುವಾದಡೂ ಆಚಾರಭ್ರಷ್ಟನಾದಡೆ ಅನುಸರಿಸಲಾಗದು. ಲಿಂಗವಾದಡೂ ಆಚಾರ ಹಳುವಾದಲ್ಲಿ ಪೂಜಿಸಲಾಗದು. ಜಂಗಮವಾದಡೂ ಆಚಾರ ಅನುಸರಣೆಯಾದಲ್ಲಿ ಕೂಡಲಾಗದು. ಆಚಾರವೇ ವಸ್ತು, ವ್ರತವೇ ಪ್ರಾಣ, ಕ್ರಿಯೆಯೇ ಜ್ಞಾನ, ಜ್ಞಾನವೇ ಆಚಾರ ಪ್ರಾಣವಾದ ರಾಮೇಶ್ವರಲಿಂಗವು ತಾನೆ.

(೪) ಆಚಾರ ಅನುಸರಣೆಯಾದಲ್ಲಿ ಅಲ್ಲ ಅಹುದೆಂದು ಶೃತದಲ್ಲಿ ಕೇಳಿ ದೃಷ್ಟದಲ್ಲಿ ಕಂಡು ಅನುಮಾನದಲ್ಲರಿದು ಸಂದೇಹವ ಬಿಟ್ಟು ಅದ ಕಂಡ ಮೇಲೆ ಆತನಂಗವ ಕಂಡಡೆ ಸಂಗದಲ್ಲಿ ನುಡಿದಡೆ ಲಿಂಗಕ್ಕೆ ಸಲ್ಲ, ಜಂಗಮಕ್ಕೆ ದೂರ. ಅದು ಕುಂಭಿನೀನರಕ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಸಲ್ಲದ ನೇಮ.

(೫) ತಾ ಮಾಡುವ ಕೃಷಿಯ ಮಾಡುವನ್ನಬರ ಮಾಡಿ, ಕೃಷಿ ತೀರಿದ ಮೇಲೆ ಗುರುದರ್ಶನ, ಲಿಂಗಪೂಜೆ, ಜಂಗಮಸೇವೆ, ಶಿವಭಕ್ತರ

ಸುಖಸಂಭಾಷಣೆ, ಶರಣರ ಸಂಗ ಈ ನೇಮವನರಿವುತಿಪ್ಪುದು ಸದ್ಭಕ್ತ ಸದಾತ್ಮನ ಮುಕ್ತಿ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗಕ್ಕೆ ಆತನೇ ಚೇತನಭಾವ.

(೬) ವ್ರತಿಗಳ ಮನೆಗೆ ವ್ರತಿಗಳು ಬಂದಲ್ಲಿ ಎನ್ನ ಮನೆಗೆ ಇವರು ಬಂದರೆಂದು ಭಿನ್ನಭಾವವಾದಾಗಳೇ ವ್ರತಕ್ಕೆ ದೂರ. ಆಚಾರಕ್ಕೆ ಕೊರತೆ. ತಮ್ಮ ಮನೆಗೆ ತಾವು ಬಂದರೆಂದು ಅನ್ಯಭಾವವಿಲ್ಲದೆ, ಅರ್ಥ ಪ್ರಾಣಾಭಿಮಾನವೆಂದು ಕಟ್ಟುಮಾಡಿದೊಡೆ ಸಮಯಾಚಾರಕ್ಕೆ ದೂರ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಒಪ್ಪದ ನೇಮ.

(೭) ಸರಸಕ್ಕೆ ಸತ್ತವರುಂಟೇ ? ವಿನೋದಕ್ಕೆ ಪರದಾರವ ಮಾಡಿದವರುಂಟೇ ? ಅರ್ಥಿಗೆ ಕಣ್ಣ ಕುತ್ತಿದರೆ ಆ ಕೆಟ್ಟ ಕೇಡು ಅದಾರಿಗೆ ಕೊರತೆ, ಹೇಳಾ ? ಭಕ್ತ ಜಂಗಮದಲ್ಲಿ ಚಚ್ಚುಗೋಷ್ಠಿಯ ಮಾಡುವ ಮಿಟ್ಟಿಯ ಭಂಡರಿಗೆ ಸತ್ಯ ಸದಾಚಾರ ಮುಕ್ತಿ ಭಾವವೆಂದೂ ಇಲ್ಲ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಸಲ್ಲದ ನೇಮ.

(೮) ಅಡಗು, ಸುರೆ, ಕಟುಕ, ಪರದಾರ, ಪರಪಾಕ ಇಂತಿದನು ಬೆರಸುವವರನಾ ಬೆರೆಸೆನೆಂದು ಅವರ ನಿರೀಕ್ಷಿಸೆನೆಂದು ಮತ್ತದನು ಮರೆದು ತ್ರಿವಿಧದಾಸೆಯ ಕುರಿತು ಮತ್ತವರ ಸಂಗವ ಮಾಡಿದೆನಾದಡೆ ಲಿಂಗಕ್ಕೆ ಸಲ್ಲ. ಜಂಗಮಕ್ಕೆ ದೂರ. ಪ್ರಸಾದವಿಲ್ಲ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವಾದಡೂ ವ್ರತಭ್ರಷ್ಟನೆಂದು ಬಿಡುವೆ.

(೯) ಆಚೆಯಲ್ಲಿ ಕೇಳಿದ ಮಾತ ಈಚೆಯಲ್ಲಿ ನುಡಿದು ಮತ್ತಾಚೆಯಲ್ಲಿ ಬೆರಿಸುವವ ಭಕ್ತನಲ್ಲ. ಆತನ ಸತಿಯ ಈಚೆಯಲಿ ಕೂಡಿ ಆತನಿದ್ದಾಗ 'ಅಮ್ಮಾ' ಎಂದು ಆತ ಸಂದಲ್ಲಿ ಸತಿ ಎಂಬ ಭಂಡರಿಗೇಕೆ ವ್ರತನೇಮ ನಿತ್ಯ ? ಇಂತಿವರ ಕಳೆದುಳಿಯಬೇಕು, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವನರಿವುದಕ್ಕೆ.

(೧೦) ವಿಪ್ರಂಗೆ ವೇದ ಮಂತ್ರವ ಬಿಟ್ಟು, ವಿಜಾತಿಯಲಿ ಬೆರಿಸಲಿಕ್ಕೆ ಸುಜಾತಿಗೆ ಹೊರಗಪ್ಪರೆಂಬರು ನೋಡಾ. ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗ ಮುಂತಾದ ನಾನಾ ವ್ರತ ನೇಮ ನಿತ್ಯದ ಭಾವವ ಬಿಟ್ಟು ಬಂದವನ ಗುರುವಾದಡು, ಲಿಂಗವಾದಡು, ಜಂಗಮವಾದಡು, ನೋಡಿದಡೆ ನುಡಿಸಿದಡೆ ಎನ್ನವ್ರತಕ್ಕದೇ ಭಂಗ. ಅನುಸರಣೆಯಲ್ಲಿ ಬಂದ

ವರ ಕಂಡು ಕೇಳಿ, ಅವರಂಗಣವ ಕೂಡಿಕೊಂಡವರ, ಇದ ನಾನರಿತು, ಅಂಗೀಕರಿಸಿದೆನಾದಡೆ, ಇಹಪರಕ್ಕೆ ಹೊರಗು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವಾಯಿತ್ತಾದಡೂ ವ್ರತಬಾಹ್ಯವಾದಡೆ ಎತ್ತಿಹಾಕುವೆನು.

(೧೧) ಭಾಜನಕ್ಕೆ ಸರ್ವಾಂಗ ಪಾವುಡವ ಬಾಸಣಿಸುವಾಗ ಅದು ಆ ಕುಂಭಕ್ಕೋ, ತನ್ನ ಅಂಗಕ್ಕೋ, ಎಂಬುದನರಿದು ಸರ್ವಾಂಗ ಪಾವುಡನ ಕಟ್ಟುವ ವಿವರ. ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಚತುರ್ಭಾವದ ಸೆರಗಿನಲ್ಲಿ ಗುಹ್ಯೇಂದ್ರಿಯವೆಂಬವಂ ಕಳೆದು ಜಿಹ್ವೇಂದ್ರಿಯವೆಂಬ ಅಂಗಭಾಜನಕ್ಕೆ ಸರ್ವಾಂಗ ಪಾವುಡವಂ ಕಟ್ಟಿ ಮಣ್ಣೆಂಬಾಸೆಯ ಬಿಟ್ಟು ಹೊನ್ನೆಂಬಾಸೆಯ ಬಿಟ್ಟು ಹೆಣ್ಣೆಂಬ ಮೋಹದಲ್ಲಿ ಮಗ್ನವಾಗದೆ, ಮಣ್ಣೆಂಬಾಸೆ ಗುರುವಿನಲ್ಲಿ ಹೊನ್ನೆಂಬಾಸೆ ಲಿಂಗದಲ್ಲಿ ಹೆಣ್ಣೆಂಬ ಮೋಹ ಜಂಗಮದಲ್ಲಿ ಕೊಡುವ ವ್ರತವನರಿಯದೆ ಮಣ್ಣ ಮಡಕೆಯ ಗನ್ನದಲ್ಲಿ ಕಟ್ಟಿದಡೆ, ಪ್ರಸನ್ನ ವ್ರತದಣ್ಣಗಳೆಲ್ಲರೂ, ಇದ ಚೆನ್ನಾಗಿ ತಿಳಿದು ನೋಡಲಾಗಿ, ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ ವ್ರತನೇಮ ಹರಿಯಿತ್ತು.

(೧೨) ಖಂಡಿತ ವ್ರತದ ನಿರಂಗನ ವ್ರತವೆಂತುಟು ಎಂದರೆ, ತನ್ನ ಸತಿಗೆ ಗರ್ಭ ತಲೆದೋರಿದಲ್ಲಿಯೇ ಮುಖವ ಕಾಂಬುದಕ್ಕೆ ಮುನ್ನವೇ ಲಿಂಗಧಾರಣವ ಮಾಡಿ, ನೋಡಿದ ಮತ್ತೆ ಗಣಸಾಕ್ಷಿಯಾಗಿ ವಿಭೂತಿಯ ಪಟ್ಟವ ಕಟ್ಟಿ ಇಪ್ಪುದೇ ವ್ರತ ಶೀಲ ನೇಮ. ಹಾಗಲ್ಲದೆ ದಿಂಡೆಯತನದಲ್ಲಿ ಮಕ್ಕಳಿಗೆ ಸಂದೇಹದ ವ್ರತವ ಕಟ್ಟಬಹುದೇ? ಬುದ್ಧಿಯಾದಂದಿಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು. ಅದೆಂತೆಂದರೆ, ವ್ರತದಂಗದಲ್ಲಿ ಬೆಳೆದ ಗರ್ಭವನು........ಎಂಬವನ ವ್ರತ ಅಂದೇ ಬಿಟ್ಟಿತ್ತು. ಅದೆಂತೆಂದೊಡೆ ತನ್ನ ಅಂಗದಲ್ಲಿ ಆದ ಲಿಂಗದೇಹಿಯ ಮುಂದಕ್ಕೆ ಭವಿಸಂಗಕ್ಕೆ ಈಡು ಮಾಡುವ ವ್ರತಭಂಗಿತನ ಕಂಡು ಆವನೊಡನೆ ನುಡಿದಡೆ ಕುಂಭೀನರಕ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೇ ಅವನ ಹಿಂಗಿರಬೇಕು.

(೧೩) ತಾ ವ್ರತಿಯಾಗಿ ಮಕ್ಕಳೆಂದು ಮಾಡದಿರ್ದಡೆ ಆ ವ್ರತಕೆ ತಾನೇ ಹೊರಗು. ತನ್ನಂಗ ಮನ ಭಾವ ಕರಣಂಗಳಲ್ಲಿ ಸಂಗದಲ್ಲಿ ಇದ್ದವರೆಲ್ಲಕ್ಕೂ ತನ್ನಂಗದ ವ್ರತವ ಮಾಡಬೇಕು. ಇದು ಸೀಮೆವಂತರ ಯುಕ್ತಿ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಾಚಾರದ ಗೊತ್ತು.

---

## ಮಹೇಶ್ವರನ ಮಹೇಶ.

(೧೪) ಲವಣ ನಿರಶನದ ಆಯತದಂದವೆಂತೆಂದಡೆ,ಕಾರ, ಲವಣ ನಿಷಿದ್ಧವೆಂದು ಬಿಟ್ಟು ಮತ್ತೆ ಬಿಳಿಯ ಲವಣ ಬಳಸುವದು. ಬಿಳಿಯ ಲವಣ ನಿಷಿದ್ಧವೆಂದು ಬಿಟ್ಟು ಮತ್ತೆ ಸೈಂಧವ ಲವಣವ ಬಳಸುವುದು. ಸೈಂಧವಲವಣ ನಿಷಿದ್ಧವೆಂದು ಬಿಟ್ಟು ಮತ್ತೆ ಮೃತ್ತಿಕೆ ಲವಣವ ಬಳಸುವುದು. ಈ ಅನುವ ನಾನೆಂದುದಿಲ್ಲ. ನಿಮ್ಮ ನೀವೇ ಬಲ್ಲಿರಿ. ಅನುವಿಂಗೆ ತಕ್ಕ ವ್ರತ, ವ್ರತಕ್ಕೆ ತಕ್ಕ ಆಚಾರ, ಆಚಾರಕ್ಕೆ ತಕ್ಕ ಖಂಡಿತ. ಆವಾವ ನೇಮದಲಿ ಭಾವಶುದ್ಧವಾದವಂಗೆ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವು ಪ್ರಸನ್ನವಾಗಿಪ್ಪನು.

(೧೫) ಬಹುಜಲವಂ ಬಿಟ್ಟಲ್ಲಿ ಶೀಲವಲ್ಲ. ಪರಪಾಕ ದ್ರವ್ಯವ ಬಿಟ್ಟಲ್ಲಿ ಶೀಲವಲ್ಲ. ಅದೆಂತೆಂದೊಡೆ,ಅದು ಮನದ ಅರೋಚಕ. ಆ ಗುಣ ಜಗದ ಮಚ್ಚು. ಈ ಗುಣ ವ್ರತಕ್ಕೆ ಸಲ್ಲದು. ವ್ರತವಾವುದೆಂದಡೆ ಪರಾಪೇಕ್ಷೆಯ ಮರೆದು ಪರಸತಿಯ ತೊರೆದು ಗುರುಲಿಂಗಜಂಗಮದಲ್ಲಿ ತಾಗುನಿರೋಧವಂ ತಾಳದೆ ಹೆಣ್ಣು, ಹೊನ್ನು, ಮಣ್ಣಿಗಾಗಿ ತಪ್ಪಿನುಡಿಯದೆ ಒಡೆಯರು ಭಕ್ತರಲ್ಲಿ ತನ್ನ ಕುರಿತು ಗೆಲ್ಲಸೋಲಕ್ಕೆ ಹೋರದೆ ತನಗೊಂದು ಬೇಕೆಂದು ಅನ್ಯರ ಕೈಯಲ್ಲಿ ಹೇಳಿಸದೆ ಬಹು ಢಾಳಕತನವಂ ಬಿಟ್ಟು ಸರ್ವಾತ್ಮಚೇತನವನರಿತು ತಾ ಮರೆದುದ ಅರಿದು ಎಚ್ಚತ್ತು ನೋಡಿ ಅಹುದಾದುದ ಹಿಡಿದು ಅಲ್ಲಾದುದ ಬಿಟ್ಟು ಬಹು ದುಃಖವಂ ಮರೆದು ಇಂತೀ ಸರ್ವ ಗುಣ ಸಂಪನ್ನನಾಗಿ ಅತ್ಮಂಗರುಹಿನ ಶೀಲವ ಮಾಡಿ ಕಾಯಕ್ಕೆ ಮರವೆಯಿಲ್ಲದಾಚಾರನಂಗೀಕರಿಸಿ ಇಂತೀ ಕಾಯ ಮನ ಅರಿವಿನಾಚಾರದಲ್ಲಿ ನಿಂದು ಏತಕ್ಕು ಮರವೆ ಇಲ್ಲದೆ ಸರ್ವಾವಧಾನಂಗಳಲ್ಲಿ ಹೊರಗಣ ಮಾಟ ಒಳಗಣ ಕೂಟ ಉಭಯ ಶುದ್ಧವಾದಲ್ಲಿ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದ ಜಿಡ್ಡು ಹರಿಯಿತ್ತು.

(೧೬) ಭಾಜನದ ಕಂಟಕ್ಕೆ ಪಾವುಡವ ಬಾಸಣಿಸಲಾಗಿ, ವ್ರತಕ್ಕೆ ಬೀಜ ಮೊದಲಾಯಿತ್ತು. ಭವಿಸಂಗ ಭವಿಪಾಕ ಅನ್ಯದೈವವ ಪೂಜಿಸುವರ ದೂರಸ್ಥನಾಗಿರಬೇಕು, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವನರಿಯಬೇಕಾದರೆ.

(೧೭) ಭವಿ ನಿರೀಕ್ಷಣೆಯಾದ ದ್ರವ್ಯಂಗಳ ಮುಟ್ಟಿನೆಂಬಲ್ಲಿ ಮುಟ್ಟಿದ ಭೇದವಾವುದು ಹೇಳಿರಣ್ಣಾ ? ವ್ರತಕ್ಕೆ ದ್ರವ್ಯ ಮೊದಲೋ, ದ್ರವ್ಯಕ್ಕೆ ವ್ರತ ಮೊದಲೋ, ತಾ ಮಾಡಿಕೊಂಡ ನೇಮ ಮೊದಲೋ, ಇದ ನಾನರಿಯೆ ನೀವು ಹೇಳಿರಯ್ಯಾ ಕೂಸಿನವ್ವೆ ಹಣದಾಸೆಗೆ ಕರೆದು ಕೂಸು ಗಾಸಿಯಾದಂತೆ ಆಯಿತ್ತು. ವ್ರತಾಚಾರದ ಹೊಲಬು ನಿಹಿತವಾದು ದಿಲ್ಲ. ಏತದ ತುದಿಯಲ್ಲಿ ತೂತು ಮಡಕೆಯ ಕಟ್ಟಿದಲ್ಲಿ ಮಡಕೆಯ ನೀರಿನ ನಿಹಿತವನರಿಯದವನಂತೆ ವ್ರತಾಚಾರ ಸಲ್ಲದು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ನೇಮಘಾತುಕರುಗಳಿಗಿದು ಅಸಾಧ್ಯ.

(೧೮) ಪಾಕ ಲವಣವ ಬಿಟ್ಟು ಪರವಧುವ ಅಪೇಕ್ಷಿಸಿ ಬೇಡ ಲಾಗದು. ಅಪ್ಪು ಲವಣವ ಬಿಟ್ಟು ಸಪ್ಪೆಯ ಕೊಂಬಲ್ಲಿ ಉಚ್ಚೆಯ ಬಚ್ಚಲ ಮುಟ್ಟಲಾಗದು. ಉಚ್ಚೆಯ ಬಚ್ಚಲ ಬಿಟ್ಟಲ್ಲಿ ಮತ್ತೊಬ್ಬರ ಅಪ್ಪ ಅಣ್ಣ ಎಂದು ಬಾಗಿಲ ತಪ್ಪಲ ಕಾಯಲಾಗದು. ಇಂತೀ ವ್ರತಾ ಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ತಪ್ಪದ ನೇಮ.

(೧೯) ತಾ ವ್ರತಿಯಾಗಿದ್ದಲ್ಲಿ ತನ್ನ ಸೀಮೆಯೊಳಗಾಗಿ ಕಟುಕ ಪರದಾರ ಹುಸಿ ಕೊಲೆ ಕಳವು ಅನ್ಯಾಹಾರ ನಿಂದಕ ದುರ್ಜನ ಭವಿ ಸಂಗವುಳ್ಳವರ ತಂದೆತಾಯಿ ಎಂದು ಹೆಂಡರು ಮಕ್ಕಳೆಂದು ಬಂಧು ಬಳಗವೆಂದು ಅವರನು ಅಂಗಣದಲ್ಲಿ ಕೂಡಿಕೊಂಡರೆ ಅವರು ತಂದ ಕೂಳನಿಕ್ಕಿದಡೆ ತಿಂಗಳು ಸತ್ತ ನಾಯಮಾಂಸವ ತಂದು ತಿಂದ ದೋಷ ತಪ್ಪದು. ಇದಕ್ಕೆ ಹಿಂದು ನೆನೆಯಲಿಲ್ಲ, ಮುಂದು ನೋಡಲಿಲ್ಲ. ಈ ತಪ್ಪು ಹೊತ್ತಲ್ಲಿಯೇ ಅಂದಿಗೆ ನೂರು ತುಂಬಿತ್ತೆಂದು ಅಂಗವ ಬಿಡಬೇಕು. ಅಂಗವ ಬಿಡದ ಭಂಡರ ಕಂಡರೆ ಆಚಾರವೇ ಪ್ರಾಣವಾದ ರಾಮೇ ಶ್ವರಲಿಂಗನೊಪ್ಪ.

(೨೦) ತನ್ನಾಚಾರಕ್ಕೆ ಬಂದವರು ತನ್ನವರೆಂದು ಭಾವಿಸಬೇಕ ಲ್ಲದೆ ತನ್ನಾಚಾರಕ್ಕೆ ಹೊರಗಾದವರ ಅಣ್ಣತಮ್ಮನೆಂದು ತಾಯಿತಂದೆ ಎಂದು ಹೊನ್ನು ಮಣ್ಣು ಹೆಣ್ಣಿನವರೆಂದು ಅಂಗೀಕರಿಸಿದೊಡೆ ಅವರಂಗ ಣವ ಕೂಡಿದಡೆ ಅವರೊಂದಾಗಿ ನುಡಿದಡೆ ಭಕ್ತರು ಸತ್ಯರಿಗೆ ಮುನ್ನವೇ ಹೊರಗು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವು ಅವರನೊಳ ಗಿಟ್ಟುಕೊಳ್ಳ.

(೨೧) ವ್ರತಾಚಾರವೆಂಬುದು ತನಗೋ ತನ್ನ ಸತಿಗೋ? ವ್ರತಾಚಾರಿಗಳ ಗರ್ಭದಿಂದ ಬಂದ ಶಿಸುವ ಅನ್ಯರಿಗೆ ಕೊಡಬಹುದೇ? ಇಂತೀ ತಮ್ಮ ಕ್ರಿವಂತರಲ್ಲಿ ತಂದು, ಕ್ರಿವಂತರಲ್ಲಿಯೇ ಕೊಟ್ಟು, ಉಭಯ ಭಿನ್ನವಿಲ್ಲದಿಪ್ಪುದೇ ಸಜ್ಜನವ್ರತ, ಸದಾತ್ಮರಯುಕ್ತಿ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ಮುಕ್ತಿ.

೨೨. ಆಚಾರ ತಪ್ಪಿದರೆ ಪ್ರಾಯಶ್ಚಿತ್ತ ಉಂಟೆಂಬ ಅನಾಚಾರಿಗಳ ಮುಖವ ನೋಡಬಹುದೇ? ಆಚಾರ ನೋಟದ ಹೊನ್ನೇ, ಮೊತ್ತದ ಮಡಕೆಯೇ, ಸಂತೆಯ ವ್ಯವಹಾರವೇ, ಜೂಜಿನ ಮಾತೇ, ವೇಶಿಯ ಸತ್ಯವೇ? ಪೂಸರ ವಾಕ್ಯವೇ? ಇಂತೀ ವ್ರತದ ನಿಹಿತವನತಿಗಳೆದಲ್ಲಿ ಇಷ್ಟ ಬಾಹ್ಯನ ವ್ರತಭ್ರಷ್ಟನ ಸರ್ವಪ್ರಮಥರಲ್ಲಿ ನಾನರಿತು ಕೂಡಿದೆನಾದಡೆ ಅರಿಯದೆ ಕೂಡಿ ಮತ್ತರಿದಡೆ ಆ ತನುವ ಬಿಡದಿರ್ದಡೆ ಎನಗದೇ ಭಂಗ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವಾದಡೂ ತಪ್ಪಿದಡೆ ಹೊರಗೆಂದು ಮತ್ತೆ ಕೂಡಿಕೊಳ್ಳೆ.

೨೩. ಏರಿಯ ಕೆಳಗೆ ಬಿದ್ದ ನೀರು ಪೂರ್ವದಂತೆ ಗಟ್ಟಕ್ಕೆ ಏರಬಲ್ಲುದೇ? ವ್ರತಾಚಾರವ ಮೀರಿ ಕೆಟ್ಟ ಅನಾಚಾರಿ ಸದ್ಭಕ್ತರ ಕೂಡ ಬಲ್ಲನೇ? ದೇವಾಲಯದಲ್ಲಿ ಸತ್ತರೆ ಸಂಪ್ರೋಕ್ಷಣವಲ್ಲದೆ ದೇವರು ಸತ್ತಲ್ಲುಂಟೇ? ತಾ ಸೋಂಕಿಗೆ ಹೆದರದೆ ಕೂಡಿದ ದುರ್ಗುಣಕುಂಟೇ ಪ್ರಾಯಶ್ಚಿತ್ತ? ಇದ ಕಂಡಲ್ಲಿ ಗುರುವಾದಡೂ ಬಿಡಬೇಕು. ಲಿಂಗವಾದಡೂ ಬಿಡಬೇಕು. ಜಂಗಮವಾದಡೂ ಬಿಡಬೇಕು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವಾದಡೂ ಬಿಡಬೇಕು.

(೨೪) ಚಿನ್ನೊಡೆದಡೆ ಕರಗಿಸಿದರೆ ರೂಪಪ್ಪುದಲ್ಲದೆ ಕರಗಿಸದಿರ್ದಡೆ ರೂಪಪ್ಪುದೇ? ಮಧ್ಯಮ ಮನುಜ ತಪ್ಪಿದೊಡೆ ಒಪ್ಪಚ್ಚಿ ಹೇಳಬಹುದಲ್ಲದೆ, ಸದ್ಭಕ್ತ ತಪ್ಪಿದ್ದೊಡೊಪ್ಪಬಹುದೇ? ಆಚಾರ ತಪ್ಪಿದಲ್ಲಿ ಲಿಂಗವೇ ಕಡೆಯಲ್ಲದೆ ಬೇರೊಂದಂಗವ ಮಾಡಿ ಗುರುಲಿಂಗಜಂಗಮದ ಮುಖದಿಂದ ಶುದ್ಧವೆಂದು ತಂದು ಕೂಡಿಕೊಳ್ಳಬಹುದೇ? ಆಚಾರಭ್ರಷ್ಟನ ಜಂಗಮವ ಕೊಂದವನ ಇವರ ಕಂಡು ನುಡಿದಡೆ ಕುಂಭಿನೀಪಾತಕಕೊಳಗು. ಇದಕ್ಕೆ ಸಂದೇಹವಿಲ್ಲ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಾಣತಿ.

(೨೫) ನಾನಾ ವ್ರತದ ಭವಂಗಳುಂಟು. ಲಕ್ಷಕ್ಕೆಕ್ಕೆಹೆನೆಂಬ ಕೃತ್ಯದವರುಂಟು. ಗುರುಲಿಂಗ ಜಂಗಮದ ತಪ್ಪ ಕಂಡರೆ ಒಪ್ಪುವರುಂಟೇ ? ಇಂತೀ ಶೀಲವೆಲ್ಲವೂ ತಾ ಮಾಡಿಕೊಂಡ ಕೃತ್ಯ ತಪ್ಪಿದಲ್ಲಿ ದೃಷ್ಟವ ಕಂಡು ಆ ವ್ರತವನೊಪ್ಪಬಹುದೇ? ಕೊಪ್ಪರಿಕೆಯಲ್ಲಿ ಅಪೇಯವನಪ್ಪುವಿನಲ್ಲಿ ಕದಡಿ, ಅಶುದ್ಧವಲ್ಲ ಎಂದು ಮತ್ತೆ ಕುಡಿಯಬಹುದೇ ? ತಪ್ಪದ ನೇಮವನೊಪ್ಪಿ. ತಪ್ಪ ಕಂಡಲ್ಲಿ ಬಿಟ್ಟು ಇಂತೀ ಉಭಯಕ್ಕೆ ತಪ್ಪದ ಗುರು ವ್ರತಾಚಾರಕ್ಕೆ ಕರ್ತನಾಗಿರಬೇಕು. ಇಂತೀ ಕಪ್ಪರ ಕಂಡು ದ್ರವ್ಯದಾಸೆಗೆ ಒಪ್ಪಿದೆನಾದಡೆ ಅವನು ಸತ್ತನಾಯ ಮಾಂಸವ ತಿಂದಂತೆ. ನಾ ತಪ್ಪಿ ನುಡಿದೆನಾದಡೆ ಎನಗೆ ಎಕ್ಕಲ ನರಕ. ಅಂಜಿ ಇತ್ತ ಬಾ ಎಂಬವನಲ್ಲ. ವ್ರತ ತಪ್ಪಿದವರಿಗೆ ನಾ ಕಟ್ಟಿದ ತೊಡರು. ಎನ್ನ ಹಿಡಿದಡೆ ಕಾದುವೆ, ಕೇಳಿದಡೆ ಹೂಳುವೆ. ಎನ್ನಾಶ್ರಯದ ಮಾರ್ಜಾಲ ಗೋಮುಂತಾದ ದೃಷ್ಟದಲ್ಲಿ ಕಾಂಬ ಚೇತನಕ್ಕೆಲ್ಲಕ್ಕೂ ಎನ್ನ ವ್ರತದ ಕಟ್ಟು. ಇದ ತಪ್ಪಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೇ ಎಚ್ಚತ್ತ ಬದುಕು.

(೨೬) ಎಂಬತ್ತು ನಾಲ್ಕು ಲಕ್ಷ ವ್ರತದೊಳಗಾದ ಶೀಲ ಸಂಭವಿಸಿ ನಿಂದಿತ್ತು. ಮೂವತ್ತಾರು ಮೂವತ್ತಾರರಲ್ಲಿ ಸಂಭವಿಸಿ ನಿಂದಿತ್ತು. ಇಪ್ಪತ್ತೈದರೊಳಗಾಗಿ ಸಂಭವಿಸಿ ನಿಂದುದು. ಹದಿಮೂರು ಹದಿಮೂರರಲ್ಲಿ ಸಂಭವಿಸಿ ನಿಂದುದು. ಮೂರೆಯಾಯಿತ್ತು. ಮೂರು ವ್ರತಕ್ಕೆ ಮುಕುತಿಯಾಗಿ ತಬ್ಬಿಬ್ಬಿಗೊಳ್ಳುತ್ತಿದೇನೆ. ನಾ ಹಿಡಿದ ಒಂದು ನೇಮಕ್ಕೆ ಸಂದೇಹವಾಗಿ ಒಂದನ್ನೂ ಕಾಣದಿದೇನೆ. ಒಂದರ ಸಮಶೀಲಕ್ಕೆ ಸತಿ ಪುತ್ರರು ಎನ್ನಂಗದೊಳಗಿರರು. ಎನ್ನಂಗದ ಜೀವ ಧನ ಹೊಂದಿ ಹೋದಾಗ ಎನ್ನಂಗ ವ್ರತ ಅಲ್ಲಿಯೇ ಬಯಲು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದ ಶೀಲ ಕಡೆ ನಡು ಮೊದಲಿಲ್ಲ.

## ಮಹೇಶ್ವರನ ಪ್ರಸಾದಿ.

(೨೭) ಎನ್ನ ಸಮಗ್ರಾಹಕ ಶೀಲ ಸಂಪಾದಕರಲ್ಲದೆ ಎನ್ನ ಕಣ್ಣಿನಲ್ಲಿ ನೋಡ, ಎನ್ನ ಜಿಹ್ವೆಯಲ್ಲಿ ನೆನೆಯ, ಮಿಕ್ಕಾದ ತಟ್ಟುವ ಮುಟ್ಟುವ ತಾಗುವ ಸೋಂಕುವ ನಾನಾ ಗುಣಂಗಳಲ್ಲಿ ಸಾಧಿಸಿಯಲ್ಲದೆ ಬೆರೆಯ, ಕೊಂಬಲ್ಲಿ ಕೊಡುವಲ್ಲಿ ಎನ್ನ ವ್ರತಾಚಾರವನಂಗೀಕರಿಸಿದವರಿಗಲ್ಲದೆ. ಹಾಗೆ ಇದಕ್ಕೆ ದೃಷ್ಟವ ನೋಡಿಹೆನೆಂದರೆ ತೋರುವೆ, ಶೃತದಲ್ಲಿ ಕೇಳಿಹೆನೆಂದಡೆ ಹೇಳುವೆ. ಅನುಮಾನದಲ್ಲಿ ಅರಿದಿಹೆನೆಂದರೆ ಎನ್ನಾಚಾರ । ಆತ್ಮನ ಎನ್ನ ಕೈಯ್ಯಲ್ಲಿ ಹಿಡಿದು ನಿಮ್ಮ ಕೈಯಲ್ಲಿ ಕೊಡುವೆ. ಈ ಭಾಷೆ ಗತನೆಂದು ಕಟ್ಟಿದೆ. ತೊಡರುವ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ ಎನಗೆ ಸರಿ ಇಲ್ಲವೆಂದು ಎಲೆದೊಟ್ಟ ನುಂಗಿದೆ.

(೨೮) ವ್ರತ ನೇಮ ಶೀಲವಂ ಮಾಡಿಕೊಂಡು ಸಮಯಾಚಾರದಲ್ಲಿ ನಡೆದೆನೆಂಬ ಭಕ್ತನ ಕ್ರಮವೆಂತೆಂದಡೆ, ತಾನು ಭೋಗಿಸುವಂತಹ ಸಕಲ ದ್ರವ್ಯಂಗಳೆಲ್ಲವನು ಜಂಗಮಕ್ಕೆ ಕೊಟ್ಟು ತಾನು ಕೊಳಬೇಕು. ಅವಾವೆಂದಡೆ ಮಜ್ಜನ, ಭೋಜನ, ಅಂದಣ, ಸತ್ತಿಗೆ, ಚಾಮರ, ಆನೆ, ಕುದುರೆ, ಕನ್ನಡಿ, ಪರಿಮಳ, ಲೇಪನ, ಗಂಧ, ಅಕ್ಷತೆ, ವಸ್ತ್ರ, ರತ್ನಾಭರಣ, ತಾಂಬೂಲ, ಮೆಟ್ಟಡಿ, ಮಂಚ, ಸುಪ್ಪತ್ತಿಗೆ ಒಡೆಯಂಗೆ ಆಯಿತ್ತೆಂಬುದ ಕೇಳಿ ಆ ಒಡೆಯನ ವಾಕ್ಯಪ್ರಸಾದದಿಂದ ಮಹಾಪ್ರಸಾದವೆಂದು ಎಲ್ಲ ವ್ರತಂಗಳಿಗೆಯೂ ಜಂಗಮಪ್ರಸಾದವೇ ಪ್ರಾಣ, ಎಲ್ಲ ನೇಮಕ್ಕೆಯೂ ಜಂಗಮದರ್ಶನವೇ ನೇಮ, ಎಲ್ಲ ಶೀಲಕ್ಕೆಯೂ ಜಂಗಮದ ಮಾಟವೇ ಶೀಲ. ಎಲ್ಲ ವ್ರತ ನೇಮ ಶೀಲಂಗಳೆಲ್ಲವು ಜಂಗಮವ ಮುಂದಿಟ್ಟು ಶುದ್ಧತೆಯಹ ಕಾರಣ ಆ ಜಂಗಮದಲ್ಲಿ ಅರ್ಥ ಪ್ರಾಣ ಅಪಮಾನ ಮುಂತಾದ ಈ ಮೂರಕ್ಕ ಕಟ್ಟು ಮಾಡಿದೆನಾದಡೆ ಎನಗೆ ದ್ರೋಹ. ಆ ಜಂಗಮದ ದರ್ಶನದಿಂದವೇ ಸಕಲ ದ್ರವ್ಯಂಗಳು ಪವಿತ್ರವು. ಆ ಜಂಗಮದ ಪಾದತೀರ್ಥದಿಂದವೇ ಮಹಾಘನಲಿಂಗಕ್ಕೆ ಜೀವಕಳೆ ಆ ಜಂಗಮದ ಪ್ರಸಾದದಿಂದವೇ ಮಹಾಘನಲಿಂಗಕ್ಕೆ ತೃಪ್ತಿ. ಇಷ್ಟನರಿದ ಬಳಿಕ ಜಂಗಮಲಿಂಗಕ್ಕೆ ಸಂದೇಹವ ಮಾಡಿದೆನಾದಡೆ ಎನಗೆ ಕುಂಭೀಪಾತಕ ನಾಯಕನರಕ ತಪ್ಪದು. ಈ ಜಂಗಮದ ಭಕ್ತಿ ಕಿಂಚಿತ್ತು ಕೊರತೆ ಇಲ್ಲದ ಹಾಗೆ ಜೀವವುಳ್ಳ ಪರಿಯಂತರ ಇದೇ ಆಚಾರವಾಗಿ, ಇದೇ ಪ್ರಾಣವಾಗಿ ನಡೆದು, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವ ನೊಡಗೂಡುವನು.

ರಸನೇಳ್ದು ಕೈಮುಗಿದು ದೇವ ದೇವ ಮುನ್ನರಿಯದೋಲೈಸಿಕೊಂಡ ತಪ್ಪಂ ಮನ್ನಿಸಿ ಕರುಣದಿಂ ನೋಳ್ಪುದೆಂದು ಬಿನ್ನೈಸಿ ಈ ಕಲ್ಯಾಣಕ್ಕೆ ಯೋಜನಾಂತರದೊಳೊಂದು ಸಂವತ್ಸರಕ್ಕೆ ಪನ್ನೀರ್ಛಾಸಿರ ಪೊನ್ನನಿಕ್ಕುವ ಪಟ್ಟಣಮಂ ಶಿವಪುರಮಂ ಮಾಡಿ ಸದಾನಂದಲೀಲೆಯಿಂ ಏರ್ಪುದೆಂದಾನೆಯ ಮೇಲಿರಿಸಿ ಪುರಮಂ ಪೊರಮಟ್ಟು ಶರಣರ ಸಂದಣಿ ಸಹಿತಾ ಪುರಕೆ ಬಿಜಯಂಗೈಸಿ ಪೆರ್ಮಾಡಿರಾಯಂ ದಂಡನಾಥಮಂಡಳಿಕದಿಂದೋಲೈಸೆ ಸಕಲ ಭಕ್ತರ ನಡುವೆ ಸುಕೃತದ ಸರ್ವ ಸೂರೆಕಾರನೇಕ ನಿಷ್ಕಾಲಂಕೃತ ಸರ್ವಾಂಗಂ ಅನ್ಯಸಮಯಪನ್ನಗಮೇಘವಹ್ನಿ ಪರದೈವಧರಾಧರ ಶಂಬಂ ಬೊಮ್ಮನ ತಲೆವಿಡಿದನ ಹೆಮ್ಮೆಯ ಮಗಂ ಜೊಮ್ಮಿತಂದೆ ಪುಸಿ ಪುರಾಣಮಂ ಪೇಳ್ದ ಪುರಾಣಭಟ್ಟನಂ ತೀರ್ಚಿ ಪ್ರತ್ಯಕ್ಷಮಂ ತೋರಿದನೆಂಬ ಗಣ್ಯ ಪುಣ್ಯ ಕೀರ್ತಿ ಧರಣಿಯಂ ಪರ್ವಿ ಪಲ್ಲವಿಸಿ ಬೆಳೆಯೆ ಭೀಮನಾಜ್ಞೆಯಂ ಪೊತ್ತು ಬೇಂಟೆಯ ನೆವದಿಂ ಕಾರಣಿಕ ಮೃಗಂಗಳ ಭವದ ಭಾರಮನಿಳುಪಿ ಬಂದ ಜಂಗಮದಳ್ತಿಯಂ ಸಲಿಸುತಂ ಬೇಡಿದ ಭಕ್ತರ್ಗಿಲ್ಲೆನ್ನದೀವುತ್ತಂ ಪಾಡುವ ಶರಣರ್ಗೆ ಮೈಯ್ಯಾನುತಂ ಶಿವಗೋಷ್ಠಿಯೋಳ್ಪೆಳೆಯುತಂ ಶಿವಪೂಜೆಯೊಳುರ್ವಿ ಕೊರ್ವುತಂ ಶಿವಶೀಲ ಸಂತಾನ ಭರಿತಮಪ್ಪ ಶಿವಪುರದೊಳು ಶೈವಸುಖ ಸಂತತಂ ವಿನೋದದಿಂ ತೆಲುಂಗು ಜೊಮ್ಮಯ್ಯಗಳೊಪ್ಪುತ್ತಮಿರೆಯಿರೆ.

## ತೃತೀಯಸ್ಥಲ.



ವೃತ್ತ॥

ಸಮಶೀಲಪ್ರಭವಪ್ರಮೋದಶರಣವ್ರಾತಂ ಸದಾ ರಂಜಿಸಲ್ ।
ವಿಮಳಜ್ಞಾನನಿಧಾನನಪ್ರತಿಮನುರ್ವಿವಂದ್ಯ ನಾಶ್ಚರ್ಯವಿ
ಭ್ರಮಯುಕ್ತಂ ಶುಚಿಭೀಮನಾಥಚರಣಾಂಭೋಜಾತಭೃಂಗಂ ದಯಾ
ರಮಣೀನಃಥನುದಾರಧೀರನೆಸೆದಿರ್ದಂ ಬೊಮ್ಮಣ್ಣನಾಸ್ಥಾನದೊಳ್

ರಗಳೆ

ಇಂತು ಶಿವಸುಖದೊಳಪ್ರತಿಮಸುಖದಿಂದಿರ್ದು
ಕಂತುಮದಮರ್ದನನ ಪದಯುಗಳಮಂ ಸಾರ್ದು
ಭೀಮನಾಥನ ಕರುಣದಿಂ ಬೇಂಟೆಗೆಂದಲ್ಲಿ
ಕಾಮಹರನಣುಗನೋಡಿಯುತ್ಸವ ಬಡುತಲ್ಲಿ
ಮೃಗಯಾವಿನೋದಪಂಕರವೆನಿಸುತಂತಲ್ಲಿ
ಸೊಗಯಿಸುವ ಸಮಶೀಲಶರಣರೊಳಗೈದಲ್ಲಿ
ವನದೊಳಗೆ ಸುಳಿವ ಕಾರಣಿಕ ಮೃಗವೃಂದಮಂ
ತನತನಗೆ ಪರಿತಂದು ನೀರ್ಗೊಂದು ಬಂದವಂ
ಎಳೆವುಲ್ಲಳಂ ಮೇದು ಕೊಣಕಿಡುವ ಪುಲ್ಲೆಯುಂ
ತಿಳಿನೀರ್ಗಳಂ ಕುಡಿದು ನಲಿದಾಡುವೆರಳೆಯುಂ
ಮರಿಗಳಂ ಕೋಡಮೊನೆಯಿಂದೆ ತುರಿಸುತ್ತಿರ್ಪ
ಒರೆವ ಮುಂಬದನೊಸರೆ ಹೊಸನನೆಗೆ ನಲಿತರ್ಪ
ಕಣ್ಮುಚ್ಚಿ ಕಿವಿಯುಳಲೆ ತನು ಕರಗುತಿರೆ ನೆರೆವ
ಉಣ್ಮಿ ಪೊಣ್ಮುವ ಪುಳಕದಿಂದೆ ಬೆಬ್ಬನೆ ಬಿರಿವ
ಮೃಗದ ಪೋವಳಿಪಜ್ಜೆಯರಸಿ ಮರುಗುತಿರ್ಪ
ಮೃಗವೊಂದರೊಂದರೊಳ್ ಪೊರ್ದು ಪೆಣಗುತ್ತಿರ್ಪ
ಪುಲ್ಲೆಯುರಳೆಗಳ ಹಿಂಡಂ ಹರುಷದಿಂ ಕಂಡು

ಅಲ್ಲಿ ಜೊಮ್ಮಣ್ಣನಾ ಕಾರಣಿಕರಂ ಕಂಡು
ರುದ್ರಾಕ್ಷ ಮಾಲೆಗಳನುರದೆ ಚಾಚಿಯೆಕೊಳುತೆ
ರುದ್ರನಿಂದೆ ಸಸಿತೆನ್ನಲ್ಲಿ ತಪ್ಪಿಲ್ಲೆನುತೆ
ಬೆಲ್ಲವತ್ತದ ಬಿಲ್ಲನಳವಡಲ್ಪಿಡಿಕೈಸಿ
ಬಿಲ್ಲೊಳಿಸೆವರ್ಧನಾರಿಯುನೊಪ್ಪೆ ಮೇಳೈಸಿ
ಕಣಿಗಿಲೆಯ ಕೋಲತುದಿಯೋಳ್ಪೊಳೆವಲಗು ಮೆರೆಯೆ
ಎಣೆಗೂಡಿ ಹೊಗರೊಳಗೆ ಪಂಚಾಕ್ಷರಂಗಳೊಗೆಯೆ
ದಿವ್ಯ ಸರವಂ ಕೊಂಡು ತಿರುವಾಯ್ಗಳೊಳಗಿಟ್ಟು
ನವ್ಯ ಭಕ್ತಂ ಮುನಿದು ನಿಮಿರ್ದು ನೀಡಡಿಯಿಟ್ಟು
ಮುಟ್ಟೆ ದೃಢಬಂಧಂ ಧನುರ್ದಂಡದೊಳಗೆ ಸಲೆ
ದೃಷ್ಟಿಯಂಬಿನ ಕೊನೆಯ ಮೊನೆಯೊಳಿಚ್ಚತ್ತು ನಿಲೆ
ಕಾರಣಿಕ ಮೃಗಶರೀರವನಲ್ಲಿ ಲಕ್ಷಿಸುತೆ
ಆರೈದು ಶರದ ಮೃಗದೆಡೆಯುಂ ವಿವೇಕಿಸುತೆ
ಘಳಿಲನೆಚ್ಚಂ ಜೊಮ್ಮಿತಂದೆ ಮೃಗವಳುಕುತಿರೆ
ಅಳವಡೆ ಶರಂ ಶಿರಂಗೊಂಡುರ್ಚಿ ಪಾರುತಿರೆ
ತೊಡುವುದಂ ನಡುವುದಂ ಕಾಣಲಾಗುತ್ತಮಿರೆ
ಬಿಡುವುದಂ ಪೋದುದನೀಕ್ಷಿಸಲ್ಬಾರದಿರೆ
ಮೃಗಶರೀರಂ ನೊಂದು ಬಿದ್ದುದೀ ಧರೆಯೊಳಗೆ
ನೆಗೆದವು ವಿಮಾನದೊಳು ಜೀವವಂ ಜರಿಪೊಳಗೆ
ಭಕ್ತಿಬಾಣಂ ತಾಗಿ ಮುಕ್ತಿ ಬಂದೆಡೆಗೊಂಡು
ಯುಕ್ತಿ ಕೊಳ್ಳದ ಭಕ್ತಿ ಮುಕ್ತಿಯೋಳ್ನೆಲೆಗೊಂಡು
ವೈರಾಗ್ಯಶಸ್ತ್ರವೆಂದೆಸುತಮಿರಲಂತಲ್ಲಿ
ತಾರಾದ್ರಿಗೈದುವವು ಮೃಗಜೀವವಂತಲ್ಲಿ
ಬಾಣ ತಾ ಗೀರ್ವಾಣಪದವಿಯಂ ಕೊಡುತಮಿರೆ
ಜಾಣನೆಸುತಿರ್ದನಾ ಋಷಿಜನಂ ಪರಸುತಿರೆ
ಕಾರಣಿಕರಲ್ಲದ ಮೃಗಂಗಳ್ಸುಳಿಯುಲೀಸಂ
ಮಾರಹರನುರುಪಿದ ಮೃಗಂಗಳಂ ಎಸೆವವಂ
ಇಂತು ಬೇಂಟೆಯನಾಡಿ ಘನಸುಖವನೆಡೆಗೊಂಡು
ಸಂತಸುಖದಿಂ ತಿರುಗಿ ಪುರದತ್ತ ನಡೆಗೊಂಡು

ಬಂದು ಶಿವಲಿಂಗಾರ್ಚನಂಗೈದು ಸುಖದೊಳಿರೆ
ಸಂದಣಿಪ ಬೇಂಟೆಯಂ ನಿಚ್ಚಲಾಡುತ್ತಮಿರೆ

ಜೊಮ್ಮಣ್ಣನೇಕನಿಷ್ಠೆಯ ಭಕ್ತಿಯಂ ಕೇಳ್ದು
ಜೊಮ್ಮಣ್ಣನಾಡುತಿಹ ಬೇಂಟೆಯಂ ನೆರೆ ಕೇಳ್ದು
ಕೊಂಡಗೂಳಿಯ ಕೇಶಿರಾಜ ದಣ್ಣಾಯಕರು
ಪುಂಡರೀಕಾಜಿನದ ತನುಮನೋದ್ವೈವಿಕರು
ಎಲ್ಲವುಂ ಲೇಸಾಯ್ತು ಬೇಂಟೆಯೊಂದೇ ಪೊಲ್ಲ
ಅಲ್ಲಿ ಮಾಣಿಪೆನಭವಭಕ್ತಂಗದಲ್ಲಲ್ಲ
ಎಂದು ತಮ್ಮೂರಿಂದೆ ಪೊರಮಟ್ಟು ನಡೆತಂದು
ಸಂದಣಿಪ ಭಕ್ತಸಂಕುಲದಿಂದಲೈತಂದು
ಜೊಮ್ಮಣ್ಣನಿರ್ಪ ಶಿವಪುರವನೊಲವಿಂ ಪೊಕ್ಕು
ಸುಮ್ಮಾನದಿಂದೆ ಪೊಗಳುತ್ತಂ ಮನಂ ಮಿಕ್ಕು
ಅವರ ನಿಳಯದ ಮುಂದೆ ಉನ್ನತಾಸನವಿಳಿದು
ಶಿವಭಕ್ತರೊಡನೆ ಪರಮಾನಂದವಂ ತಿಳಿದು
ಬಂದೊಳಗೆ ಪುಗುತೆ ಜೊಮ್ಮಣ್ಣನಲ್ಲಿಗೆ ಹೋದ
ನಿಂದುಧರನ ಪ್ರತಾಪಾಗ್ನಿಯಲ್ಲಿಗೆ ಹೋದ
ನೆನುತಲ್ಲಿ ಪಿಶಿತಮಾಲೆಗಳಿರ್ಪುದಂ ಕಂಡು
ಮನವಳಿದು ಹೇಸಿ ತಿರುಗಿದನುಮ್ಮಳಂಗೊಂಡು
ಶಿವಭಕ್ತರಂ ದೂರದಿಂದೆ ಕೇಳ್ವುದು ಲೇಸು
ಪವಣಿಸಲ್ಕಮ್ಮಳವೆ ಪೊಗಳುತಿರ್ಪುದೆ ಲೇಸು

ಎನುತ ಬಂದಾ ಪುರದ ಶಿವನಿಳಯದೋಳ್ಪೊಕ್ಕು
ಅನುನಯದೊಳುಪಕರಣವೆಲ್ಲಮುಮನಿಂಬಿಟ್ಟು
ಸುರುಚಿರಸ್ಥಾನದೊಳು ಸಿಂಹಾಸನವನಿಕ್ಕಿ
ಹರುಷದಿಂ ಮೇಲೆ ಮೃದುವೆನಿಪ ಗದ್ದುಗೆಯಿಕ್ಕಿ
ಕಾಮಹರನಂ ಭೀಮನಾಥಕುಲಸ್ವಾಮಿಯಂ
ವ್ಯೋಮಕೇಶನನಭವನುನ್ನತಪ್ರೇಮಿಯಂ
ಸೋಮನಾಥನನಕ್ಕರಿಂದೆ ಬಿಜಯಂಗೈಸಿ
ವಾಮಾರ್ಧನಾರಿಯಂ ಒಲಿದು ಬಿಜಯಂಗೈಸಿ

ದೇವತಾರ್ಚನೆಗೆ ಕೇಶಿರಾಜ ದಣ್ಣಾಯಕರು
ಭಾವಿಸುತ್ತಿರಲಿತ್ತ ಹರನ ಗಣನಾಯಕರು

ಇತ್ತಲಾ ಜೊಮ್ಮಣ್ಣನೊಲಿದು ಬೇಂಟೆಯನಾಡಿ
ಹತ್ತೆಂಟು ಮೃಗಶರೀರಂಗಳಂ ನೆರೆ ಕೂಡಿ
ಬಂದು ಪುರಮಂ ಪೊಕ್ಕು ನಿಳಯಕ್ಕೆ ನಡೆತಂದು
ಬಂದರುಂಟೇ ಶಿವನ ಭಕ್ತರರಸುತಲಿಂದು
ಜೊಮ್ಮಯ್ಯನರಸಿಯುಂ ಎಂದಿನಂದದಿ ಕೇಳಿ
ಅಂದಲ್ಲಿ ಶಿವಭಕ್ತೆ ಪೇಳ್ದಳುತ್ಸವ ವೇಳೆ
ಶರಣಸಂತತಿವೆರಸಿ ಪಿರಿಯರೋರ್ವರ್ಬಂದು
ಹರುಷದಿಂ ನಿಳಯದೊಳು ನಿಮ್ಮ ಬರವಂ ಕೇಳ್ದು
ಪಿಶಿತಮಾಲೆಯನಿಲ್ಲಿ ನೆರೆ ಕಂಡು ಪೇಸುತಂ
ಮುಸುಕ ಮೂಗಿನೊಳಿಟ್ಟು ಶಿವಶಿವನೆ ಎನುತಂ
ತಿರುಗಿ ಪೋದರು ಭೀಮನಾಥನಾಲಯದತ್ತಂ

ಎನೆ ಕೇಳ್ದು ಜೊಮ್ಮಣ್ಣನತಿ ಹರುಷಮಯನಾಗಿ
ನಡೆತರುತ ನಡೆತರುತ್ತೋರೋರ್ವರಂ ಕಂಡು
ಮೃಡಶರಣರೋರೋರ್ವರ್ಸುಖದೊಳಪ್ಪಿಯೆ ಕೊಂಡು
ಇರ್ಪಲ್ಲಿ ನುಡಿದನಾ ಜೊಮ್ಮಣ್ಣನೊಲ್ಮೆಯಿಂ
ಸರ್ಪಭೂಷಣನ ತೇಜೋಭರಣನಲ್ತಿಯಿಂ
ಎನ್ನ ಮನೆ ಇರ್ದಂತೆ ಇಲ್ಲಿ ನೀವಿರ್ಪಿರೇ
ಉನ್ನತಾನಂದಮಯ ನೀವಿಂತು ಬರ್ಪಿರೇ
ಬಂದು ಕರುಣಿಪುದೆಂದು ನೆರೆ ಬೇಡಿಕೊಳುತಮಿರೆ
ತಂದೆ ಬಿಜಯಂಗೈವುದೆಂದು ಕರೆಯುತ್ತಮಿರೆ
ಅಂದು ದಣ್ಣಾಯಕರು ಗಸಣಿಗೊಳುತಂತಲ್ಲಿ
ನೊಂದು ಸಮಶೀಲವಿಲ್ಲದೆ ನುಡಿದರಂತಲ್ಲಿ
ಸೋಮಯ್ಯನೊಲ್ದು ಸಿಂಹಾಸನವನೆಡೆಗೊಂಡು
ಸೋಮಧರನಾ ಪರಮಪೂಜೆಗಳನೊಳಕೊಂಡು
ಇರ್ದಪನಿದಕ್ಕೇನ ಮಾಡುವಂ ಪೇಳಿರೇ
ಇರ್ದ ಪರಿಯಳವಡಿಸಿಯಾಯ್ತಿಲ್ಲಿ ನೋಡಿರೇ

ಎನೆ ಜೊವ್ಮಿತಂದೆಗಳ್ ಹೊಸೆದ ಹೂವಿನ ತೆರದಿ
ತನು ಕರಗಿ ಮನದೊಳಗೆ ನಟ್ಟಯಿಸಿ ತಾನುರದೆ
ಸೋಮಧರನಳವಡಿಕೆಯಾದೊಡಿರ್ದಂತಿರ್ಕೆ
ಸೋಮಯ್ಯನುಂ ಸಿಂಹಪೀಠವನಗಲದಿರ್ಕೆ
ಎಂದೆನುತ ಪೋಗಲಾ ಜೊವ್ಮಿತಂದೆಗಳತ್ತ
ಪಿಂದೆ ದಣ್ಣಾಯಕರು ಪರಿಣಾಮದಿಂದಿತ್ತ
ಇರೆ ಜೊವ್ಮಿತಂದೆಗಳ ನೋವನರುಪಲ್ಕೆರೆದು
ಚರಿತದಿಂ ತನುಗುಣವ ತೋರುವೆನಿರಲ್ಕೆಂದು
ಅಲ್ಲಿ ಕೇಶಿಯರಾಜದಣ್ಣಾಯಕರ್ಕಂಡು
ಸಲ್ಲೀಲೆಯಿಂ ದೂರ ಪೊರವಣ್ಗೆ ಬರಲೆಂದು
ಸೋಮನಾಥಂಗೆ ಸದ್ಭಕ್ತರಂ ಕಾಪಿಟ್ಟು
ನಾಮವಂ ನಾಲಿಗೆಯ ತುದಿಯೊಳಗೆ ಸೈತಿಟ್ಟು
ಬಂದನೀಶ್ವರಭಕ್ತರೊಡನೊಡನೆ ನಡೆದು ಬರೆ
ಬಂದೂರ ಪೊರಗೆ ಕೆರೆಯೇರಿ ಏರುತ್ತಮಿರೆ
ಪಚ್ಚೆಯ ರಸದ ತೊರೆಗಳಂತಿರ್ಪ ಗದ್ದೆಯಂ
ಅಚ್ಚರಿಯ ಫಲವಿತತಿ ಪೆಚ್ಚಿದ ವನಾಳಿಯಂ
ತೀವಿದ ಕೊಳಂಗಳಂ ಕಮಲಷಂಡಂಗಳಂ
ಭಾವಕದೊಳಡಿಯಿಡುವ ಹಂಸಮಿಥುನಂಗಳಂ
ವನದೊಳಗೆ ನೆರೆವ ವಿದ್ಯಾಧರಿಯರಿಕ್ಕೆಯಿಂ
ತನತನಗೆ ಬರುತಿರ್ಪ ಖಗಮೃಗದ ತೆಕ್ಕೆಯಿಂ
ಮೃಗಜೀವಮಂ ಕೊಂಡು ಪೋಪ ಗಣನಿಚಯಮಂ
ಗಗನದೋಳ್ಮಿಗೆ ನೆಗೆವ ಪುಷ್ಪಕಪ್ರಕರಮಂ
ಕೂಡೆ ಕೌತುಕವಾಗೆ ದಣ್ಣಾಯಕರ್ಕಂಡು
ನೋಡಿ ತಲೆದೂಗಿ ಮನದೋಳ್ವಿಸ್ಮಯಂಗೊಂಡು
ತಿರುಗಿ ಮತ್ತೊಮ್ಮೆ ನೋಡಲ್ಕೇನುಮಿಲ್ಲದಿರೆ
ಪಿರಿದಪ್ಪ ಕೌತುಕಂ ಚಿತ್ತದೋಳ್ತೋರುತಿರೆ
ಕನಸು ಕಂಡೆಚ್ಚತ್ತ ತೆರದಿ ಬೆರಗಾಗುತಂ
ಮನಸಿನೊಳಗದ್ಭುತವಿದೆಂದು ಮಾತಾಡುತಂ

ತಿರುಗಿ ಬಂದಾ ಪುರದ ಶಿವನಿಳಯಮಂ ಪೊಕ್ಕು
ಹರಹರ ನಮಶ್ಶಿವಾಯೆನುತುಮ್ಮಳಂ ಮಿಕ್ಕು
ಕುಳ್ಳಿರ್ದು ಶಿವಪೂಜೆಯಂ ಮಾಡಲೆಂದಲ್ಲಿ
ಬಳ್ಳಿವರಿದಡರ್ವ ನೋಟದೊಳು ನೋಡುತ್ತಲ್ಲಿ
ಮಜ್ಜನಕ್ಕೆರೆಯಲೆಂದಾ ಸೋಮನಾಥನಂ
ಸಜ್ಜನಸ್ನೇಹದಿಂ ಪಾರ್ವತೀನಾಥನಂ
ಕರಕೆ ಬಿಜಯಂಗೆಯ್ಯಲೆಂದು ಕೆಯ್ಯಂ ನೀಡಿ
ಹರುಷದಿಂ ಜೊಮ್ಮಣ್ಣನಿರಿಸಿದಂತಿರೆ ನೋಡಿ
ದಣ್ಣಾಯಕರ ಮನದ ಹೇಸಿಕೆಗಳೆಯಲೆಂದು
ಅಣ್ಣ ಜೊಮ್ಮಯ್ಯನಂ ಮೆರೆದು ತೋರುವೆನೆಂದು
ಗದ್ದುಗೆಯ ಮೇಲಿಂದ ಅತ್ತಿತ್ತ ಚಲಿಸದಿರೆ
ಇದ್ದಿದ್ದಿದೇನಾಯ್ತೆನುತ ನೋಡುತ್ತಮಿರೆ
ಮತ್ತೊಮ್ಮೆ ಕರೆಯಲೆಂದೊಲಿದು ಭರದಿಂ ನೋಡೆ
ಉತ್ತಮಂ ಜೊಮ್ಮಣ್ಣತಂದೆಗೆ ಮನಂ ಕೂಡೆ
ಬಂದು ನೊಂದೇಕಿರ್ದಪಿರಿ ಮನೆಗೆ ಬನ್ನಿರೇ
ಇಂದೆನ್ನನಿಂತು ನೋಯಿಸಲೇಕೆ ಬನ್ನಿರೇ
ಎನಲಲ್ಲಿ ದಣ್ಣಾಯಕರ್ಕಂಡು ಸಿಗ್ಗಾಗಿ
ಮನದೊಳಗೆ ಸೋಮನಾಥನ ಪರಿಗೆ ಬೆರಗಾಗಿ
ಭಕ್ತರೊಳ್ಛಲವೇಕೆ ಭಕ್ತರೊಳ್ಬಲುಹೇಕೆ
ಭಕ್ತರೊಳ್ಪೂರದಭಿಮಾನದಾಸೆಗಳೇಕೆ
ಎನುತಲಾ ದಂಡನಾಯ್ಕರ್ನುಡಿದರಂತಲ್ಲಿ
ಮನಸಿಜಹರಂ ನೀಮಿರೆಂದಿರಿಸಿದಂತಲ್ಲಿ
ಇರ್ದಪಂ ಸೋಮನಾಥಂ ಚಲಿಸದೆತ್ತಲುಂ
ಸಾರ್ದು ಸಿಂಹಾಸನದಿ ನೆಲೆ ಮಿಡುಕನೆತ್ತಲುಂ
ಸೋಮನಾಥಂ ಬರಲ್ಬಂದಪೆವು ನಾವೆನಲು
ಭೀಮನಾಥನ ಕೂಡೆಯಾರೋಗಿಸಲ್ಕೆನಲು
ಇರವೇಳ್ದಡಿರ್ದ ದೇವಂ ಸೋಮನಾಥ ವಿಭು
ಬರವೇಳ್ದು ಬಿನ್ನೈಸೆ ಬಾರದಿರ್ಪನೆ ಶಂಭು
ಎಂತೆಂತೆನುತ್ತಲಗಿನಾಯತಂ ಗೊಳುತಿರಲು
ಮುಂತೆ ದಣ್ಣಾಯಕರ ಕೈಗೆ ಲಿಂಗಂ ಬರಲು

ಓತು ಜೊಮ್ಮಣ್ಣನಂ ತೆಗೆದಪ್ಪಿ ಬಿಗಿಯಪ್ಪಿ
ಕೌತುಕದ ಮೇಲೆ ಕೌತುಕವಡಸಿ ಮತ್ತಪ್ಪಿ
ಒಡನೊಡನೆ ನಡೆತಂದು ನಿಜನಿಳಯಮಂ ಪೊಕ್ಕು
ಎಡೆಮಾಡಿದೆಡೆಗಳೊಳು ಲಿಂಗಾರ್ಚನೆಗೆ ಮಿಕ್ಕು
ಮಜ್ಜನಂ ಪೂಜೆಧೂಪಾರತಿಗಳಂ ಕೊಟ್ಟು
ಪ್ರಜ್ವಲಿಪ ಲಿಂಗಕ್ಕೆ ನೇಹಮಂ ಮುಂದಿಟ್ಟು
ಜೊಮ್ಮಣ್ಣನರಸಿ ಪರಿಯಾಣಕ್ಕೆ ಬಡಿಸುತಿರೆ
ಸುಮ್ಮಾನ ಉಡುಗಿ ದಣ್ಣಾಯಕರ್ನಡುಗುತಿರೆ
ಸೋಮನಾಥನನೊಮ್ಮೆ ಬಡಿಸುತಿರ್ಪರನೊಮ್ಮೆ
ಭೀಮನಾಥನನೊಮ್ಮೆ ಜೊಮ್ಮಣ್ಣನುಮನೊಮ್ಮೆ
ನೋಡುತಂ ದಂಡನಾಯ್ಕರ್ಕರಗಿ ಕೊರಗುತಿರೆ
ಬಾಡುತಂ ನುಡಿಯಲಮ್ಮದೆ ಕಂದಿ ಕುಂದುತಿರೆ
ಇರೆ ಜೊಮ್ಮಿತಂದೆ ಎಲ್ಲವ ನೋಡಿ ನಸುನಗುತೆ
ಹರುಷದಿಂ ದಂಡನಾಯ್ಕರ ಮೊಗವನೀಕ್ಷಿಸುತೆ
ಆರೋಗಿಸಲ್ಕಿಕ್ಕಿ ಎನೆ ಸುಮ್ಮನಿರೆ ಕಂಡು
ಮಾರಾರಿಯಣುಗನವರಂಜುವಿಧವಂ ಕಂಡು
ಎಲೆ ಸೋಮನಾಥ ದಣ್ಣಾಯಕರ ಮನದಂತೆ
ಪಲಲವಂ ಪಕ್ವಾನ್ನತತಿಗಳಂ ಮಾಡಿಂತೆ
ಎನಲಲ್ಲಿ ಬಿಸುಪ ಹೂರಿಗೆ ಗಾರಿಗೆಗಳಾಗುತಿರೆ
ತನಿವಾಲ ಸಣ್ಣ ಸೇವಗೆಯ ಪಾಯಸಮಾಗೆ
ತೊಳಗುವಿಡ್ಡಲಿಗೆ ಮಂಡಿಗೆಗಳಾಗುತ್ತಮಿರೆ
ಕಳವೆಯೋಗರ ಪತ್ರಪುಷ್ಪಫಲವಾಗುತಿರೆ
ಕಂಡು ದಣ್ಣಾಯಕರು ಹಿಗ್ಗಿ ಹಾರೈಸುತಂ
ಹಿಂಡೇಳ್ವ ಪುಳಕದಿಂ ಹಾರೈಸಲಿಕ್ಕುತಂ
ಸಂಗಡಂ ಲಿಂಗಪ್ರಸಾದಮಂ ಕೈಕೊಂಡು
ಹಿಂಗದಾನಂದಸುಖಮಂ ಮನದೊಳಿಡೆಗೊಂಡು
ಶಿವರಾತ್ರಿಯಂ ಮಾಡಿ ಸಂಗಸುಖದಿಂದಮಿರೆ
ದಿವಸಕರನುದಯವಾದುದನೇನುಮರಿಯದಿರೆ
ಶರಣಸಂಗದಿ ಇರುಳ್ಪಗಲೆಂಬುದರಿಯದಿರೆ

ಸಂಬಂಧಿಸಿದವರನ್ನು ತನ್ನಂತೆ ಮಾಡುವ ಉದ್ದಿಶ್ಯವಾಗಿ, ಅವರೊಡನೆ ವ್ಯವಹರಿಸುವವನು. ಪರವೆಂದರೆ ಯಾವಾಗಲೂ ಅರಿವು ಮುಂತಾಗಿ ಆಚರಿಸುವವನು.

(೬೧) ತ್ರಿವಿಧ ಪ್ರಸಾದಲಿಂಗಃ— ಇವು ಶುದ್ಧ ಸಿದ್ಧ ಪ್ರಸಿದ್ಧವೆಂದು ಮೂರು ಇವೆ. ಸದಾಚಾರದಿಂದ ಶುದ್ಧತೆಯನ್ನು ಹೊಂದಿ ಗುರು ಮುಖಸಿಂದ ಎಂದರೆ ಜ್ಞಾನಿಗಳಿಂದ ಮಲತ್ರಯಗಳನ್ನು ಹೇಗೆ ಕಳೆಯು ಬೇಕೆಂಬುದನ್ನು ತಿಳಿದು ಅದರಂತೆ ಆಚರಿಸಲು ಕೆಡಕಾದುದಾವುದೋ ಅದು ಕಳೆದು ಹೋಗುತ್ತದೆ. ಹೀಗೆ ದೇಹದಲ್ಲಿಯ ಮಾಲಿನ್ಯವು ಕಳೆದು ಹೋಗಿ ಉಳಿದ ಶೇಷವೇ ಶುದ್ಧ ಪ್ರಸಾದವು. ಹೀಗೆ ದೇಹದಲ್ಲಿಯ ಅಶುದ್ಧ ತೆಯು ಹೋಗುತ್ತಿರಲಾಗಿ ಮನುಷ್ಯನ ಕರಣ ಅಥವಾ ಇಂದ್ರಿಯಗಳ ಲ್ಲಿಯ ಮಾಲಿನ್ಯವು ಸಹ ಹೊರಟುಹೋಗಹತ್ತುವದು. ಆಗ ಅದರಲ್ಲಿಯ ಲಿಂಗದ ಗುಣವು ಬಲಪಟ್ಟು ತೋರಹತ್ತುವದು. ಹೀಗೆ ಕರಣಗಳ ಲ್ಲಿಯ ದುಷ್ಟಪ್ರವೃತ್ತಿಗಳನ್ನು ಹೋಗಲಾಡಿಸಿ ಉಳಿದ ಶೇಷವೇ ಸಿದ್ಧ ಪ್ರಸಾದವಾಗಿರುತ್ತದೆ. ಹೀಗೆ ಸಿದ್ಧಪ್ರಸಾದವು ಎಡೆಗೊಳ್ಳಹತ್ತಲು ಜಗ ತ್ತಿಗೋಸ್ಕರ ಇರುವ ಖಂಡಿತ ಭಾವ ಅಥವಾ ಭಿನ್ನಭಾವವು ಹೊರಟು ಹೋಗಿ ಅಭಿನ್ನಭಾವವು ಅಥವಾ ವಿಶ್ವಬಂಧುತ್ವಭಾವವು ಉಂಟಾಗು ತ್ತದೆ. ಆಗ ತಾನೂ ಹೊರಗಿನದೂ ಎಂಬುಭಯಭಾವವು ಹೊರಟು ಹೋಗುತ್ತದೆ. ಇದೇ ಜಂಗಮವನ್ನು ಅಳವಡಿಸಿಕೊಳ್ಳುವದು. ಹೀಗೆ ಅಭಿನ್ನತೆಯನ್ನು ಹೋಗಲಾಡಿಸಲು ಉಳಿದ ಶೇಷವೇ ಪ್ರಸಿದ್ಧಪ್ರಸಾದವು. ಇವೆಲ್ಲವೂ ಪ್ರಸಾದಲಿಂಗವೆನಿಸಿಕೊಳ್ಳುತ್ತವೆ. ಮನುಷ್ಯನಲ್ಲಿ ಯಾವುದು ಭೇದವನ್ನುಂಟುಮಾಡುತ್ತದೋ ಅದನ್ನು ಹೋಗಲಾಡಿಸುವುದೇ ಪ್ರಸಾ ದದ ಕಾರ್ಯವಾಗಿದೆ. ಹೀಗೆ ಹೋಗಲಾಡಿಸಿದ ಬಳಿಕ ಮನುಷ್ಯನ ಕ್ರಿಯೆ, ಕರಣ, ಜ್ಞಾನಗಳಲ್ಲಿ ಯಾವುದು ಉಳಿಯುತ್ತದೋ ಅದೇ ಅನುಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳೆಂದೆನಿಸಿಕೊಳುತ್ತವೆ.

(೬೨) ತ್ರಿವಿಧಮಹಾಲಿಂಗಃ—ಇವು ಪಿಂಡಜ, ಅಂಡಜ, ಬಿಂದುಜ, ಎಂದಿರುತ್ತವೆ. ಮಹಾಲಿಂಗವು 'ಅರಿವು' ಇದರ ಒಂದು ಬಗೆಯ ಪ್ರಕಾ ಶವಾಗಿರುತ್ತದೆ. ತನ್ನ ಸುತ್ತಲಿನ ದೃಶ್ಯ ಪದಾರ್ಥಗಳೇ ಪಿಂಡ, ಜಗ ತ್ತಿನಲ್ಲಿಯುವು ಅಂಡ, ಮತ್ತು ಇವುಗಳಿಗೆ ಮೀರಿದವುಗಳೇ ಬಿಂದು.

ಹೀಗೆ ಪದಾರ್ಥಗಳಲ್ಲಿ ಮೂರು ಭಾಗಗಳು ಇರುತ್ತವೆ. ಮಹಾಲಿಂಗವು ತನ್ನ ಸುತ್ತಲಿನ ದೃಶ್ಯ ಪದಾರ್ಥಗಳಿಗೆ ಸಂಬಂಧಿಸಿ ತನ್ನಲ್ಲಿ ಅಳವಟ್ಟಲ್ಲಿ ಅದು ಪಿಂಡಜವು. ಇದಕ್ಕೂ ಸೂಕ್ಷ್ಮವಾಗಿರುವ ಜಗತ್ತಿನಲ್ಲೆಲ್ಲ ಸಂಬಂಧಿಸಿ ಕೊಂಡು ತನ್ನಲ್ಲಿ ಅಳವಡಲು ಅಂದು ಅಂಡಜವು. ಮುಂದೆ ಈ ಜಗತ್ತಿಗೂ ಕೂಡ ಮೇಲಿರುವ ಮಹತ್ತಿನಲ್ಲಿ ಸಂಬಂಧಿಸಿಕೊಂಡಲ್ಲಿ ಅದು ಬಿಂದುಜವು. ಇಲ್ಲಿ ನಾವು ನಾದ ಬಿಂದು, ಕಲೆಗಳಲ್ಲಿ ಯಾವುದನ್ನು ಬಿಂದುವೆಂದು ಉಲ್ಲೇಖಮಾಡಿರುತ್ತೇವೆಯೊ ಅದೇ ಈ ಬಿಂದುವಿದೆ. ಈ ಬಿಂದುವಿಗೆ ಸಂಬಂಧಿಸಿಕೊಂಡು ತನ್ನಲ್ಲಿ ಈ ಮಹಾಲಿಂಗದ ಪ್ರಕಾಶವು ಎಡೆಗೊಳ್ಳಬೇಕು. ಇದು ಬಿಂದುಜ ಮಹಾಲಿಂಗವು. ಇದು ಐಕ್ಯ ಸ್ಥಿತಿಯಲ್ಲಿರುವವನ ಉತ್ಕೃಷ್ಟ ಸ್ಥಿತಿಯು. ಈ ಬಿಂದುಜ ಸ್ಥಿತಿಯನ್ನು ಹೊಂದಿದ ತರುವಾಯ ಮನುಷ್ಯನು ಶೂನ್ಯದ ಮೂರು ಸ್ಥಿತಿಗಳಲ್ಲಿ ಪ್ರವೇಶ ಹೊಂದಲು ಅರ್ಹನಾಗುತ್ತಾನೆ. ಮತ್ತು ಕಡೆಗೆ ನಿರವಯ ಅಥವಾ ಬಯಲು ಎಂಬುದರಲ್ಲಿ ಅಡಗುತ್ತಾನೆ.

ಹೀಗೆ ಆರು ಅಂಗಗಳಲ್ಲಿ ಹಿಂದೆ ನಂ॥ ೫೭ ರಿಂದ ೬೨ ರ ವರೆಗೆ ಪ್ರತಿಯೊಂದರಲ್ಲಿ ಮೂರು ಮೂರು ಭಾಗಗಳಂತೆ ಒಟ್ಟು ೧೮ ವಿಭಾಗಗಳನ್ನು ಷಟ್‌ಸ್ಥಲ ಜ್ಞಾನಿಗಳು ಕಲ್ಪಿಸಿರುತ್ತಾರೆ. ಹೀಗೆಯೇ ೬ ಅಂಗಸ್ಥಲಗಳಲ್ಲಿ ಪ್ರತಿಯೊಂದು ಸ್ಥಲದಲ್ಲಿ ಮೂರು ಮೂರರಂತೆ ಒಟ್ಟು ೧೮ ಸ್ಥಲಗಳನ್ನು ಪುನಃ ಮಾಡಿರುತ್ತಾರೆ. ಅವುಗಳ ವಿವರಣೆ ಏನಂದರೆಃ —

(೬೩) ತ್ರಿವಿಧಭಕ್ತಃ— ಇವು ಗುರುಭಕ್ತ, ಲಿಂಗಭಕ್ತ, ಜಂಗಮಭಕ್ತ ಎಂದಿರುತ್ತವೆ. ತನುಕ್ರಿಯೆಯಿಂದ ತನುಮನಧನವನ್ನರ್ಪಿಸುವವನು ಗುರುಭಕ್ತನು. ಮನಕ್ರಿಯೆಯಿಂದ ಇವುಗಳನ್ನರ್ಪಿಸುವವನು ಲಿಂಗಭಕ್ತನು. ಧನಕ್ರಿಯೆಯಿಂದ ತನುಮನಧನಗಳನ್ನರ್ಪಿಸುವವನು ಜಂಗಮಭಕ್ತನು. ಇವುಗಳಲ್ಲಿ ಧನಕ್ರಿಯೆಯಿಂದ ಧನವನ್ನು ಅರ್ಪಿಸುವದೇ ಭಕ್ತನ ಅತ್ಯಂತ ಉತ್ಕೃಷ್ಟ ಸ್ಥಿತಿಯನ್ನು ತೋರಿಸುತ್ತದೆ. ಸದಾಚಾರವೇ ತನುಕ್ರಿಯೆ ಎನಿಸಿಕೊಳ್ಳುತ್ತದೆ. ಅದನ್ನು ಒಳಕೊಂಡು ಅರ್ಪಿಸುವವನೇ ಗುರುಭಕ್ತನು. ಲಿಂಗಾನುಭಾವಿಯು ಮನಕ್ರಿಯೆಯುಳ್ಳವನು. ಹೀಗೆ ಅರ್ಪಣ ಮಾಡುವವನೇ ಲಿಂಗಭಕ್ತನು. ತನ್ನದೆಂಬುದೆಲ್ಲವೂ ಧನವೆಂದೆನಿಸಿಕೊಳ್ಳುತ್ತಿದೆ. ಅದೆಲ್ಲದರ ಬಗ್ಗೆ ಅರ್ಪಣದ ಕ್ರಮಾನುಸಾರವಾಗಿ ಮಾಡುವವನು ಜಂಗಮಭಕ್ತನು. ಈ ಎಲ್ಲ ಕಾರ್ಯಗಳಲ್ಲಿ ಶ್ರದ್ಧಾಭಕ್ತಿಯುಳ್ಳವನಾಗಿರಬೇಕು. ಹೀಗೆ ಭಕ್ತನಲ್ಲಿ ಮೂರು ವಿಧಗಳಿವೆ.

(೯೪) ತ್ರಿವಿಧ ಮಹೇಶ್ವರಃ— ಇವುಗಳು ಇಹಲೋಕ ವೀರ, ಪರಲೋಕ ವೀರ, ಲಿಂಗ ವೀರ ಎಂದು ಮೂರಿವೆ. ಮಹೇಶ್ವರನು ನಿಷ್ಠೆಯುಳ್ಳವನು. ಹಿಡಿದ ಕಾರ್ಯಗಳನ್ನು ಬಿಡುವುದಿಲ್ಲ. ಮರಣವನ್ನೂ ಕೂಡ ಲೆಕ್ಕಿಸನು. ನಿಂದಕರನ್ನೂ ತನ್ನ ಕಾರ್ಯಗಳಲ್ಲಿ ಪ್ರತಿರೋಧಿಸುವವರನ್ನೂ ಶಿಕ್ಷಿಸಲು ಸನ್ನದ್ಧನಾಗಿರುವನು. ಇವನು ಇಹಲೋಕ ವೀರನು. ಮಾನಸಿಕ ಧೈರ್ಯವುಳ್ಳವನಾಗಿ ಧರ್ಮಾರ್ಥ ಕಾಮ ಮೋಕ್ಷಗಳನ್ನು ಸಹ ಹಿಂದಕ್ಕಿಟ್ಟು ನಿಷ್ಕಾಮಿಯಾಗಿ ಶಿವಕಾರ್ಯದಲ್ಲಿ ಸನ್ನದ್ಧನಾದವನು ಪರಲೋಕ ವೀರನು. ಶೂರರು ಅನೇಕರು ಇದ್ದಾರೆ. ಆದರೆ ಮಾನಸಿಕ ಧೈರ್ಯವುಳ್ಳವರು. ದೊರೆಯುವದು ದುರ್ಲಭ. ಇವರು ಪರಲೋಕ ವೀರರೆಂದು ಹೇಳಲ್ಪಡುತ್ತಾರೆ. ಆ ಮೇಲೆ ಯಾವನು ಅಂಗದಲ್ಲಿ ಲಿಂಗವುಳ್ಳವನಾಗಿ ಸರ್ವ ಕರಣಗಳನ್ನು ತನ್ನಲ್ಲಿರಿಸಿಕೊಂಡು ವರ್ತಿಸುತ್ತಾನೋ ಅವನು ಲಿಂಗವೀರನು. ಕರಣಗಳನ್ನು ಗೆಲ್ಲುವದಕ್ಕೆ ಬಹು ಕಡುತರವಾದ ಸ್ಥೈರ್ಯವು ಬೇಕು. ಹೀಗೆ ಮಾಡುವವನು ಲಿಂಗವೀರನು.

(೬೫) ತ್ರಿವಿಧ ಪ್ರಸಾದಿಃ— ಇವು ಅರ್ಪಿತ ಪ್ರಸಾದಿ, ಅವಧಾನ ಪ್ರಸಾದಿ, ಪರಿಣಾಮ ಪ್ರಸಾದಿ ಎಂದಿವೆ. ಅರ್ಪಣ, ಅವಧಾನ, ಪರಿಣಾಮ ಎಂದು ಕಾರ್ಯಗಳಲ್ಲಿಯು ಮೂರು ರೀತಿಗಳಿರುತ್ತವೆ. ಅರ್ಪಣ ಬುದ್ಧಿಯಿಂದ ಮೊದಲು ಕಾರ್ಯವನ್ನು ಕೈಕೊಳ್ಳಬೇಕು. ಹೀಗೆ ಕೈಕೊಂಡಲ್ಲಿ ಅವನಲ್ಲಿ ಅವಧಾನ ಭಾವವು ಅಥವಾ ಏಕಾಗ್ರತೆಯು ಆ ಕಾರ್ಯಕ್ಕೋಸ್ಕರ ಉಂಟಾಗುವದು. ಹೀಗೆ ಕಾರ್ಯ ಮಾಡಿದಲ್ಲಿ ಅದರ ಸುಪರಿಣಾಮಗಳು ಅವನಲ್ಲಿ ಎಡೆಗೊಂಡು ಅವರಲ್ಲಿ ಅವನು ಏಕಾಕಾರ ಹೊಂದುತ್ತಾನೆ. ಈ ಮೂರು ಕ್ರಿಯೆಗಳಲ್ಲಿ ಅನುಕ್ರಮವಾಗಿ ಅರ್ಪಿತ ಪ್ರಸಾದಿ, ಅವಧಾನ ಪ್ರಸಾದಿ, ಪರಿಣಾಮ ಪ್ರಸಾದಿ ಎಂದು ಮೂರು ವಿಧಗಳು ಉಂಟಾಗುತ್ತವೆ. ಉದಾಹರಣಾರ್ಥವಾಗಿ, ಕಾಯದ ಕೈಯ್ಯಲ್ಲಿ ಇಷ್ಟಲಿಂಗಕ್ಕೆ ಅರ್ಪಿಸುವವನು ಅರ್ಪಿತ ಪ್ರಸಾದಿಯಾಗುವನು. ಇಂದ್ರಿಯಗಳಲ್ಲಿ ಐದು ಲಿಂಗಗಳನ್ನು ಸ್ಥಾಪಿಸಿ ಅವುಗಳ ಅನುಭವವನ್ನು ಮನದ ಕೈಯಲ್ಲಿ ಕೊಟ್ಟು ಕೊಳ್ಳುವವನು ಅವಧಾನ ಪ್ರಸಾದಿಯು. ಅಂಗವೆಲ್ಲವು ಲಿಂಗಮಯವಾಗಿ ಭಾವ ಭರಿತನಾದವನು ಪರಿಣಾಮ ಪ್ರಸಾದಿಯು.

(೬೬) ತ್ರಿವಿಧ ಪ್ರಾಣಲಿಂಗಿಃ— ಇವು ಆಚಾರಪ್ರಾಣಿ, ಲಿಂಗಪ್ರಾಣಿ, ಜಂಗಮಪ್ರಾಣಿ, ಎಂದಿರುತ್ತವೆ. ಪ್ರಸಾದಿಯಾಗಿ ಏಕಾಗ್ರಚಿತ್ತನಾದಲ್ಲಿ

ಅವನಲ್ಲಿ ಲಿಂಗವು ಅನುಗೊಳ್ಳಹತ್ತುತ್ತಿದೆ. ಮನುಷ್ಯನ ಬಾಹ್ಯದಲ್ಲಿ ಆಚಾರ, ಅವನ ಅಂತರಂಗದಲ್ಲಿ ಲಿಂಗ ಮತ್ತು ಭಾವದಲ್ಲಿ ಜಂಗಮ ಇವುಗಳು ಇರುತ್ತವೆ. ಇವುಗಳ ತಿರುಳು ಅಥವಾ ಸಾರ ಅವನ ಪ್ರಾಣ ದಲ್ಲಿ ಅನುಕ್ರಮವಾಗಿ ಬೆರೆಯಲು ಅವನು ಆಚಾರಪ್ರಾಣಿ, ಲಿಂಗಪ್ರಾಣಿ, ಮತ್ತು ಜಂಗಮಪ್ರಾಣಿ ಎಂದು ಮೂರು ವಿಧಗಳು ಆಗುತ್ತವೆ. ಇವು ಪ್ರಾಣಲಿಂಗಿಯ ಮೂರು ವಿಧಗಳಾಗಿವೆ. ಹೀಗಿರುವವನೇ ಶಿವಯೋಗಿಯು. ಮತ್ತು ಅವನ ಅಂತಿಮ ಸ್ಥಿತಿಯಲ್ಲಿ ಜಂಗಮಪ್ರಾಣಿ ಎಂದು ಹೇಳಬಹುದು. ಅಂದರೆ ಬಾಹ್ಯದಲ್ಲಿ ಆಚಾರವನ್ನು ಗ್ರಹಿಸುವವನು ಆಚಾರ ಪ್ರಾಣಿಯು. ಹೀಗೆ ಸತ್‌ಕ್ರಿಯೆಗಳನ್ನು ಮಾಡುತ್ತ ಲಿಂಗ ದೊಡನೆ ಪ್ರಾಣವು ಏಕಾಕಾರಹೊಂದಿ ಪ್ರವಹಿಸಹತ್ತಲು ಅವನು ಲಿಂಗ ಪ್ರಾಣಿಯು. ಇದರ ಮುಂದೆ ಜಗತ್ತಿನಲ್ಲಿ ತುಂಬಿಕೊಂಡಿರುವ ಚೈತ ನ್ಯಕ್ಕೆ ತನ್ನದೆಲ್ಲವನ್ನು ನಿವೇದಿಸಿ, ಅದರಲ್ಲಿ ತಾನೇ ತಾನಾಗಿರುವವನು ಜಂಗಮಪ್ರಾಣಿಯು,

(೬೭) ತ್ರಿವಿಧ ಶರಣ:— ಇವು ಇಷ್ಟಲಿಂಗಾರ್ಚಕ, ಪ್ರಾಣ ಲಿಂಗಾರ್ಚಕ, ತೃಪ್ತಿಲಿಂಗಾರ್ಚಕ ಎಂದಿವೆ. ಪ್ರಸಾದದ್ದ ಶೇಷವೇ ಶರಣನೆನಿಸಿಕೊಳ್ಳುತ್ತಾನೆ. ಅವನಲ್ಲಿ ಪ್ರಸಾದಲಿಂಗವು ನೆಲೆಗೊಂಡಿರು ತ್ತದೆ. ಅವನ ಬಾಹ್ಯದಲ್ಲಿ ಇಷ್ಟಲಿಂಗವು ಅಂತರಂಗದಲ್ಲಿ ಪ್ರಾಣಲಿಂಗವು ಭಾವದಲ್ಲಿ ತೃಪ್ತಿಲಿಂಗವು ಅಥವಾ ಭಾವಲಿಂಗವು ಇವುಗಳಿದ್ದು ಅವನ ಬಾಹ್ಯದ ಇಷ್ಟಲಿಂಗಾಚಾರಗಳನ್ನು ಮಾಡುವಲ್ಲಿ ಯಾವ ತರದ ಅನಿಷ್ಟ ಗಳು ಅಂದರೆ ತಡೆಗಳುಂಟಾಗುವದಿಲ್ಲ. ಆದ್ದರಿಂದ ಅನಿಷ್ಟ ನಷ್ಟವಾ ಯಿತ್ತಾಗಿ ಇಷ್ಟಲಿಂಗಾರ್ಚಕನೆಂದು ಹೇಳಲ್ಪಡುತ್ತಾನೆ. ಅವನು ತಾನು ಮತ್ತು ತನ್ನ ಸುತ್ತಲಿನ ಪರಿಸ್ಥಿತಿ ಇವುಗಳಲ್ಲಿ ಯಾವ ತರದ ಭೇದ ಬುದ್ಧಿಯುಳ್ಳವನಿರುವದಿಲ್ಲಾದ್ದರಿಂದ ಅವನು ಪ್ರಾಣಲಿಂಗಾರ್ಚಕನು. ಈ ಅಭೇದ ಭಾವವು ಅವನ ಇಹ ಪರದಲ್ಲಿಯೂ ಕೂಡ ಇರುವದಿಲ್ಲ. ಆದ್ದರಿಂದ ಅವನು ತೃಪ್ತಿಲಿಂಗಾರ್ಚಕನು. ಶರಣನು ಸುಜ್ಞಾನ ಭಕ್ತಿ ಯುಳ್ಳವನು. ಭೇದ ಭಾವವಿಲ್ಲದಿರುವುದೇ ಈ ಸುಜ್ಞಾನ ಭಕ್ತಿಯು. ಈ ಭೇದವು ಬಾಹ್ಯದಲ್ಲಿರದಿದ್ದರೆ ಅವನು ಇಷ್ಟ ಲಿಂಗಾರ್ಚಕನು. ಇದು ಸುತ್ತ ಲಿನ ಜಗತ್ತಿನೊಡನೆಯೂ ಇರದಿದ್ದರೆ ಅವನು ಪ್ರಾಣಲಿಂಗಾರ್ಚಕನು. ಇಹ ಪರಗಳೆರಡರಲ್ಲಿಯೂ ಇರದಿದ್ದರೆ ಅವನು ಭಾವಲಿಂಗಾರ್ಚಕನು.

(೬೮) ತ್ರಿವಿಧ ಐಕ್ಯಃ— ಈ ಭೇದಗಳು ಕಾಯ ಲಿಂಗೈಕ್ಯ, ಜೀವ ಲಿಂಗೈಕ್ಯ, ಭಾವಲಿಂಗೈಕ್ಯ ಎಂದಿರುತ್ತವೆ. ಐಕ್ಯನಲ್ಲಿ ಮಹಾಲಿಂಗದ ಪ್ರಕಾಶವು ಬೆಳಗುತ್ತಿರುತ್ತದೆ. ಈ ಪ್ರಕಾಶವು ಬಾಹ್ಯ ಕ್ರಿಯೆಗಳಲ್ಲಿ ತಲೆದೋರಲು, ಇದೇ ಕಾಯಲಿಂಗೈಕ್ಯವು. ಆಗ ಆ ಕ್ರಿಯೆಗಳು ಪ್ರಕಾಶಮಯವಾಗುತ್ತವೆ. ಮಹಾಲಿಂಗದ ಪ್ರಕಾಶವು ಅನುಭಾವದಲ್ಲಿ ತೋರಲು ಅನುಭಾವವು ಪ್ರಕಾಶಮಯವಾಗುತ್ತದೆ. ಇದೇ ಜೀವಲಿಂಗೈಕ್ಯವು. ಮಹಾಲಿಂಗದ ಪ್ರಕಾಶವು ಅರಿವು ಇದರಲ್ಲಿ ತೋರಲು ಈ ಅರಿವು ಪ್ರಕಾಶಮಯವಾಗುತ್ತಿದೆ. ಇದೇ ಭಾವಲಿಂಗೈಕ್ಯವು. ಪ್ರಕಾಶವೆಂದರೆ ಚರ್ಮ ಚಕ್ಷುವಿಗೆ ಕಾಣುತ್ತಿರುವ ಬೆಳಕು ಅಲ್ಲ. ಅದು ಲಿಂಗದೊಡನೆ ಬೆರೆದಂಥ ಒಂದು ಬಗೆಯ ಶಿವಾನುಭವದ ಅತ್ಯುಚ್ಚ ಸ್ಥಿತಿ ಎಂದು ಹೇಳಬಹುದು.

ಹೀಗೆ ಆರು ಅಂಗಗಳಲ್ಲಿ ಹಿಂದೆ ನಂ. ೬೩ ರಿಂದ ೬೮ರ ವರೆಗೆ ಹೇಳಿದಂತೆ ಮೂರು ಮೂರು ವಿಭಾಗಗಳಾಗಿ ೧೮ ವಿಭಾಗಳನ್ನು ಷಟ್ ಸ್ಥಲ ಜ್ಞಾನಿಗಳು ಮಾಡಿರುತ್ತಾರೆ. ಲಿಂಗಸ್ಥಲಗಳು ೧೮, ಅಂಗಸ್ಥಲಗಳು ೧೮, ಹೀಗೆ ೩೬ ಸ್ಥಲಗಳು ಆಗುತ್ತವೆ.

(೬೯) ಮೂವತ್ತಾರು ಲಿಂಗಸ್ಥಲಗಳು (೧ನೇ ವಿಧ):— ಮುಂದೆ ಲಿಂಗಸ್ಥಲಗಳು ೩೬ ಮತ್ತು ಅಂಗಸ್ಥಲಗಳು ೩೬ ಹೀಗೆ ಬೇರೆ ಸ್ಥಲಗಳು ಉಂಟಾಗುತ್ತವೆ. ಷಟ್‌ಸ್ಥಲಗಳಲ್ಲಿಯ ಪ್ರತಿಯೊಂದು ಸ್ಥಲದಲ್ಲಿ ಮನುಷ್ಯನು ಆ ಒಂದೇ ಸ್ಥಲದ ಅನುಭವ ಮಾತ್ರವಲ್ಲದೆ ಉಳಿದ ಐದು ಸ್ಥಲಗಳ ಅನುಭವವನ್ನೂ ಹೊಂದಬೇಕು. ಹೀಗೆ ಹೊಂದದೆ ಹೋದಲ್ಲಿ ಅವನು ಪ್ರಗತಿಯನ್ನು ಹೊಂದಲಾರನು. ಉದಾ:— ಭಕ್ತನು ಸದಾ ಭಕ್ತಸ್ಥಲದಲ್ಲಿ ಉಳಿದರೆ ಆವನು ಮೋಕ್ಷವನ್ನು ಹೊಂದಲಾರನು. ಅವನು ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಸ್ಥಲಗಳ ಅನುಭವವನ್ನು ಹೊಂದಲೇಬೇಕು. ಇನ್ನೊಬ್ಬನು ಪ್ರಾಣಲಿಂಗಿ ಸ್ಥಲದವನಿರುತ್ತಾನೆ. ಅವನು ಅದರ ಅಭ್ಯಾಸದಲ್ಲಿಯೇ ಉಳಿದರೆ ಅವನಲ್ಲಿ ಪ್ರಗತಿಯಾಗಲಾರದು. ಅವನು ಭಕ್ತ, ಮಹೇಶ್ವರ, ಪ್ರಸಾದಿ, ಶರಣ ಐಕ್ಯ ಇವುಗಳ ಅನುಭವವನ್ನು ಹೊಂದಲೇಬೇಕು. ಇವುಗಳ ಅನುಭವವು ಅವನು ಆಯಾ ಶರೀರಗಳ ಕ್ರಿಯೆಗಳ ಮತ್ತು ಆಯಾ ಇಂದ್ರಿಯಗಳ ಜ್ಞಾನವನ್ನು ಮಾಡಿಕೊಂಡಲ್ಲಿ ಸಾಧ್ಯವಾಗುತ್ತದೆ. ಈ ಎಲ್ಲ ಅನುಭವಗಳು ಲಿಂಗಸ್ಥಲದಲ್ಲಿ ೩೬ ಮತ್ತು ಅವುಗಳಿಗನು

ಸಾರವಾಗಿಯೇ ಅಂಗಸ್ಥಲದಲ್ಲಿ ೩೬ ಹೀಗೆ ಇರುತ್ತವೆ. ಅವುಗಳ ವಿವರಣೆಗಳು ಕೆಳಗೆ ಕೊಡಲ್ಪಟ್ಟವೆ.

(೭೦) ಷಡ್ವಿಧ ಆಚಾರಲಿಂಗಃ – ಇವು ಕ್ರಿಯೆ, ಮಂತ್ರ, ನಿರೀಕ್ಷಣ, ಯಜನ, ಈಳನ, ವೇಧಾ ಎಂದಿರುತ್ತವೆ. ಆಚಾರಲಿಂಗದ ಆರು ವಿಧದ ಪ್ರಗತಿಗಳು ಇಲ್ಲಿ ಹೇಳಲ್ಪಟ್ಟವೆ.

ಆಚಾರ ಲಿಂಗವು ಆರಂಭದಲ್ಲಿ ಸತ್ಕ್ರಿಯೆಯುಳ್ಳದ್ದು. ಸದಾಚಾರ, ಗಣಾಚಾರ, ಶಿವಾಚಾರ, ಭೃತ್ಯಾಚಾರ, ಲಿಂಗಾಚಾರ ಹೀಗೆ ಪಂಚಾಚಾರ ಸ್ವರೂಪುಳ್ಳದ್ದು. ಹೀಗೆ ವರ್ತಿಸುವದು ಆಚಾರಲಿಂಗದೊಳಗಣ ಆಚಾರ ಲಿಂಗವು.

ಈ ಮೆಟ್ಟಲಿನ ತರುವಾಯ ಮಂತ್ರ ಸ್ವರೂಪವಾದ ಗುರು ಲಿಂಗವಿದೆ. ಅಲ್ಲಿ ಆಚಾರಲಿಂಗವು ಮಂತ್ರಾತ್ಮಕವಾಗಿ ಪಂಚಾಕ್ಷರೀ ಮಂತ್ರ ಸ್ಮರಣ ಮಾಡುವದೇ ಇದರ ಲಕ್ಷಣವಾಗಿರುತ್ತದೆ. ಹೀಗೆ ವರ್ತಿಸುವದೇ ಆಚಾರಲಿಂಗದೊಳಗಣ ಗುರುಲಿಂಗವು.

ಈ ಗುರುಲಿಂಗದ ತರುವಾಯ ನಿರೀಕ್ಷಣ ಸ್ವರೂಪವಾದ ಶಿವ ಲಿಂಗವಿದೆ. ಇಲ್ಲಿ ಎವೆ ಹಳಚದೆ ಇಷ್ಟಲಿಂಗ ನಿರೀಕ್ಷಣ ಮಾಡುವದೇ ಈ ಆಚಾರಲಿಂಗದ ಕಾರ್ಯವಾಗಿದೆ. ಇದು ಆಚಾರ ಲಿಂಗದೊಳಗಣ ಶಿವಲಿಂಗವು.

ಶಿವಲಿಂಗದ ತರುವಾಯ ಯಜನ ಸ್ವರೂಪವಾದ ಜಂಗಮಲಿಂಗ ವಿದೆ. ಇಲ್ಲಿ ಆಚಾರ ಲಿಂಗದ ಕಾರ್ಯಗಳು ಯಜನ ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ಮಾಡುವದೇ ಇರುತ್ತವೆ. ಇದು ಆಚಾರಲಿಂಗದೊಳಗಣ ಜಂಗಮಲಿಂಗವು.

ಜಂಗಮಲಿಂಗದ ತರುವಾಯ ಈಳನ ಎಂದರೆ ಸ್ತೋತ್ರ ಸ್ವರೂಪವಾದ ಪ್ರಸಾದಲಿಂಗವಿದೆ. ಇಲ್ಲಿ ಆಚಾರಲಿಂಗದ ಕಾರ್ಯವು ಪರಮಾತ್ಮನನ್ನು ಭಕ್ತಿ ಪೂರ್ವಕನಾಗಿ ಸ್ತೋತ್ರ ಮಾಡುವದೇ ಇರುತ್ತದೆ. ಇದು ಆಚಾರಲಿಂಗದೊಳಗಣ ಪ್ರಸಾದ ಲಿಂಗವು.

ಪ್ರಸಾದ ಲಿಂಗದ ತರುವಾಯ ವೇಧಾ ಅಂದರೆ ಜ್ಞಾನ ಸ್ವರೂಪವಾದ ಮಹಾಲಿಂಗವಿದೆ. ಇಲ್ಲಿ ಮನುಷ್ಯನು ಇಷ್ಟಲಿಂಗ ಧ್ಯಾನ

ದಲ್ಲಿ ಸುಜ್ಞಾನ ಭಕ್ತಿಯೊಡನೆ ಮಗ್ನನಾಗಿರಬೇಕು. ಇದೇ ಇಲ್ಲಿಯ ಕಾರ್ಯವು. ಇದು ಆಚಾರ ಲಿಂಗದೊಳಗಣ ಮಹಾಲಿಂಗವು.

ಹೀಗೆ ಆಚಾರ ಲಿಂಗದ ಬಾಹ್ಯ ಕ್ರಿಯೆಗಳು ಮೇಲಿನ ಆಯಾ ಸ್ಥಲಗಳಿಗನುಸಾರವಾಗಿ ಪ್ರಗತಿಯನ್ನು ಹೊಂದುತ್ತ ಹೋಗುತ್ತವೆ. ಮೊದಲು ಸತ್‌ಕ್ರಿಯೆ, ಆ ಮೇಲೆ ಮಂತ್ರಜಪ, ಆ ಮೇಲೆ ಅವಧಾನಪೂರ್ವಕವಾಗಿ ಮಾಡಿದ ಲಿಂಗ ನಿರೀಕ್ಷಣೆ, ಆ ಮೇಲೆ ಅನುಭಾವಭಕ್ತಿ ಪೂರ್ವಕವಾಗಿ ಮಾಡಿದ ಆಚರಣೆಗಳು, ಆ ಮೇಲೆ ಶರಣುಭಾವದಿಂದ ಮಾಡಿದ ಪರಮಾತ್ಮನ ಪ್ರಾರ್ಥನೆಗಳು, ಮತ್ತು ಕಡೆಗೆ ಇಷ್ಟಲಿಂಗದ ಧ್ಯಾನ ಇವುಗಳು ಆಚಾರಲಿಂಗದ ಆರು ವಿಧದ ಸ್ಥೂಲ ಕ್ರಿಯೆಗಳ ತರಗತಿಗಳಾಗಿರುತ್ತದೆ. ಇವೇ ಆಚಾರ ಲಿಂಗದ ಷಡ್ವಿಧಗಳು.

(೭೧) ಷಡ್ವಿಧ ಗುರುಲಿಂಗಃ— ಇವು ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾ ದೀಕ್ಷೆ, ಬೋಧಾದೀಕ್ಷೆ, ಪ್ರಸನ್ನದೀಕ್ಷೆ, ನಿರ್ವಾಣದೀಕ್ಷೆ ಎಂದಿರುತ್ತವೆ.

ಗುರುಲಿಂಗವು ಮಂತ್ರದಿಂದ ತುಂಬಿದ್ದಾಗಿರುತ್ತದೆ. ಇದೇ ಇದರ ಮುಖ್ಯ ಲಕ್ಷಣವು. ಅದು ಆಚಾರಲಿಂಗದೊಡನೆ ಬೆರೆಯಲು ಅಲ್ಲಿ ಆ ಗುರುಲಿಂಗದ ಶಕ್ತಿಯು ಅಂಗದ ವರ್ತನೆಯನ್ನು ನಷ್ಟಮಾಡುವದು. ಮತ್ತು ಸತ್‌ಕ್ರಿಯಾನುಗ್ರಹ ಮಾಡುವದು. ಹೀಗೆ ಮಾಡಿ ಇಷ್ಟ ಲಿಂಗದ ಕಳೆಯನ್ನು ಮನುಷ್ಯನ ಕ್ರಿಯೆಗಳಲ್ಲಿ ಪ್ರತಿಷ್ಠಿಸುವದು. ಇದೇ ಗುರುಲಿಂಗದೊಳಗಣ ಆಚಾರಲಿಂಗವು.

ಮುಂದೆ ಗುರುಲಿಂಗವು ಗುರುಲಿಂಗದೊಳಗೆ ಬೆರೆಯಲಾಗಿ ಅಲ್ಲಿ ಆ ಗುರುಲಿಂಗವು ಪಂಚಾಕ್ಷರೀಮಂತ್ರಪ್ರಭಾವದಿಂದ ಪ್ರಾಣದ ದುಷ್ಟ ಪ್ರವೃತ್ತಿಗಳನ್ನು ಅಳಿಯುವದು. ಮತ್ತು ಅದನ್ನು ಚಿತ್‌ಪ್ರಾಣವನ್ನಾಗಿ ಮಾಡುವದು. ಆಗ ಮಂತ್ರಾನುಗ್ರಹ ಸ್ವರೂಪವಾದ ಪ್ರಾಣಲಿಂಗವು ಮನುಷ್ಯನಲ್ಲಿ ನೆಲೆಗೊಳ್ಳುವದು. ಹೀಗಾದಲ್ಲಿ ಅದು ಗುರುಲಿಂಗದೊಳಗಣ ಗುರುಲಿಂಗವು.

ಗುರುಲಿಂಗವು ಶಿವಲಿಂಗದಲ್ಲಿ ಬೆರೆಯಲು ಆತ್ಮನ ವರ್ತನೆಯು ನಷ್ಟವಾಗುವದು. ಇದು ಗುರುವಿನ ಹಸ್ತಮಸ್ತಕ ಸಂಯೋಗದಿಂದ

ಉಂಟಾಗುತ್ತದೆ. ಆಗ ಭಾವಲಿಂಗದ ಕಳೆಯು ಮನುಷ್ಯನಲ್ಲಿ ಪ್ರಾದುರ್ಭವಿಸುವದು. ಇದೇ ವೇಧಾ ದೀಕ್ಷೆಯನ್ನು ಉಂಟುಮಾಡುವಂತಹದು. ಇದೇ ಗುರುಲಿಂಗದೊಳಗಣ ಶಿವಲಿಂಗವು.

ವೇಧಾ ದೀಕ್ಷೆಯ ತರುವಾಯ ತ್ರಿವಿಧ ಲಿಂಗದ ಜ್ಞಾನವನ್ನುಂಟು ಮಾಡಿಕೊಂಡು ಅದರ ಅನುಭಾವದಲ್ಲಿರುವುದೇ ಬೋಧಾ ದೀಕ್ಷೆ ಎನಿಸುವದು. ಇದೇ ಬೋಧಾನುಗ್ರಹವುಳ್ಳ ಜಂಗಮಲಿಂಗವು. ಇದೇ ಗುರುಲಿಂಗದೊಳಗಣ ಜಂಗಮಲಿಂಗವು.

ಇದರ ತರುವಾಯ ಪ್ರತ್ಯಕ್ಷ ನಿರ್ಮಲ ವಸ್ತುವೇ ನೀನೆಂದು ಅನುಗ್ರಹಿಸುವುದೇ ಪ್ರಸನ್ನದೀಕ್ಷೆ ಎನಿಸುವದು. ಇದೇ ಪ್ರತ್ಯಕ್ಷಾನುಗ್ರಹ ಸ್ವರೂಪವಾದ ಪ್ರಸಾದಲಿಂಗವು. ಇದೇ ಗುರುಲಿಂಗದೊಳಗಣ ಪ್ರಸಾದಲಿಂಗವು.

ಇದರ ತರುವಾಯ ಮೋಕ್ಷಸ್ವರೂಪವಾದ ವಸ್ತುವೇ ತಾನೆಂದು ಅನುಗ್ರಹಿಸುವಂತಹದೇ ನಿರ್ವಾಣ ದೀಕ್ಷೆಯಾಗಿದೆ. ಇದೇ ಮೋಕ್ಷಾನುಗ್ರಹ ಸ್ವರೂಪವಾದ ಮಹಾಲಿಂಗವು. ಇದೇ ಗುರುಲಿಂಗದೊಳಗಣ ಮಹಾಲಿಂಗವು.

ಹೀಗೆ ಗುರುಲಿಂಗದ ಕ್ರಿಯೆಗಳು ಆಯಾ ಸ್ಥಲಗಳಿಗನುಸಾರವಾಗಿ ಪ್ರಗತಿಯನ್ನು ಹೊಂದುತ್ತ ಹೋಗುತ್ತವೆ. ಮೊದಲು ಕ್ರಿಯೆ, ಮಂತ್ರ, ವೇಧಾ ದೀಕ್ಷೆಗಳನ್ನು ಮೊದಲಿನ ಮೂರು ಸ್ಥಲಗಳಲ್ಲಿ ಹೊಂದಿ, ಮುಂದೆ ಶಿವಾನುಭವವು ಉತ್ಪನ್ನವಾದಂತೆ ಬೋಧೆ, ಆಮೇಲೆ ಪ್ರಸನ್ನತೆ, ಕಡೆಗೆ ನಿರ್ವಾಣ, ಈ ಸ್ಥಿತಿಗಳು ಪ್ರಾಪ್ತವಾಗುವವು. ಇವೇ ಗುರುಲಿಂಗದೊಳಗಣ ಷಡ್ವಿಧಗಳು.

(೭೨) ಷಡ್ವಿಧ ಶಿವಲಿಂಗಃ— ಇವು ಕರಸ್ಥಲ, ನಯನ ಸ್ಥಲ, ಹೃದಯಸ್ಥಲ, ಮಂತ್ರಸ್ಥಲ, ತ್ರಿಕೂಟಸ್ಥಲ, ಲಯಸ್ಥಲ ಎಂದು ಇರುತ್ತವೆ. ಶಿವಲಿಂಗವು ನಿರೀಕ್ಷಣ ಸ್ವರೂಪವಾದುದೆಂದು ಹೇಳಲ್ಪಡುತ್ತಿದೆ. ಇಲ್ಲಿ ಅವಧಾನ ಭಕ್ತಿ ಅಂದರೆ ಏಕಾಗ್ರಚಿತ್ತವು ಇದೆ. ಆದರೆ ಈ ಏಕಾಗ್ರ ಚಿತ್ತಕ್ಕೋಸ್ಕರ ಒಂದು ವಸ್ತುವು ಅವಶ್ಯವಾದುದು. ಈ ವಸ್ತುವು ಲಿಂಗವೇ ಆಗಿದ್ದು ಇದರ ಪ್ರಕಾಶಮಯವಾದ ನಿರೀಕ್ಷಣೆಗೋಸ್ಕರ ದೇಹದಲ್ಲಿ ಬೇರೆ ಬೇರೆ ಆರು ಸ್ಥಳಗಳಿರುತ್ತವೆ. ಅವು ಅನುಕ್ರಮವಾಗಿ ಇಲ್ಲಿ ಹೇಳಲ್ಪಟ್ಟವೆ. ಅವು ಯಾವವೆಂದರೆ—

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ]                ಎಪ್ರಿಲ ೧೯೪೧.                [ ಸಂಚಿಕೆ ೭

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೫ | ಎಪ್ರಿಲ ೧೯೪೧. | ಸಂಚಿಕೆ ೭ |
|---|---|---|


## ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆ.


(ಲೇಖಕಃ— ಕಾನಕಾನಹಳ್ಳಿ ಬಸಪ್ಪ ಬೆಂಗಳೂರ ನಗರ.)


ಶಿವಾನುಭವದ ಜನವರಿ ಸಂಚಿಕೆಯಲ್ಲಿ ಪ್ರಕಟವಾದ ಶ್ರೀವಮಾನ್ ಜೀರಗೆ ಕ. ಬಸವಪ್ಪ ಬಿ. ಎ. ಅವರ "ಶಿವದೀಕ್ಷೆ ಅರ್ಥಾತ್ ಲಿಂಗ ಧಾರಣೆ" ಎಂಬ ಶೀರ್ಷಿಕೆಯ ವಿದ್ವತ್ ಹಾಗೂ ಅನುಭವ ಪೂರ್ಣ ವಾದ ಲೇಖನಕ್ಕೆ ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ ಎಂಬುವರು ಅದೇ ಪತ್ರಿಕೆಯ ಮಾರ್ಚ ತಿಂಗಳ ಸಂಚಿಕೆಯಲ್ಲಿ ಒಂದು ಟೀಕೆಯನ್ನು ಬರೆದಿದ್ದಾರೆ. ಶ್ರೀಯುತರು ವಿಚಾರವನ್ನು ವಿಮರ್ಶಿಸ ಲಿಕ್ಕೆ ಹೊರಟು-ತಾವು ಶಾಸ್ತ್ರಕ್ಕೆ ವಿರುದ್ಧವಾದ ಕೆಲವು ನೂತನ ಸಂಶೋ ಧನೆಯನ್ನೇ ನಡೆಸಿದ್ದಾರೆ. ಅವುಗಳನ್ನು ಒಂದೊಂದಾಗಿ ಈ ಲೇಖನದಲ್ಲಿ ವಿಮರ್ಶೆಮಾಡಿ ಅವುಗಳು ಎಷ್ಟರಮಟ್ಟಿಗೆ ಸಶಾಸ್ತ್ರೀಯವಾಗಿವೆ ಎಂಬು ದನ್ನು ನಿರ್ಣಯಿಸುವದೇ ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

ಶ್ರೀಯುತರು ತಮ್ಮ ಲೇಖನದಲ್ಲಿ "ಶ್ರೀವಮಾನ್ ಜೀರಗೆಯವರು ನೂರೊಂದು ಸ್ಥಲಗಳಲ್ಲಿ ಲಿಂಗಧಾರಣವು ಐದನೆಯ ಸ್ಥಲವೆಂದೂ ಅದನ್ನು ವೀರಶೈವನು ಹೆಜ್ಜೆಯನ್ನಿಕ್ಕಿ ತನ್ನ ಜೀವನದಲ್ಲಿ ಅನುಸರಿಸಲೇ ಬೇಕೆಂದೂ ಹೇಳಿರುವದು ಯೋಗ್ಯವು. ಆದರೆ ಜನ್ಮಲಿಂಗಧಾರಣೆ ಹೊಂದಿದ ಕೂಸು ತತ್ಪೂರ್ವದ ನಾಲ್ಕು ಹೆಜ್ಜೆಗಳನ್ನು ಇಕ್ಕಿ ತಾನೇ ಆ ಸ್ಥಲಕ್ಕೆ ಬಂದಿರುವದೇ ?" ಎಂದು ಪ್ರಶ್ನಿಸಿದ್ದಾರೆ. ಶ್ರೀವಮಾನ್ ಪಟ್ಟೇದ

ಅವರಿಗೆ ಪಿಂಡೋತ್ಪತ್ತಿ, ಪಿಂಡದ ಬೆಳವಣಿಗೆ, ಪಿಂಡಜ್ಞಾನ, ಪಿಂಡಕ್ಕೆ ಹಿಂದಣ ಜನ್ಮದ ಸ್ಮರಣೆಯು ಬಂದು ಈಗ ಈ ಪ್ರಪಂಚಕ್ಕೆ ಏಕೆ ಇಳಿದು ಬಂದೆನಪ್ಪಾ ಎಂಬ ಸಂಸಾರ ಹೇಯ ಈ ವಿಚಾರಗಳ ಬಗ್ಗೆ ಶಾಸ್ತ್ರಗ್ರಂಥಗಳೂ ಅನುಭವಿಗಳ ವಾಕ್ಯಗಳೂ ಏನು ಹೇಳುತ್ತಿವೆ-ಎಂಬುದು ವಿಶದವಾಗಿ ತಿಳಿದಂತೆ ಇಲ್ಲ; ಯಾವ ವೇದಾಂತ ಗ್ರಂಥವನ್ನು ತೆಗೆದುಕೊಂಡರೂ, ಯಾವ ಶಿವಶರಣರ ವಚನಗಳನ್ನು ತೆಗೆದುಕೊಂಡರೂ, ಯಾವ ಅನುಭವಿಗಳ ಹಾಡು, ತತ್ವ, ಗೀತೆ ಇವುಗಳನ್ನು ತೆಗೆದುಕೊಂಡರೂ ಶಿಶುವು ತಾಯ ಗರ್ಭದಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ ಎಂಬ ಮೂರು ಸ್ಥಲಗಳಲ್ಲಿ ಹೆಜ್ಜೆಯನ್ನು ಇಟ್ಟೇ ಇಡುತ್ತದೆಂದು ನಿರ್ಣಯಿಸಿದ್ದಾರೆ. ಶ್ರೀಪಟ್ಟೇದ ಅವರಿಗೆ ಈ ವಿಚಾರದಲ್ಲಿ ಅನುಮಾನ ಬಂದರೆ ಆ ಎಲ್ಲ ಗ್ರಂಥಗಳನ್ನೂ ನೋಡಬಹುದು. ಇನ್ನು ವಯಸ್ಕರಾದ ಅಲಿಂಗಿಗಳಿಗೆ ಶೀವದೀಕ್ಷೆ ಅರ್ಥಾತ್ ಲಿಂಗಧಾರಣೆಯನ್ನು ನಡೆಸುವಾಗಲೂ ಸಹ ಅವರು ಹುಟ್ಟಿದ ಕಾಲವನ್ನಾಗಲಿ ಬಳೆವ ಕಾಲವನ್ನಾಗಲೀ ಗಣನೆಗೆ ತೆಗೆದುಕೊಳ್ಳುವದೇ ಇಲ್ಲ. ಶಿವದೀಕ್ಷಾಕಾಲದಲ್ಲಿಯೇ ಅವರು ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ ಎಂಬ ಮೂರು ಸ್ಥಲಗಳನ್ನು ತಾಯಗರ್ಭದಲ್ಲಿ ಹೇಗೆ ಶಿಶುವು ದಾಟುತ್ತದೋ ಹಾಗೆ ವಯಸ್ಕರಾದ ಅಲಿಂಗಿಗಳೂ ಸಹ ದಾಟಿದಂತೆ ಮಾಡಿ ಆಮೇಲೆ ಶ್ರೀಗುರುವಿನ ಕರಕಮಲದಲ್ಲಿ ಹೊಸಜನ್ಮವನ್ನು ಪಡೆದಂತೆ ಗಣಿಸಿ, ಅನಂತರ ಗುರುಕರುಣವನ್ನೆಸಗಿ, ಲಿಂಗಧಾರಣೆಯನ್ನು ಮಾಡಲಾಗುವದು ಎಂದ ಮೇಲೆ ಲಿಂಗಧಾರಿಗಳ ಹೊಟ್ಟೆಯಲ್ಲಿ ಹುಟ್ಟಿದ ಕೂಸಿಗೆ ಲಿಂಗಧಾರಣದ ಹೆಸರಿನಲ್ಲಿ ಮಾಡುದ ಕ್ರಿಯಾಚರಣೆಯೂ ಒಂದೇ. ವಯಸ್ಕರಾದ ಅಲಿಂಗಿಗಳಿಗೆ ಶಿವದೀಕ್ಷೆ ಹೆಸರಿನಿಂದ ಮಾಡುವ ಕ್ರಿಯಾಚರಣೆಯೂ ಒಂದೇ. ಇವೆರಡಕ್ಕೂ ಸ್ವಲ್ಪವೂ ವ್ಯತ್ಯಾಸವಿಲ್ಲ. ಶ್ರೀಮಾನ್ ಜೀರಗೆಯವರು ಈ ವಿಚಾರದಲ್ಲಿ ವಿವೇಚಿಸಿರುವುದು ನ್ಯಾಯವಾದುದೇ ಆಗಿದೆ.

ಇನ್ನು ಮುಂದೆ ಶ್ರೀಯುತ ಪಟ್ಟೇದ ಅವರು "ಭಕ್ತರಲ್ಲಿ ಬಹುಶಃ ಮುಗ್ಗಿದ್ದರೂ ಮಹೇಶ್ವರರಲ್ಲಿ ಜನ್ಮಸಂಸ್ಕಾರವಲ್ಲದೆ ಈಗಲಾದರೂ ಶಿವದೀಕ್ಷೆ ನಡದೇ ಅದೆ" ಎಂದು ಬರೆದಿದ್ದಾರೆ. ಭಕ್ತರು ಬೇರೆ, ಮಹೇಶ್ವರರು ಬೇರೆ, ಎಂತಲೂ, ಭಕ್ತರಿಗೆ ಲಿಂಗಧಾರಣೆ, ಮಹೇಶ್ವರರಿಗೆ ಶಿವ

ದೀಕ್ಷೆ ಎಂಬೂ ಒಂದು ವಿಚಿತ್ರವಾದ ವಿಂಗಡಿಕೆಯನ್ನು ಮಾಡಿದ್ದಾರೆ. ಭಕ್ತರು ಬೇರೆ ಮಹೇಶ್ವರರು ಬೇರೆ ಎಂದು ಯಾವ ವಚನಗ್ರಂಥಗಳಲ್ಲೂ ಕಂಡುಬರುವದಿಲ್ಲ. ಭಕ್ತ, ಮಹೇಶ್ವರ ಎಂಬುವು ಆರು ಸ್ಥಲಗಳಲ್ಲಿ ಸೇರಿದವು. ಪ್ರತಿಯೊಬ್ಬ ಲಿಂಗಧಾರಿಯೂ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳನ್ನು (ಮೆಲ್ಲಮೆಲ್ಲನೆ ಅಲ್ಲ) ಕುಳಿತಾಗ, ನಿಂತಾಗ, ಶಿವಪೂಜೆ ಮಾಡುವಾಗ, ಸದಾಕಾಲದಲ್ಲಿಯೂ ಎಡಬಿಡದೆ ಆಚರಿಸಬೇಕಾದ ಪವಿತ್ರ ಸ್ಥಲಗಳವು. ಅವುಗಳನ್ನು ಸ್ವಾರ್ಥಬುದ್ಧಿಯಿಂದ ಒಬ್ಬರಿಗೂ ಗೊತ್ತಿಲ್ಲದಂತೆ ತಮತಮಗೆ ಹಂಚಿಕೊಳ್ಳುವದು ಶರಣಮಾರ್ಗವಲ್ಲ. ಇಲ್ಲಿ ಒಂದು ಮಾತು. ಹೀಗೆ ಹೇಳುವದರಿಂದ ಕೆಲವರು ತಮ್ಮ ಮಠಾಧಿಕಾರಗಳೂ ಮತ್ತೆ ವೀರಶೈವಸಮಾಜದವರು ಅರಿತ ಶಿವಾನುಭವಿಗಳಾದ ಕೆಲವರಿಗೆ ಬೋಧೆ ಮಾಡಲು ಕೊಟ್ಟಿರುವ ಕೆಲವು ಹಕ್ಕುಗಳೂ ಕೈಬಿಟ್ಟು ಹೋಗಿಬಿಡುವವೆಂದು ಹೆದರಬೇಕಾದ ಅವಶ್ಯಕತೆಯಿಲ್ಲ. ಮಠಾಧಿಕಾರ ಮತ್ತು ಮೊಲ್ಕಂಡ ಇತರ ಹಕ್ಕುಗಳಿಗೂ ಈ ಷಟ್‌ಸ್ಥಲಕ್ಕೂ ಯಾವ ಸಂಬಂಧವೂ ಇಲ್ಲ. ಮಠಾಧಿಕಾರಿಗಳೂ ಸಹ ಷಟ್‌ಸ್ಥಲವನ್ನು ಬಿಡುವ ಹಾಗಿಲ್ಲ. ಎಂದಮೇಲೆ ಪಟ್ಟೇದ ಅವರು ಭಕ್ತರು, ಮಹೇಶ್ವರರು ಎಂದು ವಿಂಗಡಿಸಿರುವುದು ನ್ಯಾಯವಲ್ಲ.

ಇನ್ನು ಮುಂದೆ "ಈ ಜನ್ಮಲಿಂಗಧಾರಣೆಗೆ ಸಾಮಾನ್ಯ ಮಹೇಶ್ವರರೇ ಸಾಕು. ಆದರೆ ಶಿವದೀಕ್ಷೆಗೆ ವಿಶೇಷರೆಂದೆನಿಸುವ ಪಟ್ಟಚರಾಧಿಕಾರಿಗಳಲ್ಲದೆ ಸಾಗದು" ಎಂದು ಶ್ರೀ ಪಟ್ಟೇದ ಅವರು ಮತ್ತೊಂದು ಹೊಸ ಶೋಧನೆಯನ್ನು ಮಾಡಿದ್ದಾರೆ. ಮಾಹೇಶ್ವರರಲ್ಲಿ ಸಾಮಾನ್ಯರೆನ್ನುವರಾರು? ಪಟ್ಟಚರಾಧಿಕಾರಿಗಳಲ್ಲಿ ವಿಶೇಷರೆಂದೆನಿಸುವವರಾರು? ಇದು ಯಾವ ವಿಂಗಡಣೆ? ಲಿಂಗಧಾರಿಗಳ ಹೊಟ್ಟೆಯಲ್ಲಿ ಪರಿಶುದ್ಧವಾಗಿ ಹುಟ್ಟಿದ ಮಗುವಿಗೆ ಸಾಮಾನ್ಯ ಮಾಹೇಶ್ವರರು ಬಂದು, ಅನೇಕ ಜನ್ಮಗಳಿಂದಲೂ ಭವಿಗಳಾಗಿದ್ದು ಗುರುಕರುಣೆಯನ್ನು ಪಡೆಯಲಿಕ್ಕೆ ಬಂದ ವಯಸ್ಕಭವಿಗಳಿಗೆ ವಿಶೇಷರೇಕೆ? ಲಿಂಗಧಾರಿಗಳ ಹೊಟ್ಟೆಯಲ್ಲಿ ಹುಟ್ಟಿದ ಶಿಶುವು ಮಾಡಿದ ಪಾಪವೇನು? ಜನ್ಮಜನ್ಮಾಂತರದಿಂದಲೂ ಭವಿಯಾಗಿ ಬಳೆದು ಬಂದ ವಯಸ್ಕನು ಮಾಡಿದ ಪುಣ್ಯವೇನು? ಇದನ್ನು ಶ್ರೀ ಪಟ್ಟೇದ ಅವರು ವಿವರಿಸಿ ಹೇಳುವರೇ? ಮತ್ತೆ ಲಿಂಗ ಧಾರಣೆಯಲ್ಲಿ

ಜನ್ಮ ಸಂಸ್ಕಾರ ಅಥವಾ ಔಪಚಾರಿಕ ಲಿಂಗಧಾರಣೆ ಎಂತಲೂ ಶಿವದೀಕ್ಷೆ ಎಂತಲೂ ವಿಂಗಡಿಸಿದ್ದಾರೆ. ಶಿವಶರಣರು ಎಂದಿಗೂ ಔಪಚಾರಿಕವಾಗಿ ಕಾರ್ಯಗಳನ್ನು ನಡೆಸಿದವರಲ್ಲ. ಅವರು ನಡೆದಂತೆ ನುಡಿದವರು, ನುಡಿದಂತೆ ನಡೆದವರು 'ಲಿಂಗ ಮುಟ್ಟಲೊಡನೆ ಶಿವಕುಲವಹುದು ತಪ್ಪದು' 'ಪರುಷ ಮುಟ್ಟಲೊಡನೆ ಕಬ್ಬುನ ಹೊನ್ನಪ್ಪುದು ತಪ್ಪದು' ಎಂದು ಸಾರಿ ಲಿಂಗಧಾರಣ ಹೊಂದಿದ ಕೂಡಲೇ ಭವಿಯು ಭಕ್ತನಾಗಿ ಶಿವಸಮಾನನಾಗುವನೆಂದು ಸಾರಿ ಸಾರಿ ಹೇಳಿ ಅದರಂತೆ ಕಾರ್ಯಗಳನ್ನು ನಡಿಸಿದ್ದಾರೆ. ಇಂಥದ್ದರಲ್ಲಿ ಲಿಂಗಧಾರವು ಔಪಚಾರಿಕವಾಗುವದೆಂತು ? ಇದಕ್ಕೆ ಬಸವಣ್ಣನವರ ಕಾಲದಲ್ಲಿ ನಡೆದ ಒಂದು ಸಂದರ್ಭವನ್ನು ಇಲ್ಲಿ ಉದಹರಿಸಬಹುದಾಗಿದೆ:— ಒಮ್ಮೆ ಬಸವಣ್ಣನವರು ಗಣಪರ್ವವನ್ನು ನಡೆಸಿದ್ದರು. ಬಸವಣ್ಣನವರ ಮನೆಗೆ ಲಕ್ಷೋಪಲಕ್ಷ ಶಿವಶರಣರು ಶಿವಪೂಜೆಗೆ ದಯಮಾಡಿಸಿದ್ದರು. ಅವರೊಳಗೆ ನಿರ್ಗತಿಕರೂ ಬಡವರೂ, ಹೊಟ್ಟೆಗಿಲ್ಲದವರೂ ಆದ ನಾಲ್ಕು ಭವಿ ಜನರು ಬಸವಣ್ಣನವರ ಮನೆಯ ಭೋಜನದ ಆಸೆಯ ಮೇಲೆ ಬದನೆಕಾಯಿಗಳನ್ನು ವಸ್ತ್ರದಲ್ಲಿ ಲಿಂಗದಂತೆ ಕಟ್ಟಿಕೊಂಡು ಬಸವಣ್ಣನವರ ಮನೆಯೊಳಕ್ಕೆ ಬಂದರು. ಸ್ವಲ್ಪ ಹೊತ್ತಿನಲ್ಲಿಯೇ ಇವರು ಯಾರೆಂಬುದು ಬಸವಣ್ಣನವರಿಗೆ ತಿಳಿಯಿತು. ಬಸವಣ್ಣನವರು ತಮ್ಮ ವಿಶಾಲ ಹೃದಯದಿಂದ ಅವರನ್ನು ಲಿಂಗಾಂಗಿಗಳನ್ನಾಗಿ ಮಾಡಬೇಕೆಂದು ಮನಸ್ಸು ಮಾಡಿ ಅವರ ಬಳಿಗೆ ಬಂದು ಅವರಿಗೆ ನಮಸ್ಕಾರವನ್ನು ಮಾಡಿ ಶಿವಪೂಜೆಯನ್ನು ಮಾಡಿಕೊಳ್ಳಬೇಕೆಂದು ಬಿನ್ನೈಸಿಕೊಂಡರು. ಬಸವಣ್ಣನವರಂತಹ ಮಹಾಪದವೀಧರರೂ ಮಹಾವಿಭೂತಿಗಳೂ ಈ ರೀತಿಯಲ್ಲಿ ವಿನಯದಿಂದ ವರ್ತಿಸಿದುದಕ್ಕೆ ಆ ಭವಿಗಳು ಜಜ್ಜನೆ ಜರಿದು ಅವರಲ್ಲಿ ಶಿವಭಕ್ತಿಯು ಆಗಲೇ ಅಂಕುರಿಸಿ ಗುರುಕರುಣವು ಆಗಲೇ ಆಗಿ ಅವರು ಬಸವಣ್ಣನವರ ಪಾದಕ್ಕೆ ಬಿದ್ದು ಕಾಪಾಡು ಬಸವಣ್ಣ, ಕ್ಷಮಿಸು ಬಸವಣ್ಣ, ನಮ್ಮನ್ನು ಪುನೀತರನ್ನಾಗಿ ಮಾಡು ಬಸವಣ್ಣ ಎಂಬುದಾಗಿ ಹಂಬಲಿಸಿದರು. ಆಗಲೇ ಅವರಿಗೆ ಬಸವಣ್ಣನವರು ಲಿಂಗಧಾರಣೆಯನ್ನು ಮಾಡಿಸಿ ಅವರನ್ನು ಪುನೀತರನ್ನಾಗಿ ಮಾಡಿದರು. ಇದು ಬಸವಣ್ಣವರ ಮತ್ತು ಶಿವಶರಣರ ನಿಜವಾದ ಸರಳ ಆಚರಣೆ. ಇದೇ ಶಿವಭಕ್ತಿ ಮಾರ್ಗ. ಇದೇ ಷಟ್‌ಸ್ಥಲ ಪಥ. ಈ ಕಾರಣದಿಂದ ಲಿಂಗಧಾರಣವು ಔಪಚಾರಿಕವಾಗಿರುವುದು ಎಂದು ಹೇಳುವುದು ಶಿವಶರಣ ಮಾರ್ಗಕ್ಕೆ ವಿರುದ್ಧ.

ಮುಂದೆ ಶ್ರೀಯುತ ಪಟ್ಟೇದ ಅವರು "ಶ್ರೀಮಾನ್ ಜೀರಗೆಯವರು ಬರೆದಂತೆ ಲಿಂಗವಂತರ ಕೂಸು ಬೆಳೆಯುಹತ್ತಿದಂತೆಲ್ಲ ಮನೆಯಲ್ಲಿ ನೋಡಿ ಅನುಕರಣದಿಂದ ತನ್ನ ದೇಹದ ಮೇಲೆ ಧರಿಸಿರುವ ಲಿಂಗದ ಕಲ್ಪನೆಯನ್ನು ಪಡೆದು ಅದನ್ನು ಪೂಜಿಸುತ್ತ ಹೋಗುತ್ತದೆಂಬುದಾದರೂ ಒಪ್ಪುವಂತಹ ಮಾತು. ಮನೆಯ ಹಿರಿಯರು ಲಿಂಗ ಮಾರ್ಗವನ್ನು ಅರಿತು ಆಚರಿಸುವವರಿದ್ದರೆ ಈ ಅನುಕರಣವು ತುಸು ಮಟ್ಟಿಗೆ ಪಥ್ಯಕರವಾಗಬಹುದು. ಅವರು ಅರಿಯದವರಿದ್ದರೆ ಹುಡುಗರಾದರೂ ಅದನ್ನೇ ಅನುಕರಿಸುವರು. ಈ ಅನುಕರಣವು ಯಾವಾಗಲೂ ಗುಣಕಾರಿಯೆಂದೇ ಹೇಳುವುದಕ್ಕಾಗುವದಿಲ್ಲ" ಎಂದು ಹೇಳಿದ್ದಾರೆ. ಇದು ಆಶ್ಚರ್ಯಕರವಾದ ಮಾತು. ಮನೆಯ ಹಿರಿಯರು ಲಿಂಗವಂತರಾಗಿ ಲಿಂಗ ಮಾರ್ಗವನ್ನು ತಿಳಿಯದಿದ್ದರೆ ಅವರೆಂತಹ ಲಿಂಗಾಯತರು? ಎಂತಹ ದಡ್ಡ ವೀರಶೈವನಾದರೂ ಲಿಂಗಪೂಜೆಯನ್ನು ಮಾಡತಕ್ಕ ಕ್ರಮವನ್ನು ತಿಳಿದುಕೊಂಡೇ ಇರುವನು. ನಾನು ಈ ಪ್ರಾಂತದಲ್ಲಿ ಅನೇಕ ಕಡೆ ಸಂಚರಿಸಿದ್ದೇನೆ. ಲಿಂಗಾಯತರಿಗೆ ವಚನಗಳು ತಿಳಿಯದಿದ್ದರೂ, ಶಿವಾನುಭವವು ಅಷ್ಟಾಗಿ ಗೊತ್ತಾಗದಿದ್ದರೂ, ಲಿಂಗ ಪೂಜೆಯನ್ನು ಶುಚಿರ್ಭೂತರಾಗಿ ಅಚ್ಚುಕಟ್ಟಾಗಿ, ಸಾರಣಿ ಕಾರಣೆಯಿಂದ ಅಲಂಕೃತವಾದ ಪ್ರತ್ಯೇಕ ದೇವರ ಮನೆಗಳಲ್ಲಿ ನಡೆಸುತ್ತಾರೆ. ಲಿಂಗಾನುಸಂಧಾನವನ್ನೂ ಸಹ ಚೆನ್ನಾಗಿ ಮಾಡುತ್ತಾರೆ. ಇಷ್ಟೇ ಅಲ್ಲ ಲಿಂಗ ಮುಖ ಜಂಗಮ ಎಂಬ ತತ್ವವು ಅವರಿಗೆ ತಿಳಿಯದಿದ್ದರೂ ಊರಿಗೆ ಬಂದ ಲಿಂಗವಂತರನ್ನು ಮನೆಮನೆಗೆ ಹಂಚಿಕೊಳ್ಳುತ್ತಾರೆ. "ಎರೆದರೆ ನೆನೆಯದು. ಮರೆದರೆ ಬಾಡದು. ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ ಕೂಡಲಸಂಗಮದೇವ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು ಎಂಬ ಬಸವಣ್ಣನವರ ವಚನವನ್ನು ಅವರು ಸಂಪೂರ್ಣ ಕಾರ್ಯ ರೂಪದಲ್ಲಿ ನಡೆಸುತ್ತಾರೆ. ಇದಕ್ಕಿಂತಲೂ ಹೆಚ್ಚಾದ ಲಿಂಗಮಾರ್ಗವಿದೆಯೇ? ಎಂದ ಮೇಲೆ ಮಗುವಿನ ಅನುಕರಣವು ಪಥ್ಯವಾಗುವುದಿಲ್ಲವೇ? ಒಂದು ವೇಳೆ ಶ್ರೀ ಪಟ್ಟೇದ ಅವರು ಹೇಳುವಂತೆ ತಂದೆ ತಾಯಿಗಳು ಲಿಂಗಮಾರ್ಗವನ್ನು ಆಚರಿಸುವವರಲ್ಲದಿದ್ದರೆ ಅವರು ಲಿಂಗವಂತ ಪಥಕ್ಕೇ ಸಲ್ಲರು. ಅವರು ಲಿಂಗಾಯತರೇ ಅಲ್ಲ. ಅವರ ಮಾತು ನಮಗೆ ಬೇಡವೇ ಬೇಡ.

ಇನ್ನು ಮುಂದೆ ಇದೇ ಪ್ಯಾರಾದಲ್ಲಿ ಅವರು ಹಲವು ಹೇಳಿಕೆಗಳನ್ನು ಮಾಡಿದ್ದಾರೆ. ಅವುಗಳು ಒಂದಕ್ಕೊಂದು ಸಮಂಜಸವಾಗುವುದಿಲ್ಲ. ಅವು

ಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಉದಹರಿಸುವೆನು. "ನೀನು ಧರಿಸಿದ ಲಿಂಗವು ದೇವರು. ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ. ನಮಗೆ ಸುಖದುಃಖಗಳೆಲ್ಲವೂ ಅವನಿಂದಲೇ ಪ್ರಾಪ್ತಿಸುತ್ತವೆ. ಆದ್ದರಿಂದಲೇ ಅವನನ್ನು ಪೂಜಿಸಬೇಕು" ಎಂದು ಹೇಳಿ ಇವುಗಳೇ ಕ್ರಮವಾಗಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯಸ್ಥಲ ಎಂದು ಹೇಳಿದ್ದಾರೆ. ಶ್ರೀಯುತ ಪಟ್ಟೇದ ಅವರು ಈ ಅರ್ಥವನ್ನು ಯಾವ ಗ್ರಂಥದಲ್ಲಿ ಶೋಧಿಸಿ ನೋಡಿದರೋ ಗೊತ್ತಾಗಲಿಲ್ಲ. "ಉದಕದೊಳಗೆ ಬೈಚಿಟ್ಟ ಬಯಕೆಯು ಕಿಚ್ಚಿನಂತಿದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು ಎಂದು ಬಸವಣ್ಣನವರು ಹಾಡಿ ದೇವರ ನಿಲವನ್ನು ವರ್ಣಿಸಿ ಪಿಂಡಸ್ಥಲವನ್ನು ಸೂಚಿಸಿದ್ದಾರೆ. ನೀನು ಧರಿಸಿದ ಲಿಂಗವು ದೇವರು ಎಂದು ಹೇಳುವುದು ಪಿಂಡಸ್ಥಲವಲ್ಲ. ಯಾಕೆಂದರೆ ಪಿಂಡಸ್ಥಲದ ಕಾಲದಲ್ಲಿ ಲಿಂಗಧಾರಣವೇ ನಡೆದಿರುವುದಿಲ್ಲ. ಲಿಂಗಧಾರಣವಾಗುವುದು ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಈ ಸ್ಥಲಗಳು ಆದ ಮೇಲೆ. ಇನ್ನು 'ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ' ಎಂಬುದೇ ಪಿಂಡಜ್ಞಾನಸ್ಥಲವೆಂದು ಶ್ರೀ ಪಟ್ಟೇದ ಅವರು ಪ್ರತಿಪಾದಿಸಿದ್ದಾರೆ. ಇದು ಅತ್ಯಾಶ್ಚರ್ಯಕರವಾಗಿದೆ. ಆದರೆ ಪಿಂಡಜ್ಞಾನಸ್ಥಲದ ಲಕ್ಷಣ ಇದಲ್ಲ. ಆತ್ಮನು ಬಹು ಪುರಾತನನು. ಪರಮಾತ್ಮನಾದ ದೇವರಿಗಿಂತಲೂ ಹಳೆಯನು ಎಂದು ಹೇಳುವ (Immortality of the soul) ಎಂಬ ಆತ್ಮನ ಅಮರತ್ವದ ಅರಿವೇ ಪಿಂಡ ಜ್ಞಾನ ಸ್ಥಲದ ಅರಿವು. ಸಾಕ್ಷಿಃ— "ಕಾಳಿಯ ಕಂಕಾಳದಿಂದ ಮುನ್ನ, ತ್ರಿಪುರಸಂಹಾರದಿಂದ ಮುನ್ನ, ಹರಿವಿರಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ, ಮುನ್ನ, ಮುನ್ನ, ಮುನ್ನ, ಅಂದಿಂಗೆಳೆಯ ನೀನು ಹಳೆಯ ನಾನು ಮಹಾದಾನಿಕೂಡಲಸಂಗಮದೇವಾ" ಇದೀಗ ಪಿಂಡಜ್ಞಾನಸ್ಥಲದ ನಿಜವಾದ ಲಕ್ಷಣ. ಇನ್ನು 'ನಮಗೆ ಸುಖದುಃಖಗಳೆಲ್ಲ ಅವನಿಂದಲೇ ಪ್ರಾಪ್ತಿಸುತ್ತವೆ. ಆದಕಾರಣ ಅವನನ್ನು ಪೂಜಿಸಬೇಕು' ಇದೇ ಸಂಸಾರ ಹೇಯಸ್ಥಲವೆಂದು ಶ್ರೀಪಟ್ಟೇದ ಅವರು ವರ್ಣಿಸಿದ್ದಾರೆ. ಶಿವಶರಣರು ಸುಖದುಃಖಗಳಿಗೆ ದೇವರು ಕಾರಣನೆಂದು ಹೇಳುವುದಿಲ್ಲ. ಅವಕ್ಕೆ ನಾವೇ ಕಾರಣರೆಂದು ಹೇಳುತ್ತಾರೆ, "ಹೊಯ್ಸರೆ ಹೊಯ್ಸಗಳು

ಕೈಮೇಲೆ. ಒಯ್ದರೆ ಬಯ್ಗಳು ಕೈಮೇಲೆ ......... ಕೂಡಲಸಂಗಮ ದೇವಯ್ಯ ನಿಮ್ಮ ಪೂಜಿಸಿದ ಫಲವು ಕೈಮೇಲೆ" ಎಂದು ಹೇಳಿ ನಾವು ಮಾಡಿದ ಕರ್ಮಕ್ಕೆ ನಾವು ತಕ್ಕ ಪ್ರತಿಫಲವನ್ನು ಹೊಂದುತ್ತೇವೆಂದು ಹೇಳಿದ್ದಾರೆ. "ಎಲವೋ ಎಂದರೆ ನರಕ, ಅಯ್ಯಾ ಎಂದರೆ ಸ್ವರ್ಗ" ಎಂದು ಹೇಳಿ ಕೇವಲ ಮಾತುಗಳಲ್ಲಿಯೇ ಹೆಚ್ಚು ಕಡಿಮೆಯಾದರೂ ಅದಕ್ಕೆ ತಕ್ಕ ಪ್ರತಿಫಲ ನಮಗೆ ದೊರೆಯುತ್ತದೆಂದು ಹೇಳಿ "ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ ತೊತ್ತು ಗೆಲಸವ ಮಾಡು" ಎಂದರೆ ಸಾಯುವದರೊಳಗಾಗಿ ಉಪಕಾರಕವಾದ ಜೀವನವನ್ನು ನಡೆ ಸಬೇಕೆಂದು ಶಿವಶರಣರು ಸಾರಿದ್ದಾರೆ. ಅವರೆಂದಿಗೂ ಸುಖದುಃಖಗ ಳಿಗೆ ದೇವರನ್ನು ಹೊಣೆಯನ್ನಾಗಿ ಮಾಡಿ ಹಣೆಯ ಮೇಲೆ ಕೈಯಿಟ್ಟು ಕೊಂಡು ಸೋಮಾರಿಯಾಗಿ ಕೂತುಕೋ ಎಂದು ಹೇಳಿಲ್ಲ. ಶಿವಶರ ಣರು ದೇವರನ್ನು ಭಯದಿಂದ ಪೂಜಿಸಿದವರಲ್ಲ. ಹಿಂದೆ ವೇದಗಳ ಕಾಲದಲ್ಲಿ ಗುಡುಗು, ಮಿಂಚು, ಮಳೆ, ಬಿಸಿಲು, ಅಗ್ನಿ ಪರ್ವತಗಳ ಅನಾಹುತ, ಇವುಗಳಿಗೆ ನಿಜವಾದ ಕಾರಣಗಳು ಗೊತ್ತಿಲ್ಲದೆ ದೇವರು ಜನರ ಮೇಲೆ ಕೋಪಿಸಿಕೊಂಡು ಸೇಡು ತೀರಿಸಿಕೊಳ್ಳುತ್ತಿದ್ದಾನೆಂದು ಭ್ರಾಂತಿಪಟ್ಟು ವೇದ ಕಾಲದ ಜನರು ಭಯದಿಂದ ಪಂಚಭೂತಗಳನ್ನು ಉಪಾಸಿಸಲಿಕ್ಕೆ ಹತ್ತಿದರು. ಶಿವಶರಣರು ಎಂದಿಗೂ ಅಂತಹ ದಡ್ಡ ರಲ್ಲ. ಅವರು ಪ್ರಪಂಚದ ಉತ್ಪತ್ತಿಯ, ಪ್ರಂಪಚದ ಸ್ಥಿತಿಯ, ಪ್ರಪಂ ಚದ ಲಯದ ನಿಜವಾದ ಅರ್ಥವನ್ನೂ, ದೇವರ ನಿಜವಾದ ಸ್ವರೂಪ ವನ್ನೂ, ಶಕ್ತಿಯನ್ನೂ ಅವರು ಮನಗಂಡರು. ಇಂಥಾದ್ದರಲ್ಲಿ ದೇವರು ಸುಖದುಃಖಗಳಿಗೆ ಕಾರಣನಾದುದರಿಂದ ಅವನನ್ನು ಪೂಜಿಸಬೇ ಕೆಂಬುದು ವೀರಶೈವ ಲಕ್ಷಣವಲ್ಲ. ಈಗಿನ ಮಾನಸಿಕ ಶಾಸ್ತ್ರಜ್ಞರೂ ಕೂಡ ಭಯದಿಂದ ಯಾವುದಕ್ಕೂ ತಲೆತಗ್ಗಿಸುವುದು ಮಾನವನ ಪ್ರಗ ತಿಗೆ ಕಳಂಕವೆಂದು ಸಾರಿದ್ದಾರೆ. ಬಸವಣ್ಣನವರ ವಚನವನ್ನು ಕೇಳಿ "ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವ" ಎಂದು ಎದೆ ತಟ್ಟಿ ಚೀರಿ ವೀರಶೈವತ್ವದ ವೀರತನವನ್ನು ವರ್ಣಿಸಿದ್ದಾರೆ. ಇನ್ನು ಸಂಸಾರ ಹೇಯಸ್ಥಲವೆಂದರೇನು? ಪ್ರಪಂಚದಲ್ಲಿ ಸುಖ ದುಃಖಗಳು ಮಿಳಿ

ತವಾಗಿವೆ. ಹುಟ್ಟಿದ ಮೇಲೆ ಸಾವುದು ತಪ್ಪದು. ಈ ದೇಹವು ಶಾಶ್ವತವಾದುದಲ್ಲ. ಭವಕ್ಕೆ ಬಂದು ಮಾನವನು ಕಷ್ಟಪಡಬೇಕಾಗಿದೆ ಎಂಬಿವೇ ಮೊದಲಾದ ವಿಚಾರಗಳೇ ಸಂಸಾರ ಹೇಯ. ಈ ಸಂಸಾರ ಹೇಯ ಜ್ಞಾನವು ಬಾರದಿದ್ದರೆ ಮಾನವನಿಗೆ ಪ್ರಗತಿ ಇಲ್ಲ. ಉಪಕಾರ ಮಾಡುವ ಬುದ್ಧಿಯೂ ಬರುವದಿಲ್ಲ. ಆದುದರಿಂದ ಸಂಸಾರ ಹೇಯ ಹುಟ್ಟಬೇಕು. ಹಾಗೆ ಹುಟ್ಟಿದರೆ ಅವನು ಸಾತ್ವಿಕನಾಗುವನು. ಗುರು ಕರಣಕ್ಕೆ ಯೋಗ್ಯನಾಗುವನು.

ಇನ್ನು ಮುಂದೆ ಶ್ರೀ ಪಟ್ಟೇದ ಅವರು "ಯೋಗ್ಯ ಗುರುವನ್ನೇ ಹಿಂಬಾಲಿಸುವುದು ವಿಹಿತ" ಎಂದು ಬರೆದಿದ್ದಾರೆ. ಇಲ್ಲಿ ಯೋಗ್ಯ ಗುರುಗಳನ್ನು ಕಂಡು ಹಿಡಿಯುವುದೆಂತು ? ಅವರ ಮುಖವನ್ನು ನೋಡಿಯೋ? ಅವರ ಕುಲವನ್ನು ನೋಡಿಯೋ ? ಯಾವುದನ್ನು ನೋಡಿ? "ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಛೀ ಎಂಬೆ" ಎಂಬ ಮಂತ್ರವನ್ನು ಬಸವಣ್ಣನವರು ಹೇಳಿಕೊಟ್ಟಿರುವಾಗ್ಗೆ ಭಯವೇನು ? ಗುರುವು ಯೋಗ್ಯನೇ ಯೋಗ್ಯನಲ್ಲವೇ ಎಂಬುದನ್ನು ವಿಚಾರಿಸಲು ಶ್ರಮ ಪಡುವುದು ಯಾವ ಗ್ರಹಚಾರ? ಗುರುವು ಒಳ್ಳೆಯವನಾಗಿದ್ದರೆ ಸರಿ ಎನ್ನುತ್ತೇವೆ. ಕೆಟ್ಟವನಾಗಿದ್ದರೆ ಛೀ ಎನ್ನುತ್ತೇವೆ ಅಷ್ಟೆ. ಇನ್ನು ಲಿಂಗ ಧಾರಿಯಾದವನು ಭವಿಗೆ ಲಿಂಗವನ್ನು ಕಟ್ಟುವುದಕ್ಕೆ ಬರುವುದಿಲ್ಲವೇ ? ಲಿಂಗವನ್ನು ಕಟ್ಟಿ ಉಪದೇಶವನ್ನು ಮಾಡುವಾಗ್ಗೆ ಅವನು ಗುರುಸ್ಥಲಕ್ಕೆ ಏರುವುದಿಲ್ಲವೇ ? ಚನ್ನಬಸವಣ್ಣನವರಿಗೆ ಲಿಂಗವನ್ನು ಧರಿಸಿದ ಬಸವಣ್ಣನು ಯಾವ ಸ್ಥಲದಲ್ಲಿ ನಿಂತು ಲಿಂಗವನ್ನು ಧರಿಸಿದ ? ಬಸವಣ್ಣನು ಶರಣಕೋಟಿಯಲ್ಲಿ ಏಕೈಕ ಭಕ್ತನಾದರೂ ಗುರುಸ್ಥಲದಲ್ಲಿ ನಿಂತು ಚನ್ನಬಸವಣ್ಣನವರಿಗೆ ಲಿಂಗವನ್ನು ಅನುಗ್ರಹಿಸಲಿಲ್ಲವೇ ?

ಇನ್ನು ಮುಂದೆ ಹುಟ್ಟಿದ ಕೂಸಿಗೆ ಶ್ರೀಗುರುವು ಬಂದು ಹಸ್ತ ಮಸ್ತಕ ಸಂಯೋಗ ಮಾಡಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಕರ್ಣದಲ್ಲಿ ಮಂತ್ರವನ್ನುಪದೇಶಿಸಿ ಲಿಂಗವನ್ನು ಧಾರಣೆಮಾಡಿ ಅಷ್ಟಾವರಣ ಸಂಮಂಧವನ್ನು ಮಾಡಿಕೊಡುವನು ಎಂದು ಶ್ರೀ ಜೀರಗೆಯವರು ಹೇಳಿದರೆ ಶ್ರೀ ಪಟ್ಟೇದ ಅವರು ಇದು ಲಿಂಗಧಾರಣವಲ್ಲ ಲಿಂಗ ಮುದ್ರೆ ಎಂದು ಪ್ರತಿಪಾದಿಸಿದ್ದಾರೆ. ಹಂಸ ಬೆಳ್ಳಗಿದೆ ಎಂದರೆ ಇಲ್ಲ ಕರ್‍ರಗಿದೆ ಎಂದು ಹೇಳಿದಹಾಗಾಯಿತು. ಲಿಂಗಮುದ್ರೆಯೆಂದರೇನು ? ಲಿಂಗ ಮುದ್ರೆಯನ್ನು

ಒತ್ತುವುದೆಂತು ? ಯಾರಿಗೆ ಒತ್ತುವರು ? ಇದು ಯಾವ ಕಾಲದಲ್ಲಿ ರೂಢಿಗೆ ಬಂತು ? ಇವನ್ನು ಶ್ರೀ ಪಟ್ಟೇದ ಅವರು ಪರಿಶೋಧಿಸುವರೇ? ಲಿಂಗ ಮುದ್ರೆಯೆಂದರೆ ಲಿಂಗದ ಚಿತ್ರವುಳ್ಳ ಈಗಿನ ರಬ್ಬರು ಸ್ಟ್ಯಾಂಪಿನಂತಹ ಒಂದು ಮುದ್ರೆ. ಇದನ್ನು ಹಿಂದಿನ ಕಾಲದಲ್ಲಿ ಶೈವರು ತಮ್ಮ ಶೈವದ ಪ್ರತಿಭೆಯನ್ನು ತೋರಿಸುವುದಕ್ಕೋಸ್ಕರ ಚತುಷ್ಪಾದ ಪ್ರಾಣಿಗಳಿಗೂ, ಜಡವಸ್ತುಗಳಿಗೂ, ಮನೆ, ಭೂಮಿ, ಗಿಡ, ಗೆಂಟೆ, ಇವುಗಳಿಗೂ ಈ ಆಸ್ತಿಗಳು ಶೈವರಿಗೆ ಸೇರಿದವು ಎಂದು ತೋರಿಸುವುದಕ್ಕೋಸ್ಕರ ಮುದ್ರೆಯನ್ನು ಚೆನ್ನಾಗಿ ಕಾಸಿ ಪ್ರಾಣಿಗಳ ಮೇಲೆ ಬರೆ ಹಾಕಿದಂತೆ ಹಾಕುತ್ತಿದ್ದರು. ಮತ್ತು ಬೇರೆ ಬೇರೆ ರೀತಿಯಲ್ಲಿ ಜಡವಸ್ತುಗಳ ಮೇಲೂ ಲಿಂಗ ಮುದ್ರೆಯನ್ನು ಒತ್ತುತ್ತಿದ್ದರು. ಆದರೆ ಶ್ರೀ ಪಟ್ಟೇದ ಅವರು ಹೇಳುವಂತೆ ಲಿಂಗವಂತರ ಹೊಟ್ಟೆಯಲ್ಲಿ ಹುಟ್ಟಿದ ಕೂಸಿಗೆ ಲಿಂಗ ಮುದ್ರೆಯನ್ನು ಹಾಕಬೇಕಾದರೆ ಮುದ್ರೆಯನ್ನು ಚೆನ್ನಾಗಿ ಕಾಸಿಯೇ ಲಿಂಗದ ಆಕಾರ ಮಗುವಿನ ಮೈಮೇಲೆ ಕಾಣುವಂತೆ ಒತ್ತಬೇಕಾಗುತ್ತದೆ. ಅಯ್ಯೋ! ಇದೆಂತಹ ಹುಚ್ಚು ! ಇದೆಂತಹ ಅನ್ಯಾಯ ! ಲಿಂಗಧಾರಣವು ಲಿಂಗ ಮುದ್ರೆ ಎಂಬ ಮಾತನ್ನು ನಾನು ಇದು ವರೆಗೂ ಯಾವ ವಚನದಲ್ಲಾಗಲಿ, ಆಗಮಗಳಲ್ಲಾಗಲಿ, ಸ್ವತಂತ್ರ ಸಂಸ್ಕೃತ ಗ್ರಂಥಗಳಲ್ಲಾಗಲಿ, ಸ್ವತಂತ್ರ ಕನ್ನಡ ಗ್ರಂಥಗಳಲ್ಲಾಗಲಿ ಕೇಳಿರುವುದಿಲ್ಲ.

ಇನ್ನು ಮುಂದೆ ಶ್ರೀ ಪಟ್ಟೇದ ಅವರು 'ಮಗುವಿಗೆ ಲಿಂಗಧಾರಣ ಮಾಡುವುದಕ್ಕೆ ಮಗುವು ಅನನುಭವಿಯಾಗಿರುತ್ತದೆ. ಅದಕ್ಕೆ ಅನುಭವ ಬೆಂಬಲವಿಲ್ಲ " ಎಂದು ಹೇಳಿದ್ದಾರೆ. ಅನುಭವ ಎಂದರೇನು ? ಇದನ್ನು ನಾವು ಮೊದಲು ಅರ್ಥ ಮಾಡಿಕೊಳ್ಳಬೇಕು. ಬುದ್ಧಿ ಅಥವಾ ಜ್ಞಾನ ಎಂದರೇನು ಎಂಬುದನ್ನು ತಿಳಿದಾಗಲೇ ನಮಗೆ ಮಗುವಿನ ಲಿಂಗಧಾರಣೆಯ ಒಳತತ್ವವು ಅರ್ಥವಾಗುತ್ತದೆ. ಅನುಭವವು ಹುಟ್ಟುತ್ತಲೇ ಬರುವುದಿಲ್ಲ. ಅದು ಬೆಳೆಬೆಳೆದಂತೆಲ್ಲ ಮನುಷ್ಯನು ಮಾಡುವ ಕ್ರಿಯಾಚರಣೆಗಳಿಗನುಸಾರವಾಗಿ ವೃದ್ಧಿಯಾಗುತ್ತ ಹೋಗುತ್ತದೆ. ಆದರೆ ಬುದ್ಧಿ ಅಥವಾ ಜ್ಞಾನವು ಹುಟ್ಟುತ್ತಲೇ ಬರುತ್ತದೆ. ಅದು ಸದಾ ಆತ್ಮನಿಗೆ ಪರಿಬೋಧೆಯನ್ನು ಮಾಡುತ್ತಿರುತ್ತದೆ. ಈ ಕಾರಣದಿಂದಲೇ ಶಿಶುದೆಶೆಯಲ್ಲಿ ಲಿಂಗಧಾರಣವನ್ನು ಮಾಡಿ ಶಿಶುವಿನ ಇಷ್ಟ ಪ್ರಾಣ ಭಾವ ಎಂಬ ಲಿಂಗಗಳನ್ನು ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಗೆ ಸಂಬಂ

ಧವನ್ನು ಮಾಡಿ ಶಿಶುವಿನ ಜ್ಞಾನವು ಒಂದು ಹಾದಿಯಲ್ಲಿ ಹೋಗುವಂತೆ ಮಾಡಲಾಗುವುದು. ಶಿಶುವು ಬೆಳೆದು ವಯಸ್ಕನಾದ ಮೇಲೆ ಅವನಿಗೆ ಅನುಭವವು ಬಂದಿರುವುದೆಂದು ಶ್ರೀ ಪಟ್ಟೇದ ಅವರು ಹೇಳುತ್ತಾರೆ. ಅವನಿಗೆ ಬಂದಿರುವ ಅನುಭವವು ಎಂತಹದೆಂದು ಅವರಿಗೆ ಗೊತ್ತಿರುವುದೇ? ಅವನಿಗೆ ಬಂದಿರುವ ಅನುಭವ ಬೀದಿಯಲ್ಲಿ ಹುಡುಗರ ಜತೆಗೆ ಗೋಲಿ ಗಜ್ಜುಗಗಳನ್ನಾಡುವುದು. ಒಂದೊಂದು ವೇಳೆ ಮಠಕ್ಕೆ ಹೋಗದೆ ಚಕ್ಕರ್ ಕೊಡುವುದು. ಕೈಲಿ ಕಾಸಿಲ್ಲದಿದ್ದರೆ ಅಪ್ಪನ ಜೇಬಿಗೆ ಕೈ ಹಾಕಿ ಕಾಸನ್ನು ತೆಗೆದುಕೊಂಡು ತಿಂಡಿ ತೆಗೆದುಕೊಂಡು ತಿನ್ನುವುದು. ಈ ಅನುಭವಗಳೇ ಚೆನ್ನಾಗಿ ಬಂದಿರುತ್ತವೆ. ಈ ಅನುಭವ ಶಿವದೀಕ್ಷೆಗೆ ಹೇಗೆ ಸಹಕಾರಿಯಾಗುವುದು? ಆದರೆ ಮಗುವಿಗೆ ಚಿಕ್ಕ ವಯಸ್ಸಿನಲ್ಲಿ ಲಿಂಗಧಾರಣೆ ಮಾಡಿ ಅದು ಲಿಂಗವಂತ ತಾಯಿ ತಂದೆಗಳ, ಬಂಧುಗಳ ಜೊತೆಯಲ್ಲಿ ಬಳೆದು ಶಿವ ಮಾರ್ಗವನ್ನು ಚೆನ್ನಾಗಿ ಅನುಕರಣ ಮಾಡಿದರೆ ಮುಂದಕ್ಕೆ ಒಳ್ಳೆ ಶಿವಭಕ್ತಿ ಸಂಪನ್ನನೂ, ಷಟ್‌ಸ್ಥಲ ಆಚಾರಸ್ಥನೂ ಆಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ವಿಚಾರದಲ್ಲಿ ಶ್ರೀಮಾನ್ ಜೀರಗೆಯವರು ಹೇಳುವುದು ಸತ್ಯವಾದುದು.

ಇನ್ನು "ಜನ್ಮ ಸಂಸ್ಕಾರವು (ಶಿಶುವಿನ ಲಿಂಗಧಾರಣೆಯು) ವಿವಾಹ ಪೂರ್ವದಲ್ಲಿ ಕನ್ಯಾ ನಿಶ್ಚಯ ಮಾಡುವ ವಿಧಾನದಂತೆ ಇರುವುದೆಂದು ಒಪ್ಪಬಹುದೇ ವಿನಾ ಅದೇ ಶಿವದೀಕ್ಷೆ ಎಂದೆಣಿಸಕೂಡದು." ಎಂದು ಶ್ರೀ ಪಟ್ಟೇದ ಅವರು ನುಡಿದಿದ್ದಾರೆ. ಶಿಶುವಿನ ಲಿಂಗಧಾರಣೆಯನ್ನು ಕನ್ಯಾ ನಿಶ್ಚಯಕ್ಕೆ ಹೋಲಿಸಿರುವುದು ಆಶ್ಚರ್ಯಕರವಾಗಿದೆ. ಮಗುವೇ! ನಿನಗೆ ಮುಂದೆ ಲಿಂಗವೆಂಬ ಗಂಡನನ್ನು ತಂದು ಮದುವೆ ಮಾಡುತ್ತೇವೆ ಎಂದು ಅರಿಶಿನ ಕುಂಕುಮವನ್ನಿಟ್ಟು ವೀಳ್ಯವನ್ನು ಕೊಡುವ ಪಕ್ಷಕ್ಕೆ ಬೇಕಾದರೆ ಕನ್ಯಾ ನಿಶ್ಚಯವೆಂದು ಶ್ರೀ ಪಟ್ಟೇದ ಅವರು ಹೇಳುವಂತೆ ಒಪ್ಪಿಕೊಳ್ಳಬಹುದು. ಆದರೆ ವಸ್ತುತಃ ಶಿಶುವಿನ ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆಯಲ್ಲಿ ನಿಶ್ಚಯದ ಮಾತೇ ಇಲ್ಲ. ಶ್ರೀಗುರುವು ಹಸ್ತ ಮಸ್ತಕ ಸಂಯೋಗ ಮಾಡಿ, ಮಂತ್ರವನ್ನುಪದೇಶಿಸಿ, ಲಿಂಗಧಾರಣೆಯನ್ನು ಮಾಡಿ ಅಂಗ ಲಿಂಗ ಸಂಬಂಧವನ್ನು ನಡೆಸಿ, ಅವರನ್ನು ಶರಣ ಸತಿ ಲಿಂಗ ಪತಿಯನ್ನಾಗಿ ಮಾಡುವನು. ಆದಕಾರಣ ಶ್ರೀ ಪಟ್ಟೇದ ಅವರು ಹೇಳುವಂತೆ ಶಿಶುವಿನ ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆಯು ಎಂದೆಂದಿಗೂ ಕನ್ಯಾನಿಶ್ಚಯವಾಗುವದಿಲ್ಲ.

ಇನ್ನು ಮುಂದೆ "ಶ್ರೀಮಾನ್ ಜೀರಗೆಯವರು ಅದರಲ್ಲೇ (ಶಿಶುವಿನ ಲಿಂಗಧಾರಣೆಯಲ್ಲೇ) ತ್ರಿವಿಧ ದೀಕ್ಷೆಗಳು, ಅಷ್ಟಾವರಣಗಳು, ಸಂಕ್ಷೇಪತಃ ಬೀಜರೂಪದಿಂದ ಒದಗುತ್ತವೆಂದು ಹೇಳುವುದು ಸರಿ ಇರಬಹುದು. ಆದರೆ ಪ್ರತ್ಯಕ್ಷ ಹಳ್ಳಿಯ ಅನುಭವವಿರುವವರಿಗೆ ಅದು ಸಮ್ಮತವಾಗುವುದು ಕಠಿಣವು. ಏಕೆಂದರೆ ಇಲ್ಲಿ ಜನ್ಮ ಸಂಸ್ಕಾರವು ಸರಿಯಾಗಿ ನಡೆಯುವುದಿಲ್ಲ. ಅದಕ್ಕೆ ಅಯ್ಯತನವನ್ನು ಹೊಸದಾಗಿ ಹೊಂದಿರುವ ೧೦-೧೨ ವರ್ಷದ ಅನನುಭವ ಬಾಲ ಮಹೇಶ್ವರರು ಬರುವುದುಂಟು. ಇದಲ್ಲದೆ ಏನೂ ಅರಿಯದ ಬರೀ ಹೆಸರಿಗೆ ಸ್ವಾಮಿ ಎಂದು ಹೇಳಿಸಿಕೊಳ್ಳುವ ದೊಡ್ಡ ವಯಸ್ಸಿನ ಅಯ್ಯನವರಾದರೂ ಬಹು ಜನರಿರುವುದುಂಟು. ಎಂದು ಮುಂತಾಗಿ ಬರೆದಿದ್ದಾರೆ. ಶ್ರೀ ಪಟ್ಟೇದ ಅವರು ಹೇಳುವ ಈ ದೋಷವು ಯಾರಿಗೆ ಸೇರಿದ್ದು? ಏನೂ ಅರಿಯದ ೧೦-೧೨ ವರ್ಷದ ಅನನುಭವಿಗಳಾದ ಬಾಲ ಮಾಹೇಶ್ವರರನ್ನು ಕರೆದುಕೊಂಡು ಬಂದು ಅವರಿಗೆ ಅಡ್ಡ ಬೀಳು ಎಂದವರಾರು? ಅಂಥ ಅನನುಭವಿಗಳಾದ ಬಾಲಕರನ್ನು ಕರೆದುಕೊಂಡು ಬರುವವರು ದಡ್ಡರೋ? ಅಥವಾ ಆ ಬಾಲರೇ ದಡ್ಡರೋ? ದೊಡ್ಡ ವಯಸ್ಸಿನ ಅಯ್ಯನವರಾದರೂ ಅನುಭವವಿಲ್ಲವೆಂದ ಮೇಲೆ ಅವರನ್ನು ಕರೆಯುವುದು ಇನ್ನೂ ಹೆಚ್ಚು ದಡ್ಡತನವಲ್ಲವೇ? ಅನುಭವಿಗಳಾದ ಮಠಾಧಿಕಾರಿಗಳು ಸಿಗದಿದ್ದಲ್ಲಿ ತಮ್ಮಲ್ಲೇ ಅನುಭವಿಗಳಾದವರನ್ನು ಕರೆದುಕೊಂಡು ಬಂದು ಕಾರ್ಯಗಳನ್ನು ನಡೆಸುವುದು ಜಾಣತನವಲ್ಲವೇ? ಎಂದ ಮೇಲೆ ಲಿಂಗಧಾರಣ ಅರ್ಥಾತ್ ಶಿವದೀಕ್ಷಾ ಕಾರ್ಯಗಳನ್ನು ನಡೆಸತಕ್ಕವರು ದಡ್ಡರಾದ ಮಾತ್ರದಿಂದಲೇ ಶಾಸ್ತ್ರಕ್ಕೆ ಏನೂ ಕೊರತೆಯಿಲ್ಲ. ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಶಿಶುವಿನ ಲಿಂಗಧಾರಣೆಯು ವೇಧಾ, ಮಂತ್ರ, ಕ್ರಿಯಾ ಎಂದು ಮೂರು ತರನಾಗಿ ಆಚರಿಸಲ್ಪಟ್ಟು ಅಷ್ಟಾವರಣಗಳು ತಮ್ಮ ಪವಿತ್ರ ಕೆಲಸಗಳನ್ನು ಮಾಡುವವು. ಲಿಂಗಧಾರಣೆ ಮಾಡುವವನು ದಡ್ಡನಾಗಲಿ ಜಾಣನಾಗಲಿ ಮೇಲ್ಕಂಡ ಕಾರ್ಯಕ್ರಮಗಳು ಸಾಂಗೋಪಾಂಗವಾಗಿ ನಡದೇ ನಡೆಯಬೇಕು. ಹಾಗೆ ನಡೆಯದಿದ್ದರೆ ಅದು ವೀರಶೈವ ಮಾರ್ಗವಲ್ಲ. ಶರಣರ ತತ್ವವಲ್ಲ. ಕುಣಿಯಲಾರದ ಸೂಳೆ ಮದ್ದಳೆಯವನ ಮೇಲೆ ಬಿದ್ದಂತೆ ಲಿಂಗಧಾರಣ ಕಾರ್ಯಕ್ರಮಗಳು ಮಾಡಲಿಕ್ಕೆ ಬಾರದೆ ಶಾಸ್ತ್ರದ ಮೇಲೆ ಬೀಳುವುದು ಹೆಡ್ಡತನ.

ಇನ್ನು ಮುಂದೆ "ಕೂಸಿನ ತಲೆಯ ಮೇಲೆ ಹಸ್ತವಿಡುವುದು, ಕಿವಿಯಲ್ಲಿ ಮಂತ್ರೋಪದೇಶ ಮಾಡುವದು, ಮುಂತಾದ ವಿಷಯಗಳು ಇತ್ತ ಕಡೆಯ ಅನುಭವದಿಂದ ನೋಡಿದರೆ ಕೇವಲ ಕಟ್ಟುಕಥೆಗಳಂತೆಯೇ ತೋರುತ್ತದೆ." ಎಂದು ಶ್ರೀ ಪಟ್ವೇದ ಅವರು ಬಾಯ್ಬಿಟ್ಟಿದ್ದಾರೆ. ಇದು ಅತ್ಯಾಶ್ಚರ್ಯಕರವಾಗಿದೆ. ತಮ್ಮ ಸ್ವಂತ ಮಾತು ಹಾಗಿರಲಿ. ತಮ್ಮ ಕಡೆಯ ಅನುಭವವನ್ನು ಬೇರೆ ಹೇಳುತ್ತಾರೆ ಇದರಿಂದ ಶ್ರೀ ಪಟ್ವೇದ ಅವರು ಇರುವ ಸ್ಥಳದ ಸುತ್ತಣ ಪ್ರದೇಶಗಳ ಲಿಂಗಾಯತ ಜನಾಂಗವು ವೀರಶೈವಾಚರಣೆಯಲ್ಲಿ ಎಷ್ಟು ಹಿಂದುಳಿದಿದ್ದಾರೆ ಎಂಬುದು ಒಡೆದು ಕಾಣುತ್ತದೆ. ಹಸ್ತಮಸ್ತಕ ಸಂಯೋಗ, ಮಂತ್ರೋಪದೇಶ ಮುಂತಾದ ವಿಷಯಗಳು ಕೇವಲ ಕಟ್ಟು ಕಥೆ ಎಂದ ಮೇಲೆ ಆ ಪ್ರಾಂತದಲ್ಲಿ ಏನೋ ಒಂದು ಮೋಸ ನಡೆದಿರಬೇಕೆಂದು ವ್ಯಕ್ತವಾಗುತ್ತದೆ ಅಲ್ಲಿಯ ಅಯ್ಯಗಳು ಎಂದು ಹೆಸರಿಟ್ಟುಕೊಂಡಿರುವವರು ಆ ಪ್ರಾಂತದ ದಡ್ಡ ಭಕ್ತಶಿಖಾಮಣಿಗಳಿಗೆ ಮಂಕು ಬೂದಿಯನ್ನೆರಚಿ, ಕೃತ್ರಿಮದಿಂದ ಈ ಮುಖ್ಯ ತ್ರಿವಿಧ ದೀಕ್ಷಾ ಕ್ರಮಗಳನ್ನು ಲೋಪ ಮಾಡಿರಬಹುದೆಂದು ಶಂಕೆಯುಂಟಾಗುತ್ತದೆ. ಶ್ರೀ ಪಟ್ವೇದ ಅವರು ಹೇಳುವ ಈ ಅನುಭವವು ನಿಜವಾಗಿದ್ದ ಪಕ್ಷದಲ್ಲಿ ಅದು ಬಹಳ ಶೋಚನೀಯವಾದ ಸಂಗತಿಯೇ ಸರಿ. ಇನ್ನು ಮುಂದಾದರೂ ಶ್ರೀ ಪಟ್ವೇದ ಅವರು ಮತ್ತು ಅಲ್ಲಿಯ ಲಿಂಗವಂತರು ಒಟ್ಟುಗೂಡಿ ಶಾಸ್ತ್ರವೇನೆಂಬುದನ್ನು ಅರಿತುಕೊಂಡು ವೀರಶೈವ ಜನಾಂಗಕ್ಕೇ ಅಪಮಾನಕರವಾದ ಈ ಕೊರತೆಗಳನ್ನು ಆದಷ್ಟು ಜಾಗ್ರತೆಯಾಗಿ ನೀಗುವರೆಂದು ನಾನು ಈ ಮೂಲಕ ಶ್ರೀ ಪಟ್ವೇದ ಅವರನ್ನು ಭಕ್ತಿಯಿಂದ ಬೇಡಿಕೊಳ್ಳುತ್ತೇನೆ.

ಇನ್ನು ಮುಂದೆ "ಎಂಟನೆ ತಿಂಗಳ ಸಂಸ್ಕಾರಕ್ಕಂತೂ ಹೀಗೆ ಸಂಬಂಧಗೊಳಿಸುವುದು (ಹಸ್ತಮಸ್ತಕ ಸಂಯೋಗ, ಕರ್ಣೋಪದೇಶ ಮುಂತಾದವುಗಳನ್ನು ನಡೆಸುವುದು) ಶಕ್ಯವೇ ಇಲ್ಲ" ಎಂದು ಹೇಳಿದ್ದಾರೆ. ಇದರಿಂದ ಶ್ರೀ ಪಟ್ವೇದ ಅವರಿಗೆ ಎಂಟನೆ ತಿಂಗಳ ಸಂಸ್ಕಾರವು ಹೇಗೆ ನಡೆಯುತ್ತದೆಂಬ ಅನುಭವವೇ ಇಲ್ಲವೆಂದು ಗೊತ್ತಾಗುತ್ತದೆ. ತಮಗೆ ಅನುಭವವಿಲ್ಲದ ಮಾತ್ರದಿಂದಲೇ ಶಾಸ್ತ್ರವೇ ಅಬದ್ಧವೆಂದು ಹೇಳುವುದು ವಿಹಿತವಲ್ಲ. ಎಂಟನೆ ತಿಂಗಳಲ್ಲಿ ಶಿಶುವು ಗರ್ಭದಲ್ಲಿರುವಾಗ್ಗೆ ಲಿಂಗಧಾರಣ ಅರ್ಥಾತ್ ಶಿವದೀಕ್ಷೆಯನ್ನು ಮಾಡುವ ಕ್ರಮವನ್ನು ಇಲ್ಲಿ

ಸೂಕ್ಷ್ಮವಾಗಿ ಹೇಳುತ್ತೇನೆ. ಹೇಗೆಂದರೆ:— ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆಯ ಪ್ರಥಮ ಕಾರ್ಯಾಚರಣೆಗಳನ್ನು ನಡೆಸಿ ಗುರುವು ಗರ್ಭಿಣಿಯ ಮಸ್ತಕದ ಮೇಲೆ ತಮ್ಮ ಶಿವಹಸ್ತವನ್ನಿರಿಸಿ ಹಸ್ತಮಸ್ತಕ ಸಂಯೋಗ ಮಾಡುವನು. ಆ ಮೇಲೆ ಆಕೆಯ ಕರ್ಣದಲ್ಲಿ ಮಂತ್ರೋಪದೇಶವನ್ನು ಮಾಡುವನು. ಆಮೇಲೆ ಆಕೆಗೆ ಲಿಂಗಧಾರಣವನ್ನು ಮಾಡುವನು. ಈ ರೀತಿಯಲ್ಲಿ ವೇಧಾ ಮಂತ್ರ ಕ್ರಿಯಾದೀಕ್ಷೆಗಳನ್ನು ತಾಯಿಯ ಮೂಲಕ ಗುರುವು ಶಿಶುವಿಗೆ ಅನುಗ್ರಹಿಸುವನು. ಅನುಭವವು ಹೀಗಿರುವಾಗ್ಯೆ ಅನಭವವನ್ನು ತಿಳಿಯದೆ ಎಂಟನೇ ತಿಂಗಳಲ್ಲಿ ತ್ರಿವಿಧ ದೀಕ್ಷೆಗಳನ್ನು ನಡೆಸುವದು ಶಕ್ಯವೇ ಇಲ್ಲ ಎಂದು ಹೇಳುವುದು ನ್ಯಾಯವಲ್ಲ.

ಈ ಎಲ್ಲ ಕಾರಣಗಳಿಂದ "ಶಿಶುವಿನ ಲಿಂಗಧಾರಣೆಯು ಔಪಚಾರಿಕವಾಗಿದೆ" ಎಂಬ ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ ವಂಟಮುರಿ ಇವರ ಮಾತು ನ್ಯಾಯವಾಗಿಲ್ಲ. ಶಿಶುವಿನ ಲಿಂಗಧಾರಣೆಯು ಎಂದಿಂದಿಗೂ ಔಪಚಾರಿಕವಾಗಿರುವುದಿಲ್ಲ. ಅದು ನಿಜವಾದ, ಪರಿಪೂರ್ಣವಾದ ಪರಿಣಾಮಕಾರಿಯಾದ ಲಿಂಗಧಾರಣ ಅರ್ಥಾತ್ ಶಿವದೀಕ್ಷೆಯೇ ಆಗಿದೆ. ಅಲ್ಲದೆ ಅದು ನೂರೊಂದು ಸ್ಥಲಗಳಲ್ಲಿ ಐದನೆಯ ಸ್ಥಲವಾಗಿದೆ.

ಈ ವಿಚಾರದಲ್ಲಿ ಶ್ರೀಮಾನ್ ಜೀರಗೆ ಕ. ಬಸವಪ್ಪ ಬಿ. ಎ ಅವರು ಬರೆದಿರತಕ್ಕ ಅನುಭವಗಳು ನ್ಯಾಯವಾದವುಗಳೂ, ಶಾಸ್ತ್ರ ಸಮ್ಮತವಾದವುಗಳೂ ಆಗಿವೆ.

# ಲಿಂಗಧಾರಣ ಮತ್ತು ಶಿವದೀಕ್ಷೆ.

(ಲೇಖಕ:— ಓರ್ವ ವೀರಶೈವ.)

---

ಪರತರಮುಕ್ತಿಗೆ ಜ್ಞಾನಕ್ರಿಯಾತ್ಮಕವಾದ ಷಟ್‌ಸ್ಥಲಾಚರಣೆಯೇ ಮುಖ್ಯೋಪಾಯವು. ಆ ಆಚರಣೆಯು ಅಳವಡಲು ದೀಕ್ಷೆಯು ಅವಶ್ಯವಾದುದು. ಆದಕಾರಣ ಸದ್ಗುರುವಿನಿಂದ ಶಿವದೀಕ್ಷೆ ಪಡೆದು ಷಟ್‌ಸ್ಥಲಾಚರಣೆಯನ್ನು ನಿಷ್ಠೆಯಿಂದ ನಡೆಯಿಸಿ ಮೋಕ್ಷವನ್ನು ಪಡೆಯುವದು ಮುಮುಕ್ಷುಗಳ ಕರ್ತವ್ಯವು. ಭ್ರಮರವು ತನ್ನಂತೆ ಆಗಲು ಯೋಗ್ಯತೆಯುಳ್ಳ ಕೀಟಗಳನ್ನು ತನ್ನ ದೃಷ್ಟಿಸಂಸ್ಕಾರವು ವೇಧಿಸುವಂತೆ ಮಾಡುವದರಿಂದ ಆ ಕೀಟಗಳು ಭ್ರಮರಗಳೇ ಆಗುತ್ತವೆ. ಹಾಗೆಯೇ ಸದ್ಗುರುವು ಶಿಷ್ಯನ ಅಂತರಂಗ ಪರಿಪಕ್ವತೆಯನ್ನು ಪರೀಕ್ಷಿಸಿ ದೀಕ್ಷೆ ಮಾಡಿ ತನ್ನಂತೆ ಮಾಡಿಕೊಳ್ಳುವನು. "ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಮಾಂಬುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ." ಎಂದು ಬಸವೇಶ್ವರನು ಹೇಳಿದ್ದಾನೆ. ಆದಕಾರಣ ಕಂಡಕಂಡವರಿಗೆ ದೀಕ್ಷೆ ಮಾಡುವದು ಅನುಚಿತವು. ವೈದ್ಯನು ರೋಗಪೀಡಿತನಾದ ಮನುಷ್ಯನಿಗೆ ಯೋಗ್ಯಚಿಕಿತ್ಸೆಮಾಡಿ ಆ ರೋಗವನ್ನು ನೀಗುವಂತೆ ಸದ್ಗುರುವು ಭವರೋಗದಿಂದ ಬಳಲುವ ಆತ್ಮನಿಗೆ ಶಿವದೀಕ್ಷೆಯನ್ನು ಕೊಟ್ಟು ಅವನ ಸಂಸಾರ ಪಾಶವನ್ನು ಪರಿಹರಿಸುವನು. ಶಿವದೀಕ್ಷೆಯು ಒಂದು ಆಧ್ಯಾತ್ಮಿಕ ಸಂಸ್ಕಾರ ಅಥವಾ ವಿಧಾನವಾಗಿರುವದರಿಂದ ಸದ್ಯೋಜಾತಾದಿ ಪಂಚಬ್ರಹ್ಮದ್ಯೋತಕವಾದ ಪಂಚಕಲಶಗಳನ್ನು ಹೂಡಿ ಶ್ರೀಗುರುವು ಗಣಸಾಕ್ಷಿಯಾಗಿ ಶಿಷ್ಯನಿಗೆ ಶಿವದೀಕ್ಷೆ ಮಾಡುವನು.

ಶ್ರೀಗುರುವು ಶಿಷ್ಯನ ಬ್ರಹ್ಮರಂಧ್ರದಲ್ಲಿರುವ ಚಿತ್ಕಳೆಯನ್ನು ಅನುಕ್ರಮವಾಗಿ ಭಾವ, ಮನಸ್ಸು, ದೃಷ್ಟಿಗಳಿಗೆ ತಂದು ಶಿವಮಂತ್ರಪೂರ್ವಕವಾಗಿ ಅದನ್ನು ಕರಸ್ಥಲದಲ್ಲಿ ಇಷ್ಟಲಿಂಗರೂಪದಿಂದ ನೆಲೆಗೊಳಿಸುವನು. ಈ ಕ್ರಿಯೆಗೆ ದೀಕ್ಷೆಯೆಂದೆನ್ನುವರು. ಈ ದೀಕ್ಷೆಯ ಕ್ರಮವೆಂತೆಂದರೆ ಗುರುವು ಶಿಷ್ಯನ ಮಸ್ತಕದಲ್ಲಿ ಹಸ್ತವನ್ನಿರಿಸಿದರೆ ಕಾರಣದೇಹಕ್ಕೆ ವೇಧಾದೀಕ್ಷೆಯಾಯಿತು. ಕಿವಿಯಲ್ಲಿ ಪ್ರಣವ ಪಂಚಾಕ್ಷರಿ ಮಂತ್ರವನ್ನು ಬೋಧಿ

ಸಿದರೆ ಸೂಕ್ಷ್ಮದೇಹಕ್ಕೆ ಮಂತ್ರದೀಕ್ಷೆಯಾಯಿತು. ಇಷ್ಟಲಿಂಗವನ್ನು ಕರಸ್ಥಲಕ್ಕೆ ಕೊಟ್ಟರೆ ಸ್ಥೂಲಶರೀರಕ್ಕೆ ಕ್ರಿಯಾದೀಕ್ಷೆ ಮಾಡಿದಂತಾಯಿತು. ಒಟ್ಟಿನಮೇಲೆ ವೇಧಾದೀಕ್ಷೆಯಿಂದ ಭಾವಲಿಂಗವನ್ನು ಕಾರಣದೇಹದಲ್ಲಿಯೂ, ಪ್ರಾಣಲಿಂಗವನ್ನು ಸೂಕ್ಷ್ಮದೇಹದಲ್ಲಿಯೂ, ಇಷ್ಟಲಿಂಗವನ್ನು ಸ್ಥೂಲದೇಹದಲ್ಲಿಯೂ ಸಂಯೋಗ ಮಾಡುವದೇ ವೀರಶೈವ ದೀಕ್ಷೆಯು. ಗುರುವು ತನ್ನ ಆಧ್ಯಾತ್ಮ ಪ್ರಕಾಶ ಕಿರಣಗಳನ್ನು ಶಿಷ್ಯನಲ್ಲಿ ಪ್ರವೇಶಗೊಳಿಸುತ್ತಾನೆ. ಅರ್ಥಾತ್ ಲಿಂಗಧಾರಣವೇ ದೀಕ್ಷೆಯು. ಅಂದರೆ ಗುರುವು ಶಿಷ್ಯನಿಗೆ ಕರುಣಿಸಿಕೊಟ್ಟ ಜ್ಞಾನವು ಶಿಷ್ಯನ ಆಣವಮಲ, ಮಾಯಾಮಲ, ಕಾರ್ಮಿಕಮಲಗಳನ್ನು ಕಳೆದು ಗುರುವು ಅವನನ್ನು ಜ್ಞಾನಸಂಪನ್ನನನ್ನಾಗಿ ಮಾಡುವನು.

ಗುರುವೇ ಎಲ್ಲವನ್ನು ಮಾಡಿದಬಳಿಕ ತೀರಿತು, ಶಿಷ್ಯನು ಮಾಡತಕ್ಕದ್ದೇನು ಉಳಿಯಿತೆಂದು ನೀವು ಪ್ರಶ್ನೆಮಾಡಬಹುದು. ಅದಕ್ಕೆ ಉತ್ತರವಿಷ್ಟೇ. ವೀರಶೈವಮತವು ಜ್ಞಾನಕ್ರಿಯಾಸಮುಚ್ಚಯಾತ್ಮಕವಾಗಿರುತ್ತದೆ. ಗುರುವು ಜ್ಞಾನಮಾರ್ಗವನ್ನು ತೋರಿಸುವನು. ಶಿಷ್ಯನು ಕ್ರಿಯಾಮಾರ್ಗದಿಂದ ನಡೆಯಬೇಕೆಂಬುದೇ ದೀಕ್ಷೆಯ ಗುಟ್ಟು. ಗುರುವು ಶಿಷ್ಯನಲ್ಲಿ ಜ್ಞಾನವನ್ನುಂಟು ಮಾಡಬೇಕಾದರೆ ೨೧ ದೀಕ್ಷೆಗಳನ್ನು ಮಾಡುವನು. ಶಿಷ್ಯನು ಕ್ರಿಯೆಯನ್ನು ಸಾಧಿಸಿ ಮೋಕ್ಷಪಡೆಯಬೇಕಾದರೆ ವಿರುದ್ಧಕ್ರಮದಿಂದ ೨೧ ದೀಕ್ಷೆಗಳನ್ನು ಹೊಂದಬೇಕಾಗುತ್ತದೆ. ಗುರುವು ಶಿಷ್ಯನನ್ನು ತನ್ನಂತೆ ಜ್ಞಾನಸಂಪನ್ನನನ್ನು ಮಾಡಿದ ಮಾತ್ರಕ್ಕೆ ತೀರಲಿಲ್ಲ. ಆದರೆ ಕ್ರಿಯೆಯಿಂದ ಶಿಷ್ಯನು ಗುರುಸ್ವರೂಪಿಯಾಗಬೇಕಲ್ಲವೇ? ಶಿವದೀಕ್ಷಾಸಂಪನ್ನನಾದ ಶಿಷ್ಯನು ಶ್ರೀಗುರುವು ಕರುಣಿಸಿಕೊಟ್ಟ ಇಷ್ಟಲಿಂಗವನ್ನು ನಿಷ್ಠೆನಿಟ್ಟೆರಗಾಗಿ ಪೂಜಿಸಿ ಪ್ರಾಣಲಿಂಗಾನುಸಂಧಾನದಲ್ಲಿ ತಲ್ಲೀನನಾಗಿ ಕೊನೆಗೆ ಭಾವಲಿಂಗದಲ್ಲಿ ಬೆರೆಯುವನು. ಇದೇ ಕ್ರಿಯಾಮಾರ್ಗವು. ಈ ಹಾದಿಯಿಂದ ಹೋಗುವಾಗ ಅವನಿಗೆ ಶ್ರೀಗುರುವಿನ ಸಹಾಯವು ಬೇಕಾಗುತ್ತದೆ. ಗುರುವು ಶಿಷ್ಯನ ಆಧ್ಯಾತ್ಮಿಕ ಬೆಳವಣಿಗೆಯನ್ನರಿತು ಅವನಿಗೆ ಉಪಮಾದೀಕ್ಷೆಯಿಂದ ಮೊದಲ್ಗೊಂಡು ಸದ್ಯೋನ್ಮುಕ್ತಿಯ ವರೆಗೆ ಸ್ವಾನುಭವ ಸೂತ್ರವನ್ನು ಬೋಧಿಸುವನು. ಆಗ ಶಿಷ್ಯನು ಸಾಕ್ಷಾತ್ ಗುರುವೇ ತಾನಾಗುವನು. ಹೀಗೆ ಜ್ಞಾನಕ್ರಿಯಾಯುಕ್ತವಾದ ದೀಕ್ಷೆಗಳು ಹಾಸುಹೊಕ್ಕಾಗಿ ಹೆಣೆಯಲ್ಪಟ್ಟಿರುತ್ತವೆ.

ಒಕ್ಕಲಿಗನು ಭೂಮಿಯಲ್ಲಿ ಬೀಜವನ್ನು ಬಿತ್ತಿ ಆ ಸಸಿಯು ಬೆಳೆದು ದೊಡ್ಡದಾಗಿ ಬೀಜವನ್ನು ಕೊಡುವವರೆಗೂ ಅದಕ್ಕೆ ಕಳೆ, ಗೊಬ್ಬರ, ನೀರು, ಕತ್ತರಿಸೋಣ ಮುಂತಾದ ಸಂಸ್ಕಾರಗಳನ್ನು ಕೊಡುವಂತೆ ಗುರುವು ದೀಕ್ಷಾಪೂರ್ವಕವಾಗಿ ಲಿಂಗಧಾರಣ ಮಾಡಿದ ಬಳಿಕ ಶಿಷ್ಯನು ಕ್ರಿಯಾ ಮಾರ್ಗದಿಂದ ತನ್ನ ಸ್ವರೂಪಕ್ಕೆ ಬರುವವರೆಗೂ ಕೆಲವು ಸಂಸ್ಕಾರಗಳನ್ನು ಕೊಡುವನು.

ಗುರುವು ಶಿಷ್ಯನಿಗೆ ಲಿಂಗಧಾರಣ ಮಾಡುವಾಗ ಅಂದರೆ ಅವನಲ್ಲಿ ಜ್ಞಾನೋದಯವನ್ನುಂಟುಮಾಡುವಾಗ ಶಿವದೀಕ್ಷೆಬೇಕು. ಶಿಷ್ಯನು ಕ್ರಿಯಾ ಮಾರ್ಗದಿಂದ ಮೋಕ್ಷವನ್ನು ಸಾಧಿಸುವಾಗಲೂ ಶಿವದೀಕ್ಷೆಬೇಕು. ಆದರೆ ಇವೆರಡೂ ಪ್ರಕಾರ ದೀಕ್ಷೆಗಳು ವಿರುದ್ಧ ಕ್ರಮದಲ್ಲಿ ನಡೆದಿರುತ್ತವೆಂಬ ದನ್ನು ನಾವು ಲಕ್ಷದಲ್ಲಿಡತಕ್ಕದ್ದು. ಉದಾಹರಣಾರ್ಥವಾಗಿ ಲಿಂಗ ಧಾರಣ ಮಾಡುವಾಗ ವೇಧಾ, ಮಂತ್ರ, ಕ್ರಿಯಾ ದೀಕ್ಷೆಗಳು ನಡೆದರೆ ಶಿಷ್ಯನು ಮೋಕ್ಷವನ್ನು ಸಾಧಿಸುವಾಗ ಕ್ರಿಯಾ-ಮಂತ್ರ-ವೇಧಾ ದೀಕ್ಷೆ ಗಳನ್ನು ಪಡೆಯುವನು.

ವೀರಶೈವ ಮತದಲ್ಲಿ ಗುರುವಿಗೆ ಅತ್ಯಂತ ಮಹತ್ವದ ಸ್ಥಾನವಿದೆ. ಆತನು ಅಂತಃಕರಣದಿಂದ ಶಿಷ್ಯನಿಗೆ ದೀಕ್ಷಾಪೂರ್ವಕವಾಗಿ ಲಿಂಗಧಾ ರಣಮಾಡಿ ಬಿಟ್ಟರೆ, ಪರುಷದ ಸೋಂಗಿನಿಂದ ಕಬ್ಬಿಣವು ಬಂಗಾರವಾದಂತೆ ಆ ಶಿಷ್ಯನು ಗುರುವಿನಂತೆ ಜ್ಞಾನ ಸಂಪನ್ನನಾಗುತ್ತಾನೆ. ಹಾಗೆ ಆಗದಿ ದ್ದರೆ ದೀಕ್ಷೆ ಕೊಟ್ಟ ಗುರುವಿಗೂ ಮಹತ್ವವಿಲ್ಲ, ಆ ದೀಕ್ಷೆಗೂ ಮಹ ತ್ವವಿಲ್ಲ. ಅದು ಕೇವಲ ಯಾಂತ್ರಿಕ ಕ್ರಿಯೆಯಾದಂತಾಗುವದು. ವೀರ ಶೈವರು ಪ್ರಾಕೃತರಂತೆ ಮಾಂಸ ಪಿಂಡಿಗಳಲ್ಲ. ಅಪ್ರಾಕೃತರಾದ ಮಂತ್ರ ಪಿಂಡಿಗಳು. ಪ್ರಾಕೃತರಲ್ಲಿ "ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರೇಣೈವ ಬ್ರಾಹ್ಮಣಃ" ಎಂಬ ತತ್ವವಿರುವದರಿಂದ ೮ ವರ್ಷಗಳ ವರೆಗೆ ಅವರ ಬಾಲಕನಿಗೆ ಶೂದ್ರತ್ವವುಂಟು. ಆಮೇಲೆ ಆತನಿಗೆ ಜ್ಞಾನೋದಯ ವಾಯಿತೆಂದು ತಿಳಿದು ದ್ವಿಜತ್ವವನ್ನು ಕಲ್ಪಿಸಿ ಕೊಡುತ್ತಾರೆ. ಆದರೆ ಮಂತ್ರ ಪಿಂಡಿಗಳಾದ ವೀರಶೈವರ ಮಾತು ಹಾಗಲ್ಲ. ಶಿಶುವು ತಾಯಿಯ ಗರ್ಭದಲ್ಲಿ ೮ ತಿಂಗಳವಾದ ಕೂಡಲೆ ಅದರ ಸರ್ವಾಂಗಗಳು ಪೂರ್ಣ ವಾಗಿ ಅದಕ್ಕೆ ತಾನು ಯಾರು? ಇಲ್ಲಿಗೆ ಯಾಕೆ ಬಂದೆ? ಎಂಬ ಪರಿ ಜ್ಞಾನವುಂಟಾಗುತ್ತದೆಂದು ನಮ್ಮವರ ಗ್ರಹಿಕೆ. ಅಂತೆಯೇ ಹೊಟ್ಟೆಯ

ಶಿಶುವಿಗೆ ತಾಯಿಯ ಮುಖಾಂತರವಾಗಿ ಗುರುವು ದೀಕ್ಷಾಪೂರ್ವಕ ಲಿಂಗ ಧಾರಣ ಮಾಡುವನು. ಆದರಿಂದ ಸಸಿಯ ಬೆಳವಣಿಗೆಯಂತೆ ನಮಗೆ ಗೊತ್ತಾಗದೆ ಕೂಸಿನ ಆಧ್ಯಾತ್ಮಿಕ ಬೆಳವಣಿಗೆಯೂ ನಡೆಯುತ್ತದೆ.

ನಮ್ಮ ಸಮಾಜದಲ್ಲಿ ರೂಢವಾಗಿರುವ ಅನೇಕ ವಿಧಾನಗಳಿಗೆಲ್ಲ ದೀಕ್ಷೆಯೆಂದೇ ಹೇಳುವ ಸಾಂಪ್ರದಾಯವಿರುವದರಿಂದ ನಿಜವಾದ ದೀಕ್ಷೆ ಯಾವುದು ? ಎಂಬುದೇ ನಮಗೆ ತಿಳಿಯದಂತಾಗಿದೆ. ಉದಾಹರಣಾ ರ್ಥವಾಗಿ ಭವಿಗಳನ್ನಾಗಲಿ, ಕುಲಗೆಟ್ಟವರನ್ನಾಗಲಿ, ಶುದ್ಧೀಕರಣ ಮಾಡಿ ಸಮಾಜದ ಜನಸಂಖ್ಯೆಯು ಹೆಚ್ಚಲೆಂದು ಮತದಲ್ಲಿ ತೆಗೆದುಕೊಳ್ಳುವಾಗ ಆಗುವ ಸಂಸ್ಕಾರಕ್ಕೆ ದೀಕ್ಷೆಯೆಂದೆನ್ನುವರು. ಸಮಾಜದಲ್ಲಿ ರೂಢಿ ವಶದಿಂದ ಭಕ್ತ ಮಾಹೇಶ ಎಂಬೆರಡು ಜಾತಿಗಳಾಗಿರುವದರಿಂದ ಲಿಂಗ ಧಾರಿಗಳಾದ ಭಕ್ತರು ಮಹೇಶ್ವರರಾಗಬೇಕಾದರೆ ಒಂದು ತರದ ವಿಧಾ ನವು ಬೇಕೆಂದು ಕೆಲವರು ಪ್ರತಿಪಾದಿಸುವರು. ಆದಕ್ಕೂ ದೀಕ್ಷೆಯೆಂದೇ ಹೆಸರು. ಮಾಹೇಶ್ವರರ ಮಕ್ಕಳು ೮ ವರ್ಷದವರಾಗಲು ಅಯ್ಯಾಚಾರ ಅಥವಾ ಅಯ್ಯತನವೆಂಬ ವಿಧಾನವನ್ನು ಮಾಡುವರು. ಅದಕ್ಕೂ ದೀಕ್ಷೆ ಯೆಂದೆನ್ನುವರು. ಅದೇ ಮೇರೆಗೆ ಪಟ್ಟಾಧಿಕಾರ ಕೊಡುವಾಗ ಇಲ್ಲವೆ ಸ್ಥಲ ಕೂಡಿಸುವಾಗ ಒಂದು ಬಗೆಯ ವಿಧಾನವುಂಟು. ಅದಕ್ಕೂ ದೀಕ್ಷೆ ಯೆಂಬ ಸಂಜ್ಞೆಯಿರುತ್ತದೆ. ಆದರೆ ನಿಜವಾದ ವೀರಶೈವ ದೀಕ್ಷೆಯಾವುದು? ಎಂಬುದೇ ಕಠಿಣ ವಿಷಯವಾಗಿದೆ.

ನನ್ನ ಅಭಿಪ್ರಾಯದಲ್ಲಿ ಲಿಂಗಧಾರಣ, ಶಿಷ್ಯನ ಆಧ್ಯಾತ್ಮಿಕ ಬೆಳ ವಣಿಗೆಯಲ್ಲಿ ಮಾಡುವ ದೀಕ್ಷೆಗಳು ಮಾತ್ರ ನಿಜವಾದ ದೀಕ್ಷೆಗಳಲ್ಲದೆ ಉಳಿದವುಗಳಲ್ಲ. ವೀರಶೈವ ಶಿಶುವು ತಾಯಿಯ ಗರ್ಭದಲ್ಲಿ ೮ ತಿಂಗಳ ವಿದ್ದಾಗ ಅಥವಾ ಒಬ್ಬ ಪವಿತ್ರಾಂತಃಕರಣಿಯಾದ ವ್ಯಕ್ತಿಯು ವೀರಶೈವ ಮತಾವಲಂಬಿಯಾಗಬೇಕೆಂದು ಗುರುವಿಗೆ ಮರೆಹೊಕ್ಕಾಗ ಶ್ರೀಗುರುವು ಮಾಡುವ ದೀಕ್ಷೆಯೇ ನಿಜವಾದ ದೀಕ್ಷೆಯಾಗಿರುತ್ತದೆ. ಆದರೆ ಭಕ್ತವರ್ಗ ಕ್ಕಿಂತಲೂ ತಾವು ಹೆಚ್ಚಿನ ಸಂಸ್ಕಾರದವರೆಂದು ತೋರಿಸಲಿಕ್ಕೆ ಮಾಡುವ ಅಯ್ಯಾಚಾರ ದೀಕ್ಷೆಯು ೮ ವರ್ಷಕ್ಕೆ ಮುಂಜಾ ವಿಧಿಯನ್ನು ಮಾಡುವ ಬ್ರಾಹ್ಮಣರ ವಿಧಿಯ ಅನುಕರಣವೇ ಹೊರತು ಬೇರಲ್ಲ. ಇದು ಆಧ್ಯಾ ತ್ಮಿಕ ಬೆಳವಣಿಗೆಯ ದೀಕ್ಷೆಯಲ್ಲ. ಸಮಾಜ ಪ್ರತಿಷ್ಠತೆಯ ದೀಕ್ಷೆಯು.

ಅದೇ ಮೇರೆಗೆ ಅಧಿಕಾರ ಅಥವಾ ಸ್ಥಲಕೊಡುವಾಗ ಮಾಡುವ ದೀಕ್ಷೆಯಾದರೂ ಒಂದು ಅಧಿಕಾರದ ವಿಧಾನವೇ ಹೊರತು ನಿಜವಾದ ದೀಕ್ಷೆಗೂ ಅದಕ್ಕೂ ಸಂಬಂಧವೇ ಇಲ್ಲ. ಸಾಮಾಜಿಕ ವಿಧಾನಗಳೆಲ್ಲ ದೀಕ್ಷೆಗಳೆಂದರೆ ನಾಮಕರಣ, ವಿವಾಹ, ಅಂತ್ಯವಿಧಿ ಮೊದಲಾದವುಗಳಿಗೆಲ್ಲ ದೀಕ್ಷೆಗಳೆನ್ನಬೇಕಾದೀತು. ದೀಕ್ಷೆಯು ಸಮಾಜಗತವಲ್ಲ, ವ್ಯಕ್ತಿಗತವಾಗಿರುತ್ತದೆ.

---

## ವೀರಶೈವರು ಹಿಂದುಗಳೇ?

(ಲೇಖಕರು:— ಕಲ್ಯಾಣಪ್ಪ ಬ್ಯಾಳಿ ವಿಜಾಪುರ.)

---

"ಹಿಂದು" ಈ ಶಬ್ದವು ಪ್ರಾಚೀನಕಾಲದ ವಾಙ್ಮಯದಲ್ಲಿ ಕಂಡುಬರುವದಿಲ್ಲ. ಅದು ಮಧ್ಯಂತರದಲ್ಲಿ ಬಂದದ್ದಾಗಿದೆ. ಹಿಂದು ಶಬ್ದವು ಸಿಂಧು ಎಂಬದರ ಅಪಭ್ರಂಶವು. ಆರ್ಯರು ಮೊದಲು ಸಿಂಧುನದೀ ತೀರದ ಮೇಲೆ ವಾಸಿಸುತ್ತಿದ್ದುದರಿಂದ ಗ್ರೀಕರು ಅವರಿಗೆ ಸಿಂಧುಗಳೆಂದು ಕರೆದರು. ಬರಬರುತ್ತ ಸಿಂಧುಗಳ ವರ್ಚಸ್ಸು ಇಡೀ ಹಿಂದುಸ್ಥಾನದ ತುಂಬೆಲ್ಲ ಹಬ್ಬಿದ್ದರಿಂದ ಇಡೀ ದೇಶದ ಜನರಿಗೆ ಸಿಂಧುಗಳೆಂಬ ಹೆಸರು ಪ್ರಾಪ್ತವಾಯಿತು. ಮುಸಲ್ಮಾನರು ಈ ದೇಶಕ್ಕೆ ಬಂದಬಳಿಕ ಇಲ್ಲಿಯ ಜನರಿಗೆ ಸಿಂಧುಗಳೆಂದು ಕರೆಯಲಿಕ್ಕೆ ಬಾರದೆ ಆ ಶಬ್ದವನ್ನು ಕೆಡಿಸಿ ಹಿಂದುಗಳೆಂದೆನ್ನಹತ್ತಿದರು. ಇದೇ ಶಬ್ದವನ್ನೇ ಪರದೇಶದಿಂದ ಬಂದ ಬ್ರಿಟಿಶರು ಮುಂದೆ ಅಂಗೀಕರಿಸಿದರು. ಆದುದರಿಂದ ಮುಸಲ್ಮಾನ ಕ್ರಿಸ್ತಿಯನ್‌ರ ಹೊರತಾಗಿ ಹಿಂದುಸ್ತಾನದಲ್ಲಿ ವಾಸಿಸುವ ಎಲ್ಲ ಜನರಿಗೂ ಹಿಂದುಗಳೆಂದು ಸಾಮಾನ್ಯವಾಗಿ ಹೇಳಬಹುದು.

ಬಹು ಪ್ರಾಚೀನಕಾಲದಲ್ಲಿ ಹಿಂದುಸ್ಥಾನದೊಳಗೆ ದ್ರಾವಿಡ ಸಂಸ್ಕೃತಿಯು ಪ್ರಚಾರದಲ್ಲಿತ್ತು. ದ್ರಾವಿಡರು ಶಿವೋಪಾಸಕರು. ಇವರ ಸಂಸ್ಕೃತಿಯು ಹಿಂದುಸ್ಥಾನದಲ್ಲಷ್ಟೇ ಅಲ್ಲ; ಇಜಿಪ್ತ, ಬಾಬಿಲೋನಿಯಾ, ಪಾಸಿಫಿಕ್‌ದ್ವೀಪಗಳು ಮೊದಲಾದವುಗಳಲ್ಲಿ ಹಬ್ಬಿಕೊಂಡಿತ್ತೆಂಬುವದಕ್ಕೆ ಅಲ್ಲಿ

ಈಗಲೂ ಕಂಡುಬರುವ ಸ್ಥಾವರಲಿಂಗ ನಂದೀವಿಗ್ರಹಾದಿ ಅವಶೇಷಗಳು ಸಾಕ್ಷಿಗಳಾಗಿವೆ. ದ್ರಾವಿಡರಲ್ಲಿ ಜಾತಿಭೇದಗಳಿರಲಿಲ್ಲ, ಅವರು ಕಾಡು ಜನರಲ್ಲ. ಒಳ್ಳೇ ಸುಧಾರಣೆಹೊಂದಿದ ನಾಗರಿಕರು. ಈ ಶೈವದ್ರಾವಿಡರಲ್ಲಿ ಅನೇಕರು ಆರ್ಯಸಂಸ್ಕೃತಿಯ ಪ್ರಭಾವದಿಂದ ವೀರಶೈವರಾದರು.

ಆರ್ಯರು ಹಿಂದುಸ್ಥಾನಕ್ಕೆ ಬಂದು ಮೊದಲು ಪಂಜಾಬದಲ್ಲಿ ತಳವೂರಿದರು. ಇವರಲ್ಲಿಯೂ ಮೊದಲು ಜಾತಿಭೇದಗಳಿರಲಿಲ್ಲ. ಇವರು ಚತುರ್ವೇದಗಳನ್ನು ರಚಿಸಿದರು. ಇವರು ಇಂದ್ರ, ವರುಣ, ವಾಯು, ಅಗ್ನಿ, ವಿಷ್ಣು ಮೊದಲಾದ ನಿಸರ್ಗರೂಪಗಳನ್ನು ದೇವರೆಂದು ತಿಳಿದು ಆರಾಧಿಸುತ್ತಿದ್ದರು. ಇವರು ತಮ್ಮ ಶೌರ್ಯಸಾಹಸಗಳಿಂದ ದ್ರಾವಿಡರ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತ ಅಲ್ಲಿ ತಮ್ಮ ಸಂಸ್ಕೃತಿಯನ್ನು ನೆಲಿಗೊಳಿಸಿದರು. ಅದೇ ಮೇರೆ ದ್ರಾವಿಡರ ಸಂಸ್ಕೃತಿಯನ್ನಾದರೂ ಬಹುಮಟ್ಟಿಗೆ ಅವರು ಅಂಗೀಕರಿಸಿದರು. ಶಿವನನ್ನು ತಮ್ಮ ದೇವರಂತೆ ಆರಾಧಿಸಹತ್ತಿದರು. ಸಂಸ್ಕೃತ ಭಾಷೆಯು ಆರ್ಯದ್ರಾವಿಡ ಸುಶಿಕ್ಷಿತ ವರ್ಗದವರ ಸಾಹಿತ್ಯಭಾಷೆಯಾಯಿತು. ಎಷ್ಟೋ ಋಷಿಗಳು ಶಿವೋಪಾಸಕರಾಗಿ ಯಜುರ್ವೇದದಲ್ಲಿ ಶಿವನ ಪರವಾಗಿ ಮಂತ್ರಗಳನ್ನು ರಚಿಸಿದರು. ಶೈವ ಋಷಿಗಳನೇಕರು ಆಗಮೋಪನಿಷತ್ತುಗಳನ್ನು ರಚಿಸಿದರು. ಈ ಮೇರೆಗೆ ಆರ್ಯದ್ರಾವಿಡ ಸಂಸ್ಕೃತಿಗಳು ಒಂದರೊಳಗೊಂದು ಕೂಡಿಬಿಟ್ಟವು. ಮುಂದೆ ಇಂಥವರೇ ದ್ರಾವಿಡರು, ಇಂಥವರೇ ಆರ್ಯರೆಂದು ಬೆರಳು ಮಾಡಿ ತೋರಿಸಲು ಶಕ್ಯವಿಲ್ಲದಂತಾಯಿತು. ಶಿವ-ವಿಷ್ಣು ದೇವರ ಆರಾಧನೆಯು ಆರ್ಯದ್ರಾವಿಡರಲ್ಲಿಯೂ ನಡೆಯಿತು. ಈ ಸಮಯದಲ್ಲಿ ಅವರವರ ಗುಣಕರ್ಮಗಳಿಗನುಸರಿಸಿ ಸಮಾಜದಲ್ಲಿ ಚಾತುರ್ವರ್ಣಾಶ್ರಮಗಳ ವ್ಯವಸ್ಥೆಯಾಯಿತು. ಆದರೆ ಜಾತಿವಾರ ವರ್ಣಾಶ್ರಮಗಳಿರಲಿಲ್ಲ.

ಮುಂದೆ ಶೈವವೈಷ್ಣವ ಬ್ರಾಹ್ಮಣರು ತಮ್ಮ ವರ್ಚಸ್ಸನ್ನು ಇತರರ ಮೇಲೆ ಕೂಡ್ರಿಸುವದಕ್ಕಾಗಿಯೂ ತಮ್ಮ ಸ್ವಾರ್ಥವನ್ನು ಮೆರೆಯಿಸುವದಕ್ಕಾಗಿಯೂ ಕೆಲವು ಸ್ಮೃತಿಗಳನ್ನು ಬರೆದು ಜಾತಿವಾರ ವರ್ಣಾಶ್ರಮಗಳನ್ನು ಬಳಿಕೆಯಲ್ಲಿ ತಂದರು. ಈ ಪದ್ಧತಿಯನ್ನು ವಿರೋಧಿಸಿ ವೀರಶೈವರು ಪ್ರತ್ಯೇಕವಾಗಿ ಉಳಿದದ್ದರಿಂದ ಇವರಿಗೆ ಅತಿವರ್ಣಾಶ್ರಮಿಗಳೆಂದು ಕರೆಯಬಹುದು. ವೀರಶೈವರು ಸ್ಮೃತಿಕಾರರ ವರ್ಣಾಶ್ರಮ

ಧರ್ಮಕ್ಕೆ ಬಾಹಿರರಾಗಿದ್ದರೂ ಶ್ರುತ್ಯಾಗವು ಸಂಸಿದ್ಧವಾದ ಸನಾತನ ಧರ್ಮಕ್ಕೆ ಮತ್ತು ಪ್ರಾಚೀನ ದ್ರಾವಿಡಧರ್ಮಕ್ಕೆ ಬದ್ಧರಾಗಿದ್ದಾರೆ. ಆದ್ದರಿಂದ ಅವರಿಗೆ ಹಿಂದುಗಳಲ್ಲವೆಂದು ಸಾಧಿಸಲಿಕ್ಕೆ ಬರುವದಿಲ್ಲ. ವೀರಶೈವರಿಗೆ ಸ್ಮೃತಿಗಳು ಮಾನ್ಯವಿರದಿದ್ದರೂ ಶ್ರುತ್ಯಾಗಮಗಳು ಮಾನ್ಯವವೆ.

ಮುಂದೆ ಪೂರ್ವಮೀಮಾಂಸೆ, ಉತ್ತರಮೀಮಾಂಸೆ, ಸಾಂಖ್ಯ ಯೋಗ, ನ್ಯಾಯ ವೈಶೇಷಿಕಗಳೆಂಬ ಷಟ್‌ಶಾಸ್ತ್ರಗಳು ಹುಟ್ಟಲು ವೀರಶೈವರು ವಿಶೇಷತಃ ಉತ್ತರಮೀಮಾಂಸೆ, ಸಾಂಖ್ಯ, ಯೋಗ ಮಾರ್ಗಗಳನ್ನನುಸರಿಸಿ ತಮ್ಮ ಷಟ್‌ಸ್ಥಲಗಳನ್ನು ರಚಿಸಿ ಪ್ರಕಾಶಗೊಳಿಸಿದರು. ಷಟ್‌ಶಾಸ್ತ್ರಗಳು ಹಿಂದುಗಳಿಗೆ ಆಧಾರ ಗ್ರಂಥಗಳಾಗಿದ್ದು ಅವುಗಳ ತತ್ವಗಳನ್ನು ಆಯ್ದು ಅವುಗಳ ಮೇಲೆ ರಚಿಸಲ್ಪಟ್ಟ ಷಟ್‌ಸ್ಥಲ ಶಾಸ್ತ್ರವನ್ನು ಅನುಸರಿಸಿ ನಡೆಯುವ ವೀರಶೈವರಿಗೆ ಹಿಂದುಗಳಲ್ಲವೆಂದು ಸಾಧಿಸುವದು ವಿಹಿತವಲ್ಲ.

ಬರಬರುತ್ತ ಬ್ರಾಹ್ಮಣರ ಜಾತಿಮದಾಂಧತೆಯ ಉಪಟಳವು ಹೆಚ್ಚಾಗಲು ಕೆಲವು ಕ್ಷತ್ರಿಯರು ಅದನ್ನು ಬಲವಾಗಿ ವಿರೋಧಿಸಿ ತಮ್ಮ ಸ್ವಂತ ಮತಗಳನ್ನೇ ಸ್ಥಾಪಿಸಿದರು. ಗೌತಮಬುದ್ಧನೆಂಬ ಕ್ಷತ್ರಿಯ ರಾಜಕುಮಾರನು ವೈದಿಕ ಧರ್ಮದ ಯಜ್ಞಯಾಗಾದಿಗಳನ್ನು ಖಂಡಿಸಿ ವೀರಶೈವರಂತೆ ವರ್ಣಾಶ್ರಮಗಳ ಭೇದವನ್ನಲ್ಲಗಳೆದು ನೀತಿ ಸದಾಚಾರಗಳಿಗೆ ವಿಶೇಷ ಮಹತ್ವಕೊಟ್ಟನು. ಕರ್ಮಠರ ಪೂಜಾದಿ ಕ್ರಿಯೆಗಳನ್ನು ಧಿಕ್ಕರಿಸಿದನು. ವೀರಶೈವರಾದರೂ ಮುಂದೆ ಬೌದ್ಧ ಧರ್ಮದಲ್ಲಿ ಹೇಳಿದ ನೀತಿ ಸದಾಚಾರಗಳನ್ನು ಅಂಗೀಕರಿಸಿ ಪ್ರಚಾರದಲ್ಲಿ ತಂದರು. ಬೌದ್ಧರಂತೆ ಯಜ್ಞ ಯಾಗಾದಿಗಳ ವಿರುದ್ಧವಾಗಿ ಕ್ರಾಂತಿಯನ್ನು ಮಾಡಿದರು. ಬ್ರಾಹ್ಮಣರ ಸ್ಮೃತಿ ಧರ್ಮದ ವಿರುದ್ಧವಾಗಿ ಮಹಾವೀರನೆಂಬ ಮತ್ತೊಬ್ಬ ಕ್ಷತ್ರಿಯ ರಾಜ ಕುಮಾರನು ಜೈನ ಮತವನ್ನು ಸ್ಥಾಪಿಸಿದನು. ಅದರೊಳಗೆ ಶ್ರೇಷ್ಠವಾದ ಅಹಿಂಸಾ ತತ್ವವನ್ನು ವೀರಶೈವರು ಸ್ವಲ್ಪ ಮಾರ್ಪಡಿಸಿ ಸ್ವೀಕರಿಸಿದರು. ಈ ಮೇರೆಗೆ ಮೊದಲು ದ್ರಾವಿಡ ಸಂಸ್ಕೃತಿಯಿಂದುದ್ಭವಿಸಿ ಆರ್ಯರ ವೇದಾಗಮೋಪನಿಷತ್ತು ಶಾಸ್ತ್ರಗಳಿಂದ ಬೆಳೆದು, ಬೌದ್ಧ ಜೈನ ಮತ ತತ್ವಗಳಿಂದ ಪರಿಪೋಷಿತವಾಗಿ ಕೊನೆಗೆ ವೀರ

ಶೈವ ಮತವು ತನ್ನ ಪ್ರತ್ಯೇಕವಾದ ವ್ಯಕ್ತಿತ್ವ ವೈಶಿಷ್ಟ್ಯಗಳನ್ನು ಕಾಪಾಡಿಕೊಂಡಿದೆ. ಆದುದರಿಂದಲೇ ಕೆಲವರು ವೀರಶೈವ ಧರ್ಮವು ಪ್ರತ್ಯೇಕವಾದುದೆಂದುಸಾಧಿಸುವದು ಸಹಜವಾದರೂ ಅದು ಶ್ರುತ್ಯಾಗಮಿಕ ಧರ್ಮಗಳೇ ಅದಕ್ಕೆ ಆಧಾರಗಳಾಗಿರುವದರಿಂದ ಅದಕ್ಕೆ ಹಿಂದೂ ಧರ್ಮದಿಂದ ಭಿನ್ನತ್ವವನ್ನು ಕಲ್ಪಿಸಲಾಗುವದಿಲ್ಲ.

ಒಂದೇ ಧರ್ಮದಿಂದ ಅನೇಕ ಮತಮತಾಂತರಗಳು ಹುಟ್ಟಿ ಬಾಳುತ್ತವೆ. ಆದರೆ ಅವುಗಳು ಮತಗಳೇ ಹೊರತು ಧರ್ಮಗಳಲ್ಲ. ಕ್ರಿಸ್ತಿಯನ್ ಧರ್ಮದಲ್ಲಿ ರೋಮನ್ ಕಾಥೆಲಿಕ್, ಪ್ರೊಟೆಸ್ಟಂಟ ಎಂಬ ಎರಡು ಮತಗಳುಂಟು. ಆದರಂತೆ ಇಸ್ಲಾಂ ಧರ್ಮದಲ್ಲಿಯೂ ಸೇಖ, ಸೈಯ್ಯದ, ಮೊಗಲ, ಪಠಾಣಗಳೆಂಬ ಪಂಥಗಳಿರುವವು. ಅದೇ ಮೇರೆಗೆ ಹಿಂದೂ ಧರ್ಮದಲ್ಲಿ ವೈದಿಕ, ಜೈನ, ಬೌದ್ಧ, ವೀರಶೈವ, ಚಾರ್ವಾಕ, ನಾಸ್ತಿಕ ಶೀಖ ಇತ್ಯಾದಿ ಅನೇಕ ಮತಗಳು ಹುಟ್ಟಿರುತ್ತವೆ. ಆದುದರಿಂದ ಅವುಗಳಿಗೆ ಪ್ರತ್ಯೇಕವಾದ ಧರ್ಮಗಳೆನ್ನದೆ ಮತಗಳೆಂದೇ ಹೇಳುವದು ಯುಕ್ತವಾಗಿದೆ. ಈ ದೃಷ್ಟಿಯಿಂದ ವಿಚಾರಿಸಲು ಸಂಸ್ಕೃತಿ ಭಿನ್ನವಾದ ಕ್ರಿಸ್ತಿ, ಇಸ್ಲಾಂ ಧರ್ಮಗಳ ಹೊರತಾಗಿ ಹಿಂದುಸ್ತಾನದಲ್ಲಿರುವ ಮೇಲ್ಕಂಡ ಎಲ್ಲ ಮತಗಳನ್ನು ಸಮಾಜ ಸಂಸ್ಕೃತಿಯ ಮೂಲಕ ಹಿಂದೂ ಧರ್ಮದಲ್ಲಿ ಸಮಾವೇಶ ಮಾಡುವದು ಯುಕ್ತವಾಗಿದೆ.

ಬೌದ್ಧರಿಗೆ ಧರ್ಮಪದ ಜೈನರಿಗೆ ಸಮ್ಯಗ್‌ಜ್ಞಾನಾದಿ ಶಾಸ್ತ್ರಗಳು, ಶೀಖರಿಗೆ ಗ್ರಂಥಸಾಹೇಬ ಎಂಬ ಧರ್ಮಗ್ರಂಥಗಳಿರುವವು. ಅವು ಆಗಮೋಪನಿಷತ್ತುಗಳಿಂದ ಭಿನ್ನವಾಗಿರುವದರಿಂದ ಅವು ಸ್ವತಂತ್ರ ಧರ್ಮಗಳೆಂದರೂ ನಡೆಯಬಹುದು. ಆದರೆ ವೀರಶೈವ ಮತದ ಮಾತು ಹಾಗಲ್ಲ. ಅದು ವೇದಾಗಮೋಪನಿಷತ್ತುಗಳಿಂದಲೂ ಶಾಸ್ತ್ರಗಳಿಂದಲೂ ಪರಿಪುಷ್ಟವಾಗಿದೆ. ವೀರಶೈವವು ದ್ವೈತ ಅದ್ವೈತಗಳೆರಡನ್ನೂ ಜಾಣ್ಮೆಯಿಂದ ತನ್ನೊಳಗೆ ಅಳವಡಿಸಿಕೊಂಡದ್ದರಿಂದ ಅದಕ್ಕೆ "ದ್ವೈತಾದ್ವೈತ" ಮತವೆಂದೂ ಕರೆಯುತ್ತಿದ್ದಾರೆ. ವೀರಶೈವ ಷಟ್‌ಸ್ಥಲ ಶಾಸ್ತ್ರವನ್ನು ನೋಡಿದರೆ ಇದು ಪ್ರತ್ಯೇಕವಾದ ಮತವೆಂದು ಕರೆಯಿಸಿಕೊಳ್ಳುವಷ್ಟು ಯೋಗ್ಯತೆಯುಳ್ಳದ್ದಿದ್ದರೂ ಹಿಂದು ಧರ್ಮತತ್ವಗಳು ಅದರಲ್ಲಿ ತೊಡತೊಡಕಾಗಿ ಹೆಣೆಯಲ್ಪಟ್ಟಿದ್ದರಿಂದ ಅದು ಹಿಂದು ಧರ್ಮದ ಪ್ರಾಮುಖ್ಯವಾದ ಅಂಗವೆಂದೇ ತಿಳಿಯಬೇಕು.

ನಾವು ಹಿಂದುಗಳೆಂದರೆ ಶೂದ್ರರೊಳಗೆ ನಮ್ಮ ಗಣನೆಯಾಗುವ ದೆಂದು ಹೆದರಿ ಹಿಂದುಗಳಲ್ಲವೆಂದು ಸಾಧಿಸಲಿಕ್ಕೆ ಹೋಗುವದು ತಪ್ಪು. ಜಾತಿಮದಾಂಧರಾದ ಕರ್ಮಠರು ನಮ್ಮ ಉದಾತ್ತ ತತ್ವಗಳಿಗೆ ಸಹಿ ಸದೆ ವಿರೋಧದಿಂದ ಸರಕಾರಕ್ಕೆ ತಿಳಿಸಿ ಕಾಯಿದೆಯಿಂದ ನಮ್ಮನ್ನು ಶೂದ್ರರೊಳಗೆ ಎಳೆದ ಮಾತ್ರಕ್ಕೆ ನಾವು ಹೌದೆಂದು ತಲೆಹಾಕುವದೇಕೆ? ಕಾಯಿದೆಕಾನೂನಗಳಲ್ಲಿ ವೀರಶೈವರು ಶೂದ್ರರೆಂದು ಗಣಿಸಲ್ಪಟ್ಟಿದ್ದರೆ ಹಾಗೆ ಮಾಡಿದವರ ಅಜ್ಞಾನ, ಮತ್ತು ಅದಕ್ಕೆ ನಾವು ಸುಮ್ಮನೆ ಕುಳಿ ತದ್ದು ನಮ್ಮ ತಪ್ಪು. ಶೂದ್ರರೆಂದರೆ ಒಬ್ಬರ ಸೇವೆಮಾಡಿಕೊಂಡು ಜೀವಿ ಸುವ ಕೀಳುಜನರು. ವೀರಶೈವರೇನೂ ಅಂಥ ಕೀಳುಜನರಲ್ಲ. ಶೂದ್ರ ರಿಗೆ ಉದಾರವಾದ ಮತ್ತು ಗಹನವಾದ ತತ್ವಗಳೆಲ್ಲಿ? ಶಾಸ್ತ್ರಪುರಾಣ ಗಳೆಲ್ಲಿ? ಆದರೆ ಶೂದ್ರತ್ವಕ್ಕೆ ವಿರೋಧವಾಗಿ ಸನಾತನತ್ವಕ್ಕೆ ಮಿಗಿಲಾಗಿ ನಮ್ಮ ಮತದಲ್ಲಿ ದಿವ್ಯತತ್ವಗಳು ಅಡಕವಾಗಿರುವದರಿಂದ ನಾವು ಶೂದ್ರರು ಹೇಗಾಗುತ್ತೇವೆ? ಉಳಿದವರು ಶೂದ್ರರೆಂದ ಮಾತ್ರಕ್ಕೆ ಅದು ಬಹಳ ದಿವಸ ಉಳಿಯಲಾರದು. ಆನೆಗೆ ಶ್ವಾನನೆಂದರೆ ಅಂದವನಿಗೇ ಮಾನಹಾನಿಯಲ್ಲದೆ ಆನೆಗೇನು ಅಪಮಾನವಲ್ಲವಷ್ಟೇ? ರತ್ನಕ್ಕೆ ಕಾಜೆಂದರೆ ಅದು ಕಾಜಾಗಬ ಹುದೇ? ಗುಲಾಬಿ ಹೂವಿಗೆ ಕಣಗಿಲ ಹೂವೆಂದರೆ ಅದು ತನ್ನ ಗಮಗಮ ಸುವಾಸನೆಯನ್ನು ಬಿಡುವದೇ? ನಮ್ಮ ತತ್ವಗಳನ್ನು ಜಗತ್ತಿಗೆ ಶ್ರುತ ಪಡಿಸಿ ನಮ್ಮ ಮೇಲ್ಮೆಯನ್ನು ಕಾಪಾಡಿಕೊಳ್ಳಬೇಕಲ್ಲದೆ ನಮ್ಮ ವಿರೋ ಧಿಗಳು ನಮಗೆ ಶೂದ್ರರೆನ್ನುತ್ತಾರೆ, ಹೇಗೆ ಮಾಡಬೇಕೆಂದು ಹೆದರಿ ನಾವು ಹಿಂದುಗಳೇ ಅಲ್ಲವೆಂದು ಸಿಡಿದುಬೀಳುವದು ತಕ್ಕದ್ದಲ್ಲ. ಹಿಂದು ಧರ್ಮದಲ್ಲಿ ನಮಗೆ ಅತ್ಯಂತ ಮಹತ್ವದ ಮತ್ತು ಗೌರವದ ಸ್ಥಾನ ವಿದೆ. ಕ್ರಿಸ್ತಿಯನ್ನರಲ್ಲಿ ಪ್ರೊಟೆಸ್ಟಂಟರಿಗಿರುವಷ್ಟು ಯೋಗ್ಯತೆಯು ಹಿಂದು ಧರ್ಮದಲ್ಲಿ ವೀರಶೈವರಿಗಿದೆ. ಆದುದರಿಂದ ವೀರಶೈವರು ಹಿಂದುಗಳೇ ಅಹುದು.

ವೀರಶೈವರು ಹಿಂದುಗಳಲ್ಲವೆನ್ನುವದಕ್ಕೆ ಕೆಲವರು ಸಣ್ಣ ಪ್ರಮಾಣ ಗಳನ್ನು ಕೊಡುತ್ತಾರೆ. ಉದಾಹರಣಾರ್ಥ "ಹಿಂದುಗಳು ತಮ್ಮ ಹೆಣ ಗಳನ್ನು ಸುಡುತ್ತಾರೆ. ಆದರೆ ವೀರಶೈವರು ಹುಗಿಯುತ್ತಾರೆ. ಅದ್ದ ರಿಂದ 'ವೀರಶೈವರು ಹಿಂದುಗಳಲ್ಲ. ಹಿಂದುಗಳಿಗೆ ಚಂಡಿಕೆ ಜನಿವಾರ ಗಳುಂಟು. ವೀರಶೈವರಿಗೆ ಇಲ್ಲ. ಆದ್ದರಿಂದ ವೀರಶೈವರು ಹಿಂದುಗ ಳಲ್ಲ ಇತ್ಯಾದಿ." ಮುಸಲ್ಮಾನ ಕ್ರಿಸ್ತರು ಹೆಣಗಳನ್ನು ಹುಗಿಯುತ್ತಾರೆ.

ನಾವೂ ಹುಗಿಯುತ್ತೇವೆ. ಅಂದಬಳಿಕ ನಾವೂ ಕ್ರಿಸ್ತಿಯನ್ ಮುಸಲ್ಮಾನರಾದಂತಾಯಿತೇ? ಇಲ್ಲ. ಹಿಂದೂಧರ್ಮದ ಪ್ರಕಾರ ಚಾತುರ್ವರ್ಣಗಳುಂಟು. ನಾಲ್ಕೂ ವರ್ಣದವರು ತಮ್ಮ ಹೆಣಗಳನ್ನು ಸುಡುವರು. ನಾಲ್ಕೂ ವರ್ಣದವರಿಗೆ ಚಂಡಿಕೆ ಜನಿವಾರಗಳುಂಟು. ಆದರೆ ವೀರಶೈವರು ಜಾತಿವಿಶಿಷ್ಟವಾದ ಚಾತುರ್ವರ್ಣಗಳನ್ನು ಬಿಸುಟಿಬಿಟ್ಟದ್ದರಿಂದ ಅವರು ಬ್ರಾಹ್ಮಣ ಧರ್ಮದ ವರ್ಣಾಶ್ರಮಕ್ಕೆ ಬಾಹಿರರಾಗಿದ್ದಾರೆ. ಇಷ್ಟರಮೇಲಿಂದ ಅವರು ಹಿಂದುಗಳಲ್ಲವೆನ್ನಲಿಕ್ಕೆ ಬರುವದಿಲ್ಲ. ಆದರೆ ಶ್ರುತ್ಯಾಗಮದ ವಿಶಾಲತತ್ವಗಳು ವೀರಶೈವಮತದ ತಳಹದಿಯಾಗಿರುವದರಿಂದ ವೀರಶೈವರು ಹಿಂದುಗಳೇ.

ಚಾತುರ್ವರ್ಣಾಶ್ರಮಗಳಿಗೊಳಪಟ್ಟ ಮತಗಳಷ್ಟೇ ಹಿಂದೂಧರ್ಮದಲ್ಲಿ ಬರುತ್ತವೆ, ಉಳಿದವುಗಳು ಬರುವದಿಲ್ಲನೆಂದು ಹೇಳುವದು ಹುಚ್ಚುತನವು. ಬೌದ್ಧ ಜೈನಮತಗಳು ಸ್ಮೃತಿಪ್ರತಿಪಾದಿತವಾದ ಚಾತುರ್ವರ್ಣಗಳ ವಿರುದ್ಧವಾಗಿ ಜನ್ಮತಾಳಿದವು. ಅದರಂತೆ ವೀರಶೈವ ಧರ್ಮವೂ ಹೊರಟಿತು. ಮ. ಗಾಂಧಿಯವರೂ ಸ್ಮೃತಿಧರ್ಮಗಳ ಅನೇಕ ಆಚರಣೆಗಳಿಗೆ ವಿರೋಧವಾಗಿದ್ದಾರೆ. ಅಂದಬಳಿಕ ಮ. ಗಾಂಧಿಯವರು ಹಿಂದುಗಳಲ್ಲವೇ? ಸ್ಮೃತಿಗಳಷ್ಟೇ ಹಿಂದೂಧರ್ಮದ ಅಸಾಧಾರಣ ಧರ್ಮವಲ್ಲ. ಶ್ರುತ್ಯಾಗಮಗಳೂ ಅದಕ್ಕೆ ತಳಹದಿಯಾಗಿವೆ. ವೀರಶೈವ ಮತವು ಸ್ಮೃತಿಗಳನ್ನು ಬಿಟ್ಟರೂ ಶ್ರುತ್ಯಾಗಮಶಾಸ್ತ್ರಗಳ ಅಸ್ತಿವಾರದ ಮೇಲೆ ನಿಂತಿರುವದರಿಂದ ವೀರಶೈವರು ಹಿಂದುಗಳಲ್ಲವೆಂದು ಹೇಳುವದು ಅನುಚಿತವು.

# ಲಿಂಗಾಯತ ಸಮಾಜ ರಚನೆ.

(ಸಾಮಾನ್ಯ, ವಿಶೇಷ, ನಿರಾಭಾರಿಗಳು.)

ಲೇಖಕರು:--- ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ.



ಶ್ರೀ ಬ್ಯಾಳಿ ಕಲ್ಯಾಣಪ್ಪನವರು, ೧೯೪೧ ನೆಯ ಫೇಬ್ರುವರಿಯ ಶಿವಾನುಭವ ಸಂಚಿಕೆಯಲ್ಲಿ ಲಿಂಗಾಯತರ ಸಮಾಜರಚನೆಯನ್ನು ಕುರಿತು ಲೇಖಬರೆದು ಮಾಡಿದ ವಿವೇಚನೆಯು ಬಹು ಸಮರ್ಪಕವೂ ಮನನೀಯವೂ ಉಂಟೆಂಬುದರಲ್ಲಿ ಅದಾವ ಸಂದೇಹವೂ ಇಲ್ಲ. ಅವರು ವೀರಶೈವದ ಮರ್ಮವರಿತವರು. ಆಬಗ್ಗೆ ಅಧಿಕಾರಯುತರಾಗಿ ಬರೆಯು ಬಲ್ಲವರು. ಅವರು ಐಕ್ಯದೃಷ್ಟಿಯುವರು. ಅವರ ಧೋರಣವು ನನ್ನಂತ ಹರಿಗೆ ಹೊಳೆಯದು ಸಹ. ಆದರೆ ಇಂತಹ ಮೇಲ್ತರಗತಿಯುವರ ಸಂಖ್ಯೆಯು ಸಮಾಜದಲ್ಲಿ ತೀರಕಡಿಮೆ. ಉಳಿದವರು ಸ್ಥೂಲದೃಷ್ಟಿಯು ವರೇ. ಅವರಲ್ಲಿ ತಪ್ಪುತಿಳುವಳಿಕೆಗೆ ಆಸ್ಪದವಾಗಬಾರದೆಂದು "ಶ್ರೀನಿಜ ಗುಣಶಿವಯೋಗಿಗಳು ಮಾಡಿದ ಸಾಮಾನ್ಯರು, ವಿಶೇಷರು, ನಿರಾಭಾರಿಗಳು ಎಂಬ ವರ್ಗೀಕರಣವನ್ನು, ಭಕ್ತವರ್ಗ ಮಾಹೇಶ್ವರವರ್ಗ ನಿರಂಜನವರ್ಗ ಎಂದು ವಿಂಗಡಿಸಬಹುದು." ಎಂದು ಶ್ರೀ ಬ್ಯಾಳಿಯುವರು ಬರೆದಿರುವದನ್ನು ತುಸು ಹೆಚ್ಚಿಗೆ ವಿವರಿಸುವದು ಅವಶ್ಯವಾಯಿತು. ಮೊದಲು ಭಕ್ತಶಬ್ದದ ನಿಜವಾದ ಅರ್ಥವನ್ನು ಸ್ಪಷ್ಟೀಕರಿಸಿ ತರುವಾಯ ವರ್ಗೀಕರಣಕ್ಕೆ ಕೈಹಾಕುವಾ.

ಲಿಂಗಾಯತ, ವೀರಶೈವ, ಶಿವಭಕ್ತ, ಲಿಂಗಾಂಗಿ, ಸಾಮಾನ್ಯ, ಲಿಂಗವಂತ ಈ ಶಬ್ದಗಳೆಲ್ಲ ಪರ್ಯಾಯ ವಾಚಕಗಳು. ಶಿವಭಕ್ತವೆಂಬುದನ್ನು ಬರೇ "ಭಕ್ತ" ಎಂತಲೂ ಉಪಯೋಗಿಸುವರು. ಜನತೆಯಲ್ಲಿ ಭವಿ, ಭಕ್ತ ಎಂಬೆರಡೇ ವರ್ಗಗಳೆಂದು ನಮ್ಮ ಮತವು ಸಾರುತ್ತದೆ. ಇಲ್ಲಿ ಭಕ್ತರೆಂದರೆ ಶಿವಭಕ್ತರೆಂದೇ ಅರ್ಥವು. ಸಮಸ್ತಲಿಂಗಾಂಗಿಗಳಿಗೆ ಸಾಮಾನ್ಯವಾಗಿ ಭಕ್ತರೆಂಬುದೊಂದು ರೀತಿ, ಮತ್ತು ಷಟ್‌ಸ್ಥಳದಲ್ಲಿ ಆರಂಭದ ಸ್ಥಳದವರಿಗೆ ಭಕ್ತರೆಂಬುದೊಂದು ರೀತಿ, ಹೀಗೆ ಎರಡು ಬಗೆಯಿಂದ ಭಕ್ತಶಬ್ದವು ನಮ್ಮಿಂದ ವ್ಯವಹರಿಸಲ್ಪಡುತ್ತದೆ. ಇದು ನಿಜ

ವಾಗಿ ಎರಡು ವಿಧನಲ್ಲೇ ಅಲ್ಲ. ಮೊದಲು ಭವಿ ಇರುವವನು ಭಕ್ತ ವರ್ಗದಲ್ಲಿ ಸೇರಿಕೊಳ್ಳುವದರಿಂದ ಆರಂಭದ ಸ್ಥಾನದವನಿಗೆ ಭಕ್ತನೆಂಬ ಹೆಸರು ಪ್ರಾಪ್ತವಾಗುವದು ಸಾಹಜಿಕವದೆ. ಇದು ವ್ಯಾಪಕಾರ್ಥದ ಭಕ್ತ ಶಬ್ದವೇ ಹೊರ್ತು, ವ್ಯವಹಾರದಲ್ಲಿ ಜನರು ತಿಳಿಯುವಂತೆ ಆಕುಂಚಿತಾರ್ಥವು ಅದಕ್ಕೆ ಎಂದೂ ಇಲ್ಲ. ಆದರೂ ಅದು ಮೊದಲನೆಯ ಮೆಟ್ಟಿಲಿನ ಹೆಸರೆಂದು, ಕೆಲವರು ಅಲಕ್ಷದಿಂದ ಅದಕ್ಕೆ ಆಕುಂಚಿತಾರ್ಥವನ್ನು ಊಹಿಸುತ್ತಾರೆ; ಇದು ಸರಿಯಲ್ಲ. ಬೇಕಾದರೆ ಆರಂಭದವರಿಗೆ ಶ್ರದ್ಧಾಭಕ್ತರೆನ್ನಬಹುದು. ಇವರು ಭಕ್ತತ್ವದಲ್ಲಿ ಶ್ರದ್ಧೆಯನ್ನಿಟ್ಟು ಅದನ್ನು ಬುದ್ಧ್ಯಾಹಿಡಿದವರು; ಹೀಗೆಂದರೆ ಮುಂದಿನವರಿಗೆ ನಿಷ್ಠಾಭಕ್ತ, ಅವಧಾನಭಕ್ತ,...ಸಮರಸಭಕ್ತ ಎಂದಾಗಲಿ; ಮಹೇಶಭಕ್ತ, ಪ್ರಸಾದಿಭಕ್ತ... ಐಕ್ಯ ಭಕ್ತ ಎಂದಾಗಲಿ ಕರೆಯಬೇಕಾದೀತು. ಈ ವಿಷಯವಾಗಿ ವಚನಕಾರರು ಸ್ಪಷ್ಟವಾಗಿ ಉಸುರಿರುವರು. ಏನೆಂದರೆ: —

"ಆಧಾರದಲ್ಲಿ ಆಚಾರಲಿಂಗವ ಧರಿಸಿ ಆಚಾರಲಿಂಗಭಕ್ತನಾದನಯ್ಯಾ ನಿಮ್ಮ ಶರಣ; ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಧರಿಸಿ, ಗುರುಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ; ಮಣಿಪೂರಕದಲ್ಲಿ ಶಿವಲಿಂಗವ ಧರಿಸಿ ಶಿವಲಿಂಗಭಕ್ತನಾದನಯ್ಯ ನಿಮ್ಮ ಶರಣ; ಅನಾಹತದಲ್ಲಿ ಜಂಗಮಲಿಂಗವ ಧರಿಸಿ, ಜಂಗಮಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ, ವಿಶುದ್ಧಿಯಲ್ಲಿ ಪ್ರಸಾದಲಿಂಗವ ಧರಿಸಿ, ಪ್ರಸಾದಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ; ಆಜ್ಞೆಯಲ್ಲಿ ಮಹಾಲಿಂಗವ ಧರಿಸಿ, ಮಹಾಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ; ಇಂತು ಷಡಾಧಾರದಲ್ಲಿ ಷಡುಲಿಂಗವ ಧರಿಸಿ, ಷಟ್‌ಸ್ಥಲ ಭಕ್ತನಾದನಯ್ಯಾ ನಿಮ್ಮ ಶರಣ, ನಿಜಗುರು ಸ್ವಂತಂತ್ರ ಸಿದ್ಧಲಿಂಗೇಶ್ವರಾ" ತಾತ್ಪರ್ಯವೇನಂದರೆ— ಲಿಂಗಪೂಜಕರೆಲ್ಲರು ಭಕ್ತರಾಗಿರುವದರಿಂದ, ಅದನ್ನು ಯಾವಾಗಲೂ ವ್ಯಾಪಕಾರ್ಥದಲ್ಲಿಯೇ ಭಾವಿಸಬೇಕು. ಕೂಸಾಗಿದ್ದರೂ ಮನುಷ್ಯನೇ! ತರುಣನಾದರೂ ಮನುಷ್ಯನೇ! ವೃದ್ಧನಾದರೂ ಮನುಷ್ಯನೇ! ಆಪ್ರಾಣಿಗೆ ಮನುಷ್ಯನೆಂಬ ಹೆಸರು ಹೇಗೆ ತಪ್ಪಲಾರದೋ ಹಾಗೆ, ಯಾವ ಸ್ಥಲದಲ್ಲಿದ್ದರೂ ವೀರಶೈವರಿಗೆ ಭಕ್ತರೆಂಬುದು ತಪ್ಪಲಾರದು. ಮೇಲಾಗಿ ಲಿಂಗಾಂಗಿಯು ಎಲ್ಲಿದ್ದರೂ ಆರು ಸ್ಥಲಗಳನ್ನೂ ಅನುಸರಿಸಲೇ ಬೇಕಾಗುವದು. ಆದುದರಿಂದ ಭಕ್ತರೆಂದರೆ ತಮಗಿಂತ ಕಡಿಮೆಯವರೆಂದು ಯಾವ ಸ್ಥಲದ

ವರೂ ಎಣಿಸಕೂಡದು. ಹಾಗೆ ಎಣಿಸಿದರೆ ಅದು ಅವರ ಅಜ್ಞಾನವನ್ನೇ ವ್ಯಕ್ತಗೊಳಿಸುತ್ತದೆ. ಶ್ರೀಸಿದ್ಧರಾಮೇಶ್ವರ ದೇವರ ಈ ವಚನವನ್ನು ಗಮನಿಸಿರಿ.

" ಲಿಂಗದ ಲೀಲೆ ಹೇಳುವಡೆನಗೆ ಅಸಾಧ್ಯವಯ್ಯ ! ಭಕ್ತನ ಹಸ್ತದಲ್ಲಿ ಜಂಗಮನಾಗಿ ನೆಲಸಿದನಯ್ಯಾ ಲಿಂಗಮೂರ್ತಿಯು. ಜಂಗಮ ಹಸ್ತದಲ್ಲಿ ಭಕ್ತನಾಗಿ ನೆಲಸಿದನಯ್ಯಾ ಲಿಂಗ ಮೂರ್ತಿಯು ಜಂಗಮ ಪೂಜಿಸಿದ ಫಲ ಸಂಪದಾದಿ ಮೋಕ್ಷ ಕೊಟ್ಟಿತ್ತು ಭಕ್ತಂಗೆ; ಭಕ್ತ ಪೂಜಿಸಿದ ಫಲ ಜ್ಞಾನ ವೈರಾಗ್ಯ ಕೊಟ್ಟಿತ್ತು ಜಂಗಮಂಗೆ, ಕಪಿಲ ಸಿದ್ಧಮಲ್ಲಿಕಾರ್ಜುನಾ" ಇದರಲ್ಲಿ ಭಕ್ತ ಜಂಗಮರು ಪರಸ್ಪರರನ್ನು ತಮ್ಮ ಲಿಂಗದಂತೆಯೇ ಭಾವಿಸಬೇಕೆಂದೂ ಅದರ ಸಮಧುರ ಫಲವನ್ನು ಪಡೆಯಬೇಕೆಂದೂ ಬೋಧಿಸಿದ್ದಾರೆ. ಇದರಿಂದ ಹೆಚ್ಚು ಕಡಿಮೆಗೆ ತಿಲಾಂಶವಾದರೂ ಅವಕಾಶವುಂಟೇ ? ಒಮ್ಮೆ ಶಿವದೀಕ್ಷೆಯಿಂದ ಭಕ್ತರಾದ ಮೇಲೆ ಅದನ್ನು ಬಿಡದೆ ಅನುಸರಿಸಿ ಮುಕ್ತರಾಗಬೇಕೇ ಹೊರತು ಪುನಃ ಭವಿಗಳಾಗಬಾರದು.

ಶ್ರೀ ನಿಜಗುಣಾರಾಧ್ಯರು ವೀರಶೈವರ ವರ್ಗೀಕರಣ ಮಾಡುವದರಲ್ಲಿ "ಅವರು ಹೆಚ್ಚು ಇವರು ಕಡಿಮೆ" ಎಂದು ಹೇಳುವ ಉದ್ದೇಶವಿಲ್ಲ. ಯಾವದೊಂದು ಬೇರೆ ಸಾಮಾಜಿಕ ಭಾರವನ್ನು ವಹಿಸದೆ, ತಮ್ಮಷ್ಟಕ್ಕೆ ತಾವಿರುವವರೇ ಸಾಮಾನ್ಯರು. ಭವಿಗಳಾಗಿದ್ದಾಗ ಚತುರ್ವರ್ಣಾದಿ ಭೇದಗಳುಳ್ಳವರಾಗಿದ್ದರೂ, ಈಗ ಅವನ್ನೆಲ್ಲ ಬಿಟ್ಟು ಎಲ್ಲರೂ ಒಂದೇ ಒಂದಾದ ಶಿವದೀಕ್ಷೆಯನ್ನು ಹೊಂದಿ ಸಮಾನತೆವಡೆದುದರಿಂದಲೇ ಸಾಮಾನ್ಯರೆನಿಸಿದರು. ಈ ಬಗ್ಗೆ ಶ್ರೀ ಚೆನ್ನಬಸವೇಶ್ವರ ದೇವರು "ದಾಸೀ ಪುತ್ರನೇ ಅಗಲಿ ವೇಶ್ಯಾ ಪುತ್ರನೇ ಆಗಲಿ. ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ "ಶಿವ" ನೆಂದೇ ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುವದೇ ಯೋಗ್ಯವು......ಕೂಡಲಚೆನ್ನಸಂಗಮದೇವಾ" ಎಂದೂ ಶ್ರೀ ಬಸವಣ್ಣನವರು "......ಅಂಗ, ಲಿಂಗ ಸಹಿತವಾಗಿ ಮನೆಗೆ ಬಂದರೆ, ಸಂಗಾ ನೀನೆಂಬೆ......."ಎಂದೂ ಶಿವದೀಕ್ಷಾಯುಕ್ತರನ್ನು ಹೊಗಳಿದ್ದಾರೆ. ಇರಲಿ. ಈ ಭಕ್ತರಲ್ಲಿ ಕೆಲವರು ಪ್ರಾಣಲಿಂಗಾನು ಸಂಧಾನಿಗಳು, ಚಟುವಟಿಕೆಯು ಕುತೂಹಲವುಳ್ಳವರಾಗಿ ಸಮಾಜ ಸೇವೆಯ

ಹೆಚ್ಚಿನ ಭಾರವನ್ನು ಧರಿಸಲಿಕ್ಕೆ ಸಿದ್ಧರಾದುದರಿಂದ, ಅವರನ್ನು ಆ ಕರ್ತವ್ಯಕ್ಕೆ ಪಟ್ಟಗಟ್ಟಿ, ಅವರಿಗೆ ಆಚಾರ್ಯರೂ ಪಟ್ಟಾಧಿಕಾರಿಗಳೂ ಚರಮೂರ್ತಿಗಳೂ ಎಂಬ ಹೆಸರಿಟ್ಟು, ಗುರುವರ್ಗದವರೆಂದರು. ಇವರೇ ವಿಶೇಷರು ! ಇವರು ತಾವು ವಹಿಸಿದ ಸಮಾಜ ಸೇವೆಯ ಹೊಣೆಯೇ ಇವರನ್ನು ವಿಶೇಷರನ್ನಾಗಿ ಮಾಡಿತು. ಇವರು ಲೌಕಿಕ ರೀತಿಯಲ್ಲಿ ಸಮಾಜ ಪ್ರಗತಿಯ ಹೊಣೆಯನ್ನು ಹೊತ್ತಂತೆಯೇ, ನಿರಾಭಾರಿಗಳು ಪಾರಮಾರ್ಥಿಕ ರೀತಿಯಲ್ಲಿ (ಷಟ್‌ಸ್ಥಲ ಜ್ಞಾನಮಾರ್ಗದಲ್ಲಿ) ತಾವು ಸ್ವತಃ ನಿರತರಾಗಿದ್ದು, ಸಮಾಜವನ್ನು ಹಾಗೆ ಸಿದ್ಧಪಡಿಸುವ ಹೊಣೆಯನ್ನು ಹೊತ್ತು, ಜನತೆಯಿಂದ ನಿರಂಜನಪಟ್ಟ (ಶೂನ್ಯಸಿಂಹಾಸನ) ದ ಅಧಿಕಾರಿಗಳೆನಿಸಿಕೊಂಡರು.

ಸೇವೆಯು ಸುಸೂತ್ರ ಸಾಗಬೇಕಾದರೆ ತಮಗೆ ಪ್ರಪಂಚದ ಜಂಜಡ ವಿರಬಾರದೆಂದು, ಗುರುವರ್ಗದವರು ಸಪತ್ನೀಕರಾಗದೆ ಹೆಣ್ಣನ್ನು ತೊರೆದು ಬ್ರಹ್ಮಚಾರಿಗಳಾಗಿ ನಿಂತರು. ಆದರೂ ಹೊನ್ನು ಮಣ್ಣುಗಳನ್ನು ಹಿಡಿದರು. ಇದಲ್ಲದೆ ಸೇವೆ ಸಾಕಾದಾಗ ಆ ಕರ್ತವ್ಯವನ್ನು ಬಿಟ್ಟು ಹೆಂಡತಿಯನ್ನು ಮಾಡಿಕೊಳ್ಳಲಿಕ್ಕೆ ಸಹ ಇವರಿಗೆ ಅನುಕೂಲವಿರುವದು. ಆದರೆ ನಿರಾಭಾರಿಗಳು ಈ ಮೂರರ ಭಾರವನ್ನು ನೀಗಿ ಸಂಪೂರ್ಣ ಸಂಸಾರವನ್ನು ತ್ಯಾಗಮಾಡಿ, ಆಜನ್ಮ ಸಮಾಜ ಸೇವಾ ಬದ್ಧರಾದವರು. ಇವರು ಸ್ವತಃ ಆಕಾರ ನಿರಾಕಾರಂಗಳೆರಡಕ್ಕೂ ಅತೀತವಾದ ಭಾವಲಿಂಗವನ್ನ ಪೂಜಿಸುತ್ತ, ಗುರುವರ್ಗದವರೆನ್ನಿಸುವ ವಿಶೇಷರನ್ನು ಪ್ರಾಣಲಿಂಗ ಪೂಜೆಯಲ್ಲಿ ಪ್ರೆರಿಸುತ್ತ, ಅವರ ದ್ವಾರವಾಗಿ ಸಾಮಾನ್ಯರ ಇಷ್ಟಪೂಜೆಯು ಸರಿಯಾಗಿ ನಡೆಯುವಂತೆ ಪ್ರೋತ್ಸಾಹಿಸುತ್ತ ತಮ್ಮ ಆಯುಷ್ಯವನ್ನು ಸದಾ ಲಿಂಗಾನಂದದಲ್ಲಿ ಕಳೆಯತಕ್ಕವರು. ಪಂಚಾಚಾರ್ಯರಾದರೋ ತಾವು ಷಟ್‌ಸ್ಥಲಮಾರ್ಗದಲ್ಲಿ ಯೋಗ್ಯ ಪ್ರಗತಿಯನ್ನು ಹೊಂದುತ್ತ ಪಟ್ಟಾಧಿಕಾರಿಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಕರ್ತವ್ಯ ಮಗ್ನರಾಗಿರುವರಂತೆ ಮೇಲ್ವಿಚಾರಣೆಯನ್ನು ದಕ್ಷತೆಯಿಂದ ಜರಗಿಸುತ್ತ, ತಮ್ಮ ಜನ್ಮ ಸಾಫಲ್ಯವನ್ನು ಪಡೆಯತಕ್ಕವರು. ವಿಶೇಷ ನಿರಾಭಾರಿಗಳಾದವರೆಲ್ಲರೂ ತಮ್ಮ ಗುಣಕರ್ಮಗಳಲ್ಲಿ ತೇಜಸ್ವಿಗಳಾಗಿದ್ದಾರೆ. ಅವರ ವರ್ಚಸ್ಸು ಸಮಾಜದಲ್ಲಿ ಬೆಳೆದು, ಎಲ್ಲ ಕಡೆಗೆ ಅವರ ಅಧಿಕಾರವು ಪ್ರಬಲವಾಗಿ ಸಾಗುವದು. ಈಗ ಆ ತೇಜಸ್ಸನ್ನು ಕಳೆದು ಕೊಂಡದ್ದರಿಂದಲೇ ಹತವೀರ್ಯ

ರಾಗಿರುವರು. ಈ ವಿಧದ ಲೌಕಿಕ ಸ್ವಾರ್ಥತ್ಯಾಗದ ಮೂಲಕವೇ ಸಮಾಜವು ಅವರ ಯೋಗಕ್ಷೇಮವನ್ನು ಸಂಪೂರ್ಣವಾಗಿ ವಹಿಸಿ, ಇಷ್ಟು ಗೌರವವನ್ನಿತ್ತಿರುವದು! ಇದೇ ಅವರು ಪಡೆಯುವ ಲೌಕಿಕ ಅಪ್ರತಿಮ ಸಂಪಾದನೆ! ಸೇವೆಯಿಂದ ಸಮಾಜದಲ್ಲಿ ಕೀಳುತನ ಬರದೆ, ತಿರುಗಿ ಆತ್ಮೋದ್ಧಾರದ ದೃಷ್ಟಿಯಿಂದ ಮೇಲ್ಮೆಯೇ ಪ್ರಾಪ್ತವಾಗುವ ದೆಂದು ಬಗೆದು ಸಾಮಾನ್ಯರೊಳಗಿಂದ ಬಲ್ಲಿದರಾದ ಈ ಗುರು ನಿರಾ ಭಾರಿವರ್ಗಗಳು ಸ್ವಸಂತೋಷದಿಂದಲೇ ಮುಂದೆ ಬಂದವು. ಭವಿಗಳಲ್ಲಿ ಸೇವೆಯು ಕೀಳಾದುದೆಂಬ ಕಲ್ಪನೆಯುಂಟು. ಆದರೆ ಭಕ್ತರಲ್ಲಿ ಕಾಯ ಕವೇ (ಒಂದಿಲ್ಲೊಂದು ರೀತಿಯ ಸಮಾಜಸೇವೆಯು) ಕೈಲಾಸವೆಂದು ಪರಿಗಣಿಸಲ್ಪಟ್ಟುದರಿಂದ ಸೇವಾಸಕ್ತರು ಪೂಜ್ಯರೇ ಆದರು. ಸ್ವಾರ್ಥ ತ್ಯಾಗಕ್ಕೋಸುಗ ಸಮಾಜವು ತಮ್ಮ ಪೂಜೆಯನ್ನು ಮಾಡುವದಾದರೂ, ತಾವೇನೂ ಶ್ರೇಷ್ಠರೆಂದು ಯಾರೂ ತಿಳಿಯಕೂಡದು. ಹಾಗೆ ತಿಳಿದರೆ ಅಹಂಕಾರವು ಸೋಂಕಿ, ಕೂಡಲೆ ಅವರು ಭಕ್ತತ್ವಕ್ಕೆ ಎರವಾಗಿ ಭವಿ ಗಳಾಗುವರು ಇದು ಭಕ್ತರಿಗೆ ಸಹಸಾ ಯೋಗ್ಯವಲ್ಲ; ಶ್ರೀಬಸವ ದೇವನಂತೆ ಯಾವಾಗಲೂ ಬಲು ಎಚ್ಚರದಿಂದಿರಬೇಕು.

ಇನ್ನು ಈ ಒರೆಗಲ್ಲಿಗೆ ಒರೆದು ನೋಡಿದರೆ ಶ್ರೀಮಾನ್ ಬ್ಯಾಳಿಯವರ ವರ್ಗೀಕರಣವು ಯಾವ ಮಟ್ಟಿಗೆ ಬರುವದೆಂಬದನ್ನು ನೋಡಿರಿ. ಅವರು ಸಾಮಾನ್ಯರನ್ನು ಭಕ್ತರೆಂದೂ, ವಿಶೇಷರನ್ನು ಮಹೇಶ್ವರರೆಂದೂ ನಿರಾ ಭಾರಿಗಳನ್ನು ನಿರಂಜನರೆಂದೂ ವಿಂಗಡಿಸಿರುವರು. ಶ್ರೀಸಿದ್ಧರಾಮೇ ಶ್ವರರ ಈ ವಚನದ ಕಡೆಗೆ ತುಸು ಲಕ್ಷವೀಯಿರಿ.—"ಭಕ್ತಂಗೆ ಜಂಗ ಮಂಗೆ ರೂಪದಲ್ಲಿ ಭೇದವೇ? ಅಲ್ಲಲ್ಲ! ಭಕ್ತನಾದಡೆ ಮೂರಕ್ಕೆ ಒಳಗು, ಜಂಗಮನಾದಡೆ ಮೂರಕ್ಕೆ ಹೊರಗು. ಒಳಗಾದವರ ಪಾದೋದಕ ಸಲ್ಲದು. ತಕ್ಕೊಂಡವರಿಗೆ ನರಕ ತಪ್ಪದು! ಕೊಟ್ಟವರಿಗೆ ಭವ ಹಿಂಗದು ಕಪಿಲಸಿದ್ಧಮಲ್ಲಿಕಾರ್ಜುನ" ಇದರಲ್ಲಿ ಮೂರಕ್ಕೆ (ಹೊನ್ನು ಹೆಣ್ಣು ಮಣ್ಣು ಗಳಿಗೆ) ಒಳಗಾದವರೆಲ್ಲ ಅಂದರೆ ಸಂಸಾರಿಗಳೆಲ್ಲ ಭಕ್ತರೆಂದೇ ಹೇಳ ಹೇಳಲಾಗಿದೆ. ಅರ್ಥಾತ್ ಅಯ್ಯನವರೂ * ಗಣಂಗಳೂ ಇದರಲ್ಲೇ

---

* ಟೀಪು:— ನಿಜವಾದ ಅಯ್ಯಗಳಾರೆಂಬುದನ್ನು ಈ ವಚನದಲ್ಲಿ ನೋಡಿರಿ. "ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ ನಿಮ್ಮ ಮುಟ್ಟಲರಿಯದ ವರ ಕಡೆಗೆ, ಅಯ್ಯ ಎಂತೆಂಬೆನವರ? ಅವಭಾವದಲ್ಲಿ ಅವಜ್ಞಾನದಲ್ಲಿ ಅವ

(ಮುಂದಿನ ಪುಟ ನೋಡಿರಿ.)

ಬರುವರು. ಇವರು ವಿಶೇಷರೆನ್ನಿಸಿಕೊಳ್ಳಬೇಕಾದರೆ ಮೇಲೆ ಹೇಳಿದಂತೆ ಬಾಹ್ಯಾಂತರಗಳಲ್ಲಿ ವಿಶೇಷವನ್ನು ಧರಿಸಲೇಬೇಕು. ಅಂತಹ ಗುಣ ಕ್ರಿಯೆಗಳು ಬ್ರಹ್ಮಚಾರಿಗಳಾದ ಗುರುವರ್ಗದಲ್ಲೇ ತೋರಬಹುದು. ಅವರ ಹೊರತು ಬೇರೆಯವರು ವಿಶೇಷರಾಗಲಾರರು. ಶ್ರೀಮಾನ್ ಬ್ಯಾಳಿಯವರ ಈ ಅಭಿಪ್ರಾಯವು ಷಟ್‌ಸ್ಥಲದ ಮಾಹೇಶ್ವರತ್ವವನ್ನು ಅತಿಕ್ರಮಿಸುವದು. ಮಾಹೇಶ್ವರರು (ಅಯ್ಯನವರೂ ಗಣಂಗಳೂ) ಗುರು ವರ್ಗದವರ ಸಮಾಜಸೇವೆಗೆ ಬೇರೆ ಬೇರೆ ರೀತಿಯಿಂದ ಸಹಾಯ ಮಾಡು ವವರಿಷ್ಟೇ! ಅವನ್ನು ಶ್ರೀಮಾನ್ನರು ವಿಶದವಾಗಿ ಹೇಳಿದ್ದಾರೆ. ಅಷ್ಟ ರಿಂದಲೇ ಅವರು ವಿಶೇಷತ್ವಕ್ಕೆ ಬಾಧ್ಯರಾಗರು. ಇನ್ನು ಹಿರೇಮಠಗಳು ಅದು ಹೇಗೆ ಉತ್ಪನ್ನವಾದವೆಂಬದನ್ನು ನೋಡುವಾ.

## ಹಿರೇಮಠ.

ಒಂದು ಪಟ್ಟದ ಗೋತ್ರಸೂತ್ರಗಳಿಗೆ ಒಳಗಾದ ಶಿಷ್ಯಗಣವೆಲ್ಲವೂ ಮೊದಮೊದಲು ಅವರ ಸನ್ನಿಧಿಯಲ್ಲೇ ಒತ್ತಟ್ಟಿಗೆ ಇರುತ್ತಿದ್ದಿತು. ಮುಂದೆ ಬರಬರುತ್ತ ಶರೀರಸಂಬಂಧ, ಹೊಟ್ಟೆಹೊರಕೊಂಬುವದು, ಹೊಲಮನೆ ಮೊದಲಾದ ಸ್ಥಾವರ ಆಸ್ತಿಗಳು, ಇವೇ ಮುಂತಾದವು ಗಳ ಸೌಕರ್ಯ ಮೂಲಕವಾಗಿ ಅವರು ಸ್ಥಾನಾಂತರವನ್ನು ವಹಿಸಿ, ಸುತ್ತುಮುತ್ತು ಮೊಟ್ಟೆಯೊಳಗಿನ ನೆಲ್ಲೀಕಾಯಿ ಚದರಿದಂತೆ ದಿಕ್ಪಾಪಾ ಲಾದರು. ಅನೇಕರು ಬಹು ದೂರದೂರ ಸಹ ವಾಸಿಸಹತ್ತಿದರು. ಆಗ ತಮ್ಮ ತಮ್ಮ ಗುರುಗಳಿಂದಲೇ ಅವರವರ ಸಂಸ್ಕಾರಗಳು ಸಾಗು ವದು ಅಸಂಭವವಾಗಿ ತೊಂದರೆಗೀಡಾದರು. ಈ ಅನವಸ್ಥೆಯನ್ನು ದೂರ ಮಾಡಿ, ಸುವ್ಯವಸ್ಥೆಯನ್ನು ಸ್ಥಾಪಿಸುವ ಅನಿವಾರ್ಯಪ್ರಸಂಗವೇ ಒದ ಗಿತು. ಇದು ಎಲ್ಲ ಗುರುಗಳಿಗೂ ಶಿಷ್ಯರಿಗೂ ಸಾಮಾನ್ಯವಾದ ಆಪತ್ತಿ ಯಾಗಿ ಪರಿಣಮಿಸಿತು. ಆಗ ಎಲ್ಲ ಪಟ್ಟಾಧಿಕಾರಿಗಳು ಆಲೋಚಿಸಿ,

---

ಮುಖದಲ್ಲಿ ಅರಿವರವರದಾರಯ್ಯಾ! ಏನೆಂಬೆ? ನಿಮ್ಮಲ್ಲಿ ಸಮ್ಯಕ್ಜ್ಞಾನ ಸತ್ಯ ಶರಣರ ಕಂಡು, ಕೂಡಲಸಂಗಮದೇವ ಅವರನು ಅಯ್ಯ ಎಂಬೆನು » ಈ ವಚನವು ಷಟ್‌ಸ್ಥಲದೊಳಗಿನ "ಶರಣನ ಮಹೇಶ್ವರ » ವಿಭಾಗದಲ್ಲಿ ಬಂದದೆ. ಆದ್ದುದರಿಂದ ಶರಣಸ್ಥಲಕ್ಕೆ ಸಲ್ಲದೆ, ಅಯ್ಯ ಎಂಬ ಪದವಿಗೆ ಅವಸರವಿಲ್ಲೆಂದು ವ್ಯಕ್ತವಾಗುತ್ತದೆ.

ಒಂದು ಹಂಚಿಕೆಯನ್ನು ತೆಗೆದರು. ಏನೆಂದರೆ:— ಪ್ರತಿಯೊಂದು ಊರ ಲ್ಲಿರುವ ಎಲ್ಲ ಶಿವಭಕ್ತರ ಮನೆಗಳಲ್ಲಿ ಅಲ್ಲಿರುವ ಪಟ್ಟದದೇವರೇ ಎಲ್ಲ ಬಗೆಯ ಸಂಸ್ಕಾರಗಳನ್ನು ಹಕ್ಕಿನಿಂದ ನೆರವೇರಿಸಬೇಕು. ಗುರುವಿನ ಹಕ್ಕನ್ನು ತಾವೇ ತಕ್ಕೊಳ್ಳಬೇಕು. ಒಂದು ವೇಳೆ ಅವರ ಸ್ವಂತ ಗುರುಗಳು ಸಮಕ್ಷಮ ಇದ್ದರೆ ಗುರುದೇವರೂ ಸ್ಥಾನಿಕ ಪಟ್ಟದದೇವರೂ ಆಲೋಚಿಸಿ, ಬಂದ ಹಕ್ಕನ್ನು ತಮ್ಮತಮ್ಮೊಳಗೆ ಹಂಚಿಕೊಳ್ಳಬೇಕು. ಈ ವ್ಯವಸ್ಥೆಯಿಂದ ಎಲ್ಲರಿಗೂ ಅನುಕೂಲವಾಯಿತು. ಹೆಜ್ಜೆಜ್ಜೆಗೆ ಗುರು ಗಳು ಶಿಷ್ಯರ ಕಡೆಗೆ ಬರುವ ಗೋಜು ಉಳಿಯಲಿಲ್ಲ. ಈ ಮೇರೆಗೆ ಊರಲ್ಲೆಲ್ಲ ಗುರುಕಾರ್ಯವನ್ನು ನಡಿಸುವ ಒಂದು ಅಧಿಕೃತವಾದ ಮಠವು ನಿರ್ಮಾಣವಾಯಿತು. ಅದೇ ಹಿರೇಮಠವು! ಈ ವಿವರಣೆಯಿಂದ ಹಿರೇ ಮಠವೆಂದರೆ ಅದೇನು ಬೇರೆ ಮಠವಲ್ಲ. ಪಟ್ಟದದೇವರ ಮಠವೇ ಅದು ಎಂಬದು ಸುಲಭವಾಗಿ ಲಕ್ಷ್ಯದಲ್ಲಿ ಬರಬಹುದು.

ಇಲ್ಲಿ ಇನ್ನೊಂದು ಮಾತಿನ ಬಗ್ಗೆ ಹೇಳುವದು ಅತ್ಯಂತ ಅವ ಶ್ಯವದೆ. ಪಟ್ಟದದೇವರ ಮಠವೇ ಹಿರೇಮಠವೆಂದು ಮ್ಲೇಲೆ ಹೇಳಲಾ ಗಿದೆಯಷ್ಟೇ. ಆಪ್ರಕಾರವೇ ಬಹುಶಃ ಈಗಲೂ ಎಲ್ಲಕಡೆ ಉಂಟು. ಪಟ್ಟವಿಲ್ಲದ ಹಿರೇಮಠಗಳು ಇಲ್ಲೇಇಲ್ಲ. ಆ ಮಠದಲ್ಲಿ ಕಾರಣಾಂತರ ದಿಂದ ಸೇರಿಕೊಂಡ ಮಹೇಶ್ವರರು ಪಟ್ಟಾಧಿಕಾರಿಗಳಿಲ್ಲದಾಗ (ಲಿಂಗೈ ಕ್ಯರಾಗಿ ಇನ್ನೂ ಹೊಸ ಅಧಿಕಾರಿಗಳಿಲ್ಲದಾಗ, ಇಲ್ಲವೆ ಪಟ್ಟಾಧಿಕಾರಿಯು ಅಲ್ಪವಯಸ್ಕನಿರುವಾಗ ಇತ್ಯಾದಿ) ತಾವೇ ಆ ಮಠದ ಶಿಷ್ಯರ ಮನೆ ಗಳಿಗೆ ಹೋಗಿ, ಲಿಂಗಪೂಜಾದಿಗಳನ್ನು ನಡಿಸಿ, ತಾವೂ ಸಹ ಗುರು ಗಳೆಂಬಂತೆಯೇ, ಆ ಶಿಷ್ಯರಿಗೆ ಭಾಸವಾಗುವಂತೆ ಮಾಡಿದರು; ಹಾಗೂ ತಾವಾದರೂ ಗುರುಗಳೆಂಬ ಭ್ರಮೆಗೆ ಒಳಗಾದರು. ಹೀಗೆ ಅನೇಕ ಕಡೆ ಬಹುಕಾಲದ ವರೆಗೆ ನಡೆದುಬಂದದ್ದುಂಟು. ಇದಕ್ಕೆಲ್ಲ ಭಕ್ತರ ಔದಾಸೀನ್ಯವೇ ಕಾರಣವು. ಇಂತಹ (ಪಟ್ಟವನ್ನು ಮುಕ್ತಾಯಗೊಳಿಸಿದ) ಮಠಗಳು ಸಮಾಜದಲ್ಲಿ ತಲೆ ಎತ್ತಿದುದರಿಂದಲೇ "ಹಿರೇಮಠಗಳೆಂದರೆ ಪಟ್ಟದದೇವರ ಮಠಗಳಿಂದ ಭಿನ್ನವಾದವುಗಳೆ"ಂಬ ಭಾವನೆಗೆ ಆಸ್ಪದ ವಾಯಿತು. ಆದರೆ ಅದು ತಪ್ಪು. ಆಕಾರಣ ಈಗ ಬರೇ ಸಂಸಾರಿಗ ಳಿರುವ ಹಿರೇಮಠಗಳು ವಿಶೇಷ ವರ್ಗದಲ್ಲಿ ಬರಲಾರವು! ಅಲ್ಲಿರುವ ಅಯ್ಯನವರು ಗುರುಗಳಲ್ಲ. ತಮ್ಮ ಸಂಸಾರಕ್ಕೆ ತೊಂದರೆಯುಂಟಾದಾಗ

ಆ ಮಠದ ಶಿಷ್ಯರ ನೆನಪಾಗಿ ಸುಮ್ಮನೆ ಎಡತಾಗುವ ಸಾಧಕರು. ನಿಜವಾಗಿ ಅವರು ಗುರುತ್ವಕ್ಕೆ ಅಪಾತ್ರರು. ಅಯ್ಯತನವನ್ನೂ ಶಿವದೀಕ್ಷೆಯನ್ನೂ ಮಾಡಲಿಕ್ಕೆ ಪಟ್ಟಚರಮೂರ್ತಿಗಳೇ ಬೇಕು. ಹಿರೇಮಠದವರಾದರೂ ಸಾಮಾನ್ಯ ಮಹೇಶ್ವರರು ದೀಕ್ಷೆಗೆ ಬರುವದಿಲ್ಲ. ಯಾಕಂದರೆ ಅವರು ನಿಜವಾಗಿ ಗುರುಗಳೇ ಅಲ್ಲ. ಈ ಸಾಮಾನ್ಯ ಮಹೇಶ್ವರರಿಗೂ ಕೂಡ ಪಟ್ಟದೇವರೇ ಗುರುಗಳಾಗಿರುವರು. ಇಷ್ಟಲಿಂಗಾರಾಧನೆ ಮಾಡುವವರೂ, ಸಂಸಾರಿಗಳೂ, ಪಟ್ಟದದೇವರೇ ತಮ್ಮ ಗುರುಗಳೆಂದು ಹೇಳುವವರು ಇವರೆಲ್ಲರೂ ಭಕ್ತರೇ, ಸಾಮಾನ್ಯರೇ ಸರಿ. ವಿಶೇಷರೆಂದೂ ಆಗಲಾರರು! ಆದರೂ ಪಟ್ಟದದೇವರ ಸಮ್ಮತಿಯಿಂದ ಆ ಮಠದಲ್ಲಿರುವ ಸಂಸಾರಿಗಳು (ಅಯ್ಯನವರು) ಊರಲ್ಲಿರುವ ಲಿಂಗಾಯತರಿಗೆ ಶಿವದೀಕ್ಷೆಯನ್ನುಳಿದು ಬೇರೆ ಸಂಸ್ಕಾರಗಳನ್ನು ಮಾಡಬಹುದು.

ಈಗ ಗುರುವರ್ಗದವರ ವಿನಾ ಮಾಹೇಶ್ವರರೂ ಗಣಂಗಳೂ ಹಿರೇಮಠದವರೂ ವಿಶೇಷರಲ್ಲೆಂದು ಹೇಳಿದುದಾಯಿತು. ಇದೇ ಮೇರೆಗೆ ನಿರಂಜನ ವರ್ಗದಲ್ಲಿ ಶರಣರನ್ನೂ ಬಸವಾದಿ ಪ್ರಮಥರನ್ನೂ ಉದಹರಿಸಿದ್ದಾರೆ. ಇವರೂ ಶಿವಯೋಗಿಗಳೂ ಷಟ್‌ಸ್ಥಲದ ಐದನೆಯ ಮೆಟ್ಟಲಿನವರೆನ್ನಲಿಕ್ಕೆ ಅದಾವ ಆತಂಕವೂ ಇಲ್ಲ. ಆದರೆ ಇವರೂ ಸಂಸಾರಿಗಳಾಗಿರುವದರಿಂದ ನಿರಂಜನರೆನ್ನುವದು, ಸಾಮಾಜಿಕ ದೃಷ್ಟಿಯಿಂದ ಉಚಿತ ತೋರುವದಿಲ್ಲ. ಹಾಗೆ ಇವರನ್ನು ಸಂಬೋಧಿಸಿದ್ದು ಕಂಡು ಬಂದಿಲ್ಲ. ಆದುದರಿಂದ ಶರಣ ಶಿವಯೋಗಿಗಳನ್ನು ಅವರ ಗುಣಕರ್ಮಗಳಿಗನುಸರಿಸಿ, ತಾತ್ವಿಕದೃಷ್ಟಿಯಿಂದ ಉಚ್ಚವರ್ಗದಲ್ಲಿಯೂ, ಸಾಮಾಜಿಕ ದೃಷ್ಟಿಯಿಂದ ಭಕ್ತವರ್ಗದಲ್ಲಿಯೂ ಎಣಿಸಬಹುದು. ಭಕ್ತನಭಕ್ತ, ಭಕ್ತನಮಹೇಶ...ಭಕ್ತನ ಐಕ್ಯ, ಎಂದು ಮೊದಲೇ ಕಲ್ಪಿಸಿ ವಿಭಾಗಿಸಲ್ಪಟ್ಟದರಲ್ಲಿ ಅನುರೂಪವಾದ ಸ್ಥಳದಲ್ಲಿ ಸೇರಿಸಬಹುದು. ಎಷ್ಟೇ ಉದಾತ್ತ ಸ್ಥಾನವನ್ನು ಹೊಂದಿದರೂ ಸಹ ಶ್ರೀಬಸವೇಶ್ವರನು ತನ್ನನ್ನು ಭಕ್ತನೆಂದೇ ಭಾವಿಸಿದ್ದನೆಂಬದನ್ನು ನಾವು ಮರೆಯಲಾಗದು. ಅಹಂಕಾರಕ್ಕಾಸ್ಪದವಾಗುವ ಗುರುಜಂಗಮ ಪದವಿಗಳು ಅವನಿಗೆ ಬಲು ಬೇಸರಾಗಿದ್ದವು. ಭೃತ್ಯತ್ವವೇ (ಕಿರಿಯತನವೇ) ಅವನಿಗೆ ಪ್ರಿಯವಾಗಿತ್ತು. ಭಕ್ತನೆನಿಸಿಕೊಂಡರೇನು ಕಡಿಮೆತನ ಬರುವದೆಂದು ಯಾರೂ ಸಹಸಾ ನೆನೆಯ ಕೂಡದು.

## ಉಪಸಂಹಾರ

ಸಂಸಾರದಲ್ಲಿ ಹ್ಯೇಯ ಉತ್ಪನ್ನವಾಗಿ ನಿವೃತ್ತಿವಿಡಿದು, ಗುರು ಕಾರುಣ್ಯ ಪಡೆದು ಶಿವದೀಕ್ಷೆ ಹೊಂದಿದವನೇ ಭಕ್ತನೆನಿಸುವನು. ಭಕ್ತನು ಸಂಸಾರಿಯಾದರೂ ಅದರಲ್ಲಿ ಕ್ರಮವಾಗಿ ಅಲಿಪ್ತತೆಯನ್ನು ಪಡೆಯಲೇ ಬೇಕು. ಸದಾ ಸಂಸಾರಲಿಪ್ತನಾಗಿ ವಿಷಯೋಪ ಭೋಗಿಯಾಗಿ ಜೀವಿಸುವವನೇ ಭವಿ. ಈ ಭವಿತನಕ್ಕೆ ಬೇಸತ್ತು ಅದನ್ನು ಹಳಿದು ಶಿವ ಮಾರ್ಗದಲ್ಲಿ ನಡೆಯುವ ನಿಶ್ಚಯ ಮಾಡಿದವರೇ ಲಿಂಗಾಂಗಿಗಳು. ಅಗ್ಗೇ ಇವರು ಬ್ರಹ್ಮ ಸೃಷ್ಟಿಯಿಂದ ಪಾರಾಗಿ ಶಿವ ಸೃಷ್ಟಿಯಲ್ಲಿ ಕಾಲಿಟ್ಟಂತಾಗುವದು. ಬಳಿಕ ಅದು ಹೇಗೆ ಪ್ರಗತಿಯನ್ನು ಹೊಂದುತ್ತ ಮುಂದರಿಯಬೇಕೆಂಬುದನ್ನೇ ಷಟ್‍ಸ್ಥಲಗಳು ಅರುಹುತ್ತವೆ. ಭಕ್ತನು ಮೊದಲು ತ್ಯಾಗಾಂಗಿಯೂ (ತನುಗುಣವಳಿದವನೂ) ತರುವಾಯ ಭೋಗಾಂಗಿಯೂ (ಲಿಂಗದೊಡನೆ ಸುಖ ಭೋಗಿಸುವವನೂ) ಕೊನೆಗೆ ಯೋಗಾಂಗಿಯೂ (ನಿಜದಲ್ಲಿ ಬೆರೆಯುವವನೂ) ಆಗಲೇಬೇಕು. ಈ ಪ್ರತಿಯೊಂದರಲ್ಲಿ ಎರಡೆರಡಾಗಿ ಭಕ್ತ ಮಹೇಶ, ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರೆಂದು ಷಡಂಗಿ (ಷಡಾಂಗಿ) ತ್ವವನ್ನು ಧರಿಸಲೇಬೇಕು. ಇವನಿಗೆ ಲಿಂಗಾಯತ, ವೀರಶೈವ, ಲಿಂಗಾಂಗಿ, ಭಕ್ತ (ಶಿವಭಕ್ತ) ಲಿಂಗವಂತ, ಸಾಮಾನ್ಯ (ವಿಷಮತೆಯನ್ನು ಬಿಟ್ಟು ಶಿವದೀಕ್ಷೆಯಿಂದ ಸಮಾನತೆ ವಿಡಿದವನು) ಎಂದು ಯಾವ ಹೆಸರಿನಿಂದ ಕರೆದರೂ ಸರಿಯೇ! ಅವನು ಕೊನೆಗೆ ಮುಕ್ತನೇ ಆಗುವನು. ಕೊನೆಗೆ ಅಂದರೆ ದೇಹ ಬಿಟ್ಟ ಮೇಲಲ್ಲಿ ಜೀವಿರುವಾಗಲೇ ಅಂತ್ಯಭಾಗದಲ್ಲಿ ಜೀವನ್ಮುಕ್ತನೆನಿಸುವನು. ಅಂತೇ "ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರೀ" ಎಂದು ಶಿವನು ಜಗನ್ಮಾತೆಗೆ ಉಸುರಿದ್ದಾನೆ.

ಭೋಗಾಂಗಿ ಸ್ಥಲದ ಭಕ್ತನು ಪ್ರಾಣಲಿಂಗಾರ್ಚಕನಾಗಿ, ಅಕುಂಚಿತ ದೃಷ್ಟಿಯುಳಿದು "ಆತ್ಮವತ್ ಸರ್ವಭೂತಾನಿ" ಎಂಬ ಅರಿವು ಹುಟ್ಟಿ, ಸಮಾಜ ಸುಧಾರಣೆಯ ಕರ್ತವ್ಯವನ್ನು ತನ್ನ ಸ್ವಂತ ಒಲವಿನಿಂದ ಹಿಡಿದಾಗಲೇ ಅವನು ವಿಶೇಷ ಭಕ್ತನಾಗುವನು. ವಿಶೇಷವೆಂದರೆ ಸಮಾಜ ಸೇವೆಯೇ—ಉದ್ಧಾರ ಕಾರ್ಯವೇ— ಹೊರತು ಮತ್ತೊಂದಲ್ಲ. ತನಗೆ ಕೆಲವು ಕುಟುಂಬಗಳನ್ನು ನೇಮಿಸಿಕೊಂಡು, ಅವನ್ನು ಸರಿಯಾಗಿ

ತ್ಯಾಗಾಂಗ ಮಾರ್ಗದಲ್ಲಿ ನಡೆಯುವಂತೆ ತಿದ್ದುವ ಹೊಣೆಗಾರಿಕೆಯನ್ನು ಪ್ರತಿಯೊಬ್ಬ ಪಟ್ಟಾಧಿಕಾರಿಯು ಹೊತ್ತಿರುವನು. ಅವರೇ ಅವನ ಶಿಷ್ಯರು. ಅವರ ಪೂರ್ವಜರಿಗೆ ಆ ಪಟ್ಟದ ಮೊದಲಿನ ಅಧಿಕಾರಿಗಳೇ ಶಿವದೀಕ್ಷೆಯನ್ನು ಅನುಗ್ರಹಿಸಿದವರು. ಪಟ್ಟಾಧಿಕಾರಿಯ ಕ್ಷೇತ್ರವು ದೊಡ್ಡದಿದ್ದರೆ ಅವನು ತನ್ನ ಸಹಾಯಕ್ಕೆಂದು ಒಬ್ಬ ಚರಮೂರ್ತಿಯನ್ನು ಸ್ವೀಕರಿಸುವನು. ಇವರ ಮೇಲಾಧಿಕಾರಿಗಳೇ ಆಚಾರ್ಯರು. ಅವರು ಐವರೇ ಇರುವದರಿಂದ ಪಂಚಾಚಾರ್ಯರೆಂದು ಪ್ರಸಿದ್ಧಿಪಡೆದಿರುವರು. ಇವರ ಕ್ಷೇತ್ರವು ಹೆಚ್ಚು ವಿಸ್ತಾರವಾದುದು. ಅಲ್ಲಲ್ಲಿಗೆ ಅವರ ಶಾಖಾ ಪಟ್ಟಾಧಿಕಾರಿಗಳಿರುವರು. ತಮ್ಮ ಕರ್ತವ್ಯಕ್ಕೆ ಕೊರತೆ ಬರಬಾರದೆಂದು ಇವರೆಲ್ಲರು ಬ್ರಹ್ಮಚಾರಿಗಳಿರುವರು.

ಯೋಗಾಂಗಿ ಸ್ಥಲದ ಭಕ್ತನು ಭಾವಲಿಂಗಾರ್ಚಕನಾಗಿ ತನ್ನ ಮಹಾಜ್ಞಾನ ಬಲದಿಂದ ಮನೋನಿಗ್ರಹವನ್ನು ಪಡೆದು, ಪೂರ್ಣ ವಿರಕ್ತಿಯನ್ನು ಧರಿಸಿ, ವಿಶ್ವ ಕುಟುಂಬಿ ಎನಿಸಿ, ಅವರ ಸೇವಾಸಕ್ತಿಯನ್ನು ಹಿಡಿದು, ಅದರಲ್ಲಿಯೇ ತನ್ನ ಇಡೀ ಆಯುಷ್ಯವನ್ನು ಸವಿಸುವ ದೃಢ ನಿಶ್ಚಯ ಮಾಡಿ, ವೈಯ್ಯಕ್ತಿಕ ಕೌಟುಂಬಿಕ ಸಾಮಾಜಿಕವೆಂಬ ಪ್ರಪಂಚದ ಯಾವ ಭಾರವನ್ನೂ ಹೊರದೆ, ಕೇವಲ ಸತ್ಯಜ್ಞಾನ ನಿರತನಾಗಿ, ಅದೊಂದನ್ನೇ ಸಮಾಜದಲ್ಲೆಲ್ಲ ಹರಡುವ ವ್ರತವಿಡಿದರೆ ಅವನೇ ನಿರಾಭಾರಿ ಭಕ್ತನೆನಿಸುವನು.

ಈಗ ಇಂತಹ ಭಕ್ತರಾಗಲಿ, ಗುರುಜಂಗಮರಾಗಲಿ, ಸಿಗುವದು ಅತ್ಯಂತ ಅಪರೂಪ. ಇದರ ಕಾರಣವೇಂದರೆಃ— ವೀರಶೈವ ಸಮಾಜ ಯಂತ್ರದ ಮುಖ್ಯ ಚಕ್ರಗಳಂತಿರುವ ಗುರು ಜಂಗಮರು ಕರ್ತವ್ಯ ಪರಾಙ್ಮುಖರಾಗಿ ಮುಖ್ಯ ಚಕ್ರಗಳೇ ಹೀಗೆ ತುಕ್ಕು ಹಿಡಿದು ಮಣ್ಣುಗೂಡಿ ನಿರುಪಯುಕ್ತವಾದ ಮೇಲೆ, ಅಂತಿಂತಹ ಕಿರುಕುಳ ಚಕ್ರಗಳಂತಿರುವ ಸಾಮಾನ್ಯರದು ಅದಾವ ಪಾಡು! ಅವು ಸ್ತಬ್ಧವಾದವು. ಪರದೇಶಿಯಾದವು. ಅಲ್ಲಿಂದಲ್ಲೇ ಹಾಳಾದವು. ಹೀಗೆ ಭಕ್ತ ಗುರು–ಜಂಗಮರೆಲ್ಲರು ಬಹುಶಃ ತಮ್ಮ ಸ್ಥಳದಿಂದ ಗುಣಕರ್ಮದಿಂದ–ಚ್ಯುತರಾಗಿರುವರು. ಇದಕ್ಕೆ ಈಗಿನ ರಾಜಕೀಯ ವಾತಾವರಣದಿಂದುಂಟಾದ ಭೀಕರ ಬಡತನವಾದರೂ ಈಗ ಎಲ್ಲರೂ ಚೆನ್ನಾಗಿಯೇ ಕಣ್ದೆರೆವ ಕಾಲವು ಬಂದಿದೆ. ತಾವು "ಭವಿಗಳಲ್ಲ, ಭಕ್ತರೆಂ"ಬುದನ್ನು ನೆನೆದು ಸಾವರಿಸಿ

ಕೊಂಡು, ಎಚ್ಚತ್ತು, ಪುನಃ ಶಿವಮಾರ್ಗಕ್ಕೆ ಬರಬೇಕು. ನಿಜವಾದ ಕಾರ್ಯಕ್ಷಮ ಗುರು ಜಂಗಮರು ಸಿದ್ಧವಾಗುವಂತೆ ಬೇರೆ ಬೇರೆ ಸಂಸ್ಥೆಗಳನ್ನು ನಿರ್ಮಿಸಿ, ಅವರಿಗೆ ಯೋಗ್ಯ ಶಿಕ್ಷಣ ಕೊಟ್ಟು, ಅವರಲ್ಲಿ ಸಮಾಜೋದ್ಧಾರದ ಒಲವುಳ್ಳವರನ್ನೇ ಆರಿಸಿ, ಆಯಾ ಸ್ಥಲಗಳಿಗೆ ಪಟ್ಟಗಟ್ಟಬೇಕು. ಸುಂಬಳ ತೆಗೆದುಕೊಳ್ಳಲಿಕ್ಕೆ ಸಹ ಬಾರದ, ಏನೂ ಅರಿಯದ, ಹುಡುಗರನ್ನು ಗುರು ಜಂಗಮ ಸ್ಥಲಗಳಿಗೆ ನೇಮಿಸುವ ಈಗಿನ ಕೆಟ್ಟ ಹಾಳು ಪದ್ಧತಿಯನ್ನು ಸಂಪೂರ್ಣ ನಿಲ್ಲಿಸದಿದ್ದರೆ ನಮ್ಮ ಸಮಾಜವು ಇನ್ನು ಬಾಳಲಾರದು. ಬಸವಾದ ಪ್ರಮಥರು ಸಾಹಸಬಟ್ಟು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಗುವದು. ಮೇಲೆ ಹೇಳಿದಂತಹ ಯೋಗ್ಯರಾದ ಪ್ರೌಢರಾದ ಬ್ರಹ್ಮಚಾರಿಗಳನ್ನೇ ಗುರು-ವಿರಕ್ತರನ್ನಾಗಿ ನೇಮಿಸುವ ಬಗ್ಗೆ ಸಮಾಜವು ಎಷ್ಟು ದಕ್ಷತೆ ವಹಿಸಿದರೂ ಅದು ಸಾಲದು ! ಯಾರೂ ದುರಾಗ್ರಹ-ದುರಭಿಮಾನಗಳಿಗೆ ಬಲಿಬೀಳದೆ, ಭಕ್ತರೆಲ್ಲರೂ — ಸರ್ವ ವೀರಶೈವರೆಲ್ಲರೂ ಒಂದಾಗಿ ವಿವೇಕಿಗಳಾಗಿ, ಈ ಸುಧಾರಣೆಯನ್ನು ಆದಷ್ಟು ಬೇಗನೆ ಕೈಕೊಳ್ಳಬೇಕು. ವಿನಾಕಾರಣ "ನಾ ಹೆಚ್ಚು ನೀ ಹೆಚ್ಚು" ಎಂಬ ಹುರುಳಿಲ್ಲದ ವಾದದಲ್ಲಿ ಹೊತ್ತುಗಳೆಯಬಾರದು. ಅದು ಭವಿಗಳದೊಂದು ಭ್ರಮೆ. ಭಕ್ತರಲ್ಲಿ ಅಂತಹ ಮರುಳತನವಾವುದೂ ಇಲ್ಲ. ಬರೀ ಹೊಟ್ಟೆ ಹೊರಕೊಂಡು ಬಿದ್ದು ಸತ್ತು ಹೋಗಲಿಕ್ಕೆ ವೀರಶೈವರ ಜನ್ಮವಿಲ್ಲ. ಭಿಕ್ಷೆಯಿಂದ ಅಂತು ಇಂತು ಕಾಲಹರಣ ಮಾಡುವದಂತೂ ನಮ್ಮ ಮತದಲ್ಲಿ ಬಹು ತಿರಸ್ಕರಣೀಯವಾಗಿದೆ. ಅದಾದರೂ ಭವಿಗಳ ಅನುಕರಣವೇ ! ಆದುದರಿಂದ ಹೊಣೆಗಾರರಾದ ಮುಖಂಡರೆಲ್ಲರೂ ಈ ವಿಷಯವನ್ನು ಒಳಿತಾಗಿ ಯೋಚಿಸಿ ನೋಡಬೇಕು. ಹಾಗು ತಮ್ಮ ಪವಿತ್ರ ಕರ್ತವ್ಯವನ್ನು ನೆರವೇರಿಸಬೇಕು.

ಹೀಗೆ ಬರೆಯುವದರಲ್ಲಿ ಯಾರನ್ನೂ ದೂಷಿಸುವ ಅಪೇಕ್ಷೆ ಇಲ್ಲ. ಎಂತೂ ಸಮಾಜಕ್ಕೆ ಕ್ಷೇಮವಾಗಲೆಂಬುದನ್ನೇ ಮುಂದಿಟ್ಟುಕೊಂಡು, ನನಗೆ ಹೊಳೆದುದನ್ನೆಲ್ಲ ಹೇಳಿಕೊಂಡಿದ್ದೇನೆ.

# ಬಸವೇಶ್ವರನಕಿಂತಲೂ ಮೊದಲಿನ ವೀರಶೈವ ಧರ್ಮ.

(ಲೇಖಕರು:—ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್ ಬಿ. ವಿಜಾಪುರ)

## ಬ್ರಹ್ಮ, ವಿಷ್ಣು, ರುದ್ರ.

---

(ಹಿಂದಿನಿಂದ ಮುಂದೆಸಾಗಿದ್ದು.)

ಈ ವಿಷಯದ ವಿವೇಚನೆಯನ್ನು ಮಾಡುವಲ್ಲಿ ನಾವು ಹಿಂದಿನ ಸಂಚಿಕೆಗಳಲ್ಲಿ ಹೇಳಿದಂತೆ ನಾಲ್ಕು ವಿಭಾಗಗಳನ್ನು ಮಾಡಬಹುದಾಗಿದೆ. ಅವು ಯಾವವೆಂದರೆ (೧) ಬಸವೇಶ್ವರನಕಿಂತ ಪೂರ್ವದಕಾಲ (೨) ಬಸವೇಶ್ವರನ ಕಾಲ (೩) ಬಸವೇಶ್ವರನ ತರುವಾಯದ ಕಾಲ ಮತ್ತು (೪) ವೀರಶೈವ ಪೌರಾಣಿಕಕಾಲ. ಬಸವೇಶ್ವರನಕಿಂತ ಪೂರ್ವದ ಕಾಲದಲ್ಲಿ ಬ್ರಹ್ಮ, ವಿಷ್ಣು, ರುದ್ರ ಈ ದೇವರುಗಳಲ್ಲಿ ಯಾರು ಶ್ರೇಷ್ಠರೆಂಬ ವಿಷಯವಾಗಿ ಸಮಾಜದಲ್ಲಿ ದೊಡ್ಡ ಕೋಲಾಹಲಗಳೆದ್ದಿದ್ದವೆಂತಲೂ, ಮುಂದೆ ಬಸವೇಶ್ವರನ ಕಾಲದಲ್ಲಿ ಒಬ್ಬನೇ ದೇವರೆಂಬ ವಿಚಾರಗಳು ನೆಲೆಗೊಂಡು ಇಂಥ ಕಲಹಗಳು ಕಡಿಮೆಯಾಗುತ್ತ ಹೋದವೆಂತಲೂ ನಾವು ಹಿಂದಿನ ಲೇಖಗಳಲ್ಲಿ ವಿವರಿಸಿದ್ದೇವೆ. ಆದರೆ ಪ್ರಸ್ತುತ ಲೇಖದಲ್ಲಿ ಈ ತ್ರಿಮೂರ್ತಿಗಳ ವಿಷಯವಾಗಿ ಬಸವೇಶ್ವರನ ಕಾಲದ ತರುವಾಯ ಯಾವ ವಿಚಾರಗಳು ರೂಢವಾಗಿದ್ದವೆಂಬುದನ್ನು ನಾವು ವಿವೇಚಿಸಲಣಿಸಿದ್ದೇವೆ.

ಬಸವೇಶ್ವರನ ಕಾಲದಲ್ಲಿ ಪರಮಾತ್ಮನು ಸರ್ವವ್ಯಾಪಿಯಾಗಿದ್ದು ಅವನೊಬ್ಬನೇ ಇದ್ದಾನೆಂಬ ತತ್ವವು ಪ್ರಚಾರ ಮಾಡಲ್ಪಟ್ಟಿತೆಂದು ಆಗ ಉಂಟಾದ ವಚನಗಳಿಂದ ಕಂಡುಬರುತ್ತದೆ. ಅವನ ಕಾಲದಲ್ಲಿ ತ್ರಿಮೂರ್ತಿಗಳು ಮನ್ನಿಸಲ್ಪಟ್ಟಂತೆ ಕಂಡುಬರುವದಿಲ್ಲ. ಯಾಕಂದರೆ ಪಂಚಮುಖ ದಶಭುಜವನುಳ್ಳ ಶಿವನೂ ಕೂಡ ದೇವರಲ್ಲೆಂಬ ಅನೇಕ ವಚನಗಳು ನಮಗೆ ದೊರೆಯುತ್ತವೆ. ಆಗ ಶಿವ, ಪರಮಾತ್ಮ, ಪರಬ್ರಹ್ಮ, ಪರಶಿವ ಇವೆಲ್ಲವೂ ಒಂದೇ ಅರ್ಥದಿಂದ ಉಪಯೋಗಿಸಲ್ಪಡುತ್ತಿದ್ದವು. ಯಾವ ವಚನಕಾರನಾದರೂ ಪರಮಾತ್ಮನ ಸ್ವರೂಪವನ್ನು ಹೇಳುವಲ್ಲಿ

ಅವನಿಗೆ ಪಾರ್ವತಿ ಎಂಬ ಹೆಂಡತಿ ಇದ್ದಾಳೆ, ಅವನಿಗೆ ಷಣ್ಮುಖ ಗಣಪತಿ ಎಂಬ ಮಕ್ಕಳಿದ್ದಾರೆ, ಎಂದು ತನ್ನ ವಚನಗಳಲ್ಲಿ ಹೇಳಿದ್ದು ಕಂಡುಬರುವದಿಲ್ಲ. ದೇವರು ನಿರಾಕಾರನೂ, ಭವವಿಲ್ಲದವನೂ, ವಿಷಯ ರಹಿತನೂ, ಅಜಾತನೂ, ಎಂದು ಮೊದಲಾಗಿ ವರ್ಣಿಸಲ್ಪಟ್ಟಿರುತ್ತಾನೆ. ಇದರಿಂದ ನಾವು ಮೇಲೆ ಹೇಳಿದ ಸಂಗತಿಯು ದೃಢಪಡುತ್ತಿದೆ.

ಆದರೆ ಇಂಥ ವ್ಯಾಪಕ ಮತ್ತು ವಿಸ್ತೃತ ವಿಚಾರಗಳು ಪ್ರಸಾರ ಹೊಂದಲಿಕ್ಕೆ ದೇಶದಲ್ಲಿಯ ಆಗಿನ ಪರಿಸ್ಥಿತಿಯು ಮುಂದೆ ಅನುಕೂಲವಾಗಿರಲಿಲ್ಲೆಂದು ನಮಗೆ ತೋರುತ್ತದೆ. ಆಗ ದೇಶದಲ್ಲೆಲ್ಲ ಮಹತ್ವದ ಶಿವನ ಮತ್ತು ವಿಷ್ಣುವಿನ ದೇವಾಲಯುಗಳು ಉದ್ಭವಿಸಿದ್ದವು. ಜನರಲ್ಲಿ ಅವು ವಿಶೇಷ ಮಹತ್ವವನ್ನು ಹೊಂದಿದ್ದವು. ಅವುಗಳಲ್ಲಿ ಈಗಲೂ ತೋರುವ ಅಸಂಖ್ಯ ಶಿಲಾಶಾಸನಗಳು ಈ ಸಂಗತಿಗಳನ್ನು ದೃಢಪಡಿಸುತ್ತಿವೆ. ಶಿವಾಲಯುಗಳಲ್ಲಿಯ ಅರ್ಚಕರು ಆಗ ಕಾಳಾಮುಖಪಂಥಿಗಳಾಗಲಿ ಇಲ್ಲವೆ ಇತರ ಶೈವಧರ್ಮಗಳ ಪ್ರಭೇದದವರಾಗಲಿ ಇದ್ದರು. ಇವರೆಲ್ಲರೂ ಬಸವೇಶ್ವರನ ಕಾಲದಲ್ಲಿ ಅಥವಾ ಅವನ ತರುವಾಯ ಸ್ವಲ್ಪ ದಿವಸಗಳಲ್ಲಿ ವೀರಶೈವಮತಾವಲಂಬಿಗಳಾದರು. ಹೀಗೆ ಅವರು ವೀರಶೈವ ಧರ್ಮವನ್ನು ಸ್ವೀಕರಿಸಿದ ಬಳಿಕ ಈ ದೇವಾಲಯುಗಳಲ್ಲಿರುವ ತಮ್ಮ ಮಹತ್ವದ ಸ್ಥಾನಗಳನ್ನು ಬಿಡುವದು ಸ್ವಾಭಾವಿಕವಾಗಿ ಶಕ್ಯವಲ್ಲ. ಆದ್ದರಿಂದ ಅವರು ಈ ಶಿವಾಲಯುಗಳ ಅರ್ಚಕರಾಗಿಯೇ ಉಳಿದಿರಲಿಕ್ಕೆಬೇಕು. ಮತ್ತು ಸಾಮಾನ್ಯ ಜನರಾದರೂ ಕೂಡ ಇಂಥ ದೇವಾಲಯುಗಳಿಗೋಸ್ಕರ ತಮ್ಮ ಮೊದಲಿನ ಪೂಜ್ಯಭಾವವನ್ನು ಬಿಟ್ಟುಬಿಟ್ಟಿರಲಿಕ್ಕಿಲ್ಲ. ಜನರಲ್ಲಿಯ ಇಂಥ ಪರಿಸ್ಥಿತಿಯನ್ನು ಅನೇಕ ವಚನಕಾರರು ಬಹು ಕಟುವಾದ ಶಬ್ದಗಳಿಂದ ನಿಷೇಧಿಸಿದ್ದಾರೆ. ಶಿವ ದೇವಾಲಯುಗಳನ್ನು ನಿಷೇಧಿಸಿದ ಅವರ ವಚನಗಳು ಅನೇಕವಿರುತ್ತವೆ.

ಹೀಗೆ ಅನೇಕ ವಚನಕಾರರು ತ್ರಿಮೂರ್ತಿಗಳನ್ನು ನಿಷೇಧಿಸುತ್ತ ಬಂದರೂ ಬೇರೆ ಕೆಲ ವಚನಕಾರರು ಎಲ್ಲರಿಗೂ ಸಮಬೀಳುವಂತೆ ಷಟ್‌ಸ್ಥಲದಲ್ಲಿ ಈ ತ್ರಿಮೂರ್ತಿಗಳಿಗೆ ಕೆಲವೊಂದು ಸ್ಥಾನವನ್ನು ಕಲ್ಪಿಸಿ ಕೊಟ್ಟಿದ್ದು ಕಂಡುಬರುತ್ತಿದೆ. ಅಂದರೆ ಇವರನ್ನು ಅವರು ಪೂರ್ಣವಾಗಿ ನಿರಾಕರಿಸಲಿಲ್ಲ. ಹೀಗೆ ಅವರನ್ನು ನಿರಾಕರಿಸದಿದ್ದರೂ ಇವರು ಈ ತ್ರಿಮೂರ್ತಿಗಳಿಗೆ ಕೆಲವೊಂದು ವಿಶೇಷ ಅರ್ಥವನ್ನು ಕೊಟ್ಟು ತಮ್ಮ

ವೀರಶೈವ ತತ್ವಕ್ಕೆ ಬಾಧೆ ಬರದಂತೆ ಮಾಡಿಕೊಂಡರು. ಈ ತರದ ಮಾರ್ಪಾಡು ಈಚೆಗೆ ಆಗಿರುತ್ತದೆಂದು ತೋರುತ್ತದೆ. ಆಗ ದೇಶದಲ್ಲಿ ಹರಿ, ಹರ ಈ ಉಭಯ ದೇವತೆಗಳಿಗೆ ಸಂಬಂಧವಿದ್ದ ಪ್ರಮುಖ ಪ್ರಭೇದವರು ಕರ್ನಾಟಕದಲ್ಲಿ ಇದ್ದರು. ಅವರಿಬ್ಬರಿಗೂ ಸರಿಬೀಳುವಂತೆ ಬಸವೇಶ್ವರನ ತರುವಾಯದ ಶಿವಶರಣರು ಷಟ್‌ಸ್ಥಲ ಶಾಸ್ತ್ರದಲ್ಲಿ ಕೆಲವೊಂದು ಏರ್ಪಾ ಡನ್ನು ಮಾಡಿದ್ದಾರೆ. ಇದರಿಂದ ಈ ಉಭಯ ಪಂಗಡದವರೂ ವೀರಶೈವ ಮಾರ್ಗವನ್ನು ವಿರೋಧಿಸಲು ಕಾರಣವಿಲ್ಲದಾಯಿತು. ಅವರು ಹೀಗೆ ಷಟ್‌ಸ್ಥಲ ಶಾಸ್ತ್ರದ ಕ್ರಮದಲ್ಲಿಯೇ ಮಾರ್ಪಡಿಸಿದ್ದು ಬಹು ಜಾಣತನದ ಸಂಗತಿಯಾಗಿದೆ. ಇದಕ್ಕೋಸ್ಕರ ನಾವು ಕೆಳಗೆ ಕಾಣಿಸಿದ ಕೆಲವು ಉದಾ ಹರಣೆಗಳನ್ನುಕೊಡುತ್ತೇವೆ.

ಷಟ್‌ಸ್ಥಲ ಶಾಸ್ತ್ರದಲ್ಲಿ ಸಾದಾಖ್ಯಗಳೆಂಬುವಿವೆ. ಇವು ಬ್ರಹ್ಮಾಂಡವು ರಚನೆಗೆ ಬರುವ ಪೂರ್ವದಲ್ಲಿ ಆಗುವ ಕೆಲವು ಮಾರ್ಪಾಡುಗಳೆಂದು ಹೇಳಬಹುದು. ಇವು ಮಹಾ ಸಾದಾಖ್ಯ, ಶಿವಸಾದಾಖ್ಯ, ಅಮೂರ್ತ ಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃಸಾದಾಖ್ಯ, ಮತ್ತು ಕರ್ಮ ಸಾದಾಖ್ಯ ಎಂದು ಇವೆ. ಕಡೆಯದಾದ ಕರ್ಮಸಾದಾಖ್ಯದೊಳಗಿಂದಲೇ ಈ ದೃಶ್ಯ ಜಗತ್ತಿನ ನಿರ್ಮಾಣವಾಗಿರುತ್ತದೆ. ಈ ಪ್ರತಿಯೊಂದು ಸಾದಾ ಖ್ಯಕ್ಕೆ ಒಬ್ಬೊಬ್ಬ ಅಧಿದೇವತೆಯು ಇರುತ್ತಾನೆ. ಅವರ ಹೆಸರುಗಳು ಅನುಕ್ರಮವಾಗಿ ಶಿವ, ಸದಾಶಿವ, ಈಶ್ವರ, ರುದ್ರ, ವಿಷ್ಣು, ಬ್ರಹ್ಮ ಎಂದು ಇರುತ್ತವೆ. (ವಚನಶಾಸ್ತ್ರಸಾರ ಭಾಗ ೩ ಪುಟ, ೧೬, ೨೨, ೨೩ ನೋಡಿರಿ) ಇದರಿಂದ ಷಟ್‌ಸ್ಥಲ ಶಾಸ್ತ್ರಕಾರರು ಈ ತ್ರಿಮೂರ್ತಿಗಳನ್ನು ಸಂಪೂರ್ಣ ವಾಗಿ ನಿರಾಕರಿಸದೆ ಸೃಷ್ಟಿಯ ರಚನೆಯಲ್ಲಿ ಅವರಿಗೆ ಕೆಲವೊಂದು ಸ್ಥಾನ ವನ್ನು ಕೊಟ್ಟಿದ್ದಾರೆಂದು ಕಂಡು ಬರುವದು. ಅವರೆಲ್ಲರೂ ನಿರಾಕಾರನಾದ ವಿಶ್ವವ್ಯಾಪಿಯಾದ ಪರಶಿವನ ಕೆಲವೊಂದು ಅಂಶವೆಂದು ಅವರು ಇಲ್ಲಿ ಹೇಳಿದ್ದಾರೆ.

ಷಟ್‌ಸ್ಥಲ ಶಾಸ್ತ್ರದಲ್ಲಿ ೨೧೬ ಸಕೀಲುಗಳೆಂಬುವಿವೆ. ಇವುಗಳಲ್ಲಿ ೨೪ ವಿಭಾಗಗಳಿದ್ದು ಒಂದೊಂದು ವಿಭಾಗದಲ್ಲಿ ೯ ತರಗತಿಗಳಿವೆ. ಈ ವಿವೇಚನೆಯಲ್ಲಿ ಅಧಿದೇವತೆಗಳೆಂಬುವಿದ್ದು ಅವು ಅನುಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಎಂದು ಮೊದಲಾಗಿ ಇರುತ್ತವೆ. (ವಚನಶಾಸ್ತ್ರಸಾರ ಭಾಗ ೨ ಪುಟ ೧೩೪ ನೋಡಿರಿ.) ಹೀಗೆ ಇದರಲ್ಲಿ ಈ ತ್ರಿಮೂರ್ತಿಗಳಿದ್ದು ಅವರ ವ್ಯಾಖ್ಯೆಗಳಾದರೂ ಮಾಡಲ್ಪಟ್ಟಿವೆ. ಅವು ಆವವೆಂದರೆ:—

"ಅನಾದಿ ಬ್ರಹ್ಮನ ಪೂಜೆಗೆ ಅಧಿಕಾರಿಯಾಗಿ ಇರುಹೆ ಮೊದಲಾದ ಆನೆ ಕಡೆಯಾದ ೮೪ ಲಕ್ಷ ಜೀವರ ಉತ್ಪತ್ತಿಗೆ ಕರ್ತೃವೆಂಬುದೀಗ ಬ್ರಹ್ಮನೆಂಬ ಶಬ್ದಕ್ಕರ್ಥ."

"ಅನಾದಿ ವಿಷ್ಣುವಿನ ಪೂಜೆಗೆ ಅಧಿಕಾರಿಯಾಗಿ ಇರುಹೆ ಮೊದಲ್ಗೊ ಆನೆ ಕಡೆಯಾದ ೮೪ ಲಕ್ಷ ಜೀವ ಜಂತುಗಳಿಗೆ ಆಹಾರವಿತ್ತು ರಕ್ಷಿಸುವುದಕ್ಕೆ ಕರ್ತನೆಂಬುದೀಗ ವಿಷ್ಣುವೆಂಬ ಶಬ್ದಕ್ಕರ್ಥ."

"ಅನಾದಿ ರುದ್ರನ ಪೂಜೆಗೆ ಅಧಿಕಾರಿಯಾಗಿ ಇರುಹೆ ಮೊದಲು ಆನೆ ಕಡೆಯಾಗಿ ೮೪ ಲಕ್ಷ ಜೀವಜಂತುಗಳ ಸಂಹಾರಕ್ಕೆ ಕರ್ತನೆಂಬುದೀಗ ರುದ್ರನೆಂಬ ಶಬ್ದಕ್ಕರ್ಥ" ಇತ್ಯಾದಿ

ಹೀಗೆ ಈ ತ್ರಿಮೂರ್ತಿಗಳ ಸಾಕ್ಷ್ಯಗಳು ಇಲ್ಲಿ ಇವೆ. ಇದರ ಮೇಲಿಂದ ಷಟ್‌ಸ್ಥಲ ಶಾಸ್ತ್ರಜ್ಞರು ಹಿಂದಿನ ವಚನಕಾರರಂತೆ ತ್ರಿಮೂರ್ತಿಗಳನ್ನು ಸಂಪೂರ್ಣವಾಗಿ ನಿರಾಕರಿಸಿಲ್ಲೆಂದು ತೋರಿಬರುತ್ತದೆ.

ಈ ವಿಷಯವಾಗಿ ಕೆಲವೊಬ್ಬ ವಚನಕಾರನು ಬಹು ಸ್ಫುಟವಾದ ರೀತಿಯಿಂದ ಕಲವು ವಚನಗಳನ್ನು ರಚಿಸಿದ್ದಾನೆ. ನಮ್ಮ ಮೇಲ್ಕಂಡ ಅಭಿಪ್ರಾಯಗಳನ್ನು ಅವನು ಬಹು ಅತ್ಯುತ್ತಮ ರೀತಿಯಿಂದ ಪ್ರಕಟ ಮಾಡಿದ್ದಾನೆ. ಆದ್ದರಿಂದ ಅವುಗಳನ್ನೇ ನಾವು ಇಲ್ಲಿ ಕೊಡುತ್ತೇವೆ.

## ವಚನಗಳು.

(೧) ಬ್ರಹ್ಮನೇ ಘನವೆಂದು ಪೂಜೆಯ ಮಾಡುವ ಭವಿಗಳು ಒಮ್ಮೆ ನೀರೊಳು ಮುಳುಗಿ ಮುಕ್ತಿಯಿಲ್ಲದೆ ಹೋದರೆಂಬಿರಿ, ವಿಷ್ಣುವೇ ಘನವೆಂದು ಪೂಜೆಯ ಮಾಡುವ ಭವಿಗಳು ತಮ್ಮ ಭುಜವ ತಾವು ಸುಡಿಸಿಕೊಂಡು ಮುಕ್ತಿಯಿಲ್ಲದೆ ಹೋದರೆಂಬಿರಿ, ನಮ್ಮ ಶಿವನೇ ಘನವೆಂದು ಪೂಜೆಯ ಮಾಡುವ ಅಣ್ಣಗಳಿಗೆ ಕೈಲಾಸ ಪದವಾಯಿತ್ತೆಂದು ಹೇಳುವ ಕುನ್ನಿಗಳು ನೀವು ಕೇಳಿರೋ. ಅದು ಎಂತೆಂದರೆ— ಬ್ರಹ್ಮ ವಿಷ್ಣುಗಳ ಅಧಿಕಾರ ವಿಡಿದು ಒಮ್ಮನವಾಗಿ ನಮ್ಮ ಶಿವನೇ ಘನವು ಎಂದು ಭಾವಿಸಿ ಪೂಜೆಯ ಮಾಡುವ ಭಕ್ತರ ಭಕ್ತಿಭಾವಕ್ಕೆ ಮೆಚ್ಚಿ ಕೈಲಾಸ ಪದವು ಆಯಿತ್ತು ಕಾಣಿರೋ. ಅದು ಎಂತೆಂದರೆ ಹರಿ ಎಂಬ ಜಲವ ತಂದು ಹರನ ಮಂಡೆಯ ಮೇಲೆ ಎರೆಯಲು, ಬ್ರಹ್ಮನೆಂಬ ಬೋನವ ತಂದು

ನೈವೇದ್ಯವ ಹಿಡಿಯಲು, ಶಿವಭಕ್ತರಿಗೆ ಪ್ರಸಾದವಾಯಿತ್ತು ಕಾಣಿರೋ. ಅದು ಎಂತೆಂದರೆ ಹಸಿದು ಬಳಲಿ ಬಂದವರಿಗೆ ಹರಿ ಎಂಬ ಜಲವ ಕೊಟ್ಟು ಬ್ರಹ್ಮ ಎಂಬುವ ಬೋನವ ನೀಡಲು ಮೂರು ಲೋಕಕ್ಕೆ ಪರಹಿತಾರ್ಥ ವೆಂಬ ಪ್ರಭೆ ಬೆಳಗು ತೋರಿತ್ತು ಕಾಣಿರೋ. ಅದು ಎಂತೆಂದರೆ, ಒಂದೇ ಏಕ ಮೂರ್ತಿಯು ತ್ರಿಮೂರ್ತಿಯಾಗಿ ಬಂದು ಆನೆ ಮೊದಲು ಇರುಹೆ ಕಡೆ ಎಂಭತ್ತುನಾಲ್ಕು ಜೀವರಾಶಿಗಳನ್ನೆಲ್ಲ ಹುಟ್ಟಿಸುವದಕ್ಕೆ ಬ್ರಹ್ಮನೆಂಬ ಮೂರ್ತಿಯಾದ, ರಕ್ಷಿಸುವದಕ್ಕೆ ವಿಷ್ಣು ಮೂರ್ತಿಯಾದ, ಭಕ್ಷಿಸುವದಕ್ಕೆ ರುದ್ರ ಮೂರ್ತಿಯಾದನೆಂದು ನಾಲ್ಕು ವೇದ ಆರು ಶಾಸ್ತ್ರ ಹದಿನೆಂಟು ಪುರಾಣ ಇಪ್ಪತ್ತೆಂಟು ದಿವ್ಯಾಗಮ ಮೂವತ್ತೆರಡು ಉಪನಿಷತ್ ಶಾಸ್ತ್ರಂಗಳು ಹೇಳುತ್ತಿಹವು. ಇದನು ಅಂತೂ ಅರಿಯದ ಅಜ್ಞಾನಿಗಳು ಹರಿಸುರ ಬ್ರಹ್ಮಾದಿಗಳು ನಮ್ಮ ಹರನಿಗೆ ಸರಿ ಇಲ್ಲವೆಂದು ಹೇಳುವ ಕಿರು ಕುಳು ಹದದ ನರಕಿಗಳ ಹಸಿವೆಗೆ ಬ್ರಹ್ಮನೇ ಬೋನವಾದ, ತೃಷೆಗೆ ಹರಿಯೇ ಜಲವಾದನೆಂದು ಇಕ್ಕುವೆನುಮುಂಡಿಗೆಯು ಇದನೆತ್ತುವರುಂಟೇ ನೋಡಾ ದಾಸಂಪ್ರಿಯ ರಾಮನಾಥಂ ಪ್ರಭುವೇ.

(೨) ನಾವು ಹರನ ಭಕ್ತರು ಹರಿಯ ಪೂಜೆಗೊಂಡು, ಹರಿ ಶಬ್ದವ ನೆನೆಯಲಾಗದು ಎಂದು ಹೇಳುವ ಅಣ್ಣಗಳಿರಾ, ಹರಿಯೇ ನಿಮ್ಮ ಶಿರದಲ್ಲಿ ಶಿವಲಿಂಗವಾಗಿರ್ಪುದು, ಹರಿ ಶಬ್ದವೇ ನಿಮಗೆ ಮಂತ್ರ ವಾಗಿರ್ಪುದು, ಅದು ಎಂತೆಂದರೆ, ಹರನೇ ನಿರಾಕಾರ ಮಹಿಮೆಯಲ್ಲಿ ಹರಿಯಾದ. ಹರಿಯು ನಿರಾಕಾರ ಮಹಿಮೆಯಲ್ಲಿ ಬ್ರಹ್ಮನಾದ. ಈ ಮೂರು ಮೂರ್ತಿಗಳು ಒಂದುಗೂಡಲಿಕ್ಕೆ ಹರಿಹರದೇವರೆಂಬುವುದು ಬೆರಿಕೆಯ ಶಿವಲಿಂಗದೇವವಾಯಿತ್ತು ಕಾಣಿರೋ. ಹರಿಹರ ಶಬ್ದವೇ ನಿಮಗೆ ಗುರು ಮಂತ್ರವಾಗಿಪ್ಪದು. ಅದು ಎಂತೆಂದರೆ, ಆಕಾರ ನಿರಾಕಾರ ಏನೂ ಇಲ್ಲದಂದಿಂಗೆ ಓಂಕಾರವೆಂಬುವದೊಂದೇ ಅಕ್ಷರ ಹುಟ್ಟಿ ಪರಬ್ರಹ್ಮನಾದ. ಅದರ ಒಡಲೊಳಗೆ ಹುಟ್ಟಿದ ನಕಾರವೆಂಬ ಅಕ್ಷರವೇ ಬ್ರಹ್ಮನಾದ. ಮಕಾರವೆಂಬ ಅಕ್ಷರ ಹುಟ್ಟಿ ವಿಷ್ಣುವಾದ. ಶಿಕಾರವೆಂಬ ಅಕ್ಷರ ಹುಟ್ಟಿ ರುದ್ರನಾದ. ವಕಾರವೆಂಬ ಅಕ್ಷರ ಹುಟ್ಟಿ ಈಶ್ವರನಾದ. ಯಕಾರವೆಂಬ ಅಕ್ಷರ ಹುಟ್ಟಿ ಸದಾಶಿವನಾದ. ಇಂತಿವು ಆರು ಅಕ್ಷರ ಕೂಡಲಿಕ್ಕೆ "ಓಂ ನಮಃ ಶಿವಾಯ" ಎಂಬ ಷಡಕ್ಷರ ಗುರುಮಂತ್ರವಾಗಿರ್ಪುದು ಕಾಣಿರೋ. ಅದು ಎಂತೆಂಧರೆಃ— ಹರಿಹರದೇವರೆಂಬ ಬೆರಕಿಯ ಶಿವ

ಲಿಂಗದೇವರನೇ ನಿಮ್ಮ ಶಿರದಲ್ಲಿ ಕಟ್ಟಿ ಕರದಲ್ಲಿ ಹಿಡಿದುಕೊಂಡು ಹರಿ ಹರ ಶಬ್ದವೆಂಬ ಗುರುಮಂತ್ರವ ನೆನೆನೆನೆದು ಪೂಜೆ ಮಾಡುತಿರ್ಪರು ಕಾಣಿರೋ. ಅದು ಎಂತೆಂದರೆ:— ಹರಿಹರದೇವರೆಂಬುವ ಬೆರಕೆ ಶಿವ ಲಿಂಗದೇವರೇ ಕಾಲಕರ್ಮವ ಗೆಲಿದು ಅಧ್ಯಾತ್ಮಜ್ಞಾನವ ತಿಳಿವಂತೆ ಸಿದ್ಧಸಾಧಕರಿಗೆಲ್ಲ ಪ್ರಾಣಲಿಂಗವಾಯಿತ್ತು ಕಾಣಿರೋ. ಇಷ್ಟಲಿಂಗವೆಂದು ಶಿರದಲ್ಲಿ ಕಟ್ಟಿ ಕರದಲ್ಲಿ ಪೂಜೆಯ ಮಾಡಿದರೇನಯ್ಯ? ಹರಿಹರದೇವ ರೆಂಬುವ ಬೆರಕೆಯು ಶಿವಲಿಂಗದೇವರು ಒಂದೇ ಕಾಣಿರೋ. ಅದು ಎಂತೆಂದರೆ, ನಾವು ಹರಭಕ್ತರು, ಹರಿಯ ಪೂಜೆಯಗೊಂಡು ಹರಿ ಶಬ್ದವ ನೆನೆಯಲಾಗದು ಎಂದು ಹೇಳುವ ಅಣ್ಣಗಳು ಹರಿಹರದೇವ ರೆಂಬುವ ಬೆರಕಿಯ ಶಿವಲಿಂಗದೇವರೇ ಹರಿಶಬ್ದವೆಂಬ ಗುರುಮಂತ್ರವ ನೆನೆವುತ್ತಿರ್ದರು. ಇಂತಿವರಿಗೆ ಗುರುಮಂತ್ರವಾಗಿರ್ಪುದು ಕಾಣಿರೋ ಎಂದು ಇಕ್ಕುವೆನು ಮುಂಡಿಗೆಯ ಇದನೆತ್ತುವರಂಟೇ ದಾಸಂಪ್ರಿಯ ರಾಮನಾಥಂ ಪ್ರಭುವೇ.

(೩) ಎಲ್ಲ ದೇವರಿಗೆ ವಲ್ಲಭ ನಮ್ಮ ಏಕೋದೇವನೇ ದೈವವೆಂದು ಹಾಕುವಿರಿ ಮುಂಡಿಗೆಯ. ಏಕೋದೇವನೇ ದೈವ ಸಹಜ. ಏಕೋ ದೇವ ಮೂರು ಅಕ್ಷರ ಮೂರ್ತಿಗಳಾಗಿ ಬಂದು ಮೂರು ಲೋಕವನು ಹುಟ್ಟಿಸಿದ ಕಾಣಿರೋ. ಆನೆ ಮೊದಲು ಇರುಹೆ ಕಡೆ ಎಂಭತ್ತು ನಾಲು ಲಕ್ಷ ಜೀವರಾಶಿಗಳನು ಹುಟ್ಟಿಸುವುದಕ್ಕೆ ಬ್ರಹ್ಮನೆಂಬುವ ಮೂರ್ತಿಯಾದ. ರಕ್ಷಿಸುವುದಕ್ಕೆ ವಿಷ್ಣುವೆಂಬುವ ಮೂರ್ತಿಯಾದ. ಭಕ್ಷಿಸುವುದಕ್ಕೆ ರುದ್ರ ನೆಂಬುವ ಮೂರ್ತಿಯಾದ. ಈ ಮೂರು ಮೂರ್ತಿಗಳು ಕೂಡಲಿಕ್ಕೆ ಈಶ್ವರನೆಂಬುವದೊಂದು ಆಕಾರ ಲಿಂಗ ಮೂರ್ತಿ ಆಯಿತ್ತು ಕಾಣಿರೋ. ಆ ಲಿಂಗವನು ಕೊಂಡು ನರರು ಸುರರು ತೆತ್ತೀಸ ಕೋಟಿ ದೇವಾದಿ ದೇವರ್ಕ್ಳಗಳೆಲ್ಲರು ತಮ್ಮ ಜಾತಿ ಧರ್ಮದ ನೀತಿ ಆಚಾರದ ನಡೆ ನುಡಿಯನು ಅರಿತು ಪೂಜೆಯ ಮಾಡಿದರೇನಯ್ಯ? ಲಿಂಗಮಯ ವೆಂಬುದೊಂದೇ ಕಾಣಿರೋ. ಈ ಕಲಿಯುಗದಲ್ಲಿ ಹುಟ್ಟಿದ ಮನುಜರು ಆ ಲಿಂಗವನು ತಮ್ಮ ಶಿರದಲ್ಲಿ ಕಟ್ಟಿಕೊಂಡು ಶಿಖಿಯಲ್ಲಿ ಪೂಜೆಯ ಮಾಡಿದರೆ ಶಿಖಿಯಲಿಂಗವೆಂಬುವರು. ಗುಡಿಯಲ್ಲಿ ಪೂಜೆಯ ಮಾಡಿ ದರೆ ಸ್ಥಾವರಲಿಂಗವೆಂಬುವರು. ಕೊರಳಲ್ಲಿ ಇದ್ದರೆ ಇಷ್ಟಲಿಂಗವೆಂಬು

ವರು. ಇಂತು ಬೇರೆ ಬೇರೆ ಭಿನ್ನವನು ಮಾಡಿ ನುಡಿವ ಖುಲ್ಲಕುಹಕ ಮರುಳ ಮನುಜರು ಮಾಡಿದ ಭಕ್ತಿ ಏನಾಯಿತ್ತು ಎಂದರೆ ತಾಯ ಗರ್ಭದಲ್ಲಿ ಹುಟ್ಟಿ ತಾಯ ಯೋನಿಯಲ್ಲಿ ಬಂದು ತಾಯ ಭೋಗಿಸಿ ದಂತಾಯಿತ್ತು ಕಾಣಿರೋ ದಾಸಂ ಪ್ರಿಯ ರಾಮನಾಥಂ ಪ್ರಭುವೇ.

(೪) ಹರ ಹೆಚ್ಚು, ಹರಿ ಕಡಿಮೆ ಎಂದು ಜರಿದಾಡುವಂತಹ ನರಕೀಟಕರು ನೀವು ಕೇಳಿರೋ. ಹರನ ಮಗ ಹರಿಯಾದ. ಹರಿಯ ಮಗ ಬ್ರಹ್ಮನಾದ. ಇರುಹೆ ಕಡೆ ಆನೆ ಮೊದಲು ಎಂಬತ್ತುನಾಲ್ಕು ಲಕ್ಷ ಜೀವ ರಾಶಿಗಳೆಲ್ಲ ಬ್ರಹ್ಮನಿಂದ ಆದವು ಕಾಣಿರೋ. ಉಂಬಲ್ಲಿ ಉಡುವಲ್ಲಿ ಬ್ರಹ್ಮ. ಕೊಂಬಲ್ಲಿ ಕೊಡುವಲ್ಲಿ ಬ್ರಹ್ಮ. ಭಕ್ತಿಯ ಮಾಡುವಲ್ಲಿ ಬ್ರಹ್ಮ. ಯುಕ್ತಿಯ ಹೇಳುವಲ್ಲಿ ಬ್ರಹ್ಮ. ಮುಕ್ತಿಪದವ ಪಡೆವಲ್ಲಿ ಬ್ರಹ್ಮಮಯ ತಾನೇ ಆಗಿಹ ಕಾಣಿರೋ. ಹರನು ಹನ್ನೊಂದು ಅವತಾರವ ತಾಳಿ ದೇವ ದಾನವ ಮಾನವರನೆಲ್ಲ ಸಂಹಾರವ ಮಾಡಿ ಹರಿಯಾಗಿ ಬಂದ ಕಾಣಿರೋ. ಹರಿ ಹತ್ತವತಾರವ ತಾಳಿ ವರಾಹಕ್ಕೆ ಸರಿಯಾಗಿ ಬಂದ ನರಕಾಸುರನ ಸಂಹಾರ ಮಾಡಿ ನಾರಾಯಣನಾದ ಕಾಣಿರೋ. ಹರನೇ ಗುರುವಾಗಿ ಹರಿಯೇ ಭಕ್ತನೆಂದು ಅರಿತು ನೋಡುವ ಅಣ್ಣಗಳ ಅಂತರಂಗದಲ್ಲಿ ಹರಿ ಹರರು ಏಕಾಕಾರವಾಗಿರ್ಪರು ಕಾಣಿರೋ. ಎಂದು ನಾಲ್ಕು ವೇದ ಆರು ಶಾಸ್ತ್ರ ಇಪ್ಪತ್ತೆಂಟು ದಿವ್ಯಾಗಮ ಮೂವತ್ತೆರಡು ಉಪನಿಷತ್ ಶಾಸ್ತ್ರಂಗಳು ಹೇಳುತ್ತಿಹವು. ಇದನರಿತು ಅರಿಯದೆ ಹರ ಹೆಚ್ಚು ಹರಿ ಕಡಿಮೆ ಎಂದು ಜರಿದಾಡುವಂತಹ ನರಕೀಟಕರ ಮಾತು ಕರ್ಣದಲ್ಲಿ ಕೇಳಲಾಗದು ಕಾಣಾ ದಾಸಂಪ್ರಿಯ ರಾಮನಾಥಂ ಪ್ರಭುವೇ.

(೫) ನಾವು ಹರ ಭಕ್ತರು ಹರಿಯ ಪೂಜೆಯಗೊಂಡು ಹರಿಗೆ ಶರಣೆನ್ನಲಾಗದು ಎಂದು ಹೇಳುವ ಅಣ್ಣಗಳಿಗೆ ನಿಮಗೆ ಆಧಾರವೆಂಬ ಚಕ್ರದಲ್ಲಿ ಬ್ರಹ್ಮನೆಂಬವ ಪುರುಷ ಸರಸ್ವತಿ ಎಂಬ ಶಕ್ತಿ ಇವರಿಬ್ಬರು ಸತಿ ಪತಿಗಳಾಗಿಪ್ಪರು ಕಾಣಿರೋ. ನಿಮ್ಮ ಸ್ವಾಧಿಷ್ಠಾನವೆಂಬ ಚಕ್ರದಲ್ಲಿ ವಿಷ್ಣುವೆಂಬ ಪುರುಷ ಶ್ರೀ ಲಕ್ಷ್ಮಿ ಎಂಬ ಶಕ್ತಿ ಇವರಿಬ್ಬರು ಸತಿಪತಿಗಳಾಗಿ ಇರುತ್ತಿಹರು ಕಾಣಿರೋ. ನಿಮಗೆ ಮಣಿಪೂರಕ ಚಕ್ರದಲ್ಲಿ ರುದ್ರ ಪುರುಷ ಪಾರ್ವತೀದೇವಿ ಎಂಬ ಶಕ್ತಿ ಇವರಿಬ್ಬರು ಸತಿಪತಿಗಳಾಗಿರುತ್ತಿಹರು ಕಾಣಿರೋ. ನಾವು ಹರನ ಭಕ್ತರು, ಹರಿಯ ನೆನೆಯಲಾಗದು ಎಂಬುವ ಅಣ್ಣಗಳ ಅಂಗದೊಳಗೆ ಹರಿಯೇ ನೆಲೆಗೊಂಡು

ಇಹನು. ಹರಗೆ ವಂದಿಸಿ ಹರಿಯ ನಿಂದಿಸುವಂತಹ ಹಂದಿಗಳ ಮುಖವ ನೋಡಲಾಗದು ಕಾಣಾದಾಸಂಪ್ರಿಯ ರಾಮನಾಥಂ ಪ್ರಭುವೇ.

(೬) ಬ್ರಹ್ಮನು ಭವಿ ಎಂದು ಜರಿದಾಡಿದರೇನಯ್ಯ? ಬ್ರಹ್ಮಂಗೆ ಕುಂದಾಯಿತ್ತೇ? ಕುಂದಾಗಲಿಲ್ಲ. ಬ್ರಹ್ಮನೇ ಭವಿ ಎಂದು ಜರಿದಾಡುವ ಕುನ್ನಿಗಳ ತೃಷೆಯ ಕಳೆಯಬೇಕೆಂದು ಬ್ರಹ್ಮದೇವರೇ ಅನ್ನಪ್ರಸಾದವಾಗಿ ಬಂದ ಕಾಣಿರೋ. ವಿಷ್ಣುವೇ ಭವಿ ಎಂದು ಜರಿದಾಡಿದರೇನಯ್ಯ? ವಿಷ್ಣುವಿಂಗೆ ಕುಂದಾಯಿತ್ತೇ? ಕುಂದಾಗಲಿಲ್ಲ. ವಿಷ್ಣುವೇ ಭವಿ ಎಂದು ಜರಿದಾಡುವ ಕುನ್ನಿಗಳ ತೃಷೆಯ ಕಳೆಯಬೇಕೆಂದು ಹರಿ ಎಂಬ ಜಲವಾಗಿ ಬಂದ ಕಾಣಿರೋ. ಬ್ರಹ್ಮನೆಂಬ ಬೋನವನುಂಡು ಹರಿ ಎಂಬ ಜಲವ ಭಕ್ಷಿಸಿ ಬ್ರಹ್ಮ ಭವಿ ವಿಷ್ಣು ಭವಿ ಎಂದು ಜರಿದಾಡುವಂತಹ ಕುನ್ನಿಗಳು ಮಾಡಿದ ಭಕ್ತಿ ಏನಾಯಿತ್ತು ಎಂದರೆ ಬೀದಿಯೊಳಗೆ ಬಿದ್ದಿದ್ದ ಎಕ್ಕಡವ ಹಾದಿಯೊಳಗೆ ಹೋಗುವ ಶುನಕ ಕಂಡು ಕೊಂಡು ಓಡಿ ಹೋದ ಪರಿಯಾಯಿತ್ತು ಕಾಣಿರೋ. ಅದ ಕಂಡು ನಗುತಿದ್ದಾತ ದೇವಾಂಗ ದಾನಿ ದಾತ × ಆಲ್ದಿಯ ಮನು ಸಂಪೂರ್ಣ ರಾಮನಾಥಂ ಪ್ರಭುವೇ.

(೭) ಹರ ಘನವೆಂದು ಪೂಜೆಯ ಮಾಡುವ ಅಣ್ಣಗಳ ಅಂಗದೊಳಗೆ ಹೊರಗೆ ಹರಿಯೇ ನೆಲೆಗೊಂಡಿರ್ಪನಯ್ಯ. ಹರಿಯೇ ಘನವೆಂದು ಪೂಜೆಯ ಮಾಡುವ ಅಣ್ಣಗಳ ಅಂಗದ ಒಳಗೆ ಹೊರಗೆ ಹರನೇ ನೆಲೆಗೊಂಡಿರ್ಪನಯ್ಯ. ಅದು ಎಂತೆಂದರೆ ಹರನೇ ಘನವೆಂದು ಪೂಜೆಯ ಮಾಡುವ ಅಣ್ಣಗಳ ಆಧಾರ ಚಕ್ರದಲ್ಲಿ ಬ್ರಹ್ಮವೇ ನಲೆಗೊಂಡಿರ್ಪನಯ್ಯ. ಸ್ವಾಧಿಷ್ಠಾನ ಚಕ್ರದಲ್ಲಿ ಹರಿಯೇ ನೆಲೆಗೊಂಡಿರ್ಪನಯ್ಯ. ಶಿಖಾಚಕ್ರದಲ್ಲಿ ಹರನೇ ನಲೆಗೊಂಡಿರ್ಪನಯ್ಯ. ಅದೆಂತೆಂದರೆ:— ಹರಗೂ ಹರಿಗೂ ಸರಿ ಇಲ್ಲವೆಂದು ಹೇಳುವ ಅಣ್ಣಗಳು ಶಿರದಲ್ಲಿ ಕಟ್ಟಿ ಕರದಲ್ಲಿ ಪೂಜೆಯ ಮಾಡುವ ಲಿಂಗದ ಆಧಾರ ಚಕ್ರವೇ ಬ್ರಹ್ಮ, ಸ್ವಾಧಿಷ್ಠಾನ ಚಕ್ರವೇ ಹರಿ,

---

× ಟೀಪು:— ಈ ವಚನಕಾರನು ಆಲದಿಯವನೆಂದು ತೋರುತ್ತದೆ. ಇದು ಕಲಬುರ್ಗಿ ಜಿಲ್ಲೆಯಲ್ಲಿ ಇದೆ. ಏಕಾಂತದ ರಾಮಯ್ಯನು ಇದೇ ಗ್ರಾಮದವನಿದ್ದು ಮುಂದೆ ಅವನು ಅಬ್ಬಲೂರಿಗೆ ಹೋದನು. ಅಬ್ಬಲೂರು ಶಾಸನದಲ್ಲಿ ಈ ಗ್ರಾಮವು ಆಳಂದೆ ಎಂದು ಬರೆಯಲ್ಪಟ್ಟದೆ.

ಶಿಖಾ ಚಕ್ರವೇ ಹರ. ಅದು ಎಂತೆಂದರೆ ನಿರಾಕಾರ ಪರಬ್ರಹ್ಮನೆಂಬ ಏಕ ಮೂರ್ತಿ ತ್ರಿಮೂರ್ತಿಯಾಗಿ ತ್ರಿಮೂರ್ತಿಯೇ ಏಕಮೂರ್ತಿಯಾಗಿ ಬಂದು ಹರಿಗೆ ಸರಿ ಇಲ್ಲವೆಂದು ಹೇಳುವ ಅಣ್ಣಗಳ ಅಂಗದ ಒಳಗೆ ಹೊರಗೆ ಪೂಜೆಗೊಂಬುವ ಪರಿ ಭೇದವನರಿಯದೆ ನರನಾಯಕ ಸುರನಾಯಕರೆಲ್ಲ ಕಾಲಚಕ್ರನೆಂಬ ಪ್ರಳಯಕ್ಕೆ ಒಳಗಾಗಿ ಹೋದರು. ಅದು ಎಂತೆಂದರೆ. ಹರನೇ ಘನವೆಂದು ಪೂಜೆಯ ಮಾಡುವ ವಾದಿಗಳು ಸ್ಥಿರವಿಲ್ಲದೆ ಘುರ ಮರಣಕ್ಕೆ ಒಳಗಾಗಿ ಎಂಬತ್ತುನಾಲ್ಕು ಲಕ್ಷ ಜೀವ ರಾಶಿಗಳ ಯೋನಿಯಲ್ಲಿ ಹುಟ್ಟಿ ಚರಿಸಾಡುವ ಕಾಲ ಮುರಿಯಿತ್ತೇ? ಮುರಿಯಲಿಲ್ಲ. ಹರಿಯೇ ಘನವೆಂದು ಪೂಜೆಯ ಮಾಡುವ ವಾದಿಗಳು ಸ್ಥಿರವಿಲ್ಲದೆ ಘುರಮರಣಕ್ಕೆ ಒಳಗಾಗಿ ಎಂಬತ್ತು ನಾಲ್ಕು ಲಕ್ಷ ಜೀವ ರಾಶಿಗಳ ಯೋನಿಯಲ್ಲಿ ಹುಟ್ಟಿ ಚರಿಸಾಡುವ ಕಾಲ ಮುರಿಯಿತ್ತೆ? ಮುರಿಯಲಿಲ್ಲ ಅದು ಎಂತೆಂದರೆ:— ಹರಿ ಹರ ಬ್ರಹ್ಮಾದಿಗಳು ಸರಿಯಲ್ಲವೆಂದು ಹೇಳುವ ಅಣ್ಣಗಳ ಸರ್ವಾಂಗ ದಲ್ಲಿ ಹರಿಹರಬ್ರಹ್ಮಾದಿಗಳು ನೆಲೆಗೊಂಡಿರ್ಪರಯ್ಯ. ಅದು ಎಂತೆಂದರೆ ನಡುಪಾದವು ಬ್ರಹ್ಮ, ಕಣಕಾಲವು ಹರಿ, ತೊಡೆಯೇ ಹರ, ನೀಡಿ ಮಾಡುವ ಹಸ್ತವೇ ಬ್ರಹ್ಮ, ಹಸ್ತ ಕಂಬಿಯೇ ಹರಿ, ತೋಳೇ ಹರ, ನೋಡುವ ನೇತ್ರದ ಕೆಂಪೇ ಬ್ರಹ್ಮ, ಕಪ್ಪೇ ಹರಿ, ಬಿಳಿದೇ ಹರ, ಒಳಗೆ ಸುಳಿದಾಡುವ ಛಾಯಾ ಮಾಯದ ಪುರುಷನೇ ಪರಬ್ರಹ್ಮ, ಅದು ಎಂತೆಂದರೆ ಹರಿಹರಬ್ರಹ್ಮಾದಿಗಳು ಸರಿಯಾಗಿ ಬಂದು ಎಂಭತ್ತು ನಾಲ್ಕುಲಕ್ಷ ಜೀವರಾಶಿಗಳ ಡಿಂಬವೆಂಬುವ ಮನೆಯೊಳಗೆ ಪೂಜೆಗೊಂಬುವ ಭೇದವೆಂತೆಂದರೆ, ನಿರಾಕಾರ ಪರಬ್ರಹ್ಮನೇ ಹರನಾದ. ಹರನ ವಾಮಭಾಗವೇ ಹರಿಯಾದ. ಹರಿಯಿಂದ ಬ್ರಹ್ಮನಾದ. ತ್ರಿಮೂರ್ತಿಗಳು ನಿರಾಕಾರ ಪರಬ್ರಹ್ಮನ ಗರ್ಭದಲ್ಲಿ ಹುಟ್ಟಿದ ಬ್ರಹ್ಮಬೀಜವೆಲ್ಲ ಒಂದೇ ಸರಿ ಎಂದು ಇಕ್ಕುವೆನು ಮುಂಡಿಗೆಯ ಎಂಬುದನೆತ್ತುವರುಂಟೇ ದಾಸಂಪ್ರಿಯ ರಾಮನಾಥಂ ಪ್ರಭುವೇ.

ಈ ವಚನಗಳಿಂದ ನಾವು ಈ ಲೇಖದ ಆರಂಭದಲ್ಲಿ ಹೇಳಿದ ಸಂಗತಿಗಳ ಸತ್ಯತೆಯು ಸ್ಪಷ್ಟವಾಗುತ್ತದೆ.

ಮುಂದೆ ಸಾಗುವದು.

---

# ವೀರಶೈವ ಧ್ವಜ.

(ಲೇ:- ವಿ॥ ಕೆ. ಡಿ. ಬ್ಯಾಳಿ)

ಹೊಳೆಯುಲೆಮ್ಮಾ ವೀರಶೈವಧ್ವಜವಿಂದೇ ।
ಬೆಳೆಯುಲೆಮ್ಮಯ ಸಕಲಭಾಗ್ಯಸೊಗಸಿಂದೆ ॥ಪಲ್ಲ॥

ಗುರು ರೇಣುಕರು ಶರಣ ಬಸವೇಶ್ವರಾದಿಗಳು ।
ನೆರೆ ನಿರಂಜನ ಪ್ರಭುವರೇಣ್ಯ ಜಂಗಮರು ॥
ಶರಣೆ ಮಾದೇವಿ ನಾಗಮ್ಮ ನೀಲವ್ವಗಳು ।
ಹರನೆ, ನಿನ್ನ ಸ್ವರೂಪದಿಂದೆ ಮೆರೆದಿಹರು ॥೧॥

ಹರಿಹರನು ರಾಘವಾಂಕನು ಪಾಲ್ಕುರಿಕೆ ಸೋಮ ।
ವಿರುಪಾಕ್ಷ ಲಕ್ಕಣ ಷಡಕ್ಷರಿಯು ಭೀಮ ॥
ಮೆರೆವ ಚಾಮರಸ ನಿಜಗುಣಯೋಗಿ ಸರ್ವಜ್ಞ ।
ಹರ, ನಿನ್ನ ಶರಣರಿರವನ್ನು ಬೆಳಗಿಹರು ॥೨॥

ಕಿತ್ತೂರು ಕೊಡಗು ಬೆಳವಡಿ ಸ್ವಾದಿ ಕೆಳದಿಗಳು ।
ಉತ್ತಮೋತ್ತಮ ವೀರಶೈವ ರಾಜ್ಯಗಳು ॥
ಮತ್ತೆ ನೂರೆಂಟು ಸಂಸ್ಥಾನಗಳು ಸಂಪದವ ।
ಬಿತ್ತರಿಸಿ ಮೆರೆದವೈ ಹರ, ನಿನ್ನ ದಯದಿ ॥೩॥

ಹರಭಕ್ತಿ ಶಿವಯೋಗ ಸುಜ್ಞಾನ ವೈರಾಗ್ಯ ।
ಗುರುಲಿಂಗ ಚರಸೇವೆ ವಿಶ್ವಪ್ರೇಮಗಳು ॥
ಸರಿಸಮಾನತೆ ಸರ್ವಸ್ವಾತಂತ್ರ್ಯಕಾಯಕಗ- ।
ಳುರುತರದಿ ಶೋಭಿಪವು ಹರ ನಿನ್ನ ಮತದಿ ॥೪॥

ಸಕಲ ಕಲೆ ಕೈಕಸಬು ಮಂತ್ರಿಪದ ರಾಜ್ಯಪದ ।
ವಿಕಸಿತಸುಷಟ್‌ಸ್ಥಲದ ತತ್ವಂಗಳಿಂದೆ ॥
ಅಕಲಂಕವೆಂದೆನಿಸಿ ವೀರಶೈವ ಸುಧರ್ಮ ।
ಚಕಿಸುತಿದೆ ಹರ, ನಿನ್ನ ಕರುಣದೊಳ್ ನಿರುತ । ॥೫॥

ಇಂತೆಸೆವ ವೀರಶೈವ ಸುಧರ್ಮ ಶರಧಿಯುಳಿ ।
ಸಂತಸದೊಳೊಗೆತಂದ ರತ್ನರಾಶಿಯನು ॥
ಸಂತತದೊಳಾವು ಸಂಘಟನೆಯಿಂ ರಕ್ಷಿಸಲು ।
ಕಂತುಹರ ಕರುಣವನು ನೀಡಲೈನಿರುತ ॥೬॥

ಬೇಂಟೆ ಬೇಡೆಂದು ದಣ್ಣಾಯ್ಕರುಂ ಪೇಳುತಿರೆ
ಬೇಂಟೆಯೊಂದಂ ಮಾಣ್ಬುದಿನ್ನೆಂದು ನುಡಿಯುತಿರೆ

ಇತ್ತಲಾ ವನದ ಕಾರಣಿಕಮೃಗತತಿ ನೆರೆದು
ಹೊತ್ತು ಹೋಯಿತ್ತು ಬಾರಂ ಭಕ್ತನೆಂದೆಂದು
ಬಂದುಳಿದ ಮೃಗನಿಕರ ಒಂದಾಗಿ ನೋಡುತಂ
ನಿಂದು ತಮ್ಮೊಳಗುಮ್ಮಳಂ ಪುಟ್ಟೆ ನೋಡುತಂ
ಜೊಮ್ಮಣ್ಣನೆಂಬವಂ ಸುಕೃತಸಿರಿವಲ್ಲಭಂ
ಎಮ್ಮೆಮ್ಮ ಜನ್ಮವಂ ನೀಗುವಾ ದುರ್ಲಭಂ
ಎಂದಾ ಪುರದ ಸುತ್ತಲುಂ ನೆರೆದು ನಿಂದಿರ್ದು
ದೇವಲೋಕಂ ತಪ್ಪಿತೆಮಗೆ ಶಿವಧೋ ಎಂದು
ಭೂವಳಯದೊಳಗಿನ್ನು ಪರಮಸುಖ ಬೇರೆಂದು
ಕಾರಣಿಕ ಮೃಗವೆಲ್ಲ ತೀರ್ದವೆಂದೆನುತಮಿರೆ
ಮಾರಾರಿಯಲ್ಲಿಗೈದುವೆವೆಂದು ಪೇಳುತಿರೆ

ಬೆರಗಾಗಿ ದಂಡನಾಯಕರು ಕಂಗಳಂ ಮುಚ್ಚಿ
ನೆರೆ ಕೌತುಕಂಗೊಂಡು ಶಿವನ ಮಹಿಮೆಗೆ ಮೆಚ್ಚಿ
ಅಸಮಾಕ್ಷ ನೀನೊಲಿಯೆ ಪಾಪವೇ ಪುಣ್ಯವದು
ಒಸೆದು ನೀನೊಲಿದಂಗನೀತಿಯೇ ನೀತಿಯದು
ದುಷ್ಕಾರ್ಯವೇ ಕಾರ್ಯವಕ್ರಮವೆ ಕ್ರಮವು ಅದು
ದುಷ್ಕುಲಂ ಸತ್ಕುಲವಧರ್ಮವೇ ಧರ್ಮವದು
ಎಂದು ಪದ್ಯವನೋದಿ ಹಾರೈಸಿ ಹಿಗ್ಗುತಿರೆ
ಇಂದುಧರನಾಜ್ಞೆಗತಿ ಕೌತುಕಂಬಡುತಮಿರೆ
ನೋಡಿ ದಣ್ಣಾಯ್ಕರನವರೂರ್ಗೆ ಕಳಿಪುತಂ
ಕೂಡೆ ಸಮಶೀಲಗುಣಸಂತತಿಗೆ ಪೇಳುತಂ
ಪೊರಮಟ್ಟು ಜೊಮ್ಮಣ್ಣನಲ್ಲಿ ಬೇಂಟೆಗೆ ನಲಿದು
ಕರೆಗೊರಲನಾಜ್ಞೆಯುಂ ಹೊತ್ತಭವನಂ ನೆನೆದು
ನಡೆತಂದು ವನದೊಳಗೆ ಪೊಕ್ಕು ನಲವಿಂದಂದು
ಮೃಡ ಭೀಮನಾಥ ಕರುಣಿಸು ಸಾಲ್ವುದೆನಗೆಂದು
ತನ್ನ ಬರವಂ ಪಾರ್ದು ನಿಂದ ಮೃಗನಿಚಯಮುಂ

ತನ್ನ ಬಾಣಂಗಳಿಂದೆಚ್ಚನಾ ಕಾಯುವಂ
ಎಸಲಲ್ಲಿ ಮೃಗವೆಲ್ಲ ಬಿದ್ದವವನಿಯ ಮೇಲೆ
ಪೊಸ ಪುಷ್ಪವೃಷ್ಟಿ ಸುರಿತಂದವಾತನ ಮೇಲೆ

ದುಂದುಭಿಸ್ವನ ಉಣ್ಮಿದವು ಗಗನತಳದೊಳಗೆ
ಬಂದುದೊಂದನುಪಮದ ಪುಷ್ಪಕಂ ನಭದೊಳಗೆ
ಬಂದ ಪುಷ್ಪಕವನಾ ಜೊಮ್ಮಣ್ಣನೇರಿದಂ
ನಿಂದ ಶರಣರು ನೋಡೆ ಗಗನಕ್ಕೆ ಹಾರಿದಂ
ಮೃಗಕುಲದ ಪುಷ್ಪಕಂವೆರಸಿ ನೆಗೆದಂ ನೋಡ
ಜಗವೆಲ್ಲ ಬೆರಗಾಗೆ ಪೋಗುತಿರ್ದಂ ಕೂಡೆ
ಬಂದು ನಂದೀಶ್ವರನ ಬಾಗಿಲೊಳಗಂ ಪೊಕ್ಕು
ಇಂದುಧರನಂ ಕಂಡು ಭಕ್ತಿಸುಖವಂ ಮಿಕ್ಕು
ದೇವ ಮೃಗವೇಷದ ಋಷಿಗಳೆಲ್ಲರ ತಂದೆ
ನಾವ ಪರಿಯಧಿಕರ್ಗೆ ಕರುಣಿಸುವುದೆಲೆ ತಂದೆ
ಎಂದು ಮೆಯ್ಯಿಕ್ಕಿ ಪಟ್ಟಿರ್ದ ಜೊಮ್ಮಣ್ಣನಂ
ಇಂದುಧರನಕ್ಕರಿಂ ನೋಡಿ ಹರುಷಂಗೊಂಡು
ಪಿಡಿದಪ್ಪಿ ತೆಗೆದಪ್ಪಿ ನೇಹದಿಂ ಮುಂಡಾಡಿ
ನುಡಿದು ನಂದೀಶಂಗೆ ಬೆಸಸುತಂ ಕೊಂಡಾಡಿ
ಎನ್ನ ನಿಂದೆಗೆ ಕೋಪಿಸುತ ಕೊಂದರಿಂತುಂಟೆ
ಎನ್ನ ಭಕ್ತರ್ಗೆಯಾನಲ್ಲದಿನ್ನೊಂದುಂಟೆ
ಭಾಪುರೇ ಜೊಮ್ಮಣ್ಣ ಧೀವುರೇ ಜೊಮ್ಮಣ್ಣ
ಭಾಪು ಮಝು ಭಾಪೆನ್ನ ಭಕ್ತನಿಧಿ ಜೊಮ್ಮಣ್ಣ
ಎಂದು ಜೊಮ್ಮಣ್ಣಂಗೆ ಗಣಪದವಿಯಂ ಕೊಟ್ಟು
ಬಂದ ಋಷಿವೃಂದಮಂ ರುದ್ರಲೋಕದೊಳಿಟ್ಟು
ಹೊಸ ಜಡೆಯ ಶಶಿಕಳೆಯ ವಿಷಕಂಠನೊಪ್ಪಿದಂ
ಬಿಸುಗಣ್ಣ ಮಿಸುಪ ನವಭಸಿತಾಂಗನೊಪ್ಪಿದಂ
ಬ್ರಹ್ಮ ಪಂಚಮ ಶಿರಸ್ಥಿತಹಸ್ತನೊಪ್ಪಿದಂ
ಬ್ರಹ್ಮಾಂಡಫಳಭರಿತ ಕಲ್ಪಕುಜನೊಪ್ಪಿದಂ
ಆಹಾ ಮಹಾಮಹಿಮ ಘನತೇಜನೊಪ್ಪಿದಂ
ಆಹಾಹ ಹಂಪೆಯ ವಿರುಪಾಕ್ಷನೊಪ್ಪಿದಂ

ಕಂದ॥ ಅಮ್ಮಮ್ಮ ಶಂಕರಂಗಿರಿ
ಶಂಮ್ಮದ್ಗುರು ಕೃಪೆಯೊಳೀಗೆ ಸದ್ಭಕ್ತಿಯು ನೊ
ಲ್ದಿರ್ಮ್ಮೆಳು ಚಂದ್ರಾಭರಣಂ
ಜೊಮ್ಮಣ್ಣನ ಕಂದನೆಂದು ಹಂಪೆಯ ರಾಯಂ

---

# ಶಿವಮಹಿಮಾ ರಗಳೆ.

ವೇದದೊಳುಂ ಪುರಾಣನಿಕರಂಗಳೊಳುಂ ಘನಶಾಸ್ತ್ರವೃಂದದೊಳ್ ।
ವಾದಿನೊಳಂ ಸ್ಮೃತಿ ಪ್ರಕರದೋಳ್ ಸಕಲಾಗಮಮಂತ್ರತಂತ್ರದೊಳ್ ।
ಮೇದಿನಿಯೋಳ್ ಪುರಾತನಕುಲಂ ನೆರೆ ತೋರಿದನೇಕದೃಷ್ಟದೊಳ್ ।
ನಾದಮಯಂ ಮಹೇಶನೆ ಘನಂ ಘನವೆಮ್ಮಯ ಹಂಪೆಯೀಶ್ವರಂ ॥ ೧ ॥

ಜಲಜಾಕ್ಷಾಕ್ಷವಿಶಾಲಪಾದನೆ ಘನಂ ಚಂಡಾಂಶುರಾತ್ರೀಶ್ವರ ।
ಜ್ವಲನಾಖ್ಯತ್ರಿಯಕ್ಷನಕ್ಷಯಸುರಶಿರೋಮಾಲಾವಿಶಾಲಂಘನಂ ।
ಗಳದೋಳ್ ಗರಳಮನಿಟ್ಟ ಶಂಭುವೆ ಘನಂ ಕೇಳತ್ಯತಿಷ್ಠದ್ದಶಾಂ ।
ಗುಲನೆಮ್ಮ ಪ್ರಭು ಹಂಪೆಯಾಳ್ದನೆ ಘನಂ ಬ್ರಹ್ಮಾಂಡ ಸಂತಾನದೋಳ್ ।

## ರಗಳೆ

ಶ್ರೀ ಪರಮಗುರು ಶಂಕರಪ್ರಭುವಿನಂಘ್ರಿಯೊಳ್
ಭಾವು ಎನೆ ನೆಗಳ್ದನಾ ಮಾದಿರಾಜಾಂಘ್ರಿಯೊಳ್
ಶ್ರೀಗುರುಮಹಾದೇವರಾಜ್ಞೆಯಂ ಕೈಕೊಂಡು
ಬಾಗಿ ಹಂಪೆಯ ವಿರೂಪಾಕ್ಷನ ವರಂಗೊಂಡು
ಹೇಳಲುದ್ಯೋಗಿಸದೆನೀಶ್ವರನ ಮಹಿಮೆಯಂ
ಭಾಳಾಕ್ಷನೇ ಘನಂ ಘನವೆನಿಪ ಮಹಿಮೆಯಂ
ಆದಡೆನ್ನಕ್ಕರಿಂ ಬಲ್ಲಂತೆ ಬಣ್ಣಿಪೇಂ

ಆದಿಯ ಪುರಾತನರು ಒಲಿಸಿದುದನೆಂದಪೇಂ
ಸಕಲ ವೇದಂಗಳುಂ ಬೊಬ್ಬಿಟ್ಟುದುಂಟಾಗಿ
ಸಕಲಮುಖದಿಂ ಬಣ್ಣಿಸುತ್ತಿರ್ಪುದುಂಟಾಗಿ
ಅದು ಕಾರಣಂ ಗುರುವಿರೂಪಾಕ್ಷನೇ ಘನಂ
ಸದಮಲಂ ಪಂಪಾವಿರೂಪಾಕ್ಷನೇ ಘನಂ
ಅಪ್ರತಿಮನತುಳಬಳನಹಿಕಂಕಣನೆ ಘನಂ
ಅಪ್ರತಿಹತಪ್ರತಾಪಪ್ರಕರನೇ ಘನಂ
ಅತ್ಯತಿಷ್ಠದ್ದಶಾಂಗುಲನಪ್ರತಿಮನೆಂದು
ನಿತ್ಯನೇಕೋರುದ್ರ ನ ದ್ವಿತೀಯ ನೀನೆಂದು
ಪರಮನ ನಮಸ್ಕಾರಮಾಲೆಗೆ ನಮೋ ಎಂದು
ಹರನ ಚರಣಕ್ಕೆ ಕರುಣಕ್ಕಂ ನಮೋ ಎಂದು
ಹರಿಗುಂ ಹರಂತಿಯೆಂದಭವನೇಪತಿಯೆಂದು
ಹರನೆಲ್ಲವಂ ತೀರ್ಚಿ ಕಳೆವನಿತು ದಿಟವೆಂದು
ಸರ್ವಮನ್ಯತ್ಪರಿತ್ಯಾಜ್ಯಮೆನೆ ಶಿವನೆಂದು
ಸರ್ವಗುರುಧರೆಗೆ ಭರ್ಗೋ ದೇವನೆಯೆಂದು

ಇನ್ನುಂ ಪುರಾಣದೊಳು ಮಹಿಮೆಯಂ ಬಣ್ಣಿಪೇಂ
ಪನ್ನಗಾಭರಣನಾಧಿಕ್ಯವಂ ಪೇಳ್ದಪೇಂ
ಹರಿಯಜರ ನಡುವೆ ಹರನುರಿಲಿಂಗವಾದುದುಂ
ಹರಿಬ್ರಹ್ಮರರಸಿ ಕಾಣದೆ ನಿಂದರೆಂಬುದಂ
ಅಂದೊಮ್ಮೆ ಹರಿಯೊಡನೆ ಹುಸಿ ನುಡಿದ ಬ್ರಹ್ಮಂಗೆ
ಒಂದೆಡೆಯೊಳುಂ ಸ್ಥಾನವಿಲ್ಲ ನೋಡಾತಂಗೆ
ಮರೆದಹಂ ಬ್ರಹ್ಮಾಸ್ಮಿ ಎಂದ ಬ್ರಹ್ಮನ ಶಿರಂ
ಹರಿದು ಹೋದುದು ರುದ್ರನಿಂದಲಂತದು ಕರಂ
ಪೋಗೆ ಸೋಮಾಷ್ಟಕವನಲ್ಲಿ ಬಿನ್ನೈಸುತಂ
ವಾಗೀಶನತಿದೈನ್ಯದಿಂದ ಮಿಗೆ ಪೊಗಳುತಂ
ಇರಲಾತನಿಚ್ಛೆಯಿಂ ಸಲಿಗಿ ಶಿರವಂ ಪಿಡಿದು
ಅರರೆ ಕಾಪಾಲಿ ಲೀಲಾಮಾತ್ರದಿಂ ನಡೆದು
ಭಿಕ್ಷುಕನ ವೇಷಮಂ ನಟಿಯಿಸುತ್ತೈಯ್ತಂದು
ಮೋಕ್ಷದಿಂ ದ್ವಾರಾವತಿಗೆ ನಲಿದು ಬರಲಂದು
ಬರಲು ವಿಷ್ವಕ್ಸೇನನಡ್ಡ ಬರೆ ಕಾಣುತಂ

ಈ ಸ್ಥಳದಲ್ಲಿ ಹೇಳಲ್ಪಟ್ಟಿರುವ ಕರಸ್ಥಲವು ಸುಚಿತ್ತವೆಂದು ಭಾವಿಸಬೇಕು. ಇದಕ್ಕೆ ಇಷ್ಟಲಿಂಗವಿದೆ. ಈ ಇಷ್ಟಲಿಂಗವೇ ಶಿವಲಿಂಗದೊಳಗಣ ಆಚಾರಲಿಂಗವಾಗಿರುತ್ತದೆ. ಇದರ ಮುಂದಿನದು ನಯನಸ್ಥಲವು. ಈ ನಯನವು ಸುಬುದ್ಧಿಗೆ ಹಸ್ತವಾದುದೆಂದು ಭಾವಿಸಿ ಕರಸ್ಥಲದ ಇಷ್ಟಲಿಂಗವನ್ನು ನಯನದಲ್ಲಿ ಎವೆ ಹಳಚದೆ ಅನುಮಿಷ ದೃಷ್ಟಿಯಿಂದ ನಿರೀಕ್ಷಿಸುವನು. ಇದೇ ಶಿವಲಿಂಗದೊಳಗಣ ಗುರುಲಿಂಗವು.

ನಯನಸ್ಥಲದ ಮುಂದಿನದು ಹೃದಯಸ್ಥಲವು. ಈ ಹೃದಯವು ನಿರಹಂಕಾರಕ್ಕೆ ಹಸ್ತವೆಂದು ಭಾವಿಸಿ, ಇಲ್ಲಿ ಇಷ್ಟಲಿಂಗವು ಪ್ರಾಣಲಿಂಗವಾಗಿ ವ್ಯವಹರಿಸುವುದು. ಇದೇ ಶಿವಲಿಂಗದೊಳಗಣ ಶಿವಲಿಂಗವು.

ಹೃದಯಸ್ಥಲದ ಮುಂದಿನದು ಮಂತ್ರಸ್ಥಲವು. ಈ ಮಂತ್ರಕ್ಕೆ ಸುಮನವೇ ಹಸ್ತವಾಗಿರುತ್ತದೆ. ಈ ಹಸ್ತದಲ್ಲಿ ಇಷ್ಟ, ಪ್ರಾಣ, ಭಾವ ಈ ಮೂರು ಲಿಂಗಗಳನ್ನು ಒಳಕೊಂಡು ತೋರುವ ಮಹಾಲಿಂಗವು ಪಂಚಾಕ್ಷರೀ ಮಂತ್ರಸ್ವರೂಪವಾಗಿ ವ್ಯವಹರಿಸುತ್ತದೆ. ಇದೇ ಶಿವಲಿಂಗದೊಳಗಣ ಜಂಗಮಲಿಂಗವು.

ಈ ಮಂತ್ರಸ್ಥಲದ ಮುಂದಿನದು ತ್ರಿಕೂಟಸ್ಥಲವು. ಈ ಸ್ಥಲಕ್ಕೆ ಹಸ್ತವಾಗಿರುವದು ಸುಜ್ಞಾನವು. ಈ ಸುಜ್ಞಾನ ಹಸ್ತದಲ್ಲಿ ಅರಿವು ಎಂಬ ಶಿವತತ್ವವು ಮುಂದುಗೊಳ್ಳಲು, ಅಲ್ಲಿ ಇಷ್ಟಲಿಂಗಕ್ಕೆ ಮಾಡುವಾತ, ಕೈಕೊಳ್ಳುವಾತ, ಮತ್ತು ಪೂಜಾದ್ರವ್ಯ ಇವೆಲ್ಲವೂ ಒಂದೇ ಎಂದು ಭಾವಿಸಿ ಆಚರಿಸುವನು. ಇದೇ ಶಿವಲಿಂಗದೊಳಗಣ ಪ್ರಸಾದಲಿಂಗವಿರುತ್ತದೆ.

ಈ ಮಂತ್ರಸ್ಥಲದ ಮುಂದಿನದು ಲಯಸ್ಥಲವಿರುತ್ತದೆ. ಇದರಲ್ಲಿ ಹಸ್ತವಾಗಿರುವುದು ಸದ್ಭಾವವು. ಈ ಕರತಾಣದಲ್ಲಿ ತಮ್ಮಂಗವನ್ನು ಅಡಗಿಸಿ ವಿಶ್ರಾಂತಿಯನ್ನು ಹೊಂದಬೇಕು. ಇದೇ ಶಿವಲಿಂಗದೊಳಗಣ ಮಹಾಲಿಂಗವು.

ಈ ಪ್ರಕಾರ ಶಿವಲಿಂಗವು ಮೊದಲು ಕರಸ್ಥಲ, ನಯನಸ್ಥಲ, ಹೃದಯಸ್ಥಲ, ತ್ರಿಕೂಟಸ್ಥಲ, ಮತ್ತು ಕಡೆಗೆ ಲಯಸ್ಥಲ, ಹೀಗೆ ಆಯಾಸ್ಥಲಗಳಲ್ಲಿ ವ್ಯವಹರಿಸುತ್ತ ಕಡೆಗೆ ಲಯಸ್ಥಲವನ್ನು ಹೊಂದುವದು. ಹೀಗೆ ಶಿವಲಿಂಗದ ಷಡ್ವಿಧಗಳಿವೆ.

(೬೩) ಷಡ್ವಿಧ ಜಂಗಮಲಿಂಗಃ— ಇವು ಸ್ವಯ, ಚರ ಪರ, ಪರಿಣಾಮಿ, ನಿರುಪಾಧಿಕ, ಪರಿಪೂರ್ಣ, ಎಂದಿರುತ್ತವೆ. ಜಂಗಮಲಿಂಗವು, ಇಲ್ಲಿ ಪ್ರಾಣಲಿಂಗಿಸ್ಥಲಕ್ಕೆ ಸಂಬಂಧಿಸಿದುದು. ಇದು ಆಚಾರಲಿಂಗದಲ್ಲಿ ಯಜನಸ್ವರೂಪುಳ್ಳದು. ಆದರೆ ಮುಂದೆ ಅದು ಪ್ರಗತಿಯನ್ನು ಹೊಂದುತ್ತ ಬೋಧಾ ದೀಕ್ಷೆಯಲ್ಲಿ ಬೋಧೆಯನ್ನು ಹೊಂದಿ ಆಮೇಲೆ ಪಂಚಾಕ್ಷರೀ ಮಂತ್ರರೂಪವಾಗಿ ಮುಂದೆ ಇಲ್ಲಿ ಅರಿವಿನ ಆಚರಣೆಯುಳ್ಳದ್ದಾಗಿರುತ್ತದೆ. ಆದರೆ ಈ ಆಚರಣೆಗೆ ವಿಶಿಷ್ಟ ಕ್ರಿಯೆ ಎಂಬ ಹೆಸರು. ಅದರ ಹಿಂದಿನ ಕ್ರಿಯೆಗಳಿಗೆ ಮಾರ್ಗಕ್ರಿಯೆಗಳೆಂಬ ಹೆಸರು.

ಈ ಅರಿವಿನ ಆಚರಣೆಗಳ ಮೂಲಕ ಅನುಕ್ರಮವಾಗಿ ಸ್ವಯ ಜಂಗಮ, ಚರಜಂಗಮ, ಪರಜಂಗಮ, ಪರಿಣಾಮಿ ಜಂಗಮ, ನಿರುಪಾಧಿಜಂಗಮ, ಪರಿಪೂರ್ಣಜಂಗಮ, ಎಂದು ಹೇಳಲ್ಪಡುವನು. ಇಲ್ಲಿ ಜಂಗಮಲಿಂಗವು ಅನೇಕ ಬಗೆಯ ಬೋಧಾರೂಪುಳ್ಳದಾಗಿ ವ್ಯವಹರಿಸುತ್ತದೆ.

ಸ್ವಯಜಂಗಮನು ಶಿವಾನುಭವವನ್ನು ಬೋಧಿಸುತ್ತ ಸ್ವಸ್ಥಾನದಲ್ಲಿರುವನು. ಅನ್ಯಾಧೀನನಾಗಿರುವದಿಲ್ಲ. ಶಿವಧ್ಯಾನಪರಾಯಣನಾಗಿರುತ್ತಾನೆ. ಇದು ಜಂಗಮಲಿಂಗದೊಳಗಿನ ಆಚಾರಲಿಂಗವು.

ಚರಜಂಗಮನು ಪಂಚಮುದ್ರಾಸಮೇತನಾಗಿ ತನಗೆ ದೊರಕಿದ್ದನ್ನು ಜಂಗಮಕ್ಕೆ ನೀಡಿ ಅವನು ಹೇಳಿದ ಜ್ಞಾನಾನುಭವ ಪ್ರಸಾದವನ್ನು ತೆಗೆದುಕೊಂಡು ಅನುಭವಿಸುತ್ತಾನೆ. ಹೀಗೆ ಅನುಭವಿಸುತ್ತ ಪಾವನ ಮೂರ್ತಿಯಾಗಿ ಧರ್ಮೋದ್ಧಾರ ಮಾಡುತ್ತ ಚರಿಸುತ್ತಾನೆ. ಇದು ಜಂಗಮಲಿಂಗದೊಳಗಣ ಗುರುಲಿಂಗವು.

ಪರಜಂಗಮನು ಭಕ್ತಿ ಜ್ಞಾನ ವೈರಾಗ್ಯವಿಡಿದು ಆಚರಿಸುವನು. ಪರಾತ್ಪರವಾದ ಮೋಕ್ಷ ಸ್ವರೂಪನಾಗಿರುತ್ತಾನೆ. ಸ್ಥಾವರ ಜಂಗಮಕ್ಕೆಲ್ಲ ಅಧಿಷ್ಠಾನಕರ್ತನಾಗಿ ಆಚರಿಸುತ್ತಾನೆ. ಇದು ಜಂಗಮಲಿಂಗದೊಳಗಣ ಶಿವಲಿಂಗವು.

ಪರಿಣಾಮಿ ಜಂಗಮದಲ್ಲಿ ಸುಖದುಃಖಗಳು ಎರಡೂ ಇರುವದಿಲ್ಲ. ಮತ್ತು ಮಹಾಜ್ಞಾನವೇ ಪರಿಣಾಮವಾಗಿ ಅದರ ಆನಂದದಲ್ಲಿರುತ್ತಾನೆ. ಇದು ಜಂಗಮಲಿಂಗದೊಳಗಣ ಪ್ರಸಾದಲಿಂಗವು.

ನಿರುಪಾಧಿಕ ಜಂಗಮನು ಯಾರನ್ನೂ ಯಾಚಿಸನು. ದೊರಿತಷ್ಟ ರಲ್ಲಿಯೇ ಸಂತುಷ್ಟನಾಗಿ ಯಾವ ತರದ ಉಪಾಧಿಗಳು ಇಲ್ಲದೆ ವ್ಯವಹ ರಿಸುತ್ತಾನೆ. ಇದು ಜಂಗಮಲಿಂಗದೊಳಗಣ ಪ್ರಸಾದಲಿಂಗವು.

ಪರಿಪೂರ್ಣ ಜಂಗಮನು ಸರ್ವಾಚಾರ ಸಂಪತ್ತಿನ ಆಚರಣೆಯಲ್ಲಿ ವ್ಯಾಪಿಸಿದ ಅರಿವುಳ್ಳಾತನಾಗಿರುತ್ತಾನೆ. ಇದು ಜಂಗಮಲಿಂಗದೊಳ ಗಣ ಮಹಾಲಿಂಗವು.

ಹೀಗೆ ಜಂಗಮಲಿಂಗವು ಬೇರೆ ಬೇರೆ ಸ್ಥಲಗಳಲ್ಲಿದ್ದುಕೊಂಡು ಅಲ್ಲ ಲ್ಲಿಯ ಅನುಭವಗಳನ್ನು ಹೊಂದುತ್ತ ಪರಿಪೂರ್ಣ ಸ್ಥಿತಿಯನ್ನು ಹೊಂ ದುತ್ತಾನೆ.

(೭೪) ಷಡ್ವಿಧಪ್ರಸಾದಲಿಂಗ:— ಇವು ಇಂದ್ರಿಯಾನಂದ, ಪ್ರಾಣಾ ನಂದ, ಜ್ಞಾನಾನಂದ, ಭಾವಾನಂದ, ತೂರ್ಯಾನಂದ, ಮಹದಾನಂದ, ಎಂದಿರುತ್ತವೆ. ಇವು ಶರಣಸ್ಥಲದಲ್ಲಿ ಪ್ರಕಟವಾದ ಉಚ್ಚಸರಿಸ್ಥಿತಿಯ ಸ್ವರೂ ಪಗಳು ಇರುತ್ತವೆ. ಇಲ್ಲಿ ಸುಜ್ಞಾನ ಭಕ್ತಿಯು ಇದ್ದು ಇದು ಇಲ್ಲಿ ಆನಂದದ ಸ್ವರೂಪದಲ್ಲಿರುತ್ತದೆ. ಈ ಆನಂದವು ಭಕ್ತನ ಮನ, ಕರಣ, ಇಂದ್ರಿಯ, ಜ್ಞಾನ ಮೊದಲಾದವುಗಳಲ್ಲೆಲ್ಲ ತೋರುತ್ತದೆ.

ಆಚಾರಲಿಂಗದಲ್ಲಿ ಪ್ರಸಾದಲಿಂಗವು ಪರಮಾತ್ಮನ ಸ್ತುತಿರೂಪ ವಾಗಿಯೂ, ಗುರುಲಿಂಗದಲ್ಲಿ ಅದು ಪರಮಾತ್ಮನು ನೀನೇ ಎಂಬ ಅನು ಗ್ರಹ ಉಂಟಾಗುವದರಿಂದ ಅದು ಪ್ರಸನ್ನದೀಕ್ಷೆಯಾಗಿಯೂ. ಶಿವಲಿಂಗ ದಲ್ಲಿ ಅದು ಸಾಮರಸ್ಯಾಚಾರವುಳ್ಳುದಾಗಿಯೂ, ಜಂಗಮಲಿಂಗದಲ್ಲಿ ಅದು ಸದಾ ಸಮಾಧಾನವೃತ್ತಿಯುಳ್ಳುದಾಗಿಯೂ, ಪ್ರಕಟವಾಗಿ ಪ್ರಸಾದ ಲಿಂಗಸ್ಥಲದಲ್ಲಿ ಅದು ಕೇವಲ ಆನಂದ ಸ್ವರೂಪದಲ್ಲಿ ಇರುತ್ತದೆ. ಹೀಗೆ ಇದರ ಪ್ರಗತಿಯು ಇರುತ್ತಿದೆ.

ಇಂದ್ರಿಯಾನಂದದಲ್ಲಿ ಅದು ಮೊದಲು ಪರಿಣಮಿಸುತ್ತದೆ. ಇಲ್ಲಿ ಅವನಿಗೆ ಯಾವ ಉಪಾಧಿಗಳಿಲ್ಲ. ಅವನ ಇಂದ್ರಿಯಗಳಲ್ಲೆಲ್ಲ ಆನಂ ದವು ತುಂಬಿಕೊಂಡಿರುತ್ತದೆ. ಪ್ರಸಾದಲಿಂಗದೊಳಗಿನ ಆಚಾರಲಿಂಗವು ಇದು ಇರುತ್ತದೆ.

ಮುಂದೆ ಅವನ ಪ್ರಾಣದಲ್ಲಿ ಅದರಂತೆಯೇ ಆನಂದವು ತುಂಬಿ ಕೊಂಡಿರುವದರಿಂದ ಅದು ಪ್ರಾಣಾನಂದವು. ಇದು ಇಂದ್ರಿಯಾನಂದ ಕ್ಕಿಂತ ಹೆಚ್ಚಿಗೆ ಸೂಕ್ಷ್ಮವಾದುದು. ಇದು ಪ್ರಸಾದಲಿಂಗದೊಳಗಣ ಗುರು ಲಿಂಗವು.

ಮುಂದೆ ಅವನ ಜ್ಞಾನದಲ್ಲಿಯೂ ಕೂಡ ಆನಂದವು ತುಂಬು ವದು. ಆಗ ಶಿವತತ್ವದಲ್ಲಿ ಸ್ಥಿರಗೊಂಡಿರುವ ಆಸ್ತಿಕ್ಯಜ್ಞಾನವು ಅವ ನಲ್ಲಿ ತುಂಬಿರುತ್ತದೆ. ಇದು ಜ್ಞಾನಾನಂದವು. ಈ ಆನಂದವು ಪ್ರಾಣಾ ನಂದಕ್ಕಿಂತಲೂ ಸೂಕ್ಷ್ಮವಾದುದು. ಇದು ಪ್ರಸಾದಲಿಂಗದೊಳಗಣ ಶಿವಲಿಂಗವು.

ಮುಂದೆ ಅವನಲ್ಲಿ ಭಾವಾನಂದವುಂಟಾಗುತ್ತದೆ. ಇಲ್ಲಿ ಅವನು ಶಿವಭಾವದಲ್ಲಿ ಏಕಧ್ಯಾನಪೂರ್ವಕವಾಗಿ ಆನಂದಿಸುತ್ತಾನೆ. ಇದು ಪ್ರಸಾದಲಿಂಗದೊಳಗಣ ಜಂಗಮಲಿಂಗವು.

ಮುಂದೆ ಅವನಲ್ಲಿ ಭಾವಾನಂದಕ್ಕಿಂತಲೂ ಅತ್ಯಂತ ಶ್ರೇಷ್ಠತರವಾದ ತೂರ್ಯಾನಂದದಲ್ಲಿ ಆನಂದಿಸುತ್ತಾನೆ. ಇಲ್ಲಿ ಶರಣ ಸತಿ ಲಿಂಗ ಪತಿ ಎಂಬ ಭಾವದೊಳಗೆ ಆಚರಿಸುತ್ತಾನೆ. ಇದು ಪ್ರಸಾದಲಿಂಗದೊಳಗಣ ಪ್ರಸಾದಲಿಂಗವು.

ಇದರ ಮುಂದೆ ಮಹದಾನಂದವಿದೆ. ಇಲ್ಲಿ ಭಿನ್ನ ಕ್ರಿಯಾಚಾರಗ ಳಿಂದ ಬಿಡುಗಡೆ ಹೊಂದುತ್ತಾನೆ. ಇಲ್ಲಿ ಈ ಆನಂದವು ಮೋಕ್ಷಾಹ್ಲಾದ ಸ್ವರೂಪವಾಗಿರುತ್ತದೆ. ಇದು ಪ್ರಸಾದಲಿಂಗದೊಳಗಣ ಮಹಾಲಿಂಗವು.

ಹೀಗೆ ಪ್ರಸಾದಲಿಂಗವು ಬೇರೆ ಬೇರೆ ಸ್ಥಲಗಳಲ್ಲಿದ್ದುಕೊಂಡು ಅಲ್ಲಲ್ಲಿ ನಾನಾ ಬಗೆಯ ಆನಂದವನ್ನು ಉತ್ಪನ್ನ ಮಾಡುತ್ತಿದೆ.

(೭೫) ಷಡ್ವಿಧ ಮಹಾಲಿಂಗಃ— ಇವು ಪಿಂಡಾಕಾಶ, ಬಿಂದ್ವಾ ಕಾಶ, ಮಹದಾಕಾಶ, ಭಾವಗಮ್ಯ, ಸರ್ವತತ್ವಾಶ್ರಯ, ಮತ್ತು ಪರಿ ಪೂರ್ಣಪ್ರಕಾಶ ಎಂದು ಇರುತ್ತವೆ. ಇಲ್ಲಿ ಸಾಮರಸ್ಯ ಸ್ಥಿತಿಯು ಇರು ತ್ತದೆ. ಆಕಾಶವೆಂದರೆ ಮನುಷ್ಯನಿಗೆ ಸಂಬಂಧಿಸಿದ ಶಕ್ತಿ, ಪ್ರಾಣ, ಅರಿವು ಮೊದಲಾದವೆಲ್ಲವೂ ಅತ್ಯಂತ ಪರಿಪಕ್ವತೆಯನ್ನು ಹೊಂದಿ ಲಿಂಗಕಳೆಯಿಂದ ತುಂಬಿಕೊಂಡು ಅತ್ಯಂತ ಸೂಕ್ಷ್ಮಸ್ಥಿತಿಯುಳ್ಳದಾಗಿ

ಮೂಲ ಚಿತ್ತಿನಲ್ಲಿ ವ್ಯವಹರಿಸುವ ಸ್ಥಿತಿಯು ಈ ಪ್ರಕಾರವಿದ್ದು ಅವುಗಳಿಗೆ ಆಗ ಬರುವ ಸ್ವರೂಪಿಗೆ ಆರಂಭದಲ್ಲಿ ಪಿಂಡಾಕಾಶವೆಂತಲೂ, ಆಮೇಲೆ ಬಿಂದ್ವಾಕಾಶವೆಂತಲೂ, ಮುಂದೆ ಅವುಗಳಿಗೆ ಮಹದಾಕಾಶವೆಂತಲೂ ಹೇಳಲ್ಪಡುತ್ತಿದೆ. ಆಮೇಲೆ ಭಾವಗವ್ಯ, ಆಮೇಲೆ ಸರ್ವತತ್ವಾಶ್ರಯು, ಮತ್ತು ಕಡೆಗೆ ಪರಿಪೂರ್ಣಪ್ರಕಾಶವೆಂದು ಅನುಕ್ರಮವಾಗಿ ಹೇಳಲ್ಪಡುತ್ತವೆ. ಈ ಸ್ಥಿತಿಗಳು ಅತ್ಯಂತ ಪರಿಪೂರ್ಣವಾದವುಗಳು.

ಪಿಂಡಾಕಾಶಃ— ಇದು ಅತ್ಯಂತ ಸೂಕ್ಷ್ಮಸ್ಥಿತಿಗೆ ಹೋದ ಶ್ರದ್ಧಾ ಭಕ್ತಿಗೆ ಅವಕಾಶಸ್ಥಾನವಾಗಿರುತ್ತದೆ. ಇದು ಪಿಂಡಾಕಾಶವೆಂದು ಹೇಳಲ್ಪಡುತ್ತಿದೆ. ಇದು ಮಹಾಲಿಂಗದೊಳಗಣ ಆಚಾರಲಿಂಗವು.

ಬಿಂದ್ವಾಕಾಶಃ— ಇದು ಪಿಂಡಕ್ಕಿಂತಲೂ ಸೂಕ್ಷ್ಮವಾದುದು. ನೈಷ್ಠಿಕಾಭಕ್ತಿಯು ಇಲ್ಲಿ ಅತ್ಯಂತ ಸೂಕ್ಷ್ಮಸ್ಥಿತಿಯನ್ನು ಹೊಂದಲು ಅದರ ವ್ಯವಹಾರಕ್ಕೆ ಅವಕಾಶಸ್ಥಾನವಾದುದು. ಇದು ಬಿಂದ್ವಾಕಾಶವು. ಇದು ಮಹಾಲಿಂಗದೊಳಗಣ ಗುರುಲಿಂಗವು.

ಮಹದಾಕಾಶಃ— ಇದು ಆತ್ಮನು ವ್ಯವಹರಿಸಲು ಸ್ಥಾನವಾದುದು. ಇದು ಹಿಂದಿನವುಗಳಗಿಂತಲೂ ಸೂಕ್ಷ್ಮವಾದುದು. ಇದು ಮಹಾಲಿಂಗದೊಳಗಣ ಶಿವಲಿಂಗವು.

ಭಾವಗವ್ಯಃ— ಇದು ಆಕಾಶದ ಸ್ಥಿತಿಗಳಿಗಿಂತಲೂ ಅತ್ಯಂತ ಸೂಕ್ಷ್ಮವಾದುದು. ಈ ಸ್ಥಿತಿಯು ಭಾವದಿಂದ ಮಾತ್ರ ತಿಳಿಯತಕ್ಕದು. ಅನುಭಾವಭಕ್ತಿಗೆ ಗೋಚರವಾಗುವಂತಹದು. ಇದು ಮಹಾಲಿಂಗದೊಳಗಣ ಪ್ರಸಾದಲಿಂಗವು.

ಸರ್ವತತ್ವಾಶ್ರಯುಃ— ಇದು ಸಮಸ್ತಜ್ಞಾನತತ್ವಗಳಿಗೆ ಆಶ್ರಯುವಾಗಿರುತ್ತದೆ. ಇದು ಮಹಾಲಿಂಗದೊಳಗಣ ಜಂಗಮಲಿಂಗವು.

ಪರಿಪೂರ್ಣ ಪ್ರಕಾಶಃ— ಅತ್ಯಂತ ವ್ಯಾಪಕವಾದ ಮಹಾಜ್ಞಾನದಲ್ಲಿ ಪ್ರಕಾಶಸ್ವರೂಪವಾಗಿ ವ್ಯವಹರಿಸಲು ಕಾರಣವಾದುದು. ಇದು ಪರಿಪೂರ್ಣ ಪ್ರಕಾಶವೆಂದೂ ಹೇಳಲ್ಪಡುತ್ತಿದೆ. ಇದು ಮಹಾಲಿಂಗದೊಳಗಣ ಮಹಾಲಿಂಗವು. ಇದು ಕಟ್ಟ ಕಡೆಯ ಸಾಮರಸ್ಯ ಸ್ಥಿತಿಯು.

(೬೬) ಮೂವತ್ತಾರು ಲಿಂಗಸ್ಥಲಗಳು (೨ನೇ ವಿಧ):— ಇವುಗಳ ವ್ಯಾಖ್ಯೆಗಳು ಹಿಂದೆ ನಂ॥ ೩೦ ರಿಂದ ೬೫ರ ವರೆಗೆ ಹೇಳಲ್ಪಟ್ಟಿವೆ. ಆದರೆ ಇವುಗಳನ್ನು ಅನ್ನುವ ಸೌಕರ್ಯಕ್ಕೋಸ್ಕರ ಆಚಾರಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಗುರುಲಿಂಗ ಎಂದು ಮೊದಲಾಗಿ ಆಚಾರಲಿಂಗದೊಳಗಣ ಷಡ್ವಿಧವನ್ನು ಹೇಳುವದುಂಟು. ಮುಂದೆ ಗುರುಲಿಂಗದೊಳಗಣ ಗುರುಲಿಂಗ ಆಮೇಲೆ ಗುರುಲಿಂಗದೊಳಗಣ ಆಚಾರಲಿಂಗ ಎಂದು ಮೊದಲಾಗಿ ಗುರುಲಿಂಗದೊಳಗಣ ಷಡ್ವಿಧಗಳು, ಆಮೇಲೆ ಶಿವಲಿಂಗದೊಳಗಣ ಶಿವಲಿಂಗ, ಆಮೇಲೆ ಶಿವಲಿಂಗದೊಳಗಣ ಆಚಾರಲಿಂಗ ಎಂದು ಮೊದಲಾಗಿ ಶಿವಲಿಂಗದೊಳಗಣ ಷಡ್ವಿಧಗಳು, ಹೀಗೆ ಮುಂದಿನ ಲಿಂಗಗಳೊಳಗಣ ಷಡ್ವಿಧಗಳನ್ನು ಹೇಳುತ್ತ ಕಡೆಗೆ ಆರನೆಯದಾದ ಮಹಾಲಿಂಗದೊಳಗಣ ಮಹಾಲಿಂಗ, ಆಮೇಲೆ ಮಹಾಲಿಂಗದೊಳಗಣ ಆಚಾರಲಿಂಗ ಹೀಗೆ ಇದರ ಷಡ್ವಿಧಗಳು, ಹೀಗೆ ಹೇಳುತ್ತ ಕಡೆಗೆ ಐಕ್ಯನೊಳಗಣ ಶರಣ ಈ ಸ್ಥಿತಿಯು ಉಳಿಯುತ್ತದೆ. ಹಿಂದೆ ವಿವರಿಸಿದ ಮೂವತ್ತಾರು ಲಿಂಗಸ್ಥಲ (೧ನೇ ವಿಧ) ಗಳಲ್ಲಿಯ ಅನೇಕ ವಿಶಿಷ್ಟ ಶಬ್ದಗಳನ್ನ ಸ್ಮರಣೆಯಲ್ಲಿಟ್ಟುಕೊಂಡು ಉಪಯೋಗಿಸುವದು ದುಸ್ತರವು. ಆದ್ದರಿಂದ ಈ ೨ನೇ ವಿಧದೊಳಗಿನಂತೆ ಹೇಳುವ ವಾಡಿಕೆಯುಂಟು ಆದರೆ ಈ ಎರಡೂ ವಿಧಗಳ ಅರ್ಥದಲ್ಲಿ ಯಾವ ಭೇದವೂ ಇರುವದಿಲ್ಲ.

(೬೭) ಮೂವತ್ತಾರು ಅಂಗಸ್ಥಲಗಳು (೧ನೇ ವಿಧ):— ಲಿಂಗಸ್ಥಲಗಳಲ್ಲಿ ಹಿಂದೆ ವಿವರಿಸಿದಂತೆ ೩೬ ವಿಧಗಳಿವೆ. ಆ ಸ್ಥಲಗಳಲ್ಲಿ ಉಂಟಾದ ಅನುಭವಗಳು ಭಕ್ತನ ಅಂಗದಲ್ಲಿ ತೋರುತ್ತವೆ. ಆದ್ದರಿಂದ ಅವುಗಳ ಪರಿಣಾಮುಗಳು ಕೂಡ ಭಕ್ತನಲ್ಲಿ ೩೬ ಆಗಿರುತ್ತವೆ. ಇದರಿಂದ ಅಂಗಸ್ಥಲದಲ್ಲಿಯೂ ಲಿಂಗಸ್ಥಲದಂತೆ ೩೬ ವಿಧಗಳಾಗುತ್ತವೆ. ೩೬ ಅಂಗಸ್ಥಲದಲ್ಲಿ ೩೬ ಲಿಂಗ ಸಂಬಂಧಮಾಡಿಕೊಳ್ಳತಕ್ಕದ್ದು. ಈ ಸಂಬಂಧವು ಭಕ್ತಿಯ ಮೂಲಕ ಸಿದ್ಧಿಸುತ್ತದೆ. ಅಂಗಕ್ಕೂ ಲಿಂಗಕ್ಕೂ ಸಂಬಂಧವನ್ನುಂಟು ಮಾಡಲು ಭಕ್ತಿಯೇ ಸಾಧನವು. ಈ ಭಕ್ತಿಯಾದರೂ ೩೬ ಅಂಗಸ್ಥಲ ಮತ್ತು ೩೬ ಲಿಂಗಸ್ಥಲಗಳಿಗನುಸಾರವಾಗಿ ೩೬ ವಿಧವಾಗಿರುತ್ತದೆ. ಇವು ಶ್ರದ್ಧಾಭಕ್ತಿಯೊಳಗಣ ಶ್ರದ್ಧಾಭಕ್ತಿ, ಶ್ರದ್ಧಾ ಭಕ್ತಿಯೊಳಗಣ ನಿಷ್ಠಾಭಕ್ತಿ, ಶ್ರದ್ಧಾ ಭಕ್ತಿಯೊಳಗಣ ಅವಧಾನಭಕ್ತಿ ಇತ್ಯಾದಿ ಇರುತ್ತವೆ.

ಉದಾಹರಣಾರ್ಥವಾಗಿ ಆಚಾರಲಿಂಗದೊಳಗಣ ಗುರುಲಿಂಗದ ಆಚರಣೆಯು ಶ್ರದ್ಧಾ ಭಕ್ತಿಯೊಳಗಣ ನಿಷ್ಠಾಭಕ್ತಿಯನ್ನೊಡಗೊಂಡಲ್ಲಿ ಭಕ್ತನೊಳಗಣ ಮಹೇಶ್ವರನಾಗುವನು. ಈ ಪ್ರಕಾರ ೩೬ ಅಂಗಸ್ಥಲದೊಳಗಣ ಆಚರಣೆ ಇರುತ್ತದೆ. ಈ ಪ್ರಕಾರ ೩೬ ವಿಧ ಲಿಂಗದ ಪ್ರಕಾಶವು ೩೬ ವಿಧ ಭಕ್ತಿಗಳೊಡನೆ ಕೂಡಿಕೊಳ್ಳಲು, ಆಗ ಅದು ೩೬ ವಿಧವುಳ್ಳ ಅಂಗವನ್ನು ವೇಧಿಸುತ್ತ, ತನುತ್ರಯ, ಷಡಿಂದ್ರಿಯುಗಳು ಮತ್ತು ೩೬ ತತ್ವಗಳು ಇವುಗಳನ್ನು ವ್ಯಾಪಿಸುವದು. ಇದರಿಂದ ಮನುಷ್ಯನ ಸೂಕ್ಷ್ಮ ಶರೀರವು ಬಲಗೊಳ್ಳುತ್ತದೆ.

ಇದರ ತರುವಾಯ ಮನುಷ್ಯನ ಕಾರಣ ಶರೀರವು ಬಲಗೊಳ್ಳಬೇಕು. ಅದು ೨೧೬ ಸ್ಥಲಗಳಲ್ಲಿ ಆಗಬೇಕು. ಆದರೆ ಈ ೨೧೬ ಸ್ಥಲಗಳ ಆಚರಣೆಯು ಸ್ವಾನುಭವದಿಂದಲೇ ಉಂಟಾಗಬೇಕು. ಅಂದರೆ ಅದು ಅರಿವಿನಿಂದಲೇ ಆಗಬೇಕು. ಆದ್ದರಿಂದ ಇವುಗಳನ್ನು ಷಟ್‌ಸ್ಥಲ ಶಾಸ್ತ್ರದಲ್ಲಿ ಸವಿಸ್ತಾರವಾಗಿ ವಿವರಿಸುವದಿಲ್ಲ. ಆದರೆ ೩೬ ಸ್ಥಲಗಳು ಕ್ರಿಯೆಯಲ್ಲಿದ್ದುದರಿಂದ ಅವುಗಳನ್ನು ಮಾತ್ರ ಅವರು ವಿವರಿಸುತ್ತಾರೆ.

ಹೀಗೆ ೩೬ ಸ್ಥಲಗಳ ವಿವೇಚನೆಯು ೨ ವಿಧವಾಗಿರುತ್ತದೆ. ಆದರೆ ಈ ವಿಧಗಳ ಅರ್ಥದಲ್ಲಿ ಭಿನ್ನವಿಲ್ಲ. ಅನುಕೂಲತೆಗಾಗಿ ಶಬ್ದಯೋಜನೆಯಲ್ಲಿ ಮಾತ್ರ ಭಿನ್ನತೆಯಾಗಿರುತ್ತದೆ.

(೭೮) ಷಡ್ವಿಧಭಕ್ತಃ— ಆಚಾರಾಂಗ, ಗುರ್ವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗವೆಂದು ಇವು ಇವೆ. ಅಂದರೆ ಯಾವ ಅಂಗವು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದ ಲಿಂಗ, ಮಹಾಲಿಂಗ ಇವುಗಳಿಗೆ ಸಂಬಂಧಪಡುತ್ತದೋ ಅದೆ ಎಂದು ಇಲ್ಲಿ ಆ ರೀತಿ ವರ್ಗೀಕರಣ ಮಾಡಿದ್ದಾರೆ. ಇಲ್ಲಿ ಈ ಲಿಂಗಗಳಿಗೋಸ್ಕರ ಶ್ರದ್ಧಾ ಭಕ್ತಿಯು ಸಂಬಂಧಪಡುತ್ತಿದೆ. ಇಲ್ಲಿ ಆಯಾ ಆರು ಲಿಂಗಗಳನ್ನು ಭಕ್ತ ಸ್ಥಲದಲ್ಲಿ ಸಂಬಂಧಪಡಿಸುವದು ಇರುತ್ತದೆ.

(೭೯) ಷಡ್ವಿಧ ಮಹೇಶ್ವರಃ— ಇವು ಆಚಾರನಿಷ್ಠೆ, ಗುರುನಿಷ್ಠೆ, ಲಿಂಗನಿಷ್ಠೆ, ಚರನಿಷ್ಠೆ, ಪ್ರಸಾದನಿಷ್ಠೆ, ಮತ್ತು ಮಹನ್ನಿಷ್ಠೆ ಎಂದು ಇರುತ್ತವೆ. ಇಲ್ಲಿ ಬೇರೆ ಬೇರೆ ಆರು ಲಿಂಗಗಳಿಗೆ ನಿಷ್ಠಾಭಕ್ತಿಯು ಅನುಕ್ರಮವಾಗಿ ಸಂಬಂಧಪಡುತ್ತಿದೆ. ಆದ್ದರಿಂದ ಆಯಾ ಲಿಂಗಗಳಿಗೋಸ್ಕರ ಇರುವ ನಿಷ್ಠಾಭಕ್ತಿಯ ಮೂಲಕವೇ ಈ ಲಿಂಗಸ್ಥಲಗಳು ಪ್ರಕಟವಾಗುತ್ತವೆ.

(೮೦) ಷಡ್ವಿಧಪ್ರಸಾದಿಃ— ಈ ಸ್ಥಲದ ಪ್ರಗತಿಯು ೬ ವಿಧವಾಗಿರುತ್ತದೆ. ಅದು ಅವದೆಂದರೆ, ಆಚಾರಾವಧಾನಿ, ಗೌರವಾವಧಾನಿ, ಲಿಂಗಾವಧಾನಿ, ಚರಾವಧಾನಿ, ಪ್ರಸಾದಾವಧಾನಿ, ಮಹದಾವಧಾನಿ ಎಂದಿರುತ್ತವೆ. ಪ್ರಸಾದಿಯ ಮುಖ್ಯ ವೈಶಿಷ್ಟ್ಯವು ಅವಧಾನಭಕ್ತಿಯು. ಆದ್ದರಿಂದ ಈ ಕ್ರಿಯೆಯ ಮೂಲಕವೇ ಪ್ರಸಾದಿಸ್ಥಲದ ತರಗತಿಗಳನ್ನು ಭಕ್ತನು ಹೊಂದತಕ್ಕದ್ದು.

(೮೧) ಷಡ್ವಿಧ ಪ್ರಾಣಲಿಂಗಿಃ— ಸಾಧ್ಯ, ವೇದ್ಯ, ಭೇದ್ಯ, ಯೋಗ್ಯ, ಸನ್ನಿಹಿತ ಮತ್ತು ಮಹಾನುಭಾವಿ ಎಂದು ಇವು ಇರುತ್ತವೆ. ಪ್ರಾಣಲಿಂಗಿಯ ಮುಖ್ಯ ಲಕ್ಷಣವು ಅನುಭಾವ ಭಕ್ತಿಯು. ಅನುಭಾವ ಭಕ್ತಿಯ ಮೂಲಕ ಪ್ರಾಣಲಿಂಗಿಯು ಸೂಕ್ಷ್ಮ ಶರೀರದ ಮೇಲೆ ಪೂರ್ಣ ಪ್ರಭುತ್ವವುಳ್ಳವನಾಗುತ್ತಾನೆ. ಇವನು ಸೃಷ್ಟಿಯಲ್ಲಿ ವ್ಯವಹರಿಸುವ ಶಕ್ತಿಗಳನ್ನೊಳಕೊಂಡಿರುತ್ತಾನೆ. ಆದ್ದರಿಂದ ಅವನಿಂದ ಸಿದ್ಧಿಗಳು ಸಹ ಜರಗುವವು. ಪೂರ್ಣ ಸ್ಥಿತಿಯುಳ್ಳ ಪ್ರಾಣಲಿಂಗಿಯು ಮಹಾನುಭಾವಿ ಎಂದು ಇಲ್ಲಿ ಹೇಳಲ್ಪಟ್ಟಿದೆ. ಇದರ ಆರಂಭದ ತರಗತಿಗಳು ಮೇಲೆ ಹೇಳಿದಂತೆ ಸಾಧ್ಯ, ವೇದ್ಯ, ಭೇದ್ಯ, ಯೋಗ್ಯ, ಸನ್ನಿಹಿತ ಎಂದು ಇರುತ್ತವೆ. ಸೃಷ್ಟಿಯ ನಿಯಮಗಳನ್ನು ಸಾಧಿಸಿಕೊಂಡವನು ಸಾಧ್ಯನು. ಅವುಗಳನ್ನು ಕಂಡುಕೊಂಡವನು ವೇದ್ಯನು. ಅವುಗಳ ಬೇರೆ ಬೇರೆ ರೀತಿಗಳನ್ನು ಅರಿತವನು ಭೇದ್ಯನು. ಅವುಗಳನ್ನು ಅರಿತು ಆಚರಿಸುವವನು ಯೋಗ್ಯನು. ಆಚರಿಸಿ ಅವುಗಳೊಡನೆ ಇರುವವನು ಸನ್ನಿಹಿತನು. ಮತ್ತು ಅವುಗಳೊಡನೆ ತನ್ಮಯನಾಗಿ ವ್ಯವಹರಿಸುವವನು ಮಹಾನುಭಾವಿಯು.

(೮೨) ಷಡ್ವಿಧಶರಣಃ— ಇದರ ತರಗತಿಗಳು ಆಯತ, ಸ್ವಾಯತ, ಸನ್ನಿಹಿತ, ಕಳಾಗ್ರಾಹಕ, ಮನೋಮಗ್ನತೆ, ಘನಸಾಮರಸ್ಯ ಎಂದಿರುತ್ತವೆ. ಶರಣನಲ್ಲಿ ಲಿಂಗವಿಕಾಸತೆಯುಂಟಾಗುತ್ತದೆ. ಈ ವಿಕಾಸತೆಯ ತರಗತಿಗಳು ಇವು ಇರುತ್ತದೆ. ಆಯತ, ಸ್ವಾಯತ, ಸನ್ನಿಹಿತ ಇವು ಶರಣಸ್ಥಲದಲ್ಲಿರುವವನ ಲಿಂಗ ಸಾನ್ನಿಧ್ಯವನ್ನು ಸೂಚಿಸುತ್ತವೆ. ಲಿಂಗಾಯತ, ಲಿಂಗಸ್ವಾಯತ, ಲಿಂಗ ಸನ್ನಿಹಿತ ಎಂಬ ಶಬ್ದಗಳು ಷಟ್ಸ್ಥಲ ಶಾಸ್ತ್ರದಲ್ಲಿವೆ. ಲಿಂಗಾಯತ ಎಂದರೆ ಲಿಂಗದ ಮರ್ಮವನ್ನು ಸ್ಥೂಲಕ್ರಿಯೆಗಳಲ್ಲಿ ಅರಿತವನು ಎಂಬರ್ಥವು ಇಲ್ಲಿ ಇರುತ್ತದೆ. ಆದರೆ

# ಹರಳಯ್ಯನ ಚರಿತ್ರೆಯು.

**ತ್ರಿಪದಿ.**

ಕತ್ತಿಯು ಕರದಲಿ ಪಿಡಿ-ದೆತ್ತಿದ ಸಿರದ ಮಾಲೆ ।
ಹೊತ್ತ ಶೂಲದ ಮೇಲೆ ಪೆಣನು ಶಿವ ನಿಮ್ಮ ।
ಉತ್ತಮ ಮತಿಯು ಕುಡು ಎನಗೆ ॥೧॥

ಗಿರಿರಾಜನ ಮಗಳೆ-ಗರ:ವೆ ನೀ ಬಾರೆಂದು ।
ಕರೆದು ನಿಮ್ಮಡಿಗೆರಗುವೆನು ಪಾರ್ವತಿ ।
ವರವ ಕೊಟ್ಟೆನಗೆ ಕರುಣಿಸು ॥೨॥

ಛಪ್ಪನ್ನ ದೇಶಕ್ಕೆ-ಹೆಪ್ಪ ಕೊಟ್ಟನು ಸ್ವಾಮಿ ।
ಅಪ್ಪ ನಿಮ್ಮಡಿಗೆರಗುವೆನು ಬಸವಣ್ಣ ।
ತಪ್ಪದೆ ಮತಿಯು ಕೊಡು ಎನಗೆ ॥೩॥

ಭಕ್ತರ ಮಾತೆಯೆ-ಆರ್ಥಿಯಲಿ ಬಲಗೊಂಬೆ ।
ಸತ್ಯ ಬಸವಣ್ಣನರಸಿಯೆ ನೀಲಮ್ಮ ।
ಉತ್ತಮ ಮತಿಯು ಕೊಡು ಎನಗೆ ॥೪॥

ಸಕ್ಕರೆಯು ಹಾಲನ್ನು-ಇಕ್ಕಿ ಎನ್ನ ಸಲಹುವ ।
ಚಿಕ್ಕ ದಣ್ಣಾಯಕರ ಬಲಗೊಂಬೆ ಮುಂದಿನ್ನು ।
ಸಿಕ್ಕಿದ ಪದಗಳ ನಡಿಸಯ್ಯ ॥೫॥

ಪಾತಕತನದಿಂದ-ಕೀಟಕ ದೈವವ ಹಾಡೆ ।
ಕೋಟಲೆಗೊಂಡು ನುಡಿವರ ಮುಂದಿನ್ನು ।
ಪಾಟಿಗೆಟ್ಟವರ ಕಥೆಯಲ್ಲ ॥೬॥

ವರವಿಲ್ಲದ ದೈವವ-ಸರವೆತ್ತಿ ಕೊಂಡಾಡೆ ।
ಗುರುಮಂತ್ರ ಮೀರಿ ನರಕದಲಿ ಹೊರಳುವ ।
ಪರಿಯಲ್ಲ ಪುಣ್ಯ ಕಥೆಗೇಳ ॥೭॥

ಎಲ್ಲಾ ಪುರಾತನರ-ಮೆಲ್ಲಡಿಗಳ ನಾನು ।
ಸಲ್ಲೀಲೆಯಿಂದ ನೆನೆವೆನು ಮುಂದಿನ್ನು ।
ಬಲ್ಲಂತೆ ಪದವ ನಡಿಸುವೆ ॥೮॥

ಕಡೆಗಣ್ಣು ಖರ್ಜೂರ-ನಿಡುಗಣ್ಣು ಸಕ್ಕರೆ ।
ಒಡೆದು ಪೆದ್ದಂತೆ ರಸದಾಳಿ ಮುಂದಿನ್ನು ।
ತೊಡಗುವೆ ಹರಳಯ್ಯನ ಕಥೆಯ ॥೯॥

ಕಳುಹಿಸಿಕೊಂಡರು-ತ್ರಿಣಯನ ಕೆಯ್ಯಿಂದೆ ।
ಇಳೆಗೆ ಬಸವಣ್ಣನೊಡಗೂಡಿ ಶರಣರು ।
ಇಳಿದು ಬಂದರು ತಮ್ಮ ಮಠಕೆ ॥೧೦॥

ಒಬ್ಬರೊಬ್ಬರ ಕಂಡು-ಗರ್ಭೈಸಿತು ಭಕ್ತಿ ।
ಹಬ್ಬಿತು ಕಲ್ಯಾಣಪುರದಲಿ ಮುಂದಿನ್ನು ।
ಕೊಬ್ಬಿದ ಬಿಜ್ಜಳನನಿರಿವುದಕೆ ॥೧೧॥

ಎಲ್ಲರಿಗೆ ಕಾಯಕ-ವೃಕ್ಷ ಕಟ್ಟಿನ ನೇಮ ।
ಹಳ್ಳಯ್ಯಗೀಗೆ ವ್ರತ ಒಂದು ಶರಣರ ।
ಮೆಲ್ಲಡಿಗಳಿಗೆ ಚರಣವ ॥೧೨॥

ಚರಣವಗೈವುತ-ಶರಣಾಳಿಗೀವುತ ।
ಕರುಣದಿಂದವರು ಕುಡುವದನು ಕೈಕೊಂಡು ।
ಹರನ ಜಂಗಮಕೆ ಉಣಿಸುವ ॥೧೩॥

ಕೃತ್ಯದಿ ಹರಳಯ್ಯ ನಿರುತಿಹ ಸಮಯದಿ ।
ಅಸ್ತಮಯವಾಗೆ ಶಯನದಿ ಸ್ವಪ್ನದಿ ।
ಭಕ್ತ ಬಸವಣ್ಣಗೆ ಶರಣೆಂಬ ॥೧೪॥

ಕಂಡನು ಕನಸನು-ಕೆಂಡಗಣ್ಣಿನ ಭಕ್ತ ।
ದಂಡನಾಯಕಗೆ ಶರಣೆಂಬ ವ್ರತವ ಕೈ ।
ಕೊಂಡನು ತನ್ನ ಮನದಲಿ ॥೧೫॥

ಕೆಲ ದಿನವು ಇಂತು–ಕೆಲಬರರಿಯದಿರೆ ।
ಒಲವಿಂದ ಹರಳಯ್ಯನಿರಲು ಸಮಯದಿ ।
ಗೆಲವಿಂದ ಬಂದ ಬಸವಣ್ಣ ॥೧೬॥

ರಾಜಶೇಖರ ಬಸವ-ರಾಜನೋಲಗದಿಂದ ।
ರಾಜಬೀದಿಯಲಿ ಬರುತಿರಲು ಹರಳಯ್ಯ ಕಂಡು ।
ಓಜೆಯಲಿ ಕರವ ಮುಗಿದನು ॥೧೭॥

ಪೊವ್ವಾಡ ಪುರುಷನೆ ಷ-ರವಾದಿ ದಲ್ಲಣನೆ ।
ಪಾವನ ಮೂರ್ತಿ ಪರುಷವೆ ಬಸವಣ್ಣ ।
ದೇವ ನಿಮ್ಮಡಿಗೆ ಶರಣಾರ್ಥಿ ॥೧೮।

ಶರಣೆಂದು ಹರಳಯ್ಯಗೆ–ಮರಳಿ ಬಸವೇಶ್ವರನು ।
ಶರಣು ಶರಣಾರ್ಥಿ ಎನುತಲಿ ತಾ ತನ್ನ।
ಅರಮನೆಗಾಗಿ ನಡೆದನು ॥೧೯॥

ಶರಣ ಹರಳಯ್ಯಗಳು-ಶರಣು ವಂದನೆ ಹೊತ್ತು ।
ಭರದಿಂದ ಬಂದು ಮಠಕಾಗಿ ತಾ ತನ್ನ ।
ಅರಸಿಯ ಕೂಡೆ ನುಡಿದನು ॥೨೦॥

ಶರಣಿಗೆ ಶರಣ ಉ-ತ್ತರವಾಗಿ ಮತ್ತೊಂದು ।
ಶರಣಿನ್ನಾವ ಪರಿಯೆಂದಾ ತಾ ತನ್ನ ।
ಅರಸಿಯ ಕೂಡೆ ನುಡಿದನು ॥೨೧॥

ಇಂದಿನ ದಿನ ಶರಣಿಲಿ-ಬಂದಿರುವ ದೋಷಗಳ ।
ಎಂದಿಗೆ ಕಳೆವೆನೆನುತಲಿ ಕಲ್ಯಾಣಮ್ಮ।
ಚಂದದಿಂದೊಂದ ನುಡಿದಳು ॥೨೨॥

ನಮ್ಮಲ್ಲಿ ಪಳಿಯು-ಪಟಾವಳಿ ಮೊದಲಿಲ್ಲ ।
ನಿರ್ಮಳ ಜ್ಞಾನಿ ಬಸವಣ್ಣನ ಪಾದಕ್ಕೆ ।
ಚಮ್ಮಾವುಗೆ ಅನುವ ಮಾಡುವ ॥೨೩॥

ಸತಿಯ ಮಾತನು ಕೇಳಿ-ಅತಿ ಬೇಗ ಹರಳಯ್ಯ ।
ಸುತನ ಕರವಿಡಿದು ನಡೆಸಿದ ಕಾಯಕವ ।
ಅತಿಬೇಗದಿಂದಲನುವಮಾಡಿ ॥೨೪॥

ಅಂಗ ಹಿಂಗಿಸಿಕೊಂಬ-ಅಂಗವಿನ್ನಾವುದು ।
ಲಿಂಗಬಸವಗೆ ಚರಣವನೊಯ್ದರೆ ।
ಹಿಂಗುವುದೆನ್ನ ಭವಮಾಲೆ ॥೨೫॥

ಮುತ್ತು ಮಾಣಿಕಗಳ-ತೆತ್ತಿಸಿದ ಜಲಸಾಶ।
ಉತ್ತಮ ಕಳುಕವಗೈದನು ಚಮ್ಮಾವುಗೆ।
ಮುತ್ತೊಂದೊಮ್ಮನಗಳನಿಟ್ಟು ॥೨೬॥

ಒಪ್ಪವನಿಕ್ಕಿದ-ಎಪ್ಪತ್ತು ಗೊಂಡೆಯ।
ಸರ್ಪನ ಹೆಡೆಗೆಯ್ಯುತಲಿ ಚಮ್ಮಾವುಗೆಯ।
ಸುಪ್ಪಾಣಿಯಿಂದ ನಯವಿಟ್ಟ ॥೨೭॥

ವಜ್ರ ಮಾಣಿಕಗಳು-ಗುಜ್ಜುಗೊಂಡೆಗಳಿಕ್ಕಿ।
ಮಝು ಭಾಪೆಂದು ನಲಿದನು ತಾ ತನ್ನ।
ಸಜ್ಜನ ಸತಿಯ ಕರೆದನು ॥೨೮॥

ಸತಿ ಶರಣೆ ಬಾ ಎಂದು-ಅತಿ ಹರುಷದಿಂದಲಿ।
ಯತಿರಾಯ ನಮ್ಮ ಬಸವನ ಪಾದಕ್ಕೆ।
ಸ್ತುತಿಸಿದೆ ಜೋಡು ಚರಣವ ॥೨೯॥

ಸತಿ ಪುರುಷರಿಬ್ಬರು-ಅತಿ ಹರುಷದಿಂದಲಿ।
ಮಥನ ನಮಗುಂಟು ಇದರಿಂದ ಹರಳಯ್ಯನ।
ಸತಿಯರುಹಿದಳು ಕಥನವ ॥೩೦॥

ವೀರಶೈವಾಗಮದ-ದಾರಿಗಳು ಕೆಟ್ಟಾವು।
ಕಾರುಣ್ಯನಿಧಿಯೆ ಅರಿದಿರು ನಿಮಗೊಂದು।
ನಾರಿಯ ಕಥನ ಕೇಳುವುದು ॥೩೧॥

ಹೇಳಿನ್ನುಕಲ್ಯಾಣ-ಕಾಳಗ ಹಿರಿದಕ್ಕು।
ಕೇಳು ಹರಳಯ್ಯ ನುಡಿವಂದ ಇವು ಮುಂದೆ।
ಸುಳ್ಳು ಮಾತಲ್ಲೆಂದರಿದಿರು ॥೩೨॥

ಕೆಡುವುದು ಕಲ್ಯಾಣ-ಪೊಡವೀಶನಳಿವನು।
ಬಿಡುವರು ಗಣಕುಲ ನೆಲೆಯನು ಬಸವಣ್ಣ
ಮೃಡನ ಜಿಹ್ವೆಯಲಡಗುವನು ॥೩೩॥

ಬಂದುದು ಜಯಸುವೆ-ನೆಂದನು ಹರಳಯ್ಯ।
ಮುಂದೆ ಬಸವಣ್ಣನಿವನೊಯ್ವ ಚರಣವ।
ಮುಂದಿಟ್ಟು ನಾನು ನಮಿಸುವೆ ॥೩೪॥

ರುದ್ರಾವತಾರದ-ಚಿದ್ರೂಪ ಶರಣನು ।
ಸದ್ಭಕ್ತ ಸೀಮೆ ಪರಂಜ್ಯೋತಿ ಹರಳಯ್ಯ ।
ರುದ್ರಾಕ್ಷಿ ಸ್ಥಾನದಿ ಧರಿಸಿ ॥೩೫॥

ಭಸಿತವನಿಟ್ಟನು-ನೊಸಲೊಳು ಹರಳಯ್ಯ ।
ಶಶಿಧರಶರಣ ನಡೆಗೊಂಡ ಬೇಗದಿ ।
ಬಸವಣ್ಣನಿರುವ ಮಠಕಾಗಿ ॥೩೬॥

ನಿಂದನು ಹರಳಯ್ಯ-ಮುಂದೆ ತಲೆವಾಗಿಲ ।
ಲೊಂದು ಯೋಚನೆಯ ನೆನೆದನು ನಾವಿಲ್ಲಿಗೆ ।
ಬಂದುದನರಿಪ ಪರಿ ಹೇಗೆ ॥೩೭॥

ಏಕ ವ್ರತದಿಂದ-ಲೋಕವನಾಳುವ ।
ಸಾಕ್ಷಾತ್ ಮಂತ್ರಿ ಬಸವಣ್ಣನ ಕಾಂಬುದಕೆ ।
ನೂಕುಸಂದಣಿ ವಶವಲ್ಲ ॥೩೮॥

ಲಕ್ಷದ ಮೇಲೆತೊಂ-ಭತ್ತಾರುಸಾವಿರ ।
ಮುಕ್ಕಣ್ಣನವರೆನಿಸುವ ಬಸವಗೆ ।
ಲೆಕ್ಕವೆ ನಾವು ಇವರಿಗೆ ॥೩೯॥

ಎಮ್ಮಯ್ಯ ಸಿರಿವಂತ-ಬ್ರಹ್ಮಾಂಡ ನಾಯಕ ।
ಉಮಾಪತಿ ಶಿವನೆ ಹಿತಕಾರಿ ಕಾಂಬುದಕೆ ।
ಶಮ್ಮ ಪಾಡೇನು ಅವರಿಗೆ ॥೪೦॥

ಉರದ ಲಿಂಗವ ಬಿಟ್ಟು-ಕರದೊಳಗಿಂಬಿಟ್ಟು ।
ಪುರಹರನೆ ಕೇಳು ನುಡಿಯೊಂದ ನಾವು ಬಂದು ।
ದರುಹಬೇಕೆಂದನವರಿಗೆ ॥೪೧॥

ಹಳ್ಳುಗ ಬಂದಿಹ-ನೆಂದು ಬಸವಣ್ಣಗೆ ।
ಮೆಲ್ಲನೆ ಕಿವಿಯೊಳರುಹೆಂದ ಪ್ರಾಣದ ।
ವಲ್ಲಭನೊಡನೆ ಉಸುರಿದ ॥೪೨॥

ಚಿತ್ರ ಸಂಗಮನಾಥ-ಚಿತ್ರದಿಂದಲಿ ಹೋಗಿ ।
ಚಿತ್ತದೊಳಗೆ ಅರುಹಿದನು ಬಾಗಿಲಿಗೆ ।
ಭಕ್ತ ಬಂದಿಹನು ಬಸವಣ್ಣ ॥೪೩॥

ಬಂದುದನರಿದನು-ತಂದೆ ಬಸವಣ್ಣನು ।
ಮುಂದಣ ಹರೆಯ ಹೋಯಿಸಿದ ಬಸವಣ್ಣಾ ।
ನಂದಿಯ ಧ್ವಜವ ತರಿಸಿದ ॥೪೪॥

ಬಾಗಿಲಿಗೆ ಬಂದಿಹನು-ನಾಗಧರನ ಭಕ್ತ ।
ಸಾಗಿಸುವರಿಲ್ಲ ಒಳಯಿಕೆ ಇಂದಕ್ಕೆ ।
ನಾಗಲಿದೇವಿಗರುಹಿದ ॥೪೫॥

ನಂದಿಯ ಧ್ವಜವನು-ಮುಂದೆ ಗುಡಿ ತೋರಣ ।
ದುಂದುಭಿ ಹರೆ ಮೊಳಗಿಸಿದ ಬಸವಣ್ಣಾ ।
ಗಂಧದುಪ್ಪರಿಗೆಯಿಂದ ಹೊರಟ ॥೪೬॥

ಕಸ್ತುರಿ ಬಾಗಿಲ- ಮತ್ತೆ ಹೊರಹೊಂಟನು ।
ಸ್ವಸ್ತದಿಂದಲಿ ನಡೆಗೊಂಡ ಬಸವಣ್ಣಾ ।
ಮಸ್ತಕ ಮಣಿದು ನಮಿಸಿದ ॥೪೭॥

ವಜ್ರದ ಬಾಗಿಲಲಿ- ಹೆಜ್ಜೆಮೊಂದಡಿ ಇಟ್ಟು ।
ಸಜ್ಜನ ಶರಣ ಬಸವಣ್ಣ ತಾನಾಗ ।
ಗುಜ್ಜಾಗಿ ಸಿರವ ಮಣಿದನು ॥೪೮॥

ಚಿನ್ನದ ಬಾಗಿಲ ಮುಂದೆ-ರನ್ನ ರತ್ನದ ಬೊಂಬೆ ।
ಬಿನ್ನೈಸಿದವು ಜಯತೆಂದು ಬಸವಣ್ಣಾ ।
ಚನ್ನಯ್ಯನವರ ಮಗ ಬಂದ ॥೪೯॥

ಚಿತ್ರದ ಬಾಗಿಲಲಿ-ಪುತ್ಥಳಿಬೊಂಬೆಗಳು ।
ಅರ್ಥಿಯಿಂದ ಕರಗಳ ಮುಗಿದು ಬಾಗಿಲಿಗೆ ।
ಕಕ್ಕಯ್ಯನವರ ಮಗ ಬಂದ ॥೫೦॥

ಬಂದು ಹೇಳಿದನಹುದು-ತಂದೆ ಸಂಗಮನಾಥ ।
ಬಂದೆನು ನಾನು ಅದರಿಂದ ಹರಳಯ್ಯ ।
ನಿಂದ ಬಾಗಿಲಿಗೆ ಇದಿರಾಗಿ ॥೫೧॥

ಭಕ್ತರ ಭಾಗ್ಯದ-ನಿಧಿಯೆ ಚಿಂತಾಮಣಿ ।
ಭಕ್ತರ ಬಲ ಸ್ವಯಂಜ್ಯೋತಿ ಬಸವಣ್ಣಾ ।
ಚಿತ್ತೈಸಿ ಪಾದ ಚರಣಕೆ ॥೫೨॥

ತರ್ಕೈಸಿಕೊಂಡನು-ಚಿತ್ರೈಸಿಕೊಂಡನು ।
ಚಿತ್ರೈಸಿದಿರಿ ಮುಕ್ತನಾದೆನು ಬಸವಣ್ಣ ।
ಕರ್ತರ್ಗ ಹರುಷದಿ ನುಡಿದನು ॥೫೩॥

ಓಂ ನಮಃ ಶಿವ ಶಿವ-ಏಳು ಬಾಗಿಲ ಹೊರಗೆ ।
ಕೀಳು ಮಾದಿಗರ ಹರಳುಗನು ನಾ ನಿಮ್ಮ ।
ಪಾದಚರಣವ ಹೋಲುವೆನೆ ॥೫೪॥

ಬಂದು ಬಾಲಕರಂತೆ-ಪಿಡಿದು ಬಂದಿಲ್ಲಿಗೆ ।
ಹಿಂದಣ ಪಾಪಕ್ಷಯುವಕ್ಕು ಬಸವಣ್ಣ ।
ಮುಂದೆ ಕೊಂಡಾಡಿ ನಲಿದನು ॥೫೫॥

ಹಿಡಿವರೆ ಕರಗಳ-ಬ್ಬಡನರಿವ ಶರಣರು ।
ಕೆಡುಕುಲದವರ ಧರೆಯೊಳು ಎಂದೆನುತ ।
ನುಡಿದ ಹರಳಯ್ಯ ಮುದದಿಂದ ॥೫೬॥

ಕೆಟ್ಟ ಕುಲದವರನು-ಮುಟ್ಟಬಹುದೆ ನೀವು ।
ಸೃಷ್ಟಿಗೀಶ್ವರನ ಶರಣರು ಎಂದೆನುತ ।
ಕಟ್ಟಣೆ ಮಾತನು ನುಡಿದನು ॥೫೭॥

ಪರುಷ ತಿಪ್ಪೆಯೊಳು-ಪರುಷ ಮಣ್ಣಾಗಿರಲು ।
ಅದ ಸಾಣೆಗಾರರು ಬಿಡುವರೆ ಎಂದೆನುತ ।
ಪರಶಿವ ಬಸವ ನುಡಿದನು ॥೫೮॥

ಕಕ್ಕಯ್ಯಗಳಲ್ಲಿ-ಒಕ್ಕ ಪ್ರಸಾದಕೆ ।
ಹೊಕ್ಕು ನಾ ಕಾಯ್ದೆನನುದಿನ ಹರಳಯ್ಯ ।
ಸಿಕ್ಕಿತೆ ಎನಗೆಲೆ ತಂದೆ ॥೫೯॥

ಹೊಲೆ ಎಂಬುದೊಂದು-ಕಲಿಯಲ್ಲಿ ಹುಟ್ಟಿತು ।
ನೆಲೆಯರಿಯದವರು ನುಡಿವರು ನಿಮ್ಮಪ್ಪನ ।
ಮೊಲೆವಾಲಿನೊಳಗೆ ವಿಷ ಉಂಟೆ ॥೬೦॥

ಅಚ್ಚ ಪ್ರಸಾದಕ್ಕೆ-ನಿಚ್ಚ ನಿಮ್ಮಲ್ಲಿ ಕಾಯ್ದೆ ।
ಹುಚ್ಚನೆ ನಾನು ಎಲೆ ತಂದೆ ಹರಳಯ್ಯ ।
ಸುಚಿತ್ತದೇಹಿ ಶರಣಾರ್ಥಿ ॥೬೧॥

ಭಕ್ತರಣುಗ ನಾನು-ಭೃತ್ಯನು ನಿಮ್ಮಡಿಗೆ ।
ಎಷ್ಟೊಂದು ನಾನು ಪಶುಪ್ರಾಣಿ ಹರಳಯ್ಯ ।
ಸ್ತುತಿಸಬಿಡವೆಲೆ ತಂದೆ ॥೬೨॥

ಕಡಲನು ಜಡೆಯೊಳು-ಮುಡಿದನಡಿಯ ನಿಮ್ಮ ।
ನುಡಿಗೆಯುಂಬಲಿಯ ಸವಿವಾಗ ಆರಾದೊಡೆ ।
ಬಿಡಿಸಿದರೆ ತಂದೆ ಧರೆಯೊಳು ॥೬೩॥

ಚರ್ಮದ ಕರ್ಮವ-ಕೊಳೆವ ಪರುಷ ನೀನು ।
ಮರ್ಮವ ಬಲ್ಲವರಾರು ಹರಳಯ್ಯ ।
ನಿರ್ಮಲದೇಹಿ ಶರಣಾರ್ಥಿ ॥೬೪॥

ಕರೆದ ನೀಲಮ್ಮನ-ಭರದಿಂದ ಬಸವಣ್ಣ ।
ಶರಣ ಕುಲಕೆ ತಿಲಕಗೆ ಹರಳೈಯ್ಯಗೆ ।
ಶರಣು ಮಾಡೆಂದು ಅರುಹಿದ ॥೬೫॥

ಎಂದ ಮಾತನು ಕೇಳಿ-ಬಂದಳು ನೀಲಮ್ಮ ।
ನಿಂದು ಹಸ್ತಗಳ ಮುಗಿದಳು ಚರಣಕೆ ।
ವಂದಿಸಿ ಕೃಪೆಯ ಪಡೆದಳು ॥೬೬॥

ಶರಣು ಚಿನ್ಮಯರೂಪ-ಶರಣು ಭಕ್ತರ ಬಂಧು ।
ಶರಣು ಎಮ್ಮಯ್ಯ ಪರುಷವೆ ಹರಳಯ್ಯ ।
ಶರಣು ನಿಮ್ಮಡಿಗೆ ಶರಣಾರ್ಥಿ ॥೬೭॥

ಶರಣೆ ನೀಲಮ್ಮನು-ಶರಣ ಹರಳಯ್ಯಗೆ ।
ಶರಣು ಮಾಡಿದಳು ಚರಣಕೆ ನೀಲಮ್ಮ ।
ವರ ಶಿಸುವು ನಾನೆಂದು ನಮಿಸಿದಳು ॥೬೮॥

ತೊತ್ತಿನ ಮಕ್ಕಳ-ತೊಡೆಯನೇರಿಸಬಹುದೆ ।
ಪೃಥ್ವಿಯೊಳಾಡುವ ನುಡಿಯುಂಟೆ ಎಲೆ ತಾಯಿ
ಭಕ್ತರಾಣೆನ್ನ ಬಿಡು ಬೇಗ ॥೬೯॥

ಹಸ್ತವ ಮುಗಿಯುತ-ವಿಸ್ತರಿಸಿದ ಶರಣರ ।
ಚಿತ್ತಜ ವೈರಿ ಬಸವೇಶ ನುಡಿಗೇಳ ।
ಕರ್ತ ಹರಳಯ್ಯ ನುಡಿದನು ॥೭೦॥

# ಶಿವಾನುಭವ.

| ವರ್ಷ ೧೫ | ಅಕ್ಟೋಬರ ೧೯೪೦. | ಸಂಚಿಕೆ ೧ |
|---|---|---|

## ದೇವರ ದಾಸಿಮಯ್ಯ.

(ಲೇಖಕ:— ವೇ॥ ಮೂ॥ ಬುದ್ಧಯ್ಯಾಸ್ವಾಮಿ ಪುರಾಣಿಕ ಧಾರವಾಡ.)

(೧) ಶಿವಶರಣರೊಳಗೆ ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ ಮತ್ತು ಶಿವದಾಸಿಮಯ್ಯ ಎಂಬ ಮೂವರು ಬಹಳ ಪ್ರಸಿದ್ಧರಾಗಿರುವರು. ಈ ದೇವರ ದಾಸಿಮಯ್ಯನಿಗೆ ಜೇಡರ ದಾಸಿಮಯ್ಯನೆಂದೂ ಕರೆಯುವರು. ದೇವರ ದಾಸಿಮಯ್ಯನು ನೇಗೆಯ ಕಾಯಕವನ್ನೂ ಶಂಕರ ದಾಸಿಮಯ್ಯನು ಒಣ್ಣದ ಕಾಯಕವನ್ನೂ ಹಾಗೂ ಶಿವದಾಸಿಮಯ್ಯನು ಹೊಲಿಯುವ ಕಾಯಕವನ್ನೂ ಅವಲಂಬಿಸಿ ಜೀವಿಸುತ್ತಿದ್ದರು. ದೇವರ ದಾಸಿಮಯ್ಯನ ಸಾಂಪ್ರದಾಯದವರಾದ ಶಿವಾಚಾರದ ನೇಕಾರರು ನೇಗೆಯ ಕಾಯಕವನ್ನೂ ಶಂಕರ ದಾಸಿಮಯ್ಯನ ಸಾಂಪ್ರದಾಯದವರಾದ ಬಣಗಾರರು (ನಾಗಲೀಕರು) ಒಣ್ಣದ ಕಾಯಕವನ್ನೂ ಮತ್ತು ಶಿವದಾಸಿಮಯ್ಯನ ಸಾಂಪ್ರದಾಯದವರಾದ ಶಿವಶಿಂಪಿಗರು ಹೊಲಿಯುವ ಕಾಯಕವನ್ನೂ ಈಗಲೂ ಅವಲಂಬಿಸಿ ಉಪಜೀವಿಸುತ್ತಿರುವರು.

(೨) ಶ್ರೀ ಬಸವಣ್ಣನವರು ತಮ್ಮ ಭಕ್ತನ ಭಕ್ತಸ್ಥಲದ ವಚನ ೯೦ರಲ್ಲಿ 'ಈಶ ನಿಮ್ಮ ದಾಸರ ದಾಸಿಯ ದಾಸ ನಾನಯ್ಯ' ಎಂದು ಹೇಳಿರುವದರಿಂದ ಶಿವಶರಣರು ದಾಸೋಹಂಭಾವದಿಂದ ಇರುವವರಾದ್ದರಿಂದ ಅವರಿಗೆ ವಚನವಾಙ್ಮಯದಲ್ಲಿ ಶಿವದಾಸರೆಂದು ಇನ್ನೊಂದು

ಹೆಸರಿನಿಂದ ಕರೆದದ್ದು ಕಂಡು ಬರುವದು. ಮಹಾನುಭಾವಿಗಳಾದ ಶ್ರೀ ಬಸವಣ್ಣನವರು ತಮ್ಮ ಭಕ್ತನ ಭಕ್ತಸ್ಥಲದ ವಚನ ೬೭ ರಲ್ಲಿ 'ದಾಸ ಶಿರಿಯಾಳನವರು' ಎಂದೂ, ಭಕ್ತನ ಮಹೇಶ್ವರಸ್ಥಲದ ವಚನ ೨ರಲ್ಲಿ 'ಹರಿಯನೇ ದಾಸನ ವಸ್ತ್ರವ' ವಚನ ೪ ರಲ್ಲಿ 'ದಾಸನ ವಸ್ತ್ರವ ಬೇಡಿದಾತ ನೀನು' ಮತ್ತು ವಚನ ೧೩ ರಲ್ಲಿ 'ದಾಸನ ವಸ್ತ್ರವ ಬೇಡಡ ಮುನ್ನ ತವನಿಧಿಯನಿತ್ತರೆ ನಿಮ್ಮ ದೇವರೆಂಬೆ' ಎಂದೂ ಅಂದಿರುವದರಿಂದ ಶ್ರೀ ಬಸವಣ್ಣನವರು ದೇವರ ದಾಸಿಮಯ್ಯನಿಗೆ ದಾಸನೆಂದು ಸಂಬೋಧಿಸಿದ್ದು ಕಂಡು ಬರುತ್ತದೆ; ಇದರಂತೆ ಭಕ್ತನ ಭಕ್ತಸ್ಥಲದ ವಚನ ೯೨ ರಲ್ಲಿ 'ದಾಸಯ್ಯ ಶಿವದಾನವನೆರೆಯ ನೋಡಯ್ಯ' ವಚನ ೯೮ ರಲ್ಲಿ 'ದಾಸಯ್ಯನ ಮನೆಯಲ್ಲ ಬೇಡಿದೆ' ಎಂದೂ ಅಂದಿರುವದರಿಂದ ದೇವರ ದಾಸಿಮಯ್ಯನಿಗೆ ದಾಸಯ್ಯನೆಂದೂ, ಹಾಗು ಭಕ್ತನ ಭಕ್ತಸ್ಥಲದ ವಚನ ೬೯ ರಲ್ಲಿ 'ದಾಸಿಮಯ್ಯನಂತೆ ಉಡಕೊಡಬಲ್ಲೆನೇ' ಎಂದಿರುವದರಿಂದ ದಾಸಿಮಯ್ಯನೆಂದೂ, ಮತ್ತು ಭಕ್ತನ ಭಕ್ತಸ್ಥಲದ ವಚನ ೭೦ ರಲ್ಲಿ 'ದಾಸದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ' ಎಂದು ಅಂದಿರುವದರಿಂದ ದಾಸದೇವನೆಂದೂ ಕರೆದದ್ದು ಕಂಡುಬರುತ್ತದೆ. ಭಕ್ತನ ಪ್ರಾಣಲಿಂಗಿ ಸ್ಥಲದ ವಚನ ೧ ರಲ್ಲಿ 'ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೇ ಅಯ್ಯಾ' ಎಂದು ಅಂದಿರುವದರಿಂದ ದೇವರ ದಾಸಿಮಯ್ಯನಿಗೆ ಜೇಡರ ದಾಸಿಮಯ್ಯನೆಂದೂ ಕರೆದಿರುವನಲ್ಲದೆ ಈ ವಚನದಲ್ಲಿ ಆತನ ಕಾಯಕವನ್ನು ಕೂಡ ಸೂಚಿಸಿರುವನು.

(೩) ಮೇಲಿನ ವಚನಗಳಿಂದ ನೋಡಲಾಗಿ ದಾಸ, ದಾಸಯ್ಯ, ದಾಸಿಮಯ್ಯ, ದಾಸದೇವ, ಮತ್ತು ಜೇಡರ ದಾಸಯ್ಯ ಮೊದಲಾದ ಹೆಸರುಗಳು ದೇವರ ದಾಸಿಮಯ್ಯನವು ಎಂದು ಕಂಡು ಬರುವದು. ಶಂಕರನ ದಾಸನಾದ್ದರಿಂದ ಶಂಕರ ದಾಸಿಮಯ್ಯನೆಂದೂ, ಶಿವನ ದಾಸನಾದ್ದರಿಂದ ಶಿವದಾಸಿಮಯ್ಯನೆಂದೂ ಕರೆದಂತೆ ದೇವರ ದಾಸನಾದ್ದರಿಂದ ಜೇಡರ ದಾಸಿಮಯ್ಯನಿಗೆ ದೇವರ ದಾಸಿಮಯ್ಯನೆಂದೂ ಕರೆದಿರುವರು.

(೪) ದೇವರದಾಸಿಮಯ್ಯನ ವೃತ್ತಾಂತವನ್ನು ಹೇಳುವಂಥ ಅನೇಕ ಗ್ರಂಥಗಳಿರುತ್ತವೆ. ಅವುಗಳಲ್ಲಿ ಇವು ಬಹಳೇ ಪ್ರಸಿದ್ಧವಿರುವವು. (೧) ಭೀಮಕವಿಕೃತ ಬಸವಪುರಾಣದ ೫೧ ನೇಯ ಸಂಧಿಯಲ್ಲಿ ಜಯಸಿಂಹ

ರಾಜನ ಸಭೆಯಲ್ಲಿ ದೇವರ ದಾಸಿಮಯ್ಯನಿಗೂ ಜೈನರಿಗೂ ಆದ ವಾಗ್ವಾದದ ವರ್ಣನೆ ಇರುವದು. (೨) ಈತನ ಒಂದು ಸಂಪೂರ್ಣ ಗ್ರಂಥವು ಭಾಮಿನಿ ಷಟ್ಪದಿಯಲ್ಲಿ ಬರೆದದ್ದು ಉಪಲಬ್ಧವಿರುವದು. ಅದು ಸಂಸ್ಕೃತದ ಭಾಷಾಂತರವೆಂದು ಅದರಲ್ಲಿಯೇ ಹೇಳಿದೆ. (೩) ಮನುಪುರಾಣದಲ್ಲಿ ದೇವರ ದಾಸಿಮಯ್ಯನ ಅವತಾರ ವರ್ಣನೆ ಹೇಳಿದೆ. (೪) ರಾಘವನೆಂಬುವನಿಂದ ಬರೆಯಲ್ಪಟ್ಟ ದೇವರದಾಸಿಮಯ್ಯನ ಪುರಾಣವೆಂದು ಇನ್ನೊಂದು ಗ್ರಂಥಉಂಟು (೫) ಶ್ರೀ ಬಸವೇಶ್ವರಾದಿ ಪ್ರಮಥರ ವಚನಗಳಲ್ಲಿಯೂ ಈತನ ವರ್ಣನೆ ಇರುವದು. ಅಲ್ಲದೆ ಕರ್ನಾಟಕ ಕವಿಚಕ್ರವರ್ತಿಯಾದ ಹರಿಹರಾಚಾರ್ಯನು ಕೂಡ ತನ್ನ ಪಂಪಾಶತಕದಲ್ಲಿ ಪುರಾತನರ ಹೆಸರುಗಳ ಜೊತೆಗೆ ದಾಸಿಮಾರ್ಯನನ್ನು ಸೇರಿಸಿ ಬರೆದಿದ್ದಾನೆ.

(೫) ಡಾಕ್ಟರ ಫ್ಲೀಟ ಸಾಹೇಬರು ಇಂಡಿಯನ್ ಆಂಟಿಕ್ವೆರಿ ವ್ಹಾಲ್ಯೂಮ ೧೯ ಪುಟ ೧೬೨ನೇದರಲ್ಲಿ ಈ ದೇವರದಾಸಿಮಾರ್ಯನು ಜಯಸಿಂಹನ ಕಾಲಕ್ಕಿರಬಹುದೆಂದು ಊಹಿಸಿ ಬಸವ ಪುರಾಣದಲ್ಲಿರುವ ದೇವರ ದಾಸಿಮನ ಕಥೆಯನ್ನು ಪ್ರಸ್ತಾಪಿಸಿ ಆ ಕಥೆಯು ಜಯಸಿಂಹನಿಗೆ ಸಂಬಂಧಪಟ್ಟುದೆಂದೂ, ದೇಸಿಂಗನೆಂಬುದು ಜಯಸಿಂಹನೆಂಬುದರ ರೂಪಾಂತರವೆಂದೂ ಹೇಳಿದ್ದಾರೆ. ಚಾಲುಕ್ಯ ರಾಜನಾದ ಜಯಸಿಂಹನು ಕ್ರಿಸ್ತಶಕ ೧೦೦೮ ರಿಂದ ೧೦೫೦ ರ ವರೆಗೆ ಆಳಿದನು. ಅವನ ರಾಜಧಾನಿ ಹೊಟಲಕೇರಿಯಾಗಿತ್ತು. ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೨೦೧ ನೆಯ ಪುಟದಲ್ಲಿ 'ಬ್ರಹ್ಮಶಿವನು (ಸುಮಾರು ಕ್ರಿಸ್ತಶಕ ೧೧೨೫) ಈ ಕವಿಯು ಜೇಡರ ದಾಸಿಮಯ್ಯನ ಹೆಸರನ್ನು ಹೇಳುವದರಿಂದ ಇವನು ಅವನ ಕಾಲಕ್ಕೆ ಹಿಂದೆ ಇದ್ದಿರಬೇಕು. ಆದುದರಿಂದ ಈ ರಾಜನು ೧೦೧೮ ರಿಂದ ೧೦೪೨ರ ವರೆಗೆ ಆಳಿದ ಚಾಳುಕ್ಯರಾಜನಾದ ೧ನೇ ಜಯಸಿಂಹನಾಗಿರಬೇಕು' ಎಂದು ಹೇಳಿ ಈತನ ಕಾಲವನ್ನು ಸುಮಾರು ಕ್ರಿ. ಶ. ೧೦೪೦ ಎಂದು ನಿರ್ಧರಿಸಿರುವರು. ರಾವಸಾಹೇಬ ಪಿ. ಜಿ. ಹಳಕಟ್ಟಿಯವರು ಜಯಸಿಂಹನ ಹೆಂಡತಿಯಾದ ಸುಗ್ಗಳೆಯು ದೇವರದಾಸಿಮಯ್ಯನ ಶಿಷ್ಯಳಾಗಿದ್ದುಕೊಂಡು ಅತ್ಯಂತ ಶಿವಭಕ್ತಿಯಿಂದ ಆಚರಿಸುತ್ತಿದ್ದಳು. ಈ ಸುಗ್ಗಳೆಯಾದರೂ ಆ ಕಾಲಕ್ಕೆ ಅತ್ಯಂತ ಪ್ರಸಿದ್ಧಳಾಗಿದ್ದಳು. ಈ ಸುಗ್ಗಳೆಯು ಜಯಸಿಂಹನಲ್ಲಿದ್ದ ಜೈನ

ಧರ್ಮದ ಮೋಹವನ್ನು ಬಿಡಿಸಬೇಕೆಂದು ಬಯಸಿ ದೇವರದಾಸಿಮಯ್ಯ ನನ್ನು ರಾಜಧಾನಿಗೆ ಬರಮಾಡಿಕೊಂಡಳು. ಮೊದಲಾದವುಗಳನ್ನು ಹೇಳಿ ಈಕೆಯ ಉಲ್ಲೇಖವು ಹಾಸನ ಜಿಲ್ಲೆಯ ಬೇಲೂರ ಗ್ರಾಮದ ೧೧೨ ನೆಯ ಶಿಲಾಶಾಸನದಲ್ಲಿರುವದು; ಮತ್ತು ಶ್ರೀ ಬಸವೇಶ್ವರನಾದರೂ ತನ್ನ ವಚನಗಳಲ್ಲಿ ದೇವರದಾಸಿಮಯ್ಯನನ್ನು ಕುರಿತು ಮೇಲಿಂದ ಮೇಲೆ ಉಲ್ಲೇಖಿಸಿರುವದರಿಂದ ದೇವರದಾಸಿಮಾರ್ಯನು ಶ್ರೀ ಬಸವೇಶ್ವನಕಿಂತಲೂ ಹಿಂದಿನವನೆಂಬುದು ಸ್ಪಷ್ಟವಾಗುತ್ತದೆಂದು ಬರೆದಿರುವರು.

(೬) ಮಿ. ಎಮ್. ಆರ್. ಶ್ರೀನಿವಾಸಮೂರ್ತಿ ಇವರು ರಾವಸಾಹೇಬ ಹಳಕಟ್ಟಿಯವರು ಹೇಳಿರುವಂತೆ ಹಾಸನ ಡಿಸ್ಟ್ರಿಕ್ಟಿನ ಬೇಲೂರ ಗ್ರಾಮದ ೧೧೨ ನೆಯ ಶಾಸನದಲ್ಲಿ ಸುಗ್ಗಲದೇವಿಯ ಉಲ್ಲೇಖವಿರುವದು ನಿಜ; ಆದರೆ ದೇವರದಾಸಿಮಯ್ಯನಿಗೂ ಈ ಸುಗ್ಗಲದೇವಿಗೂ ಅದರಿಂದ ಯಾವದೊಂದು ಗುರುಶಿಷ್ಯ ಸಂಬಂಧವನ್ನು ಸ್ಥಾಪಿಸುವ ಹಾಗಿಲ್ಲವೆಂದೂ, ಹಾಸನ ಡಿಸ್ಟ್ರಿಕ್ಟಿನ ಅರಸಿಕೇರಿ ಶಾಸನದಲ್ಲಿ ಒಬ್ಬ ಜೇಡರ ದಾಸಿಯ ಮಗನ ಹೆಸರನ್ನು ಉಲ್ಲೇಖಿಸಿದೆ ಆ ಜೇಡರ ದಾಸಿಯ ಮಗನಾದ ಕಾಟಗೌಡನು ಒಂದು ಕೆರೆಯನ್ನು ಕಟ್ಟಿಸಿದ್ದಕ್ಕಾಗಿ ಬರಮದೇವ ಮುಂತಾದವರು ಉಂಬಳಿಯನ್ನು ಕೊಟ್ಟಂತೆ ಆ ಶಾಸನದಲ್ಲಿ ಇದೆಯೆಂದೂ ಹಾಗು ಬಸವಣ್ಣನವರು ಒಂದು ವಚನದಲ್ಲಿ 'ದಾಸಯ್ಯ ಶಿವದಾನವನೆರೆಯ ನೋಡಯ್ಯ' ಎಂದು ಬರೆದಿರುವದನ್ನು ನೋಡಿದರೆ 'ಎರೆಯ' ಎಂಬ ಪದವು ಸಮಕಾಲೀನರ ವರ್ತನೆಯನ್ನು ಸೂಚಿಸುವರೆಂದು ಹೇಳಬೇಕು ಎಂದೂ ಮತ್ತು ಕ್ರಿ. ಶ. ೧೨೦೦ ರಲ್ಲಿ ಕಾಟಗೌಡನು ಬದುಕಿರಬೇಕಾದರೆ ಅವನ ತಂದೆಯಾದ ದೇವರ ದಾಸಿಯು ಬಸವಣ್ಣನವರ ಸಮಕಾಲೀನನೆಂದೂ ಮೊದಲಾದವುಗಳನ್ನು ಹೇಳಿ ದೇವರದಾಸಿಮಯ್ಯನು ಬಸವಣ್ಣನವರ ಜೀವಿತ ಕಾಲದಲ್ಲಿ ಬದುಕಿದ್ದಿರಬಹುದೆಂದು ನಾವು ಅಭಿಪ್ರಾಯ ಪಡುತ್ತೇವೆಂದು ಅಂದಿರುವರು. ಅಂದರೆ ದೇವರ ದಾಸಿಮಯ್ಯನ ಕಾಲವು ಸುಮಾರು ಕ್ರಿ. ಶ. ೧೧೬೦ ಇತ್ತೆಂದು ನಿರ್ಧರಿಸಿರುವರು.

(೭) ಮಿ। ಶ್ರೀನಿವಾಸ ಮೂರ್ತಿಯವರ ಅಂಬೋಣ ಪ್ರಕಾರ ಹಾಸನ ಡಿಸ್ಟ್ರಿಕ್ಟ ಬೇಲೂರ ಗ್ರಾಮದ ೧೧೨ ನೆಯ ಶಿಲಾಶಾಸನದಲ್ಲಿ ಉಕ್ತವಾಗಿರುವ ಸುಗ್ಗಲದೇವಿಗೂ ಈ ದೇವರದಾಸಿಮಯ್ಯನಿಗೂ ಗುರುಶಿಷ್ಯ ಸಂಬಂಧ ಹೇಳದಿದ್ದರೂ ಸ್ತ್ರೀಯಳ ಹೆಸರು ಶಿಲಾಶಾಸನದಲ್ಲಿ

ಉಲ್ಲೇಖಿಸಲ್ಪಡಬೇಕಾದರೆ ಆ ಮಹಿಳೆಯು ಅಷ್ಟು ಸುಪ್ರಸಿದ್ಧಳೂ ರಾಜ ಮನೆತನದವಳೂ ಇರಬಹುದೆಂಬ ಭಾಸವಾಗುತ್ತದೆ. ಚಾಲುಕ್ಯ ಚಕ್ರವರ್ತಿಯಾದ ೧ ನೆಯ ಜಯಸಿಂಹನ ಹೆಂಡತಿಯ ಹೆಸರು ಸುಗ್ಗಲದೇವಿ ಎಂದು ಇರುವದು. ಇವಳೇ ಆ ಶಾಸನದಲ್ಲಿಯ ಸುಗ್ಗಲದೇವಿ ಆದ ಪಕ್ಷದಲ್ಲಿ ಇವಳಿಗೂ ದೇವರದಾಸಿಮಯ್ಯನಿಗೂ ಆ ಶಾಸನದಲ್ಲಿ ಗುರುಶಿಷ್ಯ ಸಂಬಂಧ ಹೇಳದಿದ್ದರೂ ಬೇರೆ ಕಡೆಗೆ ಅನೇಕ ಸುಪ್ರಸಿದ್ಧ ಗ್ರಂಥಗಳಲ್ಲಿ ಹೇಳಿದ್ದು ವಾಚಕರು ಮನಗಾಣಬಹುದು. ಈ ಶಾಸನದಲ್ಲಿ ಗುರುಶಿಷ್ಯ ಸಂಬಂಧ ಹೇಳದಿದ್ದರೂ ಸುಗ್ಗಲದೇವಿಯು ದೇವರ ದಾಸಿಮಯ್ಯನ ಶಿಷ್ಯಳೂ ಜಯಸಿಂಹನ ಹೆಂಡತಿಯೂ ಇದ್ದದ್ದು ಸುಳ್ಳಲ್ಲ. ಇದಕ್ಕೆ ಶಿಲಾಶಾಸನವೇ ಬೇಕೆಂಬದು ನಿರ್ಬಂದವಿಲ್ಲ. ಹಾಸನದ ಡಿಸ್ಟ್ರಿಕ್ಟ ಅರಸಿಕೇರಿ ಶಾಸನದಲ್ಲಿ ಒಬ್ಬ ಜೇಡರ ದಾಸಿಮಯ್ಯನ ಮಗನಾದ ಕಾಟಗೌಡನ ಹೆಸರಿನ ಉಲ್ಲೇಖವಿದ್ದು ಅವನು ಒಂದು ಕೆರೆ ಕಟ್ಟಿಸಿದ್ದಕ್ಕಾಗಿ ಅವನಿಗೆ ಬರ್ಮದೇವ ಮುಂತಾದವರು ಉಂಬಳಿಕೊಟ್ಟಿದ್ದರ ಉಲ್ಲೇಖವಿರುವದು ನಿಜ. ಆದರೆ ಆ ಶಾಸನದಲ್ಲಿ 'ಜೇಡರ ದಾಸಿಮಯ್ಯನ ಮಗ ಕಾಟಗೌಡನು ಗೀಜೆಯಹಳ್ಳಿಯ ಮರುಹಿಂಡಿಯ ಹೊಲವೇರಿಯ ಸೀಮೆಯಲ್ಲಿ ಕಟ್ಟಿಸಿದ ಕೆರೆಗೆ ಬಿಟ್ಟು ಗದ್ದೆ ಉಂಬಳಿ' ಎಂದು ಹೇಳಿರುವದರಿಂದ ಈ ಜೇಡರ ದಾಸಿಮಯ್ಯನು ಬೇರೊಬ್ಬನೆಂದು ಸಹಜ ಗೊತ್ತಾಗುತ್ತದೆ. ಯಾಕಂದರೆ ಇದರಲ್ಲಿ ಗೀಜಹಳ್ಳಿ ಎಂಬ ಗ್ರಾಮದಲ್ಲಿ ಗದ್ದೆ ಉಂಬಳಿ ಬಿಟ್ಟದ್ದು ಹೇಳಬೇಕಾದರೆ ಅದು ಮಲೆನಾಡವಿರಬೇಕು; ಮತ್ತು ಗೀಜ ಹಳ್ಳಿಯು ಜೇಡರ ದಾಸಿಮಯ್ಯನ ವಾಸಸ್ಥಾನವಾಗಿ ಅದಾದರು ಮಲ ಸೀಮೆಯಲ್ಲಿ ಇರಬೇಕಾಗಿತ್ತು. ಅದು ಹಾಗಿರದೆ ದೇವರದಾಸಿಮಯ್ಯನ ಊರು ಮುದನೂರು. ಇದು ವಿಜಾಪುರ ಜಿಲ್ಲಾ, ತಾಲೂಕ ಸಿಂದಗಿ ಗ್ರಾಮದಿಂದ ೩೦ ಮೈಲುಗಳ ಮೇಲೆ ಇದೆ. ಇದು ಈಗ ನಿಜಾಮ ಇಲಾಖಾ ಸುರಪುರ ತಾಲೂಕಿನಲ್ಲಿ ಸೇರಿದೆ. ಈಗಲೂ ಈ ಗ್ರಾಮವು ಅನೇಕ ಶಿವಾಲಯಗಳಿಂದಲೂ ತೀರ್ಥಗಳಿಂದಲೂ ತುಂಬಿಕೊಂಡಿದ್ದು ಬಹು ಪವಿತ್ರ ಕ್ಷೇತ್ರಸ್ಥಾನವೆಂದು ತಿಳಿಯುತ್ತದೆ. ಇಲ್ಲಿಯ ಶಿವಾಲಯಗಳಲ್ಲಿ ರಾಮನಾಥನ ಶಿವಾಲಯವೇ ಮಹತ್ವವಾದದ್ದು. ಈ ರಾಮನಾಥನೇ ದೇವರ ದಾಸಿಮಯ್ಯನ ಇಷ್ಟ ದೇವತೆಯಾಗಿರುತ್ತಾನೆ. ಆತನ ಮುದ್ರಿಕೆಯಾದರೂ 'ರಾಮನಾಥಾ' ಎಂದು ಇರುವದು. ಈ

ಗ್ರಾಮದಲ್ಲಿ ಅನೇಕ ಶಿಲಾಶಾಸನಗಳು ಇನ್ನೂ ಉಪಲಬ್ಧ ಇವೆ. ಇಂಥ ವೆಲ್ಲ ಅನೇಕ ಐತಿಹಾಸಿಕ ಮಹತ್ವದ ಕುರುಹುಗಳು ಮುದನೂರಿನಲ್ಲಿ ಇರುತ್ತಿರಲೂ ಇವನ್ನಿಗೂ ಅರಸಿಕೆರೆ ಶಾಸನದಲ್ಲಿ ಹೇಳಿರುವ ಜೇಡರ ದಾಸಿಮಯ್ಯನಿಗೂ ಏನು ಸಂಬಂಧವಿಲ್ಲೆಂಬುದು ಸ್ಪಷ್ಟ ಗೊತ್ತಾಗುವದು. 'ದಾಸಯ್ಯ ಶಿವದಾನವನೆರೆಯ ನೋಡಯ್ಯ' ಎಂಬ ವಚನದೊಳಗಿನ 'ಎರೆಯ' ಎಂಬು ಪದವು ಸಮಕಾಲೀನರ ವರ್ತನೆಯನ್ನು ತೋರಿಸುತ್ತದೆ ಎಂದು ಬರೆದಿರುವರು. ಆದರೆ ಅದು ಹಾಗಿರದೆ ಶ್ರೀ ಬಸವಣ್ಣನವರು ತಮ್ಮ ಭಕ್ತನ ಭಕ್ತಸ್ಥಲದ ವಚನ ೯೨ ರಲ್ಲಿ ತನ್ನ ಇಷ್ಟ ದೈವತವಾದ ಶ್ರೀ ಸಂಗಮದೇವನಿಗೆ 'ದಾಸಯ್ಯ ಶಿವದಾನವನೆರೆಯ' ಮುಂತಾದ ವಾಕ್ಯಗಳಿಂದ ದೂರು ಹೇಳಿದಂತೆ ಆರ್ತಸ್ವರದಿಂದ ಒರಲಿಕೊಂಡಿರುವನು. ಇದರಿಂದ ಬೇಡಿಕೊಂಬುವವರಿಗೆ ಬೇಡಿಸಿಕೊಳ್ಳುವವರು ಸಮಕಾಲೀನರಿರಬೇಕೆಂಬುದೇನು ಸರ್ವಸಾಮಾನ್ಯವಾದ ನಿರ್ಬಂಧವಲ್ಲವು. ಹಾಗಿದ್ದ ಪಕ್ಷದಲ್ಲಿ ಅನಾದಿಕಾಲದ ಶ್ರೀ ಸಂಗಮನಾಥನೂ ಕೂಡ ಶ್ರೀ ಬಸವಣ್ಣನವರ ಸಮಕಾಲೀನನಿರಬೇಕಾದೀತು. ಅದು ಸಾಧ್ಯವಲ್ಲವು. ಆದುದರಿಂದ ಬಸವಣ್ಣನವರು ದೇವರ ದಾಸಿಮಯ್ಯನ ಸಮಕಾಲೀನರಲ್ಲವೆಂಬುವದು ಸಹಜ ಗೊತ್ತಾಗುವದು.

(೮) ಇದು ಅಲ್ಲದೆ ಇವರಿಬ್ಬರು ಸಮಕಾಲೀನರಾಗಿದ್ದ ಪಕ್ಷಕ್ಕೆ ಇನ್ನಿತರ ಶಿವಶರಣರಂತೆ ಎಲ್ಲಾದರೂ ಒಬ್ಬನ್ನೊಬ್ಬರು ಕೊಂಡಾಡಿದ್ದು ಸಿಗುತ್ತಿತ್ತು. ಅದು ಹಾಗಿರದೆ ಬಸವಣ್ಣನವರು ಮಾತ್ರ ತಮ್ಮ ವಚನಗಳಲ್ಲಿ ದೇವರ ದಾಸಿಮಯ್ಯನನ್ನು ಹಲವು ಕಡೆಗೆ ಕೊಂಡಾಡಿರುವಂತೆ ದೊರೆಯುವದಲ್ಲದೆ, ದಾಸಿಮಯ್ಯನು ಮಾತ್ರ ತನ್ನ ವಚನಗಳಲ್ಲಿ ಬಸವಣ್ಣನವರನ್ನು ಎಲ್ಲಿಯೂ ಕೊಂಡಾಡಿರುವಂತೆ ತೋರುವದಿಲ್ಲ. ಆದುದರಿಂದ ದೇವರ ದಾಸಿಮಯ್ಯನು ಮತ್ತು ಬಸವಣ್ಣನವರು ಸಮಕಾಲೀನರಲ್ಲವೆಂದೂ ಮಿ. ಶ್ರೀನಿವಾಸ ಮೂರ್ತಿಯವರ ಅಭಿಪ್ರಾಯದಂತೆ ದೇವರ ದಾಸಿಮಯ್ಯನು ೧೨ ನೇ ಶತಮಾನದಲ್ಲಿರದೆ ಡಾಕ್ಟರ ಫ್ಲೀಟ, ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವಬಹಾದ್ದೂರ ಆರ್. ನರಸಿಂಹಾಚಾರ್ಯ ಮತ್ತು ರಾವಸಾಹೇಬ ಪಿ. ಜಿ. ಹಳಕಟ್ಟಿಯವರ ಅಭಿಪ್ರಾಯದಂತೆ ದೇವರ ದಾಸಿಮಯ್ಯನು ಕ್ರಿ. ಶ. ೧೦೪೦ ರ ಸುಮಾರಕ್ಕೆ ಇದ್ದಾನೆಂದೂ ನಾವಾದರೂ ಅಭಿಪ್ರಾಯಪಡುತ್ತೇವೆ.

(೯) ಕರ್ನಾಟಕ ಕವಿತಿಲಕನಾದ ಹರಿಹರಾಚಾರ್ಯನು ಶಂಕರ ದಾಸಿಮಯ್ಯನ ರಗಳೆಯನ್ನು ಬರೆದಿದ್ದಾನೆ. ಆ ಕಥೆಯಲ್ಲಿ ಶಂಕರ ದಾಸಿಮಯ್ಯನಿಗೂ ದೇವರ ದಾಸಿಮಯ್ಯನಿಗೂ ಭೆಟ್ಟಿಯಾದಂತೆ ಹೇಳಿ ಅದರಲ್ಲಿ 'ಮುದನೂರೊಳು ಜೇಡರ ದಾಸಿಮಯ್ಯಂ ರಾಮನಾಥ ಪ್ರಸಾದ ಗರ್ಭಹೃದಯಂ' ಇರುತ್ತಾನೆಂದೂ, 'ಶಿವನಂತೆ ಕೊಡುವರ್ ಎನ್ನಂತೆ ಪಡೆದರ್ ಇಲ್ಲೆಂಬ ಗರ್ವಂ ತನ್ನ ಮನದೊಳಗೆ' ಎಂದೂ, ಆ ಗರ್ವ ಪರಿಹಾರಕ್ಕಾಗಿ ಶಂಕರ ದಾಸಿಮಯ್ಯನು ದೇವರ ದಾಸಿಮಯ್ಯನಿಂದ ಬುದ್ಧಿಯನ್ನು ಕಲಿಸಿಕೊಂಡು ಜೇಡರ ದಾಸಿಮಯ್ಯನು ಮನೆಗೆ ಬರುತ್ತಿರಲು 'ಕಂದಿದ ರವಿಯಂತೆ, ಕೊರಗಿದ ಲತೆಯಂತೆ, ಕಳೆಯೊಡೆದ ಚಂದ್ರಮನಂತೆ, ಮರುಳಂತೆ ಮರೆದು ಶೂನ್ಯ ಹೃದಯನಾಗಿ, ನಿಂದಿರಲಮ್ಮದೆ ಮೆಲ್ಲ ಮೆಲ್ಲನೆ ನಿಜನಿಳಯದತ್ತ ಬರುತ್ತಿದ್ದಾ ದಾಸನಂ ದುಗ್ಗಳೆ ಕಂಡು' ಎಂದಿರುವದರಿಂದಲೂ, 'ದಾಸ ದುಗ್ಗಳೆಗಳಿಗೆ ತವನಧಿ ಇಮ್ಮಡಿಸಿ, ಭಕ್ತಿ ನಂಬುಗೆ ನೂರ್ಮಡಿಸಿ' ಎಂದಿರುವದರಿಂದಲೂ, 'ರಾಮನಾಥ ಪ್ರಸಾದ ಗರ್ಭಹೃದಯಂ' ಎಂದು ಹೇಳಿರುವದರಿಂದ ರಾಮನಾಥವೆಂಬುದು ಜೇಡರ ದಾಸಿಮಯ್ಯನ ಅಂಕಿತವೆಂದೂ ಮತ್ತು ಅದು ಆತನ ಇಷ್ಟ ದೈವತದ ಹೆಸರಿರುವದರಿಂದಲೂ ಈ ಜೇಡರ ದಾಸಿಮಯ್ಯನು ಮತ್ತು ಶಂಕರ ದಾಸಿಮಯ್ಯನು ಸಮಕಾಲೀನರೆಂದೂ ಸ್ಪಷ್ಟವಾಗಿ ಕಂಡು ಬರುತ್ತದೆ.

(೧೦) ಈ ಕಥೆಯ ಅನುಕರಣವನ್ನೇ ಸಿದ್ಧಕವಿಯು ತನ್ನ 'ಮರಿ ಬಸವ ಪುರಾಣಮು' ಎಂಬ ಆಂಧ್ರ ಗ್ರಂಥದಲ್ಲಿಯೂ ಮಾಡಿರುವನು. ಇದು ಅಲ್ಲದೆ ಭೀಮ ಕವಿಯು ಬಸವಪುರಾಣದಲ್ಲಿ ಜೇಡರ ದಾಸಿ. ಶಂಕರ ದಾಸಿಯರ ಕಥೆಗಳನ್ನು ಹೇಳಿ ಅದರಲ್ಲಿ ಇಪ್ಪತ್ತುಮೂರನೆಯ ಸಂಧಿಯ ೪೧ ನೇಯ ಪದ್ಯಭಾಗದಲ್ಲಿ 'ಆ ಸಮಯದೊಳ್ ಪಾರಿ ಶಂಕರ। ದಾಸಿಭಕ್ತರು ಹೊಗಳೆ ಜೇಡರ। ದಾಸಿಯು ದುಗ್ಗಳೆಯನೆತ್ತಿ ದಯಾಮೃತದ ಸೊನೆ॥ ಸೂಸುತಿರೆ ನೋಡಿ ..' ಎಂದು ಹೇಳಿರುವನು; ಮತ್ತು ತಡಿಪನೊಂದಂ ನೆಯಿದು ಕೊಟ್ಟಾ। ದದುಮ್ಮಡನ ಕೈಯಿಂದಲಿನ್ನುಂ। ಪಡೆವುದೆಂದವಸವನು ಖಂಡುಗ ಹತ್ತು ಕೊಳಗವನು ॥೩೭॥ ಹಾಗು, ಹರನ ಕೈಯಲಿ ಮುನ್ನದಾಸನು ಪಡೆದ ತವನಿಧಿಯ ॥ ಶರಣ ಶಂಕರ ದಾಸ ತೆಗೆಯಲು। ಪರಿಭವಾದ್ಭುತ ಶೋಕ ಮಾನಸ।

ಘರವಶದೊಳಿಹ ಪತಿಗೆ ದುಗ್ಗಳ ದೇವಿ ಹೇಳಿದಳು ॥೧೦॥' ಎಂದು ಭೀಮಕವಿಯು ಹೇಳಿರುವದರಿಂದಲೂ, ದಾಸನ ವಸ್ತ್ರ ಬೇಡಿದ ವಿಚಾರವನ್ನು ಬಸವಣ್ಣನವರು ಹೇಳುವದರಿಂದಲೂ ದೇವರ ದಾಸಿಮಯ್ಯನು ಮತ್ತು ಜೇಡರ ದಾಸಿಮಯ್ಯನು ಒಬ್ಬನೇ ಎಂದೂ ಹಾಗು ಜೇಡರ ದಾಸಿಮಯ್ಯ ಶಂಕರ ದಾಸಿಮಯ್ಯ ಈ ಉಭಯತರು ಸಮಕಾಲೀನರೆಂದೂ ಎಂದರೆ ಸುಮಾರು ಕ್ರಿ. ಶ. ೧೧೪೦ ರಲ್ಲಿ ಇದ್ದವರೆಂಬದು ಬಲಪಡುತ್ತದೆ.

---

# ಮಲತ್ರಯ.

(ಲೇಖಕ:—ರಾ॥ ರಾ॥ ಬಸವಪ್ಪ ಚೆನ್ನಪ್ಪ ಪಟ್ಟೇದ. ವಂಟಮುರಿ)

---

ಮನುಷ್ಯನು ಜನ್ಮಕ್ಕೆ ಬಂದು, ಸ್ವಾರ್ಥಲಂಪಟನಾಗಿ, ಕಡೆತನಕ ಅನೇಕ ದೋಷಗಳನ್ನು ಮಾಡುತ್ತಾನೆ. ಆ ದೋಷಗಳಲ್ಲಿ ನಮ್ಮ ವೀರಶೈವರು ಮೂರು ಭಾಗಗಳನ್ನು ಮಾಡಿ, ಅವಕ್ಕೆ ತ್ರಿಮಲಗಳು ಎಂಬ ಹೆಸರಿಟ್ಟಿದ್ದಾರೆ. ನಮಗೆ ಸ್ಥೂಲ-ಸೂಕ್ಷ್ಮ ಕಾರಣಗಳೆಂದು ಮೂರು ದೇಹಗಳು ಇರುವವಷ್ಟೇ. ಆ ದೇಹಗಳಲ್ಲಿ ಈ ಮಲಗಳು ಒಂದೊಂದಾಗಿ ವಾಸಿಸುತ್ತವೆ. ಸ್ಥೂಲ ತನುವಿನಲ್ಲಿ ಕಾರ್ಮಿಕಮಲವೂ ಸೂಕ್ಷ್ಮ ತನುವಿನಲ್ಲಿ ಮಾಯಾ ಮಲವೂ ಕಾರಣ ತನುವಿನಲ್ಲಿ ಆಣವ ಮಲವೂ ನೆಲಿಸಿರುತ್ತವೆ. ಈ ಮಲಗಳೇ ನಮ್ಮ ಪರಿಪರಿಯ ದುಃಖಕ್ಕೆ ಕಾರಣವಾಗಿವೆ. ನಮ್ಮನ್ನು ಭವ ಚಕ್ರದಲ್ಲಿ ಸೇರಿಸಿ ಗರಗರನೆ ತೆರಪಿಲ್ಲದೆ ತಿರುವುತ್ತವೆ. ೮೪ ಲಕ್ಷ ಯೋನಿಗಳಲ್ಲಿ, ಪ್ರತಿಯೊಂದರೊಳಗೆ ಅಸಂಖ್ಯ ಸಾರ ಜನ್ಮಿಸಿರುತ್ತೇವೆಂದು ನಮ್ಮ ಧರ್ಮಶಾಸ್ತ್ರವು ಹೇಳುತ್ತದೆ. ಎಲ್ಲ ಯೋನಿಗಳಲ್ಲಿ ಮನುಷ್ಯಯೋನಿಯೇ ಶ್ರೇಷ್ಠವಾದುದು. ಯಾಕಂದರೆ, ಈ ಪ್ರಾಣಿಗೆ ದೇವರು ಜ್ಞಾನವನ್ನು ದಯಪಾಲಿಸಿದ್ದಾನೆ. ಆ ಜ್ಞಾನದ ಯೋಗದಿಂದ ಮಲತ್ರಯದ ಬಾಧೆಯೊಳಗಿಂದ ಪಾರಾಗಲು, ಮನುಷ್ಯಗೆನಿ ಶಕ್ಯವದೆ. ಅದನ್ನೇ ಮುಖ್ಯ ಧ್ಯೇಯವಾಗಿಟ್ಟುಕೊಂಡು, ಪ್ರತಿಯೊಬ್ಬ

ಮನುಷ್ಯನು ಎಚ್ಚರದಿಂದ ನಡೆಯುವದು ಅವಶ್ಯವುಂಟು. ಈ ಧ್ಯೇಯವನ್ನು ಸಾಧಿಸಿ ದುಃಖದಿಂದ ಮುಕ್ತನಾಗಲೆಂದೇ ದಯಾಳುವಾದ ದೇವರು ನಮಗೆ ಈ ನರ ಜನ್ಮವನ್ನು ಕೊಟ್ಟಿದ್ದಾನೆ. ಆದರೂ ಅಜ್ಞಾನ ವಶದಿಂದ ಮರೆವೆಗೊಳಗಾಗಿ, ಈ ಮಾಯಾ ಪ್ರಪಂಚಕ್ಕೆ ಮೋಹಿಸಿ, ವಿಷಯ ಭೋಗಕ್ಕೆಳಸಿ, ನಾವು ಆ ಮುಖ್ಯ ಧ್ಯೇಯದಿಂದ ಚ್ಯುತರಾಗಿರುತ್ತೇವೆ. ಇದು ಅತ್ಯಂತ ಶೋಚನೀಯವಾದ ಮಾತು! ಈ ಸಂಗತಿಯನ್ನು ಬುಧ್ಯಾ ಜನತೆಯ ಅವಗಾಹನೆಗೆ ತರುವ ಉದ್ದೇಶದಿಂದಲೇ ಈ ಲೇಖವನ್ನು ಬರೆಯಲಾಗಿದೆ.

## ಪುರಾಣಾಂತರ ವರ್ಣನೆ.

ಈ ಮಲಗಳೇನೂ ಸಾಧಾರಣವಾದುವಲ್ಲ. ಇವಕ್ಕೆ ನಮ್ಮ ಪುರಾಣದಲ್ಲಿ ಮೂವರು ಅಜಿಂಕ್ಯರಾಕ್ಷಸರೆಂತಲೂ ಇವರ ನಾಶವು ಅತ್ಯಂತ ಘೋರವಾದುದೆಂತಲೂ ವರ್ಣಿಸಿರುವರು. ಆ ಕಥೆಗೆ "ತ್ರಿಪುರದಹನ" ವೆಂಬ ಹೆಸರು ಕೊಟ್ಟಿದ್ದಾರೆ, ಅದರ ಸಾರಾಂಶವನ್ನು ಇಲ್ಲಿ ಕೊಡುವದು ಅಪ್ರಸ್ತುತವಾಗದೆಂದು ನೆನಿಸಿ ಕೆಳಗೆ ಬರೆದಿರುವೆನುಃ— ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ಮೂವರು ರಾಕ್ಷಸರು ಉಗ್ರ ತಪಸ್ಸು ಮಾಡಿ ಬ್ರಹ್ಮ ದೇವನಿಂದ, ಮೂಲೋಕದವರಾರಿಂದಲೂ— ದೇವ ಮಾನವದಾನವರಾರಿಂದಲೂ— ತಮಗೆ ಮರಣ ಸಂಭವಿಸದಂತೆ ಭದ್ರತೆಯನ್ನು ಹೊಂದಿ, ಆಕಾಶದೊಳಗೆ ಮೂರು ಪುರಗಳನ್ನು ಕಟ್ಟಿಕೊಂಡು, ಅವಕ್ಕೆ ಒಬ್ಬೊಬ್ಬರು ಒಡೆಯರಾಗಿರುತ್ತ, ತ್ರಿಲೋಕ ಕಂಟಕರಾದರು. ಅವರ ಪಟ್ಟಣಗಳಾದರೋ ಏಕ ಪ್ರಕಾರವಾಗಿ ಒತ್ತರದಿಂದ ಗರಗರನೆ ತಿರುಗುತ್ತಿರುವವು. ದೇವಮಾನ ಸಹಸ್ರವರ್ಷ (ಮನುಜಮಾನ ೩೬೦೦೦೦ ಮೂವತ್ತಾರು ದಶಸಹಸ್ರವರ್ಷ) ಗಳಿಗೊಮ್ಮೆ ಒಂದು ನಿಮಿಷ ಕಾಲ ನಿಲ್ಲುವವು. ಆಗ ಮಾತ್ರ ಅಷ್ಟರಲ್ಲಿಯೇ ಒಂದೇ ಬಾಣದಿಂದ ಮೂರೂ ನಗರಗಳನ್ನು ಸಂಹರಿಸಿದರೆ ಆ ರಾಕ್ಷಸರಿಗೆ ಮರಣವು! ಇಂತಹರನ್ನು ಸಾಕ್ಷಾತ್ ತ್ರಿಗುಣಾತೀತ ಶಿವನೇ ದಂಡ ಯಾತ್ರೆ ಮಾಡಿ ಸಂಹರಿಸಿದನು. ಅದನ್ನು ಮಹಿಮ್ನಸ್ತೋತ್ರಕಾರನಾದ ಪುಷ್ಪದಂತನು ಹೀಗೆ ಬಣ್ಣಿಸಿದ್ದಾನೆಃ—

ರಥಃ ಕ್ಷೋಣೀಯಂತಾ ಶತಧೃತಿರಗೇಂದ್ರೋಧನುರಥೋ ।
ರಥಾಂಗೇಚಂದ್ರಾರ್ಕೌರಥ ಚರಣ ಪಾಣಿಃ ಶರ ಇತಿ ॥
ದಿಧಕ್ಷೋಸ್ತೇ ಕೋಯಂತ್ರಿಪುರತೃಣಮಾಡಂಬರವಿಧಿರ್ ।
ವಿಧೇಯೈಃ ಕ್ರೀಡಂತ್ಯೋನಖಲು ಪರತಂತ್ರಾಃಪ್ರಭುಧಿಯಃ ॥

ಇದರ ಸಾಮಾನ್ಯಾರ್ಥವೇನಂದರೆ— ಭೂಮಿಯು ರಥ, ಬ್ರಹ್ಮನು ಸಾರಥಿ, ಮೇರುಗಿರಿಯು ಧನು, ರವಿಶಶಿಗಳು ರಥದ ಗಾಲಿಗಳು, ವಿಷ್ಣುವು ಬಾಣವು, ಹೀಗೆ ಸಿದ್ಧತೆಯನ್ನು ಮಾಡಿಕೊಂಡು ಶಿವನು ತ್ರಿಪುರಗಳ ಮೇಲೆ ಸಾಗಿದನು. ಇದೆಲ್ಲ ಆಡಂಬರವು ಆವನಿಗೆ ತೃಣಪ್ರಾಯವಾದ ತ್ರಿಪುರ ದಹನಕ್ಕೆ ಅದೇನು ಕಾರಣವಿದ್ದಿತು? ಆದರೆ ಇದೆಲ್ಲ ಲೀಲಾ ವಿನೋದಾರ್ಥವೆಂದೂ ಇಲ್ಲವೆ ಪ್ರಭುಗಳು ಪರಿವಾರಾಧೀನರೆಂದೂ ಭಾವಿಸುವದೇ ಸಹಜ! ಇದೂ ಅಲ್ಲದೆ ಬೇರೆ ಕಡೆ, ಪಾಶುಪತವು ಶರಾಗ್ರವು ವೇದಗಳು ಕುದುರೆಗಳು, ಶಾಸ್ತ್ರಗಳು ರಥದ ಕೀಲುಗಳು, ಆದಿಶೇಷನು ಸಿಂಜಿನಿ, ಇತ್ಯಾದಿ ವರ್ಣನೆಯೂ ಉಂಟು. ಒಟ್ಟು ತಾತ್ಪರ್ಯವೇನೆಂದರೆ ಪೃಥ್ವಿ (ಮನುಷ್ಯಪ್ರಾಣಿ) ಯೆಂಬ ರಥವು, ಸೂರ್ಯಚಂದ್ರರೆಂಬ ಮನುಷ್ಯನ ಆಯುಷ್ಯವನ್ನೆಣಿಸಲಿಕ್ಕೆ ಎಕ್ಕಂ ಪ್ರಮಾಣವಾದ ದಿನ ರಾತ್ರಿಗಳೆಂಬ) ಗಾಲಿಗಳು, ಶಾಸ್ತ್ರಗಳೆಂಬ ಕೀಲ (ಮನುಷ್ಯನ ಆಯುಷ್ಯಕ್ರಮಕ್ಕೆ ಆಧಾರವಾದ ಗ್ರಂಥಗಳು), ವೇದಗಳೆಂಬ ಅಶ್ವಗಳು (ಪ್ರಗತಿಪಡಿಸುತ್ತ ಮನುಷ್ಯನನ್ನು ಧ್ಯೇಯದಕಡೆ ಒಯ್ಯುವ ಸಾಧನಗಳು), ಬ್ರಹ್ಮನು (ಜೀವನು) ಎಂಬ ಸಾರಥಿಯು, ಮೆರುಗಿರಿಯೆಂಬ (ಅಚಲ ನಿಶ್ಚಯವೆಂಬ) ಧನುಸ್ಸು, ಮಹಾಶೇಷ (ಕುಂಡಲಿ ಸರ್ಪವೆನಿಸುವ ಸುಷುಮ್ನಾ ನಾಡಿ) ಎಂಬ ಹೆದೆ, ವಿಷ್ಣುವೆಂಬ (ಸುಷುಮ್ನಾನಾಡಿಯನ್ನಲಂಕರಿಸಿದ ಷಟ್‌ಚಕ್ರಗತ ಲಿಂಗಶಕ್ತಿಯೆಂಬ) ಬಾಣವು, ಪಾಶುಪತವೆಂಬ (ಪಶು, ಪಾಶ, ಪತಿಗಳ ಸಂಬಂಧೀಯ ಮಹಾಜ್ಞಾನವೆಂಬ) ಶರಾಗ್ರವು, ಇವೆಲ್ಲ ಸಾಧನಗಳಿಂದ ಶಿವನು (ಕೂಟಸ್ಥನು) ಸಜ್ಜಾಗಿ, ತ್ರಿಪುರಗಳಲ್ಲಿ (ದೇಹತ್ರಯದಲ್ಲಿ) ವಾಸವಾಗಿರುವ ಮೂವರು ರಾಕ್ಷಸರನ್ನು (ಆಣವಾದಿ ಮಲಗಳನ್ನು) ಒಂದೇ ಬಾಣದಿಂದ (ಸಮರಸೈಕ್ಯ ಜ್ಞಾನದಿಂದ) ಆ ಪುರ ಸಹಿತ ಸುಟ್ಟು ಬಿಟ್ಟನು; ಅಂದರೆ ಪುನರ್ಜನ್ಮವಿಲ್ಲದಂತೆ ಮಾಡಿದನು. ಇದೇ ಆ ಕಥೆ ಹಾಗೂ ಅದರ ಗುಟ್ಟು. ಇನ್ನು ಆ ಮಲಗಳನ್ನು ಕುರಿತು ಆಲೋಚಿಸುವಾ.

## ಮಲತ್ರಯದ ಸ್ವರೂಪ.

೧
ಆಣವಮಲ (ಅಣು+ಅ) – ಅಂದರೆ ಅಣು ಸ್ವರೂಪದವನೆಂಬ ದೋಷ— ಸಮುದ್ರದಲ್ಲಿ ತೆರೆಯು ಎಂತೋ ಅಂತು, ಜೀವನು (ಮಾನವನು) ಪರಿಪೂರ್ಣ ಅಖಂಡ ಪರವಸ್ತುವಿನಲ್ಲಿ ಅದರ ಸ್ಫುರಣದಿಂದ ಉದ್ಭವಿಸಿ ತೋರಿದ್ದರೂ, ತನ್ನ ಅಸ್ತಿತ್ವವು ಸ್ವತಂತ್ರವಾದುದೆಂದು ಅಜ್ಞಾನದಿಂದ ಬಗೆದು, ತನ್ನನ್ನು ಆ ಅಖಂಡ ವಸ್ತುವಿನಿಂದ ಬಿಂಗಡಿಸಿಕೊಂಡು, ಅದರೊಡನೆ ಹೋಲಿಸಿ ನೋಡಿ, "ತಾನು ಆ ಅಪ್ರಮಾಣ ಅಖಂಡ ವಸ್ತುವಿಗಿಂತ ಅತ್ಯಂತ ಅಲ್ಪನಿರುವೆ" ನೆಂದು ಭಾವಿಸಿದನು. ಈ ಮಿಥ್ಯಾಕಲ್ಪನೆಯನ್ನು ಮಾಡಿಕೊಂಡ ದೋಷವೇ ಆಣವ ಮಲವು. ಜೀವನು ನಿಜವಾಗಿ ಆ ಮಹದ್ವಸ್ತುವೇ ಆಗಿದ್ದು, ಸುಮ್ಮ ಸುಮ್ಮನೆ ಈ ಅಣುತ್ವ ದೋಷವನ್ನು ಅಂಟಿಸಿಕೊಂಡುದರಿಂದ, ಆಕಾರವಷ್ಟೇ ಅಲ್ಲದೆ ಅದರೊಡನೆಯೇ ಜ್ಞಾನದಿಂದಲೂ ಕರ್ತೃತ್ವದಿಂದಲೂ ತೀರ ಕೀಳಾದವನೆಂದು ಊಹಿಸಿದನು.

ಮಾಯಾಮಲ-ಜೀವನು ಹೀಗೆ ಬೇರೆಯಾದ ತನ್ನನ್ನು 'ನಾನು' ಎಂದು ಅಹಂಕರಿಸಿದನು ಇದೇ ಮೇರೆಗೆ ಆ ಪರವಸ್ತುವಿನಲ್ಲಿ (ಸಮುದ್ರದ ನೊರೆತೊರೆಗಳಂತೆ) ತೋರುವ ಬೇರೆ ಪದಾರ್ಥಗಳನ್ನು ಅಂದರೆ ಚರಾಚರ ಜಗತ್ತನ್ನು ಅಜ್ಞಾನ ವಶದಿಂದ "ನೀನು; ಅವನು, ಇವನು; ಅವಳು, ಇವಳು; ಅದು, ಇದು," ಎಂದು ಪ್ರತ್ಯೇಕಿಸಿಯೇ ಕರೆಯ ಹತ್ತಿದನು. ಈ ಭೇದ ಬುದ್ಧಿಯೇ ಮಾಯಾಮಲವೆನಿಸಿತು. ಪರಮಾತ್ಮನ ಸ್ಫುರಣ ಮಾತ್ರದಿಂದ ಅವನಲ್ಲಿ ತೋರಿದ ಈ ಹೊಸ ಸೃಷ್ಟಿಯು, ಮಾಯೆಯ ಯೋಗದಿಂದ ಬಹು ರೂಪಿಯಾಗಿ, ಮನೋಹರವೆನಿಸಿ, ಜೀವವನ್ನು ಹೆಚ್ಚಾಗಿ ಮರುಳ್ಗೊಳಿಸಿತು. ವಿಧವಿಧದ ಬಣ್ಣ, ಆಕಾರ, ಗುಣಧರ್ಮಗಳು, ಶಬ್ದ ಇತ್ಯಾದಿಗಳನ್ನು ಕಂಡು ಬೆರಗಾಗಿ, ಅದರ ಉಪಭೋಗಕ್ಕೆ ಮನಸೋತನು.

---

೧ 'ಅ' ಪ್ರತ್ಯಯ ಬರುವದರಿಂದ ಆದಿ ಸ್ವರಕ್ಕೆ ವೃದ್ಧಿ, ಅಂತ್ಯ ಸ್ವರಕ್ಕೆ ಗುಣವಾಗುವದು. ಅಣು+ಅ= ಆಣೋ+ಅ= ಆಣವ್+ಅ =ಆಣವ– ಬೇರೆ ಉದಾಹರಣೆಗಳು – ಮಾಧವ, ಪಾಂಡವ, ಕೌರವ, ಗೌರವ, ಸೈಂಧವ, ಮಾರ್ದವ ಮುಂತಾದವು.

[೧]ಕಾರ್ಮಿಕಮಲ (ಕರ್ಮ+ಇಕ)– ಒಮ್ಮೆ ವಿಷಯಗಳತ್ತ ಮುಖವಾದ ಮೇಲೆ ಜೀವನಿಗೆ ಅವುಗಳ ಸುಖದ ವ್ಯಾಮೋಹವು ಬೆಳೆದು, ಅದು ಬರುಬರುತ್ತ ಅನಿವಾರ್ಯವಾಗುವದರಿಂದ, ಅವನು ತನ್ನನ್ನು ಅದರೊಳಗೇ ಹೂಳಿಕೊಂಡು ಬಿಡುವುದು ಸ್ವಾಭಾವಿಕ! ಹೀಗೆ ಸ್ವಾರ್ಥಕ್ಕೆ ಬಲಿಯಾಗಿ ನೀತಿ, ನ್ಯಾಯ, ಧರ್ಮವಾವುದನ್ನೂ ನೋಡದೆ, ನಿರ್ದಯನಾಗಿ ಅನ್ಯರನ್ನು ನೋಯಿಸಿ ಘಾತಿಸಿ ಸಹ, ತನಗೋಸ್ಕರ ವಿಷಯಗಳನ್ನು (ಸಂಪತ್ತನ್ನು) ದೊರಕಿಸಹತ್ತಿದನು. ಆಗ ತಾನು ಮಾಡುವ ಕರ್ಮಗಳಲ್ಲಿ ಲೇಸು ಕೆಡಕುಗಳನ್ನು ಕಂಡು ಪುಣ್ಯಪಾಪಂಗಳ ಬಂಧನಕ್ಕೊಳಗಾದನು. ತಾನು ಮಾಡುವ ಕರ್ಮಗಳ ಹೊಣೆಗಾರಿಕೆಯನ್ನು ತಾನು ಹೊತ್ತು – ಅಹಂಕರ್ತಾ ಅಹಂಭೋಕ್ತಾ ಎಂದು -- ಭವಚಕ್ರದಲ್ಲಿ ಸಿಗಬಿದ್ದನು ಇದೇ ಕರ್ಮ ಬಂಧನವು ಅಥವಾ ಕಾರ್ಮಿಕಮಲವು. ಹೀಗಾಗಿ ತನ್ನ ನಿಜ ಸ್ವರೂಪವನ್ನು ಸಂಪೂರ್ಣವಾಗಿ ಮರೆತು ದೇಹವೇ ತಾನೆಂದು ನೆನಿಸಿ, ಕಾಲಕರ್ಮಂಗಳಿಗೆ ಒಳಗಾಗಿ, ತೊಳಲಾಡಹತ್ತಿದನು. ಈ ಪ್ರಕಾರ ಆಣವ ಮಲದಿಂದ ಮಾಯಾ ಮಲವೂ, ಮಾಯಾ ಮಲದಿಂದ ಕಾರ್ಮಿಕಮಲವೂ, ಒಂದರಿಂದೊಂದು ಹುಟ್ಟಿ ಜೀವವನ್ನು ಬಿಗಿದು ಬಿಟ್ಟವು.

ಈ ಮಲಗಳನ್ನು ಕುರಿತು ಶ್ರೀಮುಗ್ಗಿಯಮಾಯಿದೇವರ ಶತಕತ್ರಯದ ೧೩ನೆಯ ಪುಟದಲ್ಲಿ ಅದರ ಟೀಕಾಕಾರರಾದ ಶ್ರೀತೋಂಟದಸಿದ್ಧಲಿಂಗೇಶ್ವರ ದೇಶಿಕರು, ೧೬ನೆಯ ಪದ್ಯದ ಟೀಕೆಯಲ್ಲಿ ಈ ರೀತಿ ಉಲ್ಲೇಖಿಸಿರುವರು. "ಆಣವವೆಂದರೆ ಗರ್ಭಸಂಬಂಧವಾದ ಅಣುರೂಪ ಮಲವು, ಮಾಯವೆಂದರೆ ಜಾತಿಸಂಬಂಧವಾದ ಮೋಹವೆಂಬ ಮಲವು. ಕಾರ್ಮಿಕವೆಂದರೆ ದ್ರವ್ಯಸಂಬಂಧವಾದ ಈಷಣತ್ರಯದೊಡನೆ ಕೂಡಿಕೊಂಡ ಮಲವು." ಇದರರ್ಥವೂ ಮೇಲಿನ ನಿರೂಪಣೆಯ ಅರ್ಥವೂ ಒಂದೇ, ಹೇಗಂದರೆ—(ಅ) ಗರ್ಭಸಂಬಂಧದ (ಉತ್ಪತ್ತಿಗೆ ಸಂಬಂಧಿಸಿದ) ಮಲವೇ ಆಣವಮಲವು. ನಾನು ತಾಯ್ತಂದೆಗಳ ರಕ್ತವೀರ್ಯಗಳಿಂದ ಅವರ ಹೊಟ್ಟೆಯಲ್ಲಿ ಹುಟ್ಟಿದ್ದೇನೆ. ನಾನೂ ಅದರಂತೆಯೇ ನರನು. ಕಾಲ-ಕರ್ಮ ಸುಖ-ದುಃಖಗಳಿಗೆ ಒಳಗಾಗಿ, ಭವಚಕ್ರಕ್ಕೆ ಸಿಕ್ಕವನು. ನಾನು ಪರಿ

---

೧ ಇಲ್ಲಿ ಆದಿ ಸ್ವರಕ್ಕೆ ವೃದ್ಧಿ ಅಂತ್ಯ ಸ್ವರಕ್ಕೆ ಲೋಪವಾಗಿದೆ. ಬೇರೆ ಉದಾ: ಚಾತುರ್ಥಿಕ, ಸಾತ್ವಿಕ, ನೈತಿಕ, ಔದ್ಯೋಗಿಕ ಇತ್ಯಾದಿ.

ಪೂರ್ಣ ಅಖಂಡಪರಮಾತ್ಮನಲ್ಲಿ ಉದಯಿಸಿಲ್ಲ. ಆತನ ಲಕ್ಷಣಗಳಾವವೂ ನನ್ನಲ್ಲಿಲ್ಲ. ನಾನು ಅತ್ಯಂತ ಅಲ್ಪನು (ಅಣುಮಾತ್ರವು). ಈ ತೋರುವ ಜಗತ್ತೇನೂ ನನ್ನ ಸ್ವರೂಪವಲ್ಲ. ಅದು ಬೇರೆ ನಾನು ಬೇರೆ. ಆದರ ಸುಖವನ್ನು ಸಿಕ್ಕಷ್ಟು ಹೊಂದುವದೇ ನನ್ನ ಕರ್ತವ್ಯ. ರಕ್ತಸಂಬಂಧಿಗಳು (ತಾಯ್ತಂದೆ, ಆಪ್ತೇಷ್ಟ ಮುಂತಾದವರು) ಮಾತ್ರ ನನ್ನವರು. ಇತರರಾರೂ ನನ್ನವರಲ್ಲ. ಎಂಬಿವೇ ಮೊದಲಾದ ಕಲ್ಪನಾಭರಿತನಾದನು. (ಬ) ಜಾತಿಸಂಬಂಧವಾದ ಮೋಹವೆಂಬ ಮಲವೇ ಮಾಯಾಮಲವು. ಜಾತಿಯೆಂದರೆ— ಗುಂಪು. ತಾನೇ ಮೊದಲಾದ ಮನುಷ್ಯಕುಲ, ಚರಕೋಟಿ (ನಾನಾಪ್ರಕಾರದ ಪ್ರಾಣಿಗಳ ವರ್ಗಗಳು) ಆ ಚರಗಣ (ಉದ್ಭಿಜ ಖನಿಜ ವಾಯುಗಳ ವಿವಿಧ ಸಮುದಾಯಗಳು) ಹೀಗೆ ಭೇದಭಾವನೆಯು ಕಡೆಗೆ ಹರಿಯುವದೇ ಮೋಹ. ಎಲ್ಲವೂ ಒಂದೇ ಒಂದಾದ ಅವ್ಯಕ್ತದಿಂದ ಹುಟ್ಟಿದುದನ್ನು ಅಜ್ಞಾನಯೋಗದಿಂದ ಮರೆತು, ಭಿನ್ನತ್ವವನ್ನು ತಳೆಯುವದೇ ಮಾಯಾಮಲವು. (ಕ) ಧನಸಂಬಂಧವಾದ ಈ ಷಣತ್ರಯದಿಂದ ಕೂಡಿದ ಮಲವೇ ಕಾರ್ಮಿಕ ಮಲವು. ಈಷಣತ್ರಯವೆಂದರೆ ಹೆಂಡರು, ಮಕ್ಕಳು, ಮನೆಮಾರು ಮೊದಲಾದ ಸಂಪತ್ತು. ಇವರಿಗಾಗಿಯೂ ತನಗಾಗಿಯೂ ಧನ (ವಿಷಯ ರೂಪ ಪದಾರ್ಥಗಳನ್ನು) ಸಂಗ್ರಹಿಸುವದಕ್ಕಾಗಿ, ಅನ್ಯಾಯಾತಿರೇಕಗಳಿಗೆ ಲಕ್ಷಗೊಡದೆ, ಅನೇಕ ಅಕಾರ್ಯಗಳನ್ನೂ ಸುಕಾರ್ಯಗಳನ್ನೂ ಮಾಡಿ, ಪಾಪಪುಣ್ಯಗಳಿಗೆ ಗುರಿಯಾಗಿ, ತಿರುತಿರುಗಿ ಭವಕ್ಕೆ ಬರುವ ದೋಷವೇ ಕಾರ್ಮಿಕ ಮಲವು.

## ಮಲತ್ರಯ ನಿವಾರಣೋಪಾಯ.

ಆ ಪುಸ್ತಕದ ೧೪ನೆಯ ಪುಟದೊಳಗೆ ಇದೇ ಪದ್ಯದ ಟಿಪ್ಪಣಿಯಲ್ಲಿ "ಶ್ರೀಗುರುನಾಥನು ಮಾಡಿದ, ಮುಕ್ತಿಗೆ ಸಾಧನವಾದ, ವೇಧಾ-ಮನು-, ಕ್ರಿಯಾ ಎಂಬ ದೀಕ್ಷಾತ್ರಯದಿಂದ, ಆಣವ-ಮಾಯಾ-ಕಾರ್ಮಿಕ ಮಲತ್ರಯವು ಅಳಿದು ಹೋಗುವದು" ಎಂದು ಬರೆದಿರುವರು. ಈ ಮಾತಾದರೂ ಬಿಚ್ಚಿ ಹೇಳದೆ ತಿಳಿಯುವಂತಿಲ್ಲ. ಆದುದರಿಂದ ಅದನ್ನಾದರೂ ವಿವರಿಸುವೆನು.

ವೇಧಾದೀಕ್ಷೆ:— ಅಂದರೆ ಚುಚ್ಚಿ ಛಿದ್ರಗೊಳಿಸುವ ಸಂಸಾರ ಅಥವಾ ಗುರಿಹೊಡೆಯುವ ಸಂಸ್ಕಾರ. ಇಲ್ಲಿ ಚುಚ್ಚಿಕೊಳ್ಳುವದು ಇಲ್ಲವೆ ಗುರಿ

ಯಾಗಿರುವದು ಕಾರಣ ಶರೀರವಾದ ಅವಿದ್ಯೆ (ಹೃದಯ ಗ್ರಂಥಿ). ಈ ದೀಕ್ಷೆಯಿಂದ ಶಿಷ್ಯನ ಅಜ್ಞಾನವು ನಾಶವಾಗಿ, ತಾನು ಕ್ಷುಲ್ಲಕ ಮನುಜನಲ್ಲ, ಪರಿಪೂರ್ಣವಾದ ಅಖಂಡರೂಪ ಶಿವನು, ಎಂಬ ಅರಿವು ತಲೆದೋರುವದು. ಯಾಕಂದರೆ— ಶ್ರೀಗುರುವು ಕೃಪಾಪೂರಿತಕಟಾಕ್ಷದಿಂದ ನೋಡಿ, ಶಿಷ್ಯನ ಮಸ್ತಕದ ಮೇಲೆ ತನ್ನ ಅಮೃತ ಹಸ್ತವನ್ನಿಟ್ಟೊಡನೆಯೆ, ಅವನಲ್ಲಿ ಒಂದು ವಿಧದ ಧನ್ಯತೆಯು ತಲೆದೋರುವದು. ಅದರಿಂದ ಅವನ ನರತ್ವವು ಅಳಿದುಹೋಗಿ, ಹರತ್ವವು ಪ್ರಾಪ್ತವಾಗುವದು. "ಗುರುಃ ಸ್ಪೃಶತಿ ಹಸ್ತೇನ । ಯಂ ಯಂ ಪಶ್ಯತಿ ಚಕ್ಷುಸಾ ॥ ಶಿವಂಭವತಿ ತತ್ಸರ್ವಂ । ಗುರೋರೇವ ಪ್ರಸಾದತಃ ॥" ಎಂದು ಅಚಿಂತ್ಯವಿಶ್ವ ಸಾದಾಖ್ಯ ವಚನವಿರುವದು. ಇದರಿಂದ ಆಣವ ಮಲವು ನಾಶವಾಗುವದು

ಮನುದೀಕ್ಷೆ:— ಮನುವೆಂದರೆ ಮಂತ್ರ. ಶಿವಪಂಚಾಕ್ಷರಿ ಮಂತ್ರವು ಇದರಲ್ಲಿ ಶಿಷ್ಯನಿಗೆ ಬೋಧಿಸಲ್ಪಡುವದು. ಇದು ಲಿಂಗಾಂಗ ಸಾಮರಸ್ಯ ಪ್ರತಿಪಾದಕವಾಗಿರುವದು. ಅದರಿಂದ ಅವನ ಮಾಂಸಮಯ ಪಿಂಡವು ಅಳಿದು ಮಂತ್ರಮಯವಾಗುವದು. ಅರ್ಥಾತ್ ಶಿವರೂಪನಾಗುವನು. ಈ ದೀಕ್ಷೆಯಿಂದ ಅವನ ಮೊದಲಿನ ಭೇದಭಾವವು ಅಡಗುವದು. ಗುರುಪುತ್ರರೆಲ್ಲರೂ ತನ್ನ ಬಂಧುಗಳೆಂದೂ ಸ್ವಸ್ವರೂಪವೆಂದೂ ಭಾವಿಸುವನು. ಸಕಲ ಪ್ರಪಂಚವನ್ನೂ ಶಿವರೂಪವಾಗಿಯೇ ಅರಿಯುವನು. ಆ ಕಾರಣ ಮಾಯಾಮಲವು ಬಯಲಾಗುವದು.

ಕ್ರಿಯಾದೀಕ್ಷೆ:— ಕ್ರಿಯೆಯೆಂದರೆ ಕಾರ್ಯ. ಕನ್ನಡದಲ್ಲಿ ಕ್ರಿಯೆಗೆ ಮಾಟ (ಮಾಡು+ಅ) ವೆನ್ನುವರು. ಈ ದೀಕ್ಷೆಯಲ್ಲಿ ಸದಾಚಾರ ಸತ್ಕ್ರಿಯೆಗಳೇ ಉಪದೇಶಿಸಲ್ಪಡುತ್ತವೆ. ತನಗೆ ಬಂಧನಕಾರಕವಾಗದಂತೆ, ಈ ಲೋಕವಲ್ಲಿ ಯುಕ್ತಿಯಿಂದ ಅದು ಹೇಗೆ ಕರ್ಮ (ಮಾಟ)ಗಳನ್ನು ಮಾಡಬೇಕೆಂಬುದರ ಮರ್ಮವು ಸರಿಯಾಗಿ ಹೊಳೆಯುವದು. ಮೊದಲಿದ್ದ ಉಪಾಧಿ (ಸಕಾಮ) ಮಾಟವು, ಮುಂದೆ ನಿರುಪಾಧಿಕ (ನಿಷ್ಕಾಮ) ವಾಗಿಯೂ, ಕೊನೆಗೆ ಸಹಜವಾಗಿ (ತ್ರಿಪುಟಿಯೊಂದಾಗಿ-ಸಕಲವೂ ಶಿವರೂಪವಾಗಿ) ಯೂ, ರೂಪಾಂತರ ಹೊಂದಬೇಕು. ತ್ರಿಪುಟಿಯೆಂದರೆ ಮಾಡುವವ, ಮಾಡಿಸಿಕೊಳ್ಳುವ ಕಾರ್ಯ, ಮಾಡುವ ಸಾಧನ ಈ ಮೂರೂ ಒಂದೇ ಒಂದು ಶಿವರೂಪವಾಗಿ ಬಿಡುವದು. ಹೀಗಾದಾಗಲೇ ಪುಣ್ಯಪಾಪರೂಪ ಕರ್ಮಬಂಧನದಿಂದ ಮುಕ್ತನಾಗುವನು. ಇದರಿಂದ ಕಾರ್ಮಿಕ ಮಲವು ಲಯವಾಗುವದು.

## ಸಾಂಪ್ರತದ ಶೋಚನೀಯ ಸ್ಥಿತಿ.

ಈಪ್ರಕಾರ ವೇಧಾ ಮನು ಕ್ರಿಯೆಗಳಿಂದ ಕೂಡಿದ ಶಿವದೀಕ್ಷೆಯು ಅದೆಷ್ಟು ಮಹತ್ವವಾದುದೆಂಬುದು ವಾಚಕರಿಗೆ ಕಂಡುಬರದೆ ಇರಲಾರದು. ಮನುಷ್ಯನಿಗಾಗುವ ಎಲ್ಲ ಸಂಸ್ಕಾರಗಳಲ್ಲಿ ಇದರಷ್ಟು ಅಮೌಲ್ಯವಾದುದು ಇನ್ನೊಂದಿಲ್ಲ. ಇಂತಹ ಅತ್ಯಾವಶ್ಯಕವಾದ ಶಿವದೀಕ್ಷೆಯನ್ನು ಈಗ ವೀರಶೈವರೆನಿಸಿಕೊಳ್ಳುವ ಶಿವಭಕ್ತರೆಲ್ಲರು ಹೊಂದುತ್ತಿರುವರೇ? ಸಾಂಪ್ರದಾಯವೆಂದು ಮಾತ್ರ ಹೊಂದುತ್ತಿರುವ ಸರ್ವ ಅಯ್ಯನವರಿಗಾದರೂ, ಈ ದೀಕ್ಷೆಯ ನಿಜವಾದ ಪ್ರಯೋಜನವು ಲಭಿಸುವದೇ? ಬರೇ ಉದರಂಭಣ ಸೌಕರ್ಯಕ್ಕೆಂದೇ ಆ ದೀಕ್ಷೆಯನ್ನು ಬಹು ಜನರು ಕೋರುವರಲ್ಲದೆ, ಅದರ ತಳಬುಡವೇನೂ ಅವರಿಗೆ ಸ್ವಪ್ನದಲ್ಲಿಯೂ ಗೊತ್ತಿರುವದಿಲ್ಲೆಂದು, ಕಷ್ಟದಿಂದ ಒಪ್ಪಬೇಕಾಗುತ್ತದೆ. ಇರಲಿ, ಇನ್ನು ಮೇಲೆ ಎಲ್ಲ ಲಿಂಗಾಂಗಿಗಳು (ಅಯ್ಯನವರೇ ಇರಲಿ, ಅಲ್ಲದವರೇ ಇರಲಿ), ಯೋಗ್ಯ ಗುರುವಿನಿಂದ ತಪ್ಪದೆ ಶಿವದೀಕ್ಷಾ ಅನುಗ್ರಹವನ್ನು[೧] ಪಡೆಯಲೇಬೇಕು. ಈ ಬಗ್ಗೆ ನಾನು ಒಂದು ಲೇಖವನ್ನು ವಾರಪತ್ರಿಕೆಗಳಲ್ಲಿ ಪ್ರಸಿದ್ಧಿಸಿರುವೆನು. ಅದನ್ನು ನೋಡಿ, ಮನನಿಸಿ, ಆ ಪ್ರಕಾರ ಎಲ್ಲ ನನ್ನ ಬಾಂಧವರು ಬಿಡದೆ ಅನುಸರಿಸುವರೆಂದು ನಂಬಿರುವೆನು.

## ತಪ್ಪುತಿಳಿವಳಿಕೆ.

ಎಷ್ಟೋ ಜನರು—ಅದೇಕೆ ಬಹುತರ ಎಲ್ಲರೂ—ಶಿವದೀಕ್ಷೆಹೊಂದುವದೆಂದರೆ, "ಇಲ್ಲದ್ದೊಂದು ಪೀಡೆಯನ್ನು ಸುಮ್ಮ, ಸುಮ್ಮನೆ ಬೆನ್ನು ಹಚ್ಚಿಕೊಂಡಂತೆಯೇ ಸರಿ! ಅದರಿಂದ ಈಗಿನ ಪರಿಸ್ಥಿತಿಯಲ್ಲಿ ನಮಗೆ ಹೆಜ್ಜೆಜ್ಜಿಗೆ ತೊಂದರೆಯಾಗುವದು. ಅದು ಸ್ವಾಮಿಗಳಿಗೇ ಸಲ್ಲುವದು. ನಮ್ಮಂಥ ಉದ್ಯೋಗಕ್ಕಾಗಿ ಬಡಕೊಳ್ಳುವವರಿಗೆ ಅದು ತರವಲ್ಲ. ನಮಗೆ ಸಾಗುವದೇ ಕಷ್ಟ. ಹಿಡಿದು ಗೋಳಾಡುವದಕ್ಕಿಂತ ಅದರಿಂದ ದೂರಿರುವದೇ ಒಳಿತು" ಇತ್ಯಾದಿ ಭ್ರಾಂತಿಗೊಳಗಾಗಿರುವರು. ಇದು ತೀರ ತಪ್ಪು. ಈಗ ಸಾಮಾನ್ಯ ಜನ ಸಮುದಾಯವು ನಡೆಯುತ್ತಿರುವದಕ್ಕಿಂತ, ಅದ

(೧) ತರುಣಕರ್ನಾಟಕ (ಹುಬ್ಬಳ್ಳಿ) ಅಂಕ ತಾ॥ ೧೦—೬—೪೦ ಶರಣ ಸಂದೇಶ (ಆಲಮಟ್ಟಿ) ಅಂಕ ತಾ॥ ೧೦—೬—೪೦ ನವಕರ್ನಾಟಕ (ವಿಜಾಪುರ) ಅಂಕ ತಾ॥ ೨೦—೬—೪೦.

ತಲ್ಲಿ ಹೆಚ್ಚಿನ ಅದಾವ ಜೊಂಜಾಟದ ಒಣಕ್ರಿಯೆಗಳೂ ಇರುವದಿಲ್ಲ. ದೀಕ್ಷೆಯಿಂದ ಆಗಬೇಕಾದ ಸುಧಾರಣೆಯು, ನಿಜವಾದ ಜ್ಞಾನಮೂಲಕ ವಾಗಿ. ಅಂತರಂಗದೊಳಗೆ (ಬಹಿರಂಗದಲ್ಲಿ ಅಲ್ಲ!) ಮನ ಭಾವಗಳಲ್ಲಿ ಕ್ರಾಂತಿಯಾಗಿ, ಸತ್ಯ ಶಿವಭಕ್ತಿಯನ್ನು ಹಿಡಿಯುವದದೆ. ಅದನ್ನು ಮರೆತು ಗುಣಹೀನರಾದ ಕೆಲವರು "ನಾವು ಕ್ರಿಯಾ ತಕ್ಕೊಂಡಿದ್ದೇವೆ ಎಂದು ಹೇಳುತ್ತ, ಇಲ್ಲದಡಂಭಾಚಾರವನ್ನು ಮಡಿ-ಮೈಲಿಗೆಯ ಸ್ತೋಮವನ್ನೂ ಬೆಳಿಸಿ, ಜನರಲ್ಲಿ ತಮ್ಮ ದೊಡ್ಡಸ್ತಿಕೆಯ ಜೊಳ್ಳು ವರ್ಚಸ್ಸನ್ನು ಸ್ಥಾಪಿಸುವ ಸಲುವಾಗಿ, ಇಲ್ಲದ ಬಡಿವಾರವನ್ನು ಮೆರಿಸುತ್ತಾರೆ. ಇದಕ್ಕೆ ಬೇಕಾದರೆ ಅವರ ಅಜ್ಞಾನವೆನ್ನಿರಿ, ಇಲ್ಲವೆ ಸ್ವಾರ್ಥಮೂಲಕ ಬುಧ್ಯಾ ಪ್ರದರ್ಶಿಸುವ ಸೋಗು ಎನ್ನಿರಿ. ಇವರ ರೀತಿಯನ್ನು ನೋಡಿ, ಸಹಸಾ ಬೆದರಬೇಡಿರಿ. ನಮ್ಮಲ್ಲಿ ಒಣ ಮಡಿಮೈಲಿಗೆಗೆ ಎಳ್ಳಷ್ಟು ಮಹತ್ವ ಇಲ್ಲ. "ಮಡಿತಾಂ ನಿರ್ಮಲ ಚಿತ್ತ ವೈ" ಎಂಬ ಸತ್ಯವಾದ ಮಡಿಯನ್ನೇ ಹೇಳಿ ಬಿಟ್ಟಿದ್ದಾರೆ. ಆದುದರಿಂದ ಬಹಿರಂಗದ ಮಡಿಮೈಲಿಗೆ (ಸೂತಕ) ಯಲ್ಲಿ ಕೊಂಚಕೊರತೆಯಾದರೂ ಅಡ್ಡಿ ಇಲ್ಲ. ಮನಸ್ಸು ಸ್ವಚ್ಛವಿಟ್ಟು ಸತ್ಯ, ಪ್ರಾಮಾಣಿಕ ವರ್ತನ, ನ್ಯಾಯ, ದಯೆ, ಧರ್ಮ, ಪರೋಪಕಾರ ಮೊದಲಾದವುಗಳನ್ನು ಅವಲಂಬಿಸಿ, ಜ್ಞಾನಮಾರ್ಗಕ್ಕೆ ಕೊರತೆ ಬರದಂತೆ ವರ್ತಿಸುವದೇ ಮುಖ್ಯವಾಗಿದೆ. ಇಷ್ಟಲಿಂಗದ ಪೂಜೆಯಲ್ಲಿ ಕಾಲವನ್ನು ಹೆಚ್ಚಾಗಿ ಕಳೆಯಬೇಕೆಂಬುದೇನೂ ಇಲ್ಲ. "ಸದ್ಗುಣ ಸದಾಚಾರಗಳಿಂದ ನಡೆಯುವದೇ ನಿಜವಾದ ಇಷ್ಟಲಿಂಗದ ಪೂಜೆ" ಎಂಬದನ್ನು ನೆನೆಸಿರಿ. ಅದಕ್ಕೆ ಹೂ ಪತ್ರೆಗಳಿಲ್ಲದಿದ್ದರೂ ನಡೆಯುವದು. ಪ್ರಸಂಗವಶಾತ್ ಬರೇ ಭಸ್ಮ ಸ್ನಾನವಾದರೂ ಸಾಗುವದು. ಸಂಗಡ ವಿಭೂತಿ ಗಟ್ಟಿಯನ್ನು ಕಟ್ಟಿಕೊಂಡೇ ತಿರುಗಾಡುವ ಮರುಳತನವೂ ಬೇಡ. ಮಾತ್ರ ಎಚ್ಚರದಿಂದ ಸದಾಚಾರ ಸಂಪನ್ನನಾಗಿ ನಡೆಯಬೇಕು. ಇಲ್ಲದಿದ್ದರೆ ಜನ್ಮವೇ ವ್ಯರ್ಥ!

ಬಂಧುಗಳೇ, ಮಲತ್ರಯದ ವೃತ್ತಾಂತವು ಹೀಗೆ ಬಹು ಭೀಕರವಾದುದದೆ. ಅದನ್ನು ಸರಿಯಾಗಿ ಮನನಿಸಿ, ಎಚ್ಚರದಿಂದ ನಡೆದು, ವೀರಶೈವತ್ವವನ್ನು ಸಾರ್ಥಕಗೊಳಿಸುವರೆಂದು ನಂಬಿ, ವಿಶ್ರಾಂತಿಗೊಳ್ಳುವೆನು.

---

# ಶಿವಾನುಭವ ಮಂಟಪದಲ್ಲಿ ಯಾರು ಇದ್ದರು?

(ಲೇಖಕ— ರಾ। ಸಾ। ಪಿ. ಜಿ. ಹಳಕಟ್ಟಿ)



ಬಸವಣ್ಣನವರ ಕಾಲದಲ್ಲಿ ಕಲ್ಯಾಣಪಟ್ಟಣದಲ್ಲಿ ಶಿವಶರಣರು ಶಿವಾನುಭವ ಮಂಟಪವನ್ನು ಸ್ಥಾಪಿಸಿ ಅಲ್ಲಿ ಧರ್ಮ ತತ್ವಗಳನ್ನು ಚರ್ಚಿಸಿ ವಚನರೂಪವಾಗಿ ಅವುಗಳನ್ನು ಎಲ್ಲ ಕಡೆಗೂ ಪ್ರಸಾರಪಡಿಸಿದರೆಂಬ ಐತಿಹ್ಯವಿದ್ದು, ಅದರಲ್ಲಿ ಸತ್ಯತೆಯೂ ಇರುತ್ತದೆ. ಆದರೆ ಈ ಮಂಟಪದಲ್ಲಿ ಈ ಕಾಲದಲ್ಲಿ ಯಾರು ಸಮಾವೇಶರಾಗಿದ್ದರು, ಅವರಲ್ಲಿ ಯಾರು ಯಾವ ಯಾವ ಮಹತ್ವದ ಭಾಗಗಳನ್ನು ವಹಿಸಿದರು, ಎಂಬುದನ್ನು ಗೊತ್ತುಪಡಿಸುವದು ಅತ್ಯಂತ ಮಹತ್ವದ ವಿಷಯವಾಗಿದೆ. ಇದನ್ನು ಕುರಿತು ನಾವು ನಮಗೆ ತೋರಿಸಿದ ಕೆಲವು ಸಂಗತಿಗಳನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಇಡುತ್ತೇವೆ. ಅವುಗಳನ್ನು ಅವರು ಪರ್ಯಾಲೋಚಿಸಿ ತಮಗೆ ತೋರಿದ ವಿಚಾರಗಳನ್ನು ಅವಶ್ಯವಾಗಿ ಪ್ರಕಟಿಸಬೇಕೆಂದು ನಮ್ಮ ಸವಿನಯ ವಿಜ್ಞಾಪನೆ ಇದೆ.

ಬೌದ್ಧ ಕ್ರಿಶ್ಚನ್ ಮುಸಲ್ಮಾನ ಈ ಮೊದಲಾದ ಕೆಲವು ಧರ್ಮಗಳಿಗೆ ಸಂಸ್ಥಾಪಕರಿದ್ದಾರೆ. ಅವರು ತಾವು ಉದ್ಭವಿಸಿದ ಪ್ರಾಂತಗಳಲ್ಲಿ ವಿಚಾರಕ್ರಾಂತಿಯನ್ನು ಮಾಡಿದರು. ಆದರೆ ಹಿಂದುಸ್ತಾನದಲ್ಲಿ ಪ್ರಾದುರ್ಭವಿಸಿದ ಧರ್ಮಗಳಲ್ಲಿ ಈ ಬಗೆಯಾಗಿ ಒಬ್ಬನೊಬ್ಬ ಧರ್ಮಸ್ಥಾಪಕನಿದ್ದನೆಂದು ಒಪ್ಪಿಕೊಳ್ಳುವ ಸಾಂಪ್ರದಾಯವಿಲ್ಲ. ಇಲ್ಲಿ ಉತ್ಪನ್ನರಾದ ಧಾರ್ಮಿಕ ಪುರುಷರು ತಮ್ಮ ಹಿಂದಿನಿಂದ ನಡೆದುಕೊಂಡು ಬಂದ ಒಂದಾನೊಂದು ಮಾರ್ಗದಲ್ಲಿ ಕಾಲಕ್ಕೆ ಸರಿಯಾಗಿ ಅವಶ್ಯಕ ತಾತ್ವಿಕ ಅಥವಾ ವ್ಯಾವಹಾರಿಕ ಬದಲಾವಣೆಗಳನ್ನು ಮಾಡುವದಕ್ಕೋಸ್ಕರ ಕೆಲವೊಂದು ಸಿದ್ಧಾಂತವನ್ನು ಮಾಡಿ ಅದು ಹಿಂದಿನದಕ್ಕೆ ವಿರುದ್ಧವಲ್ಲೆಂದು ಹೇಳಿಪ್ರಚಾರಪಡಿಸಿದ್ದು ತೋರಿಬರುತ್ತಿದೆ. ಹೀಗೆ ಒಂದುತರದ ಉತ್ಕ್ರಾಂತಿ ಮಾರ್ಗದಿಂದ ಹಿಂದೂ ಧರ್ಮದಲ್ಲಿ ಪ್ರಗತಿಯುಂಟಾಗಿ ಅದರಲ್ಲಿ ಅನೇಕ ಶಾಖೋಪಶಾಖೆಗಳು ದೇಶದಲ್ಲಿ ಹರಡಿರುತ್ತವೆ. ಈ ಶಾಖೋಪಶಾಖೆಗಳಲ್ಲಿ ವೈದಿಕ ಧರ್ಮ ಮತ್ತು ಶೈವ ಧರ್ಮ ಎಂದು ಎರಡು ಮುಖ್ಯ

ವಿಭಾಗಗಳನ್ನು ನಾವು ಮಾಡಬಹುದು. ಶೈವ ಧರ್ಮಕ್ಕೆ ಸಂಬಂಧಿಸಿದ ಧರ್ಮಗಳು ಮೊಟ್ಟಮೊದಲು ಶೈವಾಗಮ ಗ್ರಂಥಗಳನ್ನು ತಮ್ಮ ತಳ ಹದಿಯನ್ನಾಗಿ ಮಾಡಿಕೊಂಡು ದೇಶದಲ್ಲಿ ತಮ್ಮ ತಮ್ಮ ಮತಗಳನ್ನು ಪ್ರಸಾರಪಡಿಸಿದವು. ಇಂಥವುಗಳಲ್ಲಿ ನಾವು ವೀರಶೈವ ಧರ್ಮವನ್ನು ಎಣಿಸಬಹುದಾಗಿದೆ.

ಅದ್ಧರಿಂದ ಈ ಸಾಂಪ್ರದಾಯಕ್ಕನುಸಾರವಾಗಿ ವೀರಶೈವ ಧರ್ಮದಲ್ಲಿ ಯಾವನೊಬ್ಬನೂ ಕೂಡ ಸಂಸ್ಥಾಪಕ ಸ್ಥಾನವನ್ನು ಹೊಂದಿರುವುದಿಲ್ಲ. ಹಿಂದೂ ಧರ್ಮದಲ್ಲಿ ಅನೇಕ ಪೀಠಾಧಿಕಾರಿಗಳಿದ್ದಾರೆ. ಅವರ ಒಕ್ಕಣಿಕೆಗಳನ್ನು ನೋಡಿದಲ್ಲಿ ಅವುಗಳಲ್ಲಿ ಇಂಥ ಇಂಥ ಧರ್ಮದ ಪ್ರತಿಷ್ಠಾಪಕ ಅಥವಾ ಸಂಸ್ಥಾಪಕ ಎಂಬ ಹೆಸರು ಬರುವದುಂಟು. ಆದರೆ ಈ ತರದ ಶಬ್ದಗಳನ್ನು ಉಪಯೋಗಿಸುವಲ್ಲಿ ಆ ಪೀಠದ ಮಹತ್ವವನ್ನು ಹೊಗಳುವ ಉದ್ದೇಶವು ಮಾತ್ರ ಜನರಲ್ಲಿ ಇರುತ್ತದೆಯೋ ಹೊರ್ತು ಆ ಯಾವ ಧರ್ಮವಾದರೂ ಕೂಡ ವೇದಾಗಮೋಪನಿಷತ್ತುಗಳಿಗೆ ಮಾನ್ಯವಾಗಿದ್ದುಕೊಂಡೇ ಪ್ರವರ್ತನೆ ಹೊಂದಿದ್ದೆಂಬ ಭಾವನೆಯಿಂದ ಆಯಾ ಪಿಠಾಧಿಕಾರಿಗಳು ಸಂಸ್ಥಾಪಕ ಅಥವಾ ಪ್ರವರ್ತಕ ಎಂಬ ಈ ಎರಡು ಶಬ್ದಗಳಲ್ಲಿ ಯಾವ ಭಿನ್ನತೆಯನ್ನು ಕಲ್ಪಿಸದೆ ಅವುಗಳನ್ನು ಉಪಯೋಗಿಸಿದ್ದು ತೋರಿಬರುತ್ತದೆ. ಇದೇ ಸ್ಥಿತಿಯು ವೀರಶೈವರಲ್ಲಿಯೂ ಇರುತ್ತದೆ.

ಮೇಲ್ಕಂಡ ದೃಷ್ಟಿಯಿಂದ ಬಸವೇಶ್ವರನು ಧರ್ಮಸ್ಥಾಪಕನಿರುವದಿಲ್ಲೆಂದು ನಾವು ತಿಳಿಯಬೇಕಾಗುತ್ತದೆ. ಅವನು ಧರ್ಮಪ್ರವರ್ತಕನು ಮಾತ್ರ ಇರುತ್ತಾನೆ. ಐತಿಹಾಸಿಕ ದೃಷ್ಟಿಯಿಂದ ವಿವೇಚಿಸಿದರೂ ಕೂಡ ಇದೇ ಸಂಗತಿಯು ದೃಢಪಡುತ್ತದೆ. ಸ್ವತಃ ಬಸವೇಶ್ವರನು ತಾನು ಧರ್ಮಸ್ಥಾಪಕನೆಂದು ತನ್ನ ವಚನಗಳಲ್ಲಿ ಎಲ್ಲಿಯೂ ಹೇಳಿಕೊಂಡಿಲ್ಲ. ಅವನು ಯಾವಾಗಲೂ ತಾನೊಬ್ಬ ಕೇವಲ ಭಕ್ತನು ಎಂಬ ಭಾವವನ್ನು ಪ್ರಕಟಿಸುತ್ತಾನೆಯೋ ಹೊರ್ತು ಕ್ರೈಸ್ತ ಮತ್ತು ಮುಹಮ್ಮದ ಇವರಂತೆ ಜಗತ್ತನ್ನು ಉದ್ಧಾರ ಮಾಡಲಿಕ್ಕೆ ತಾನು ಅವತರಿಸಿದ್ದೇನೆಂಬ ಅಭಿಪ್ರಾಯವು ಅವನಲ್ಲಿ ಹೊರಡುವದಿಲ್ಲ. ಅವನ ಕಾಲದಲ್ಲಿಯೂ ಶೈವ ಧರ್ಮದಲ್ಲಿ ಅನೇಕ ಭಿನ್ನತೆಗಳುಂಟಾಗಿದ್ದು ವೈದಿಕ ಧರ್ಮದಲ್ಲಿ ಕೂಡ ಅನೇಕ ಪಂಗಡಗಳುಂಟಾಗಿದ್ದವು. ಅವುಗಳೆಲ್ಲವನ್ನು ಒತ್ತ

ಟ್ಟಿಗೆ ಸೇರಿಸಿ ಅವುಗಳ ಸಾರವನ್ನು ಹೊರಪಡಿಸಿ ಒಂದು ವಿಶೇಷತರದ ಮಾರ್ಗವನ್ನು ಪ್ರಸಾರಗೊಳಿಸಲು ಬಸವೇಶ್ವರನ ಸಮ್ಮುಖದಲ್ಲಿ ಅನೇಕ ಶಿವಶರಣರನ್ನೊಡಗೊಂಡ ಅನುಭವ ಮಂಟಪದ ಸ್ಥಾಪನೆಯಾಯಿತು. ಈ ಮಂಟಪದಲ್ಲಿ ಯಾರು ಯಾರು ಇದ್ದರು ಎಂಬದನ್ನು ಕಂಡುಹಿಡಿಯುವದು ಈ ಲೇಖದ ಉದ್ದೇಶವಿದೆ. ಆದರೆ ಇದರಲ್ಲಿ ಬಸವೇಶ್ವರನ ವಚನಗಳಲ್ಲಿಯೇ ಯಾವ ಉಲ್ಲೇಖಗಳು ದೊರೆಯುತ್ತವೆಂಬುದನ್ನು ನಾವು ಮೊದಲು ವಿವೇಚಿಸುವದು ಮಹತ್ವದ್ದದೆ.

ಬಸವೇಶ್ವರನು ತನ್ನ ವಚನಗಳಲ್ಲಿ ಅನೇಕ ಶಿವಶರಣರ ಹೆಸರುಗಳನ್ನು ತೆಗೆದುಕೊಂಡಿದ್ದಾನೆ. ಅವರಲ್ಲಿ ಕೆಲವರು ಅವನಕಿಂತಲೂ ಮೊದಲಿನವರು ಮತ್ತು ಬೇರೆ ಕೆಲವರು ಅವನ ಸಮಕಾಲೀನರು ಇದ್ದುದಾಗಿ ಅವರವರ ಚರಿತ್ರೆಗಳನ್ನು ನಿರೀಕ್ಷಿಸಿದರೆ ಕಂಡುಬರುತ್ತದೆ.

ಬಸವೇಶ್ವರನು ತನ್ನ ವಚನಗಳಲ್ಲಿ ಒಟ್ಟು ೧೫ ಜನ ಶಿವಶರಣರ ಉಲ್ಲೇಖವನ್ನು ಮಾಡಿದ್ದಾನೆ. ಅವರಲ್ಲಿ ಕೆಲವರು ಆದ್ಯರೆಂತಲೂ ಪುರಾತ ಅಥವಾ ಪುರಾತನರೆಂತಲೂ ಬೇರೆ ಕೆಲವರು ಈಚಿನವರೆಂತಲೂ ಎರಡು ಭೇದಗಳನ್ನು ಆವನು ಕಲ್ಪಿಸಿದ್ಧ ಹಾಗೆ ನಮಗೆ ತೋರುತ್ತದೆ. ಈ ಎರಡನೆಯ ವಿಭಾಗದಲ್ಲಿ ಬರುವವರೇ ಶಿವಾನುಭವಮಂಟಪದಲ್ಲಿರಬೇಕು. ಈ ಬಗ್ಗೆ ನಾವು ಅವನ ವಚನಗಳಲ್ಲಿಯ ಕೆಲವು ಅವತರಣಗಳನ್ನು ಇಲ್ಲಿ ಕೊಡುತ್ತೇವೆ.

ಬಸವೇಶ್ವರನ ವಚನಗ್ರಂಥ ಪುಟ ೨೬ ವಚನ ೫೮ ಇದರಲ್ಲಿ "ಆದ್ಯರ ವಚನ ಪರುಷಕಂಡಯ್ಯಾ" ಎಂದು ಬಂದಿದೆ. ಪುಟ ೪೪ ವಚನ ೪೧ ಇದರಲ್ಲಿ "ತವರಾಜದ ನೊರೆತೆರೆಯಂತೆ ಆದ್ಯರ ವಚನ ವಿರಲು" ಎಂದು ಇದೆ. ಪುಟ ೪೭ ವಚನ ೬೩ ಇದರಲ್ಲಿ "ಆದ್ಯರ ವಚನ ಪರುಷವೆಂದೆಂಬೆನು" ಎಂದು ಇದೆ. ಪುಟ ೯೨ ವಚನ ೨೫ ಇದರಲ್ಲಿ "ಆದ್ಯರಿಗಲ್ಲದೆ ವೇದ್ಯವಾಗದು" ಎಂದು ಇದೆ. ಪುಟ ೯೮ ವಚನ ೧೦೭ ಇದರಲ್ಲಿ "ಮುಂದಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವಡದು ನೋಡಾ" ಎಂದು ಇದೆ. ಪುಟ ೧೦೨ ವಚನ ೧೩೩ ಇದರಲ್ಲಿ "ಆದಿಯಿಂದ ಬಂದ ವಚನವೆಂದು ಶರಣರ ಕೂಡ ಸರಸವಾಡಿದರೆ" ಎಂದು ಇದೆ. ಪುಟ ೧೩೦ ವಚನ ೧೦ ಇದರಲ್ಲಿ "ಆದ್ಯರ ವಚನ ಆದ್ಯರಿಗಾಯಿತ್ತು. ವೇದ್ಯರಿಗಲ್ಲದೆ ಸಾಧ್ಯವಾಗದು" ಎಂದು ಹೇಳಿದ್ದಾನೆ. ಈ ಎಲ್ಲ ಉಲ್ಲೇಖಗಳ ಮೇಲಿಂದ ಬಸವಣ್ಣನ ಕಾಲ

ಕ್ಕಿಂತಲೂ ಮೊದಲು ಸಹ ಶಿವಶರಣರಿದ್ದು ಅವರೂ ಕೂಡ ಉಕ್ತಿಗಳನ್ನು ರಚಿಸಿದ್ದು ಕಂಡುಬರುತ್ತದೆ. ಮತ್ತು ಅವರಿಗೆ ಭಕ್ತಿಭಾವವನ್ನು ತಾಳಿ ಮೇಲ್ಕಂಡ ವಚನಗಳನ್ನು ಬಸವೇಶ್ವರನು ರಚಿಸಿದ್ದಾರೆ. ಇವರು ಅವನಕಿಂತಲೂ ಹಿಂದಿನವರಾದ್ದರಿಂದ ಅವರು ಅವನ ಅನುಭವ ಮಂಟಪದಲ್ಲಿರುವದು ಶಕ್ಯವಲ್ಲವೆಂಬುದು ಸ್ಪಷ್ಟವು.

ನಾವು ಮೇಲೆ ಬಸವೇಶ್ವರನು ೧೫ ಜನ ಶಿವಶರಣರನ್ನು ಉಲ್ಲೇಖಿಸಿದ್ದಾನೆಂದು ಹೇಳಿರುವೆವಷ್ಟೆ. ಅವರಲ್ಲಿ ಮಾದರ ಚನ್ನಯ್ಯ, ದೇವರ ದಾಸಿಮಯ್ಯ, ಸಾಮವೇದಿ, ಶ್ವಪಚಯ್ಯ, ಸಿಂಧು ಬಲ್ಲಾಳ, ನಿಂಬಿಯವ್ವೆ, ತೆಲುಗು ಜೊಮ್ಮಯ್ಯ, ಕೆಂಭಾವಿ ಭೋಗಣ್ಣ, ಈ ಎಂಟುಜನರು ಬಸವೇಶ್ವರನಕಿಂತಲೂ ಮೊದಲಿನವರೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಅವರು ಬಸವೇಶ್ವರನಿಗೆ ಏನೂ ಸಂಬಂಧಪಡುವದಿಲ್ಲ. ಅವರು ಅವನ ಕಾಲದಲ್ಲಿ ಕಲ್ಯಾಣದಲ್ಲಿ ಇದ್ದರೆಂತಲೂ ಎಲ್ಲಿಯೂ ಉಲ್ಲೇಖಗಳಿರುವದಿಲ್ಲ. ಒಂದು ವೇಳೆ ಅವರು ಬಸವಣ್ಣನವರಕಿಂತ ಈಚಿನವರೆಂದೂ ಭಾವಿಸಿದ್ದಾದರೆ ಅವರನ್ನು ಬಸವೇಶ್ವರನು ಹೊಗಳಿರುವದರಿಂದ ಹೀಗೆ ತಿಳಿಯಲು ಶಕ್ಯವಿಲ್ಲ. ಆದ್ದರಿಂದ ಅವರು ಬಸವಣ್ಣನಕಿಂತಲೂ ಮೊದಲಿಗರಾಗಿದ್ದರೆಂದು ನಾವು ತಿಳಿಯಬೇಕಾಗುತ್ತದೆ. ಆದ್ದರಿಂದ ಅವರು ಶಿವಾನುಭವ ಮಂಟಪದಲ್ಲಿರುವರುವದು ಶಕ್ಯವಲ್ಲ.

ಬಸವೇಶ್ವರನ ವಚನಗಳಲ್ಲಿ ಪುರಾತನರು ಅಥವಾ ಪುರಾತರು ಎಂಬ ಶಬ್ದಗಳು ಸಹ ಅನೇಕ ಸಾರಿ ಬಂದಿರುತ್ತವೆ. ಆದರೆ ಈ ಶಬ್ದಗಳು ತಮಿಳು ದೇಶದಲ್ಲಿ ಆಗಿಹೋದ ೬೪ ಪುರಾತನರನ್ನು ನಿರ್ದೇಶಿರುತ್ತವೆಂದು ಹೇಳಲಕ್ಕೆ ಬರುವದಿಲ್ಲ. ಈ ವಿಷಯದಲ್ಲಿ ವಾಚಕರು ಕೆಳಗೆ ಕಾಣಿಸಿರುವ ವಚನಗಳನ್ನು ಲಕ್ಷಿಸಬೇಕೆಂದು ನಾವು ಸೂಚಿಸುತ್ತೇವೆ. ಪದ್ಯ ೩೩ ವಚನ೧೦೮ ಇದರಲ್ಲಿ ಬಂದ 'ಪುರಾತರಿಗೆ ಇಲ್ಲೆಂಬ' ಎಂದು ಹೇಳಲ್ಪಟ್ಟಿದೆ. ಪುಟ ೫೧ ವಚನ ೯೮ ಇದರಲ್ಲಿ ' ಹರನು ಮೂಲಿಗನಾಗಿ ಪುರಾತರೊಳಗಾಗಿ ಬಳಿ ಬಳಿಯಲು ಬಂದ ' ಎಂದು ಇದೆ. ಪುಟ ೫೫ ವಚನ ೧೨೧ ಇದರಲ್ಲಿ ' ಬಂದಿಹರಯ್ಯಾ ಪುರಾತರೆನ್ನ ಮನೆಗೆ ' ಎಂದು ಇದೆ. ಪುಟ ೧೦೫ ವಚನ ೧೬೨ ಇದರಲ್ಲಿ 'ಮುಂದಿನ ಪುರಾತನರು ಪುರುಷ ಬ್ರತಿಯರು ಒಲಿಸಿದ ಆಯತವ ' ಎಂತಲೂ 'ಮುಂದಿನ ಪುರಾತರೆಲ್ಲರೂ ತನು ಮನ ಧನವನಿತ್ತು' ಎಂತಲೂ 'ಪುರಾತನರು ಬರಿಯ ಮಾತನಾಡಿ' ಎಂತಲೂ 'ಪುರಾತವಳ' ಎಂತಲೂ

ಉಲ್ಲೇಖಗಳು ಬಂದಿರುತ್ತವೆ. ಪುಟ ೧೦೮ ವಚನ ೭ ಇದರಲ್ಲಿ 'ಪುರಾತರಾಣಿ ಎಂದು ಹೇಳಿದೆ. ಈ ಶಬ್ದಗಳನ್ನು ನಾವು ನೋಡಿದಲ್ಲಿ ಕೆಲವು ವಚನಗಳಲ್ಲಿ ಪುರಾತನರೆಂದರೆ ತನ್ನಕಿಂತ ಹಿಂದಿನವರೆಂತಲೂ ಬೇರೆ ಕೆಲವು ವಚನಗಳಲ್ಲಿ ತನ್ನೊಡನೆ ಇದ್ದವರೆಂತಲೂ ಅಭಿಪ್ರಾಯ ದಿಂದ ಈ ಶಬ್ದವನ್ನು ಉಪಯೋಗಿಸಿದಂತೆ ಕಂಡು ಬರುತ್ತಿದೆ. ಆದರೆ 'ಆದ್ಯ' ಶಬ್ದವನ್ನು ತಗೆದುಕೊಳ್ಳಲಿ,ಅಥವಾ 'ಪುರಾತನ' ಈ ಶಬ್ದವನ್ನು ತಗೆದುಕೊಳ್ಳಲಿ, ಹೀಗೆ ಸಂಬೋಧಿಸಲ್ಪಟ್ಟವರಲ್ಲಿ ಕೆಲವರಾದರೂ ತನ್ನ ಹಿಂದಿನವರು ಎಂಬ ಭಾವವನ್ನು ಬಸವನು ತನ್ನ ವಚನಗಳಲ್ಲಿ ತೋರ್ಪ ಡಿಸಿರುತ್ತಾನೆಂಬುದು ಮಾತ್ರ ಸ್ಪಷ್ಟವು. ಈ ವಚನಗಳಲ್ಲಿ ಉಲ್ಲೇಖಿಸ ಲ್ಪಟ್ಟವರಲ್ಲಿ ಮೇಲೆ ಕಾಣಿಸಿದ ೮ ಜನರು ಹಿಂದಿನವರೆಂದು ಅವರವರ ಚರಿತ್ರೆಗಳಿಂದ ತಿಳಿದುಬರುತ್ತಿದೆ. ಆದರೆ ಕೆಳಗೆ ಕಾಣಿಸಿದ ಶಿವಶರಣರು ಮಾತ್ರ ಬಸವನ ಕಾಲದವರೆಂದು ಅವರ ಚರಿತ್ರೆಗಳಿಂದ ತೋರಿಬರು ತ್ತದೆ. ಅವರು ಯಾರೆಂದರೆ, ಮಡಿವಾಳ ಮಾಚಿದೇವ, ಡೋಹರ ಕಕ್ಕಯ್ಯ, ಮೋಳಿಗೆಯ ಮಾರಯ್ಯ, ಚಿಕ್ಕಯ್ಯ, ಕಿನ್ನರೀ ಬ್ರಹ್ಮಯ್ಯ, ಚನ್ನಬಸವ ಮತ್ತು ತಂಗಟೂರ ಮಾರಯ್ಯ ಈ ಪ್ರಕಾರ ೭ ಜನರನ್ನು ಕುರಿತು ಅವನು ಬಹು ಆದರ ಭಾವದಿಂದ ತನ್ನ ವಚನಗಳಲ್ಲಿ ಉಲ್ಲೇ ಖಿಸಿದ್ದಾನೆ. ಆದ್ದರಿಂದ ಇವರೆಲ್ಲರೂ ಶಿವಾನುಭವ ಮಂಟಪದಲ್ಲಿ ಇದ್ದುಕೊಂಡು ಬಸವೇಶ್ವರನ ಕಾರ್ಯಗಳಲ್ಲಿ ಸಹಾಯಕರಾಗಿ ಕಾರ್ಯ ಮಾಡಿರಬೇಕೆಂದು ನಾವು ಊಹಿಸುತ್ತೇವೆ.

ಬಸವೇಶ್ವರನು ತನ್ನ ಕಾಲದಲ್ಲಿದ್ದ ಅನೇಕ ಶಿವಶರಣರನ್ನು ತನ್ನ ವಚನಗಳಲ್ಲಿ ಉಲ್ಲೇಖಿಸಿರುವದಿಲ್ಲ. ಆದರೂ ಅವರು ಅವನ ಕಾಲದಲ್ಲಿ ದ್ದುಕೊಂಡು ಅವನಿಗೆ ಅತ್ಯಂತ ಸಹಾಯಕರವಾಗಿ ಕಾರ್ಯಮಾಡಿದ ವರಿದ್ದಾರೆ. ಅವರಾದರೂ ಶಿವಾನುಭವ ಮಂಟಪದಲ್ಲಿಂಲಿಕ್ಕೆ ಬೇಕು. ಅವರಲ್ಲಿ ಯಾರು ವಚನಕಾರರಾಗಿ ಷಟ್‌ಸ್ಥಲ ಸಿದ್ಧಾಂತವನ್ನು ವಿಶದ ಪಡಿಸಲು ಯತ್ನಿಸಿರುತ್ತಾರೋ ಅವರು ನಿಶ್ಚಯವಾಗಿ ಶಿವಾನುಭವ ಮಂಟ ಪದಲ್ಲಿದ್ದವರೆಂದು ಊಹಿಸಿದರೆ ತಪ್ಪಾಗಲಾರದು. ಈ ದೃಷ್ಟಿಯನ್ನಿಟ್ಟು ಕೊಂಡು ಈ ಶಿವಶರಣರ ಚರಿತ್ರೆಗಳನ್ನು ನಾವು ಪರೀಕ್ಷಿಸಬೇಕು. ಅಂದರೆ ಅವರಲ್ಲಿ ಯಾರು ಅನುಭವ ಮಂಟಪದಲ್ಲಿದ್ದವರೆಂಬುದನ್ನು ತಿಳಿಯು ಬಹುದಾಗಿದೆ.

ಗುಬ್ಬಿ ಮಲುಹಣನಿಗೆ ೧೯ ಜನ ವಚನಕಾರರ ಹೆಸರುಗಳು ಮಾತ್ರ ಗೊತ್ತಿದ್ದವೆಂದು ಅವನ ಗಣಭಾಷ್ಯರತ್ನಮಾಲೆ ಈ ಗ್ರಂಥದಿಂದ ಗೊತ್ತಾಗುತ್ತದೆ. ಮುಂದೆ ಕವಿಚರಿತೆಯ ಮೊದಲನೇ ಭಾಗದಲ್ಲಿ ೫೦-೬೦ ವಚನಕಾರರ ಹೆಸರುಗಳು ಹೊರಬಿದ್ದವು. ೧೯೨೩ ರಲ್ಲಿ ನಾವು ಪ್ರಸಿದ್ಧಮಾಡಿದ ವಚನಶಾಸ್ತ್ರಸಾರ ಗ್ರಂಥದಲ್ಲಿ ೨೧೩ ಜನರ ಹೆಸರುಗಳು ಪ್ರಕಟವಾದವು. ಮುಂದೆ ಅದೇ ಗ್ರಂಥದ ೧೯೩೧ ನೆಯ ಆವೃತ್ತಿಯಲ್ಲಿ ೨೩೭ ಜನ ವಚನಕಾರರ ಹೆಸರುಗಳು ಮುಂದೆ ಬಂದವು. ಇವರಲ್ಲಿ ಯಾರು ಬಸವಣ್ಣನ ಕಾಲದಲ್ಲಿದ್ದರೆಂಬದನ್ನು ಅವರ ಚರಿತ್ರೆಗಳಿಂದ ಗೊತ್ತಾಗುವಂತೆ ಇದೆ. ಇಂಥವರೆಲ್ಲರೂ ಶಿವಾನುಭವ ಮಂಟಪದಲ್ಲಿದ್ದರೆಂದು ಊಹಿಸಿದಲ್ಲಿ ತಪ್ಪಾಗಲಾರದು.

ಈ ದೃಷ್ಟಿಯಿಂದ ವಿಚಾರಮಾಡಿದಲ್ಲಿ ನಮಗೆ ದೊರೆದ ೨೩೭ ವಚನಕಾರರಲ್ಲಿ ಕೆಳಗೆ ಕಾಣಿಸಿದ ೨೩ ಜನರು ಶಿವಾನುಭವ ಮಂಟಪದಲ್ಲಿದ್ದಿರಬೇಕೆಂದು ನಮಗೆ ತೋರುತ್ತದೆ. ಅವರು ಯಾರೆಂದರೆ- ಶಿವಲೆಂಕ ಮಂಚಣ್ಣ, ಸಿದ್ಧರಾಮ, ಪ್ರಭುದೇವ, ನುಲಿಯ ಚಂದಯ್ಯ, ಗಟ್ಟಿವಾಳಯ್ಯ, ರಾಯಸದ ಮಂಚಣ್ಣ, ಮೋಳಿಗೆಯ ಮಾರಯ್ಯ, ಹಡಪದ ರೇಚಣ್ಣ, ಹಡಪದಪ್ಪಣ್ಣ, ಆಯ್ದಕ್ಕಿ ಮಾರಯ್ಯ, ಅಮುಗಿದೇವ, ಪಡಿಹಾರಿ ಉತ್ತಣ್ಣ, ಚೆನ್ನಬಸವ, ಢಕ್ಕೆಯ ಬೊಮ್ಮಣ್ಣ, ಮರುಳು ಶಂಕರದೇವ, ಮಧುವರಸ, ಸೊಡ್ಡಳ ಬಾಚರಸ, ಇವರ ಹೆಸರುಗಳು ಕಂಡುಬರುತ್ತವೆ. ಇದಲ್ಲದೆ ಕೆಲವು ಸ್ತ್ರೀಯರೂ ಶಿವಾನುಭವಮಂಟಪದ ವಿಚಾರ ವಿನಿಮಯಗಳಲ್ಲಿ ಅಗ್ರಸ್ಥಾನವನ್ನು ಪಡೆದವರಾಗಿದ್ದರು. ಅವರು ಯಾರೆಂದರೆ, ಮಹಾದೇವಿಯಕ್ಕ, ಮೋಳಿಗೆಯ ಮಾರಯ್ಯನ ಹೇಡತಿಯಾದ ಮಹಾದೇವಿ, ಬಸವೇಶ್ವರನ ಅಕ್ಕನಾದ ಅಕ್ಕನಾಗಾಯಿ, ಅವನ ಹೆಂಡತಿಯಾದ ನೀಲಾಂಬಿಕೆ, ಹಡಪದಪ್ಪಣ್ಣನ ಹೆಂಡತಿಯಾದ ಲಿಂಗಮ್ಮ, ಕೊಂಡೇ ಮಂಚಣ್ಣಗಳ ಹೆಂಡತಿಯಾದ ಲಕ್ಷ್ಮಮ್ಮ, ಹೀಗೆ ಒಟ್ಟು ೨೩ ಜನರು ಶಿವಾನುಭವ ಮಂಟಪದಲ್ಲಿ ಸ್ಥಾನವಿದ್ದಿತು. ಇದಲ್ಲದೆ ಬಸವನು ತನ್ನ ವಚನಗಳಲ್ಲಿ ಹೇಳಿದ ೭ ಜನರು ಬೇರೆ. ಅಂತು ೩೦ ಜನರು ಶಿವಾನುಭವ ಮಂಟಪದಲ್ಲಿದ್ದುಕೊಂಡು ವಿಚಾರ ವಿನಿಮಯ ನಡಿಸುತ್ತಿದರೆಂದು ನಾವು ಊಹಿಸಬೇಕಾಗುತ್ತಿದೆ.

ಬಸವೇಶ್ವರನ ಕಾಲದಲ್ಲಿ ಮುಕ್ತಾಯಿ, ಸತ್ಯಕ್ಕ, ಅಜಗಣ್ಣ, ಹಾವಿನ ಹಾಳಕಲ್ಲಯ್ಯಾ, ರುದ್ರಮುನಿ, ಇವರೂ ಕೂಡ ಅಸ್ತಿತ್ವದಲ್ಲಿದ್ದರು. ಆದರೆ ಅವರು ಅನುಭವ ಮಂಟಪದಲ್ಲಿ ಸೇರ್ಪಡೆಯಾದದ್ದು ಅವರ ಚರಿತ್ರೆಗಳಿಂದ ತಿಳಿಯುವದಿಲ್ಲ. ಅಂಥವರು ಬಸವೇಶ್ವರನ ಚಳವಳಿಯ ಕಾಲದಲ್ಲಿ ಇದ್ದರೂ ಕೂಡ ಅವರು ಕಲ್ಯಾಣಕ್ಕೆ ಬಂದು ಅವನೊಡನೆ ಕಾರ್ಯಮಾಡಿದರೆಂದು ಹೇಳಲ್ಪಟ್ಟಿಲ್ಲ. ಆದರೆ ಅವರಾದರೂ ವಚನಕಾರರಿದ್ದಾರೆ. ಆದ್ದರಿಂದ ಬಸವೇಶ್ವರನಕ್ಕಿಂತಲೂ ಮೊದಲು ಹಬ್ಬಿದಂಥ ವೀರಶೈವ ಧಾರ್ಮಿಕ ಚಳವಳಿಯ ಅರಿವು ಅವರಿಗಿದ್ದುದರಿಂದ ಅವರು ತಾವಿದ್ದ ನಾಡುಗಳಲ್ಲಿಯೇ ಇದ್ದುಕೊಂಡು ಬಸವೇಶ್ವರನ ಸಂಬಂಧವಿಲ್ಲದೆ ಸ್ವತಂತ್ರರೀತಿಯಿಂದ ಧರ್ಮೋದ್ಧಾರ ಕಾರ್ಯಗಳನ್ನು ಮಾಡುತ್ತಿರಲಿಕ್ಕೆ ಬೇಕು. ಆದರೆ ಅವರು ಬಸವೇಶ್ವರನೊಡನೆ ಶಿವಾನುಭವ ಮಂಟಪದಲ್ಲಿರಲಿಲ್ಲ.

ಇದಲ್ಲದೆ ಕೇಶಿರಾಜ, ಬಾಹೂರ ಬೊಮ್ಮಣ್ಣ, ತೆಲಗು ಜೊಮ್ಮಯ್ಯ, ಇಳಿಹಾಳ ಬೊಮ್ಮಯ್ಯ ಇವರ ವಚನಗಳೂ ಉಪಲಬ್ಧವಿವೆ. ಆದರೆ ಇವರೆಲ್ಲರೂ ಬಿಜ್ಜಳನ ತಂದೆಯಾದ ಪೆರ್ಮಾಡಿ ರಾಯನ ಕಾಲದಲ್ಲಿದ್ದವರೆಂದು ಅವರವರ ಚರಿತ್ರೆಗಳು ಹೇಳುತ್ತವೆ. ಇವರು ತಮ್ಮ ಮುಪ್ಪಿನ ಕಾಲದಲ್ಲಿ ಬಸವೇಶ್ವರನಿಗೆ ಸಮಕಾಲೀನರಾಗಿರಬಹುದು. ಆದರೆ ಇವರು ಬಸವೇಶ್ವರನ ಸನ್ನಿಧಾನಕ್ಕೆ ಕಲ್ಯಾಣಕ್ಕೆ ಬಂದಂತೆ ಕಂಡುಬರುದಿಲ್ಲ. ಆದ್ದರಿಂದ ಇವರೂ ಕೂಡ ಅನುಭವ ಮಂಟಪದಲ್ಲಿದ್ದರೆಂದು ತೋರುವದಿಲ್ಲ.

ಅದೇ ಮೇರೆಗೆ ಶಂಕರ ದಾಸಿಮಯ್ಯ, ದೇವರ ದಾಸಿಮಯ್ಯಗಳು ಹೊಟ್ಟಿಲ ಕೆರೆಯಲ್ಲಿ ಜಯಸಿಂಹ ರಾಜನಲ್ಲಿ ಇದ್ದದ್ದನ್ನು ಅವರ ಕಥೆಗಳು ಹೇಳುತ್ತವೆ. ಆದ್ದರಿಂದ ಇವರೂ ಕೂಡ ಅನುಭವ ಮಂಟಪದಲ್ಲಿದ್ದುಕೊಂಡು ಬಸವೇಶ್ವರ ಕಾಲಕ್ಕೆ ಉಂಟಾದ ಕ್ರಾಂತಿಯ ಕಾರ್ಯಗಳಲ್ಲಿ ಭಾಗವಹಿಸಿಲ್ಲೆಂದು ನಾವು ಹೇಳಬೇಕಾಗುತ್ತದೆ.

ಶೂನ್ಯಸಂಪಾದನೆಯ ಗ್ರಂಥದಲ್ಲಿಯೂ ಸಿದ್ಧರಾಮೇಶ್ವರನ ವಾದ ವಚನಗಳಲ್ಲಿಯೂ ಅನುಭವ ಮಂಟಪದಲ್ಲಿ ಚರ್ಚೆ ವಹಿಸಿದವರ ಅನೇಕರ ಹೆಸರುಗಳು ಬಂದಿರುತ್ತವೆ. ಆದರೆ ಈ ಗ್ರಂಥಗಳು ಬಸವೇಶ್ವರನ ತರು

ವಾಯು ಕೆಲವು ಶತಮಾನಗಳ ಮೇಲೆ ಉಂಟಾಗಿದ್ದರಿಂದ ಅವುಗಳಲ್ಲಿ ಯಾವ ವಚನಕಾರರ ಹೆಸರುಗಳು ಹೇಳಲ್ಪಡುತ್ತವೆಯೋ ಅವರೆಲ್ಲರೂ ಅನುಭವ ಮಂಟಪದಲ್ಲಿದ್ದರೆಂದು ಹೇಳಲಿಕ್ಕೆಬರಲಾರದು. ಕೆಲವೊಂದು ವಿಷಯವನ್ನು ಪ್ರತಿಪಾದಿಸುವ ಉದ್ದೇಶದಿಂದ ಶೂನ್ಯಸಂಪಾದನೆಯ ಗ್ರಂಥಕಾರನು ವಿಷಯಸಂದರ್ಭಕ್ಕನುಸರಿಸಿ ತನಗೆ ಯಾವ ವಚನಗಳು ಬೇಕಾಗಿದ್ದವೋ ಅವುಗಳನ್ನು ಆವನು ಆರಿಸಿ ಅವುಗಳನ್ನು ರಚಿಸಿದವರೆಲ್ಲರೂ ಬಿಜ್ಜಳ ಅಥವಾ ಬಸವಣ್ಣನಿಗೆ ಸಂಬಂಧಿಸಿ ಅನುಭವಮಂಟಪದ ವಾಗ್ವಾದಗಳಲ್ಲಿ ಸೇರ್ಪಡೆ ಮಾಡುತ್ತಾನೆ. 'ಸಿದ್ಧರಾಮನ ನಾದವಚನ' ಇದರ ಗ್ರಂಥಕಾರನೂ ಇವನ ಅನುಕರಣವನ್ನೇ ಮಾಡಿದ್ದಾನೆ. ಉದಾಹರಣಾರ್ಥವಾಗಿ ಈ ಗ್ರಂಥಗಳ ಕೆಲವೆಡೆಗಳಲ್ಲಿ ದೇವರದಾಸಿಮಯ್ಯನು ಸಹ ಬಸವೇಶ್ವರನ ಶಿವಾನುಭವ ಮಂಟಪಕ್ಕೆ ಸಂಬಂಧಿಸಿದವನೆಂದು ಹೇಳಲ್ಪಟ್ಟಿದೆ. ಈ ಉಭಯತರು ಕೆಲವೊಂದು ವಿಷಯ ವಿವೇಚನೆಗೋಸ್ಕರ ಅವನ ವಚನಗಳನ್ನು ಅವರಿಗೆ ಬೇಕಾದ್ದರಿಂದ ಅವನ ಹೆಸರನ್ನು ಇಲ್ಲಿ ಅವರು ತೆಗೆದುಕೊಂಡಿದ್ದಾರೆಯೇ ಹೊರ್ತು ಈ ಉಲ್ಲೇಖಗಳ ಮೇಲಿಂದ ದೇವರದಾಸಿಮಯ್ಯನು ಬಸವಣ್ಣನ ಕಾಲದಲ್ಲಿದ್ದನೆಂದು ಅನುಮಾನ ಮಾಡಿದರೆ ತಪ್ಪಾಗುವದು. ಈ ಸಂಗತಿಯನ್ನು ನಾವು ಲಕ್ಷಿಸುವದು ಬಹಳ ಅವಶ್ಯವಿದೆ.

ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿದ್ದವರು ನಾನು ಮೇಲೆ ವಿವರಿಸಿದ ೩೦ ಜನರು ಮಾತ್ರ ಇದ್ದು ಹಾಗೆ ನಮಗೆ ತೋರುತ್ತದೆ. ಇವರೆಲ್ಲರೂ ಪ್ರಸಿದ್ಧ ವಚನಕಾರರು. ಇವರೇ ವೀರಶೈವ ಮತದಲ್ಲಿ ಬಸವೇಶ್ವರನೊಡನೆ ಕ್ರಾಂತಿಯನ್ನುಂಟು ಮಾಡಿದವರು. ಈ ಸಮೂಹದಲ್ಲಿದ್ದವರಿಂದಲೇ ಷಟ್‌ಸ್ಥಲ ಸಿದ್ಧಾಂತವು ಅವನ ಕಾಲದಲ್ಲಿ ದೇಶದಲ್ಲೆಲ್ಲ ಪ್ರಚಾರಕ್ಕೆ ಬಂದಿರಬೇಕೆಂದು ತೋರುತ್ತದೆ.

ಶಿವಾನುಭವ ಮಂಟಪದಲ್ಲಿ ನೂರಾರು ಜನರು ಇದ್ದರೆಂದು ಅನೇಕರು ಭಾವಿಸಿದ್ದಾರೆ. ಬಸವೇಶ್ವರನು ಒಂದು ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಾಧೀಶರನ್ನು ಪೋಷಿಸಿದನೆಂತಲೂ ಕಥಾಂತರಗಳಲ್ಲಿ ಹೇಳಲ್ಪಟ್ಟಿರುತ್ತದೆ. ಆದರೆ ಈ ವರ್ಣನೆಗಳೆಲ್ಲವೂ ಅತಿಶಯೋಕ್ತಿಗಳಾಗಿವೆ. ಅವು ನಂಬಲು ಅರ್ಹವಲ್ಲ. ಬಸವೇಶ್ವರನ ಮಹ

ತ್ವವನ್ನು ಹೆಚ್ಚಿಸಲಿಕ್ಕೆ ಹಿಂದುಗಡೆ ಕಲ್ಪಿಸಿದ ಕಥೆಗಳು ಇವು ಇರುತ್ತವೆ. ಅವನ ಕಾಲದಲ್ಲಿ ಎರಡು ಲಕ್ಷ ಜಂಗಮರು ಕಲ್ಯಾಣ ಪಟ್ಟಣದಲ್ಲಿ ಇದ್ದರೆಂದು ಹೇಳುವದರಲ್ಲಿ ನಿಜತ್ವವಿದೆಂದು ನಮಗೆ ತೋರುವದಿಲ್ಲ. ೧೯೦೧ನೇ[೧] ಜನಗಣಿತೆಯಲ್ಲಿ ಮುಂಬಯಿ ಇಲಾಖೆಯ ೧೫ ಲಕ್ಷ ವೀರಶೈವರಲ್ಲಿ ಜಂಗಮರ ಸಂಖ್ಯೆಯು ಒಂದುವರೆ ಲಕ್ಷ ಮಾತ್ರವಿದ್ದದ್ದು ತಿಳಿದುಬರುತ್ತದೆ. ಇಡೀ ೩೦ ಲಕ್ಷ ವೀರಶೈವ ಸಮಾಜದಲ್ಲಿ ಜಂಗಮರ ಸಂಖ್ಯೆಯು ಇದರ ಇಮ್ಮಡಿ ಅಂದರೆ ೩ ಲಕ್ಷ ಮಾತ್ರ ಇರಬಹುದು. ಆದ್ದರಿಂದ ಒಂದು ಸಾವಿರ ವರ್ಷಗಳ ಹಿಂದೆ ಒಂದೇ ಒಂದು ಕಲ್ಯಾಣ ಪಟ್ಟಣದಲ್ಲಿ ೨ ಲಕ್ಷ ಜನ ಜಂಗಮರು ಇದ್ದದ್ದನ್ನು ಒಪ್ಪಿಕೊಳ್ಳುವದು ದುಸ್ತರವಿರುತ್ತದೆ. ಆದ್ದರಿಂದ ಈ ಸಂಖ್ಯೆಯು ಕಾಲ್ಪನಿಕವಿರುತ್ತದೆಂದು ನಮಗೆ ತೋರುತ್ತದೆ.

ನಾವು ಮೇಲೆ ಅನುಭವಮಂಟಪದಲ್ಲಿ ಇದ್ದವರ ಸಂಖ್ಯೆಯು ೩೦ ಎಂದು ಹೇಳಿದ್ದು ಅಷ್ಟರಮಟ್ಟಿಗೆ ನಿಶ್ಚಯಾತ್ಮಕವೆಂದು ಯಾರೂ ತಿಳಿಯಬಾರದು. ಸಂಖ್ಯೆಯಲ್ಲಿ ಆದಕ್ಕೂ ಸ್ವಲ್ಪ ಹೆಚ್ಚುಕಡಿಮೆ ಶಿವಶರಣರು ಇದರಲ್ಲಿ ಇದ್ದಿರಬಹುದು.

ಈಗ ನಮಗೆ ದೊರೆದ ನೂರಾರು ಜನ ಶಿವಶರಣರಲ್ಲಿ ಕೆಲವರು ಅಂದರೆ ೮—೧೦ ಜನರು ಮಾತ್ರ ಬಸವೇಶ್ವರನಕಿಂತ ಮೊದಲು ಇದ್ದು ಅವರಲ್ಲಿ ಬಹಳ ಜನರು ಬಸವೇಶ್ವರನ ತರುವಾಯ ೧೨ನೇ ಶತಮಾನದಲ್ಲಷ್ಟೇ ಅಲ್ಲ, ೧೩ನೇ ಶತಮಾನದಲ್ಲಿಯೂ ಆಗಿಹೋಗಿರುವರೆಂದು ನಮಗೆ ತೋರುತ್ತದೆ. ಈ ವಿಷಯವನ್ನು ಕುರಿತು ಹೆಚ್ಚಿಗೆ ಈ ಲೇಖದಲ್ಲಿ ಪ್ರಸ್ತಾಪಿಸುವದು ಅಪ್ರಸ್ತುತವಾದ್ದರಿಂದ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿದ್ದವರ ಬಗ್ಗೆ ಮಾತ್ರ ನಾವು ಇಲ್ಲಿ ಕೆಲವು ಸಂಗತಿಗಳನ್ನು ಇಲ್ಲಿ ಉಲ್ಲೇಖಿಸುತ್ತೇವೆ.

ಈ ಶಿವಶರಣರ ಉಕ್ತಿಗಳನ್ನು ನೋಡಿದಲ್ಲಿ ಅವರಲ್ಲಿ ಕೆಲವರು ಅತ್ಯಂತ ವಿದ್ವಾಂಸರಾಗಿ ಬಹು ಶ್ರೇಷ್ಠ ತರಗತಿಯವರಾಗಿದ್ದರೆಂದು ತಿಳಿದು ಬರುತ್ತದೆ. ಶಿವಲೆಂಕ ಮಂಚಣ್ಣ, ಅಲ್ಲಮಪ್ರಭು, ಮೋಳಿಗೆಯ ಮಾರಯ್ಯ ಮತ್ತು ಗಟ್ಟಿವಾಳಯ್ಯ ಈ ನಾಲ್ವರು ಉಚ್ಚ ಅನುಭಾವಿಗಳಿದ್ದ ಹಾಗೆ ಕಂಡುಬರುತ್ತದೆ. ಶಿವಲೆಂಕ ಮಂಚಣ್ಣನು ಮೊದಲು ವಾರಣಾಸಿಯಲ್ಲಿ ಇದ್ದು ಅಲ್ಲಿಂದ ಕಲ್ಯಾಣಕ್ಕೆ ಬಂದು ವೀರಶೈವರಲ್ಲಿ

ಟೀಪು:- (೧) ಈಚಿನ ಜನಗಣತಿಯಲ್ಲಿ ಈ ಸಂಖ್ಯೆಯು ದೊರೆಯುವದಿಲ್ಲ.

ಶ್ರೇಷ್ಠ ಸ್ಥಾನವನ್ನು ಹೊಂದಿದ ಪಂಡಿತತ್ರಯರಲ್ಲಿ ಒಬ್ಬನೆಂದು ಗಣಿಸಲ್ಪಟ್ಟಿದ್ದಾನೆ. ಅಲ್ಲಮ ಪ್ರಭುವಿನ ವಚನಗಳು ಅತ್ಯಂತ ಉದಾತ್ತ ಭಾವವುಳ್ಳವು ಇದ್ದು ಅವನ ಈಗ ಪ್ರಸಿದ್ಧವಾದ ವಚನ ಗ್ರಂಥವು ಕುಮಾರ ಬಂಕನಾಥನಿಂದ ಸಂಗ್ರಹಿಸಲ್ಪಟ್ಟಿದೆ. ಅವು ಇನ್ನೂ ಬಹಳ ಅಪೂರ್ಣವಾಗಿವೆ. ಯಾಕಂದರೆ ನಮ್ಮ ಹತ್ತರ ಪ್ರಭುದೇವರ ಇನ್ನೂ ನೂರಾರು ವಚನಗಳಿದ್ದು ಅವು ನಮ್ಮಿಂದ ಇನ್ನೂ ಪ್ರಕಾಶಿಸಲ್ಪಟ್ಟಿಲ್ಲ. ಮೋಳಿಗೆಯ ಮಾರಯ್ಯನ ವಚನಗಳು ಸುಮಾರು ೬೦೦ ನಮಗೆ ಉಪಲಬ್ಧವಿದ್ದು ಅವುಗಳಲ್ಲಿ ಕೆಲವುಗಳನ್ನು ಮಾತ್ರ ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಅಚ್ಚು ಹಾಕಿದ್ದೇವೆ. ಆದರೆ ಬೇರೆ ಹಸ್ತಲಿಖಿತ ಗ್ರಂಥಗಳ ಸಹಾಯವು ನಮಗೆ ದೊರೆಯದ್ದರಿಂದ ಶುದ್ಧ ಪ್ರತಿಯನ್ನು ಸಿದ್ಧಪಡಿಸಲಿಕ್ಕೆ ನಮಗೆ ಬಹಳ ದುಸ್ತರವಾದ್ದರಿಂದ ಅವುಗಳನ್ನು ಪ್ರಸಿದ್ಧಿಸುವ ಕಾರ್ಯವನ್ನು ನಾವು ಅಲ್ಲಿಗೇ ನಿಲ್ಲಿಸಿದ್ದೇವೆ. ಗಟ್ಟಿವಾಳಯ್ಯನ ವಚನಗಳು ಸೂತ್ರರೂಪವಾಗಿದ್ದು ಅವು ಅವನ ವಿದ್ವತ್ತೆಯನ್ನು ಚನ್ನಾಗಿ ಪ್ರಚುರಪಡಿಸುತ್ತವೆ. ಈ ನಾಲ್ಕು ಜನ ವಚನಕಾರರು ಶಿವಾನುಭವ ಮಂಟಪದಲ್ಲಿ ತಾತ್ವಿಕ ವಿಷಯುಗಳನ್ನು ವಿವೇಚಿಸುತ್ತಿರಬಹುದೆಂದು ಅವರ ವಚನಗಳ ಮೂಲಕ ನಾವು ಊಹಿಸುತ್ತೇವೆ. ಚನ್ನಬಸವ ಮತ್ತು ಸಿದ್ಧರಾಮ ಇವರು ಅನುಕ್ರಮವಾಗಿ ವೀರಶೈವ ಕ್ರಿಯೆ ಮತ್ತು ಶಿವಯೋಗ ಇವುಗಳಲ್ಲಿ ಅತ್ಯಂತ ಬಲ್ಲಿದರಾಗಿದ್ದರು. ಚನ್ನಬಸವೇಶ್ವರನ ಅಸಂಖ್ಯ ವಚನಗಳು ಈಗಿನ ಅವನ ವಚನ ಗ್ರಂಥದಲ್ಲಿ ಇನ್ನೂ ಸಂಗ್ರಹಿಸಲ್ಪಟ್ಟಿಲ್ಲ. ಆದರೆ ಅಚ್ಚಾದ ಸಿದ್ಧರಾಮನ ವಚನಗ್ರಂಥವು ಹೆಚ್ಚಿಗೆ ಪೂರ್ಣವಿರುತ್ತದೆ. ಈ ಯಾವತ್ತರೂ ಉಚ್ಚ ತರಗತಿಯ ವಚನಕಾರರು. ಬಸವೇಶ್ವರ, ಮಡಿವಾಳ ಮಾಚಿದೇವ, ಇವರಿಬ್ಬರು ಮನುಷ್ಯನು ಜಗತ್ತಿನಲ್ಲಿ ಹೇಗೆ ಆಚರಿಸಬೇಕೆಂಬುದನ್ನು ಕುರಿತು ಅನುಕ್ರಮವಾಗಿ ಭಕ್ತ ಮತ್ತು ಮಾಹೇಶ್ವರ ಸ್ಥಲಗಳನ್ನು ತಮ್ಮ ವಚನಗಳಲ್ಲಿ ವಿವರಿಸುತ್ತ ಉದಾತ್ತ ವಿಚಾರಗಳನ್ನು ಹೊರಗೆಡವಿದ್ದಾರೆ. ಮಹಾದೇವಿಯಕ್ಕನು ಸ್ತ್ರೀಯಳಿಗೆ ಅನುರೂಪವಾದ ವಿಚಾರಗಳನ್ನು ಹೊರಗೆಡಹುತ್ತ ಅತ್ಯಂತ ಉತ್ಕೃಷ್ಟ ಭಾವನೆಗಳುಳ್ಳವಳಾಗಿ ತನ್ನ ತತ್ವಗಳನ್ನು ವಿವೇಚಿಸುತ್ತಾಳೆ. ನೀಲಾಂಬಿಕೆಯು ಆತ್ಮ ಸಾಕ್ಷಾತ್ಕಾರದ ವಿಚಾರಗಳಲ್ಲಿ ಬಹು ಬಲ್ಲಿದಳು ಇದ್ದಾಳೆ. ಇದೇ ಮೇರೆಗೆ ಕಿನ್ನರಿ ಬ್ರಹ್ಮಯ್ಯ, ಅಮುಗಿದೇವ, ಕಕ್ಕಯ್ಯ, ಮರುಳು ಶಂಕರ ದೇವ, ಮೋಳಿಗೆಯ ಮಾರಯ್ಯನ ಹೆಂಡತಿಯಾದ ಮಹಾದೇವಿ, ಮಧುವರಸ, ಸೊಡ್ಡಳ ಬಾಚರಸ ಇವರೆಲ್ಲರ ವಚನಗಳು ಹೆಚ್ಚಿನ ತರಗತಿಯವಿ

ರುತ್ತವೆ. ಆದರೆ ಇವರ ವಚನಗಳಲ್ಲಿ ನಮಗೆ ದೊರೆತವುಗಳು ಬಹಳ ಸ್ವಲ್ಪ. ಈ ಯಾವತ್ತರೂ ಕೂಡಿಕೊಂಡು ಕಲ್ಯಾಣದಲ್ಲಿ ಶಿವಾನುಭವ ಮಾರ್ಗ ಅಥವಾ ಷಟ್‌ಸ್ಥಲ ಮಾರ್ಗವನ್ನು ಕುರಿತು ವಿಧವಿಧದ ಆಶ್ಚರ್ಯಕರವಾದ ವಿಚಾರಗಳನ್ನು ಬೋಧಿಸಿದ್ದಾರೆ. ಇವರೆಲ್ಲರು ಬಸವೇಶ್ವರನಿಗೆ ಸಹಾಯಕರಾಗಿ ಕಾರ್ಯ ಮಾಡಿದವರು. ಈ ಪ್ರಕಾರ ಹೆಚ್ಚು ಕಡಿಮೆ ೩೦ ಜನ ಶಿವಶರಣರು ಬಸವೇಶ್ವರನ ಶಿವಾನುಭವ ಮಂಟಪದಲ್ಲಿದ್ದರೆಂದು ನಮ್ಮ ಊಹೆ ಇದೆ. ಇನ್ನೂ ಅನೇಕರು ಅದರಲ್ಲಿ ಇದ್ದಿರಬಹುದು. ಆದರೆ ಅವರ ವಚನಗಳಿಲ್ಲದ್ದರಿಂದ ಅವರು ಅದರಲ್ಲಿ ಪ್ರೇಕ್ಷಕರಾಗಿ ಬರುತ್ತಿರಬಹುದು. ಅಂದರೆ ಅವರು ಅದರಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಮುಂದುವರಿಸಿದವರಲ್ಲೆಂದು ನಾವು ಹೇಳಬೇಕಾಗುತ್ತದೆ.

ಮೇಲ್ಕಂಡ ವಚನಕಾರರ ಉಕ್ತಿಗಳನ್ನು ನಾವು ತೀವ್ರವಾಗಿ ಸಂಗ್ರಹಿಸಿ ಪ್ರಸಿದ್ಧಿಸುವದು ಬಹು ಅವಶ್ಯವು. ಅವುಗಳನ್ನು ಸಂಶೋಧಿಸಿದಲ್ಲಿ ನಮಗೆ ಇನ್ನೂ ಅವು ಹೆಚ್ಚಾಗಿ ದೊರೆಯಬಹುದು. ಆದರೆ ಇನ್ನು ಮುಂದೆ ಕೆಲವು ಕಾಲ ಗತಿಸಿದರೆ, ಅವು ಸಹ ನಮ್ಮ ಕೈಗೆ ಹತ್ತುವ ಸಂಭವವಿಲ್ಲ. ಉದಾಹರಣಾರ್ಥವಾಗಿ ಮಹಾದೇವಿಯಕ್ಕನ ವಚನಗಳ ಒಂದು ಗ್ರಂಥವು ಬಾಗಲಕೋಟೆಯಲ್ಲಿ ಇದ್ದು ಅದನ್ನು ತಾವು ಕಣ್ಣಾರೆ ನೋಡಿದ್ದನ್ನು ಅಲ್ಲಿಯ ಕೈ. ವಾ. ಕಿಣಗಿ ಬಸವಲಿಂಗಪ್ಪನವರೆಂಬ ಸುಪ್ರಸಿದ್ಧ ಶಿವಾನುಭವಿಗಳು ನಮಗೆ ಹೇಳಿದ್ದು ನಮ್ಮ ಸ್ಮರಣೆಯಲ್ಲಿದೆ. ಈಗ ಅದನ್ನು ಅಲ್ಲಿ ನಾವು ಸಂಶೋಧಿಸಿದರೂ ಕೂಡ ನಮಗೆ ಆ ಗ್ರಂಥವು ದೊರೆಯದಂತಾಗಿದೆ. ನಮ್ಮ ವೀರಶೈವ ಸಮಾಜದವರು ತಮ್ಮ ಉನ್ನತವಾದ ವಾಙ್ಮಯಕ್ಕೋಸ್ಕರ ಈಗಲೂ ಕೂಡ ಎಷ್ಟು ಉದಾಸೀನರಾಗಿರುತ್ತಾರೆಂಬುದಕ್ಕೆ ಇದೊಂದು ಉದಾಹರಣೆಯಾಗಿದೆ. ಇದು ಅತ್ಯಂತ ಖೇದಕರವಾದದ್ದು. ಇದೇ ಸ್ಥಿತಿಯು ಬೇರೆ ವಚನಗಳ ಬಗ್ಗೆಯೂ ಇರುತ್ತದೆ. ಷಟ್‌ಸ್ಥಲ ಸಿದ್ಧಾಂತವು ಹಿಂದುಸ್ತಾನದಲ್ಲಿರುವ ಅನೇಕ ಮಾರ್ಗಗಳಲ್ಲಿ ಒಂದು ವಿಶಿಷ್ಟತರದ್ದಿರುತ್ತದೆ. ಅದನ್ನು ಹೊರಗೆಡವಬೇಕೆಂದರೆ ನಮಗೆ ಬೇಕಾದ ಸಹಾಯ ಸೌಕರ್ಯಗಳೂ ಪ್ರೋತ್ಸಾಹಗಳೂ ವೀರಶೈವ ಸಮಾಜದಲ್ಲಿ ಏನೂ ದೊರೆಯುವದಿಲ್ಲ. ಈ ಸ್ಥಿತಿಯು ಇನ್ನಾದರೂ ದೂರಾಗಲೆಂದು ನಾವು ಬಯಸುತ್ತೇವೆ.

---

## ಡಾ॥ ಚಿಲುಕೂರು ನಾರಾಯಣರಾಯರ ವಿಧಾನಗಳು.

( ರಾ. ಸಾ. ಫ. ಗು. ಹಳಕಟ್ಟಿ )

### ವಚನಗಳ ಕಾಲ.

ಡಾ. ಚಿಲಕೂರ ನಾರಾಯಣರಾವ ಇವರು ಅನಂತಪುರ ಕಾಲೇಜಿನ ವಿದ್ಯಾರ್ಥಿಗಳಿದುರಿಗೆ ಮಾಡಿದ ಭಾಷಣವನ್ನು ಶಿವಾನುಭವ ಸಂಪುಟಗಳ ಸಂಚಿಕೆ ೭, ೮, ೯ ಇವುಗಳಲ್ಲಿ ನಾವು ಕೊಟ್ಟಿದ್ದೇವೆ. ಅವುಗಳಲ್ಲಿ ಅವರು ಮಾಡಿದ ವಿಧಾನಗಳಲ್ಲಿ ವೀರಶೈವ ವಾಙ್ಮಯವು ಬಸವನ ಕಾಲದಲ್ಲಿರಲಿಲ್ಲ, ಅದು ಪಾಲಕುರಿಕೆ ಸೋಮಾರಾಧ್ಯರ ತರುವಾಯ ಪ್ರಾರಂಭವಾಯಿತು, ವಚನ ಗ್ರಂಥಗಳನ್ನು ವಚನಕಾರರೇ ರಚಿಸಿರದೆ ಅವುಗಳನ್ನು ಯಾರೋ ಕೆಲವರು ಹಿಂದಿನಿಂದ ಅವರ ಹೆಸರಿನಿಂದ ರಚಿಸಿದ್ದಾರೆ, ಎಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ಎಷ್ಟರಮಟ್ಟಿಗೆ ಸತ್ಯಾಂಶವಿದೆ ಎಂಬದನ್ನು ಈ ಲೇಖದಲ್ಲಿ ನಾವು ವಿವೇಚಿಸಲೆಣಿಸಿದ್ದೇವೆ.

ಮೇಲ್ಕಂಡ ಉಪನ್ಯಾಸಕರು ಈ ವಚನಗಳು ನಿಜವಾಗಿ ಯಾವಾಗ್ಗೆ ಮತ್ತು ಯಾರಿಂದ ರಚಿಸಲ್ಪಟ್ಟಿವಿರುತ್ತವೆಂಬದನ್ನು ಮಾತ್ರ ವಿಶದಪಡಿಸಿಲ್ಲ. ಅವು ಈಚೀಚಿಗೆ ಅಂದರೆ ಹತ್ತಿಪ್ಪತ್ತು ವರ್ಷಗಳೊಳಗೆಯ್ಯೇ ಸಹ ಹುಟ್ಟಿರಬಹುದೆಂದು ಸಹ ಅವರ ಬರವಣಿಗೆಯಲ್ಲಿ ಅರ್ಥವಾಗುವಂತಿದೆ. ಆದ್ದರಿಂದ ಅವರ ಈ ವಿಧಾನಗಳನ್ನು ಪರೀಕ್ಷಿಸುವದು ಅತ್ಯವಶ್ಯವಾಗಿರುತ್ತದೆ.

ಗುಬ್ಬಿಯ ಮಲ್ಲಣಾರ್ಯನು ಕನ್ನಡ ವಾಙ್ಮಯದಲ್ಲಿ ಬಹು ಪ್ರಸಿದ್ಧ ಗ್ರಂಥಕಾರನಾಗಿದ್ದಾನೆ. ಇವನು ಗಣಭಾಷ್ಯ ರತ್ನಮಾಲೆ, ವಾತುಲ ತಂತ್ರಟೀಕೆ ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಇವನು ರಚಿಸಿದ ಗಣಭಾಷ್ಯ ರತ್ನಮಾಲೆ ಇದರಲ್ಲಿ ಶಿವಶರಣರ ಉಕ್ತಿಗಳು ಹೇರಳವಾಗಿ ಉದಹರಿಸಲ್ಪಟ್ಟಿವೆ. ಅವನು ಅದರಲ್ಲಿ ಉದಹರಿಸಿದ ವಚನಕಾರರ ಸಂಖ್ಯೆಯು ೧೯ ಇರುತ್ತದೆ. ಇದರಿಂದ ಇವನಿಗೆ ಇಷ್ಟು ಜನ ವಚನಕಾರರ

ಹೆಸರುಗಳು ಗೊತ್ತಿದ್ದು ಅವರ ಉಕ್ತಿಗಳು ಅವನಿಗೆ ಪರಿಚಿತವಾಗಿದ್ದ ವೆಂದು ಹೇಳಲು ಯಾವ ಪ್ರತ್ಯವಾಯವು ಇರುವದಿಲ್ಲ. ಈ ಗುಬ್ಬಿ ಮಲುಹಣನ ಕಾಲವು ೧೪೭೫ ಇರುತ್ತದೆಂದು ಕವಿ ಚರಿತೆಯಲ್ಲಿ ಹೇಳ ಲ್ಪಟ್ಟಿರುತ್ತದೆ. ಆದ್ದರಿಂದ ವಚನಗ್ರಂಥಗಳು ಇದಕ್ಕೂ ಪೂರ್ವದಲ್ಲಿ ಇದ್ದ ವೆಂಬುದು ಸ್ಪಷ್ಟವಾಗುತ್ತಿದೆ.

ತೋಂಟದ ಸಿದ್ಧೇಶ್ವರನೂ ಇವನ ಶಿಷ್ಯರಾದ ಬೋಳಬಸವ, ಘನ ಲಿಂಗ ಈ ಮೊದಲಾದವರೂ ವಚನಗಳನ್ನು ಬರೆದಿದ್ದಾರೆ. ಇವರ ಕಾಲವು ೧೪೭೦. ಇದಲ್ಲದೆ ಇವರಕಿಂತಲೂ ಪೂರ್ವದಲ್ಲಿ ವಿಜಯನಗರದ ದೊರೆಯಾದ ದೇವರಾಯನ ಕಾಲದಲ್ಲಿ ಪುರಾತನ ವಚನಕಾರರ ಉಕ್ತಿ ಗಳನ್ನೊಳಕೊಂಡ ಅನೇಕ ವಚನಗ್ರಂಥಗಳು ಉಪಲಬ್ಧವಾಗಿವೆ. ಕುಮಾರ ಬಂಕನಾಥನು ಸಂಗ್ರಹಿಸಿದ ಪ್ರಭುದೇವರ ವಚನಗಳ ಮೇಲಿನ ಟೀಕೆ, ಜಕ್ಕಣಾಚಾರ್ಯನ ನೂರೊಂದು ಸ್ಥಲ, ಚಾಮರಸನ ಪ್ರಭುಲಿಂಗಲೀಲೆ ಕಲ್ಲಮಠದ ಪ್ರಭುದೇವನ ಲಿಂಗಲೀಲಾವಿಲಾಸ ಈ ಗ್ರಂಥಗಳಲ್ಲಿ ವಚನ ಕಾರರ ಉಕ್ತಿಗಳು ಹೇರಳವಾಗಿ ಉದಹರಿಸಲ್ಪಟ್ಟಿವೆ. ಇವರೆಲ್ಲರೂ ೧೪೧೯ ರಿಂದ ೧೪೪೬ ರ ವರೆಗೆ ಆಳಿದ ವಿಜಯನಗರದ ರಾಜನಾದ ದೇವರಾ ಯನ ಆಳಿಕೆಯಲ್ಲಿ ಇದ್ದರು. ಇದೇ ಕಾಲಕ್ಕೆ ಪ್ರಸಿದ್ಧಿಗೆ ಬಂದ ಲಕ್ಕಣ್ಣ ದಂಡೇಶನು ಪುರಾತನರ ವಚನಗಳನ್ನು ಕುರಿತು ತನ್ನ ಶಿವತತ್ವ ಚಿಂತಾ ಮಣಿಯಲ್ಲಿ ವಿವರಿಸಿದ್ದಾನೆ. ಈ ಸಂಗತಿಯು ಅವನ ಕೆಳಗಿನ ಈ ಶ್ಲೋಕ ದಲ್ಲಿ ವ್ಯಕ್ತವಾಗುತ್ತದೆ.

ಗುರುವಚನದಮೃತಮಂ ಶೃತಿಪುರಾಣಾಗಮದ
ಪರಮಾರ್ಥದಮೃತಮಂ **ವರಪುರಾತನ ವಚನ**
ಪರಿಯಾಯದಮೃತಮಂ ಶಿವತಾಂತ್ರಿಕರು ಪೇಳ್ದ ಸಿದ್ಧಾಂತವೆನಿಪ
ವ್ಮೃತಮಂ ॥

ಪರಮಾನುಭಾವದನುಪಮ ಗೋಷ್ಠಿಯಮೃತದೊಳು
ಬೆರಸಿ ಮಥನಿಸಿ ಪಡೆದ ಲಕ್ಕಣ್ಣ ದಂಡೇಶ
ಧರಿಸಿರ್ಪ ತತ್ವ ಚಿಂತಾಮಣಿಯನರಿವವರ ಚರಣಾಂಬುಜಕ್ಕೆ
ಶರಣು ॥

ಇಲ್ಲಿ ಲಕ್ಕಣ್ಣ ದಂಡೇಶನು ವಚನಗಳನ್ನು ಕುರಿತು ಭಕ್ತಿಭಾವ ದಿಂದ ಹೇಳಿದ್ದಾನೆ. ಈ ಸಂಗತಿಗಳ ಮೇಲಿಂದ ವಚನಗಳ ಅಸ್ತಿ

ತ್ವವು ೧೫ನೇ ಶತಮಾನದ ಆದಿ ಭಾಗದಕಿಂತಲೂ ಪೂರ್ವದಲ್ಲಿ ಇದ್ದದ್ದು ಸ್ಪಷ್ಟವಾಗುತ್ತದೆ.

ಮಹಾಕವಿಯಾದ ಹರಿಹರನ ಕಾಲದಲ್ಲಿ ವಚನ ಗ್ರಂಥಗಳು ಇದ್ದದ್ದು ಸ್ಪಷ್ಟವಿದೆ. ಅವನು ತನ್ನ ಬಸವರಾಜದೇವರಗಳೆಯಲ್ಲಿ ಬಸವೇಶ್ವರನ ವಚನಗಳಲ್ಲಿಯ ಕೆಲವು ವಚನಗಳನ್ನು ಉದಹರಿಸಿದ್ದಾನೆ. ಇದು ಆತನ ಗ್ರಂಥದ ೧೨ನೇ ಸ್ಥಲದಲ್ಲಿ ಕಾಣಬಹುದು. ಈ ವಚನಗಳು ಯಾವವೆಂದರೆ—

(೧) ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು ಎಂಬ ಎಂಬ ಗೀತಮಂ ಪಾಡೆ.

(೨) ಕಟ್ಟಿದೆನೊರೆಯು ಬಿಟ್ಟೆ ಜನ್ನಿಗೆಯಂ ಓಡದಿರೋಡದಿರು ಶರಣರ ಮನೆಯ ಬಿರುದಿನಂತಕ್ಕೆ ಹಿಮ್ಮೆಟ್ಟದಿರೆಲೆ ದೇವ, ಎಲೆ ತಂದೆ ಎಲೆಲೆ ಹಂದೆ ಕೂಡಲಸಂಗ ಸ್ವಯವಾಗು ಸ್ವಯಂವಾಗು.

(೩) ಎಲೆ ಬಸವ ಬೇಡಿದುದ ಶರಣರ್ಗಿಲ್ಲೆನ್ನಬಹುದೀವೆನೆಂಬ ಗೀತದೊಳಗಣ ಬಿಂಕದ ಬಿರುದಂ ಕೇಳ್ದು

(೪) ಎಲೆಲೆ ಕಾಡಿ ಕಾಡಲಮ್ಮದ ತಂದೆ ನೀಂ ಕೇಳು ಬೇಡಿ ಬೇಡಲಮ್ಮದ ಹಂದೆ, ನೀಂ ಕೇಳು ಕೂಡಿ ಕೂಡಲಮ್ಮದ ಜಾತಿಯೆ ನೀಂ ಕೇಳು ಎಂದು ಗೀತಮಂ ಪಾಡಿ

ಮೇಲಿನ ಯಾವತ್ತು ಉಕ್ತಿಗಳು ಬಸವಣ್ಣನವರ ಮಹೇಶ್ವರ ಸ್ಥಲದಲ್ಲಿ ಇರುತ್ತವೆ. ಇವುಗಳನ್ನು 'ಗೀತೆ' ಎಂದು ಹರಿಹರ ಕವಿಯು ವರ್ಣಿಸಿದ್ದಾನೆ. ಹರಿಹರ ಕವಿಯ ಕಾಲವು ೧೨ ನೇ ಶತಮಾನದ ಮಧ್ಯ ಭಾಗದಲ್ಲಿ ಇರುವದಾಗಿ ಈಗ ಸಿದ್ಧವಾಗಿರುತ್ತದೆ. ಅಂದರೆ ಆತನು ಪಾಲ್ಕುರಿಕೆ ಸೋಮನಾಥನಕಿಂತಲೂ ಮೊದಲಿಗನು. ಯಾಕಂದರೆ ಸೋಮನಾಥ ಕವಿಯು ಈ ಶತಮಾನದ ಅಂತ್ಯ ಭಾಗದಲ್ಲಿ ಇದ್ದನೆಂದು ತಿಳಿದುಬರುತ್ತದೆ. ಅವನು ೧೧೯೫ರಲ್ಲಿ ಇದ್ದನೆಂದು ಕವಿ ಚರಿತೆಕಾರರು ಹೇಳುತ್ತಾರೆ. ಇದರ ಮೇಲಿಂದ ಸೋಮನಾಥ ಕವಿಯಕಿಂತಲೂ ಪೂರ್ವದಲ್ಲಿ ವಚನಗಳು ಇದ್ದುದು ಸಿದ್ಧವಾಗುತ್ತದೆ.

ವಚನ ಗ್ರಂಥಗಳಲ್ಲಿ ಕಂಡು ಬರುವ ವಿಶಾಲ ತತ್ವಗಳು ಕೆಲವು ಶಿಲಾಶಾಸನಗಳಲ್ಲಿಯೂ ಇರುವದು ತೋರಿ ಬಂದಿರುತ್ತದೆ. ನಾವು ಶಿವಾ

ನುಭವ ಸಂಪುಟ ೧೩ ಸಂಚಿಕೆ ೧೦ ಪುಟ ೩೫೭ ಇದರಲ್ಲಿ "ಶಿಲಾ ಲೇಖಗಳಲ್ಲಿ ವೀರಶೈವ ಧರ್ಮದ ವಿವರಣೆ" ಎಂಬ ಶಿರೋಲೇಖದ ಕೆಳಗೆ ಒಂದು ಲೇಖವನ್ನು ಬರೆದಿದ್ದೇವೆ. ಅದರಲ್ಲಿ ನಾವು ಧಾರವಾಡ ಜಿಲ್ಲೆಯಲ್ಲಿರುವ ಚೌಡದಾನಪುರ ಎಂಬ ಗ್ರಾಮದಲ್ಲಿರುವ ಕೆಲವು ಶಿಲಾ ಶಾಸನಗಳಲ್ಲಿ ವೀರಶೈವ ಮತತತ್ವಗಳ ನಿರೂಪಣೆ ಇರುವದನ್ನು ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅವುಗಳಲ್ಲಿ ಅನೇಕ ಅಭಿಪ್ರಾಯಗಳು ವಚನಗಳಿಂದ ಉದಹರಿಸಿದವುಗಳೆಂಬುದನ್ನು ನಾವು ಅಲ್ಲಿ ವಿವರಿಸಿದ್ದೇವೆ. ಅಲ್ಲದೆ ಆ ಲೇಖದಲ್ಲಿ ನಾವು ಈ ಬಗ್ಗೆ ಅನೇಕ ಅವತರಣಗಳನ್ನು ಕೊಟ್ಟಿರುತ್ತೇವೆ. ಈ ಶಿಲಾ ಶಾಸನಗಳು ೧೨೨೬ನೇ ಇಸ್ವಿಯವು ಇರುತ್ತವೆ. ಆದ್ದರಿಂದ ಈ ಕಾಲದಲ್ಲಿ ಶಿವಶರಣರ ವಚನಗ್ರಂಥಗಳು ಪ್ರಚುರವಾಗಿದ್ದವೆಂಬುದು ತಿಳಿದುಬರುತ್ತದೆ.

ಆಮುಗಿದೇವನು ಶಿವಾನುಭವಮಂಟಪದಲ್ಲಿದ್ದ ಬಸವೇಶ್ವರನ ಕಾಲದ ಒಬ್ಬ ಶಿವಶರಣನು. ಅವನ ವಚನಗಳನ್ನು ನಾವು ಶಿವಾನುಭವ ಸಂಪುಟ F ಸಂಚಿಕೆ ೬ ಪುಟ ೪೧೭ ಇದರಲ್ಲಿ ಪ್ರಸಿದ್ಧಿಸಿದ್ದೇವೆ. ಇದರಿಂದ ಈತನು ಪಾಲ್ಕುರಿಕೆ ಸೋಮಾರಾಧ್ಯನಕಿಂತಲೂ ಮೊದಲಿನವನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ವಚನಗಳು ಈಸೋಮರಾಧ್ಯನಕಿಂತಲೂ ಮೊದಲು ಇದ್ದವೆಂಬುದು ಗೊತ್ತಾಗುತ್ತವೆ. ಈ ಆಮುಗಿದೇವನು ಕಾಲ್ಪನಿಕ ಪುರುಷನಾಗಿದ್ದಿಲ್ಲವೆಂಬುದು ಸೊಲ್ಲಾಪೂರ ತಾಲೂಕಿನಲ್ಲಿರುವ ಪುಳುಜ ಎಂಬ ಗ್ರಾಮದಲ್ಲಿರುವ ಆತನ ಶಿಲಾಶಾಸನದಿಂದ ಗೊತ್ತಾಗುತ್ತದೆ. ಈ ಶಿಲಾ ಶಾಸನದ ವಿವರಣೆಯು ಮೇಲ್ಕಂಡ ಶಿವಾನುಭವ ಸಂಪುಟದಲ್ಲಿಯೇ ಬಂದಿದೆ. ಈ ಶಾಸನವು ದೇವಗಿರಿ ಯಾದವ ರಾಜನಾದ ಸಿಂಘಣನ ಕಾಲಿನದು ಇರುತ್ತದೆ. ಸಿಂಘಣನ ಸೇನಾಪತಿಯೊಬ್ಬನು ಆಮುಗಿದೇವನ ಭಕ್ತನಾಗಿದ್ದಾನೆಂದು ಇದರಲ್ಲಿ ಹೇಳಲ್ಪಟ್ಟಿದೆ. ಈ ಎಲ್ಲ ಸಂಗತಿಗಳ ಮೇಲಿಂದ ವಚನಗಳು ಪುರಾತನವೆಂಬದು ಗೊತ್ತಾಗುತ್ತದೆ. ಅವು ಶರಣರ ತರುವಾಯ ಯಾರೋ ಒಬ್ಬರು ಅವರ ಹೆಸರಿನಿಂದ ಕಲ್ಪಿಸಿದವೆಂದು ಹೇಳಲಿಕ್ಕೆ ಬರಲಾರದು.

ಪುರಾತನ ಶಿವಶರಣರಲ್ಲಿ ಏಕಾಂತದ ರಾಮಯ್ಯನೂ ಬಹಳ ಮಹತ್ವಿಕನಾಗಿರುತ್ತಾನೆ. ಈತನ ಶಿಲಾಶಾಸನವೊಂದು ಅಬ್ಬಲೂರು ಗ್ರಾಮದಲ್ಲಿದ್ದು ಅದರಲ್ಲಿ ಈ ಶಿವಶರಣನು ಬಿಜ್ಜಳನ ಕಾಲದಲ್ಲಿ ಮಾಡಿದ ಮಹ

ತ್ವಗಳು ವರ್ಣಿಸಲ್ಪಟ್ಟಿದೆ. ಇವನು ಬಿಜ್ಜಳನಿಂದ ಮಾತ್ರವಲ್ಲದೆ ಈ ಕಾಲದಲ್ಲಿ ಪ್ರಖ್ಯಾತಿಹೊಂದಿದ ಸೇನಾಪತಿಯಾದ ಬೊಮ್ಮ, ಚಾಲುಕ್ಯ ರಾಜನಾದ ಸೋಮೇಶ್ವರ ಅವನ ತರುವಾಯ ಈ ಭಾಗದಲ್ಲಿ ಮಹಾಮಂಡಲೇಶ್ವರರಾಗಿ ಆಳಿದ ಕಾಮದೇವ ಮತ್ತು ಕದಂಬ ವಂಶದ ರಾಜನಾದ ಮಲ್ಲದೇವ ಇವರಿಂದಲೂ ಸನ್ಮಾನಿತನಾಗಿದ್ದುದು ಕಂಡುಬರುತ್ತದೆ. ಇದರಲ್ಲಿ ಬಸವೇಶ್ವರನ ಕಾಲದಲ್ಲಿ ಆಗಿ ಹೋದ ಶಿವಶರಣರ ಒಂದು ಉಲ್ಲೇಖವಿದೆ. ಈ ಶಿಲಾಶಾಸನದ ೬೯ರಿಂದ ೭೧ನೇ ಓಳಿಗಳಲ್ಲಿ ಹೇಳಿದ್ದೇನಂದರೆ "ತ್ರಿಭುವನ ಮಲ್ಲಸೋಮೇಶ್ವರದೇವಂ ಸಕಳ ಚಮೂನಾಥ ಶಿರೋಮಣಿಯುಂ ಚಾಲುಕ್ಯ ರಾಜ್ಯ ಪ್ರತಿಷ್ಠಾಪಕನಪ್ಪ ಕುಮಾರ ಬೊಮ್ಮಯ್ಯನುಂ ತಾನುಂ ಸಲಿಯಾಹಳ್ಳಿಯ ಕೊಪ್ಪದೊಳು ಸುಖಸಂಕಥಾ ವಿನೋದನಿರ್ದೊಂದು ದಿವಸಂ ಧರ್ಮಗೋಷ್ಠಿಯೊಳಿರ್ದ್ದ **ಪುರಾತನ ನೂತನರಪ್ಪ ಶಿವಭಕ್ತರ** ಗುಣಸ್ತವನಂ ಮಾಡುತ್ತಮಿರ್ದ ಏಕಾಂತರಾಮಯ್ಯಂಗಳ್ ಅಬ್ಬಲೂರಲಿದ್ದಲ್ಲಿ ಜೈನರೆಲ್ಲಂ ನೆರೆದು ಬಂದು ಮಹಾ ವಿವಾದಂ ಮಾಡಿ" (ಶಿವಾನುಭವ ಸಂಪುಟ ೩ ಸಂಚಿಕೆ ೧೨ ಪುಟ ೨೯ ನೋಡಿರಿ) ಎಂದು ಇದ್ದು ಇದರಲ್ಲಿ ಏಕಾಂತದ ರಾಮಯ್ಯನು ಶಿವಾನುಭವ ಮಾಡುತ್ತಿರುವಲ್ಲಿ ತನ್ನ ಕಾಲಕ್ಕಿನ ಮತ್ತು ತನ್ನಕಿಂತ ಮೊದಲು ಆಗಿ ಹೋದ ಶಿವಶರಣರ ವಿಷಯಗಳನ್ನು ಹೇಳುತ್ತಿದ್ದುದು ಇಲ್ಲಿ ವಿವರಿಸಲ್ಪಟ್ಟಿರುತ್ತದೆ. ಚಾಲುಕ್ಯರ ಸೋಮೇಶ್ವರನು ೧೧೬೧ರಿಂದ ೧೧೮೯ರ ವರೆಗೆ ಅಂದರೆ ಪಾಲಕುರಕೆ ಸೋಮರಾಧ್ಯನಕಿಂತಲೂ ಪೂರ್ವದಲ್ಲಿ ಇದ್ದುದರಿಂದ ಇವನಕಿಂತಲೂ ಮೊದಲು ಶಿವಶರಣರು ಅಸ್ತಿತ್ವದಲ್ಲಿದ್ದುದೂ, ಅವರು ಅನೇಕ ಧರ್ಮಗೋಷ್ಠಿಗಳನ್ನು ಮಾಡುತ್ತಿದ್ದುದೂ, ಇದರಿಂದ ಅವರಿಗೆ ಇತರ ಸಮಾಜದವರೊಡನೆ ಸೆಣಿಸುವ ಪ್ರಸಂಗಗಳು ಉಂಟಾದುದೂ ಈ ಶಿಲಾಶಾಸನದಿಂದ ತಿಳಿದುಬರುತ್ತವೆ. ಇಲ್ಲಿ "ಧರ್ಮಗೋಷ್ಠಿ"ಯೆಂದರೆ ಶಿವಾನುಭವಶಾಸ್ತ್ರ ಅಥವಾ ವಚನಶಾಸ್ತ್ರ ಇದೇ ಇರಬೇಕೆಂದು ನಮ್ಮ ಊಹೆ.

ಇದೇ ಮೇರೆಗೆ ಬಸವೇಶ್ವರನ ಜೋಡಿಗನಾದ ಸಿದ್ಧರಾಮನ ಉಲ್ಲೇಖಗಳೂ ಕೆಲವು ಶಿಲಾಶಾಸನಗಳಲ್ಲಿ ದೊರಕುತ್ತವೆ. ಅವುಗಳಲ್ಲಿ ಸಂಗೂರು ಶಿಲಾಶಾಸನವು ಮಹತ್ವದ್ದಿದ್ದು ಅದು ಶಿವಾನುಭವ ಸಂಪುಟ ೧೩ ಸಂಚಿಕೆ ೨ ಪುಟ ೮೦ ಇದರಲ್ಲಿ ಪ್ರಸಿದ್ಧಿಸಲ್ಪಟ್ಟಿದೆ. ಅದರಲ್ಲಿ "ಗುರುಸಿದ್ಧರಾಮನಾಥದೇವರ ವಚನ" ಎಂದು ಅವನ ಒಂದು ವಚನವು

ಅದರಲ್ಲಿ ಕೊಡಲ್ಪಟ್ಟಿದೆ. ಸಿದ್ಧರಾಮೇಶ್ವರನು ಒಬ್ಬ ಪ್ರಸಿದ್ಧ ವಚನಕಾರನಾಗಿದ್ದು ಅವನ ವಚನಗಳು ಅಚ್ಚಾಗಿರುತ್ತವೆ. ಇವನು ಬಸವೇಶ್ವರನ ಸಮಕಾಲೀನನಾಗಿದ್ದದರಿಂದ ಅವನು ಪಾಲ್ಕುರಿಕೆ ಸೋಮಾರಾಧ್ಯನಕಿಂತಲೂ ಮೊದಲಿನವನು.

ಈ ಶಿಲಾಶಾಸನದಿಂದ ಅವನು ವಚನಕಾರನಾಗಿದ್ದನೆಂದು ತಿಳಿದು ಬರುತ್ತದೆ. ಇಷ್ಟೇ ಅಲ್ಲ, ಶಿವಶರಣರು ತಮ್ಮ ಧಾರ್ಮಿಕ ತತ್ವಗಳನ್ನು ತಮ್ಮ ಉಕ್ತಿಗಳಿಂದಲೇ ಹೇಳುತ್ತಿದ್ದು ಅವರ ಹೆಸರಿನಿಂದ ಯಾರೋ ಒಬ್ಬರು ಹಿಂದಿನಿಂದ ಅವುಗಳನ್ನು ರಚಿಸಿದರೆಂದು ಹೇಳಲಿಕ್ಕೆ ಬರಲಾರದು.

ಕೇಶಿರಾಜನು ವೀರಶೈವ ಗ್ರಂಥಕಾರರಲ್ಲಿ ಪ್ರಸಿದ್ಧನಾಗಿದ್ದಾನೆ. ಈತನನ್ನು ಅನೇಕ ವೀರಶೈವ ಕವಿಗಳು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ. ಇಂಥವರಲ್ಲಿ ಹರಿಹರ ರಾಘವಾಂಕರೂ ಇದ್ದಾರೆ. ಹರಿಹರ ಕವಿಯು ಕೇಶಿರಾಜನ ಬಗ್ಗೆ ಒಂದು ರಗಳೆಯನ್ನು ಸಹ ರಚಿಸಿದ್ದಾನೆ. ಇದು ಅಚ್ಚಾಗಿದೆ. ಆದ್ದರಿಂದ ಕೇಶಿರಾಜನು ಸೋಮಾರಾಧ್ಯನಕಿಂತಲೂ ಪೂರ್ವಿಕನೆಂಬದು ಸ್ಪಷ್ಟವಾಗುತ್ತಿದೆ. ಕೇಶಿರಾಜನು ಬಸವಣ್ಣನಕಿಂತಲೂ ಪೂರ್ವದವನೆನ್ನಲಿಕ್ಕೆ ಕೆಲವು ಕಾರಣಗಳೂ ಇವೆ. ಅವನು ಪೆರ್ಮಾಡಿರಾಯನಲ್ಲಿ ಮಂತ್ರಿಯಾಗಿದ್ದನೆಂದು ತಿಳಿದು ಬರುತ್ತದೆ. ಚಾಲುಕ್ಯ ವಿಕ್ರಮಾರ್ಜುನನಿಗೆ ಪೆರ್ಮಾಡಿರಾಯನೆಂಬ ಹೆಸರು ಇದೆ. ಬಿಜ್ಜಳನ ತಂದೆಯ ಹೆಸರಾದರೂ ಪೆರ್ಮಾಡಿ ರಾಯ. ಶಿವಾನುಭವ ಸಂಪುಟ ೧೩ ಸಂಚಿಕೆ ೩ ಪುಟ ೧೨೬ ರಲ್ಲಿ ೧೧೨೮ ರಿಂದ ೧೧೩೬ ರ ವರೆಗೆ ತರ್ದೆವಾಡಿ ನಾಡನ್ನಾಳಿದ ಬಿಜ್ಜಳನ ತಂದೆಯಾದ ಪೇರ್ಮಾಡಿರಾಯನಲ್ಲಿ ಕೇಶಿರಾಜನು ಇರಬಹುದೆಂದು ನಾವು ಊಹಿಸಿ ಒಂದು ಲೇಖವನ್ನು ಬರೆದಿದ್ದೇವೆ. ಇವನು ಯಾರಲ್ಲಿ ಮಂತ್ರಿಯಾಗಿದ್ದನೆಂಬುದು ಅನಿಶ್ಚಯಾತ್ಮಕವಿದ್ದರೂ ಬಸವನಕಿಂತಲೂ ಪೂರ್ವದಲ್ಲಿ ವೀರಶೈವ ವಾಙ್ಮಯವು ಇತ್ತೆಂಬುದು ಮಾತ್ರ ಇದರಿಂದ ಸಿದ್ಧವಾಗುತ್ತಿದೆ.

ಪುರಾತನ ಕಾಲದ ವಚನಕಾರರ ವಚನಗಳಲ್ಲಿ 'ಆದ್ಯರ ವಚನ' ಎಂಬ ಹೆಸರು ಮೇಲಿಂದ ಮೇಲೆ ಬರುತ್ತದೆ. 'ಆದ್ಯ' ಎಂಬ ಶಬ್ದವು ಬಸವ, ಚನ್ನಬಸವ ಇವರೇ ಮೊದಲಾದ ಅನೇಕರ ವಚನಗಳಲ್ಲಿ ಅನೇಕ ಸಾರೆ ಬಂದಿರುತ್ತವೆ. ಇದರ ಮೇಲಿಂದ ನಾವು ಬಸವಣ್ಣನ

ಕಿಂತಲೂ ಮೊದಲು ಸಹ ವೀರಶೈವ ವಾಙ್ಮಯವಿತ್ತೆಂದು ತಿಳಿಯಬೇಕಾಗುತ್ತದೆ. ನಾವು ಶಿವಾನುಭವದ ಹೋದ ಸಂಚಿಕೆಯಲ್ಲಿ ಶಂಕರದಾಸಿಮಯ್ಯನ ಒಂದು ವಚನವನ್ನು ಉದಹರಿಸಿದ್ದೇವೆ. ಈ ಶಂಕರದಾಸಿಮಯ್ಯನು ದೇವರದಾಸಿಮಯ್ಯನ ಸಮಕಾಲೀನನು. ಅಂದರೆ ಬಸವೇಶ್ವರನಕಿಂತಲೂ ಮೊದಲು ೧೫೦ ವರ್ಷಗಳ ಹಿಂದೆ ಪ್ರಸಿದ್ಧಿಗೆ ಬಂದವನು. ಈ ಉಭಯತರೂ ವಚನಕಾರರು. ಆದ್ದರಿಂದ ವಚನ ವಾಙ್ಮಯವು ಪಾಲ್ಕುರಿಕೆ ಸೋಮನಾಥನ ತರುವಾಯ ಹುಟ್ಟಿದುದಲ್ಲವೆಂಬುದು ಸ್ಪಷ್ಟವಾಗುತ್ತದೆ.

ಪ್ರತಿಯೊಂದು ವಚನಕ್ಕೆ ಒಂದು ವಿಶಿಷ್ಟತೆ ಇದೆ. ಸ್ಫೂರ್ತಿ ಇದೆ. ಈ ಗುಣಗಳು ಕೃತ್ರಿಮ ಗ್ರಂಥಗಳಲ್ಲಿ ತಲೆದೋರಲಾರವು. ವಚನಗಳ ಈ ಸ್ಥಿತಿಯನ್ನು ಕುರಿತು ಕರ್ನಾಟಕದ ಅನೇಕ ವಿದ್ವಾಂಸರು ಅಸಂಖ್ಯ ಲೇಖಗಳನ್ನು ಬರೆದು ಇವುಗಳಿಗೆ ಒಂದು ಸ್ವತಂತ್ರ ವಾಙ್ಮಯದ ಸ್ಥಾನವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಇದನ್ನು ಡಾ. ಚಿಲ್ಕೂರ ನಾರಾಯಣರಾವ ಇವರು ತಮ್ಮ ಉಪನ್ಯಾಸದಲ್ಲಿ ಅಲ್ಲಗಳೆಯಲಿಕ್ಕೆ ಪ್ರಯತ್ನಿಸಿದ್ದಾರೆ. ಇದರಲ್ಲಿ ತಥ್ಯಾಂಶವಿಲ್ಲೆಂಬುದು ಹಿಂದಿನ ಕಾರಣಗಳಿಂದ ವಾಚಕರಿಗೆ ಮನವರಿಕೆಯಾಗದೆ ಇರಲಾರದೆಂದು ನಾವು ಭಾವಿಸುತ್ತೇವೆ.

---

## ಸಂಗೀತವಚನಗಳು.

(ಶ್ರೀ. ಪಿ. ವ್ಹಿ. ಪಾಟೀಲ ಸಂಗೀತ ಶಿಕ್ಷಕ ವಿಜಾಪುರ.)



೭೨

ರಾಗಃ— ಬಸಂತ ತಾಲಃ— ಏಕತಾಲ

( ಪಶುಪತೇ ಗಿರಿಜಾಪತೇ...ಎಂಬಂತೆ )

ಮನೆ ನೋಡಾ ಬಡವರು । ಮನ ನೋಡಾ ಸಂಪನ್ನರು ॥ಪ॥
ಧನ ನೋಡಾ ಬಡವರು । ಘನ ಮನ ಸಂಪನ್ನರು ॥ಅ. ಪ॥
ಕೂಡಲಸಂಗನ ಶರಣರು । ಕರುಳಿಲ್ಲದ ಕಲಿಗಳು ।
ಆರಿಗೂ ಉಪಮಿಸಬಾರದು. ॥ ೧ ॥

( ಬಸವಣ್ಣ )

೭೩

( ಶೋಭನ ಪದದಂತೆ )

ಚಿಲಿ ಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೇ, ನೀವು ಕಾಣಿರೇ ।
ಕೊಳನ ತಡಿಯಲಾಡುವ ಹಂಸೆಗಳಿರಾ, ನೀವು ಕಾಣಿರೇ, ನೀವು ಕಾಣಿರೇ ।
ಸರವೆತ್ತಿ ಪಾಡುವ ಕೋಕಿಲೆಗಳಿರಾ, ನೀವು ಕಾಣಿರೇ, ನೀವು ಕಾಣಿರೇ ॥ಪ॥

ಗಿರಿಗಂಹರಗಳೊಳಾಡುವ ನವಿಲುಗಳಿರಾ, ನೀವು ಕಾಣಿರೇ, ನೀವು ಕಾಣಿರೇ ।
ಚನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂಬುದ ಬಲ್ಲಿರೆ, ನೀವು ಹೇಳಿರೇ ॥೧॥

( ಅಕ್ಕಮಹಾದೇವಿ )

೭೪

ರಾಗ :— ಭೈರವಿ ತಾಲ:— ತ್ರಿತಾಲ

( ಜಗಿ ಆಭಾಸಹಾದಾವಿಲಾ ...ಎಂಬಂತೆ )

ಕರಿಯಂಜುವದು ಅಂಕುಶಕಯ್ಯಾ ।
ಗಿರಿಯಂಜುವದು ಕುಲಿಶಕ್ಕಯ್ಯಾ ॥ಪ॥

ತಮಂಧ ಅಂಜುವದು ಜ್ಯೋತಿಗಯ್ಯಾ ।
ಪಂಚ ಮಹಾಪಾತಕವಂಜುವದು ।
ಕೂಡಲ ಸಂಗನ ನಾಮಕ್ಕಯ್ಯಾ ॥ ೧ ॥

( ಬಸವಣ್ಣ )

# ವರದಾನಿ ಗುಡ್ಡಮ್ಮ!

ವಾ. ಷ. ವರದಾನಿ ಗುಡ್ಡಮ್ಮ, ಭಕ್ತವತ್ಸಲೆ, ನಿನ್ನ
ಚರಣದರುಶನದಾಸೆಯಿಂದೆ ನಾ ಹಗಲಿರುಳು
"ಬರಬೇಕು ಬರಬೇಕು" ಎಂದು ಹಂಬಲಿಸುತ್ತೆ ಕಡೆಗಿಂದು ಬಂದು
ನಿನ್ನ ।

ಪರಮಪಾವನ ಮೂರ್ತಿಯನ್ನು ಕಣ್ದಣಿ ನೋಡಿ
ಹರುಷದಿಂದೊಡಗೂಡಿ ಭಕ್ತಿಗಿಂಬನು ಮಾಡಿ,
ಹೊರಳುತ್ತಲಿರುತಿಹೆನು ನಿನ್ನಯಡಿಹುಡಿಯಲ್ಲಿ
ಬೆರಗಾಗಿ ತವ ಲೀಲೆಗೆ ॥ ೧ ॥

ಇಲ್ಲಿ ಸುಳಿಯುವ ಗಾಳಿ ಕಲ್ಪತರುವಿನ ಗಾಳಿ,
ಇಲ್ಲಿರುವ ನುಣುಪಾದ ಹಾಸುಗಲ್ಲುಗಳೆಲ್ಲ
ಚಲ್ವವಾಗಿಹ ಹಂಸದುಪ್ಪಳದ ಹಾಸಿಗೆಗಳಿಲ್ಲಿರುವ ಗುಡ್ಡದೊಳಗೆ ।
ಕಲ್ಲು ಕೊರಕಲಿನಲ್ಲಿ ಕಂಡು ಬರುತಿಹ ನೀರು
ಅಲ್ಲಿ ಸಗ್ಗದೊಳಿರುವ ಸೊದೆಯನಣಕಿಸುತಿಹವು !
ಇಲ್ಲಿರುವ ಅನ್ನವದು ರುಚಿಯಾದ ಪ್ರಸಾದವದು ! ತಾಯೆ, ಅದ
ರಿಂದೆ ಜನರು ॥ ೨ ॥

ಚಿತ್ತವಿಲ್ಲಿಯೆ ಸುಳಿವುದತ್ತ ನಾ ಪೋದರೂ !
ಸುತ್ತಲೂ ನಿನ್ನಯ ಸುಮೂರ್ತಿಗಳೇ ಕಾಣುವವು !
ಎತ್ತಲೂ ನಿನ್ನ ಸ್ತುತಿಗಾನಗಳೆ ಕೇಳುವವು ! ನಿನ್ನ ಧವಲಿತ
ಕೀರ್ತಿಯು ।

ಹತ್ತು ದಿಕ್ಕುಗಳಲ್ಲಿ ಹರಡಿ ಹೊರಚಲ್ಲುವದು !
ಎತ್ತ ನಾನಿರುತಿರುವೆ ! ನೀನೆತ್ತ ನೆಲಸಿರುವೆ !
ಮತ್ತೆ ಮತ್ತರಸುವೆನು, ತಿಳಿಯೆ ನಿನ್ನಿರವನ್ನು
ಕರುಣೆಯೊಂದಿರಲಿ ಜನನೀ ॥ ೩ ॥

---

ಮುಂತಾದ ಭೇದಂಗಳೆಲ್ಲವು ಬೀಜದಲ್ಲಿ ಅಡಗಿಪ್ಪಂತೆ. ಚಿತ್ತುವಿನ ಸುಚಿತ್ರದಲ್ಲಿ ಅಡಗಿಪ್ಪ ಏಕ ವಸ್ತು ಹಲವು ತೆರದಲ್ಲಿ ಹೊಲಬಿಗನಾಗಿ ಕಂಡಿಹೆನೆಂದಡೆ, ಒಂದೇ ಹೊಲಬಿನ ವಿಶ್ವಾಸದಿಂದಲ್ಲದೆ ಆಗದು. ಅದು ಹಲವು ಕುಂಭದಲ್ಲಿ ತೋರುವ ಅರುಣನ ಕಿರಣದಂತೆ, ವಿಶ್ವಾಸ ಮುಖದಿಂದ ಕಂಡಿಹೆನೆಂದಡೆ ವಿಶ್ವಾಸದಿಂದಲ್ಲದೆ ಆಗದು. ಆ ವಿಶ್ವಾಸ ಉಭಯ ವಳಿದಲ್ಲಿ ಷಟ್‌ಸ್ಥಲ ಭರಿತ, ಸರ್ವ ಸ್ಥಲ ಸಂಪೂರ್ಣ. ಸಂಗನಬಸವಣ್ಣಪ್ರಿಯ ಬ್ರಹ್ಮೇಶ್ವರ ಲಿಂಗವನರಿತವರಿಗಲ್ಲದೆ ಸಾಧ್ಯವಲ್ಲ ನೋಡಾ !

೯. ಆವ ಸ್ಥಲವ ಸಾಧಿಸಿ ಬಂದು ನಿಂತಡೂ ಭಾವ ಶುದ್ಧಾತ್ಮನಾಗಿ ವೇಧಿಸುವದೊಂದೇ ವಸ್ತು. ಅದು ಭಕ್ತಿಯ ಬೇರು. ಅದು ಶ್ರದ್ಧೆಯ ಶಾಖೆ. ವಿಶ್ವಾಸದ ಫಲ. ನಿಜತತ್ವದ ರಸ. ಸ್ವಯದ ಸ್ವಾದು. ಅದು ಸಂಗನಬಸವಣ್ಣನಿಂದ ಬಂದ ಬೆಳೆ. ಬ್ರಹ್ಮೇಶ್ವರ ಲಿಂಗದಲ್ಲಿ ಐಕ್ಯವಾಯಿತ್ತು.

೧೦. ವಿಶ್ವಾಸದಿಂದ ಭಕ್ತ, ವಿಶ್ವಾಸದಿಂದ ಮಹೇಶ್ವರ, ವಿಶ್ವಾಸದಿಂದ ಪ್ರಸಾದಿ, ವಿಶ್ವಾಸದಿಂದ ಪ್ರಾಣಲಿಂಗಿ, ವಿಶ್ವಾಸದಿಂದ ಐಕ್ಯ. ಇಂತೀ ವಿಶ್ವಾಸವಿಲ್ಲದವಂಗೆ ವಿರಕ್ತಿಯೆಂಬ ಗೊತ್ತಿನ ಠಾವು ತೋರದು. ಪ್ರಭುವಿನ ಕೈಯಲ್ಲಿ, ನಿಜಗುಣನ ನೆನಹಿನಲ್ಲಿ, ಅಜಗಣ್ಣನ ಐಕ್ಯದಲ್ಲಿ, ಕುರುಹಿಲ್ಲದೆ ವಸ್ತುವ ಬೆರೆದ ಠಾವಾವುದಯ್ಯಾ ! ಎತ್ತ ಸುತ್ತಿ ಬಂದಡೂ ಅಸ್ತಮಯಕ್ಕೆ ಒಂದು ಗೊತ್ತಿನಲ್ಲಿ ನಿಲ್ಲಬೇಕು. ಇಂತೀ ವಿಶ್ವಾಸದಿಂ ವಸ್ತುವ ಕೂಡುವದಕ್ಕೆ ನಿಶ್ಚಯವಿಲ್ಲ. ಈ ಗುಣ ಸಂಗನಬಸವಣ್ಣ ತೊಟ್ಟ ತೊಡಿಗೆ, ಬ್ರಹ್ಮೇಶ್ವರ ಲಿಂಗವ ಮುಟ್ಟುವ ಭೇದ.

೧೧. ತ್ಯಾಗಾಂಗನಾಗಿ ಕೊಡುತ್ತಿದ್ದಲ್ಲಿ ಭೋಗಾಂಗನಾಗಿ ಸುಖಿಸುತ್ತಿದ್ದಲ್ಲಿ ಯೋಗಾಂಗನಾಗಿ ವಾಯುದ್ವಾರ ಭೇದಂಗಳನರಿತು ಧ್ಯಾನ ಧಾರಣ ಸಮಾಧಿಗಳಲ್ಲಿದ್ದಡೂ ಒಂದು ಕುರಿತು ಲಕ್ಷಿಸಿ, ವಸ್ತು ಇಹನೆಂದು ವಿಶ್ವಾಸದಿಂದಲ್ಲದಾಗದು. ಹಿಂದಕ್ಕಾದ ದೇವ ಪದವಂತರು ಮುಂದಕ್ಕೆ ಅರಿದು ಕೂಡುವರು. ಹಿರಿಯ ಶರಣ ತತಿಗಳೆಲ್ಲರೂ ವಿಶ್ವಾಸದಿಂದಲ್ಲದೆ ದೃಷ್ಟವ ಕಾಣರು. ಇದು ಕಾರಣ, ಬಾಹ್ಯ ಕರ್ಮ ಅಂತರಂಗ ಶುದ್ಧಿ. ನಿರವಯವೆಂಬುದೊಂದು ಕುರುಹಿನ ನೆಮ್ಮುಗೆ ಉಂಟೆಂಬುವನ್ನಕ್ಕ ವಿಶ್ವಾಸ ಬೇಕು. ಇದು ಸಂಗನ ಬಸವಣ್ಣ ಕಂಡು ಬಂದ ಲಿಂಗದ ಬಟ್ಟೆ. ಬ್ರಹ್ಮೇಶ್ವರನೆಂಬ ವಸ್ತುವ ಕೂಡುವ ದೃಷ್ಟ.

## ಭಕ್ತ ಮಹೇಶ್ವರ ಸ್ಥಲಗಳು.

ವಿವರಣೆ:— ಭಕ್ತ ಮಹೇಶ್ವರ ಸ್ಥಲಗಳಲ್ಲಿ ಕ್ರಿಯೆಯೇ ಅತ್ಯಂತ ಮಹತ್ವದ್ದು. ಕ್ರಿಯೆ ಎಂದರೆ, ಸದಾಚಾರ, ಉತ್ತಮತೆರದ ನಡೆನುಡಿ, ಪರಮಾತ್ಮನಲ್ಲಿ ಭಕ್ತಿ ಭಾವ. ಆದರೆ ಇವುಗಳನ್ನು ಮಾಡುವಲ್ಲೆಲ್ಲ ಭಕ್ತಿ ವಿಶ್ವಾಸಗಳು ಬೇಕು. ಇವುಗಳಿಂದ ಮಹತ್ವದ ಪರಿಣಾಮಗಳಾಗುವವು. ಈ ಬಗೆಯ ಮನಃ ಸ್ಥಿತಿಯಿಂದ ಕೊರಡು ಚಿಗಿಯುವದು. ಬರಡಾಕಳು ಹಯನವನ್ನೀಯುವದು. ಚಿತ್ರದ ಬೊಂಬೆ ಸಹ ರೂಪುಗೊಳ್ಳುವದು. ಹೀಗಾಗುವದು ಆ ವಸ್ತುಗಳ ಸ್ವಭಾವವಲ್ಲ. ಆದರೆ ಅವುಗಳ ವಿಷಯವಾಗಿ ಭಕ್ತನು ತಾಳಿದ ವಿಶ್ವಾಸದಿಂದ. ಇದು ಸತ್ಯವು. (೧೨) ಅನೇಕರು ಮನಸ್ಸಿನಲ್ಲಿ ದುಷ್ಟ ವಿಚಾರಗಳಿಂದಿದ್ದು ಬಾಹ್ಯದಲ್ಲಿ ಡಾಂಭಿಕರಾಗಿ ವರ್ತಿಸುತ್ತಾರೆ. ಇಂಥವರು ಹಾವಿನಂತಿರುತ್ತಾರೆ. ಹಾವು ತನ್ನ ವಿಷವನ್ನು ಬಿಡದು. ಕುಕ್ಕುಟನು ಹಾಗೆಯೇ ಯಾವ ಗೂಡಿನಲ್ಲಿದ್ದರೂ ಕೂಗುವದನ್ನು ಬಿಡದು. ಆದ್ದರಿಂದ ಭಕ್ತಿ ಹೀನರೂ ಬರೀ ವಾಚಾಳರೂ ಆದವರು ಎಂಥ ವೇಷ ಧರಿಸಿದರೂ ಕೂಡ ಅವರು ಭಕ್ತರೆನಿಸಿಕೊಳ್ಳರು (೧೩) ಪರಮಾತ್ಮನು ಶಿಲೆ, ಮರ, ಬೆಂಕಿ, ನೀರುಗಳಲ್ಲಿಯೂ ವ್ಯಾಪಿಸಿರುತ್ತಾನೆ. ಆದರೆ ನಿಜ ವಸ್ತುವು ಅವುಗಳಲ್ಲಿರುವದೆಂಬ ಭಾವವಿರಬೇಕು. ಅಂದರೆ ಅಲ್ಲಿ ಪರಮಾತ್ಮನಿರುತ್ತಾನೆ. (೧೪) ಕ್ರಿಯೆಯಿಂದ ಭಕ್ತನು ಪರಮ ಪದವನ್ನು ಹೊಂದುವನು. ಒಕ್ಕಲಿಗನು ದುಡಿದಲ್ಲಿ ದುಡಿದ ಫಲವನುಣ್ಣುವನು. ಆದ್ದರಿಂದ ಧರ್ಮ ಮರ್ಮಗಳನ್ನರಿತು ಆಚರಿಸಿದಲ್ಲಿ ಲೌಕಿಕ ಬಂಧಗಳು ಸಡಿಲುವವು. ಆದರೆ ಇದರಲ್ಲೆಲ್ಲ ಮಾಡುವವನ ವಿಶ್ವಾಸಭಕ್ತಿಗಳು ತುಂಬಿರಬೇಕು. (೧೫) ಭಕ್ತಿರಹಿತನಾಗಿ ಎಷ್ಟು ನುಡಿದರೂ ಎಷ್ಟು ಸ್ತೋತ್ರ ಮಾಡಿದರೂ ವ್ಯರ್ಥವಾದುದು. ಅಲ್ಲಿ ಪರಮಾತ್ಮನ ಇರವು ಇರದು. (೧೬) ಭಕ್ತನಾದವನು ಭಕ್ತರೊಡನೆ ಭಕ್ತಿಯುತನಾಗಿರಬೇಕು. ವಿರಕ್ತನು ಬಾಹ್ಯದಲ್ಲಿ ವೇಷದೊಡನೆ ಇದ್ದು ಅಂತರಂಗದಲ್ಲಿ ಸುಗುಣಗಳಿರದಿದ್ದಲ್ಲಿ ಅಂಥ ವೇಷದ ಪ್ರಯೋಜನವೇನು ? ಇಂಥವರು ವರ್ತನೆಗೆ ದೂರರು. (೧೭) ಭಕ್ತಿ ಎಂದರೆ ಸಮರಸಾಚಾರವು. ಭಕ್ತಿಯಲ್ಲಿ ಪೂಜ್ಯ ಪೂಜಕ ಭಾವವಳಿಯಬೇಕು. ವಸ್ತುವೂ ಇಲ್ಲ, ತಾನೂ ಇಲ್ಲ ಈ ಸ್ಥಿತಿಯುಂಟಾಗಬೇಕು. (೧೮) ಮಾಡುವಲ್ಲಿ ಹಿಂದಿನ ಮುಂದಿನ ಸುಖ ದುಃಖಗಳ ನೆನಹು ಇರಕೂಡದು.

ಇದ್ದಿದ್ದಾದರೆ ಕರ್ಮಫಲ ಬಿಡದು. ಕರ್ಮಗಳ ಫಲದ ಬಗ್ಗೆ ಅವ ಸಂದೇಹವೂ ಇಲ್ಲದೆ ಆಚರಿಸಬೇಕು. (೧೯) ಮಾತಿಗೆ ನಡೆ ಶುದ್ಧವಾಗಿರಬೇಕು. ನಡೆಗೆ ಕ್ರಿಯೆ ಶುದ್ಧವಾಗಿರಬೇಕು. ಕ್ರಿಯೆಗೆ ವ್ರತಭಂಗವಿರಕೂಡದು. ಹೀಗೆ ಭಕ್ತನ ಆಚರಣೆ ಇರಬೇಕು. (೨೦) ಭಕ್ತನ ಕ್ರಿಯೆಯಲ್ಲಿ ಉಪಾಧಿ ನಿರುಪಾಧಿ ಎಂಬುದು ಇರಕೂಡದು. ಅವನು ಕ್ರಿಯೆಗೆ ಮೀರಿದವನು. ಇಷ್ಟೇ ಅಲ್ಲ ಭಕ್ತಿಗೂ ಕೂಡ ಮೀರಿದವನು. ಅವನ ಕ್ರಿಯೆಗಳು ಸ್ವಾಭಾವಿಕವಾಗಿ ಅವನ ಅಂತರಂಗದೊಳಗಿಂದ ಪ್ರವಹಿಸುತ್ತವೆ. ಇದೇ ಪೂರ್ಣತೆ ಎನಿಸಿಕೊಳ್ಳುತ್ತದೆ. (೨೧) ಕ್ರಿಯೆಯು ಕಡೆತನಕ ಇರುತ್ತದೆ. ಅರಿವು ಇರುವಲ್ಲಿಯೂ ಕ್ರಿಯೆಯು ಇರುತ್ತದೆ. ಇವುಗಳ ಹೊಳಹು ದ್ವಂದ್ವಭಾವ. ಈ ದ್ವೈತವು ವಿಶ್ವಾಸದಿಂದಲ್ಲದೆ ನಾಶವಾಗದು. (೨೨) ಬೇರು ಇದ್ದಲ್ಲಿ ಗಿಡದ ಪರ್ಣ ಶಾಖೆ ಮೊದಲಾದವುಗಳು ತರದೋರುತ್ತವೆ. ಜ್ಞಾನವೇ ಬೇರಿನಂತಿದೆ. ಆದರೆ ಅದಕ್ಕೆ ಪುಷ್ಟಿಯಾಗಿ ಭಾವ ಶುದ್ಧವಿರಬೇಕು. ಈ ಶುದ್ಧತೆಯು ಗುರುವಾಜ್ಞೆಗೆ ಅನುಸರಿಸುತ್ತದೆ. ಶಿವಲಿಂಗ ಪೂಜೆಯಲ್ಲಿ ದೃಢಪಡುತ್ತದೆ. ಜಂಗಮ ಸೇವೆಯಲ್ಲಿ ಸನ್ನದ್ಧವಾಗುತ್ತದೆ. (೨೩) ಆದರೆ ಭಕ್ತನು ತಾನು ಹಿಡಿದ ಕೆಲಸವನ್ನು ಬಿಡಕೂಡದು. ನಿತ್ಯ ನೇಮಕ್ಕೆ ಭ್ರಷ್ಟನಾಗಬಾರದು. (೨೪) ಆಚಾರಕ್ಕೆ ತಪ್ಪಿದಲ್ಲಿ ಅದು ಬಾಹ್ಯ ಚಿನ್ಹವಾದರೆ ಅದನ್ನು ಸವರಿಸಿಕೊಳ್ಳಬೇಕು. ಭಕ್ತಿ ಇದ್ದವರಿಗೆ ಚಿನ್ಹವಿಲ್ಲದಿಲ್ಲ. (೨೫)

೧೨. ಕೊರಡು ಕೊನರಿದಲ್ಲಿ, ಬರಡು ಹಯನಾದಲ್ಲಿ, ಚಿತ್ರದ ಬೊಂಬೆ ನಿಜ ಕರ್ತೃ ರೂಪಾಗಿ ಬಂದಲ್ಲಿ ಆ ತ್ರಿವಿಧದ ದೃಷ್ಟವೋ, ವಿಶ್ವಾಸಿಯ ಚಿತ್ತವೋ? ಇದು ಭಕ್ತಿಯ ಹೊಲಬಿಗೆ ಮುಖ. ಸಂಗನಬಸವಣ್ಣನ ಸತ್ಯ, ಬ್ರಹ್ಮೇಶ್ವರ ಲಿಂಗವ ಕೂಡುವ ಕೃತ್ಯ.

೧೩. ಹಾಲನಿಟ್ಟು ಹಾವ ಸಲಹಿದಲ್ಲಿ ಅದು ತನ್ನಯ ಉಚಿತಕ್ಕೆ ಹಾಲಾಹಳವ ಬಿಟ್ಟಿತ್ತೆ? ಕುಕ್ಕುಟನ ಮಾಳಿಗೆಯಲ್ಲಿ ಕೂಡಿ ಪ್ರತಿ ಗೂಡಿನಲ್ಲಿ ಕೂಡ್ರಲಿಕ್ಕೆ ತನ್ನ ತತ್ಕಾಲಕ್ಕೆ ಕೂಗುವದ ಬಿಟ್ಟಿತ್ತೆ? ಇಂತೀ ವರ್ತನದಂತೆ ಭಕ್ತಿ ಛಾಳಕರ, ಧರಿಸಿನ (?) ಚೋರಕರ, ವಾಚಾ ರಚನೆಗರ ಬರಿ ಮಾತಿನ ಪೂಸರ, ಈಶ್ವರ ಭಕ್ತ-ಪರಮೇಶ್ವರನ ರೂಪು ಎನಲಾರೆ. ಮತ್ತೆ ನೀತಿಯ ವಿಶ್ವಾಸವ ಬಿಡಲಾರೆ. ಈ ಭಕ್ತಿಯೆಂಬ ಪಾಶ ಹರಿವುದಕ್ಕೆ ನಿಹಿತವ ತೋರಯ್ಯ ಸಂಗನಬಸವಣ್ಣಾ! ಬ್ರಹ್ಮೇಶ್ವರ ಲಿಂಗವ ನರಿವುದಕ್ಕೆ ಕುರುಹು ಹೇಳಣ್ಣಾ!!

೧೪. ಶಿಲೆ, ಮರ, ಮಣ್ಣು, ಬೆಂಕಿ, ನೀರು, ಮಳಲುಗಳಲ್ಲಿ ಇಂದು ಸೂರ್ಯ ಇಂತೀ ಒಳಗಾದವರ ಮರೆಯಲ್ಲಿ ತಮ್ಮ ವಿಶ್ವಾಸ ಎಂತಿದ್ದಿತು, ಅಂತೆ ವಸ್ತುವಪ್ಪುದನರಿತು ಇದು ಸಂಗನಬಸವಣ್ಣ ಸರ್ವಾಧಾರವಾಗಿ, ಬಂದ ಸಂಬಂಧ ಬ್ರಹ್ಮೇಶ್ವರ ಲಿಂಗವು ವಿಶ್ವಾಸದಲ್ಲಿ ತಪ್ಪದಿಪ್ಪನು.

೧೫. ಕೃಷಿಯಿಂದ ಮುಂದಣ ಫಲವ ಕಾಂಬಂತೆ, ಅಸಿ ಕಲಿಯಿಂದ ಮುಂದಣ ಅರಿಬಲದ ಗೆಲವಂತೆ, ಸಂಸ್ಕೃತಿಯ ಮಾರ್ಗ ಮರ್ಮ ಧರ್ಮಂಗಳನರಿದು ಮುಂದಣ ಅಸುರ ಕರ್ಮಂಗಳ ತಮೋ ಬಂಧಗಳ ವೀಸ ಗೆಲುವದಕ್ಕೆ ಇಷ್ಟಲ್ಲದಿಲ್ಲ. ಇದು ವಸ್ತು ಪೂಜಕರ ವಿಶ್ವಾಸ. ಸಂಗನ ಬಸವಣ್ಣನ ಸಂಬಂಧ ಬ್ರಹ್ಮೇಶ್ವರ ಲಿಂಗವನರಿವುದಕ್ಕೆ ವಿಶ್ವಾಸದ ಭಿತ್ತಿ.

೧೬. ಸದ್ಭಕ್ತಿಯಿಲ್ಲದ ವಿಶ್ವಾಸ ಹೀನನು, ವಾಚಾರಚನೆಗಳಿಂದ ಮಾತಿನ ಮಾಲೆಯು ಎಷ್ಟು ನುಡಿದಡೇನು ? ಹೇ (?) ದಂಡದಂತೆ, ಮೃತ್ತಿಕೆಯ ಘಟದಂತೆ, ಸಿಡಿಲ ಘಳದಂತೆ, ಅದಾರಿಗೆ ಯೋಗ್ಯ ? ಸಂಗನ ಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವು ಅವರಲ್ಲಿ ನಿಲ್ಲನಾಗಿ.

೧೭. ಭಕ್ತಂಗೆ ವಂದಿಸಿ ನಿಂದಿಸಿದಲ್ಲಿಯೇ ವಿಶ್ವಾಸ ಜಾರಿತ್ತು. ವಿರಕ್ತಂಗೆ ಸುಗುಣ-ದುರ್ಗುಣವ ಸಂಪಾದಿಸಿದಲ್ಲಿಯೇ ವಿವೇಕ ಹೋಯಿತ್ತಯ್ಯ ! ಕಣ್ಣಿನಲ್ಲಿ ಮುಳ್ಳು ಮುರಿದಂತೆ ಮುಚ್ಚಿ ತೆರೆಯಬಾರದು; ವೇದನೆ ಬಿಡದು ; ವರ್ತನೆಗೆ ಭಂಗ ; ಸತ್ಯಕ್ಕೆ ದೂರ; ಈ ಸಮಯದ ಸಂಗ ಎನ್ನ ಈ ಗುಣದ ಕಟ್ಟನಳಿವುದಕ್ಕೆ ಸಂಗನ ಬಸವಣ್ಣನಿಂದೆ ಬ್ರಹ್ಮೇಶ್ವರ ಲಿಂಗವನರಿದವರಿಗಲ್ಲದಾಗದು.

೧೮. ಗುರುಭಕ್ತನಾದಲ್ಲಿ ಗುರುವಳಿದು ತಾನುಳಿದರೆ ಗುರುಭಕ್ತನಲ್ಲ. ಲಿಂಗ ಭಕ್ತನಾದಡೆ ಜಾಗ್ರ ಜಿಹ್ವೆಗಳಲ್ಲಿ ತಮ್ಮಂಗವ ಬಿಟ್ಟು ಲಿಂಗ ಹಿಂಗಿದಲ್ಲಿಯೇ ಆತ್ಮ ಒಡಗೂಡದಿದ್ದಲ್ಲಿಯೇ ಲಿಂಗ ಭಕ್ತನಲ್ಲ. ಜಂಗಮ ಭಕ್ತನಾದಡೆ ಕಳಹು, ಹಾದರ, ದುರ್ಗುಣದಿಂದ ಕಾಡಿಸಿ ಕೊಂಬಲ್ಲಿ ಬಿಡಿಸದೆ ತಾನಡಗಿ ಅರಿಯದಂತಿದ್ದಾಗಲೇ ಜಂಗಮ ಭಕ್ತನಲ್ಲ. ಇಂತೀ ತ್ರಿವಿಧ ಭಾವಂಗಳಲ್ಲಿ ಘಟದಲ್ಲಿ ಸಂದನಳಿದವಂಗಲ್ಲದೆ ತ್ರಿವಿಧ ಭಕ್ತಿ ಇಲ್ಲ. ಈ ಗುಣ ಸಂಗನ ಬಸವಣ್ಣಂಗಲ್ಲದೆ ಸಾಧ್ಯವಲ್ಲ. ಬ್ರಹ್ಮೇಶ್ವರ ಲಿಂಗವನರಿದವರಿಗೂ ಅಸಾಧ್ಯ ನೋಡಾ !

೧೯. ಕಲ್ಲ ರೂಪು ಕಬ್ಬು ಮೆಲುವಾಗ ಎತ್ತಿದ ಈ ಮಾನದಲ್ಲಿಪ್ಪ ಸದ್ಗುರು ಬರುವಾಗ, ಹುಳಿದ ವೃಷಭ ಕೆಲೆವಾಗ ಇಂತೀ ಪ್ರಭಾವದ ಬಲ್ಮೆ, ಸತ್ಯ ಚಿತ್ತ, ಚಿತ್ತದ ಹೆಚ್ಚುಗೆ, ಇಂತೀ ಗುಣ ಸಂಗನ ಬಸವಣ್ಣ ಉತ್ಸಾಹ ಬ್ರಹ್ಮೇಶ್ವರ ಲಿಂಗವನರಿವುದಕ್ಕೆ ನಿಶ್ಚಯದ ವಿಶ್ವಾಸ.

೨೦. ಹಿಂದಣ ಸುಖ, ಮುಂದಣ ದುಃಖಗಳು, ಮುಂದಣ ಸುಖ ಹಿಂದಣ ದುಃಖಗಳು, ಇವ ತಾ ಸಂದಿಸಿ ಅನುಭಾವಿಸಿದಲ್ಲಿ ಸಂಚಿತ, ಪ್ರಾರಬ್ಧ ಆಗಾಮಿಗಳೆಂದು ಅಲ್ಲಲ್ಲಿ ಸಂಕಲ್ಪಿಸಿ ಕೇಳಲೇತಕ್ಕೆ? ಹಿಂದೆ ಅಳಿದವರ ಮುಂದೆ ಸಾವವರ ಕಂಡು ಅಂದಂದಿಗೆ ನೂರು ತುಂಬಿತ್ತೆಂದು ಸಂದೇಹವ ನಿವೃತ್ತಿಯಾಗಿರಬೇಕು, ಸಂಗನ ಬಸವಣ್ಣ ಸಾಕ್ಷಿಯಾಗಿ ಬಸವೇಶ್ವರ ಲಿಂಗವನರಿವುದಕ್ಕೆ.

೨೧. ಆವುದೊಂದು ಕರ್ಮಂಗಳ ವ್ಯಾಪಾರಿಸಿ ಮಾಡುವಲ್ಲಿ ಸತ್ಯಕ್ಕೆ ತಕ್ಕ ಸಾಮರ್ಥ್ಯವನರಿತು ಆ ವ್ರತ ಕ್ರಿಯಾ ವರ್ತನಂಗಳ ಹಿಡಿದಲ್ಲಿ ಹಿಂದಣ ನಗೆಗೆಡೆ ಮುಂದಣ ಹಾಸ್ಯ. ಆ ಹಾಸ್ಯಕ್ಕೊಳಗಲ್ಲದೆ ನುಡಿದ ಮಾತಿಂಗೆ ನಡೆ ಶುದ್ಧವಾಗಿ ಆ ನಡೆವ ನಡೆಗೆ ಕ್ರಿಯೆ ಶುದ್ಧವಾಗಿ ಆ ಕ್ರಿಯಲ್ಲಿ ವ್ರತಭಂಗವಿಲ್ಲದಿಪ್ಪುದು ಸದ್ಭಕ್ತನ ಸಂಬಂಧ. ಈ ಗುಣ ಸಂಗನ ಬಸವಣ್ಣನ ಶ್ರದ್ಧೆ. ಬಹ್ಮೇಶ್ವರ ಲಿಂಗವನರಿವುದಕ್ಕೆ ಕ್ರಿಯಾ ಮಾರ್ಗ.

೨೨. ಉಪಾಧಿಕಂಗೆ ಆವ ವ್ರತ? ತ್ರಿವಿಧ ಭಕ್ತಿಯನು ಒಲ್ಲ, ನಿರುಪಾಧಿಕಂಗೆ ಆವಾವ ವ್ರತ? ತ್ರಿವಿಧ ಭಕ್ತಿಯುಂಟು. ಸ್ವಯಾನುಭಾವಿಗೆ ಇದಿರ ದಯಾ ದಾಕ್ಷಿಣ್ಯ ತನ್ನಯ ಅರಿವಿನ ವಿಲಾಸಿತದ ಲಕ್ಷಣ. ಸರ್ವ ಗುಣದಲ್ಲಿ ಸನ್ನದ್ಧನಾಗಿಪ್ಪುದು. ಸ್ವಯಾನುಭಾವದ ಸಂಬಂಧ. ಇಂತೀ ಖಂಡಿತ ಅಖಂಡಿತ ಪರಿಪೂರ್ಣತ್ವ ಭೇದವಿಲ್ಲದೆ ಪೂರ್ಣತ್ವವಾಗಿಪ್ಪುದೇ ಸಂಗನಬಸವಣ್ಣನ ಸತ್ಕ್ರಿಯಾ ಮಾರ್ಗ. ಬ್ರಹ್ಮೇಶ್ವರ ಲಿಂಗವನರಿದಿಹೆನೆಂದು ಉಪಾಧಿಕೆ ನಿರುಪಾಧಿಕೆ ಎಂಬುದನರಿದು ಸ್ವಯವ ಕೂಡಿಹೆನೆಂದು.

೨೩. ಬಯಲು ಬೆಳಗುಳ್ಳನ್ನಕ್ಕ ಮುಂದೊಂದು ಕುರುಹಿನ ಕುಲ ಬಿಡದು. ಕುರುಹುಳ್ಳನ್ನಕ್ಕ ಅರಿದಿಹೆನೆಂಬ ಭಾವ. ಆ ಅರಿಕೆಯೆಂಬುದು ವಿಶ್ವಾಸದಿಂದಲ್ಲದೆ ಕಾಣಬಾರದು. ಇದು ಸಂಗನಬಸವಣ್ಣನು ಸಂಧಿಸಿದ ಸಂಬಂಧ. ಬ್ರಹ್ಮೇಶ್ವರ ಲಿಂಗವ ವಿಶ್ವಾಸದಿಂದಲ್ಲದೆ ಸಂಬಂಧಿಸಬಾರದು.

೨೪. ಕಾಯಿ ತೊಟ್ಟಿನಲ್ಲಿ ನೀರ ಬಿಟ್ಟಡೆ ಕಾಯಿ ನಿಂದುದುಂಟೆ? ಬೇರೊಣಗಿದ ಮೇಲೆ ಇಂತೀ ಮೂಲ ಬೇರಿನಿಂದ ಶಾಖೆಪರ್ಣಫಲವಲ್ಲದೆ ಮೊದಲಿನ ನಷ್ಟ ಲಾಭಕ್ಕೆ ದಿನವುಂಟೆ? ಜ್ಞಾನ ಹೀನನು ಆವ ಸ್ಥಲವ ನೆಮ್ಮಿ ಮಾತನಾಡಿದರೂ ಷಟ್‌ಸ್ಥಲದಲ್ಲಿ ಭಾವ ಶುದ್ಧವಾಗಿಪ್ಪನೆ? ಇದು ಕಾರಣ ಗುರುವಾಜ್ಞೆಯ ಮೀರದೆ, ಶಿವಲಿಂಗಪೂಜೆಯ ಮರೆಯದೆ, ಜಂಗಮ ಸೇವೆಯಲ್ಲಿ ಸನ್ನದ್ಧನಾಗಿ ಆವುದೊಂದು ವ್ರತವೆಂದು ಹಿಡಿದು ಅದ್ವೈತವನರಿತೆನೆಂದು ಬಿಡದೆ ನಿಂದ ಸ್ಥಲಕ್ಕೆ ನಿಬದ್ಧನಾಗಿ ನಿಂದಲ್ಲಿಯೇ ಲಿಂಗ ಸಂಗ. ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವ ನರಿದುದು.

೨೫. ಅಪರಾಧವ ಮಾಡಿದ ಬಂಟ ಅರಸಿಂಗೆ ಸಜ್ಜನನಪ್ಪನೆ? ವ್ರತ ಭ್ರಷ್ಟ ನೇಮಕ್ಕೆ ಹಾನಿಯಾದವ. ನಿತ್ಯ ಕೃತ್ಯವೆಂದು ಹಿಡಿದು ಬಿಟ್ಟವ, ತ್ರಿವಿಧ ಮಲವನೊಲ್ಲೆನೆಂದು ತೊಟ್ಟವ, ಇಂತೀ ಕಾಷ್ಠ ಗುಣದಲ್ಲಿ ನಡೆವ ದೃಢಗಳ್ಳರ ನೋಡ! ಇದು ಬಾಯೊಳಗಣ ಹಣ್ಣ ಹೇವರಿಸಿದ(?) ಮತ್ತೆ ಇನ್ನಾವ ಠಾವಿನಲ್ಲಿ ನುಂಗುವ. ಈ ಹೇಯುವ ಬಿಡಿಸಯ್ಯ ಎನಗೆ ಸಂಗನಬಸವಣ್ಣ! ಬ್ರಹ್ಮೇಶ್ವರ ಲಿಂಗವಿಪ್ಪ ಠಾವ ತೋರಾ!

೨೬. ಗುರುವಳಿದಲ್ಲಿ ಗುರು ಪಟ್ಟವೆಂದು ಕಟ್ಟಿ ಪರಮ ಗುರುವೆಂದು ಶರಣೆಂಬಲ್ಲಿ ಲಿಂಗ ಬಾಹ್ಯವಾಗಿ ಅಂಗವ ಹರಿದು ಹೋದಲ್ಲಿ ಮತ್ತೊಂದು ಲಿಂಗವುಂಟೆಂದು ಕೊಳ್ಳುವುದೇತಕ್ಕೆ? ಗುರು ಪೂರ್ವ ಲಿಂಗ ಉತ್ತರವೇ? ಗುಱು ಆದಿ ಲಿಂಗ ಅನಾದಿಯೇ? ಇದು ಕಾರಣದಲ್ಲಿ ಗುರುಭಕ್ತಿ ಅರಿ ಬಿರಿದು ಲಿಂಗ ಭಕ್ತಿಯತ್ತಲಾನು ಒಪ್ಪಿ, ಜಂಗಮ ಭಕ್ತಿಗೆ ಸಂಗನಬಸವಣ್ಣನಲ್ಲದಿಲ್ಲ, ಬ್ರಹ್ಮೇಶ್ವರ ಲಿಂಗವು ಸಾಕ್ಷಿಯಾಗಿ.

## ಪ್ರಸಾದಿ ಪ್ರಾಣಲಿಂಗಿ ಸ್ಥಲಗಳು.

೨೭. ನಿಂದ ನೆಲೆಯು ನೀರಿನಂತೆ, ಮರ ಶಿಲೆಗಳಲ್ಲಿ ಸಂದಿಸಿ ನಿಂದ ಪಾವಕನಂತೆ, ಕರಂಡದಲ್ಲಿ ಬಂಧಿಸಿ ನಿಂದ ಸುವಾಸನೆಯಂತೆ, ಈ ಅಂಗದಲ್ಲಿ ನಿಂದ ನಿಜಲಿಂಗಾಂಗ ಸಂಬಂಧ. ಈ ಗುಣ ಸಂಗನ ಬಸವಣ್ಣಂಗೆ ಸಂಬಂಧವಾಯಿತ್ತು. ಬ್ರಹ್ಮೇಶ್ವರ ಲಿಂಗವು ಅವರಿಗೆ ಒಳಗಾದ.

೨೮. ಸಂಚಿತವನರಿವುದು ಕರ್ಮಯೋಗ. ಆಗಾಮಿಯನರಿವುದು ಆತ್ಮಯೋಗ. ಪಾರಬ್ಧವನರಿವುದು ಕರ್ಮಯೋಗ. ಇಂತೀ ತ್ರಿವಿಧ ಯೋಗಂಗಳಲ್ಲಿ ತಿಳಿದು, ಈ ಯೋಗವೆಂಬುದ ಕಂಡು, ತನ್ನಯ ಆತ್ಮನ ಸ್ವಸ್ಥ ಗಾಢಂಗಳ ಘಟದಲ್ಲಿಪ್ಪ ಸ್ವಸ್ಥಾನದಲ್ಲಿಪ್ಪುದು. ಇರದೆಂಬುದು ಲಕ್ಷಿಸಿಕೊಂಡು ಸರ್ವ ವ್ಯವಧಾನಂಗಳಲ್ಲಿ ಸಾವಧಾನಂಗಳನರಿವುದು ಪ್ರಾಣಲಿಂಗಿಯ ಕೂಟ. ಈ ಗುಣ ಸಂಗನ ಬಸವಣ್ಣನ ಸಂಯೋಗ, ಬ್ರಹ್ಮೇಶ್ವರ ಲಿಂಗದ ಕೂಟ.

೨೯. ಅಗ್ನಿಯ ಆಡಕವ, ನೀರಿನ ಸಾರವ, ನಿರವಯದ ಹೊರೆಯ ಭೇದಿಸಿ ಕಾಂಬಂತೆ. ಅಗ್ನಿಗೆ ಮಥನದಿಂದ ನೀರಿನ ಸಾರಕ್ಕೆ ಮಧುರ ದಿಂದ ನಿರವಯದ ಹೋರಿಗೆ ತನ್ನರಿವಿನ ಭೇದದಿಂದ ಕಾಣಿಸಿಕೊಂಬುದು ತ್ರಿವಿಧ ಲಿಂಗ ಭೇದ, ಪ್ರಾಣಲಿಂಗಿಯ ಸಂಗ. ಬ್ರಹ್ಮೇಶ್ವರ ಲಿಂಗವ ಕೂಡುವ ಕುರುಹಿನ ನಿರಂಗ.

೩೦. ಬಾಗಿಲು ಕವಾಡವ ಬಳಸಿ ಬಂದಲ್ಲಿಕ್ಕಿದಡು ಮರೆಯ ಭೇದ ವಲ್ಲದೆ ನಿಳಯಕ್ಕೆ ಹೋಹುದು ತಪ್ಪದು. ತತ್ವಂಗಳ ವಿಚಾರಿಸಿ, ಸ್ಥಲಂಗಳ ವಿಸ್ತರಿಸಿ, ಪರಿಪೂರ್ಣ ಪೂರ್ಣಂಗಳೆಂಬಲ್ಲಿ ವಿಶ್ರಮಿಸಿ ಅರಿವು ಒಂದೋ ಅರಿವಿಸಿ ಕಾಂಬುದು ಒಂದೋ? ಉಭಯವನೆ ಧಿಃಕರಿಸಿ ನಿಂದಾತನೇ ಪರಮ ಸುಖಿ. ಇದು ಸಂಗನ ಬಸವಣ್ಣನಿಕ್ಕಿದ ಭಿತ್ತಿ. ಬ್ರಹ್ಮೇಶ್ವರ ಲಿಂಗದಲ್ಲಿಯೆಯ್ದುವ ಸುಪಥದ ಪಥ.

## ಶರಣ ಐಕ್ಯ ಸ್ಥಲಗಳು.

೩೧. ಚಂದ್ರಕಾಂತ ಶಿಲೆಯಲ್ಲಿ ಬಿಂದುವಿದ್ದಡೆ ಹಿಂಡಿ ಹಿಳಿದಿಹೆನೆಂದರೆ ಬಂದುದುಂಟೇ? ಆ ಬಿಂದು ಅರುಣ ಶಿಲೆಯಲ್ಲಿ ಉರಿಹಿ ನೋಡಲಿಕ್ಕೆ ಉರಿದುದುಂಟೆ? ನೀರು ಅನಲುಗಳು ತಮ್ಮ ವಲವರದ ಸಾಧ್ಯಕ್ಕಲ್ಲದೆ ಫಲಿಸುವದಿಲ್ಲ. ಇಂತೀ ತೆರದಂತೆ ಕ್ರಿಯಾ ಜ್ಞಾನವೆಲ್ಲವ ಬಲ್ಲೆವೆಂದು ಅಡ್ಡವಾಯ್ದು ಅಲ್ಲಲ್ಲಿ ನುಡಿದಡೆ ನಿಜವಸ್ತು ಸಲ್ಲೀಲೆಯಲ್ಲಿಪ್ಪನೆ? ಶ್ರದ್ಧೆ ಸನ್ಮಾರ್ಗಿಗಳಲ್ಲದೆ ಗೆಲ್ಲಗೂಳಿಗರಲ್ಲಿ ಇಲ್ಲ. ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವು ಅವರಲ್ಲಿ ಇಲ್ಲವಾಗಿ.

೩೨. ಗುರುಭಕ್ತಿಯುಂಟು, ಲಿಂಗಭಕ್ತಿಯುಂಟು, ಜಂಗಮಭಕ್ತಿ ಮತ್ತೆ ತಾನುಂಟು. ತನ್ನರಿದು ಇದಿರ ಕಾಂಬ ಜ್ಞಾನ ಭಕ್ತಿ ಚೆನಬಸವಣ್ಣಂಗೆ ಸಾಧ್ಯವಾಯಿತ್ತು ನೋಡಾ! ಅದು ಅರಿದ ಅರಿವಿಗೆ ಮುನ್ನವೆ ಕುರುಹಿಟ್ಟುದು ನಿಜ. ಆ ಗುಣ ಸಂಗನ ಬಸವಣ್ಣ ಬಂದ ಹಾದಿ ಬ್ರಹ್ಮೇಶ್ವರ ಲಿಂಗದಲ್ಲಿ ಗಾಗಿ.

೩೩. ಎಲೆಗಳೆದ ವೃಕ್ಷಕ್ಕೆ ತಳಿರು ಕೊನರಲ್ಲದೆ, ಸಾರಗೆಟ್ಟು ನಷ್ಟವಾದ ತರುವಿಗೆ ಮತ್ತೆ ಅಂಕುರವುಂಟೇ? ತ್ರಿವಿಧ ಮಲಕ್ಕೆ ದೂರಸ್ಥನಾಗಿ ಅಲ್ಪವೆಂದು ಬಿಟ್ಟು, ಮತ್ತರಿದು ಹಿಡಿದಿಹೆನೆಂದಡೆ ಪ್ರಿಯವಪ್ಪುದೆ? ತಳನ ನಗದು ಮೇಲನರಿಯದೆ ಬಳಸಿ ಕೊಂಬವನಂತೆ ತನ್ನ ಮಣಿಯ ತಾನರಿಯದೆ, ಮೂಕೊರತಿಯ ಮೂಕುತಿಯ ಮಣಿಯ ತನಗೆಂದು ವಿಚಾರಿಸುವಂತೆ ಇಂತೀ ನಿರ್ವಾಣ ಬರುದೋರೆ (?) ಹೋಯಿತ್ತಲ್ಲ. ಸಂಗನಬಸವಣ್ಣ ಇವರು ಅವನರಿಯದಂತೆ ಬ್ರಹ್ಮೇಶಲಿಂಗಕ್ಕೆ ಉರಿಯದೆ ಹೋದರಲ್ಲ.

೩೪. ಕಾದ ಲೋಹದ ಮೇಲೆ ನೀರ ನೆರೆದಡೆ ಆ ನೀರ ಕುಡಿದುದು ಕಾವೋ ಕಬ್ಬಿಣವೋ ಎಂಬುದನರಿತಲ್ಲಿ, ಅಂಗಲಿಂಗ ಸಂಬಂಧಿ. ಕ್ಷೀರ ವೃಕ್ಷವಲ್ಲಿ ಅರ್ಥಿದು ನೀರನೆರೆದೆಡೆ ಆ ನೀರ ಕುಡಿದುದು ಪಾಲೋಯಿಂಬೋ ಎಂಬುದ ಕಡೆಗಾಣಿಸಿದಲ್ಲಿ ಕ್ರಿಯಾ ಜ್ಞಾನ ಆತ್ಮಲಿಂಗ ಸಂಬಂಧ. ಇಂತೀ ಉಭಯದ ಒಳಗನರಿತಲ್ಲಿ ಕ್ರಿಯೆಗೆ ವರ್ತನೆ, ಅರಿವಿಂಗೆ ಕೂಟ, ಈ ಗುಣ ಸಂಗನಬಸವಣ್ಣನ ಆಟ; ಬ್ರಹ್ಮೇಶ್ವರ ಲಿಂಗವ ಒಳಗನರಿದವರ ಮಾಟ.

೩೫. ಹುರಿಯು ಮೆಟ್ಟುವ ವಿಹಂಗ ಜಾತಿ ಜೀವಂಗಳೆಲ್ಲವು ಮುಂಚೆ, ಅವ ಬಲ್ಲಡೆ ಪಂಚವ ಮೆಟ್ಟಿ ತಾವು ಸಿಕ್ಕುವಲೆ, ಆ ತಲರನ ಕಂಡು ತ್ರಿವಿಧದ ಹುರಿಯಲ್ಲಿ ಅಡಿಯನಿಕ್ಕಿ ಅಡಿಗೊಡ್ಡಿದಂತೆ ಬಿದ್ದಿರುತ ಮತ್ತೆ ರೀತಿಯ ಮಾತ ನುಡಿದಡೆ ಅದು ಬಲು ಕಠಿಣವೆಂಬರು. ನೆರೆ ಅರಿದು ಹರಿದ ಶರಣರು ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವ ಹೊರೆ ಹೊರೆಯಲ್ಲಿಯುದಿಸಬೇಕು.

೩೬. ರಸ ಜಿಹ್ವೆಯಲ್ಲಿ, ಗಂಧ ನಾಸಿಕದಲ್ಲಿ ರೂಪು ದೃಕ್ಕಿನಲ್ಲಿ, ಶಬ್ದ ಬ್ರಹ್ಮರಂಧ್ರದಲ್ಲಿ, ಸ್ಪರ್ಶನ ಪಾಣಿ ಪಾದ ಗುಹ್ಯಂಗಳಲ್ಲಿ ಇಂತೀ ಪಂಚೇಂದ್ರಿಯಂಗಳಲ್ಲಿ ಅಷ್ಟ ಗುಣದ ಸಂಚಾರ, ಸಪ್ತ ಭೇದ, ಷಡ್ಗುಣ, ಭಾವ ಚತುಷ್ಟಯ ಮುಟ್ಟಿ, ಷೋಡಶ ಯುಕ್ತಿ, ತ್ರಿ ಸಂಧ್ಯಾತ್ಮಕ ಚಿತ್ತ ಮೂಲ. ಪಂಚ ವಿಂಶತಿ ಭೇದ ಇಂತಿವರೊಳಗಾದ ಸಂಚಾರದ ಸಂಚ ವನರಿದು ತಿಳಿವುಳಿವ ಪ್ರಮಾಣಿಸಿ ನಿಂದುದು ನಿಜಾತ್ಮಯೋಗವಿದು. ಜ್ಞಾನ ಪಿಂಡೋದಯ ಬಸವಣ್ಣ ಪ್ರಿಯ ಕೂಡಲಚನ್ನಸಂಗಮದೇವರಲ್ಲಿ.

೩೭. ನಿಜಾತ್ಮನು, ನಿಶ್ಚಯಾತ್ಮನು, ಜೀವಾತ್ಮನು, ಪರಮಾತ್ಮನು ಎಂಬ ಭೇದವಹಲ್ಲಿ ಅವು ಹುಸಿಯೋ ದಿಟವೋ? ಇಂತೀ ಅಂತರಾತ್ಮ ನಲ್ಲಿ ಕುರುಹುಗೊಂಡು ತಿರುಗುವುದು ನಾಲ್ಕೋ? ಮತ್ತೆ ಸರ್ವಾತ್ಮ ಭೇದವೋ? ಜನನದಲ್ಲಿ ಉತ್ಸಾಹ, ಮರಣದಲ್ಲಿ ಭಯ, ಇಂತೀ ಉಭಯ:ವನರಿವುದು ಆತ್ಮ ಹಲವೋ ಉಭಯವೋ ಏಕವೋ ಎಂಬುದ ತಿಳಿದು, ದಿವದಲ್ಲಿ ಚಲನೆ, ರಾತ್ರಿಯಲ್ಲಿ ಜಿಹ್ವೆಯೊಳಗಪ್ಪುದು. ಜೀವನೋ ಪರಮನೋ ಎಂಬುದ ವಿಚಾರಿಸಿ, ಇಂದ್ರಿಯಂಗಳ ಸಕಲ ದುಃಖಂಗ ಳಲ್ಲಿ ಸಂಗವಾಗಲಿ, ಲೋಲ ಸತಿಯಿಂದ ಪರಮನೋ (?) ಸಕಲ ರುಜೆ, ಭವ ದುಃಖಂಗಳನನುಭವಿಸುವದು, ನೋವುದು, ಬೇವುದು, ಜೀವನೇ ಇಂತೀ ಜೀವ ಪರಮನೆಂದು ಆತ್ಮಂಗೆ ಕಲ್ಪಿಸುವಲ್ಲಿ ಅದಾವ ಪಿಂಡ ಜ್ಞಾನ ಭೇದವೆಂಬುದುದ ವಿಚಾರಿಸಬೇಕು. ಇದು ಪಿಂಡ ಜ್ಞಾನ ಸಂಬಂಧ, ಜ್ಞಾನ ಪಿಂಡೋದಯ ಬಸವಣ್ಣ ಪ್ರಿಯ ಕೂಡಲ ಚನ್ನಸಂಗಮ ದೇವರಲ್ಲಿ.

೩೮. ಬೀಜ ಹುಟ್ಟುವ ತತ್ಕಾಲವೆಂದಡೆ ಹೊಯಿದಿದ್ದ ಹೋಯಿ ಗಿಲದಲ್ಲಿಯೇ ಬೇರು ಬಿಟ್ಟು, ಸಸಿ ಬೆಳೆದು, ಎಲೆ ನಿಂದು, ಫಲ ಬೆಳೆದು

ದುಂಟೆ? ಸಕಲವನರಿತು ಬ್ರಹ್ಮವೇ ನಾನೆಂದಡೆ ಅರ್ಚನೆ ಮರೆತು, ಪೂಜೆ ನಿಂದು, ಸತ್ಯ ಕೆಟ್ಟು, ಭಕ್ತಿ ಹರಿದಲ್ಲಿ ಆತ ನಿಜ ತತ್ವ ಜ್ಞಾನಿಯ ಪ್ಪನೇ? ಇದು ವಿಶ್ವಾಸದ ಭಿತ್ತಿ. ವಿರಕ್ತಿಯ ನಿಳಯ. ಸಂಗನಬಸವಣ್ಣನ ಭಕ್ತಿ ವಿರಕ್ತಿಗಿಕ್ಕಿದ ಕಟ್ಟು. ಬ್ರಹ್ಮೇಶ್ವರ ಲಿಂಗವ ಮುಟ್ಟುವ ಮುಟ್ಟು.

೩೯. ಗುರುವಿನಲ್ಲಿ ಅನುವನರಿದವಂಗೆ ಮತ್ತೆ ಗುರು ನಿರೂಪ ವೆಂಬುದಿಲ್ಲ. ಪ್ರಾಣವೇ ಲಿಂಗವಾದವಂಗೆ ನೆನಹಿಂಗೆ ಎಡೆದೆರಹಿಲ್ಲ. ಸರ್ವಾರ್ಧ್ಯಯ ಸಂಪೂರ್ಣನಾದವಂಗೆ ಇಕ್ಕಿಹೆ, ಅರಿದಿಹೆನೆಂಬ ತೊಟ್ಟಿಹ ತೊಡಕಿಲ್ಲ. ಇಂತಿವನೊಳಗರಿದು ವೇಧಿಸುವನ್ನಕ್ಕ ಗುರುವಿನಾಜ್ಞೆ, ಲಿಂಗದ ಪೂಜೆ, ಮಾಟ ಕೂಟ ಬೇಟವ ಬಿಡಲಿಲ್ಲ. ಇದು ಸಂಗನಬಸವಣ್ಣ ನಾಟ, ಬ್ರಹ್ಮೇಶ್ವರ ಲಿಂಗದ ಕೂಟ.

೪೦. ಮರ್ಕಟ ಜ್ಞಾನದಿಂದ ಲಕ್ಷಿಸುವುದು. ವಿಹಂಗ ಜ್ಞಾನದಿಂದ ಸಂಚರಿಸುವುದು. ಪಿಪೀಲಿಕ ಜ್ಞಾನದಿಂದ ಧ್ಯಾನಿಸುವುದು. ಒಂದೋ ಮೂರೋ ಎಂಬುದ ತಿಳಿದು, ಕಾರ, ಮಧುರ, ಕಹಿ ಇವರೊಳಗೆ ಬೆರೆದ ಸಾರ ಒಂದೋ ಮೂರೋ ಎಂಬುದ ತಿಳಿದು, ದರ್ಪಣದ ಇದಿರಿನಲ್ಲಿ ನಿಂದ ಗಜ, ಅಜ, ಪಶು ನರ ಮುಂತಾಗಿ ತೋರುತ್ತಿಹ ಬಿಂಬ ಮುಕುರ ವೊಂದರಲ್ಲಿ ಸಂದಣಿಸುವಂತೆ, ನಿಜಾತ್ಮನ ಪಿಂಡಜ್ಞಾನ ಭೇದ ಬಸವಣ್ಣ ಪ್ರಿಯ ಕೂಡಲಸಂಗಮದೇವರಲ್ಲಿ ಜ್ಞಾನ ಪಿಂಡೋದಯ.

೪೧. ಆತ್ಮಂಗೆ ಭೂತದಿಂದ ಕಾಂಬುದು ಯಂತ್ರ ಗುಣ. ಭವಿ ಷ್ಯತ್ತಿನಿಂದ ಕಾಂಬುದು ತಂತ್ರಗುಣ. ವರ್ತಮಾನದಿಂದ ಕಾಂಬುದು ಮಂತ್ರಗುಣ. ಇಂತೀ ಭೂತ ಭವಿಷ್ಯದ್ವರ್ತಮಾನಂಗಳಲ್ಲಿ ಸಂಚಿತದ ಸುಖ, ಪ್ರಾರಬ್ಧದ ಪ್ರಾಪ್ತಿ, ಆಗಾಮಿಯ ಕಾಂಬ ಒದಗು, ಇಂತೀ ತ್ರಿವಿಧವಾತ್ಮಂಗೆ ಫಲಭೋಗ ಪ್ರಾಪ್ತಿಯ ಕಟ್ಟುವಲ್ಲಿ ಪಿಂಡಕ್ಕೋ, ಅಂಡಕ್ಕೋ, ಉಭಯ ಗರ್ಭೀ ಕರಿಸಿಕೊಂಡಿಪ್ಪ ಆತ್ಮಂಗೋ, ಎಂಬ ಸಂದೇಹವ ತಿಳಿದು, ತಿಲದೊಳಗಣ ತೈಲ ಬೆಳೆವಲ್ಲಿ ಅಡಗಿಪ್ಪ ಭೇದ ವನರಿತು ಇಲ್ಲಯೆಂದಡೆ ಅಲ್ಲಿ ಮುಂದಣ ರೂಪಿನೊಳಗಿದ್ದುದ ಕಂಡು, ಉಂಟೆಂದು ನಿಷಿದ್ಧಿಸಿದಲ್ಲಿ ಫಲ ನಷ್ಟವಾಗಲಿಕ್ಕೆ ತಿಲ ನಷ್ಟವಾಯಿತ್ತು. ಇಂತೀ ಫಲ ಫಲಿಸುವನ್ನಕ್ಕ ತ್ರಿವಿಧ ಜ್ಞಾನವೆಂಬುದುಂಟು. ಇದು

ಅಂಡ ಪಿಂಡ ಜ್ಞಾನ, ತ್ರಿವಿಧದ ಭೇದ, ಇದು ಜ್ಞಾನ ಪಿಂಡೋದಯ ಬಸವಣ್ಣಪ್ರಿಯ ಕೂಡಲಸಂಗಮದೇವರಲ್ಲಿ.

೪೨. ನಾನಾ ಭೇದಂಗಳಲ್ಲಿ ಷಡ್ ದರ್ಶನವ ಹೊಕ್ಕು ತಿಳಿದಡೂ ಶ್ರುತಿ ವೇದ ಶಾಸ್ತ್ರ ಪುರಾಣಾಗಮಂಗಳಂ ಕಲಿತಡೂ, ಮೂರು ಮಲದ ಭೇದವನರಿತು, ಬಿಡು ಮುಡಿಯಲ್ಲಿ ಕಳೆದುಳಿಯಬೇಕು. ಇದು ಪ್ರಸಿದ್ಧ ವಪ್ಪ ತೆರ. ಇದು ಸಂಗನ ಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರ ಲಿಂಗವ ಕೂಡಬೇಕು.

೪೩. ಅಹಂಕಾರಿಗೆ ಗುರುಭಕ್ತಿಯಿಲ್ಲ. ಪರುಷವುಳ್ಳವರಿಗೆ ಲಿಂಗ ಪೂಜೆಯಿಲ್ಲ. ಋಣಾನುಸಂಬಂಧಿಗೆ ಮಾಟದ ಮರ್ಮವಿಲ್ಲ. ಇಂತೀ ತ್ರಿವಿಧ ಭೇದದ ಕೂಟವನರಿತು, ಸಂಗನ ಬಸವಣ್ಣನ ಆಟದಂತೆ ಬ್ರಹ್ಮೇಶ್ವರ ಲಿಂಗದಲ್ಲಿ ಕೂಟಸ್ಥನಾಗಬೇಕು.

೪೪. ಅರಿದೆ ಮರಿದೆನೆಂಬನ್ನಕ್ಕ ಭಕ್ತಿವಿಶ್ವಾಸಭಾವಿಯಲ್ಲ. ಇನ್ನರಿಯಲಿಲ್ಲ! ಮುಂದೆ ಒಂದು ಕುರುಹಿಲ್ಲ ಎಂಬನ್ನಕ್ಕ ಪರವಸ್ತು ಭಾವಿಯಲ್ಲ. ನಾನೆಂಬನ್ನಕ್ಕ ತಾನಿದ್ದ ಮುಂದೆ ಏನೂ ಇಲ್ಲವೆಂಬುದು ನಿಜವೆ? ತಾನೆಂಬುದಳಿದು ಮುಂದೆ ಏನೂ ಇಲ್ಲವೆಂಬುದು ನಿಜವಾಗಿ ಅದು ನಿರ್ಭಾವವಾದುದು, ಸಂಗನಬಸವಣ್ಣನ ಐಕ್ಯ. ಬ್ರಹ್ಮೇಶ್ವರ ಲಿಂಗದ ಕುರುಹು ನಾಮ ನಷ್ಟ.

ಕಯ್ಯಲ್ಲೊಂದು ಅಮೃತಫಲವಡೆ ನೋಡಾ ಎಂಬುದಕ್ಕರ್ಥ. ಭಕ್ತಿ ಕಾರಣದಿಂದ ಆ ಮಹಾಲಿಂಗವೇ ಇಷ್ಟಲಿಂಗವಾಗಿ ಶಿವಶರಣನ ಶರೀ ರಾದಿಂದ್ರಿಯಂಗಳನೆಲ್ಲವ ತಾನೇ ಭೋಗಿಸಲಾಗಿ ಆ ಶರೀರಾದಿಂದ್ರಿಯಂಗ ಳೆಲ್ಲವೂ ನಿತ್ಯ ಪದವಿಯ ಪಡೆದು ಮಹಾಲಿಂಗದ ಸೇವಕರುಗಳಾಗಿ ಇದ್ದುದೇ ಶಿವಶರಣನು ತನ್ನ ಜ್ಞಾನ ದೃಷ್ಟಿಯಲ್ಲಿ ಕಂಡು ಚೋದ್ಯಂ ಬಡುತ್ತಿದ್ದನೆಂಬುದೀಗ, ಆ ಫಲವ ಮೆದ್ದವರೆಲ್ಲರೂ ಅಮರರಾದುದ ಕಂಡು ನಾನು ಬೆರಗಾದೆನು ನಿಜಗುರುಸ್ವತಂತ್ರಸಿದ್ಧಲಿಂಗೇಶ್ವರಾ ಎಂಬು ದಕ್ಕರ್ಥ.

"ಭಾವ ಪ್ರಸಾದಂ ಕುರುತೆ ಪದಾರ್ಥಂ ಭೂಯಃ ಪ್ರಸಾದಂ ವಿನಿ ಯೋಗಕಾಲೆ। ಆದ್ಯಂತಯೋಗಪ್ರಮಿತ ಪ್ರಸಾದಂ ಮಧ್ಯಪದಾರ್ಥಂ ಕ್ಷಣ ಮಾತನೋತಿ || ಎಂದು ಈ ಗ್ರಂಥದರ್ಥವನೆ ಪ್ರಕಟಿಸುತ್ತಿರ್ದಪಂ.

(೧೯) ಪ್ರಸಾದವನ್ನೂ ಪ್ರಸಾದಿಯನ್ನೂ ಪದಾರ್ಥದ ಭೇದ ವನ್ನೂ ಅರಿವುದರಿದು ನೋಡಾ. ಮುನ್ನಾದಿಯ ಪ್ರಸಾದವು ಅರ್ಪಣಕ್ಕೆ ಬಂದಲ್ಲಿ ಉಪಚಾರದಿಂದ ಪದಾರ್ಥವೆನಿಸಿತ್ತು. ಅರ್ಪಣದ ಮೇಲೆ ಪ್ರಸಾದವೆನಿಸಿತ್ತು. ಈ ಪ್ರಸಾದದಾದಿಕುಳವ ಬಲ್ಲಡೆ ಆತ ಪ್ರಸಾದಿ. ಆ ಪ್ರಸಾದವ ಬಿಟ್ಟು ಪ್ರಸಾದಿಯಿಲ್ಲ. ಈ ಪ್ರಸಾದಿಯೂ ಪ್ರಸಾದವೂ ಕೂಡಿ ಸೋಂಕದ ಪದಾರ್ಥವಿಲ್ಲ. ಇದು ಕಾರಣ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ಪ್ರಸಾದಿಯ ಪ್ರಸಾದದಿಂದ ಮೂರು ಲೋಕವೆಲ್ಲ ಜೀವಿ ಸಿತ್ತಾಗಿ ಆ ಪ್ರಸಾದಿಗೆ ನಮೋ ನಮೋ ಎನುತಿರ್ದೆನು.

ಟೀಕು—ಪ್ರಸಾದವೆಂದೊಡೆ ಪರಬ್ರಹ್ಮವು. ಪ್ರಸಾದಿಯೆಂದಡೆ ಆ ಪರ ಬ್ರಹ್ಮವ ಧರಿಸಿದಂಥ ಚಿಚ್ಛಕ್ತಿಯೆನಿಪ ಶರಣನು. ಪದಾರ್ಥವೆಂದಡೆ ಆ ಚಿಚ್ಛಕ್ತಿಯ ಲೀಲಾಮಾತ್ರವಾದ ಪಂಚವಿಂಶತಿ ತತ್ವವೇ ರೂಪಾದಾ ತ್ಮನು. ಆ ತ್ರಿವಿಧ ಭೇದವನು ತನ್ನೊಳಗೆ ತಿಳಿದು ಮಾಡುವದು ದುರ್ಲ ಭವಾಗಿರ್ಪರೆಂಬುದೀಗ ಪ್ರಸಾದವನೂ ಪ್ರಸಾದಿಯನೂ ಪದಾರ್ಥದ ಭೇದವನೂ ಅರಿವುದರಿದು ನೋಡಾ ಎಂಬುದಕ್ಕರ್ಥ. ಇಂತಪ್ಪ ಭೇದವ ನರಿಯದೆ ಶಿವಶರಣನ ಚೈತನ್ಯವೇ ಆದಿ ಪ್ರಸಾದವಾದ ಕಾರಣ, ಆ ಪ್ರಸಾದವು ಬಾಹ್ಯಾಭ್ಯಂತರದೊಳಹೊರಗೆ ಬೆಳಗುತ್ತಿರ್ದರೂ ತನ್ನ

ಮುಖವ ನೋಡಿಹೆನೆಂಬ ಆಸ್ತಿಕ್ಯ ಬುದ್ಧಿಯುಳ್ಳವನಿಗೆ ಕನ್ನಡಿಯ ನೋಡಿದಲ್ಲದೆ ಕಾಣಬಾರದು ಎಂಬುದು ಹೇಗೋ ಹಾಗೆ ಆ ಶಿವಶರಣನು ಆದಿ ಪ್ರಸಾದವ ಮುಂದಿಟ್ಟುಕೊಂಡು ಕಾಯದ ಕೈಮುಟ್ಟಿ ಕ್ರಿಯಾರ್ಪಣವ ಮಾಡುವೆನೆಂಬ ಕಾಲದಲ್ಲಿ ಆ ಪ್ರಸಾದವು ಪದಾರ್ಥವೆನಿಸಿತ್ತು, ಅದೆಂತೆಂದೊಡೆ— ಆ ಪದಾರ್ಥದೊಳಗೆ ಪ್ರಸಾದವು ಗೋಪ್ಯವಾಗಿದ್ದ ಕಾರಣ " ಚಿತ್ತಾವಲೋಕನೇ ಭುಕ್ತಃ ಪ್ರಸಾದಶ್ಶಿವಸಂಗಮಃ । ನಚಿತ್ತಾಲೋಕನೇಭುಕ್ತಃ ಕ್ರಿಮಿಕೀಟ ಸಮೋಭವೇತ್ " ಎಂದು ಜ್ಞಾನಾವಲೋಕನದಿಂದೆ ಆ ಪದಾರ್ಥದಲ್ಲಿಯ ಪ್ರಸಾದವು ಪ್ರಕಟವಾಗಿ ಮರಳಿ ಅರ್ಪಣದ ಮೇಲೆ ಪ್ರಸಾದವೆನಿಸಿತೆಂಬುದೀಗ, ಮುನ್ನಾದಿಯ ಪ್ರಸಾದವು ಅರ್ಪಣಕ್ಕೆ ಬಂದಲ್ಲಿ ಉಪಚಾರದಿಂದ ಪದಾರ್ಥವೆನಿಸಿತ್ತು. ಅರ್ಪಣದ ಮೇಲೆ ಪ್ರಸಾದವೆನಿಸಿತ್ತು ಎಂಬುದಕ್ಕರ್ಥ. ಆ ಆದಿ ಪ್ರಸಾದವನ್ನೂ ಜ್ಞಾನ ಕ್ರಿಯೆಗಳಿಂದಾಚರಿಸಿ ಜ್ಞಾನದೃಷ್ಟಿಯ ಮುಂದೆ ಸರ್ವತೋಮುಖವಾಗಿ ಪ್ರಕಾಶಿಸುವ ಪ್ರಸಾದವು ತಾನೇಯೆಂದು ತಿಳಿದ ಶಿವಶರಣನೇ ಆದಿ ಪ್ರಸಾದವಾಗಿ ಒಪ್ಪುತ್ತಿದ್ದ ಕಾರಣ, ಪ್ರಸಾದ ಪ್ರಸಾದಿಗಳು ಸೋಂಕದ ಪದಾರ್ಥವೇ ತದ್ರೂಪವಾಗಿ ಕಾಣುತ್ತಿರಲು ಅಂತಪ್ಪ ಆದಿ ಪ್ರಸಾದವನೇ ಸ್ವರ್ಗ ಮರ್ತ್ಯ ಪಾತಾಳದ ಜನರೆಲ್ಲರೂ ಸ್ವೀಕರಿಸಿ ಬದುಕುತ್ತಿರಲು, ಆ ಪ್ರಸಾದದ ಮಹಿಮೆಯನೆ ಕಂಡು ಶರಣನು ತನಗೆ ತಾನೇ ಶರಣೆನುತ್ತಿರ್ದನೆಂಬುದೀಗ ಈ ಪ್ರಸಾದದಾದಿ ಕುಳವಬಲ್ಲಡೆ ಆತ ಪ್ರಸಾದಿ. ಆ ಪ್ರಸಾದಿಯ ಬಿಟ್ಟು ಪ್ರಸಾದವಿಲ್ಲ. ಪ್ರಸಾದವೂ ಪ್ರಸಾದಿಯೂ ಕೂಡಿ ಸೋಂಕದ ಪದಾರ್ಥವಿಲ್ಲ. ಇದು ಕಾರಣ ಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮ ಪ್ರಸಾದಿಯ ಪ್ರಸಾದದಿಂದೆ ಮೂರು ಲೋಕವೆಲ್ಲ ಜೀವಿಸಿತ್ತಾಗಿ ಇಂತಪ್ಪ ಪ್ರಸಾದಿಗೆ ನಮೋ ನಮೋ ಎನುತಿರ್ದೆನು ಎಂಬುದಕ್ಕರ್ಥ.

ಆ ಪ್ರಸಾದಿಯ ಅನುಭಾವವು ಹೇಗೆ ಇದ್ದೀತೆಂದೊಡೆ ಹೇಳುತ್ತಿರ್ದಪಂ.

(೨೦) ಅನುಭಾವ ನೆಲೆಗೊಂಡಲ್ಲದೆ ಅಂಗಲಿಂಗದ ಹೊಲಬನರಿಯಬಾರದು. ಅನುಭಾವ ನೆಲೆಗೊಂಡಲ್ಲದೆ ಭಕ್ತಿವಿರಕ್ತಿ ನೆಲೆಗೊಳ್ಳದು. ಅನುಭಾವ ನೆಲೆಗೊಂಡಲ್ಲದೆ ಜ್ಞಾನ ಸುಜ್ಞಾನದ ನೆಲೆಯ ಕಾಣಬಾರದು.

ಅನುಭಾವ ನೆಲೆಗೊಂಡಲ್ಲದೆ ತಾನಿದಿರೆಂಬುದ ತಿಳಿದು ತಾನು ತಾನಾಗ ಬಾರದು, ಇದು ಕಾರಣ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮನು ಭಾವದಲ್ಲಿಪ್ಪವರ ನೀವೆಂದೆ ಕಾಂಬೆನು.

ಟೀಕು॥ ಉಭಯ ಕರ್ಮಂಗಳು ಸಮವಾಗಿ ಉಭಯ ಕರ್ಮಂಗಳು ಪಾಕವಿಲ್ಲದೆ ಇದ್ದರೆ ಪರಮೇಶ್ವರ ಜ್ಞಾನ ಶಕ್ತಿ ವಿರುದ್ಧವಾಗಿ, ತಿರೋಧಾನ ಶಕ್ತಿಯೆನಿಸಿ ಭೋಗವನು ಕೊಡುವದು. ಅಂಥ ಭೋಗಂಗಳಿಂದೆ ಪ್ರತಿಕಲ್ಪಂಗಳಲ್ಲಿಯೂ ಆತ್ಮನು ತೊಳತೊಳಲಿ ಬರುತ್ತಿರಲು, ಒಂದಾನೊಂದು ಕಾಲದಲ್ಲಿ ಭೋಗ್ಯವಾದ ಸಮಸ್ತ ಕರ್ಮವು ಪರಿಪಕ್ವವಾಗಿ ಅವರೊಳು ಉಭಯ ಕರ್ಮ ಸಾಮ್ಯವಾದೊಡೆ ಆತ್ಮಂಗೆ ಜಗದ್ಬಂಧುವಾದ ಶಿವನು ತನ್ನ ಜ್ಞಾನ ಶಕ್ತಿಯನ್ನು ಸಂಾಭಿಮುಖವಾಗಿ ಪ್ರಸಾದವನು ಕರ್ಮ ಸಾಮ್ಯವೇ ಭಕ್ತಿ ಪಾತಕ್ಕೆ ಕಾರಣವಲ್ಲ. ಅದೇಕೆಂದೊಡೆ "ಬುದ್ಧಿಃ ಕರ್ಮಾನುಸಾರಿಣೀ" ಎಂದು ಆ ಕರ್ಮವು ಬುದ್ಧಿಯಲ್ಲಿರುವುದು. ಆ ಬುದ್ಧಿ ಮಾಯಾಧೀನವಾಗಿರಲು, ಆ ಮಾಯೆಯಲ್ಲಿ ಮಲತ್ರಯಂಗಳಿರುವವು. ಆ ಮಲತ್ರಯಂಗಳ ಪರಿಪಾಕವು ಶಕ್ತಿಪಾತಕ್ಕೆ ಕಾರಣಮಪ್ಪುದು. ಅಂತದರಿಂ ವಿಮಲಶಕ್ತಿಯ ಅಧಿಕಾರ ನಿವೃತ್ತಿಯಿಂದ ಆ ಮಲಶಕ್ತಿ ತೊಲಗುವಲ್ಲಿ ಜಗದ್ಬಂಧುವಾದ ಶಿವನು ಆತ್ಮಂಗೆ ಜ್ಞಾನ ಕ್ರಿಯಾ ಶಕ್ತಿಗಳ ಅನಂತತೆಯನು ಪ್ರಕಟವ ಮಾಡುತ್ತಿಹನು. ಇಂತು ಶಕ್ತಿಪಾತೋದಯವಾದಾತಂಗೆ ಆ ಜ್ಞಾನಪಾತಪತ್ತಣಿಂದ ಆತ್ಮಾನಾತ್ಮ ವಿವೇಕವು ಆಕಸ್ಮಿಕವಾಗಿ ಪುಟ್ಟುವುದು. ಪಿಂಡ ಜ್ಞಾನಿಗಳಾದ ಕೆಲವಾತ್ಮರುಗಳಿಗೆ ಪುನರಾವೃತ್ತಿ ಇಲ್ಲದಿರಲೋಸ್ಕರವಾಗಿ ಶಿವಭಕ್ತಿ ಪಾತವಾಯಿತು. ಅವರುಗಳಿಗೆ ಮುಕ್ತಿಯೆಲ್ಲಿಯದು ? ಲವಲವಿಕೆಯಾದ ಸಂಸಾರದಲ್ಲಿಯ ಹೇಯವೂ ಶಿವಭಕ್ತರಲ್ಲಿಯ ಶಿವನಲ್ಲಿಯ ಶಿವಾಗಮಂಗಳಲ್ಲಿಯ ಭಕ್ತಿ ವಿಶ್ವಾಸವೂ ಪುಟ್ಟುವವು. ಈ ಗುಣಂಗಳಾದಿಯಾಗಿ ಜ್ಞಾನಕ್ರಿಯಾ ಭೇದವಾದ ಅನಂತ ವಿಚಾರವು ಆವನಾನೊಬ್ಬನ ಹೃದಯದೊಳಗೆ ಶಿವಭಕ್ತಿ ಪಾತಚಿನ್ಹವು ಆ ವೇಳೆಗೆ ಹೊಳೆವುದು., ಆ ಹೊಳೆದಾಕ್ಷಣದಲ್ಲಿಯೇ ಆತನ ಮನವು ಆ ಹೊಳಹಿನೊಳಗಳಿದು ಆವ ಲಕ್ಷಣದೊಳಗೆ ನಿಲುವುದು ಆ ಲಕ್ಷಣವೇ ಅಂಗವೆನಿಸುವುದು. ಆ ಅಂಗದಲ್ಲಿ ಕನಕಕಾಂತಿಯಂತೆ ಲಿಂಗವು ಹೆರೆಹಿಂಗದೆ ಇದ್ದೀತೆಂಬುದೀಗ ಅನುಭಾವ ನೆಲೆಗೊಂಡಲ್ಲದೆ ಅಂಗ ಲಿಂಗದ ಹೊಲಬನರಿಯಬಾರದು ಎಂಬುದಕ್ಕರ್ಥ.

ಆ ವಿವೇಕವೇ ಪಂಚೇಂದ್ರಿಯಂಗಳ ಪ್ರಪಂಚವನಳಿದು ಪಂಚಾಚಾರದಲ್ಲಿ ಪರಿಪೂರ್ಣವಾಗಿ ಅಷ್ಟಾವರಣದಲ್ಲಿ ದೃಷ್ಟಿಯಾಗಿಪ್ಪುದೀಗ ಭಕ್ತಿ ಮಾಯಾಜನಿತದ ಸಮಸ್ತ ಪದಾರ್ಥದ ಮೇಲಣ ಹೇಯೋಪಾದೇಯುಗಳಿಲ್ಲದೆ ಉದಾಸೀನವಾಗಿಪ್ಪುದೀಗ "ವಿರಕ್ತಿರ್ವ್ಯಾಲುಂಪೆದ್ವ್ಯಂಜನೆದ್ವೆ ಎಂದುದಾಗಿ ಜ್ಞಾತೃಜ್ಞೇಯು ರೂಪಂಗಳಾದ ಸಕಾರ ಹಕಾರವೆಂಬ ವ್ಯಂಜನಾಕ್ಷರಂಗಳ ಲೋಪದಿಂದುಳಿದ ಸರ್ವಚೈತನ್ಯಾಂತರ್ಯಾಮಿಯಾದ ಪ್ರಣವ ಬೀಜದಲ್ಲಿ ಗುರು ಕಾರುಣ್ಯದ ದೃಷ್ಟಿ ಯಾವುದುಂಟು ಅದೀಗ ಜ್ಞಾನ. ಅಂಥ ಗುರು ಕಾರುಣ್ಯದ ದೃಷ್ಟಿಯಲ್ಲಿ ಮನೋಲಯುವಹುದು ಅದೀಗ ಸುಜ್ಞಾನ. ದೃಗ್ದೃಶ್ಯದಿಂದಿದಿರಿಟ್ಟ ಆ ದೃಗ್ದೃಶ್ಯಂಗಳನು ತಿಳಿದು ಚಿದಾಕಾಶ ಮಧ್ಯದಲ್ಲಿ ತಾನು ತಾಗಿರುವುದು ಪೂರ್ವೋಕ್ತ ವಿವೇಕ ಜಿತವಾದಲ್ಲದಾಗದಾಗಿ ಅದೀಗ 'ಅನುಭಾವ ನೆಲೆಗೊಂಡಲ್ಲದೆ ಭಕ್ತಿ ವಿರಕ್ತಿ ನೆಲೆಗೊಳ್ಳದು. ಅನುಭಾವ ನೆಲೆಗೊಂಡಲ್ಲದೆ ಜ್ಞಾನ ಸುಜ್ಞಾನದ ನೆಲೆಯು ಕಾಣಬಾರದು. ಅನುಭಾವ ನೆಲೆಗೊಂಡಲ್ಲದೆ ತಾನು ತಾನಾಗಬಾರದು ಎಂಬುದಕ್ಕರ್ಥ. ಹಿಂದೆ ಹೇಳಿದ ರಮಣೀಯು ಗುಣಂಗಳು ಊರ್ಧ್ವ ಹೃದಯುವೆಂಬ ಬಿಂದು ದ್ವಾರದಲ್ಲಿ ಹುಟ್ಟಿ ಕಾಯುಗುಣ ಕಮಲಗಳಿಗೆ ಮತ್ತ ಕುಂಜರವೆನಿಸಿ ಆ ದ್ವಾರದಲ್ಲಿಯೇ ನಿವೃತ್ತಿ ಜ್ಞಾನವಳಿದು ಸರ್ವತೋ ಮುಖ ತಾನೆಯಾಗಿ ನಿಂದ ಶಿವಯೋಗಿ ಶಿವನೆಂಬುದೀಗ ನಿಜಗುರು 'ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮನುಭಾವದಲ್ಲಿಪ್ಪವರನು ನೀವೆಂದು ಕಾಂಬೆನು ಎಂಬುದಕ್ಕರ್ಥ.

"ಅಕಾರೊ ಲಿಂಗಮೇವೋಕ್ತಂ ನುಕಾರೊ ಜೀವ ಉಚ್ಯತೆ । ಭಾವಸ್ಸಂಯೋಗ ಏವೋಕ್ತೊ ಅನುಭಾವೊ ನಿಗದ್ಯತೆ " ಎಂದು ಈ ಗ್ರಂಥಾರ್ಥವನೆ ಮುಂದೆ ಪೇಳುತ್ತಿದ್ದಾನು.

(೨೧) ಅನುಭಾವವ ನುಡಿವ ಅಣ್ಣಗಳಿರಾ ಅನುಭಾವವೆತ್ತ ನೀವೆತ್ತ ಹೋಗಿರಣ್ಣಾ. ಅನುಭಾವವೆಂಬುದು ಆತ್ಮವಿದ್ಯೆ. ಅನುಭಾವವೆಂದು ತಾನಿದಿರೆಂಬುದ ತೋರದು. ಅನುಭಾವವೆಂಬುದು ನಿಜ ನಿವಾಸದಲ್ಲಿರಿಸುವುದು. ಇಂತಪ್ಪ ಅನುಭಾವದನುವನರಿಯದೆ ಶಾಸ್ತ್ರ ಜಾಲದ ಪಸರವ ನಿಕ್ಕಿ ಕೊಳ್ಳದ ಕೊಡದ ವ್ಯವಹಾರವ ಮಾಡುವ ಅಣ್ಣಗಳಿರಾ ನೀವೆತ್ತ ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರನ ಅನುಭಾವವೆತ್ತ ಹೋಗಿರಣ್ಣಾ.

ಟೀಕು—ವಿವೇಕದಿಂದ ಪರಬ್ರಹ್ಮದ ಮಾತ ನುಡಿವವರಿಗೆ ಆ ಪರಬ್ರಹ್ಮವು ಸಾಕ್ಷಿಯಾಗಿಪ್ಪುದಲ್ಲದೆ ಅವರೊಳಗೆ ಬೆರೆದು ನಿಜಮೋಕ್ಷವ

ಕೊಡಲರಿಯದು. ಅದೆಂತೆಂದೊಡೆ:—ಅವರು ಪ್ರಾರಬ್ಧ ಕರ್ಮದ ಎಂಜಲ ಮಾತನೆ ಕಲಿತು ಅಂಜದೆ ಮಾತಿನ ಬಣಬೆಯ ಮುಂದಿಟ್ಟುಕೊಂಡು ನೀತಿಶಾಸ್ತ್ರದ ಒಂದೊಂದು ಗ್ರಂಥಂಗಳನೆ ನುಡಿದು ಇಲ್ಲದರಿವನುಂಟು ಮಾಡಿಕೊಂಡು ನುಡಿವವರಲ್ಲದೆ ತಮ್ಮ ನಿಜವ ತಿಳಿದು ಪರಿಣಾಮಿಸ ಲರಿಯದ ಕಾರಣ ಅವರಿಗೆ ಪರಬ್ರಹ್ಮವು ಬೇರಾಗಿದ್ದೀತೆಂಬುದೀಗ ಅನು ಭಾವವ ನುಡಿವ ಅಣ್ಣಗಳಿರಾ, ಅನುಭಾವವೆತ್ತ ನೀವೆತ್ತ ಹೋಗಿರಣ್ಣಾ ? ಎಂಬುದಕ್ಕರ್ಥ. ವಿವೇಕವೆಂಬುದು ಆತ್ಮಜ್ಞಾನ. ಅದು ಹೇಗೆಂದೊಡೆ; "ಅಶರೀರಂ ಯಥಾತ್ಮಾನಂ ಪಶ್ಯಂತಿ ಜ್ಞಾನಚಕ್ಷುಷಾ । ತಥಾಭವತಿಶಾಂ ತಾತ್ಮಾ ಸರ್ವತೋಭಿಗತಃ ಸ್ಮೃತಃ" ಎಂದು ಆವುದಾನೊಂದು ವೇಳೆ ಯಲ್ಲಿ ಜ್ಞಾನಚಕ್ಷುವಿನಿಂದ ತನ್ನನು ಶರೀರವಿಲ್ಲದಾತನಾಗಿ ಕಾಣುತ್ತಿ ಹನು, ಆ ವೇಳೆಯಲ್ಲಿ ಪ್ರಸನ್ನಾತ್ಮನಾದಂಥಾತನು ಎಲ್ಲಾ ಕಡೆಯಲ್ಲಿಯೂ ಹೋಗಲ್ಪಟ್ಟ ಆಸೆಗಳನುಳ್ಳಂಥಾತನಾಗುತ್ತಿಹನೆಂಬುದೀಗ ಅನುಭಾವ ವೆಂಬುದು ಆತ್ಮ ವಿದ್ಯೆ ಎಂಬುದಕ್ಕರ್ಥ. ಅಂತಪ್ಪ ಜ್ಞಾನಚಕ್ಷು ಆವಾ ತಂಗುಂಟು ಅಂಥಾತಂಗೆ ಶರೀರವಿದಿರಿಟ್ಟು ಇಹುದೆಂಬುದೀಗ ಅನುಭಾ ವವೆಂಬುದು ತಾನಿದಿರೆಂಬುದ ತೋರದು ಎಂಬುದಕ್ಕರ್ಥ. ಅಂಥ ಸೋಹಂ ಎಂಬ ಜ್ಞಾನ ಚಕ್ಷುವಿನ ಮುಂದಿದಿರಿಟ್ಟು ಆ ಶರೀರವನು ಆ ಜ್ಞಾನಚಕ್ಷುವಿನಲ್ಲಿ ಲೀನವಮಾಡಿ ತಾನು ಅತೀಂದ್ರಿಯದಲ್ಲಿ ಲಯವಾಗಲು ಎಂಬುದೀಗ ಅನುಭಾವವೆಂಬುದು ನಿಜ ನಿವಾಸದಲ್ಲಿರಿಸುವುದು ಎಂಬುದ ಕ್ಕರ್ಥ. ಅಂಥ ಅತೀಂದ್ರಿಯದ ಪ್ರತ್ಯಕ್ಷವನರಿಯದೆ ಸಂಸ್ಕೃತಪ್ರಾಕೃತ ತತ್ವ ಶಾಸ್ತ್ರಂಗಳ ಮಾತನೆ ಕಲಿತು ಪರಿಸಿ ಅರಿಯದವರ ಗೆಲಬೇ ಕೆಂದು ಇದಿರು ವಾದವನೆ ಮಾಡಿ ಹೊತ್ತಿನ ಹೊರಟೆಯಂತೆ ವೃಥಾ ಆದರೆಂಬುದೀಗ ಇಂತಪ್ಪ ಅನುಭಾವದನುವನರಿಯದೆ ಶಾಸ್ತ್ರಜಾಲದ ಪಸರವನಿಕ್ಕಿಕೊಳ್ಳದ ಕೊಡದ ವ್ಯವಹಾರವ ಮಾಡುವ ಅಣ್ಣಗಳಿರಾ ನೀವೆತ್ತ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಅನುಭಾವವೆತ್ತ ಹೋಗಿ ರಣ್ಣ ಎಂಬುದಕ್ಕರ್ಥ.

ದಯೆಯಿಂ ಶ್ರೀಗುರುಸಿದ್ಧಲಿಂಗಯತಿವರ್ಯಂಸಾಧಕರ್ಗೆದೆ ಸಂ ।
ದೆಯುಮೆಲ್ಲಂ ಪರಿವಂತಿರೊಲ್ದೊರೆದ ವಾಕ್ಯಾನೀಕದೋಳ್ನಿರ್ಮಲಾ ॥
ಶಯರಾನಂದಿಸಲಾಯ್ತು ಟೀಕಿಸುತದಂ ಮುಕ್ತ್ಯಂಗನಾಕಂಠಮಾ ।
ಲೆಯದೆಂಬಾ ಪೆಸರಿಟ್ಟು ತೋರ್ಪಡಿಸಿದಂ ಶ್ರೀಚೆನ್ನದೇವಾಹ್ವಯಂ॥

# ಜ್ಯೋತಿರ್ಮಯಶಾಂಭವೀಜ್ಞಾನ ದೀಕ್ಷಾಬೋಧೆ.

---

(೧) ವೀರಶೈವವೆಂಬುದು ಒಂದು ಅರಣ್ಯ ಮಧ್ಯದಲ್ಲಿ ಒಬ್ಬ ಪರ್ಣ ಭಕ್ಷಕನು ಹೇಳಿದುದು ಅಲ್ಲ; ಒಬ್ಬ ಮಾಂಸ ಭಕ್ಷಕನು ಕೇಳಿದುದು ಅಲ್ಲ. ವೀರಶೈವವೆಂಬುದು ಒಂದು ವನದಲ್ಲಿರ್ದ ವಾಯು ಭಕ್ಷಕನು ಹೇಳಿದುದೂ ಅಲ್ಲ; ಒಬ್ಬ ಸುರಾಪಾನ ಮಾಡುವವನು ಕೇಳಿದುದೂ ಅಲ್ಲ. ವೀರಶೈವವೆಂಬುದು ಒಂದು ಪರ್ವತದಲ್ಲಿ ಒಬ್ಬ ದೇಹಿ ಹೇಳುದುದು ಅಲ್ಲ; ಒಬ್ಬ ದೇಹಧಾರಕನು ಕೇಳಿದುದೂ ಅಲ್ಲ. ವೀರಶೈವವೆಂಬುದು ಅನಂತಕೋಟಿ ವೇದ ಶಾಸ್ತ್ರ ಪುರಾಣಾಗಮ ಮಂತ್ರಾರ್ಥ ಸಾರಸುಧಾರಸವು. ಪರಮಶಿವ ಪರಮಾರ್ಥ ಪರತತ್ವ ಪರಮಾತ್ಮ ಪರಬ್ರಹ್ಮ ಪರಮಲಿಂಗ ಪರಾಪರ ವಸ್ತುವಾದ ಪರಮೇಶ್ವರನು. ಈ ವೇದಾರ್ಥಸಾರಸುಧಾರಸವನು ಸೂಕ್ಷ್ಮವಾಗಿ ಸಂಗ್ರಹಿಸಿ, ಹನ್ನೆರಡು ಕೋಟಿ ಹನ್ನೆರಡು ಲಕ್ಷ ಹನ್ನೆರಡು ಸಾವಿರ ಪರಮ ರಹಸ್ಯವ ಮಾಡಿ, ಶಂಭುಮೂರ್ತಿ ಶಾಂಭವಿಗೆ ಉಪದೇಶವಿತ್ತ ತಾವು ಎಲ್ಲಿ ಎಂದರೆ ಪರಮಚಿದಬ್ಧಿ ಎಂಬ ಸಮುದ್ರ ಮಧ್ಯದಲ್ಲಿ ಜ್ಯೋತಿರ್ಮಯವಡಬಾನಲ ಮಂಟಪದಲ್ಲಿ ಒಂದು ನಿರುಪಮ ದಿವ್ಯ ಮಾಣಿಕ್ಯಸಿಂಹಾಸನ, ಆ ಸಿಂಹಾಸನ ಮಧ್ಯದಲ್ಲಿ ಅನಂತ ಕೋಟಿ ವೇದಂಗಳಿಗೆ ತಾಯಿಯಾದ ಗಾಯತ್ರೀ ಮಂತ್ರವ ಹಾಸಿಗೆಯ ಮಾಡಿ, ಚಿತ್ಪ್ರಣವವ ಪಾದದ ಕಡೆಗೆ ಶುದ್ಧ ಪ್ರಣವವ ಮಸ್ತಕದ ಕಡೆ ಮಾಡಿ, ಆ ಮಧ್ಯದಲಿ ಪರಶಿವನು ಶಂಭುವಿಗೆ ನಿರಂಜನಪ್ರಣವ ಯುಕ್ತವಾಗಿ ಉಪದೇಶಿಸಿದ ಪರಮರಹಸ್ಯ. ಈ ರಹಸ್ಯವನು ಪರಮಪರಾಪರ ಪರಮಾರ್ಥ ಪರಮಾತ್ಮ ಪರಬ್ರಹ್ಮ ಪರಶಿವಮೂರ್ತಿಯಾದ ಅಲ್ಲಮಪ್ರಭುದೇವರು ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥ ಗಣಂಗಳಿಗೆ ಎರಡೆಂಬತ್ತು ಕೋಟಿ ಬೆಡಗಿನ ವಚನಂಗಳಿಂದೆ ಉಪದೇಶವ ಮಾಡಿದರು. ಆ ಪರಮ ರಹಸ್ಯಾರ್ಥವನು ಪಾಲ್ಕುರಿಕೆ ಸೋಮೇಶ್ವರನು ಸಂಗಯ್ಯನೆಂಬ ಶರಣನಿಗೆ ನೂರರುವತ್ತು ವಚನವ ಉಪದೇಶಿಸಿದನು ಗುಹೇಶ್ವರಾ.

## ಸರ್ವಶೂನ್ಯನಿರಾಲಂಬ ಸ್ಥಲ

(೨) ಆದಿಮಧ್ಯಾಂತವಿಲ್ಲದ, ನಾದಬಿಂದು ಕಳೆಗಳಿಲ್ಲದ, ಸಾವಯವ ನಿರವಯುವವಿಲ್ಲದ, ರೂಪು ನಿರೂಪವಿಲ್ಲದ, ನಾಮ ನಿರ್ನಾಮವಿಲ್ಲದ, ಸೀಮೆ ನಿಸ್ಸೀಮೆಯಿಲ್ಲದ, ಕಾಣುವದಕ್ಕೆ ಕೇಳುವದಕ್ಕೆ ಇಲ್ಲದ, ನಿನ್ನ ನೀನರಿಯದೆ ನೀನೇ ನೀನಾಗಿರ್ದಲ್ಲಿ ನಿನ್ನ ಕೋಟ್ಯಂಶದಲ್ಲಿ ನಿರಂಜನ ಕಳೆ ಹುಟ್ಟಿತು. ಆ ನಿರಂಜನ ಕಳೆಗೆ ನಾದಬಿಂದು ಕಳೆಗಳಿಲ್ಲದೆ ಆದಿ ಮಧ್ಯಾಂತವಾದ ಅಂಗವಿಲ್ಲದ ಕಳೆ, ಆ ಕಳೆಯೇ ನಾನು, ಆ ವಸ್ತುವೇ ನೀನು, ಆ ನಿರಂಜನ ಕಳೆಯೇ ಅಂಗವಾಗಿ ಆ ವಸ್ತುವೇ ಲಿಂಗವಾಗಿ ಕೂಡ ಲಿಕ್ಕೆ ಕಾಷ್ಠದಲ್ಲಿ ಅಗ್ನಿ ಇದ್ದ ಹಾಗೆ ನಿರಂಜನ ಪ್ರಣವ ಒಂದು ಮಹಾ ಶೂನ್ಯಲಿಂಗವೆಂದು ಹೇಳಲ್ಪಟ್ಟಿತು ಗುಹೇಶ್ವರಾ.

(೩) ನೀವು ನಿಮ್ಮ ಸ್ವಲೀಲೆಯಿಂದ ನಿರಂಜನಪ್ರಣವದ ಕೋಟ್ಯಂಶ ದಲ್ಲಿ ಶೂನ್ಯಲಿಂಗವಾದಲ್ಲಿ ಆದಿಮಧ್ಯಾಂತಂಗಳಿಲ್ಲದ, ನಾದಬಿಂದು ಕಳೆ ಗಳಿಲ್ಲದ, ಸಾವಯವ ನಿರವಯವ ನಾಮ ನಿರ್ನಾಮಂಗಳಿಲ್ಲದ, ರೂಪು ನಿರೂಪು ಸೀಮೆ ನಿಸ್ಸೀಮೆಗಳಿಲ್ಲದ, ಕಾಣುವದಕ್ಕೆ ಕೇಳುವದಕ್ಕೆ ಇಲ್ಲದ ನಿನ್ನ ನೀನರಿಯದೆ, ನೀನೇ ನೀನಾಗಿದ್ದ ಕೋಟ್ಯಂಶದಲ್ಲಿ ಪರಮ ಚಿತ್ಕಳೆ ಹುಟ್ಟಿತು. ಆ ಪರಮ ಚಿತ್ಕಳೆಗೆ ನಾದಬಿಂದು ಕಳೆಗಳಿಲ್ಲದ ಆದಿ ಮಧ್ಯ ಅಂತ್ಯವಾದ ಅಂಗವಿಲ್ಲದ ಕಳೆ, ಆ ಕಳೆಯೇ ನಾನು, ಆ ವಸ್ತುವೇ ನೀನು. ಆ ಪರಮ ಚಿತ್ಕಳೆಯೆ ಅಂಗವಾಗಿ ಆ ಶೂನ್ಯ ವಸ್ತುವೇ ಲಿಂಗ ವಾಗಿ ಕೂಡಲಿಕ್ಕೆ ರನ್ನವು ರನ್ನದ ಕಾಂತಿ ಇದ್ದ ಹಾಗೆ ಪ್ರಣಮವೆಂದು ಸ್ವಯಂಭುಲಿಂಗವೆಂದು ಹೇಳಲ್ಪಟ್ಟಿತು ಗುಹೇಶ್ವರಾ.

(೪) ನೀವು ನಿಮ್ಮ ಸ್ವಲೀಲೆಯಿಂದ, ಶುದ್ಧಪ್ರಣವದಕೋಟ್ಯಂಶ ದಲ್ಲಿ ನಿಷ್ಕಳ ಲಿಂಗವಾದಲ್ಲಿ ಆದಿಮಧ್ಯಾಂತಂಗಳಿಲ್ಲದ, ನಾದಬಿಂದುಕಳೆಗಳ ಲ್ಲದ, ಸಾವಯುವ, ನಿರವಯುವ, ಭಾವ, ಸದ್ಭಾವ, ನಿರ್ಭಾವವಿಲ್ಲದ, ರೂಪು ನೀರೂಪು ನಿಷ್ಕಾಮ ನಿರ್ನಾಮ ನಿರ್ಮಾಯವಿಲ್ಲದ ಕಾರಣ ಅರಿವು ಮರವೆಯಿಲ್ಲದ, ಮನೋಜ್ಞಾನಭಾವಮುದಗಳಿಲ್ಲದ, ಜ್ಞಾತೃಜ್ಞಾನ ಜ್ಞೇಯ ಅಜ್ಞಾನ ಸುಜ್ಞಾನಂಗಳಿಲ್ಲದ, ದ್ವೈತಾದ್ವೈತವಿಲ್ಲದ, ನಿನ್ನ ನೀನರಿಯದೆ ನೀನೇ ನೀನಾಗಿರ್ದ ಕೋಟ್ಯಂಶದಲ್ಲಿ ಸಚ್ಚಿದಾನಂದಕಳೆ ಹುಟ್ಟಿತು. ಆ

ಸಚ್ಚಿದಾನಂದಕಳೆಗೆ ನಾದಬಿಂದುಕಳೆಗಳಿಲ್ಲದ ಆದಿಮಧ್ಯ ಅಂತ್ಯವಾದ ಅಂಗವಿಲ್ಲದ ಕಳೆ. ಆ ಕಳೆಯೇ ನಾನು ಆ ವಸ್ತುವೇ ನೀನು. ಆ ಕಳೆಯೇ ಅಂಗವಾಗಿ ಆ ವಸ್ತುವೇ ಲಿಂಗವಾಗಿ ಕೂಡಲು, ಮಂಜಿನ ಶೈತ್ಯದ ಹಾಗೆ ಚಿತ್ಪ್ರಣವವೆಂದು ಆದಿಮಹಾಲಿಂಗವೆಂದು ಹೇಳಲ್ಪಟ್ಟಿತು ಗುಹೇಶ್ವರಾ.

(೫) ನೀವು ನಿಮ್ಮ ಸ್ವಲೀಲೆಯಿಂದ ಚಿತ್ಪ್ರಣವದ ಕೋಟ್ಯಂಶದಲ್ಲಿ ನಿಷ್ಕಳಶಿವನಾದಲ್ಲಿ ಘೃತಕಾಠಿಣ್ಯನ್ಯಾಯದ ಹಾಗ ಸಮಸ್ತ ಮೂರ್ತಿಗಳ ಸಮಸ್ತ ಶಕ್ತಿಗಳ, ಸಮಸ್ತ ಬಹ್ಮಾಂಡಗಳ ಉತ್ಪತ್ತಿ ಸ್ಥಿತಿಲಯಗಮ ನಂಗಳ ತನ್ನಲ್ಲಿಯೇ ಮಾಡಿ ತಾನೇ ಆಶ್ರಯವಾಗಿ ತಾನೇ ನೋಡಿ ಸಂತೋಷಿಸಿ, ತನ್ನ ಹೊರಗೆ ಕಾಣಿಸದೆ ಅನಂತಕೋಟಿ ಸೂರ್ಯ ಚಂದ್ರಾಗ್ನಿ ಕಳೆಗಳಂ ಮೀರಿ ಅನುಪಮ ಚಿದ್ರೂಪ ಸ್ವರೂಪವಾದ ನಿಷ್ಕಳ ಶಿವನ ಕೋಟ್ಯಂಶದಲ್ಲಿ ಪರಮಕಳೆ ಹುಟ್ಟಿತ್ತು. ಆ ಪರಮ ಕಳೆ ನಾದಬಿಂದುಕಳಾಸ್ವರೂಪವಾಗಿ ಅನಂತಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶವಾಗಿ ಸಮಸ್ತ ಮೂರ್ತಿಗಳೊಡನೆ ಸಮಸ್ತ ಶಕ್ತಿಗಳೊಡನೆ ಸಮಸ್ತ ತತ್ವಂಗಳೊಡನೆ ಸಮಸ್ತ ಬ್ರಹ್ಮಾಂಡಗಳೊಡನೆ ಹುಟ್ಟಿದ ಆ ಪರಮಕಳೆಯೇ ನಾನು, ಆ ವಸ್ತುವೇ ನೀನು, ಆ ಪರಮಕಳೆಯೇ ಅಂಗವಾಗಿ ಆ ವಸ್ತುವೇ ಲಿಂಗವಾಗಿ ಕೂಡಲು, ಕ್ಷೀರದೊಳಗಣ ಘೃತದ ಹಾಗೆ ಸಮಸ್ತಭಕ್ತಹಿತಾರ್ಥವಾಗಿ ಸಾಕಾರವೆನಿಸಿ, ಓಂಕಾರಪ್ರಣವ ವೆಂದು ಮಹಾಲಿಂಗವೆಂದು ಹೇಳಲ್ಪಟ್ಟಿತು ಗುಹೇಶ್ವರಾ. ಇದು ಸರ್ವ ಶೂನ್ಯನಿರಾಲಂಬಸೃಷ್ಟಿ.

(೬) ಆ ಅಖಂಡಪರಿಪೂರ್ಣ ತೇಜೋಮಯಗೋಳಕಾಕಾರ ಮಹಾಲಿಂಗದಲ್ಲಿ ವಾಚ್ಯಸೃಷ್ಟಿ, ಅವಾಚ್ಯಸೃಷ್ಟಿಯೆಂದು ಎರಡು ಪ್ರಕಾರವಾಯಿತು. ಆ ಎರಡರಲ್ಲಿ ವಾಚ್ಯಸೃಷ್ಟಿ ಹೇಗೆಂದೊಡೆ;— ಆ ಮಹಾಲಿಂಗ ದಲ್ಲಿ ಈಶ್ವರ, ಮಹೇಶ್ವರ, ಸದಾಶಿವರೆಂದು ತ್ರಿಮೂರ್ತಿಗಳು ಹುಟ್ಟಿ ಸಕಲ, ನಿಷ್ಕಲ, ಕೇವಲನಿಷ್ಕಲರೆನಿಸಿ, ಸಕಲ ಮೂರ್ತಿಗಳ ಸಕಲ ಶಕ್ತಿಗಳ ಸಕಲ ತತ್ವಂಗಳ ಸಕಲ ಚಿದ್ಬ್ರಹ್ಮಾಂಡಂಗಳ ಹುಟ್ಟಿಸಿ, ತಮ್ಮಲ್ಲಿಯೇ ವಿನೋದಿಸುವರು ಗುಹೇಶ್ವರಾ. ಇದು ಶೂನ್ಯ ನಿರಾಲಂಬ ಸೃಷ್ಟಿ.

(೭) ಅಖಂಡಪರಿಪೂರ್ಣ ತೇಜೋಮಯ ಗೋಳಕಾಕಾರಮೂರ್ತಿ ಯಾದ ಮಹಾಲಿಂಗವು ವಿಶ್ವತೋಮುಖ, ವಿಶ್ವತೋ ನೇತ್ರ, ವಿಶ್ವತೋ ಬಾಹು, ವಿಶ್ವತಃ ಪಾದ ಸರ್ವಪರಿಪೂರ್ಣಸರ್ವಜ್ಞ ಮೂರ್ತಿಯಾಗಿರುವುದು. ವಟಬೀಜನ್ಯಾಯದಂತಿರ್ದ ಆ ಮಹಾಲಿಂಗದ ಸಹಸ್ರಾಂಶದಲ್ಲಿ ಚಿಚ್ಛಕ್ತಿ ಹುಟ್ಟಿತು. ಆ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ ಪರಮೇಶ್ವರ ಹುಟ್ಟಿದನು. ಆ ಪರಮೇಶ್ವರನಿಗೆ ಏಕಮುಖ, ತ್ರಿನೇತ್ರ, ದ್ವಿಹಸ್ತ, ದ್ವಿಪಾದ, ತನುವೇಕವು. ಆನಂದಮಯನಾಗಿ ಕಳೆಗಳನ್ನೆಲ್ಲಾ ಮೀರಿ ಜ್ಞಾನಗಮ್ಯನಾಗಿರ್ದ ಆ ಪರಮೇಶ್ವರನ ಸಹಸ್ರಾಂಶದಲ್ಲಿ ಪರಾಶಕ್ತಿ ಹುಟ್ಟಿತು. ಆ ಪರಾಶಕ್ತಿಯ ಸಹಸ್ರಾಂಶದಲ್ಲಿ ಸದಾಶಿವಮೂರ್ತಿ ಹುಟ್ಟಿದನು. ಆ ಸದಾಶಿವನಿಗೆ, ದ್ವಿಮುಖ, ಷಣ್ಣೇತ್ರ, ನಾಲ್ಕುಹಸ್ತ, ದ್ವಿಪಾದ, ಸುವರ್ಣವರ್ಣದೇಹವು ಮನೋಗಮ್ಯಮೂರ್ತಿಯಾಗಿರ್ದ ಆ ಸದಾಶಿವನ ಸಹಸ್ರಾಂಶದಲ್ಲಿ ಆದಿಶಕ್ತಿಹುಟ್ಟಿತು. ಆ ಆದಿಶಕ್ತಿಯ ಸಹಸ್ರಾಂಶದಲ್ಲಿ ಈಶ್ವರನು ಹುಟ್ಟಿದನು. ಆ ಈಶ್ವರನಿಗೆ, ತ್ರಿಮುಖ, ನವನೇತ್ರ, ಷಟ್‌ಹಸ್ತ, ದ್ವಿಪಾದ, ಧವಳವರ್ಣ ಶರೀರವು. ಅಹಂಕಾರಗಮ್ಯಮೂರ್ತಿಯಾಗಿರ್ದ್ದ ಆ ಈಶ್ವರನ ಸಹಸ್ರಾಂಶದಲ್ಲಿ ಇಚ್ಛಾಶಕ್ತಿ ಹುಟ್ಟಿತು. ಆ ಇಚ್ಛಾಶಕ್ತಿಯ ಸಹಸ್ರಾಂಶದಲ್ಲಿ ಮಹೇಶ್ವರ ಹುಟ್ಟಿದನು. ಆ ಮಹೇಶ್ವರನಿಗೆ, ಚತುರ್ಮುಖ, ದ್ವಾದಶನೇತ್ರ, ಎಂಟು ಹಸ್ತ, ದ್ವಿಪಾದ, ಸ್ಫಟಿಕವರ್ಣ ಶರೀರವು. ಬುದ್ಧಿಗಮ್ಯನಾಗಿರ್ದ ಆ ಮಹೇಶ್ವರನ ಸಹಸ್ರಾಂಶದಲ್ಲಿ ಜ್ಞಾನಶಕ್ತಿ ಹುಟ್ಟಿತು. ಆ ಜ್ಞಾನಶಕ್ತಿಯ ಸಹಸ್ರಾಂಶದಲ್ಲಿ ಶ್ರೀರುದ್ರಮೂರ್ತಿ ಹುಟ್ಟಿದನು. ಆ ಶ್ರೀರುದ್ರಮೂರ್ತಿಗೆ, ಪಂಚಮುಖ, ದಶಭುಜ, ಪಂಚದಶನೇತ್ರ, ದ್ವಿಪಾದ, ಕುಂಕುಮ ವರ್ಣದ ಶರೀರವು. ಚಿತ್ತಗಮ್ಯಮೂರ್ತಿಯಾಗಿರ್ದ ಆ ಶ್ರೀರುದ್ರಮೂರ್ತಿಯ ಸಹಸ್ರಾಂಶದಲ್ಲಿ ಕ್ರಿಯಾಶಕ್ತಿ ಹುಟ್ಟಿತು. ಆ ಕ್ರಿಯಾಶಕ್ತಿಯ ಸಹಸ್ರಾಂಶದಲ್ಲಿ ನಾನಾವರ್ಣರೂಪವಾದ ಈಶಾನಮೂರ್ತಿ ಹುಟ್ಟಿದನು. ಆ ಈಶಾನಮೂರ್ತಿಯು ಸಮಸ್ತವರ್ಣಂಗಳೊಡನೆ ಸಮಸ್ತನಾದಂಗಳೊಡನೆ ಸಮಸ್ತರೂಪಂಗಳೊಡನೆ ಸಮಸ್ತವೂ ತಾನೆಯಾದ ಹಾಂಗೆ ಸಗುಣನಾಗಿ ಸಗುಣನಿರ್ಗುಣನಾಗಿ, ಕೇವಲ ನಿರ್ಗುಣನಾಗಿ ವರ್ತಿಸುವನು. ಸಾವಯವನಾಗಿ, ನಿರವಯವನಾಗಿ, ಷಟ್‌ವಕ್ತ್ರ, ದ್ವಾದಶಹಸ್ತ, ಅಷ್ಟಾದಶನೇತ್ರ, ದ್ವಿಪಾದ, ತನುವೇಕವಾಗಿರ್ದ್ದೆಯಲ್ಲಾ ಗುಹೇಶ್ವರಾ. ಇದೀಗ ನಿರಾಳಸೃಷ್ಟಿ.

(೮) ಆ ಈಶಾನಮೂರ್ತಿಯ ಆರು ಮುಖವ ವೇದಶಾಸ್ತ್ರ ಪುರಾಣಾಗಮತಂತ್ರಂಗಳು ನಿರ್ಣಯಿಸಲಾರವು.ಮನು, ಮಾಂಧಾತರಿಗೆ ವಾಙ್ಮನಕ್ಕಗೋಚರ. ಅಂತಿರ್ದ ನಿಜಚಿನ್ಮಯಮಹಾತತ್ವದ ಗೋಪ್ಯಮುಖದಲ್ಲಿ ನಂದೀಶ್ವರ, ಭೃಂಗೀಶ್ವರ, ದಾರುಕ, ರೇಣುಕ, ಸೌಂದರ, ಸುಮುಖ, ಸುನಾದ, ಭದ್ರ, ವೀರಭದ್ರ ಮೊದಲಾದ ಪ್ರಮಥಗಣಂಗಳು ವ್ಯೋಮ್ನಯ ರುದ್ರ, ಕಾಲಾಗ್ನಿ ರುದ್ರ, ಶರಭರುದ್ರ, ಸದಾಶಿವರುದ್ರ, ಮೊದಲಾದ ರುದ್ರ ಗಣಂಗಳುದ್ಭವಿಸಿ, ಅವರು ಲಿಂಗಾಂಗ, ಲಿಂಗೇಂದ್ರಿಯ ಲಿಂಗಪ್ರಾಣ, ಲಿಂಗಮನೋಗತರಾಗಿರ್ದರು ಗುಹೇಶ್ವರಾ. ಇದು ಈಶಾನಮೂರ್ತಿಯ ನಿರ್ಮಲ ಸೃಷ್ಟಿ.

(೯) ಆ ನಿರಾಲಂಬಮೂರ್ತಿಯಾದ ಈಶಾನ್ಯ ಮೂರ್ತಿಯ ಸಹಸ್ರಾಂಶದಲ್ಲಿ ಸದಾಶಿವ ಮೂರ್ತಿ ಹುಟ್ಟಿದನು. ಆ ಸದಾಶಿವ ಮೂರ್ತಿಗೆ ಪಂಚವಕ್ತ್ರ, ದಶಭುಜ, ದಶಪಂಚನೇತ್ರ, ದ್ವಿಪಾದ, ತನುವೇಕ, ಶುದ್ಧ ಸ್ಫಟಿಕ ಪ್ರದ್ಯೋತ ಸಕಲಾಭರಣ ಭೂಷಿತನಾದ ಸದಾಶಿವ ಮೂರ್ತಿಯ ಸಹಸ್ರಾಂಶದಲ್ಲಿ ಸುವರ್ಣಚ್ಛಾಯೆಯುಳ್ಳ ಚಿಚ್ಛಕ್ತಿ ಹುಟ್ಟಿತು. ಆ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ ಶಿವನು ಹುಟ್ಟಿದನು. ಆ ಶಿವಮೂರ್ತಿಗೆ ತ್ರಿಮುಖ ನವನೇತ, ಷಡುಹಸ್ತ, ದ್ವಿಪಾದ, ತನುವೇಕ, ಧವಳವರ್ಣವುಳ್ಳ ಶಿವ ಮೂರ್ತಿಯ ಸಹಸ್ರಾಂಶದಲ್ಲಿ ಧವಳವರ್ಣದ ಜ್ಞಾನಶಕ್ತಿ ಹುಟ್ಟಿತು. ಆ ಜ್ಞಾನಶಕ್ತಿಯ ಸಹಸ್ರಾಂಶದಲ್ಲಿ ಒಬ್ಬ ಶ್ರೀಕಂಠರುದ್ರ ಮೂರ್ತಿ ಹುಟ್ಟಿದನು. ಆ ಶ್ರೀಕಂಠರುದ್ರಮೂರ್ತಿಗೆ ಏಕವಕ್ತ್ರ, ದ್ವಿಪಾದ, ದ್ವಿಹಸ್ತ, ಕೆಂದಾವರೆಯ ವರ್ಣದ ಶರೀರದ ಶ್ರೀಕಂಠಮೂರ್ತಿಯ ಸಹಸ್ರಾಂಶದಲ್ಲಿ ಹರಿತವರ್ಣದ ಕ್ರಿಯಾಶಕ್ತಿ ಹುಟ್ಟಿತು. ಆ ಕ್ರಿಯಾಶಕ್ತಿಯ ಸಹಸ್ರಾಂಶದಲ್ಲಿ ವಿಷ್ಣು ಹುಟ್ಟಿದನು. ಆ ವಿಷ್ಣುವಿನ ಸಹಸ್ರಾಂಶದಲ್ಲಿ ಲಕ್ಷ್ಮಿ ಹುಟ್ಟಿದಳು ಆ ಲಕ್ಷ್ಮಿಯ ಸಹಸ್ರಾಂಶದಲ್ಲಿ ಬ್ರಹ್ಮ ಹುಟ್ಟಿದನು. ಆ ಬ್ರಹ್ಮನ ಸಹಸ್ರಾಂಶದಲ್ಲಿ ಸರಸ್ವತಿ ಹುಟ್ಟಿದಳು. ಆ ಸರಸ್ವತಿಯ ಸಹಸ್ರಾಂಶದಲ್ಲಿ ಸಕಲ ಚರಾಚರಂಗಳು ಹುಟ್ಟಿದವು. ಇವೆಲ್ಲವು ಸರ್ವಶೂನ್ಯನಿರಾಲಂಬ ಮೂರ್ತಿ ಆಡಿಸಿದರೆ ಆಡುವವು, ಬೇಡವೆಂದರೆ ಮಾಣುವವು ಗುಹೇಶ್ವರಾ. ಇದು ಸೃಷ್ಟಿ.

(೧೦) ಈ ಸೃಷ್ಟಿಯಲ್ಲಿ ರುದ್ರ, ಮಹೇಶ್ವರ ಸದಾಶಿವಮೂರ್ತಿಗಳು ಶುದ್ಧ ತತ್ವ ಸ್ವರೂಪು ಲಿಂಗಧ್ಯಾನದಿಂದ ದೇವತ್ವವುಂಟಾಗಿ, ಕಾಮಕಾ

ಲಾದಿಗಳಂ ಜಯಿಸಿದ ಕಾರಣ ಪರಮಾತ್ಮರಾದರು. ಹರಿಬ್ರಹ್ಮಾದಿಗಳು ಶುದ್ಧಾಶುದ್ಧ ತತ್ವ ಸ್ವರೂಪಮೂರ್ತಿಗಳಾಗಿ ಆತ್ಮಧ್ಯಾನದಿಂದೆ ದೇವತ್ವವುಂಟಾಗಿ ಕಾಮುಕಾಲಾದಿಗಳಿಗೆ ವಶಂಗತರಾದ ಕಾರಣ ಅಂತರಾತ್ಮರಾದರು. ನರಸುರಾಸುರರು ಅಶುದ್ಧತತ್ವ ಸ್ವರೂಪ ಶರೀರಧ್ಯಾನದಿಂದೆ ಜೀವರುಗಳಾಗಿ, ಕಾಮುಕಾಲಾದಿಗಳ್ಗೆ ಒಳಗಾದ ಕಾರಣ ಜೀವಾತ್ಮರಾದರು. ಇದು ವೇದಂಗಳಲ್ಲಿ ವಿವರಿಸಿ ನೋಡಿದರೆ ಇಲ್ಲ. ಲಿಂಗಲೀಲೆಯಿಂದಾದುದು ಗುಹೇಶ್ವರಾ.

(೧೧) ಈ ಶರೀರದ ಧ್ಯಾನದಿಂದೆ ಸರ್ವ ಜಗತ್ತು ಮುವ್ವತ್ತು ಮೂರುಕೋಟಿ ಇಂದ್ರಿಯಂಗಳಿಗೆ ಅರುವತ್ತಾರುಕೋಟಿ ಕರಣಂಗಳಿಗೆ ಅನುಕೂಲರಾಗಿ ಸ್ತುತಿಗೆ ಹಿಗ್ಗುತ್ತ ನಿಂದೆಗೆ ತಗ್ಗುತ್ತ ದುಃಖಕ್ಕೆ ಕುಗ್ಗುತ್ತ ಸುಖಕ್ಕೆ ಹಿಗ್ಗುತ್ತ ಸತ್ಯ, ಶೌಚ, ಶಾಂತಿ, ದಾಂತಿ, ಸಮತೆ, ಸೈರಣೆ, ದಯೆ, ದಾಕ್ಷಿಣ್ಯ, ದಾನಧರ್ಮಂಗಳು ಇಲ್ಲದೆ, ದುರಾಚಾರ, ದುರ್ಮಾರ್ಗ ದುಶ್ಚಿಂತೆ, ದುರ್ಮೋಹ, ದುರ್ವಾಕ್ಯಗಳಿಂದ ಮಹಾಪಾತಕ ಸ್ವರೂಪರಾಗಿ ಭವಾಂಬುಧಿಯಲ್ಲಿ ಮುಳುಗುತ್ತೇಳುತ್ತ ತಡಿಯ ಸೇರಲಾರದಿರ್ದ ಕಾರಣ ಗುಹೇಶ್ವರನು ಅವರಿಗೆ ಸಾಕ್ಷಿಯಾಗಿರ್ದನು.

(೧೨) ಈ ರೀತಿಯಲ್ಲಿ ಜೀವಕೋಟಿಗಳಿರುತ್ತಿರಲಾಗಿ ಒಬ್ಬ ಪುಣ್ಯಾತ್ಮನುದಯಿಸಿ, ಸತ್ಯ, ಶೌಚ, ಶಾಂತಿಯುಳ್ಳಾತನಾಗಿ, ಅನೇಕ ಜಪತಪನೇಮನಿಷ್ಠೆ ದಾನಧರ್ಮಂಗಳ ಮಾಡಲಾಗಿ ಮನಸ್ಸಿನ ಮಾಲಿನ್ಯವು ಹೋಗಿ ಈ ದೇಹವು ಮಹಾಪಾತಕಂಗಳಿಗೆ ಆಶ್ರಯವೆಂದು ತಿಳಿದು ಎಲೆ ಪರಮೇಶ್ವರ ಈ ದೇಹರೂಪವಂ ನೋಡಲು ಇದು ಚರ್ಮ ರೋಮ, ನರ, ಮಜ್ಜೆ, ಮಾಂಸ, ಅಸ್ತಿ, ಶುಕ್ಲ, ಶ್ರೋಣಿತ, ಮಲ, ಮೂತ್ರಂಗಳಿಂದಾದುದು. ಈ ದೇಹ ಲಕ್ಷಣವ ನೋಡದರೆ ಮಾತೃಗರ್ಭದಲ್ಲಿ ಅಮೇಧ್ಯ ಮಲ ಮೂತ್ರ ಮಧ್ಯದಿ ನೆನೆದು ಆದರ ಮೇಲೆ ಮೂತ್ರದ್ವಾರದಲ್ಲಿ ರಕ್ತಮಯವಾಗಿ ಹುಳುವಿನಂದದಿ ಬಿದ್ದುದು. ಮತ್ತಂ ಶಿಶುವಾಗಿ ಕೆಲವು ದಿನ ಅಮಂಗಲವಾಗಿದ್ದುದು. ಅದರ ಮೇಲೆ ಬಾಲ್ಯ, ಯೌವನ, ಕೌಮಾರ ಮುಪ್ಪುಳ್ಳುದ್ದು. ಮತ್ತಂ ಗುಣಂಗಳ ನೋಡಲು, ಕಾಮ, ಕ್ರೋಧ, ಲೋಭ ಮೋಹ, ಮದ, ಮತ್ಸರಂಳುಳ್ಳುದ್ದು. ಸುಖವ ನೋಡಲು.- ಫಣಿ, ರಾಜ ಪಶು, ಪಕ್ಷಿ, ಮೃಗ, ಜಲ, ವಾಯು, ಸಿಡಿಲು, ಶೀತ, ಉಷ್ಣ, ಕ್ಷುಧೆ, ತೃಷ್ಣೆ, ಮಹಾರೋಗಾದಿಗಳುಳ್ಳುದ್ದು. ಮತ್ತಂ ಆಯುಷ್ಯವಂ ನೋಡಲು

ಗಳಿಗೆಯೋ, ಎರಡು ಗಳಿಗೆಯೋ, ಜಾವವೋ, ದಿನವೋ, ಮಾಸವೋ, ವರ್ಷವೋ, ತಿಳಿಯಬಾರದು. ಈ ದೇಹವನಾದರೂ ನಂಬಿದ್ದೇನೆಂದೊಡೆ ಐಶ್ವರ್ಯವು ಮರೀಚಿಕಾಜಲದಂತೆ, ಮನದಾಸೆ ಬೆಟ್ಟದಂತೆ, ಯೌವನವು ಮಿಂಚಿನಂತೆ, ಧೈರ್ಯವು ಬಿಸಿಲಿನಂತೆ, ಸಂಸಾರವು ಇಂದ್ರಜಾಲದಂತೆ, ಭೋಗವು ದರ್ಪಣದ ಪ್ರತಿಬಿಂಬದಂತೆ, ಶರೀರವು ನೀರಗುಳ್ಳೆಯಂತೆ, ಪ್ರಾಣವು ಬಯಲಿನಂತೆ, ಬಾಧೆಗಳು ಸಮುದ್ರದ ತೆರೆಗಳಂತೆ, ಈ ದೇಹಭಾರವನು ಆವ ಉಪಾಯದಿಂದ ಇಳುಹಬೇಕೆಂದೊಡೆ ರೂಪವುಳ್ಳುದಾದ ವಸ್ತುವಿನಿಂದ ಇಳುಹುವೆನೆಂದೊಡೆ ರೂಪವೆಲ್ಲಾ ನಷ್ಟ ಅರೂಪವಾದ ವಸ್ತುವಿನಿಂದ ಇಳುಹುವೆನೆಂದೊಡೆ ಅರೂಪು ಕಾಣಬಾರದು. ಈ ದೇಹಭಾರವು ಆರಿಂದ ಇಳಿವುದೋ ಗುಹೇಶ್ವರಾ.

(೧೩) ಈ ರೋತೆಯ ದುರ್ಗಂಧ ಶರೀರೋಪಾಯ ನೀಗುವತೆರನೆಂತೊ ? ಕರ್ಮದಿಂದ ಬಿಡಿಸುವೆನೆಂದೊಡೆ, ಕರ್ಮವ ಮಾಡಿದಲ್ಲಿ ದೇಹವನೆತ್ತಬೇಕು. ದೇಹವನೆತ್ತಿದಲ್ಲಿ ಕರ್ಮವ ಮಾಡಬೇಕು. ಕರ್ಮಕ್ಕೂ ದೇಹಕ್ಕೂ ಬೀಜವೃಕ್ಷನ್ಯಾಯವು. ಅದೆಂತೆಂದೊಡೆ ಕರ್ಮವು ಜಡವು. ಕರ್ಮಕರ್ತೃ ಬೇರುಂಟು. ಕರ್ಮದಿಂದ ದೇಹಭಾರವು ತೀರದು. ಕಾಣಲ್ಪಟ್ಟ ಕ್ರಿಯೆಗಳೆಲ್ಲಾ ಅಬದ್ಧ. ಜ್ಞಾನದಿಂದ ದೇಹಭಾರವನಿಳುಹುವೆನೆಂದೊಡೆ, ಜ್ಞಾನವು ಹೇಗೋ ತಿಳಿಯದು. ಶಾಸ್ತ್ರಜನ್ಯಜ್ಞಾನದಿಂದೆ ದೇಹಭಾರವನಿಳುಹುವೆನೆಂದೊಡೆ— ಶಾಸ್ತ್ರಜನ್ಯಜ್ಞಾನದಿಂದ ತೀರದು. ಸಹಜಜ್ಞಾನ ಹೇಗೆಂದೊಡೆ—ಗಾಳಿಯಿಲ್ಲದ ದೀಪದಂತೆ, ಚಂದ್ರಸೂರ್ಯ ನಕ್ಷತ್ರ ಮೇಘಂಗಳಿಲ್ಲದ ನಿರ್ಮಲಾಕಾಶದಂತೆ, ರೆಕ್ಕೆಗಳಿಲ್ಲದ ಪಕ್ಷಿಯಂತೆ ಎಲೆಗಳಿಲ್ಲದ ವೃಕ್ಷದಂತೆ, ತ್ರೈಲೋಕ್ಯದಲ್ಲಿ ಇದ್ದು ದುರ್ಲಭ. ಇದರಿಂದ ದೇಹಭಾರವು ತೀರುವದು. ಇಂತಪ್ಪ ಜ್ಞಾನವೆಂದಿಗೆ ಸಾಧ್ಯವಹುದು ಗುಹೇಶ್ವರಾ.

(೧೪) ಸೌತೆಯ ಹಣ್ಣಿಗೆ ವಜ್ರದಕಟ್ಟುಹಾಕಿದಂತೆ, ಬಾಳೆಯಹಣ್ಣು ಕಬ್ಬಿಣದುಗುರಿನಲ್ಲಿ ಸುಲಿವಂತೆ ಜಾಜಿಯ ಹೂವನ್ನು ಹುರಿದಂತೆ, ಶಿಶುವಿನ ಶಿರದಲ್ಲಿ ಪರ್ವತವಂ ಮಡಗಿದಂತೆ, ಈ ದೇಹಭಾರವ ಹೊರಲಾರೆನಯ್ಯ. ಅದೆಂತೆಂದೊಡೆ — ತಾಯ ಗರ್ಭದಲ್ಲಿ ಪಿಂಡವಿರುವದು. ಮೊಟ್ಟೆಯ ಕಟ್ಟಿ ನೀರಿನಲ್ಲಿ ಹಾಕಿ, ಮೇಲೆ ಪರ್ವತವನಿರಿಸಿದಂತೆ, ಅಮೇಧ್ಯಮೂತ್ರ

# ವಚನಶಾಸ್ತ್ರಸಾರ ಗ್ರಂಥಗಳು.

( ರಾ| ಸಾ| ಪಿ. ಜಿ. ಹಳಕಟ್ಟಿ ಇವರಿಂದ ವಿರಚಿತವಾದವುಗಳು. )

(೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ — ೨—೮—೦

(೨) ,, ,, ಉತ್ತರಾರ್ಧ — ೧—೧೨—೦

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ — ೪—೮—೦

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ — ೨—೪—೦

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಆಚಾರಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡಲ್ಲಿ ಅವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ರೂಪಾಯಿಗಳಿಗೆ ದೊರೆಯುವವು ಟಪಾಲುಖರ್ಚು ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

ವಿಜಾಪುರ

---

ಇದನ್ನು ವಿಜಾಪುರದಲ್ಲಿ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಇದನ್ನು ವಿಜಾಪುರದಲ್ಲಿ ಶ್ರೀ ಸಾ. ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು, ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜ ಓಣಿಯಲ್ಲಿರುವ ತಮ್ಮ ೧೬೩೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ] ನವ್ಹೆಂಬರ ೧೯೪೦. [ ಸಂಚಿಕೆ ೨

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೫ | ನವ್ಹೆಂಬರ ೧೯೪೦. | ಸಂಚಿಕೆ ೨ |
| --- | --- | --- |

## ಶಿವಾನುಭಾವಿ ಬಸವಣ್ಣ.

ಲೇಖಕಃ— ಬುದ್ಧಯ್ಯಾ ಸ್ವಾಮಿ ಪುರಾಣಿಕ ಧಾರವಾಡ.

ಶ್ರೀ ಬಸವಣ್ಣನನ್ನು ಪೂರ್ವದಿಂದಲೂ ಮಹಾನ್ ಮಹಾನ್ ಮಹಿಮಾಶಾಲಿಗಳು ಹೃತ್ಪೂರ್ವಕವಾಗಿ ಕೊಂಡಾಡುತ್ತ ಬಂದಿರುವರು. ಅಂಥ ವಿಭೂತಿಗಳಲ್ಲಿ ಶ್ರೀಮದನಾದಿ ಅಲ್ಲಮಪ್ರಭುದೇವ, ಚನ್ನಬಸವ ಸಿದ್ಧರಾಮ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ, ಮರುಳಶಂಕರ ದೇವ, ಆಯ್ದಕ್ಕಿ ಮಾರಯ್ಯ, ಮೋಳಿಗೆ ಮಾರಯ್ಯ, ಹಡಪದ ಅಪ್ಪಣ್ಣ ಮೊದಲಾದ ಶಿವಶರಣರೇ ಅಗ್ರಗಣ್ಯರಿರುವರಲ್ಲದೆ ಪ್ರಾಚೀನ ವೀರಶೈವಕವಿಗಳಲ್ಲಿ ಹಂಪೆಯ ಹರಿಹರ, ಪಾಲ್ಕುರಿಕೆ ಸೋಮೇಶ್ವರ, ಮಗ್ಗೆಯ ಮಾಯಿದೇವ, ಭೀಮ, ಸುರಂಗ, ಸಪ್ತಕಾವ್ಯದ ಗುರು ಬಸವ, ಹಾಗೂ ತೋಂಟದ ಸಿದ್ಧಲಿಂಗಯತಿ ಮೊದಲಾದವರು ಸ್ತುತಿಸಿ ಧನ್ಯರಾಗಿರುವರು. ಇಂಥವರ ಸ್ತುತಿಗೆ ಪಾತ್ರನಾದ ಬಸವಣ್ಣನನ್ನು ಅರಿಯಬೇಕಾದರೆ ಅದು ಶರಣ ಸಂತತಿಯವರಿಗೇನೇ ಸಾಧ್ಯವಲ್ಲದೆ ಮಿಕ್ಕಾದವರಿಗೆ ಅಸಾಧ್ಯವು.

ಒಂದೊಂದು ಗುಣದಲ್ಲಿ ವೈಶಿಷ್ಟ್ಯವನ್ನು ಪಡೆದವರ ಹಲವು ಉದಾಹರಣೆಗಳನ್ನು ಪುರಾಣೇತಿಹಾಸಗಳಲ್ಲಿ ನಾವು ಆಗಾಗ್ಗೆ ಕಾಣಬಹುದು. ಅದು ಹೇಗಂದರೆ—ಹರಿಶ್ಚಂದ್ರನು ಸತ್ಯದ ಸಲುವಾಗಿ ತನ್ನ ರಾಜ್ಯವನ್ನು ತೊರೆದು ಹೆಂಡಿರುಮಕ್ಕಳನ್ನು ಕಳೆದುಕೊಂಡು ಕಡೆಗೆ ಹೊಲೆಯನಿಗಾಳಾಗಿ

ತನ್ನ ಸರ್ವ ಸುಖಕ್ಕೇನೇ ನೀರು ನೀಡಿದನು. ಇದರ ವಿರುದ್ಧವಾಗಿ ವಿಭೀಷಣನು ಕೆಲವು ಕಾಲದ ವರೆಗೆ ಸುಖವನ್ನು ಕೊಡುವ ಹಾಗೂ ರಾಜ್ಯಾಂತೇ ನರಕವೆಂದು ಘಂಟಾಘೋಷವಾಗಿ ಸಾರುವ ರಾಜ್ಯದ ಸಲು ವಾಗಿ ಒಡಹುಟ್ಟಿದ ಅಣ್ಣನನ್ನು ಬಿಟ್ಟನು. ಅಣ್ಣನ ಸಲುವಾಗಿ ಭರತನು ರಾಜ್ಯವನ್ನು ಮತ್ತು ಹೆತ್ತವ್ವನನ್ನು ಬಿಟ್ಟನು. ಇದರಂತೆ ಭಕ್ತಿಯ ಸಲುವಾಗಿ ಪ್ರಲ್ಹಾದನು ತನ್ನ ತಂದೆಯನ್ನು ಕಳೆದುಕೊಂಡನು. ಒಟ್ಟಿ ನಲ್ಲಿ ನೋಡಲಾಗಿ ಒಂದೇ ಒಂದು ಗುಣದ ಸಲುವಾಗಿ ಮೇಲಿನವರೆಲ್ಲ ರಲ್ಲಿ ಇಷ್ಟು ಸಾಮರ್ಥ್ಯವು ಬರಬೇಕಾದರೆ ಹಾಗೂ ಅವರು ಇಷ್ಟು ಜಗತ್ಪೂಜ್ಯರಾಗಬೇಕಾದರೆ, ಎಲ್ಲ ಸದ್ಗುಣಗಳ ಒಬ್ಬುಳಿಯಾದ ಪರಿ ಪೂರ್ಣ ವಸ್ತುವಿನಲ್ಲಿ ಎಷ್ಟು ಸಾಮರ್ಥ್ಯವು ಹಾಗು ಪೂಜ್ಯತ್ವವು ಇದ್ದಿರ ಬೇಕೆಂಬುದನ್ನು ಓದುಗರೇ ತರ್ಕಿಸತಕ್ಕದ್ದು. ಇಂಥವರಲ್ಲಿ ಬಸವಣ್ಣನು ಅಗ್ರೇಸರನು. ಇದರ ಸತ್ಯತೆಯನ್ನು ವಚನಶಾಸ್ತ್ರ ಹಾಗು ಶಿವಶರಣರ ಪುರಾಣಗಳಲ್ಲಿ ಕಾಣಬಹುದು.

ಪರಿಪೂರ್ಣತ್ವವನ್ನು ಪಡೆದವರ ಯೋಗ್ಯತೆಯನ್ನು ಅನೇಕಾನೇಕ ಸಾಧನಗಳಿಂದ ಒರೆ ಹಚ್ಚಿ ಮನಗಾಣಬಹುದು. ಅಂಥ ಸಾಧನಗಳಲ್ಲಿ ಪರಾ, ಪಶ್ಯಂತಿ, ಮಧ್ಯಮಾ ಎಂಬ ಮೂರು ಮೆಟ್ಟಲುಗಳನ್ನು ದಾಟಿ ಬಂದ ವೈಖರಿಯು ಒಂದಾಗಿರುವದು. ಈ ವೈಖರಿಯಿಂದ ತಮ್ಮ ಶಿವಾನುಭಾವವನ್ನು ಮುಮುಕ್ಷುಗಳಿಗೆ ನಿರ್ಭಯದಿಂದ ಲೋಕ ಶಿಕ್ಷಣಾ ರ್ಥವಾಗಿ ಹೃದಯುಂಬಿಚ್ಚಿ ಹೇಳಿದ್ದೇ ಹೆಗ್ಗುರುತಾಗಿರುವದು. ಸರಳ ಹೃದಯದಿಂದ ಬಸವಣ್ಣನವರಂತೆ ತಮ್ಮ ಶಿವಾನುಭವವನ್ನು ಬಿಚ್ಚಿ ಹೇಳಿದವರನ್ನು ಈ ಭೂಲೋಕದಲ್ಲಿ ಈ ವರೆಗೂ ಇನ್ನಾರನೂ ನಾವು ಕಾಣುವದಿಲ್ಲ.

ಪಂಡಿತರಿಗಷ್ಟೇ ಸಾಧ್ಯವಾದ ಸಂಸ್ಕೃತ ಭಾಷೆಯಲ್ಲಿದ್ದಂಥ ಜ್ಞಾನ ವನ್ನು ಪಾಮರರಿಗೂ ತಿಳಿಯುವಂತೆ ಕನ್ನಡ ಭಾಷೆಯಲ್ಲಿ ಮಾಡಿಕೊಟ್ಟು ಮೋಕ್ಷ ಮಾರ್ಗವನ್ನು ಮುಕ್ತದ್ವಾರವನ್ನಾಗಿ ಮಾಡಿದ್ದರಿಂದ ಬಸವಣ್ಣನಿಗೆ ಭಾರತ ವರ್ಷವು ಚಿರಕಾಲ ಋಣಿಯಾಗಿದೆ. ಮುಂದೆ ಇವನ ಅನುಕರಣ ವನ್ನೇ ೧೩ ನೆಯ ಶತಮಾನದಿಂದ ಮಹಾರಾಷ್ಟ್ರದಲ್ಲಿ ನಾಮದೇವ ಜ್ಞಾನದೇವ, ಏಕನಾಥ, ತುಕಾರಾಮಾದಿ ಸಂತರೂ ೧೫ನೆಯ ಶತ ಮಾನದಿಂದ ಉತ್ತರ ಹಿಂದುಸ್ತಾನದಲ್ಲಿ ಕಬೀರ, ತುಳಸೀದಾಸ ಮೊದ

ಲಾದ ಸಂತರೂ ಹಾಗು ಕರ್ನಾಟಕದಲ್ಲಿ ಮಾಧ್ವಸಾಂಪ್ರದಾಯದ ದಾಸರೂ ಮಾಡಿದರು.

ಈ ರೀತಿಯಾಗಿ ಕನ್ನಡ ನಾಡುನುಡಿಗಳಲ್ಲಿ ಹೆಚ್ಚಿನ ಕ್ರಾಂತಿಯನ್ನು ಮಾಡಿ, ಜನರನ್ನು ತಿದ್ದಿತೀಡಿ, ತಾನೂ ತತ್ವಜೀವಿಯಾಗಿ ಬಸವಣ್ಣನು ನಡೆದು ನುಡಿದ ವಚನಗಳೇ ''ಬಸವಗೀತೆ'' ಗಳೆಂದು ಹೆಸರಾಗಿವೆ. ಭಾವೋದ್ರೇಕದಿಂದ ಜೀವನದ ಹೋರಾಟದಲ್ಲಿ ಪ್ರಾಸಾದಿಕವಾಗಿ ಹೊರ ಹೊಮ್ಮುವ ನುಡಿಗಳೇ ಮಧುರವಾದ ಗೀತೆಗಳು. ಬಸವಣ್ಣನವರ ವಚನಗಳನ್ನು ವೀರಶೈವ ಪ್ರಾಚೀನ ಕವಿಗಳಾದ ಹಂಪೆಯ ಹರಿಹರ, ಪದ್ಮಣಾಂಕ ಮೊದಲಾದವರು ಇದೇ ತೆರನಾಗಿ ಭಾವಿಸಿರುವರು. ಆದುದರಿಂದ ಅವು ಇಂದು ನಿಗಮಾಗಮೋಪನಿಷದಗಳಿಗಿಂತಲೂ ಅನುಭವದಲ್ಲಿ ಹೆಚ್ಚಿನ ಮಾನ್ಯತೆಯನ್ನು ಪಡೆದಿವೆ ಎಂದು ಹೇಳಿದರೆ ಅಪ್ರಾಸಂಗಿಕ ಮತ್ತು ಅತಿಶಯೋಕ್ತಿಯಾಗಲಾರದು.

ಇತ್ತಕಡೆಗೆ ಭಗವದ್ಗೀತೆಯಲ್ಲಿರುವ ತತ್ವಗಳು ತ್ರಿಕಾಲಾಬಾಧಿತಗಳಾಗಿರುವವೆಂದು ಬಹಳ ಜನರ ಹೆಚ್ಚಿನ ತಿಳುವಳಿಕೆಯಾಗಿರುವದರಿಂದ ಜಗತ್ತಿನಲ್ಲಿರುವ ಬಹುತರ ಎಲ್ಲ ಭಾಷೆಗಳಲ್ಲಿ ಅದು ಪರಿವರ್ತನೆಯನ್ನು ಹೊಂದಿರುವದು. ಅದನ್ನು ಅರಿಯದವರು ತೀರ ಅಪರೂಪ. ಭಗವದ್ಗೀತೆಗೆ ಶಿವಾಗಮಗಳೇ ಆಧಾರವಾಗಿದ್ದರೂ ಭಗವದ್ಗೀತೆ ಹಾಗೂ ಬಸವಗೀತೆ ಇವೆರಡರ ಅನುಭವಗಳನ್ನು ಅನುಭಾವಿಗಳು ಪರಿಹಚ್ಚಿ ನೋಡಿದರೆ ಅವೆರಡರಲ್ಲಿ ಭೂವ್ಯಾಕಾಶದಷ್ಟು ಅಂತರ ತೋರದೆ ಇರದು. ಆದು ಹೇಗಂದರೆ—

ತ್ವಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ ।
ತತ್ ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿಶಾಶ್ವತಂ॥ ೬೨-೧೮

ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ॥ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ॥೬೬-೧೮

(೧) ಮೊದಲನೇ ಶ್ಲೋಕದಲ್ಲಿ ''ನೀನು ಸರ್ವಭಾವದಿಂದ ಆ ಪರಮಾತ್ಮನನ್ನೇ ಶರಣು ಹೋಗು ಎಂದು ತನಗನ್ಯವಾದ ಮತ್ತೊಬ್ಬ ದೇವರನ್ನು ಬೋಧಿಸಿದ್ದಾನೆ. ಎರಡನೆಯದರಲ್ಲಿ ತಾನೇ ಪರಮಾತ್ಮನಾಗಿ ''ಎಲ್ಲ ಧರ್ಮಗಳನ್ನು ಬಿಟ್ಟು ನನ್ನನ್ನೇ ಶರಣು ಹೋಗು. ನಾನು

ನಿನ್ನನ್ನು ಎಲ್ಲ ಪಾಪಗಳಿಂದ ಬಿಡುಗಡೆ ಮಾಡಿಸುವೆ" ಎಂದು ಬೋಧಿಸಿದ್ದಾನೆ. ಇದೊಂದು ಭಗವದ್ಗೀತೆಯ ಸುಸಂಬದ್ಧತೆಗೂ, ಏಕನಿಷ್ಠತೆಗೂ ಹಾಗೂ ಅನುಭವಕ್ಕೂ ದೊಡ್ಡ ಕೊರತೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಆದರೆ ಈ ತರದ ಕುಂದು ಕೊರತೆಗಳು ಬಸವಗೀತೆಯಲ್ಲಿ ಕಂಡುಬರುವದಿಲ್ಲ. (೨) ಕೃಷ್ಣನು ಹೇಳುವದು ನೊಂದು ನಿಂತ ಇನ್ನೊಂದು ಜೀವನಿಗೆ, ಬಸವನು ಹೇಳುವದು ನೊಂದ ತನ ಆತ್ಮನಿಗೆ. (೩) ಕೃಷ್ಣನು ಪ್ರಭುವಾಗಿ ಉಪದೇಶಿಸುವನು, ಬಸವಣ್ಣನು ಕಿಂಕರರ ಕಿಂಕರನಾಗಿ ಬಿನ್ನವಿಸುವನು. (೪) ಕ್ಷತ್ರಿಯನಾದ ಕೃಷ್ಣನು ಕ್ಷತ್ರಿಯ ಹಾಗೂ ಆಪ್ತನಾದ ಅರ್ಜುನನಿಗೆ ಬ್ರಹ್ಮಜ್ಞಾನವನ್ನು ಹೇಳಿದರೆ, ಬಸವಣ್ಣನು ಭಕ್ತನಾಗಿ ಸಕಲರನ್ನು ಅಂಗಲಾಚಿ ಬೇಡಿಕೊಳ್ಳುವನು. (೫) ಕೃಷ್ಣಗೀತೆಯಲ್ಲಿ ಕೃಷ್ಣನು ಕೆಲವು ಕಾಲದ ವರೆಗೆ ಗುರುವಾಗಿ ವರ್ಣಾಶ್ರಮ ಧರ್ಮದ ಕಟ್ಟನ್ನೇ ಸಡಲಿಸಿದಂತೆ ಕಂಡುಬಂದರೆ, ಬಸವಗೀತೆಯಲ್ಲಿ ಬಸವನು ಕಡೆಯವರೆಗೆ ಭಕ್ತನಾಗಿಯೇ ಉಳಿದದ್ದು ಕಾಣಬಹುದು. (೬) ಬ್ರಾಹ್ಮಣನಾಗಲು ವಿಶ್ವಾಮಿತ್ರನಿಗೆ ಬಹಳ ದಿನಗಳು ಬೇಕಾಗಿದ್ದರೆ ಕ್ಷಣದಲ್ಲಿಯೇ ಕೃಷ್ಣನು ಬ್ರಾಹ್ಮಣನಾದದ್ದು ಕೃಷ್ಣಗೀತೆಯಲ್ಲಿ ಕಂಡುಬಂದರೆ, ಇಂಥ ವ್ಯತ್ಯಾಸಗಳನ್ನು ಬಸವಗೀತೆಯಲ್ಲಿ ಕಾಣಲಾರೆವು. (೭) ಕೃಷ್ಣಗೀತೆಯು ಲೋಕಕ್ಕೆ ಸಿಕ್ಕುವದು ವ್ಯಾಸರ ಮುಖದಿಂದ, ಬಸವಗೀತೆಯು ನಮಗೆ ಸಿಕ್ಕುವದು ಬಸವನ ಮುಖದಿಂದ. (೮) "ದುಷ್ಟರ ಸಂಹಾರ ಶಿಷ್ಟರ ಪರಿಪಾಲನೆ" ಎಂಬ ನ್ಯಾಯದಂತೆ ಪಾಂಡವರು ಸಜ್ಜನರು ಮತ್ತು ಕೌರವರು ದುರ್ಜನರು ಎಂಬುವ ತಮ್ಮ ಮಾತಿನ ಹೊಣೆಗಾರಿಕೆಯನ್ನು ವ್ಯಾಸರು ಕೃಷ್ಣನ ಮೇಲೆ ಹಾಕಿದ್ದು ಕೃಷ್ಣಗೀತೆಯಲ್ಲಿ ಕಂಡುಬಂದರೆ, ಬಸವ ಗೀತೆಯಲ್ಲಿ ಇಂಥ ಹೊಣೆಗಾರಿಕೆಯ ಮಾತಿನ ಕಾರಣವೇ ಕಂಡುಬರುವದಿಲ್ಲ. ಏಕಂದರೆ— "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶೃತಿ ವಾಕ್ಯದಂತೆ ಎಲ್ಲವನ್ನು ಶಿವನೆಂದು ಕಾಣುವವನಿಗೆ ಶಿಷ್ಟರೂ ಅಷ್ಟೇ ಹಾಗೂ ದುಷ್ಟರೂ ಅಷ್ಟೇ. ಆದುದರಿಂದರಿಂದಲೇ ಕತ್ತಲಲ್ಲಿ ತನ್ನ ಮಡದಿಯ ಕೈಕಂಕಣವನ್ನು ಕದಿಯಬಂದ ಕಳ್ಳನೂ ಕೂಡ ಬಸವನಿಗೆ ಕೂಡಲಸಂಗಮನಾಥನೆಂದೇ ಕಂಡನು. (೯) ಕೃಷ್ಣನ ಗೀತೆಯ ಮಾತುಗಳು ಒಂದೇ ಸಮಯದಲ್ಲಿ ಬಂದವು. ಬಸವನ ಗೀತೆಯ ಮಾತುಗಳು

ಅವನ ಇಡೀ ಜೀವನದಲ್ಲಿ ಬಂದವು. (೧೦) ಕೃಷ್ಣನ ಗೀತೆಯ ಮಾತು ಗಳ ಕಾಳಗದ ಪ್ರಸಂಗದಲ್ಲಿ ಬಂದವು. ಬಸವನ ಗೀತೆಯ ಮಾತು ಗಳು ಆ ಆ ಸನ್ನಿವೇಶಕ್ಕೆ ತಕ್ಕಂತೆ ಬಂದವು. (೧೧) ಕೃಷ್ಣನ ಗೀತೆಯು ಛಂದಸ್ಸಿನ ಕಟ್ಟಿನಲ್ಲಿ ಹೊರಬಿದ್ದಿದೆ. ಆದರೆ ಬಸವನ ಗೀತೆಯು ಸ್ವಚ್ಛಂದದ ಅನುಭವದ ಭಾಷೆಯಲ್ಲಿ ಹೊರಬಿದ್ದಿದೆ. (೧೨) ಕೃಷ್ಣನ ಗೀತೆಯು ಬರೇ ಭಾವದಿಂದ ತುಂಬಿದ್ದರೆ, ಬಸವನ ಗೀತೆಯು ಭಾವ ಭಾಷೆಗಳೆರಡರಿಂದಲೂ ತುಂಬಿ ಹರಿಯುವ ಹಿರೇಹೊಳೆಯು (೧೩)ಕೃಷ್ಣನ ಗೀತೆಯು ಸರ್ವಜ್ಞ ಮೂರ್ತಿಯ ಅಭಿಪ್ರಾಯದಂತೆ ಸೋದರರ ವಧೆ ಯಂತಹ ಹಿಂಸಾತ್ಮಕವಾದ ಬೋಧೆಯನ್ನು ಹೇಳುತ್ತಿದ್ದರೆ, ಬಸವನ ಗೀತೆಯು ಅಹಿಂಸಾತ್ಮಕವಾಗಿರುವದು. (೧೪) ಕ್ಷತ್ರಿಯ ಧರ್ಮದಂತೆ ಕಾಳಗ ಮಾಡುವದು ಪುಣ್ಯಕರವು ಹೇಗೆ? ಮತ್ತು ಮಾನವ ಹಾಗೂ ಬಾಂಧವ ಧರ್ಮದಂತೆ ಕೊಲೆ ಮಾಡುವದು ಪಾಪಕರವು ಹೇಗಲ್ಲ? ಇದನ್ನು ಕೃಷ್ಣಗೀತೆಯಲ್ಲಿ ಬಿಡಿಸಲಿಕ್ಕೆ ಬಂದಿಲ್ಲ. ಆದರೆ ಬಸವನ ಗೀತೆ ಯಲ್ಲಿ ಇಂಥ ತೊಡಕಿನ ಉದಾಹರಣೆಗಳು ಸಿಗಲಾರವು. (೧೫) ಕೃಷ್ಣ ಗೀತೆಯು ಕ್ಷತ್ರಿಯರಿಗೆ ಹೆಚ್ಚು ಪ್ರೇಮಾಸ್ಪದವೂ ಹಾಗೂ ಚೈತನ್ಯ ದಾಯಕವೂ ಆಗಿದ್ದರೆ, ಬಸವನ ಗೀತೆಯು ಸಕಲಜೀವಾತ್ಮರ ಹಿತ ವನ್ನು ಉದ್ದೇಶಿಸಿದೆ.

ಇವೆಲ್ಲ ದೃಷ್ಟಿಯಿಂದ ನೋಡಿದರೆ ಬಸವಗೀತೆಯು ಕೃಷ್ಣಗೀತೆ ಗಿಂತಲೂ ಅನುಭವದಲ್ಲಿ ಮಿಗಿಲಾದದ್ದೆಂದು ನಿಷ್ಪಕ್ಷಪಾತಿಗಳಿಗೆ ತೋರದೆ ಇರಲಾರದು. ಆದುದರಿಂದ ಯಾವ ವಚನಕಾರರಾದರೂ ತಮ್ಮ ಅನುಭವದ ಕಾಲಕ್ಕೆ ಈ ಕೃಷ್ಣಗೀತೆಯನ್ನು ಒಂದು ಪ್ರಬಲವಾದ ಪ್ರಮಾಣ ಗ್ರಂಥವೆಂದು ಮನ್ನಿಸಿಕೊಂಡು ಅದರೊಳಗಿನ ಆಧಾರಗ ಳನ್ನು ತೆಕ್ಕೊಂಡಂತೆ ಕಂಡುಬರುವದಿಲ್ಲ. ಇದನ್ನು ಶೂನ್ಯಸಂಪಾದನೆ ಮೊದಲಾದ ಉದ್ಗ್ರಂಥಗಳಿಂದ ಓದುಗರು ಮನಗಾಣಬಹುದು.





# ದತ್ತಾತ್ರೇಯ

(ಲೇಖಕ:— ಬಸವಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ.)

•—*—•

ನನ್ನ ಈ ಶಿರೋಲೇಖನವನ್ನೋದಿದೊಡನೆಯೇ, ಶಿವಾನುಭವದ ಆಗಷ್ಟ (೧೯೪೦) ಸಂಚಿಕೆಯಲ್ಲಿ, ಪೌರಾಣಿಕರಾದ ಶ್ರೀ ಬುದ್ಧಯ್ಯ ಸ್ವಾಮಿಗಳು ಬರೆದ ಲೇಖಕ್ಕೆ ಪ್ರತಿಯಾಗಿ ಇಲ್ಲವೆ ಪೂರಕವಾಗಿ, ಇದೇನೋ ಒಂದು ಬರವಣಿಗೆ ಇರಬಹುದೆಂದು, ಊಹೆಯಾಗುವ ಸಂಭವವೇ ಹೆಚ್ಚು. ಆದರೆ ಇದರಲ್ಲಿ ಅಂತಹದೇನೂ ಇಲ್ಲ. ಮಾತ್ರ ಅವರ ಲೇಖನವನ್ನು ನೋಡಿ, ಆ ದತ್ತಾತ್ರೇಯನ ಸಂಬಂಧವಾಗಿ ನನ್ನ ಮನದಲ್ಲಿ ಅನೇಕ ದಿವಸಗಳಿಂದ ಓಡಾಡುತ್ತಿರುವ ವಿಚಾರವು ನೆನಪಿಗೆ ಬಂದಿತು. ಅದನ್ನು ಈಗ ತಮ್ಮ ಸುಜ್ಞ ವಾಚಕರ ಮುಂದಿಡುವದು ಅಪ್ರಾಸಂಗಿಕವಾಗಲಾರದೆಂದು ಬಗೆದು, ಈ ಅಲ್ಪ ಲೇಖವನ್ನು ಕಳಿಸಿರುವೆನು.

ಜಗಕೆಲ್ಲ ಒಬ್ಬನೇ ಒಬ್ಬ ದೇವರೆಂಬುದು ನಿಜವಿದ್ದರೂ ಹಿಂದುಗಳು, ಸೃಷ್ಟಿಯ ಉತ್ಪತ್ತಿ ಸ್ಥಿತಿ ಲಯಗಳೆಂಬ ಮೂರು ಕಾರ್ಯಗಳ ಕಡೆಗೆ ಲಕ್ಷ್ಯಗೊಟ್ಟು, ಆಯಾ ಕಾರ್ಯಗಳ ಸಂಬಂಧವಾಗಿ ಅವನಿಗೆ ಓಳಿಯಿಂದ ಬ್ರಹ್ಮ ವಿಷ್ಣು ರುದ್ರ (ಶಿವ) ಎಂಬ ಮೂರು ರೂಪುಗಳನ್ನು ಎಣಿಸುವರು. ಸಾಮಾನ್ಯ ಲೌಕಿಕರು ಈ ತ್ರಿಮೂರ್ತಿಗಳಲ್ಲಿ ತಮ್ಮ ತಮ್ಮ ಇಷ್ಟಾನುಸಾರವಾಗಿ ಯಾವದೊಂದು ರೂಪವನ್ನು ಆರಾಧಿಸತೊಡಗಿದರು. ಹಾಗು ತಾವು ಆರಾಧಿಸುವ ಸ್ವರೂಪವೇ "ಸರ್ವೋತ್ತಮ" ವೆಂದು ಪ್ರತಿಪಾದಿಸಹತ್ತಿದರು. ಈ ಮೂರ್ತಿಗಳಲ್ಲಿ ಶಿವ ವಿಷ್ಣು ಗಳೆಂಬೆರಡೇ ಮೂರ್ತಿಗಳನ್ನು ಭಜಿಸುವವರ ಸಂಖ್ಯೆಯೇ ಹೆಚ್ಚು. ಆದ ಕಾರಣ ಹಿಂದುಗಳಲ್ಲಿ ಶೈವ ವೈಷ್ಣವವೆಂಬೆರಡು ಪಂಥಗಳು ದೊಡ್ಡವಾಗಿ ಒಡೆದು ತೋರಹತ್ತಿದವು. ಅವರು ತಮ್ಮ ತಮ್ಮ ಮೂರ್ತಿಯನ್ನೇ ಹೆಚ್ಚಾಗಿ ಏರಿಸಿ ಕೊಂಡಾಡಿದ್ದಲ್ಲದೆ, ಇತರ ಮೂರ್ತಿಯನ್ನು ಇಳಿಸಿ ಜರೆದು ದ್ವೇಷಾಸೂಯ ಭಾವದಿಂದ ಕಾಣಹತ್ತಿದರು. ಇದರ ಪರಿಣಾಮವಾಗಿ ವಿಷ್ಣು ಪುರಾಣಗಳೂ ಶಿವಪುರಾಣಗಳೂ ಮನಸೋಕ್ತವಾಗಿ ರಚಿಸಲ್ಪಟ್ಟು, ಉರಿಯಲ್ಲಿ ಎಣ್ಣೆ ಸುರುವಿದಂತೆ ಮತ್ತಿಷ್ಟು ಜಗಳವನ್ನು ಹಬ್ಬಿಸಿ ಒಡಕನ್ನುಂಟು ಮಾಡಿದವು. ಇದೆಲ್ಲ ಕೇವಲ ನಿರರ್ಥಕವೂ ಅಜ್ಞಾನಮೂಲ

ಕವೂ ಎಂಬುದು ಸ್ಪಷ್ಟವಿದ್ದಾಗ್ಯೂ, ಜನತೆಯ ತಲೆಯೊಳಗೆ ಒಮ್ಮೆ ಇಂಬಿಟ್ಟ ಕಲ್ಪನೆಯು ದೃಢವಾಗುತ್ತಲೇ ನಡೆಯಿತು. ಈ ಭಾವನೆಯ ಅತಿರೇಕವಾಗಿ ಅದರ ಅಸಹ್ಯಕರವಾದ ಘಾತಕ ಪರಿಣಾಮವು ಒಡೆದು ತೋರಹತ್ತಿದ್ದರಿಂದ, ಅನೇಕ ಬುದ್ಧಿಶಾಲಿಗಳಾದ ಮಹಾತ್ಮರು ಈ ವಿಷಮತೆಯನ್ನು ನೀಗಲಿಕ್ಕೆ ಆಗಾಗ್ಗೆ ಪ್ರಯತ್ನ ಪಡುತ್ತಲೇ ಬಂದಿರುವರು. ಅಂತಹವುಗಳೊಳಗೇ ಇದೊಂದು ದತ್ತಾತ್ರಯ ಅವತಾರದ ವಿಷಯವು.

ಈ ಸಂಬಂಧ ನನ್ನ ವಿಚಾರಗಳನ್ನು ಹೇಳುವದಕ್ಕಿಂತ ಮೊದಲು, ಕೀರ್ತನಕಾರರು ಹೇಳುವ ದತ್ತ ಜನ್ಮಕತೆಯನ್ನು ಸಂಕ್ಷೇಪವಾಗಿ ಬರೆಯುವದು ಯುಕ್ತವು. ಆದರಿಂದ ನನ್ನ ಹೇಳಿಕೆಯು ಒಳಿತಾಗಿ ಒಡಮೂಡಲಿಕ್ಕೆ ಸಹಾಯವಾಗುವದು. ಅದು ಸಾಧಾರಣವಾಗಿ ಶ್ರೀಬುದ್ಧ್ಯನವರು ಶಿ. ಭ. ದ ೫೦೨, ೫೦೩ ನೆಯ ಪುಟಗಳಲ್ಲಿ ಕೊಟ್ಟ ಕಥೆಯೇ ಸರಿ. ಆದರೂ ಅದರಲ್ಲಿ ಇನ್ನೊಂದು ಹೆಚ್ಚಿನ ಮಾತು ಅಂತರ್ಭೂತವಾಗಿರುವದು. ಆ ಕಥೆಯ ಸಾರಾಂಶವೇನಂದರೆ:— ತ್ರಿಮೂರ್ತಿಗಳ ಹೆಂಡಂದಿರಾದ ಸರಸ್ವತಿ ಲಕ್ಷ್ಮಿ ದಾಕ್ಷಾಯಿಣಿಯರಿಗೆ, ತಮ್ಮ ಪಾತಿವೃತ್ಯದ ಬಗ್ಗೆ ಅತ್ಯಂತ ಅಭಿಮಾನ (ಗರ್ವ) ವುಂಟಾಗಿದ್ದಿತು. ಅದು ನಾರದ ಮುನಿಗಳಿಗೆ ತಿಳಿಯಲು; ಆ ಗರ್ವನಿರಸನಕ್ಕಾಗಿ ಅವರು ಒಂದು ಉಪಾಯ ಯೋಜನೆಯನ್ನು ಮಾಡಿದರು. ಕೆಲವು ಉಕ್ಕಿನ ಕಡಲೆಯ ಕಾಳುಗಳನ್ನು ತಮ್ಮ ಸಂಗಡ ಒಯ್ದು, "ಇವನ್ನು ಕುದಿಸಿ ಮೃದುಮಾಡಿ ಗುಗ್ಗರಿಯಂತೆ ತಿನ್ನಲಿಕ್ಕೆ ಆಹಾರವನ್ನು ಸಿದ್ಧಮಾಡಿ ಕೊಡಿರಿ. ಮಹಾಪತಿವ್ರತೆಯರಿಗೆ ಮಾತ್ರ ಇದು ಸಾಧ್ಯ. ಅಂತೇ ನಿಮ್ಮ ಬಳಿಗೆ ಬಂದಿದ್ದೇನೆ" ಎಂದು ಆ ಮೂವರ ಬಳಿಯಲ್ಲಿಯೂ ಹೋಗಿ ಪ್ರಾರ್ಥಿಸಿದರು. ಆದಾಗ್ಯೂ ಅವರು ಇದು ಅಸಂಭವವೆಂದು ನೆನೆದು, ತಮ್ಮಿಂದಾಗದಿದ್ದರೆ ವಿನಾಕಾರಣ ಅಪಹಾಸ್ಯಕ್ಕೆ ಗುರಿಯಾದೇವೆಂದು ಯೋಚಿಸಿ, ನಿರಾಕರಿಸಿದರು. ಕೂಡಲೆ ಮುನಿಯು ಹೋಗಿ ಅತ್ರಿ ಪತ್ನಿಯಾದ ಅನಸೂಯೆಗೆ ಬೇಡಿಕೊಳ್ಳಲು ಆಕೆ ಅವನ್ನು ಕುದಿಸಿ ಮಿದುವಾದ ಗುಗ್ಗರಿ ಮಾಡಿಕೊಟ್ಟಳು. ನಾರದನು ಸಂತುಷ್ಟನಾಗಿ, ಅವಳ ಪಾತಿವ್ರತ್ಯವನ್ನು ತ್ರಿಲೋಕದಲ್ಲಿ ವಿಸ್ತರಿಸಿದನು. ಈ ಸುದ್ದಿ ತಿಳಿದು, ಶಕ್ತಿತ್ರಯ ಲಜ್ಜಿತರಾಗಿ, ದುರಭಿಮಾನವನ್ನು ತಾಳಿ, ಆ ಅನಸೂಯೆಯ ಸತ್ವ (ಪಾತಿವ್ರತ್ಯ) ಹರಣಮಾಡಬೇಕೆಂದು ಆಲೋಚಿಸಿ, ತಮ್ಮ ತಮ್ಮ

ಪತಿರಾಜರನ್ನು ಬೋಧಿಸಿ ಹುರಿದುಂಬಿಸಿ ಆ ಕಾರ್ಯಕ್ಕೆ ಅಣಿಗೊಳಿಸಿದರು. ಅವರು ಆತಿಥಿಗಳಾಗಿ ಅತ್ರಿಯ ಆಶ್ರಮವನ್ನು ಸೇರಿ, ಅವನಿಲ್ಲದಾಗ ಅನಸೂಯೆಯಿಂದ ವಚನ ತಕ್ಕೊಂಡು, ಇಚ್ಛಾ ಭೋಜನವನ್ನು ದಿಗಂಬರೆಯಾಗಿ ನೀಡಿ, ತೃಪ್ತಿಪಡಿಬೇಕೆಂದು ಯಾಚಿಸಿದರು. ಅವಳು ಇಂಗಿತವನರಿದು ಒಪ್ಪಿ, ಪತಿಯ ಒಳಗಿರುವ ಪಾದೋದಕವನ್ನು ತಂದು ಅವರಿಗೆ ಸೇಚನೆಗೆಯ್ಯಲು, ಕೂಡಲೆ ಮೂವರೂ ಕೂಸುಗಳಾದರು. ಬಳಿಕ ತಾನು ದಿಗ್ವಸ್ತ್ರಳಾಗಿ ಮೂವರಿಗೂ ಯಥೇಚ್ಛ ಸ್ತನ್ಯಪಾನ ಮಾಡಿಸಿ, ಒಂದೇ ತೊಟ್ಟಿಲಲ್ಲಿ ಮಲಗಿಸಿ ತೂಗಿ ಜೋಗುಳವಾಡಿ ಮಲಗಿಸಿದಳು. ಮುಂದೆ ಅತ್ರಿಯು ಬಂದು ನೋಡಿ ಕೇಳಿ ಸಂತುಷ್ಟನಾದನು, ಮಲಗಿದಲ್ಲೇ ಆ ಕೂಸುಗಳ ಧಡಗಳೆಲ್ಲ ಕೂಡಿ ಒಂದಾದವು. ಮುಖಗಳು ಮಾತ್ರ ಭಿನ್ನವಾಗಿಯೇ ಉಳಿದವು. ನಡುವಿನ ಮೊಗನೇ ಶಿವನದು. ಎಡಬಲದವು ಬ್ರಹ್ಮ ವಿಷ್ಣುಗಳವು ಇರುವುದುಂಟು. ಈ ಮೂರ್ತಿಯೇ ದತ್ತಾತ್ರಯ.

ಕ್ರಮೇಣ ಈ ಸುದ್ದಿಯು ಶಕ್ತಿತ್ರಿಗೆ ತಿಳಿದು ಕೃತಕಾರ್ಯಕ್ಕೆ ಪಾಶ್ಚಾತ್ತಾಪ ಪಟ್ಟು ನಾಚಿ ಅನಸೂಯೆಯ ಕಡೆಗೆ ಹೋಗಿ, ನಮಸ್ಕರಿಸಿ ಪ್ರಾರ್ಥಿಸಿ ತಮ್ಮ ಅಪರಾಧ ಕ್ಷಮಿಸಬೇಕೆಂದು ಬೇಡಿಕೊಂಡು, ತಿರುಗಿ ತಮ್ಮ ತಮ್ಮ ಸತಿಗಳನ್ನು ಪಡೆದುಕೊಂಡು ಸ್ವಸ್ಥಾನಗಳನ್ನು ಹೊಂದಿದರು.

ಇನ್ನು ನನ್ನ ವಿಚಾರವನ್ನು ಮಂಡಿಸುವೆನು. ಈ ಕಥೆಯಲ್ಲಿ ಆಲೋಚಿಸಿತಕ್ಕ ಮುಖ್ಯ ಅಂಶಗಳೆಂದರೆ— ತ್ರಿಮೂರ್ತಿಗಳು, ಅವರ ಶಕ್ತಿತ್ರಯ, ನಾರದನ ಉಕ್ಕಿನ ಕಡಲೆ, ಪಾತಿವ್ರತ್ಯ, ಅನಸೂಯೆ, ಅತ್ರಿ, ದತ್ತಾತ್ರಯ, ಎಂಬವುಗಳೇ ಇವನ್ನು ಅನುಕ್ರಮದಿಂದ ಕೆಳಗೆ ವಿವೇಚಿಸುವೆನು.

೧. ತ್ರಿಮೂರ್ತಿಗಳು,— ಬ್ರಹ್ಮ ವಿಷ್ಣು ರುದ್ರ ರೆಂಬ ಇವರೇನು ಸ್ವತಂತ್ರ ವ್ಯಕ್ತಿಗಳಲ್ಲ. ಸೃಷ್ಟಿಸುವದು (ಹೂಡುವದು), ರಕ್ಷಿಸುವದು (ಆಡುವದು), ವಿಸರ್ಜಿಸುವದು (ದೂಡುವದು) ಎಂಬ ಕಾರ್ಯಾಂತರಗಳ ಮೂಲಕ, ಒಬ್ಬನೇ ದೇವನಿಗೆ ಬಿದ್ದಿರುವ ಹೆಸರುಗಳಿಂದ ಉಂಟಾದವರು. ಆದುದರಿಂದ ಕೇವಲ ಕಾಲ್ಪನಿಕರೇ ಹೊರತು ನಿಜವಾದವರಲ್ಲ. ಇಂತಹ ಸಂಗತಿಯನ್ನು ನಾವು ವ್ಯವಹಾರದಲ್ಲಿ ನಿತ್ಯಶಃ ನೋಡುತ್ತೇವೆ. ಒಬ್ಬನೇ ಮನುಷ್ಯನು ಹಳ್ಳಿಯಲ್ಲಿ ಕಿರಾಣಿ ಅಂಗಡಿಯನ್ನಿಟ್ಟು ಅಂಗಡಿ

ಕಾರನೆಂದೂ, ಪೋಸ್ಟಿನ ಕೆಲಸಸಾಗಿಸಿ ಪೋಸ್ಟ ಮಾಸ್ತರನೆಂದೂ, ಔಷದ ಕೊಟ್ಟು ವೈದ್ಯನೆಂದೂ ಕರಿಸಿಕೊಳ್ಳುವದು ಎಲ್ಲರಿಗೂ ಗೊತ್ತು.

೨. ತ್ರಿಮೂರ್ತಿಗಳ ಶಕ್ತಿತ್ರಯ— ಬ್ರಹ್ಮನು ಚಿತ್ರವಿಚಿತ್ರವಾದ ಸೃಷ್ಟಿಯನ್ನು ನಿರ್ಮಿಸತಕ್ಕವನಾದುದರಿಂದ ಅವನಿಗೆ ವಿಶಾಲವಾದ ಬುದ್ಧಿ ಶಕ್ತಿಯೇ ಬೇಕು ಆದುದರಿಂದ ವಿದ್ಯಾದೇವಿಯೆನಿಸಿದ ಸರಸ್ವತಿಯು ಆತನ ಹೆಂಡತಿಯಾದಳು. ವಿಷ್ಣುವು, ಸೃಷ್ಟಿಯಲ್ಲಿ ನಿರ್ಮಿತನಾದ ಸಕಲ ಪ್ರಾಣ್ಯಾದಿಗಳನ್ನು ಸಂರಕ್ಷಿಸಬೇಕಾದುದರಿಂದ ಅವನಿಗೆ ಧನಸಂಪತ್ತು ಅವಶ್ಯವಾಗಿಬೇಕು. ಆ ಕಾರಣ ಲಕ್ಷ್ಮೀದೇವತೆಯು ಆತನ ಶಕ್ತಿಯೆನಿಸಿದಳು. ರುದ್ರನು ಸಂಹಾರಕರ್ತನಾದುದರಿಂದ ಸೃಷ್ಟಿಯನ್ನೆಲ್ಲ ನಾಶ ಪಡಿಸಿ, ಪೂರ್ವಸ್ಥಿತಿಗೆ ಒಯ್ಯುವನು. ಜಗತ್ತಿನಲ್ಲಿರುವ ಸಕಲ ವಸ್ತುಗಳು ಜಗತ್ತಿನಿಂದಲೇ ಹುಟ್ಟಿ, ಅದರಲ್ಲೇ ಕೆಲ ಕಾಲವಿದ್ದು, ಕಡೆಗೆ ಪುನಃ ಅದರಲ್ಲೇ ಬೆರೆದು ಬಿಡುವದನ್ನು ನಾವು ನೋಡುತ್ತೇವೆ. ಆದುದರಿಂದ ಈ ಜಗವೇ (ಧರಣಿ ಸ್ವರೂಪವಾದ ಪಾರ್ವತಿ ದೇವಿಯೇ) ರುದ್ರನ ಪತ್ನಿಯಾದಳು. ಈ ವಿಚಾರಸರಣಿಯಿಂದ ಪೌರಾಣಿಕರು ಅವರಿಗೆ ಹೆಂಡಂದಿರನ್ನು ಕಲ್ಪಿಸಿರುವರು. ಆದರೆ ಇಲ್ಲಿ ಆ ಹೆಂಡಂದಿರ ಸ್ವರೂಪವು ಭಿನ್ನವಾಗಿರುವದು. ಬೇರೆ ಬೇರೆ ದೇವತೆಗಳನ್ನು ತಮ್ಮ ಇಷ್ಟ ದೈವವೆಂದು ಬಗೆದು, ಭಕ್ತಿಭಾವದಿಂದ ಪ್ರೇರಿತರಾಗಿ ಆರಾಧಿಸುವ ಭಕ್ತ ಸಮುದಾಯವೇ, ಆಯಾ ಮೂರ್ತಿಗಳ ಶಕ್ತಿಸ್ವರೂಪರೆಂದು ಅರಿಯಬೇಕು. ಸತಿಪತಿಭಾವದಿಂದ ಭಕ್ತನು ಇಷ್ಟದೇವರಲ್ಲಿ ಬೆರೆಯುವದು ಸರ್ವಸಾಮಾನ್ಯವಾದ ಸಾಂಪ್ರದಾಯವಲ್ಲವೇ? "ಶರಣಸತಿ ಲಿಂಗಪತಿ" ಎಂದು ವೀರಶೈವರ ದೃಢವಾದ ನಂಬಿಗೆಯುಂಟು. ಆದುದರಿಂದ ಭಕ್ತರು ಸಹ ದೇವರಿಗೆ ಪತಿವ್ರತಾ ಪತ್ನೀಸ್ವರೂಪವೇ ಸರಿ.

×

೨. ನಾರದ = ಅಂದರೆ ಹಲ್ಲಿಲ್ಲದವ, ಅರ್ಥಾತ್ ಮುದುಕ. ಈತನು ಹೆಚ್ಚು ಕಾಲ ಪ್ರಪಂಚದ ಅನುಭವ ಪಡೆದುದರಿಂದ ಸಾರಾ

---

× ನಾರದ = ನ+ಆ+ರದ- ಇದರಂತೆ ಸಖಾರಾಮ, ಕೋಟ್ಯಾಧೀಶ, ವಿಶ್ವಾಮಿತ್ರ, ಶಿವಾಸುರ ಮುಂತಾದವುಗಳಾದರೂ ನಡುವೆ 'ಆ'ಕಾರಾಗಮವಾಗುವದು. ಇಲ್ಲವೆ 'ಆ' ಉಪಸರ್ಗ ಬರುವದು. ಇಂತಹ ಉದಾಹರಣೆಗಳು ಇನ್ನೂ ಅನೇಕವಾಗಿವೆ.

ಸಾರವಿಚಾರವುಳ್ಳವನೂ, ತರತರದ ಜನರ ಗುಣ ಸ್ವಭಾವಾದಿಗಳ ಪರೀಕ್ಷೆಯುಳ್ಳವನೂ, ಒಳಿತು ಕೆಡಕುಗಳನ್ನೂ ಹಿತಾಹಿತಗಳನ್ನೂ ತಪ್ಪದೆ ನಿರ್ಣಯಿಸುವ ಬುದ್ಧಿಯುಳ್ಳವನೂ, ದೇವರತ್ತ ಒಲಿದ ಮನಸ್ಸುಳ್ಳವನೂ, ಆಗಿರುವನೆಂಬದು ಸ್ಪಷ್ಟವೇ. ಆದಕಾರಣ ಇಂತಹ ಹಿರಿಯರು ಸಕಲರಿಗೂ ವಂದ್ಯರು. ಇವರಿಗೆ ಎಲ್ಲೆಡೆಯಲ್ಲಿಯೂ ಮನ್ನಣೆಯುಂಟು. ಅವರ ಮಾತಿಗೆ ಮಹತ್ವವುಂಟಾಗುವದು. ಅವರ ಸದ್ಬೋಧೆಯನ್ನೂ ಸಲಹೆಯನ್ನೂ ಎಲ್ಲರೂ ಬಯಸುವರು. ನಾರದನು ತ್ರಿಲೋಕಸಂಚಾರಿ ಎಂದು ಖ್ಯಾತಿಯುಂಟು. ಸಾತ್ವಿಕ (ಉತ್ತಮ) ರಾಜಸ (ಮಧ್ಯಮ), ತಾಮಸ (ನೀಚ) ಗುಣಗಳುಳ್ಳವರೇ ಕ್ರಮವಾಗಿ ದೇವತೆಗಳು, ಮನುಜರು, ರಾಕ್ಷಸರು ಎಂದೆನ್ನಿಸಿಕೊಳ್ಳುವರು. ಅವರು ವಾಸಿಸುವ ಸ್ಥಾನಗಳೇ ಸ್ವರ್ಗ (ಪ್ರಕಾಶಮಾನವಾದ ಊರ್ಧ್ವಲೋಕ) ಮರ್ತ್ಯ, ಪಾತಾಳ (ಅಧೋಲೋಕ) ಗಳೆಂಬ ಲೋಕತ್ರಯವು. ಈ ತ್ರಿಲೋಕಗಳು ಭೂಲೋಕದಲ್ಲಿಯೇ ಉಂಟೆಂಬುವದಕ್ಕೆ ಶ್ರೀ ಬಸವಣ್ಣನವರ ಮುಂದಿನ ವಚನವನ್ನು ನೋಡಿರಿ. "ದೇವಲೋಕ ಮರ್ತ್ಯಲೋಕವೆಂಬವು ಬೇರಿಲ್ಲ ಕಾಣಿರೋ. ಈ ಲೋಕದೊಳಗೆ ಮತ್ತನಂತ ಲೋಕ. ಸತ್ಯವ ನುಡಿವುದೇ ದೇವಲೋಕ. ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಇದಕ್ಕೆ ನೀವೇ ಪ್ರಮಾಣ ಕೂಡಲಸಂಗಮದೇವಾ" ಎಂದು ಹೇಳಿದ್ದಾರೆ. ಆದುದರಿಂದ ಈ ಪಿತಾಮಹಸ್ವರೂಪದ ಆರ್ಯನು (ಅಜ್ಜನು), ಶ್ರೇಷ್ಠ ಸಾಮಾನ್ಯ ಕನಿಷ್ಠರೆಂದೆನಿಸುವ ಎಲ್ಲರ ಕಡೆಗೂ ಹೋಗುವ ಅಧಿಕಾರವುಳ್ಳವನಾದುದರಿಂದ ಇವನು ತ್ರಿಲೋಕ ಸಂಚಾರಿಯು. ಆ ಕಾರಣ ಹಲ್ಲಿಲ್ಲದ ವೃದ್ಧನೇ ನಾರದನೆಂಬುವ ಮಾತು.

೪. ಉಕ್ಕಿನ ಕಡಲೆ— ತ್ರಿಮೂರ್ತಿಗಳ ಭಿನ್ನ ಭಿನ್ನ ಸರ್ವೋತ್ತಮತ್ವವು ಸಮಾಜದಲ್ಲಿ ವಾದಕ್ಕೆ ಕಾರಣವಾಗಿ, ಅತಿಮಾತ್ರವಾಗಿ ಸೊಕ್ಕಿ, ಹಠಾತ್ತಾದ ದುರಭಿಮಾನ ಸ್ವರೂಪಕ್ಕಿಳಿದುದೇ, ಬಿರುಸಾದ ಉಕ್ಕಿನ ಕಡಲೆಗಳು. ಇವನ್ನು ಕುದಿಸಿ ಸೇವಿಸುವಂತೆ ಮಾಡುವದೆಂದರೆ, ಆ ದೃಢ ಮೂಲವಾದ ಕಠಿಣತರ ದುರಭಿಮಾನವನ್ನು ಬಿಟ್ಟು, ಜನರೆಲ್ಲರೂ "ತ್ರಿಮೂರ್ತಿಗಳು ಸುಳ್ಳು. ಅವರು ನಿಜವಾದ ಒಬ್ಬನೇ ದೇವನ ಕಾಲ್ಪನಿಕ ಸ್ವರೂಪ ಭೇದವೆಣಿಸುವದು ಮೂಢತನವೂ ಅಜ್ಞಾನವೂ"

ಎಂದು ಬಗೆದು, ಐಕ್ಯದ ತಳಹದಿಗೆ ಇಳಿಯುವದೇ ಸೈ! ಇದು ಆ ಶಕ್ತಿ ದೇವಿಯರಿಗೆ ವ್ಯಕ್ತಿಶಃ ಅಸಾಧ್ಯವಾದುದು. ಆದುದರಿಂದ ಅವರು ಒಪ್ಪಲಿಲ್ಲ.

೫. ಪಾತಿವ್ರತ್ಯ— ಇದು ಭಕ್ತರಲ್ಲಿರುವ ದೇವನಿಷ್ಠೆಯು, (ಅಥವಾ ಪತ್ನಿಯಲ್ಲಿರುವ ಪತಿ ನಿಷ್ಠೆಯು). ಅಖಂಡ ಪರಮಾತ್ಮನೆನಿಸುವ ದೇವನೊಬ್ಬನೇ ಇರುವನೆಂದು ತಿಳಿದು, ಆತನ ಸೇವೆಯಲ್ಲಿ ಆಸಕ್ತನಾಗಿರುವದೇ ಮೇಲ್ತರದ ಪಾತಿವ್ರತ್ಯ. ಇದಕ್ಕೆ ಬದಲಾಗಿ ಆ ದೇವನಲ್ಲಿ ಅನೇಕ ಭೇದ ಮೂರ್ತಿಗಳನ್ನು ಕಲ್ಪಿಸಿ, ಅಷ್ಟರ ಮಟ್ಟಿಗೇನೇ ನಿಷ್ಠೆಯನ್ನು ಧರಿಸುವದು ಖಂಡ ಪಾತಿವ್ರತ್ಯವು. ಇದು ಕೀಳು ಎಂದು ಬೇರೆ ಹೇಳುವ ಅವಶ್ಯಕತೆಯೇ ಇಲ್ಲ.

೬. ಅನಸೂಯೆ—(ನ+ಅಸೂಯೆ=ಅನ್+ಅಸೂಯೆ=ಅನಸೂಯೆ) ಅಂದರೆ ಮಾತ್ಸರ್ಯರಹಿತಳು. ಜನರಲ್ಲಿರುವ ಪ್ರತ್ಯೇಕವಾದ ತ್ರಿಮೂರ್ತಿಗಳ ದುರಭಿಮಾನವು ಅಳಿದಾಗಲೇ ಅವರು ನಿರ್ಮತ್ಸರರಾಗುವರು. ಆಗಲೇ ಅನಸೂಯೆ ಜನ್ಮವಾಗುವದು. ಈ ಅನಸೂಯಾ ಶಬ್ದವು ಸಂಸ್ಕೃತದಲ್ಲಿ ಸ್ತ್ರೀಲಿಂಗವೆಂದು ಎಣಿಸಲ್ಪಡುವದರಿಂದ, ಅನಸೂಯೆಯು ಅತ್ರಿಯ ಪತ್ನಿಯೆಂದು ತಿಳಿಯಲಾಗಿದೆ.

೭. ಅತ್ರಿ— (ನ+ತ್ರಿ = ಅ+ತ್ರಿ = ಅತ್ರಿ) ಅಂದರೆ ಮೂರು ಅಲ್ಲದವ, ತ್ರಿಮೂರ್ತಿಗಳಿಗೆ ಅತೀತನಾದವ, ಅಥಾರ್ತ್ ಒಬ್ಬನೇ ಆದ ಮೂಲ ದೇವನು. ತ್ರಿಮೂರ್ತಿಗಳಲ್ಲಿ ಪ್ರತ್ಯೇಕವಾದ "ತಮ್ಮ ಇಷ್ಟ ದೈವತವೇ ಶ್ರೇಷ್ಠ" ವೆಂಬ ಒಡಮೂಡಿದ ದುರಾಗ್ರಹವನ್ನು ನಾಶಪಡಿಸಿ "ಒಬ್ಬನನ್ನೇ ಒಬ್ಬ ದೇವರು— ಏಕೋದೇವ ನ ದ್ವಿತೀಯ— (ಪರಮಾತ್ಮನು) ಇರುವನು. ಅವನನ್ನೇ ನಾವೆಲ್ಲರು ಭಜಿಸುತ್ತೇವೆ" ಎಂಬ ಭಾವನೆ ನೆಲೆಗೊಂಡಾಗಲೇ ಅತ್ರಿಯು ಜನಿಸುವನು. ಈ ನಿಜವಾದ ಪತಿ ಪರಾಯಣೆಯಾದುದರಿಂದಲೇ ಅನಸೂಯೆ ಅಪ್ರತಿಮ ಪತಿವ್ರತೆಯಾದಳು.

೮. ದತ್ತಾತ್ರಯ— (ದತ್ತ+ಆತ್ರಯ)

(ಅ) ದತ್ತ ಅಂದರೆ (ಅತ್ರಿಯಿಂದ ಸಮಾಜಕ್ಕೆ ಆರಾಧನೆಗೋಸುಗ ಕೊಡಲ್ಪಟ್ಟವ.)

(ಬ) ಆತ್ರೇಯ[೧] ( ಅತ್ರಿ + ಅ = ಆತ್ರಯ ) ಅಂದರೆ ಅತ್ರಿಯ ಮಗನು.

ಈ ವಿವರಣೆಯಿಂದ ಸಮಾಜದಲ್ಲಿ ದತ್ತಾತ್ರಯನ ಅವತಾರವು ಹೇಗೆ ಯಾಕೆ ಆದಾವ ಸ್ಥಿತಿಯಲ್ಲಿ ಆಯಿತೆಂಬ ವಿಷಯಗಳು, ಓದುಗರ ಮನಸ್ಸಿನಲ್ಲಿ ನಿರಾತಂಕವಾಗಿ ಬಿಂಬಿಸುವವೆಂದು ನಂಬಿರುವೆನು. ಈ ಸಂಗತಿಯನ್ನು ಒಂದು ಉತ್ಪ್ರೇಕ್ಷೆಯಿಂದ ರೂಪಿಸಿ, ಪುರಾಣಾಂತರಗಳಲ್ಲಿ ಸೇರಿಸಿರುವರೆಂದು ತೋರುತ್ತದೆ. ಬಲ್ಲವರು ಇತ್ತ ಗಮನಿಸಿ, ತಮ್ಮ ತಮ್ಮ ವಿಚಾರಗಳನ್ನು ಪ್ರಕಟಿಸಬೇಕೆಂದು ಅಪೇಕ್ಷಿಸುವೆನು.

---

## ೧೩ನೇ ಶತಮಾನದಲ್ಲಿ ವೀರಶೈವ ವಾಙ್ಮಯವಿದ್ದಿಲ್ಲವೇ ಹೇಗೆ?

(ಲೇಖಕ:— ರಾ॥ ಸಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

ವೀರಶೈವ ವಾಙ್ಮಯದ ವಿಷಯವಾಗಿ ಜನರಲ್ಲಿ ಅನೇಕ ತಪ್ಪು ತಿಳುವಳಿಕೆಗಳಿರುತ್ತವೆ. ಅವುಗಳಲ್ಲಿ ೧೩ನೇ ಶತಮಾನದಲ್ಲಿ ಅಂದರೆ ಬಸವೇಶ್ವರನ ಕಾಲದ ನಂತರ ವೀರಶೈವರಲ್ಲಿ ಯಾವ ಗ್ರಂಥಕಾರರೂ ಉದ್ಭವಿಸಲಿಲ್ಲ, ಅರ್ಥಾತ್ ಆಗ ಅವರ ವಾಙ್ಮಯವೇ ಇರಲಿಲ್ಲವೆಂದು ಬಹು ಜನರು, ಅವರಲ್ಲಿ ವಿದ್ವಾಂಸರು ಸಹ ಭಾವಿಸಿರುತ್ತಾರೆ. ಇಷ್ಟೇ ಅಲ್ಲ, ಆ ರೀತಿಯಾಗಿ ಅನೇಕ ಬರವಣಿಗೆಗಳನ್ನು ಸಹ ಅವರು ಬರೆಯುತ್ತಲಿದ್ದಾರೆ. ವ್ಯಾಖ್ಯಾನಗಳಲ್ಲಿ ಪ್ರತಿಪಾದಿಸುತ್ತಲೂ ಇದ್ದಾರೆ. ವಿಶ್ವವಿದ್ಯಾಲಯಗಳ ಪರೀಕ್ಷೆಗಳಲ್ಲಿ ಸಹ ಈ ಧೋರಣದಿಂದ ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಹಾಕುವದೂ ಉಂಟು. ಇಂಥ ಪ್ರಶ್ನಕಾಗದಗಳ ಮೇಲಿಂದ

---

೧ ಆದಿ ಸ್ವರಕ್ಕೆ ವೃದ್ಧಿ ಅಂತ್ಯ ಸ್ವರಕ್ಕೆ ಗುಣ. ಅತ್ರಿ+ಅ=ಅತ್ರಯ+ಅ= ಆತ್ರಯ.

ಮೇಲಿನ ಮತ್ತು ಕೆಳಗಿನ ಶೈಕ್ಷಣಿಕವರ್ಗಗಳಲ್ಲಿ ಪ್ರೊಫೆಸರರೂ ಶಿಕ್ಷಕರೂ ಆ ರೀತಿ ವಿಧಾನಗಳನ್ನು ಮಾಡುತ್ತಿರಬಹುದೆಂದು ನಮಗೆ ತೋರುತ್ತದೆ. ಆದರೆ ಇದರ ಪರಿಣಾಮವು ಇಷ್ಟಕ್ಕೆಯೇ ನಿಂತಿಲ್ಲ. ಬಸವೇಶ್ವರನ ತರುವಾಯ ಹೀಗೆ ಒಂದು ಶತಮಾನಕಾಲ ವೀರಶೈವ ವಾಙ್ಮಯುವಿಲ್ಲವೆಂದು ತಿಳಿದದ್ದರಿಂದ ಯಾವ ವಚನವಾಙ್ಮಯುವು ಬಸವೇಶ್ವರನ ಕಾಲದಲ್ಲಿ ಉದಯುವಾಯಿತೆಂದು ಭಾವಿಸಲ್ಪಟ್ಟದೆಯೋ ಅದೂ ಕೂಡ ಬಸವೇಶ್ವರನ ಕಾಲದಲ್ಲುದಯುವಾಗಲಿಲ್ಲ, ಆದರೆ ಅವನು ಗತಿಸಿ ಒಂದು ಶತಮಾನಕಾಲ ಸಂದಿ ಹೋದ ಬಳಿಕ ಯಾರೋ ಕೆಲವರು ಈ ವಾಙ್ಮಯುವನ್ನು ಅವನ ಅಥವಾ ಶಿವಶರಣರ ಹೆಸರಿನಿಂದ ರಚಿಸಿದ್ದಾರೆಂದು ಸಹ ವಿಧಾನಗಳು ಮಾಡಲ್ಪಟ್ಟಿರುತ್ತವೆ. ಇದಕ್ಕೆ ಉದಾಹರಣೆ ಎಂದರೆ ಪ್ರಬುದ್ಧಕರ್ನಾಟಕದ ೨೧ನೇ ಸಂಪುಟ ೪ನೇ ಸಂಚಿಕೆಯೇ ಇರುತ್ತದೆ.

ಈಗ ಬಹು ಜನರು ಅವರಲ್ಲಿ ವಿದ್ವಾಂಸರೂ ಕೂಡ ವೀರಶೈವ ವಾಙ್ಮಯುವು ಉತ್ಪನ್ನವಾದ್ದರಿಂದಲೇ ಜೈನ ವಾಙ್ಮಯುವು ನಿಂತಿತೆಂದು ಇನ್ನೊಂದು ವಿಧಾನವನ್ನು ಮಾಡುವದುಂಟು. ಅಂದರೆ ವೀರಶೈವರು ಜೈನರ ಮೇಲೆ ಏನೋ ಒಂದು ಬಲಾತ್ಕಾರ ಮಾಡಿರಬಹುದೆಂಬ ತಿಳುವಳಿಕೆಯು ಇವೆ. ಇದಾದರೂ ನಿಜವಾದುದಲ್ಲ. ಯಾಕೆಂದರೆ ಬಸವೇಶ್ವರನು ಉದಯುವಾದದ್ದು ೧೨ನೇ ಶತಮಾನದ ಮಧ್ಯಭಾಗದಲ್ಲಿ. ಆದರೆ ೧೩ನೇ ಶತಮಾನದಲ್ಲೆಲ್ಲ ಜೈನವಾಙ್ಮಯುದಲ್ಲಿ ಅತಿ ಪ್ರಸಿದ್ಧಿಹೊಂದಿದ ಗ್ರಂಥಕಾರರು ಉದ್ಭವಿಸಿರುತ್ತಾರೆ. ಉದಾ:— ವಿಜಾಪುರ ಪಟ್ಟಣದಲ್ಲಿದ್ದ ನೇಮಿಚಂದ್ರನು ೧೧೭೦ ರಲ್ಲಿದ್ದನು. ಬಾಗೇವಾಡಿಗೆ ಸಮೀಪವಾಗಿರುವ ಇಂಗುಳೇಶ್ವರದಲ್ಲಿ ಚಂದ್ರಪ್ರಭ ಪುರಾಣವನ್ನು ಬರೆದ ಅಗ್ಗಳನು ೧೧೮೯ ರಲ್ಲಿದ್ದನು. ಅಂದರೆ ಬಸವೇಶ್ವರನು ಉದಯುವಾಗಿ ಯಾವ ತರ್ದವಾಡಿ (ವಿಜಾಪುರ) ನಾಡಿನಲ್ಲಿ ಮಹತ್ತರವಾದ ಕ್ರಾಂತಿಯನ್ನೆಸಗಿದನೋ ಆ ನಾಡಿನಲ್ಲಿಯೇ ಇಂಥ ಪ್ರಸಿದ್ಧ ಜೈನಗ್ರಂಥಕಾರರು ಅವನ ತರುವಾಯ ಸ್ವಲ್ಪ ವರ್ಷಗಳಲ್ಲಿಯೇ ಆಗಿಹೋಗಿದ್ದಾರೆ. ಕವಿಚಕ್ರವರ್ತಿಯಾದ ಜನ್ನನ ಕಾಲವು ೧೨೦೯ ಇದೆ. ಇವನು ಮೊದಲು ಉತ್ತರ ದೇಶದವನು. ಮುಂದೆ ಹೊಯಿಸಳರಲ್ಲಿಗೆ ಹೋಗಿ ನಿಂತನು. ಕಮಲಭವನು ೧೨೧೫ ರಲ್ಲಿ, ಆಂಡಯ್ಯನು ೧೨೩೫ ರಲ್ಲಿ, ಜೈನ ವ್ಯಾಕರಣಕಾರವಾದ ಕೇಶಿರಾಜನು ೧೨೬೦ ರಲ್ಲಿ ಆಗಿ

ಹೋಗಿದ್ದಾರೆ. ಇಂಥ ಉದ್ಗ್ರಂಥಗಳನ್ನು ಬರೆದ ಜೈನರು ಬಸವೇಶ್ವರನ ತರುವಾಯ ಕರ್ನಾಟಕದಲ್ಲಿ, ಅವರಲ್ಲಿ ಅನೇಕರು ಬಸವೇಶ್ವರನ ಜನ್ಮ ಸ್ಥಳಕ್ಕೆ ಸಮೀಪವಾಗಿರುವ ಗ್ರಾಮಗಳಲ್ಲಿ, ಉದಯಿಸಿದ್ದಾರೆ. ಈ ಎಲ್ಲ ಸಂಗತಿಗಳ ನಿಜ ಸ್ಥಿತಿಯನ್ನು ಅರಿಯಲು ಯತ್ನಿಸದೆ ಅವರಕಿಂತಲೂ ಪೂರ್ವದಲ್ಲಿ ವೀರಶೈವ ವಾಙ್ಮಯವೇ ಇದ್ದಿಲ್ಲವೆಂತಲೂ ವೀರಶೈವರು ಜೈನರ ಮೇಲೆ ಬಲಾತ್ಕಾರ ಮಾಡಿರಬಹುದೆಂತಲೂ ವಿದ್ವಾಂಸರು ಹೇಳುವ ಸಾಹಸವನ್ನು ಮಾಡುತ್ತಾರೆ. ವಚನ ವಾಙ್ಮಯವು ಹಿಂದುಗಡೆ ನಿರ್ಮಿಸಲ್ಪಟ್ಟಿದೆಂದು ತಿಳಿಯುವದಂತೂ ಎಷ್ಟು ತಪ್ಪಾದದ್ದೆಂಬದನ್ನು ಕುರಿತು ನಾವು ಹೋದ ತಿಂಗಳಿನ ಶಿವಾನುಭವ ಪತ್ರಿಕೆಯ ಸಂಚಿಕೆಯಲ್ಲಿ (ಸಂಪುಟ ೧೫ ಸಂಚಿಕೆ ೧ ) ಒಂದು ವಿಸ್ತೃತ ಲೇಖವನ್ನು ಬರೆದಿದ್ದೇವೆ. ಅದರಲ್ಲಿ ನಾವು ವೀರಶೈವ ವಾಙ್ಮಯವು ಬಸವೇಶ್ವರನಕಿಂತ ಮೊದಲು ಅಸ್ತಿತ್ವದಲ್ಲಿತ್ತೆಂತಲೂ ಆ ಕಾಲಕ್ಕೆ ಕೆಲವು ಶಿವಶರಣರು ಉದಯವಾದರೆಂತಲೂ ಮುಂದೆ ಬಸವೇಶ್ವರನ ಕಾಲದಲ್ಲಿ ಅವನ ಶಿವಾನುಭವ ಮಂಟಪದಲ್ಲಿ ಅನೇಕ ಶಿವಶರಣರು ಇದ್ದು ಅವರು ಸ್ವತಃ ಅನೇಕ ವಚನ ಗ್ರಂಥಗಳನ್ನು ರಚಿಸಿದ್ದರೆಂತಲೂ ನಿರೂಪಿಸಿದ್ದೇವೆ. ಆದರೆ ಬಸವೇಶ್ವರನ ಕಾಲದಲ್ಲಿ ಉಂಟಾದ ವಾಙ್ಮಯ ಪ್ರಯತ್ನಗಳು ಒಂದು ಶತಮಾನದ ವರೆಗೆ ನಿಂತುಕೊಂಡು ಬಿಟ್ಟವೋ ಹೇಗೆ, ಹೀಗ್ಯಾಗುವದು ಶಕ್ಯವೇ ಹೇಗೆ, ೧೩ ನೇ ಶತಮಾನದಲ್ಲಿ ವೀರಶೈವ ಗ್ರಂಥಕಾರರು ಇರಲಿಲ್ಲವೇ ಹೇಗೆ ಎಂಬುದನ್ನು ಕುರಿತು ನಾವು ಇಲ್ಲಿ ವಿವೇಚಿಸಲೆಣಿಸಿದ್ದೇವೆ.

೧೩ನೇ ಶತಮಾನದಲ್ಲಿ ವೀರಶೈವ ವಾಙ್ಮಯವೇ ಉಂಟಾಗಲಿಲ್ಲವೆನ್ನುವವರು ಕೆಲವು ಸಂಗತಿಗಳ ಬಗ್ಗೆ ತಪ್ಪು ಕಲ್ಪನೆಗಳನ್ನು ಮಾಡಿಕೊಂಡಿರುವದರಿಂದ ಅವರಿಂದ ಈ ಪ್ರಮಾದಗಳುಂಟಾಗಿವೆಯೆಂದು ನಮಗೆ ತೋರುತ್ತವೆ. ಅವು ಯಾವವೆಂದರೆ—

೧. ವೀರಶೈವರ ಕನ್ನಡ ವಾಙ್ಮಯವೆಂದರೆ ಬರೇ ಕಾವ್ಯಗಳಿರಬಹುದೆಂದು ಭಾವಿಸಿ, ಕಾವ್ಯಗಳ ಉತ್ಪತ್ತಿಯ ಕಡೆಗೆಯೇ ಹೆಚ್ಚಾಗಿ ಲಕ್ಷವಿಟ್ಟು ಧಾರ್ಮಿಕ ಮತ್ತು ಅಧ್ಯಾತ್ಮಿಕ ವಾಙ್ಮಯವನ್ನು ಇವರು ದುರ್ಲಕ್ಷಿಸಿದ್ದಾರೆ.

೨. ಈ ಪ್ರಕಾರ ವಿಧಾನ ಮಾಡುವವರು ವಚನಗಳ ಕಾಲವನ್ನು ನಿರ್ಧರಿಸಲು ಏನೂ ಪ್ರಯತ್ನಿಸಿಲ್ಲ.

೩. ಇವರು ವೀರಶೈವ ಧರ್ಮದ ಬೆಳವಣಿಗೆಯ ನಿಜೇತಿಹಾಸವನ್ನು ಕಂಡುಹಿಡಿದಿಲ್ಲ.

ಈ ಮೂರು ಕಾರಣಗಳಿಗೋಸ್ಕರ ೧೩ನೇ ಶತಮಾನದಲ್ಲಿ ವೀರಶೈವ ವಾಙ್ಮಯವೇ ಉತ್ಪನ್ನವಾಗಲಿಲ್ಲವೆಂದು ಇವರು ಭಾವಿಸಿದಂತೆ ತೋರುತ್ತಿದೆ.

ವೀರಶೈವರಲ್ಲಿ ಕಾವ್ಯಗಳು ದೊಡ್ಡ ಪ್ರಮಾಣದಿಂದ ಉಂಟಾಗಹತ್ತಿದ್ದು ೧೩೬೯ ರಲ್ಲಿ ಆಗಿಹೋದ ಭೀಮ ಕವಿಯ ಕಾಲದ ನಂತರ ಎಂಬ ತಿಳುವಳಿಕೆ ಇದೆ. ಇದರಲ್ಲಿ ಕೆಲಮಟ್ಟಿಗೆ ನಿಜಾಂಶವು ಇರಬಹುದು. ಯಾಕಂದರೆ, ಇದರ ಮುಂದಿನ ಶತಮಾನದಲ್ಲಿ ವಿಜಯನಗರದ ರಾಜರಾದ ದೇವರಾಯ, ವಿರೂಪಾಕ್ಷರಾಯ ಮೊದಲಾದವರ ಕಾಲದಲ್ಲಿ ಅನೇಕ ಮಹತ್ವದ ಗ್ರಂಥಗಳಾಗಿವೆ. ಈ ಸಮಯವು ವೀರಶೈವ ವಾಙ್ಮಯದಲ್ಲಿ ಒಂದು ಕ್ರಾಂತಿಕಾಲವೆಂದು ಭಾವಿಸಲ್ಪಟ್ಟಿರುತ್ತವೆ. ಇವರ ತರುವಾಯ ಪ್ರತಿಯೊಂದು ಶತಮಾನದಲ್ಲಿಯೂ ಅಸಂಖ್ಯ ವೀರಶೈವ ಗ್ರಂಥಕಾರರು ಆಗಿಹೋಗಿರುವದು ಕಂಡುಬರುತ್ತದೆ. ಆದರೆ ಭೀಮ ಕವಿಯ ಪೂರ್ವದಲ್ಲಿ ವೀರಶೈವ ಕವಿಗಳು ಕೆಲವರು ಮಾತ್ರ ಆಗಿರುವದು ಕಂಡುಬರುತ್ತದೆ. ಅವರ ಸಂಖ್ಯೆಯು ಈಚೀಚಿನ ಕಾಲದಲ್ಲಿ ಆಗಿಹೋದಷ್ಟು ದೊಡ್ಡದು ಇರಲಿಕ್ಕಿಲ್ಲ. ಹರಿಹರ, ರಾಘವಾಂಕ, ಸೋಮರಾಜ, ಪಾಲ್ಕುರಿಕೆ ಸೋಮ, ಕೆರೆಯ ಪದ್ಮರಸ, ಹೀಗೆ ಕೆಲವರ ಹೆಸರುಗಳು ಮಾತ್ರ ನಮಗೆ ಸದ್ಯಕ್ಕೆ ಉಪಲಬ್ಧವಿವೆ. ಆದರೆ ಕೇವಲ ಇದೊಂದೇ ಸಂಗತಿಯ ಮೇಲಿಂದ ವೀರಶೈವ ವಾಙ್ಮಯದ ವಿಸ್ತಾರವು ೧೩ನೇ ಶತಮಾನದಲ್ಲಿ ಆಗಲಿಲ್ಲೆಂಬ ಅನುಮಾನವನ್ನು ಅನೇಕ ಜನ ಲೇಖಕರು ಮಾಡುವದುಂಟು. ಆದರೆ ಅವರ ಈ ಅಭಿಪ್ರಾಯವು ತೀರ ತಪ್ಪು ಇರುತ್ತದೆ. ಅವರು ವೀರಶೈವ ವಾಙ್ಮಯವೆಂದರೆ ಬರೇ ಪುರಾಣಗಳು, ಕಾವ್ಯಗಳು, ಎಂದು ಭಾವಿಸಿದ ಹಾಗೆ ನಮಗೆ ತೋರುತ್ತದೆ. ಕನ್ನಡದಲ್ಲಿ ಬ್ರಾಹ್ಮಣ ವಾಙ್ಮಯದ ಪರಿಸ್ಥಿತಿಯು ಹೀಗೆ ಒಂದು ವೇಳೆ ಇರಬಹುದು. ಅದರಲ್ಲಿ ಕೇವಲ ಪುರಾಣ ಗ್ರಂಥಗಳ ಸಂಖ್ಯೆಯೇ ಬಹಳ ಹೆಚ್ಚಾಗಿರುತ್ತದೆ. ಕೆಲವು ಮಾತ್ರ ಆಧ್ಯಾ

ತ್ಮಿಕ ಗ್ರಂಥಗಳು ಇರುತ್ತವೆ. ಇದು ಸ್ವಾಭಾವಿಕವಾಗಿದೆ. ಯಾಕಂದರೆ ಇಂಥ ಉಚ್ಚ ವೇದಾಂತ ವಿಷಯಗಳ ಸಲುವಾಗಿ ಬ್ರಾಹ್ಮಣರಲ್ಲಿ ಸಂಸ್ಕೃತ ಭಾಷೆಯಲ್ಲಿ ಬರೆದ ಶ್ರೇಷ್ಠ ಗ್ರಂಥಗಳಿರುತ್ತವೆ. ಆದ್ದರಿಂದ ಇವುಗಳನ್ನೇ ಅವರು ಅಭ್ಯಾಸ ಮಾಡುತ್ತ ಬಂದಿರುತ್ತಾರೆ. ಜೈನರಲ್ಲಾದರೂ ಇದೇ ಸ್ಥಿತಿಯು ಇರುತ್ತದೆ. ಅವರು ತಮ್ಮ ಆಧ್ಯಾತ್ಮಿಕ ಗ್ರಂಥಗಳನ್ನು ಹೆಚ್ಚಾಗಿ ಕನ್ನಡದಲ್ಲಿ ಬರೆದಂತೆ ತೋರುವದಿಲ್ಲ. ಯಾಕಂದರೆ ಅವರು ಅದರ ಕೆಟ್ಟಿನ ಅಭ್ಯಾಸಕ್ಕೋಸ್ಕರ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳನ್ನು ಹೆಚ್ಚಾಗಿ ಉಪಯೋಗಿಸಿದ್ದು ಕಂಡುಬರುತ್ತದೆ. ಆದರೆ ಬಹುಜನ ಸಮಾಜಕ್ಕೋಸ್ಕರ ಅವರು ಕನ್ನಡ ಭಾಷೆಯಲ್ಲಿ ತಮ್ಮ ಕಾವ್ಯಗಳನ್ನು ರಚಿಸಿದ್ದಾರೆ. ಈ ಕಾವ್ಯಗಳೆಲ್ಲ ಬಹುತರವಾಗಿ ತೀರ್ಥಂಕರರ ಚರಿತ್ರೆಗಳಾಗಿರುತ್ತವೆ. ಆದ್ದರಿಂದ ಬ್ರಾಹ್ಮಣ ಮತ್ತು ಜೈನ, ವಾಙ್ಮಯಗಳಿಗೋಸ್ಕರ ಮಾತ್ರ ಅವರವರ ಪುರಾಣಗಳ ಮೇಲಿಂದ ಅವರ ವಾಙ್ಮಯದ ನಿಜ ಸ್ಥಿತಿಯನ್ನು ನಿರ್ಧರಿಸುವದರಲ್ಲಿ ತಪ್ಪಾಗಲಾರದು. ಆದರೆ ವೀರಶೈವ ವಾಙ್ಮಯದ ಪರಿಸ್ಥಿತಿಯು ಹೀಗೆ ಇರುವದಿಲ್ಲ. ಅದರಲ್ಲಿ ಪುರಾಣಗಳು ರಚಿಸಲ್ಪಟ್ಟಂತೆಯೇ ಅಧ್ಯಾತ್ಮಿಕ ಗ್ರಂಥಗಳೂ ಹೇರಳವಾಗಿ ರಚಿಸಲ್ಪಟ್ಟಿರುತ್ತವೆ. ಯಾರು ೧೩ನೇ ಶತಮಾನದಲ್ಲಿ ವೀರಶೈವ ವಾಙ್ಮಯವಿಲ್ಲೆಂದು ಅಭಿಪ್ರಾಯಪಡುತ್ತಾರೋ, ಅವರು ಇಂಥ ಗ್ರಂಥಗಳು ಯಾವ ಯಾವವು ಉಂಟಾದವು ಮತ್ತು ಅವುಗಳ ಕಾಲವು ಆವುದು ಎಂಬುದನ್ನು ವಿವೇಚಿಸುವದು ಬಹಳ ಅವಶ್ಯವಿದೆ. ಈ ವಿಷಯದ ಬಗ್ಗೆ ಕನ್ನಡ ವಾಙ್ಮಯದಲ್ಲಿ ಇನ್ನೂ ಇವರು ಯಾವ ಪ್ರಯತ್ನವನ್ನೂ ಮಾಡುವದಿಲ್ಲ. ಆದ್ದರಿಂದ ಈಗಿನ ಕಾಲದಲ್ಲಿ ವೀರಶೈವ ವಾಙ್ಮಯದಲ್ಲಿ ಪುರಾಣ ಗ್ರಂಥಗಳೇ ಮಹತ್ವದವುಗಳೆಂದು ಭಾವಿಸಿ ಅವುಗಳ ಕಾಲದ ಮೇಲಿಂದ ಬಹುಜನ ಲೇಖಕರು ಅನೇಕ ಬಗೆಯ ತಪ್ಪು ವಿಧಾನಗಳನ್ನು ಮಾಡಹತ್ತಿರುತ್ತಾರೆ. ಇವುಗಳಲ್ಲಿ ವೀರಶೈವ ವಾಙ್ಮಯವು ೧೩ ನೇ ಶತಮಾನದಲ್ಲಿ ಇದ್ದಿಲ್ಲವೆಂಬುದು ಮುಖ್ಯವಾಗಿರುತ್ತದೆ. ಇದು ತೀರ ತಪ್ಪು ತಿಳುವಳಿಕೆಯಾಗಿದೆ.

ಈ ತರದ ತಪ್ಪು ತಿಳುವಳಿಕೆಯಾಗಲಿಕ್ಕೆ ನಾವು ಹಿಂದೆ ಹೇಳಿದಂತೆ ೨ನೆಯ ಮಹತ್ವದ ಕಾರಣವಿರುತ್ತದೆ. ೧೧ ರಿಂದ ೧೩ ಶತಮಾನದವರೆಗೂ ತಮಿಳು ತೆಲಗು ಕನ್ನಡ ದೇಶಗಳಲ್ಲಿ ಶೈವ ಧರ್ಮಗಳ ಒಂದು

ಮಹತ್ತರವಾದ ಜಾಗ್ರತಿಯುಂಟಾಗಿರುತ್ತದೆ. ಈ ಕಾಲದಲ್ಲಿ ಸಂಸ್ಕೃತ, ಆಂಧ್ರ, ಕರ್ನಾಟಕ ಮತ್ತು ತಮಿಳು ಭಾಷೆಗಳಲ್ಲಿ ಅನೇಕ ತರದ ವೀರಶೈವರ ಅಧ್ಯಾತ್ಮಿಕ ಗ್ರಂಥಗಳು ಉದ್ಭವಿಸಿರುತ್ತವೆ. ಆದರೆ ಬಸವೇಶ್ವರನ ಕಾಲವಲ್ಲಿ ಈ ಚಳವಳಿಯು ಅತ್ಯುಚ್ಚ ಶಿಖರವನ್ನು ಹೊಂದಿತು. ಆಗ ಬಹುಜನ ಸಮಾಜದಲ್ಲಿ ಧರ್ಮತತ್ವಗಳನ್ನು ಪ್ರಸಾರ ಮಾಡುವ ಪ್ರಯತ್ನಗಳು ಹೆಚ್ಚಾಗಿ ಉಂಟಾದವು. ಇವುಗಳ ಮೂಲಕ ವಚನ ವಾಙ್ಮಯವು ಕರ್ನಾಟಕದಲ್ಲಿ ಪ್ರಾದುರ್ಭವಿಸಿರುತ್ತದೆ. ಈ ವಾಙ್ಮಯವು ಯಾವಾಗ್ಗೆ ಉಂಟಾಯಿತು ಮತ್ತು ಅದು ಮುಂದೆ ಹ್ಯಾಗೆ ಅಭಿವೃದ್ಧಿ ಹೊಂದಿತು ಎಂಬುದರ ಬಗ್ಗೆ ತಪ್ಪು ತಿಳುವಳಿಕೆಗಳು ಇನ್ನೂ ಜನರಲ್ಲಿ ಇರುತ್ತವೆ. ಈ ಗ್ರಂಥಗಳೆಲ್ಲವು ಬಸವೇಶ್ವರನು ಪ್ರಧಾನಿಯಾಗಿದ್ದಾಗಲೇ ಬರೆಯಲ್ಪಟ್ಟಿರುತ್ತವೆಂಬ ತಿಳುವಳಿಕೆಯು ಈಗ ಇರುತ್ತದೆ. ಆದರೆ ಇದು ತಪ್ಪೆಂದು ನಮಗೆ ತೋರುತ್ತದೆ. ಈ ವಿಷಯದ ಸಂಬಂಧವಾಗಿ ನಾವು ಶಿವಾನುಭವ ಪತ್ರಿಕೆಯ ಹೋದ ಸಂಚಿಕೆಯಲ್ಲಿ ಒಂದು ವಿಸ್ತಾರವಾದ ಲೇಖವನ್ನು ಒರೆದಿದ್ದೇವೆ. ಅದರಲ್ಲಿ ಕೆಲವು ವಚನಕಾರರ ಕಾಲವನ್ನು ಕುರಿತು ವಿವೇಚನೆ ಮಾಡಿದ್ದೇವೆ. ಅದರ ಮೇಲಿಂದ ಈಗ ನಮಗೆ ಗೊತ್ತಿದ್ದ ೨೬೭ ಜನ ವಚನಕಾರರಲ್ಲಿ ಕೆಲವರು ಅಂದರೆ ಏಳೆಂಟು ಜನರು ಮಾತ್ರ ಬಸವೇಶ್ವರನಕ್ಕಿಂತಲೂ ಮೊದಲು ಆಗಿ ಹೋಗಿದ್ದರೆಂದು ಕಂಡುಬರುವದು. ಅವರು ಹಾವಿನಹಾಳಕಲ್ಲಯ್ಯ, ಬಾಹೂರ ಬೊಮ್ಮಯ್ಯ, ದೇವರದಾಸಿಮಯ್ಯ, ಇವರೇ ಮೊದಲಾದವರು ಇದ್ದಾರೆ. ಇವರ ತರುವಾಯ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪವು ಸ್ಥಾಪಿಸಲ್ಪಟ್ಟಿತು. ಅದರಲ್ಲಿ ವಚನಗಳನ್ನು ಬರೆದಂಥ ಶಿವಶರಣರು ೩೦-೪೦ ಜನರು ಮಾತ್ರ ಹೊರಡುತ್ತಾರೆ. ಉಳಿದ ೨೦೦ ಜನ ವಚನಕಾರರು ಬಸವೇಶ್ವರನ ತರುವಾಯ ಉದ್ಭವಿಸಿದವರು ಇರುತ್ತಾರೆ. ಯಾಕಂದರೆ ಅವರ ವಚನಗಳಲ್ಲೆಲ್ಲ ಬಸವೇಶ್ವರನ ಉಲ್ಲೇಖಗಳು ಹೇರಳವಾಗಿ ದೊರೆಯುತ್ತವೆ. ಆದರೆ ಮೊದಲಿನ ೭—೮ ಜನ ವಚನಕಾರರ ವಚನಗಳಲ್ಲಿ ಈ ತರದ ಉಲ್ಲೇಖಗಳು ದೊರೆಯುವದಿಲ್ಲ. ಇದಲ್ಲದೆ ಈ ವಚನಕಾರರ ಅನೇಕ ಚರಿತ್ರೆಗಳು ಉಪಲಬ್ಧವಿರುತ್ತವೆ. ಅವುಗಳಲ್ಲಿ ಅವರು ಬಸವೇಶ್ವರನ ಸಮಕಾಲೀನರೆಂಬ ಉಲ್ಲೇಖಗಳು ಇರುವದಿಲ್ಲ. ಈ ಕಾರಣಗಳ ಮೂಲಕ ಈ ೨೦೦ ಜನ ವಚನಕಾರರು ಬಸವೇಶ್ವರನ ಕಾಲದಲ್ಲಿರದೆ ಅವನ ತರುವಾಯ ಅಂದರೆ ೧೩ನೇ ಶತಮಾನದಿಂದೀಚೆಗೆ

ಆಗಿಹೋದರೆಂದು ನಾವು ಭಾವಿಸಬೇಕಾಗುತ್ತದೆ. ಇವರಲ್ಲಿ ಬಹು ಜನರು ೧೩ನೇ ಶತಮಾನದಲ್ಲಿಯೇ ಆಗಿಹೋಗಿರಬೇಕು.

ವೀರಶೈವರಲ್ಲಿ ೧೦೦೦ ಜನ ಗಣಾಧೀಶ್ವರರು ಅಲ್ಲಲ್ಲಿ ಉದ್ಭವಿಸಿ ಪ್ರಸಿದ್ಧಿಗೆ ಬಂದಿದ್ದಾರೆಂಬ ಪ್ರತೀತಿ ಇದೆ. 'ಗಣಸಹಸ್ರನಾಮ' ಎಂಬ ಹೆಸರಿನ ಕವಿತೆಯು ವೀರಶೈವರಲ್ಲಿ ಇರುತ್ತದೆ. ಲಿಂಗಪೂಜಾ ಕಾಲದಲ್ಲಿ ಇದು ಪಠಿಸಲ್ಪಡುವದುಂಟು. ಇದರಲ್ಲಿ ಹೇಳಿದ ಇವರೆಲ್ಲರೂ ಬಸವೇಶ್ವರನ ಕಾಲದವರೆಂದು ಹೇಳಲಿಕ್ಕೆ ಸಾಕಷ್ಟು ಆಧಾರಗಳಿಲ್ಲ. ಅವರಲ್ಲಿ ಅನೇಕರು ಬಸವೇಶ್ವರನಿಗೆ ಸಂಬಂಧಪಡುವದಿಲ್ಲ. ಅಲ್ಲದೆ ಬಸವೇಶ್ವರನು ಪ್ರಧಾನಿಪಟ್ಟದಲ್ಲಿದ್ದದ್ದು ೫ ವರ್ಷ ಮಾತ್ರ. ಇಷ್ಟು ಸ್ವಲ್ಪ ಅವಧಿಯಲ್ಲಿ ಇಷ್ಟು ಜನ ಶಿವಶರಣರು ಏಕಕಾಲಕ್ಕೆ ಇಡೀ ದಕ್ಷಿಣ ಹಿಂದುಸ್ತಾನದಲ್ಲೆಲ್ಲ ಉಂಟಾಗಿರಲಿಕ್ಕಿಲ್ಲ. ಅವರಲ್ಲಿ ಬಹುಜನರು ಬಸವೇಶ್ವರನ ತರುವಾಯ ಅಂದರೆ ೧೧೬೦ ರಿಂದ ೧೩೦೦ ರ ವರೆಗೂ ಕಾಲಕಾಲಕ್ಕೆ ಉದ್ಭವಿಸಿರಲಿಕ್ಕೆಬೇಕು. ಇವರ ಪ್ರಯತ್ನಗಳಿಂದಲೇ ಕರ್ನಾಟಕ ದೇಶದಲ್ಲೆಲ್ಲ ವೀರಶೈವ ಧರ್ಮವು ಕ್ರಮೇಣ ಬೆಳದಿರಬಹುದೆಂದು ತೋರುತ್ತದೆ. ಆದ್ದರಿಂದ ೧೩ನೇ ಶತಮಾನದಲ್ಲಿ ವೀರಶೈವ ಧಾರ್ಮಿಕ ಚಳುವಳಿಯು ಒಂದೇಸವನೆ ನಡವೇ ಇದ್ದದರಿಂದ ಹೀಗೆ ನೂರಾರು ಜನ ಶಿವಶರಣರು ಈ ಕಾಲದಲ್ಲಿ ಆಗಿಹೋಗಿದ್ದಾರೆ. ಮತ್ತು ಅವರಿಂದ ಒಂದು ಮಹತ್ವದ ವಾಙ್ಮಯವು ಉಂಟಾಗಿರುತ್ತದೆ.

ಆದರೆ ವೀರಶೈವ ವಾಙ್ಮಯವು ೧೩ನೇ ಶತಮಾನದಲ್ಲಿ ಉಂಟಾಗಲಿಲ್ಲೆಂಬ ತಿಳವಳಿಕೆಗೆ ಮುಖ್ಯ ಕಾರಣವು ಗತಿಸಿದ ಆರ್. ನರಸಿಂಹಾಚಾರ್ಯರು ಬರೆದಿರುವ ಕವಿಚರಿತೆಯ ಗ್ರಂಥಗಳೇ ಇರುತ್ತವೆ. ಅವರು ವಚನಕಾರರ ಕಾಲವನ್ನು ನಿಶ್ಚಯಿಸುವಲ್ಲಿ ತಪ್ಪು ಮಾಡಿದ್ದಾರೆಂದು ನಮಗೆ ತೋರುತ್ತದೆ. ಈ ಗ್ರಂಥಗಳ ಮೊದಲನೇ ಭಾಗದಲ್ಲಿ ಅವರು ೫೦-೬೦ ವಚನಕಾರರನ್ನು ಉಲ್ಲೇಖಿಸಿದ್ದಾರೆ. ಅವರೆಲ್ಲರ ಕಾಲವು ೧೧೫೦ರಿಂದ ೧೧೮೦ರ ವರೆಗೆ ಇರಬೇಕೆಂದು ಅವರು ಇದರಲ್ಲಿ ಕಾಣಿಸಿದ್ದಾರೆ. ಆದರೆ ಅವರಲ್ಲಿ ಅನೇಕರು ಬಸವನ ಸಮಕಾಲೀನರಿರುವದಿಲ್ಲ. ಈ ವಚನಕಾರರ ಚರಿತ್ರೆಗಳನ್ನು ಆರ್. ನರಸಿಂಹಾಚಾರ್ಯರು ಚನ್ನಾಗಿ ನಿರೀಕ್ಷಿಸಿರುವದಿಲ್ಲಾದ್ದರಿಂದ ಅವರಿಂದ ಈ ತಪ್ಪು ಆಗಿರುತ್ತದೆ. ಕವಿಚರಿತೆಯ ಈ ಮೊದಲನೇ ಭಾಗವು ಪ್ರಸಿದ್ಧವಾದ ಕಾಲದಲ್ಲಿ ನಾವು

ನಮ್ಮ ವಚನಶಾಸ್ತ್ರಸಾರ ಮೊದಲನೇ ಭಾಗವನ್ನು ಪ್ರಸಿದ್ಧಿಸಿದ್ದಿಲ್ಲ. ಅದು ಪ್ರಸಿದ್ಧವಾದ ಬಳಿಕ ಸುಮಾರು ೨೩೭ ವಚನಕಾರರ ಹೆಸರುಗಳು ಹೊರ ಬಿದ್ದವು. ಆಗ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ೩ನೇ ಭಾಗದಲ್ಲಿ ಹೊಸದಾಗಿ ದೊರೆವ ಈ ವಚನಕಾರರ ಹೆಸರುಗಳನ್ನೆಲ್ಲ ಪರಿಶಿಷ್ಟ ಳ ಇದರಲ್ಲಿ ಸೇರಿಸಿರುತ್ತಾರೆ. ಹೀಗೆ ಸೇರಿಸಿ ಅವರು ಅದರಲ್ಲಿ ನಮ್ಮ ಹೆಸರನ್ನು ಉಲ್ಲೇಖಿಸಿ ಪುಟ ೩೩೪ರಿಂದ ೩೭೧ರ ವರೆಗೆ ಈ ಎಲ್ಲ ವಚನಕಾರರ ಹೆಸರುಗಳನ್ನು ಬರೆದಿರುತ್ತಾರೆ ಹೀಗೆ ಬರೆಯುವಲ್ಲಿ ಅವರು ಆಯಾ ವಚನಕಾರರ ಕಾಲಗಳ ಬಗ್ಗೆ ತಪ್ಪು ತಿಳುವಳಿಕೆಗಳನ್ನು ಮಾಡಿಕೊಂಡಿದ್ದಾರೆಂದು ನಮಗೆ ತೋರುತ್ತದೆ. ಯಾಕಂದರೆ ಅವರೆಲ್ಲರೂ ಬಸವನ ಕಾಲದವರೆಂದು ಭಾವಿಸಿ ೧೧೬೦ ಈ ವರ್ಷಕ್ಕೆ ಸಮೀಪದಲ್ಲಿದ್ದರೆಂದು ಈ ಗ್ರಂಥದಲ್ಲಿ ಕಾಣಿಸಿದ್ದಾರೆ. ಆದರೆ ಹೀಗೆ ತಿಳಿಯಲಿಕ್ಕೆ ಕಾರಣವಿಲ್ಲ. ಅವರಲ್ಲಿ ಬಹು ಜನರು ೧೩೦೦ ಇಸ್ವಿಯವರೆಗೂ ಕಾಲಕಾಲಕ್ಕೆ ಆಗಿಹೋದವರಿರಬೇಕೆಂದು ಅವರ ಚರಿತ್ರೆಗಳು ಹೇಳುತ್ತವೆ. ಆರ್. ನರಸಿಂಹಾಚಾರ್ಯರು ಈ ತಪ್ಪುಮಾಡಿದ್ದರಿಂದ ನಾವು ಈ ಲೇಖದ ಆರಂಭದಲ್ಲಿ ವಿವರಿಸಿದ ಅನೇಕ ಬಗೆಯ ವಿಧಾನಗಳು ಬೇರೆ ಬೇರೆ ಪಂಡಿತರಿಂದ ಮಾಡಲ್ಪಡಹತ್ತಿವೆ.

೧೩ನೇ ಶತಮಾನದಲ್ಲಿ ವಚನಗಳಿದ್ದವೆಂಬದರ ಬಗ್ಗೆ ಶಿಲಾಶಾಸನಗಳ ಆಧಾರವೂ ನಮಗೆ ದೊರೆಯುತ್ತದೆ. ಚೌಡದಾನಪುರದಲ್ಲಿರುವ ಶಿಲಾಶಾಸನಗಳಲ್ಲಿ ವಚನಕಾರರ ತತ್ವಗಳು ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತವೆ. ಅವುಗಳ ಬಗ್ಗೆ ನಾವು ಅನೇಕ ಲೇಖಗಳನ್ನು ಬರೆದಿದ್ದೇವೆ. ಸಂಗೂರ ಶಿಲಾಶಾಸನದಲ್ಲಿ ಸಿದ್ಧರಾಮೇಶ್ವರನ ವಚನದ ಉಲ್ಲೇಖವಿದೆ. ಈ ಎರಡೂ ಗ್ರಾಮಗಳಲ್ಲಿಯ ಶಿಲಾಶಾಸನಗಳು ೧೩ನೇ ಶತಮಾನದವು ಇರುತ್ತವೆ. ಆದ್ದರಿಂದ ೧೩ನೇ ಶತಮಾನದಲ್ಲಿ ವೀರಶೈವ ವಾಙ್ಮಯವೇ ಇದ್ದಿಲ್ಲೆಂಬುದು ತೀರ ತಪ್ಪು ತಿಳುವಳಿಕೆ ಇರುತ್ತದೆ.

ವೀರಶೈವ ಧರ್ಮದ ಪ್ರಸಾರದ ಇತಿಹಾಸವು ಇನ್ನೂ ಜನರಿಗೆ ಪೂರ್ಣ ಗೊತ್ತಿರುವದಿಲ್ಲ. ಇದರಿಂದ ಬಸವೇಶ್ವರನ ತರುವಾಯ ೧೨ನೇ ಮತ್ತು ೧೩ನೇ ಶತಮಾನಗಳಲ್ಲಿ ಯಾವ ಗ್ರಂಥಕಾರರೂ ವೀರಶೈವರಲ್ಲಿ ಹುಟ್ಟಾಗಿಲ್ಲವೆಂಬ ತಿಳುವಳಿಕೆಯುಂಟಾಗಿರುತ್ತದೆ. ವೀರಶೈವರ ಧಾರ್ಮಿಕ ಚಳುವಳಿಯು ಬಸವೇಶ್ವರನ ಕಾಲದಲ್ಲಿ ಆದಂತೆಯೇ ಮುಂದಾದವರೂ

ಆಗಿಂದಾಗ್ಗೆ ಉಂಟಾಗುತ್ತಲೇ ಬಂದಿರುತ್ತದೆ. ಇಂಥ ಕಾಲಗಳಲ್ಲಿ ವೀರಶೈವ ಗ್ರಂಥಕಾರರೂ ಸಾಧುಸತ್ಪುರುಷರೂ ಉತ್ಪನ್ನವಾಗುತ್ತಲೇ ಬಂದಿದ್ದಾರೆ.

ಬಸವೇಶ್ವರನ ಕಾಲದಲ್ಲಿ ಈ ಚಳವಳಿಯು ವೊದಲು ಆರಂಭವಾಯಿತು. ಆದರೆ ಅದು ದೇಶದಲ್ಲಿ ಪ್ರಸಾರವಾಗುತ್ತಾ ಇದ್ದ ಕಾಲದಲ್ಲಿಯೇ ಅದಕ್ಕೆ ಒಂದು ದೊಡ್ಡ ಆತಂಕವು ಉತ್ಪನ್ನವಾಯಿತು. ಬಸವೇಶ್ವರನಿಗೂ ಬಿಜ್ಜಳನಿಗೂ ಮತಬೇಧಗಳುಂಟಾದದ್ದೇ ಈ ಆತಂಕವಾಗಿದೆ. ಆಗ ಬಸವೇಶ್ವರನು ಕಲ್ಯಾಣ ಪಟ್ಟಣವನ್ನು ಬಿಟ್ಟುಕೊಟ್ಟು ಕಪ್ಪಡಿ ಸಂಗಮಸಕ್ಲಿಗೆ ಹೊರಟು ಹೋದನು. ರಾಜಧಾನಿಯಲ್ಲಿ ಆಗ ಒಂದು ಕ್ರಾಂತಿಯುಂಟಾಯಿತು. ಕಡೆಗೆ ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರಿ ಬ್ರಹ್ಮಯ್ಯ, ಇವರು ವೀರಶೈವ ಸಮಾಜದ ಪ್ರಮುಖತ್ವವನ್ನು ವಹಿಸಿ, ಆತ್ಮಸಂರಕ್ಷಣೆಗಾಗಿ ಉಳವಿಯ ಘೋರಾರಣ್ಯದಲ್ಲಿ ಹೋಗಿ ಆಶ್ರಯುವನ್ನು ಪಡೆಯಬೇಕಾಯಿತು ಮತ್ತು ಅಲ್ಲಿಯೇ ಅವರು ಲಯವಾದರು.

ಆದರೆ ಈ ಅನಾಹುತದಿಂದ ವೀರಶೈವ ಧರ್ಮವು ಮುಗ್ಗಲಿಲ್ಲ. ಇದರ ಪರಿಣಾಮವಾಗಿ ದೇಶದಲ್ಲೆಲ್ಲ ಅನೇಕ ಸತ್ಪುರುಷರು ಉದಯವಾಗಿ ವೀರಶೈವ ಧರ್ಮವನ್ನು ಹೆಚ್ಚಾಗಿ ಪ್ರಸಾರವಮಾಡಿದರು. ಅಲ್ಲಮಪ್ರಭು, ಮಹಾದೇವಿಯಕ್ಕ ವೊದಲಾದವರು ಶ್ರೀಪರ್ವತ ಕ್ಷೇತ್ರವನ್ನು ಆಶ್ರಯಿಸಿದರು. ಅವರ ತರುವಾಯ ಅಲ್ಲಿಯೇ ರುದ್ರಮುನಿ, ಮುಕ್ತಿಮುನಿ, ಇವರು ಆಗ ಮಿಸಲು ಅವರ ಪ್ರಮುಖತ್ವದಲ್ಲಿ ಅಲ್ಲಿ ಕೂಡಿದ ಶಿವಶರಣರು ಸುತ್ತಲೂ ವೀರಶೈವ ಧರ್ಮವನ್ನು ಪ್ರಸಾರಗೊಳಿಸಿದರು. ಅದೇ ರೀತಿಯಾಗಿ ಕರ್ನಾಟಕದ ಪಶ್ಚಿಮ ಭಾಗದಲ್ಲಿಯೂ ಪ್ರಯತ್ನಗಳು ನಡೆದವು. ಇವುಗಳಿಗೆ ಕೇಂದ್ರಸ್ಥಾನವು ಬಾಳೇಹಳ್ಳಿಯಾಯಿತೆಂದು ನಮಗೆ ತೋರುತ್ತದೆ. ಇವುಗಳ ಪ್ರಭಾವದಿಂದ ಗ್ರಾಮಾಂತರಗಳಲ್ಲಿ ಮಠಗಳು ಸ್ಥಾಪಿಸಲ್ಪಡಹತ್ತಿದವು. ಇವುಗಳ ಮೂಲಕ ಬಸವೇಶ್ವರನು ರೂಢಗೊಳಿಸಿದ್ದ ಶಿವಾನುಭವದ ತತ್ವಗಳು ಎಲ್ಲ ಕಡೆಗೂ ಪ್ರಸಾರವಾದವು.

ಈ ಪ್ರಸಾರ ಕಾರ್ಯವು ವಚನ ಗ್ರಂಥಗಳ ಮೂಲಕವಾಗಿಯೇ ಸಾಗಿರುತ್ತದೆ. ಆಗ ಅನೇಕರು ವಚನಗಳನ್ನು ರಚಿಸಿ ದೇಶದಲ್ಲೆಲ್ಲ ಶಿವ

ಶರಣರ ತತ್ವಗಳನ್ನು ಬೀರಿದರು. ಇವರಿಂದ ಅನೇಕ ಮಹತ್ವದ ದೊಡ್ಡ ದೊಡ್ಡ ಸಮಾಜಗಳು ವೀರಶೈವ ಧರ್ಮವನ್ನು ಸ್ವೀಕರಿಸಿದವು. ಇಂಥ ಮಹತ್ಕಾರ್ಯವನು ಮಾಡಿದ ಮಠಾಧಿಕಾರಿಗಳೂ, ವಚನಕಾರರೂ ಬಸವೇಶ್ವರನನ್ನೇ ಸ್ತುತಿಸಿದ್ದಾರೆ. ಮತ್ತು ಅವನ ತತ್ವಗಳನ್ನೇ ಸಾರಿದ್ದಾರೆ. ಆದ್ದರಿಂದ ವಚನ ಗ್ರಂಥಗಳು ಬಸವೇಶ್ವರನ ತರುವಾಯ ಅಸಂಖ್ಯಾತವಾಗಿ ದೇಶದಲ್ಲೆಲ್ಲ ಹುಟ್ಟಿರುತ್ತವೆ. ಈ ಕಾರ್ಯವು ಬಸವೇಶ್ವರನ ತರುವಾಯ ಅನೇಕ ವರ್ಷಗಳ ವರೆಗೆ ನಡೆದಿರಬೇಕು. ಜೈನಧರ್ಮದ ಗ್ರಂಥಗಳು ೧೩ ನೇ ಶತಮಾನದಲ್ಲಿ ಅನೇಕವಾಗಿ ದೊರೆಯುತ್ತ ಇದ್ದರೂ ೧೪ ನೇ ಶತಮಾನದಲ್ಲಿ ಅವು ಅತ್ಯಲ್ಪವಾಗಿರುತ್ತವೆ. ಇವುಗಳ ಬದಲು ವೀರಶೈವ ಗ್ರಂಥಗಳು ಹೆಚ್ಚಾಗಿರುತ್ತವೆ. ಈ ಸ್ಥಿತಿಯನ್ನು ನೋಡಿದರೆ ಬಸವನ ತರುವಾಯ ವೀರಶೈವ ಧರ್ಮ ಪ್ರಸಾರ ಕಾರ್ಯವು ಕನಿಷ್ಟ ನೂರು ವರ್ಷಗಳ ವರೆಗಾದರೂ ನಡೆದಿರಲಿಕ್ಕೆಬೇಕೆಂದು ನಮಗೆ ತೋರುತ್ತದೆ.

ಈ ಪ್ರಸಾರ ಕಾರ್ಯವನ್ನು ಜರುಗಿಸುವಲ್ಲಿ ವಚನ ಗ್ರಂಥಗಳು ಬಹಳ ಸಹಾಯಕಾರಿಯಾಗಿರಲಿಕ್ಕೆಬೇಕು. ಇವುಗಳಿಂದ ಬಹುಜನ ಸಮಾಜದಲ್ಲಿ ಧಾರ್ಮಿಕ ತಿಳುವಳಿಕೆಯುಂಟಾಗಿ ವೀರಶೈವ ಧರ್ಮವನ್ನು ಅಸಂಖ್ಯ ಜನರು ಸ್ವೀಕರಿಸಿದರು. ಈ ಕಾರ್ಯವು ವಾಙ್ಮಯವಿಲ್ಲದೆ ಶಕ್ಯವಲ್ಲ. ಆದ್ದರಿಂದ ಬಸವೇಶ್ವರನ ಕಾಲಕ್ಕಿಂತಲೂ ಹೆಚ್ಚಾಗಿ ವಚನಕಾರರೂ ಗ್ರಂಥಕಾರರೂ ಈ ೧೩ನೇ ಶತಮಾನದಲ್ಲಿಯೇ ಉಂಟಾಗಿರಲಿಕ್ಕೆಬೇಕು. ವೀರಶೈವ ಧರ್ಮದ ಧಾರ್ಮಿಕ ಗ್ರಂಥಗಳ ಸಂಶೋಧನೆಯು ಈ ವರೆಗೆ ಆದದ್ದು ಅತ್ಯಲ್ಪವು. ಒಂದು ವೇಳೆ ಹೆಚ್ಚಾಗಿ ಶೋಧ ಮಾಡಿದ್ದಾದರೆ ಈ ಕಾಲಕ್ಕೆ ಉಂಟಾದ ವಿಸ್ತಾರವಾದ ವಾಙ್ಮಯವು ಪ್ರಕಾಶಕ್ಕೆ ಬರುವದೆಂದು ನಮಗೆ ತೋರುತ್ತದೆ.

ಈ ಧರ್ಮ ಪ್ರಸಾರದ ಚಳವಳಿಯ ಮೂಲಕ ವೀರಶೈವರ ಜನಸಂಖ್ಯೆಯು ದೇಶದಲ್ಲೆಲ್ಲ ನಿಬಿಡವಾಗಿ ಬೆಳೆಯಹತ್ತಿತು. ಇದರಿಂದ ಅವರ ಮಹತ್ವವು ಹೆಚ್ಚಾಗಹತ್ತಿತು. ಆಗಿನ ರಾಜರೂ ಮಾಂಡಲಿಕರೂ ವೀರಶೈವ ಧರ್ಮದಲ್ಲಿ ಆಗಿಹೋದ ಸತ್ಪುರುಷರನ್ನು ಬಹಳ ಮನ್ನಿಸಿದ್ದು ಕಂಡುಬರುತ್ತದೆ. ಇದು ಶಿಲಾಶಾಸನಗಳಿಂದ ಚನ್ನಾಗಿ ಗೊತ್ತಾಗುತ್ತದೆ. ಅಬ್ಬಲೂರ ಶಿಲಾಶಾಸನವು ಸುಮಾರು ೧೨೦೦ ಇಸ್ವಿಯಲ್ಲಿಯದಿದೆ. ಆದ

ರಲ್ಲಿ ಚಾಲುಕ್ಯರ ಮಾಂಡಲಿಕರಾದ ಕೇಶಿರಾಜ ಮೊದಲಾದವರೂ ಆಗಿನ ರಾಜನೂ ಕೂಡ ಅವನನ್ನು ಬಹಳವಾಗಿ ಮನ್ನಿಸಿದ್ದೂ ಅವನಿಗೆ ಉಂಬಳಿ ಹಾಕಿಕೊಟ್ಟದ್ದೂ ಉಲ್ಲೇಖವಾಗಿವೆ. ಈ ಕಾಲಕ್ಕೆ ದೇಶದಲ್ಲಿ ದೇವಗಿರಿ ಯಾದವರಾಜರ ಪ್ರಭುತ್ವವಿತ್ತು. ಅವರ ಮಾಂಡಲಿಕರು ಲಕ್ಷ್ಮೇಶ್ವರ, ತೊರಗಲ್ಲ ಮತ್ತು ಮುದಗಲ್ಲು ಇಲ್ಲಿ ಇದ್ದು ಅವರು ಶಿವಶರಣರನ್ನು ಬಹಳ ಮನ್ನಿಸುತ್ತಿದ್ದದ್ದು ಕಂಡುಬರುತ್ತದೆ. ಇದು ಕೆಳಗಿನ ಸಂಗತಿಗಳಿಂದ ಸ್ಪಷ್ಟವಾಗುತ್ತದೆ. ಭೀಮಾನದಿಯ ತೀರದಲ್ಲಿರುವ ಮುಳುಜ ಎಂಬ ಗ್ರಾಮದಲ್ಲಿ ಅಮುಗಿದೇವಯ್ಯನೆಂಬ ಪ್ರಸಿದ್ಧ ಶಿವಶರಣನಿದ್ದನು. ಯಾದವ ಅರಸನ ಸೇನಾಪತಿಗಳು ಅವನನ್ನು ಅಲ್ಲಿ ಕಂಡು ಅಲ್ಲಿಯ ಸಿದ್ಧಸೋಮನಾಥನ ದೇವಾಲಯಕ್ಕೆ ಉಂಬಳಿ ಹಾಕಿಕೊಟ್ಟದ್ದು ಅಲ್ಲಿಯ ಶಾಸನದಿಂದ ತಿಳಿಯುತ್ತಿದೆ. ಸಂಗೂರ ಎಂಬ ಗ್ರಾಮದಲ್ಲಿಯ ಶಿಲಾಶಾಸನದಲ್ಲಿ ಸಿದ್ಧರಾಮೇಶ್ವರನ ಇಷ್ಟದೇವತೆಯಾದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಒಬ್ಬ ಮಂಡಳೇಶ್ವರನು ದಾನ ಕೊಟ್ಟದ್ದು ಉಲ್ಲೇಖವಾಗಿರುತ್ತದೆ. ಅರ್ಜುನವಾಡ ಶಿಲಾಶಾಸನದಲ್ಲಿ ಬಸವೇಶ್ವರನ ವಂಶಿಕನಾದ ಹಾಲಬಸವಿದೇವನಿಗೆ ಆಗ ಪುಲಗೆರಿಯಲ್ಲಿ ಆಳುತ್ತಿದ್ದ ಯಾದವರಾಜರ ಮಾಂಡಲಿಕನೊಬ್ಬನು ಕೆಲವು ಹಕ್ಕು ಬಾಬುಗಳನ್ನು ಉಂಬಳಿ ಹಾಕಿಕೊಟ್ಟದ್ದು ಉಲ್ಲೇಖಿಸಲ್ಪಟ್ಟಿದೆ. ಈ ಪ್ರಕಾರ ಈ ೧೩ನೇ ಶತಮಾನದಲ್ಲಿ ವೀರಶೈವರ ಧರ್ಮದ ತೇಜಸ್ಸು ಎಳ್ಳಷ್ಟು ಕಡಿಮೆಯಾಗಿದ್ದಿಲ್ಲೆಂಬದು ಸ್ಪಷ್ಟವು. ಈ ಕಾಲದಲ್ಲಿ ಅನೇಕ ವಚನಕಾರರೂ ಸಾಧುಸತ್ಪುರುಷರೂ ಉಂಟಾದ್ದರಿಂದಲೇ ಈ ಸ್ಥಿತಿಯು ಉಂಟಾಗಿರಲಿಕ್ಕೆ ಬೇಕು. ಆದ್ದರಿಂದ ಈ ಶತಮಾನದಲ್ಲಿ ವೀರಶೈವರು ಸೋಮಾರಿತನದಿಂದ ಕಾಲವನ್ನು ಕಳೆಯದೆ ಧರ್ಮಪ್ರಸಾರ ಕಾರ್ಯದಲ್ಲಿ ಬಹಳ ಸಾಹಸವನ್ನು ಮಾಡಿದ್ದಾರೆ. ಇದರಿಂದ ಆಗ ಬಹು ಪ್ರಾಬಲ್ಯವನ್ನು ಹೊಂದಿದ ಜೈನ ಸಮಾಜವು ಕಡಿಮೆಕಡಿಮೆಯಾಗುತ್ತ ಬಂದಿತು. ಅದರಂತೆಯೇ ಅವರ ಗ್ರಂಥಕಾರರ ಸಂಖ್ಯೆಯೂ ಕಡಿಮೆಯಾಗುತ್ತ ಬಂದಿತು. ಆದರೆ ಹೀಗಾದದ್ದು ವೀರಶೈವರ ಬಲಾತ್ಕಾರದಿಂದಲ್ಲ. ಅವರ ಕೇವಲ ಪ್ರಚಾರ ಕಾರ್ಯಗಳಮೂಲಕ. ಹೀಗೆ ವೀರಶೈವರ ಇತಿಹಾಸವಿದ್ದು ಇದು ಇನ್ನೂ ಜನರಿಗೆ ಅಪರಿಚಿತವಾಗಿರುವದರಿಂದ ಈ ೧೩ನೇ ಶತಮಾನದಲ್ಲಿ ವೀರಶೈವ ಗ್ರಂಥಗಳೇ ಇರಲಿಲ್ಲೆಂಬ ತಿಳುವಳಿಕೆಯು ಉಂಟಾಗಿರುತ್ತದೆ.

ಆದರೆ ಮುಂದೆ ೧೩೦೩ರಿಂದ ಮುಸಲ್ಮಾನರ ದಾಳಿಗಳು ದಕ್ಷಿಣ ದೇಶದಲ್ಲಿ ಪ್ರಾರಂಭವಾದವು. ಆಗ ಮಲಿಕಕಾಫರನು ದೇವಗಿರಿ ಯಾದವ ಮತ್ತು ಹೊಯ್ಸಳ ಇವರ ರಾಜ್ಯವನ್ನು ಹಾಳು ಮಾಡಿದನು. ಇದರಿಂದ ದೇಶದಲ್ಲೆಲ್ಲ ಅರಾಜಕತೆಯುಂಟಾಯಿತು. ಆಗ ಮಾತ್ರ ವೀರಶೈವ ಧರ್ಮದ ಪ್ರಸಾರವು ನಿಂತಿರಲಿಕ್ಕೆ ಬೇಕು. ಆದರೆ ಈ ಸ್ಥಿತಿಯು ಬಹಳ ದಿವಸ ಉಳಿಯಲಿಲ್ಲ. ಯಾಕಂದರೆ ಮುಂದೆ ಆನೇಗುಂದಿಯಲ್ಲಿ ಕರ್ನಾಟಕದ ರಾಜ್ಯವು ಉಗಮಹೊಂದಿ ವಿಜಯನಗರದಲ್ಲಿ ಅದು ಸ್ಥಿರಗೊಂಡಿತು. ಇದರಿಂದ ಮುಂದೆ ಪರಧರ್ಮೀಯರ ಉಪಟಳವು ನಿಂತಿತು.

ವಿಜಯನಗರದ ರಾಜ್ಯವು ಮೊದಲು ಸ್ಥಾಪಿತವಾದ ಪ್ರದೇಶಗಳಲ್ಲಿ ಅಂದರೆ ಬಳ್ಳಾರಿ, ವಿಜಾಪುರ, ರಾಯಚೂರ ಜಿಲ್ಲೆಗಳಲ್ಲಿ ವೀರಶೈವ ಸಮಾಜದ ಜನಸಂಖ್ಯೆಯು ಬಹಳ ದಟ್ಟವಾಗಿರುತ್ತದೆ. ಆದ್ದರಿಂದ ಈ ರಾಜರ ದಂಡಾಳುಗಳಲ್ಲಿ ವೀರಶೈವರೇ ಹೆಚ್ಚಾಗಿ ಸೇರಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಇವರೇ ಮುಸಲ್ಮಾನರ ದಾಳಿಗಳನ್ನು ಮೊದಲು ಹಿಮ್ಮೆಟ್ಟಿಸಿರಲಿಕ್ಕೆ ಬೇಕು. ಆಗ ಅವರಲ್ಲಿ ಧರ್ಮದ ಬಗ್ಗೆ ತೇಜಃಪುಂಜವಾದ ಜಾಗ್ರತೆಯು ಇರಲಿಕ್ಕೆಬೇಕು. ಅಲ್ಲದೆ ಅವರ ಮಠಗಳು ಪ್ರತಿಯೊಂದು ಗ್ರಾಮದಲ್ಲಿ ಸ್ಥಾಪಿಸಲ್ಪಟ್ಟಿದ್ದವು. ಇವುಗಳಿಲ್ಲದ ಒಂದು ಚಿಕ್ಕ ಹಳ್ಳಿಯಾದರೂ ಈ ಪ್ರಾಂತದಲ್ಲಿ ಈಗಲೂ ದೊರೆಯುವದಿಲ್ಲ. ಇದರಿಂದ ಮುಸಲ್ಮಾನ ಧರ್ಮದ ಪ್ರಸಾರವು ಕರ್ನಾಟಕದಲ್ಲಿ ಹೆಚ್ಚಾಗಿ ಆಗಲಿಕ್ಕೆ ಅನುಕೂಲತೆಗಳು ಉಳಿಯಲಿಲ್ಲ.

ಇದೆಲ್ಲದರ ಪ್ರಭಾವವು ಯಾತರದೆಂಬದನ್ನು ವಾಚಕರು ಚನ್ನಾಗಿ ವಿಚಾರ ಮಾಡಬೇಕು. ಈ ಮಹತ್ವದ ಕಾಲದಲ್ಲಿ ಬಸವಾದಿ ಪ್ರಮಥರ ತತ್ವಗಳನ್ನು ಎಲ್ಲ ಕಡೆಗೆ ಹಬ್ಬಿಸಲಿಕ್ಕೆ ಅಸಂಖ್ಯ ಜನರು ೧೦೦-೧೫೦ ವರ್ಷಗಳ ವರೆಗೆ ಪ್ರಯತ್ನಸಿದರು. ಇವರ ಪ್ರಯತ್ನಗಳ ಫಲವೇ ವಚನ ವಾಙ್ಮಯವಾಗಿರುತ್ತದೆ. ಈ ಪ್ರಕಾರ ವೀರಶೈವ ಸಮಾಜದ ಧಾರ್ಮಿಕ ಇತಿಹಾಸವಿರುವದರಿಂದ ೧೩ನೇ ಶತಮಾನದಲ್ಲಿ ವೀರಶೈವ ಗ್ರಂಥಕಾರರು ಆಗಿಲ್ಲೆಂದು ತಿಳಿಯುವದು ತಪ್ಪೆಂದು ನಮಗೆ ತೋರುತ್ತದೆ.

# ವೀರಶೈವರಲ್ಲಿ ಧಾರ್ಮಿಕ ಅವನತಿ.

ಲೇಖಕರು:— ಕಲ್ಯಾಣಪ್ಪಾ ಬ್ಯಾಳಿ ಬಿ. ಎ. ಬಿ ಟಿ. ವಿಜಾಪೂರ

ಐಹಿಕ ಆಮುಷ್ಮಿಕ ಮತ್ತು ಪಾರಮಾರ್ಥಿಕ ಸುಖವನ್ನು ಒದಗಿಸಿ ಕೊಡುವದೇ ಧರ್ಮವು. ಐಹಿಕ ಸುಖವನ್ನು ಪಡೆಯಲಿಕ್ಕೆ ಕೃಷಿ, ವಾಣಿಜ್ಯ, ಕಲಾ ಕೌಶಲ್ಯ ಮೊದಲಾದ ಉದ್ಯೋಗಗಳನ್ನು ಮನುಷ್ಯನು ಮಾಡಬೇಕಾಗುತ್ತದೆ. ಮನುಷ್ಯನು ತನ್ನ ಆಹಾರ, ಬಟ್ಟೆ, ವಸತಿ ಸಂಪತ್ತುಗಳನ್ನು ಗಳಿಸಿ ಸುಖದಿಂದ ಜೀವಿಸಲು ಒಂದಿಲ್ಲೊಂದು ಕಾಯಕವು ಅತ್ಯಾವಶ್ಯಕವು. ಒಬ್ಬರ ಹಂಗಿನ ಅನ್ನವನ್ನು ಉಣ್ಣುವದಾಗಲಿ, ಭಿಕ್ಷೆಯಿಂದ ಜೀವಿಸುವುದಾಗಲಿ, ಸ್ವಾಭಿಮಾನಿಯಾದ ಮನುಷ್ಯನಿಗೆ ಲಾಂಛನಾಸ್ಪದವು. ಅಂತೆಯೇ ನಮ್ಮ ಶರಣರು ಕಾಯಕಕ್ಕೆ ಅತ್ಯಂತ ಮಹತ್ವಕೊಟ್ಟು "ಕಾಯಕವೇ ಕೈಲಾಸ"ವೆಂದು ಹೇಳಿದರು. ಹೊಟ್ಟೆಯ ಉದ್ಯೋಗ ಮಾಡುವವರಲ್ಲಿ ವೀರಶೈವರು ಅಷ್ಟೇನೂ ಹಿಂದುಳಿದಿಲ್ಲ. ಆದರೆ ಈಗಿನ ಯಾಂತ್ರಿಕ ಯುಗದಲ್ಲಿ ಹಿಂದಿನ ಎಷ್ಟೋ ಕಾಯಕ ಕಸಬುಗಳು ಲೋಪವಾಗಿ ನಮ್ಮವರಲ್ಲಿ ಅನೇಕರಿಗೆ ಹೊಟ್ಟೆಯ ಪ್ರಶ್ನೆಯು ಬಹು ಬಿಕ್ಕಟ್ಟಿನದಾಗಿದೆ. ನಮ್ಮವರ ವ್ಯಾಪಾರವು ಹೆರವರ ಕೈಸೇರಿದೆ. ಎಲ್ಲಿಯ ವರೆಗೆ ನಮ್ಮ ಸಮಾಜವು ಸರ್ವ ಕಲಾ ಕೌಶಲ್ಯಗಳಿಂದ ಸಂಪತ್ತು ಗಳಿಸಿ ಸುಖದಿಂದ ಬಾಳುವದಿಲ್ಲವೋ ಅಲ್ಲಿಯ ವರೆಗೂ ನಮ್ಮ ಧರ್ಮಕ್ಕೆ ಅವನತಿಯು ತಪ್ಪಿದ್ದಲ್ಲ.

ಮನುಷ್ಯನು ಸಂಪತ್ತುಗಳಿಸಿ ತನ್ನ ಮತ್ತು ತನ್ನ ಕುಟುಂಬದ ಸುಖವನ್ನಷ್ಟೇ ನೋಡಿಕೊಂಡರೆ ತೀರದು. ಅದಕ್ಕಾಗಿ ಆತನು ದಾನ ಧರ್ಮ, ಪರೋಪಕಾರ, ಸಮಾಜಸೇವೆ, ದೇಶ ಹಿತ, ಸಾಹಿತ್ಯಸೇವೆ, ಮೊದಲಾದ ಕಾರ್ಯಗಳಿಗೆ ತನುಮನಧನದಿಂದ ಸಹಾಯ ಮಾಡಬೇಕಾಗುವದು.

ಆದರಿಂದ ಈ ಲೋಕದಲ್ಲಿ ಅವನಿಗೆ ಕೀರ್ತಿಯು ದೊರೆಯುವದು. ಆ ಕೀರ್ತಿಯೇ ಆಮುಷ್ಮಿಕ ಸುಖವು. ಈ ಸುಖವು ಪರಲೋಕದಲ್ಲಿ ಸಿಗುತ್ತದೆಂಬ ಮಾತು ಪುಸಿಯು. ಅದು ಇಲ್ಲಿಯೇ ದೊರೆಯುತ್ತದೆ. ತಾನು ಸತ್ತರೂ ಕೆಲಕಾಲ ಆ ಕೀರ್ತಿಯು ಇಲ್ಲಿ ಉಳಿಯುತ್ತದೆ., ಪರೋಪ

ಕಾರ, ದಾನ-ಧರ್ಮ ಮಾಡುವಲ್ಲಿ ವೀರಶೈವರು ಎಂದೂ ಹಿಂದುಳಿದಿರುವದಿಲ್ಲ. ಎಷ್ಟೋ ಅನ್ಯ ಸಮಾಜದವರು ಕೂಡ ಇವರಿಂದ ಉಪಕಾರ ಹೊಂದಿರುವರು. ಆದರೆ ನಮ್ಮ ಸಮಾಜದ ಎಷ್ಟೋ ಹಣವು ಅಜ್ಞಾನ, ಮೂಢ ಭಾವನೆ, ನ್ಯಾಯ ಮೊದಲಾದವುಗಳ ದೆಶೆಯಿಂದ ಅನಾಶ್ರಯವಾಗಿ ಹಾಳಾಗುತ್ತಿರುವದು ಬಹು ವಿಷಾದದ ಸಂಗತಿಯು. ಎಲ್ಲಿಯವರೆಗೆ ವೀರಶೈವರಿಗೆ ವ್ಯರ್ಥವಾಗಿ ಹಾಳುಮಾಡಬಾರದೆಂಬ ಬುದ್ಧಿಯು ಬರುವದಿಲ್ಲವೋ ಅಲ್ಲಿಯ ವರೆಗೂ ಧಾರ್ಮಿಕ ಅವನತಿಯು ನಮ್ಮ ಬೆನ್ನ ಬಿಡದು.

ದೇವರು ಮನುಷ್ಯನಿಗೆ ಯಾವ ಯಾವ ತರಹದ ಶಕ್ತಿಗಳನ್ನು ದಯಪಾಲಿಸಿರುವನೋ ಅವುಗಳ ಉಪಾಸನೆಯನ್ನು ನಿಸ್ವಾರ್ಥ ಬುದ್ಧಿಯಿಂದ ಲೋಕ ಹಿತಾರ್ಥವಾಗಿ ಮಾಡುವದು ಮನುಷ್ಯನ ಧರ್ಮವು.

ಸ್ವಾರ್ಥ ಪರಾರ್ಥ ಕಾರ್ಯಗಳಿಗಿಂತಲೂ ಅಧಿಕವಾದ ಇನ್ನೊಂದು ಶಕ್ತಿಯಿರುವದು. ಅದೇ ಅಧ್ಯಾತ್ಮಿಕ ಶಕ್ತಿಯು. ಹಿಂದಕ್ಕೆ ವೀರಶೈವರಲ್ಲಿ ಆಧ್ಯಾತ್ಮಿಕ ಜ್ಯೋತಿಯು ಎಷ್ಟು ಜಾಜ್ವಲಮಾನವಾಗಿತ್ತೆಂಬುದನ್ನು ತೋರಿಸಲಿಕ್ಕೆ ಹಳ್ಳಿಪಳ್ಳಿಗಳಲ್ಲಿ ಸಹ ಸ್ಥಾಪಿಸಲ್ಪಟ್ಟಿರುವ ಮಠಗಳೇ ಸಾಕ್ಷಿ. ಆದರೆ ಈಗಿನ ಕಾಲದಲ್ಲಿ ಆ ಜ್ಯೋತಿಯು ಬಹಳ ಮಸಕಾಳಾಗಿರುವದು. ನಮ್ಮವರಲ್ಲಿ ಅಧ್ಯಾತ್ಮಿಕ ಜ್ಯೋತಿಯು ಮಸಕಾದ್ದರಿಂದಲೇ ನಮ್ಮ ನಮ್ಮೊಳಗೆ ಒಕ್ಕಟ್ಟಿಲ್ಲದೆ ಹೆಚ್ಚುಕಡಿಮೆಗಳು ಅಳತೆಗೆಟ್ಟು ಬೆಳೆದು ಹೋಗಿವೆ. ಪರಮಾನುಭವದ ಸವಿಯುಂಡು ತಾವು ನಿತ್ಯಸುಖದೊಳೋಲಾಡಿ ಆ ಅನುಭವವನ್ನು ಭಕ್ತಾದಿಗಳಿಗುಣಿಸಿ ಸುಖಸಾಗರದಲ್ಲಿ ತೇಲಾಡಿಸುವ ಮಹಾಸ್ವಾಮಿಗಳು ಈಗಿನ ಕಾಲದಲ್ಲಿ ಅತ್ಯಂತ ವಿರಳವಾಗಿರುವದರಿಂದ ನಮ್ಮವರಲ್ಲನೇಕರು ಪರಮತೀಯರನ್ನು ಗುರುಗಳನ್ನಾಗಿ ಮಾಡಿಕೊಳ್ಳುವ ದುರ್ಧರ ಪ್ರಸಂಗ ಬಂದೊದಗಿರುವದು. ಎಷ್ಟೋ ಅಜ್ಞಾನಿಗಳಾದ ನಮ್ಮ ಸಮಾಜಬಾಂಧವರು ಕ್ರಿಸ್ತಿ ಮುಸಲ್ಮಾನ ಧರ್ಮಗಳಲ್ಲಿ ಸೇರಹತ್ತಿದ್ದಾರೆ. ಅಧ್ಯಾತ್ಮಿಕ ತೇಜಸ್ಸಿನ ಅಭಾವವು ಧಾರ್ಮಿಕ ಅವನತಿಯ ಲಕ್ಷಣವು. ಎಲ್ಲಿಯ ವರೆಗೆ ನಮ್ಮ ಸ್ವಾಮಿಗಳು ನಿಜವಾದ ಷಟ್‌ಸ್ಥಲ ಧರ್ಮತತ್ವಗಳನ್ನರಿತು ಆಚರಿಸಿ ಆ ಲಿಂಗಾಂಗ ಸಾಮರಸ್ಯದ ಒಳ್ಳುಣಿಸನ್ನು ಭಕ್ತಾದಿಗಳಿಗೆ ನೀಡುವದಿಲ್ಲವೋ ಅಲ್ಲಿಯ ವರೆಗೂ ಧಾರ್ಮಿಕ ಅವನತಿಯು ಕಟ್ಟಿಟ್ಟದ್ದೇ.

ಧರ್ಮದ ಏಳ್ಗೆಗೆ ವಿಶಾಲದೃಷ್ಟಿ, ಸ್ವಧರ್ಮಾಭಿಮಾನ, ಸುವಿಚಾರಯುಕ್ತವಾದ ಆಚಾರಗಳು ಅವಶ್ಯವಾದವುಗಳು. ಈ ಜಗತ್ತಿನಲ್ಲಿ ಯಾವ ಧರ್ಮವೂ ಕೆಡಕಲ್ಲ. ಎಲ್ಲ ಧರ್ಮಗಳು ಭೂತದಯೆ, ಸದಾಚಾರ, ಸದ್ಭಕ್ತಿ ಮೊದಲಾದ ಮಾನವನ ನಿಜಸುಖದ ಮಾರ್ಗಗಳನ್ನೇ ಪ್ರತಿಪಾದಿಸುತ್ತವೆ. ಎಲ್ಲ ಧರ್ಮಗಳಲ್ಲಿಯೂ ಆತ್ಮೋನ್ನತಿಯ ಸಾಧನಗಳು ಉಂಟೇ ಉಂಟು. ಸಂಕುಚಿತ ದೃಷ್ಟಿಯುಳ್ಳ ಜನರು ಉಳಿದ ಧರ್ಮಗಳ ತತ್ವಗಳನ್ನು ತಿಳಿದುಕೊಳ್ಳಲೆತ್ನಿಸದೆ ತಮ್ಮ ಧರ್ಮವೇ ಶ್ರೇಷ್ಠವೆಂದೂ ಇತರ ಧರ್ಮಗಳು ಕಡಿಮೆಯೆಂದೂ ತಿಳಿಯುತ್ತಾರೆ. ಆದರೆ ವಿಶ್ವವ್ಯಾಪಕ ದೃಷ್ಟಿಯುಳ್ಳವರು ಎಲ್ಲ ಧರ್ಮಗಳ ರಹಸ್ಯವನ್ನರಿತು ಅವುಗಳ ಬಗ್ಗೆ ಸಹಾನುಭೂತಿಯುಳ್ಳವರಾಗುತ್ತಾರೆ. ತಮ್ಮ ಧರ್ಮವೇ ಹೆಚ್ಚು ಅನ್ಯ ಧರ್ಮವು ಕನಿಷ್ಠವೆಂದು ಜಂಭಕೊಚ್ಚುವವರಿಗೆ ಧರ್ಮಲಂಡರೆನ್ನುತ್ತಾರೆ. ಧರ್ಮಲಂಡತನವು ಧರ್ಮದ ಅವನತಿಯ ಲಕ್ಷಣವೆಂದೇ ಹೇಳಬಹುದು. ತನ್ನ ಧರ್ಮದ ಬಗ್ಗೆ ಒಳ್ಳೆ ಅಭಿಮಾನವಿರುವದೇನೂ ಕೆಡಕಲ್ಲ. ಆದರೆ ತನ್ನ ಧರ್ಮವು ಶ್ರೇಷ್ಠವೆಂದು ಸಾಧಿಸಲಿಕ್ಕೆ ಹೋಗಿ ಅನ್ಯಮತಗಳನ್ನು ತೆಗಳುವದು ನಮಗೆ ಬೇಡ. ವೀರಶೈವರು ವಿಶ್ವವ್ಯಾಪಕ ದೃಷ್ಟಿಯುಳ್ಳವರಾಗಬೇಕು.

ಕೆಲವು ಪಂಡಿತರು ಈಗಿನ ಯಾಂತ್ರಿಕ ಯುಗದಲ್ಲಿ ಧರ್ಮ-ಧರ್ಮವೆಂದು ಬಡಬಡಿಸುವದು ಮೂರ್ಖತನವೆಂತಲೂ, ಮನುಷ್ಯನಿಗೆ ಬೇಕಾದ ಧರ್ಮದಲ್ಲಿ ಸೇರಲಿಕ್ಕೆ ಸ್ವಾತಂತ್ರ್ಯವಿರಬೇಕೆಂತಲೂ ಐಹಿಕ ಸುಖಕ್ಕೆ ಬೇಕಾಗುವ ಸ್ವಾತಂತ್ರ್ಯ, ಸಂಪತ್ತು, ಶಕ್ತಿಗಳನ್ನು ಬೆಳಿಸಿ ದೇಶಕಾರ್ಯವನ್ನು ಮಾಡಿದರೆ ತೀರಿತೆಂತಲೂ ಪ್ರತಿಪಾದಿಸುವರು. ಆದರೆ ಮನುಷ್ಯನು ತನ್ನ ದೇಶದ ಸುಖಸಂಪತ್ತು, ಕಲಾಕೌಶಲ್ಯ, ಸ್ವಾತಂತ್ರ್ಯ ಸ್ವದೇಶಾಭಿಮಾನಗಳನ್ನು ಹೆಚ್ಚಿಸಿಕೊಳ್ಳುವದಾದರೂ ಧರ್ಮವೇ ಆಗಿದೆ. ಆದಾಗ್ಯೂ ಮನುಷ್ಯನು ಸಮಾಜ ಪ್ರಾಣಿಯಾದ್ದರಿಂದ ಅವನು ಒಂದಿಲ್ಲೊಂದು ಸಮಾಜಕ್ಕೆ ಇಲ್ಲವೆ ಮತಕ್ಕೆ ಸಂಬಂಧಪಡಲೇಬೇಕಾಗುತ್ತದೆ. ಒಂದು ಸಮಾಜಪ್ರಾಣಿಯಾಗಿ ಬೇಕಾದ ಹಾಗೆ ರಾಷ್ಟ್ರಕಾರ್ಯಗಳನ್ನು ಮಾಡಬಹುದು. ತಮ್ಮ ಧರ್ಮವೇ ತಮಗೆ ಬೇಡವೆಂದು ಅದನ್ನು ಅಲ್ಲಗಳೆಯುವವರಿಗೆ ಧರ್ಮಭ್ರಷ್ಟರೆಂದೆನ್ನುವರು. ಭಗವದ್ಗೀತೆಯಲ್ಲಿ "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ"

ಎಂದು ಹೇಳಿದ ಪ್ರಕಾರ ಮನುಷ್ಯನು ಎಂಥ ಪ್ರಸಂಗಬಂದರೂ ತನ್ನ ಧರ್ಮಕ್ಕೆ ಅಂಟಿಕೊಳ್ಳುವದೇ ಶ್ರೇಯಸ್ಕರವು. ತನ್ನ ಧರ್ಮವು ಕೆಟ್ಟಿದ್ದರೆ ಅದನ್ನು ಸುಧಾರಿಸಲಿಕ್ಕೆ ಯತ್ನಿಸಬೇಕಲ್ಲದೆ ಅದನ್ನು ಹೀಯಾಳಿಸಿ ಅನ್ಯ ಧರ್ಮವನ್ನಂಗೀಕರಿಸುವದು ಹೇಯಾಸ್ಪದವು. ಆದುದರಿಂದ ತಾವು ಹುಟ್ಟಿ ಬೆಳೆದ ಧರ್ಮವನ್ನು ಉದ್ಧಾರ ಮಾಡದೆ ನಿಂದಿಸುವ ಧರ್ಮಭ್ರಷ್ಟರು ನಮಗೆ ಬೇಡ. ಅದನ್ನು ತ್ಯಜಿಸಿ ಹೋಗುವ ಧರ್ಮದ್ರೋಹಿಗಳೂ ನಮಗೆ ಬೇಡ. ಅದರ ಕುಂದುಕೊರತೆಗಳನ್ನು ನೀಗಿ ಕಳಕಳಿಯಿಂದ ಸೇವೆ ಮಾಡುವ ಸ್ವಧರ್ಮಾಭಿಮಾನಿಗಳು ನಮಗೆ ಬೇಕು. ಸ್ವಧರ್ಮಾಭಿಶೂನ್ಯತೆಯು ಧರ್ಮದ ಅವನತಿಯ ಲಕ್ಷಣವು.

ಕೆಲವರು ಧರ್ಮದ ತಿರುಳನ್ನರಿದು ಆಚರಿಸದೆ ಏನೋ ರೂಢಿವಿಡಿದ ಬಂದ ಕ್ರಿಯಾದಿಗಳನ್ನು ಮೂಢ ಭಾವನೆಯಿಂದ ಯಂತ್ರಗಳಂತೆ ನಡೆಯಿಸುತ್ತಿರುವರು. ಕೆಲವರು ಅನ್ಯರನ್ನು ವಂಚಿಸಲಿಕ್ಕೆ ಪೂಜೆಯ ಆಡಂಬರವನ್ನು ಬೆಳೆಸುವರು. ಧರ್ಮದ್ರೋಹಿಗಳಿಗಿಂತಲೂ ಈ ಮೂಢ ನಂಬಿಗೆಯ ಜನಗಳು ಎಷ್ಟೋ ಪಟ್ಟು ಮೇಲು. ಯಾಕಂದರೆ ಅವರಿಗೆ ಒಂದು ವೇಳೆ ಧರ್ಮತತ್ವಗಳು ತಿಳಿಯದಿದ್ದರೂ ಅವರು ಸರ್ವಥಾ ಧರ್ಮತ್ಯಾಗವನ್ನು ಮಾಡುವದಿಲ್ಲ. ಆದರೆ ಧರ್ಮದ ಮರ್ಮವನ್ನರಿಯದೆ ಮೂಕ ಕುರಿಗಳಂತೆ ಗತಾನುಗತಿಕೋ ಲೋಕಃ " ಎಂದು ಸಾಗುವದಾದರೂ ಧರ್ಮದ ಅವನತಿಯ ಲಕ್ಷಣವೆಂದೇ ತಿಳಿಯಬೇಕು. ಶಿವಪೂಜಾದಿ ಕ್ರಿಯೆಗಳನ್ನು ಯಥೇಷ್ಟವಾಗಿ ಮಾಡಲೊಲ್ಲರೇಕೆ? ಅದಕ್ಕೆ ಯಾರ ಆಕ್ಷೇಪವೂ ಇಲ್ಲ. ಆದರೆ ದೇಶಕಾಲ ಪರಿಸ್ಥಿತಿಗನುಸರಿಸಿ ನಿಜವಾದ ಲಿಂಗಪೂಜೆ ಯಾವದೆಂಬದನ್ನು ವಿಚಾರಿಸಿ ನಡೆದುಕೊಳ್ಳುವದೇ ಧರ್ಮವು. ಧರ್ಮದ ನಿಜವಾದ ರಹಸ್ಯವನ್ನರಿಯದೆ, ಮನಃಪೂರ್ವಕವಾದ ಭಕ್ತಿಯು ಹೊರಸೂಸದೆ ಯಾಂತ್ರಿಕ ರೀತಿಯಿಂದ ವಿಧಾನಗಳನ್ನು ನಡೆಯಿಸುವ ಮೂಢ ಭಾವನೆಯಾಗಲಿ ಬಾಹ್ಯಾಡಂಬರವಾಗಲಿ ನಮಗೆ ಬೇಡ. ಮೂಢಭಾವನೆ ಬಾಹ್ಯಾಡಂಬರಗಳು ಧರ್ಮದ ಅವನತಿಯ ಹೆಗ್ಗುರುತುಗಳು.

ಪರಧರ್ಮಸಹಿಷ್ಣುತೆಯೇ ಧರ್ಮದ ಜೀವಾಳವಾದಂತೆ ಸ್ವಧರ್ಮರಕ್ಷಣೆಯೂ ಧರ್ಮದ ಮುಖ್ಯ ಲಕ್ಷಣವು. ಆದರೆ ಹಿಂದಕ್ಕೆ ಕರ್ನಾಟಕದಲ್ಲಿ ಒಂದು ಧರ್ಮದ ಪ್ರತಿಷ್ಠೆಯನ್ನು ಇನ್ನೊಂದು ಧರ್ಮದ ಮೇಲೆ

ಸ್ಥಾಪಿಸುವುದಕ್ಕಾಗಿ ಅರಸರ ಮುಂದೆ ಎಷ್ಟೋ ವಾಗ್ವಾದಗಳು ನಡೆದಿವೆ. ಯುದ್ಧ ರಕ್ತಪಾತಗಳೂ ಸಂಭವಿಸಿವೆ. ಜೈನ-ಶೈವ-ವೈಷ್ಣವ ಪಂಡಿತರಲ್ಲಿ ವಾಕ್ಕಲಹಗಳೂ, ದಿಗ್ವಿಜಯ ಜಯಪತ್ರಗಳೂ ನಡೆದು ಶಿವಾಲಯಗಳಲ್ಲಿ ವಿಷ್ಣು ಮೂರ್ತಿಗಳೂ, ವಿಷ್ಣು ಮಂದಿರಗಳಲ್ಲಿ ಸ್ಥಾವರಲಿಂಗಗಳೂ, ಜಿನಮಂದಿರಗಳಲ್ಲಿ ಈಶ್ವರ ವಿಗ್ರಹಗಳೂ ಸ್ಥಾಪಿಸಲ್ಪಟ್ಟಿವೆ. ಇಂಗ್ಲಂಡದೊಳಗೆ ಪ್ರೊಟೆಸ್ಟಂಟ—ರೋಮನ್‌ಕ್ಯಾಥೋಲಿಕ್‌ರ ನಡುವೆ ಕಲಹವೆದ್ದು ಎಷ್ಟೋ ಧರ್ಮವೀರರು ಆಹುತಿಯಾಗಿದ್ದಾರೆ. ಮುಸಲ್ಮಾನರು ಒಂದು ಕೈಯಲ್ಲಿ ಖಡ್ಗವನ್ನೂ ಇನ್ನೊಂದು ಕೈಯಲ್ಲಿ ಕುರಾನವನ್ನೂ ಹಿಡಿದು ಇಸ್ಲಾಂ ಧರ್ಮವೇ ಶ್ರೇಷ್ಠವೆಂದು ಪ್ರಸ್ಥಾಪಿಸಲಿಕ್ಕೆ ಎಷ್ಟೋ ಅತ್ಯಾಚಾರಗಳನ್ನು ಮಾಡಿದ್ದು ಇತಿಹಾಸದಿಂದ ಕಂಡು ಬರುತ್ತದೆ. ಆದರೆ ಇತ್ತೀಚೆಗೆ ಆಗಿ ಹೋದ ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ, ರಾಮಕೃಷ್ಣ ಪರಮಹಂಸ, ಮ. ಗಾಂಧಿ ಮೊದಲಾದ ವಿಭೂತಿಗಳು ಯಾವ ಧರ್ಮವನ್ನೂ ಅಲ್ಲಗಳೆಯದೆ ಎಲ್ಲ ಧರ್ಮಗಳಲ್ಲಿಯೂ ಸತ್ಯವುಂಟೆಂದು ಹೇಳಿ ಅವುಗಳ ಬಗ್ಗೆ ಸಹಾನುಭೂತಿಯನ್ನು ತೋರಿಸುವ ಪಾಠವನ್ನು ಜಗತ್ತಿಗೆ ಕಲಿಸಿಕೊಟ್ಟಿದ್ದಾರೆ. ವೀರಶೈವರಾದರೂ ಸ್ವಧರ್ಮದಲ್ಲಿ ಶ್ರದ್ಧೆಯಿಡುವಂತೆ ಪರಧರ್ಮಗಳಲ್ಲಿ ಸಹಾನುಭೂತಿಯುಳ್ಳವರಾಗಿರುವದು ವಿಹಿತವು. ಆದರೆ ಪರಧರ್ಮೀಯರು ನಮ್ಮ ಮತದ ಮೇಲೆ ಆಕ್ರಮಣ ಮಾಡಿದರೆ ನಾವು ಒಕ್ಕಟ್ಟಿನಿಂದ ಅವರನ್ನು ಎದುರಿಸುವದೂ ಧರ್ಮವೇ. ಯಾವ ಕಾಲಕ್ಕೆ ನಮ್ಮ ಧರ್ಮದ ಮೇಲೆ ಎಂಥ ಆಘಾತಗಳು ಬಂದಾವೆಂಬುವದರ ನಿಯಮವಿಲ್ಲ. ಆದುದರಿಂದ ನಾವು ಸುಸಂಘಟಿತರಾಗಿ ಸ್ವಧರ್ಮ ರಕ್ಷಣೆಯನ್ನು ಮಾಡಿಕೊಳ್ಳುವದು ನಮ್ಮ ಕರ್ತವ್ಯವು. ವೀರಶೈವರಲ್ಲಿ ಅಂಥ ಸಂಘಟನೆಯಿಲ್ಲದ್ದರಿಂದ ಅದೊಂದು ಧರ್ಮದ ಅವನತಿಯ ಲಕ್ಷಣವೆಂದೇ ಹೇಳಬೇಕು.

ವೀರಶೈವರಲ್ಲಿ ತಾರತಮ್ಯಗಳ ಒಳಪಂಗಡಗಳು ಮಿತಿಮೀರಿ ಬೆಳೆದದ್ದು ಅವನತಿಯ ದೊಡ್ಡ ಕುರುಹಾಗಿರುವದು. ಬಸವಾದಿ ಪ್ರಮಥರು ಶ್ರುತ್ಯಾಗಮಗಳನ್ನೊಳಕೊಂಡ ವೀರಶೈವ ಮತವನ್ನು ವಿಶ್ವವ್ಯಾಪಕ ದೃಷ್ಟಿಯಿಂದ ಪ್ರಸಾರ ಮಾಡಿದರು. ರೂಢಿಗತವಾದ ವರ್ಣಾಶ್ರಮಧರ್ಮದ ವಿರುದ್ಧ ಕ್ರಾಂತಿಯನ್ನು ಮಾಡಿದರು. ಜಗನ್ಮಾನ್ಯವಾದ ತತ್ವಗಳನ್ನು ಹರಡಿ ಬೇರಾದ ಮುಮುಕ್ಷುಗಳಿಗೆ ಇದನ್ನು ಮುಕ್ತದ್ವಾ

ರವನ್ನಾಗಿ ಮಾಡಿದರು. ಆದರೆ ಬರಬರುತ್ತ ವರ್ಣಾಶ್ರಮಗಳ ಸಂಸರ್ಗದಿಂದ ನಮ್ಮವರು ನಮ್ಮ ತತ್ವಗಳನ್ನು ಮರೆತು ಶರಣರ ಮಾರ್ಗಕ್ಕೆ ಕಲಂಕ ಹಚ್ಚುತ್ತಿರುವರು, ಗುರುಲಿಂಗ ಜಂಗಮವು ಒಂದೆಂಬ ಮತದಲ್ಲಿ ಗುರುಗಳು ಹೆಚ್ಚೋ ಜಂಗಮರು ಹೆಚ್ಚೋ ಎಂಬ ವಿಷಯವಾಗಿ ದೊಡ್ಡ ಕೋಲಾಹಲವೆದ್ದು ವಾತಾವರಣವನ್ನೆಲ್ಲಾ ಕಲುಷಿತ ಮಾಡಿ ಬಿಟ್ಟಿದೆ. ಭಕ್ತ ಮಾಹೇಶ್ವರರಲ್ಲಿ ಕುಲಭೇದವಿಲ್ಲೆಂಬ ತತ್ವವನ್ನು ಮರೆತು ಭಕ್ತರ ಮೇಲೆ ಮಹೇಶ್ವರ ವರ್ಗವು ತನ್ನ ವರ್ಚಸ್ಸನ್ನು ಬಹು ದಿನಗಳಿಂದ ನಡೆಯಿಸುತ್ತ ಬಂದಿದೆ. ಭಕ್ತಭಕ್ತರಲ್ಲಿ ತಾರತಮ್ಯಗಳನ್ನೆಣಿಸುವದು ಮಹಾಪಾಪವೆಂದು ವೀರಶೈವ ಮತವು ಹೇಳುತ್ತಿದ್ದರೂ ಒಳಪಂಗಡಗಳು ಹೆಚ್ಚಾಗಿ ಪರಸ್ಪರರಲ್ಲಿ ಅನ್ನಪಾನ, ಶರೀರ ಸಂಬಂಧಗಳು ಲೋಪವಾಗಿವೆ. ನಮ್ಮ ಧರ್ಮವು ಜಗತ್ತಿನಲ್ಲಿ ಎಲ್ಲಕ್ಕೂ ಶ್ರೇಷ್ಠವೆಂದು ಹೆಮ್ಮೆಪಡುವ ನಾವು ಹೆರವರಿಂದ ಶೂದ್ರರೆನಿಸಿಕೊಂಡು ನಮ್ಮೊಳಗೆ ಒಬ್ಬನು ಇನ್ನೊಬ್ಬನಿಗಿಂತ ಅಧಿಕನೆಂದು ಹೇಳಿಕೊಳ್ಳುವ ಕೀಳ್ತನೆಗೆ ಇಳಿದು ಬಿಟ್ಟಿದ್ದೇವೆ. ಆದುದರಿಂದ ಕ್ಷುದ್ರವಾದ ತಾರತಮ್ಯಗಳೂ ಒಳಪಂಗಡಗಳೂ ಎಲ್ಲಿಯವರೆಗೆ ಅಳಿದು ಹೋಗುವದಿಲ್ಲವೋ ಅಲ್ಲಿಯವರೆಗೂ ಅವನತಿಯು ನಮ್ಮಿಂದ ತೊಲಗಲಾರದು.

ಒಟ್ಟಿನ ಮೇಲೆ ನಮ್ಮ ಧರ್ಮಕ್ಕೆ ಎಡೆಗೊಂಡ ಅವನತಿಯಳಿದು ಉನ್ನತಿಯು ಬೆಳಗಬೇಕಾದರೆ ನಮ್ಮಲ್ಲಿ ಎಲ್ಲತರದ ಕಾಯಕಗಳ ಪ್ರಸಾರ ಸಮಾಜದಲ್ಲಿ ಸಂಪತ್ತಿನ ಸದ್ವಿನಿಯೋಗ, ಭಕ್ತರಲ್ಲಿಯೂ ಸ್ವಾಮಿಗಳಲ್ಲಿಯೂ ಶಿವಾನುಭವಜ್ಞಾನ, ವಿಶಾಲದೃಷ್ಟಿ, ಸ್ವಧರ್ಮಾಭಿಮಾನ, ಸುವಿಚಾರ ಯುಕ್ತವಾದ ಆಚಾರ, ಸಂಘಟನೆ, ಒಳಪಂಗಡಗಳ ದೂರೀಕರಣ ಇವೆಲ್ಲ ವಿಷಯಗಳನ್ನು ಪ್ರತಿಯೊಬ್ಬ ವೀರಶೈವನು ಅವಶ್ಯವಾಗಿ ಗಮನಿಸಬೇಕು.

---

# ಶಿವಾನುಭವ ಸಂಘಗಳ ಸ್ಥಾಪನೆ.

( ಸಂಪಾದಕ )

ಈ ವರೆಗೆ ಶಿವಾನುಭವದ ಪತ್ರಿಕೆಯ ದ್ವಾರಾ ಶಿವಶರಣರ ಅನೇಕ ವಚನಗ್ರಂಥಗಳು ಪ್ರಕಟವಾಗಿರುತ್ತವೆ. ಇವುಗಳ ಸಂಖ್ಯೆಯು ಈಗ ೬೦ ರ ವರೆಗೆ ಬಂದಿರುತ್ತದೆ. ನಾವು ವಚನಶಾಸ್ತ್ರಸಾರ ಭಾಗ ೧, ಭಾಗ ೨ ಮತ್ತು ಭಾಗ ೩ ಇವುಗಳನ್ನು ಸ್ವತಂತ್ರವಾಗಿ ಮುದ್ರಿಸಿದ್ದು ಅವುಗಳಲ್ಲಿ ಶಿವಶರಣರ ವಿಚಾರಗಳು ಒತ್ತಟ್ಟಿಗೆ ಕ್ರೋಡೀಕರಿಸಲ್ಪಟ್ಟಿವೆ. ಇವುಗಳಲ್ಲಿ ಶಿವಶರಣರ ಸಾಮಾಜಿಕ, ನೈತಿಕ ಮತ್ತು ಧಾರ್ಮಿಕ ಸಾಮಾನ್ಯ ತತ್ವಗಳಲ್ಲದೆ, ವೀರಶೈವ ಸಿದ್ಧಾಂತವೂ ಕೂಡ ಶಿವಶರಣರ ಉಕ್ತಿಗಳ ಮೂಲಕವಾಗಿಯೇ ವಿವೇಚಿಸಲ್ಪಟ್ಟಿರುತ್ತವೆ. ಈ ಪ್ರಕಾರ ನಾವು ಕೇವಲ ಗ್ರಂಥ ಪ್ರಕಟನಾ ಕಾರ್ಯದಲ್ಲಿ ತೊಡಗಿದ್ದರಿಂದ ಅವುಗಳನ್ನು ಗ್ರಾಮಾಂತರಗಳಲ್ಲಿ ಪ್ರಸಾರಪಡಿಸುವ ಮಹತ್ವದ ಕಾರ್ಯವು ಈ ವರೆಗೂ ನಮ್ಮಿಂದ ಏನೂ ಆಗಿರುವದಿಲ್ಲ. ಇಷ್ಟೇ ಅಲ್ಲ, ವಿಜಾಪುರ ಪಟ್ಟಣವನ್ನು ಬಿಟ್ಟು ಹೊರಗೆ ಹೋಗಲು ಸಹ ನಮಗೆ ಅವಕಾಶವು ಸಿಕ್ಕಿರುವದಿಲ್ಲ. ಅನೇಕ ಮಹನೀಯರು ನಮ್ಮನ್ನು ಉಪನ್ಯಾಸಗಳಿಗೋಸ್ಕರ ಆಗಿಂದಾಗ್ಗೆ ಕರೆಯುವದುಂಟು. ಆದರೆ ಹೀಗೆ ನಾಲ್ಕಾರು ದಿವಸ ನಾವು ಹೋದದ್ದಾದರೆ ನಮ್ಮ ಆಫೀಸಿನಲ್ಲಿ ನಡೆದಿರುವ ಕಾರ್ಯಗಳಿಗೆ ತಡೆಯುಂಟಾಗಿ ನಮಗೆ ಆರ್ಥಿಕ ಹಾನಿಯುಂಟಾಗುತ್ತದೆ. ಇದಲ್ಲದೆ ಪ್ರವಾಸ ಮಾಡುವಂತೆ ನಮ್ಮ ದೇಹಸ್ಥಿತಿಯೂ ಇರುವದಿಲ್ಲ. ಆದ್ದರಿಂದ ಈ ಅಪರಿಹಾರ್ಯ ಕಾರಣಗಳಿಗೋಸ್ಕರ ನಾವು ಅನೇಕರ ಆಮಂತ್ರಣವನ್ನು ನಿರಾಕರಿಸಬೇಕಾಯಿತು. ಇದಕ್ಕೋಸ್ಕರ ನಾವು ಅವರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

ಶಿವಶರಣರ ವಾಙ್ಮಯವನ್ನು ಗ್ರಾಮಾಂತರಗಳಲ್ಲಿ ಪ್ರಸಾರ ಮಾಡುವ ಕಾರ್ಯವನ್ನು ನಾವು ಪ್ರತ್ಯಕ್ಷವಾಗಿ ಕೈಕೊಳ್ಳುವದು ಕೆಲವು ವಿಶೇಷ ಕಾರಣಗಳಿಗೋಸ್ಕರ ಅವಶ್ಯವೆಂದು ನಮಗೆ ತೋರಿದ್ದರಿಂದ ಈ ವರ್ಷದಲ್ಲಿ ಈ ಕಾರ್ಯದಲ್ಲಿ ತೊಡಗಿ ಏಳೆಂಟು ತಿಂಗಳುಗಳಾದವು. ಇದರಲ್ಲಿ ಬಂದ ಅನುಭವವನ್ನು ನಾವು ವಾಚಕರ ತಿಳುವಳಿಕೆಗೋಸ್ಕರ ಇಲ್ಲಿ ನಿವೇದಿಸುತ್ತೇವೆ.

ಈ ಕಾರ್ಯವನ್ನು ಪ್ರಾರಂಭಿಸುವಲ್ಲಿ ಬಸವಾದಿ ಪ್ರಮಥರು ಪೂರ್ವ ಕಾಲದಲ್ಲಿ ಯಾವ ಮಾರ್ಗವನ್ನು ಕೈಕೊಂಡಿದ್ದರೋ ಅವರ ಅನುಕರಣ ವನ್ನು ಮಾಡುವದು ಉಚಿತವಾಗಿರುತ್ತದೆ. ಅವರು ಶಿವಾನುಭವ ಮಂಟಪ ಗಳನ್ನು ಸ್ಥಾಪಿಸಿ ಶಿವಾನುಭವದ ಕಾರ್ಯಗಳನ್ನು ಜರುಗಿಸಿದರು. ಅದೇ ರೀತಿಯಾಗಿ ವೀರಶೈವ ಸಮಾಜದವರು ಎಲ್ಲೆಲ್ಲಿಯೂ ಶಿವಾನುಭವದ ಮಂಟಪಗಳನ್ನು ಸ್ಥಾಪಿಸತಕ್ಕದ್ದು ಮತ್ತು ಶಿವಶರಣರು ಹೇಗೆ ಇವು ಗಳಲ್ಲಿ ಶಿವಾನುಭವದ ವಿಷಯಗಳನ್ನು ಚರ್ಚಿಸುತ್ತಿದ್ದರೋ ಹಾಗೆಯೇ ಚರ್ಚಿಸತಕ್ಕದ್ದು ಮತ್ತು ಅವುಗಳಂತೆ ನಡೆಯಲೂ ಶಕ್ಯವಿದ್ದಷ್ಟರಮಟ್ಟಿಗೆ ಪ್ರವರ್ತರಾಗತಕ್ಕದ್ದು. ಈ ರೀತಿಯನ್ನು ಕೈಕೊಂಡರೆ ಕಾರ್ಯಗಳು ತೀವ್ರ ಜರುಗಲಾರವೆಂದು ಅನೇಕರು ಆಕ್ಷೇಪಿಸಬಹುದು. ಇದು ನಿಜವೂ ಇರಬಹುದು. ಆದರೆ ಪ್ರಕೃತ ಸ್ಥಿತಿಯಲ್ಲಿ ಈ ರೀತಿಯನ್ನು ಅನುಸರಿ ಸುವದರಿಂದಲೇ ಗ್ರಾಮಗಳಲ್ಲಿ ಸ್ಥಾಯಿಕ ಪರಿಣಾಮಗಳಾಗುವವೆಂದು ವಾಚಕರು ಸ್ವಲ್ಪ ವಿಚಾರಮಾಡಿದ್ದಾದರೆ ಅವರಿಗೂ ತೋರದಿರದೆಂದು ನಾವು ಭಾವಿಸಿದ್ದೇವೆ.

ಶಿವಾನುಭವ ಸಂಘಗಳಲ್ಲಿ ಕಾರ್ಯ ಮಾಡುವವರಲ್ಲಿ ಮೊದಲು ಶಿವಶರಣರ ವಿಚಾರಗಳ ಬಗ್ಗೆ ದೃಢವಾದ ವಿಶ್ವಾಸವು ಬೇಕು, ಇಂಥ ವರು ನಿಯಮಿತ ಕಾಲದಲ್ಲಿ ತಮ್ಮ ಗ್ರಾಮದಲ್ಲಿ ಕೂಡುತ್ತಿರಬೇಕು, ವಚನ ಶಾಸ್ತ್ರದಲ್ಲಿಯ ತತ್ವಗಳನ್ನು ವಿವೇಚಿಸಬೇಕು ಮತ್ತು ಅವುಗಳಂತೆ ನಡೆ ಯಲೂ ಪ್ರಯತ್ನಿಸಬೇಕು. ಈ ಕಾರ್ಯ ಮಾಡಲಪೇಕ್ಷಿಸುವವರ ಹೆಸರು ಗಳನ್ನು ಸಂಪಾದಿಸುವದಕ್ಕೋಸ್ಕರ ಶಿವಾನುಭವ ಪತ್ರಿಕೆಯ ದ್ವಾರಾ ಎಲ್ಲ ಕಡೆಗೂ ಪತ್ರಿಕೆಗಳನ್ನು ಕಳುಹಿಸಿದೆವು. ಹಾಗೆಯೇ ನಮ್ಮ ವಾರಪತ್ರಿ ಕೆಯಾದ ನವಕರ್ನಾಟಕ ಪತ್ರಿಕೆಯಲ್ಲಿಯೂ ಈ ವಿಷಯವನ್ನು ಕುರಿತು ಮೇಲಿಂದ ಮೇಲೆ ಪ್ರಸ್ತಾಪಿಸುತ್ತಾ ಬಂದೆವು. ಈ ಪ್ರಯತ್ನಗಳ ಮೂಲ ಕವಾಗಿ ಅನೇಕ ಗ್ರಾಮಗಳಲ್ಲಿಯವರು ತಮ್ಮಲ್ಲಿ ಶಿವಾನುಭವ ಸಂಘಗ ಳನ್ನು ಸ್ಥಾಪಿಸಲಿಕ್ಕೆ ಮುಂದಾದರು. ಅವರು ಶಿವಶರಣರ ತತ್ವಗಳು ಮಾನ್ಯವಿದ್ದಂಥವರ ಹೆಸರಗಳನ್ನು ನಮ್ಮ ಕಡೆಗೆ ಕಳುಹಿಸುತ್ತಾ ಬಂದರು. ಹೀಗೆ ಅವರು ಕಳಿಸಿದ ಕೂಡಲೆ ವಾರದಲ್ಲಿ ಒಂದು ದಿವಸ ಅವರು ಕೂಡಿಕೊಂಡು ಧರ್ಮತತ್ವಗಳನ್ನು ಚರ್ಚಿಸುತ್ತ ಇರಲು ಸೂಚಿಸಿದೆವು. ಆದರೆ ಈ ಕಾರ್ಯಕ್ಕೆ ಗ್ರಂಥಗಳ ಸಹಾಯವು ಬಹಳ ಅವಶ್ಯವಾ

ದುದು. ಆದ್ದರಿಂದ ನಾವು ಶಿವಾನುಭವ ಗ್ರಂಥಮಾಲೆಯಲ್ಲಿರುವ 'ನೈತಿಕ ಮತ್ತು ಭಕ್ತಿಯ ವಚನಗಳು' ಮತ್ತು 'ಲಿಂಗ ಮತ್ತು ಪರಮಾತ್ಮ' ಈ ಎರಡು ಗ್ರಂಥಗಳನ್ನು ಉಚಿತವಾಗಿ ಅವರಿಗೆ ಕಳುಹಿಸುತ್ತ ಬಂದೆವು. ಇದರಿಂದ ಅನೇಕ ಗ್ರಾಮದವರು ಬಹುಶಃ ಸೋಮವಾರ ದಿವಸ ನೆರೆದು ಶಿವಶರಣರ ಉಕ್ತಿಗಳನ್ನು ಓದುತ್ತಲಿದ್ದಾರೆ. ಅನೇಕ ಗ್ರಾಮಗಳಲ್ಲಿಯವರು ತಮ್ಮ ಸಂಘಗಳ ವರದಿಗಳನ್ನು ನಮ್ಮ ಕಡೆಗೆ ಕಳುಹಿಸುತ್ತಾ ಇದ್ದಾರೆ. ಅವುಗಳ ವಿವರಗಳನ್ನು ನಾವು ನವಕರ್ನಾಟಕ ಪತ್ರಿಕೆಯಲ್ಲಿ ಆಗಿಂದಾಗ್ಗೆ ಪ್ರಸಿದ್ಧಿಸುತ್ತಾ ಬಂದಿದ್ದೇವೆ.

ಈ ಕಾರ್ಯವನ್ನು ಅನೇಕ ಮಹಾಸ್ವಾಮಿಗಳವರೂ ಶರಣ ವಾಙ್ಮಯಪ್ರೇಮಿಗಳಾದ ಅನೇಕ ಸದ್ಗೃಹಸ್ಥರೂ ಮಾಡುತ್ತ ಬಂದಿದ್ದಾರೆ. ಅವರು ಈ ಕಾರ್ಯವನ್ನು ಯಾವ ತರದ ಫಲಾಪೇಕ್ಷೆಯನ್ನು ಮಾಡದೆ ಕೇವಲ ನಿಃಸ್ವಾರ್ಥ ಬುದ್ಧಿಯಿಂದ ಮಾಡುತ್ತಲಿದ್ದಾರೆ. ಅವರು ವೃತ್ತಪತ್ರಿಕೆಗಳ ಮೂಲಕ ತಮ್ಮ ಹೆಸರು ಜನರಲ್ಲಿ ಪ್ರಸಿದ್ಧವಾಗಲೆಂದು ಎಂದೂ ಅಪೇಕ್ಷಿಸಿರುವದಿಲ್ಲ. ಇದಕ್ಕೋಸ್ಕರ ಸಮಾಜವೆಲ್ಲವೂ ಅವರಿಗೆ ಋಣಿಯಾಗಿರುತ್ತದೆ.

ಶಿವಾನುಭವ ಸಂಘಗಳು ವಿಜಾಪುರ ಜಿಲ್ಹೆ ಮತ್ತು ಬೆಳಗಾವ ಜಿಲ್ಹೆ ಇಲ್ಲಿಯ ಗ್ರಾಮಗಳಲ್ಲಿ ಹೆಚ್ಚಾಗಿ ಸ್ಥಾಪಿಸಲ್ಪಟ್ಟಿರುತ್ತವೆ. ಇಲ್ಲಿಯ ಅನೇಕ ಸಂಘಗಳು ಚೆನ್ನಾಗಿ ಕೆಲಸ ಮಾಡಹತ್ತಿರುತ್ತವೆ. ಧಾರವಾಡ ಜಿಲ್ಹೆಯಲ್ಲಿ ಕಲಘಟಗಿ, ರೋಣ, ಹುಬ್ಬಳ್ಳಿ, ಮತ್ತು ರಾಣೇಬೆನ್ನೂರ ಈ ತಾಲೂಕುಗಳಲ್ಲಿ ಮಾತ್ರ ಇವು ಉಂಟಾಗಿರುತ್ತವೆ. ಅವುಗಳಲ್ಲಿ ಹುಬ್ಬಳ್ಳಿ ಮತ್ತು ಕಲಘಟಗಿ ಈ ತಾಲೂಕಗಳಲ್ಲಿಯವು ಹೆಚ್ಚಿಗೆ ಚಟುವಟಿಕೆಯನ್ನು ತೋರಿಸುತ್ತಲಿವೆ. ಮೈಸೂರ ಪ್ರಾಂತದಲ್ಲಿ ಶಿವಮೊಗ್ಗಾ, ಹಾಸನ, ಬೆಂಗಳೂರ, ಮತ್ತು ತುಮಕೂರ ಈ ಜಿಲ್ಹೆಗಳಲ್ಲಿಯ ಕೆಲವು ಗ್ರಾಮಗಳಿಂದ ನಮಗೆ ಹೆಸರುಗಳು ಬಂದಿರುತ್ತವೆ. ಆದರೆ ಅವುಗಳಲ್ಲಿ ಯಾವವೂ ಕಾರ್ಯ ತತ್ಪರತೆಯನ್ನು ತೋರಿಸಿರುವದಿಲ್ಲ. ಆದರೆ ಕೊಡಗು ಪ್ರಾಂತದಲ್ಲಿ ಕೆಲವು ಸ್ವಾಮಿಗಳ ವಿಶೇಷ ಪ್ರಯತ್ನಗಳ ಮೂಲಕ ವಿಶೇಷ ಉತ್ಸಾಹವು ಕಂಡು ಬರುತ್ತಿದೆ. ಇದು ಬಹು ಸಮಾಧಾನಕರವು. ಬಳ್ಳಾರಿ ಜಿಲ್ಹೆಯಲ್ಲಿ ಸಂಘವನ್ನು ನಡಿಸುವ ಪ್ರಯತ್ನವು ನಡೆದಿದ್ದು ಒಂದೇ ಒಂದು ಗ್ರಾಮದಲ್ಲಿ. ಈ ಜಿಲ್ಹೆಯ ಪರಿಸ್ಥಿತಿಯು ಏನೋ ಒಂದು

ಕಾರಣದಿಂದ ತೃಪ್ತಿಕರವಾಗಿ ತೋರುವದಿಲ್ಲ. ನಿಜಾಂ ಇಲಾಖೆಯಲ್ಲಿ ಶಿವಾನುಭವ ಮಂಟಪಗಳನ್ನು ಸ್ಥಾಪಿಸುವ ಬಗ್ಗೆ ಅನೇಕರು ಪ್ರಯತ್ನಗಳನ್ನು ಮಾಡುತ್ತ ಇದ್ದಾರೆ. ಆದರೆ ಅದು ಅತ್ಯಂತ ಹಿಂದುಳಿದ ದೇಶವು. ಆದ್ದರಿಂದ ಅಲ್ಲಿ ಪ್ರಗತಿಯು ಸಾವಕಾಶವಾಗಿರುತ್ತದೆ. ಮಹಾರಾಷ್ಟ್ರ ಮತ್ತು ಆಂಧ್ರ ದೇಶಗಳಲ್ಲಿಯ ಗ್ರಾಮುಗಳಲ್ಲಿ ಕನ್ನಡ ಭಾಷೆಯಲ್ಲಿ ಓದಬಲ್ಲವರ ಸಂಖ್ಯೆಯು ಅತ್ಯಲ್ಪವಾಗಿರುತ್ತದೆ. ಆದ್ದರಿಂದ ಅಲ್ಲಿ ಶಿವಾನುಭವ ಮಂಟಪಗಳು ಸ್ಥಾಪಿತವಾಗುವದೂ, ಅವುಗಳು ನಡೆಯುವದೂ ದುಸ್ತರವು. ಅಲ್ಲದೆ ಅಲ್ಲಿ ವೀರಶೈವರ ಸಂಖ್ಯೆಯು ಗ್ರಾಮುಗಳಲ್ಲಿ ಅತ್ಯಲ್ಪವಾಗಿರುತ್ತದೆ. ಮತ್ತು ಅವರಾದರೂ ಶಿಕ್ಷಣದಲ್ಲಿ ಬಹಳ ಹಿಂದುಳಿದವರು. ಆದರಿಂದ ಇಲ್ಲಿ ವೀರಶೈವ ಧರ್ಮದ ಚಟುವಟಿಕೆಗಳಾಗಲಿಕ್ಕೆ ಆತಂಕಗಳು ಉತ್ಪನ್ನವಾಗುತ್ತಲಿವೆ.

ಈ ವೇಳೆಗೆ ಶಿವಾನುಭವ ಸಂಘಗಳು ಸ್ಥಾಪಿತವಾಗಿರುವ ಗ್ರಾಮುಗಳ ಹೆಸರುಗಳನ್ನು ನಾವು ಇಲ್ಲಿ ಕೊಡುತ್ತೇವೆ.

ವಿಜಾಪುರ ಜಿಲ್ಹೆ:— (೧) ಬಂಥನಾಳ ತಾ. ಇಂಡಿ, (೨) ಶಿರಶ್ಯಾಡ ತಾ. ಇಂಡಿ, (೩) ಗುಡೂರ ತಾ. ಹುನಗುಂದ, (೪) ನಾಗಠಾಣ ತಾ. ವಿಜಾಪುರ, (೫) ಚಡಚಣ ತಾ. ಇಂಡಿ, (೬) ಲೋಣಿ ಸಂ. ಸಾಂಗಲಿ (೭) ನಿವರಗಿ ತಾ. ಇಂಡಿ, (೮) ಉಮದಿ ಸಂ. ಜತ್ತಿ, (೯) ತದ್ದೇವಾಡಿ ತಾ. ಇಂಡಿ, (೧೦) ಜೊಳಚಗೋಡ ತಾ. ಬದಾಮಿ, (೧೧) ಢವಳಗಿ ತಾ. ಮುದ್ದೇಬಿಹಾಳ, (೧೨) ಬೇಲೂರ ತಾ. ಬದಾಮಿ, (೧೩) ಲಚ್ಯಾಣ ತಾ. ಇಂಡಿ, (೧೪) ಢಾಣಕಶಿರೂರ ತಾ. ಬದಾಮಿ, (೧೫) ಬಬಲೇಶ್ವರ ತಾ. ವಿಜಾಪುರ, (೧೬) ಸಿಂದಗಿ ತಾ. ಸಿಂದಗಿ, (೧೭) ಇಳಕಲ್ಲ ತಾ. ಹುನಗುಂದ (೧೮) ವಿಜಾಪುರ ತಾ. ವಿಜಾಪುರ, (೧೯) ಜತ್ತಿ ಸಂ. ಜತ್ತಿ, (೨೦) ಕನಮಡಿ ತಾ. ವಿಜಾಪುರ, (೨೧) ಟಾಕಳಿ ತಾ. ಇಂಡಿ, (೨೨) ದಾಶ್ಯಾಳ ತಾ. ವಿಜಾಪುರ, (೨೩) ಬೂದೀಹಾಳ ತಾ. ಬದಾಮಿ.

ಬೆಳಗಾವ ಜಿಲ್ಹೆ:— (೨೪) ತೆಲಸಂಗ ತಾ. ಅಥಣಿ, (೨೫) ಹಾಲಳ್ಳಿ ತಾ. ಅಥಣಿ, (೨೬) ಸವದಿ ತಾ. ಅಥಣಿ, (೨೭) ಹಿಪ್ಪರಗಿ ತಾ. ಅಥಣಿ, (೨೮) ಜನವಾಡ ತಾ. ಅಥಣಿ, (೨೯) ಯಮಕನಮರ್ಡಿ ತಾ. ಹುಕ್ಕೇರಿ, (೩೦) ವಂಟಮುರಿ ತಾ. ಹುಕ್ಕೇರಿ, (೩೧) ನೇಸರಗಿ

# ತೆಲುಗು ಜೊಮ್ಮಯ್ಯನ ಇಷ್ಟ ಪ್ರಾಣಲಿಂಗಗಳ ಸಾಧನೆ.

ತೆಲಗು ಜೊಮ್ಮಯ್ಯನು ಶಿವಶರಣರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ. ಅವನು ಪೆರ್ಮಾಡಿರಾಯ ಅಂದರೆ ವಿಕ್ರಮಾದಿತ್ಯ ರಾಜನಲ್ಲಿ ಮಂತ್ರಿಯಾಗಿದ್ದನು. ಅವನು ಇನ್ನೊಬ್ಬ ಶಿವಶರಣನಾದ ಕೇಶಿರಾಜನ ಸಮಕಾಲೀನನಾಗಿದ್ದನು. ತೆಲಗು ಜೊಮ್ಮಯ್ಯನು ಲಿಂಗವನ್ನು ಬಿಟ್ಟು ಇತರ ದೇವತೆಗಳಿಗೆ ಎಂದೂ ನಮಸ್ಕಾರ ಮಾಡುವದಿಲ್ಲೆಂಬ ನಿಯಮವನ್ನು ಇಟ್ಟುಕೊಂಡು ಆದರಂತೆ ಆಚರಿಸುವವನಾಗಿದ್ದನು.

ಅವನು ತನ್ನ ರಾಜ್ಯಕಾರಭಾರದಲ್ಲಿ ಶಿವಶರಣರ ತತ್ವಗಳನ್ನು ಎಲ್ಲ ಕಡೆಗೂ ಪ್ರಚಾರ ಮಾಡುವ ಕಾರ್ಯವನ್ನು ಕೈಕೊಂಡಿದ್ದನು. ಅದ್ದರಿಂದ ನಾಡಿನಲ್ಲಿ ಎಲ್ಲ ಕಡೆಗೂ ಶಿವಾಚಾರ ಶಿವಭಕ್ತಿಗಳು ಬಹಳ ಪ್ರಬಲವಾಗಿದ್ದವು.

ಹೀಗೆ ತೆಲಗು ಜೊಮ್ಮಯ್ಯನು ರಾಜ್ಯವಾಳುತ್ತಿರಲು ಒಂದು ದಿವಸ ಅವನು ಅರಸನ ಒಡ್ಡೋಲಗಕ್ಕೆ ಹೋದಕಾಲದಲ್ಲಿ ಅಲ್ಲಿ ಒಬ್ಬ ಪುರಾಣಿಕನು ಪುರಾಣವನ್ನು ಹೇಳುತ್ತಾ ಇದ್ದ. ಆದರಲ್ಲಿ ಅವನು ಶಿವಮತ್ತು ವಿಷ್ಣು ಇವರ ವಿಷಯವಾಗಿ ಪುರಾಣ ಹೇಳುತ್ತಿದ್ದುದನ್ನು ಕೇಳಿದನು. ಆಗ ಅವನು ಶಿವನ ವಿಷಯವಾಗಿ ನಿಂದಾಯುಕ್ತವಾಗಿ ವಿವರಣೆಗಳನ್ನು ಮಾಡುತ್ತ ಇದ್ದುದು ತಿಳಿಯಿತು. ಗಂಗೆಯು ವಿಷ್ಣುವಿನ ಪಾದದಲ್ಲಿ ಹುಟ್ಟಿದಳು, ಶಿವನು ಅಲ್ಪ ದೇವತೆಯು, ಹೀಗೆ ಶಿವನಿಂದೆಯನ್ನು ಮಾಡುತ್ತಿದ್ದದನ್ನು ಕೇಳಿ ತೆಲಗು ಜೊಮ್ಮಯ್ಯನು ಕೋಪಗೊಂಡು ಅಲ್ಲಿಯೇ ಅವನನ್ನು ಇರಿದು ಕೊಂದುಹಾಕಿಬಿಟ್ಟನು. ಮತ್ತು ತನ್ನ ಮನೆಗೆ ಹೋದನು.

ಆ ಕಾಲದಲ್ಲಿ ರಾಜನು ಮಹಡಿಯಲ್ಲಿ ಇದ್ದು ಪುರಾಣಿಕನ ದೆಸೆಯ ಮಧ್ಯದಲ್ಲಿ ನಿಂತದ್ದನ್ನು ಕೇಳಿ ಹೀಗೇಕಾಯಿತೆಂದು ಶೋಧ ಮಾಡುತ್ತಿರಲು ತೆಲಗು ಜೊಮ್ಮಯ್ಯನು ಪುರಾಣಿಕನನ್ನು ಕೊಂದುಹಾಕಿರುವದು ತಿಳಿದುಬಂದಿತು. ಆಗ ಅರಸನು ಒಡ್ಡೋಲಗಕ್ಕೆ ಬರಬೇಕೆಂದು ಜೊಮ್ಮಯ್ಯನಿಗೆ ಹೇಳಿಕಳಿಸಿದನು.

ಪೆರ್ಮಾಡಿರಾಯನ ಹೆಂಡತಿಯು ಹೆಸರು ಲಕುಮಾದೇವಿಯು ಅವಳು ಲಿಂಗಧಾರಣೆಯಾಗಿ ಶಿವಲಿಂಗಾರ್ಚನೆಯಲ್ಲಿ ಆಸಕ್ತಳು.ಅವಳು ಮಂತ್ರಿಯಾದಜೊಮ್ಮಣ್ಣನಲ್ಲಿದ್ದ ಲಿಂಗಭಕ್ತಿಯನ್ನು ನೋಡಿ ಅವನಿಗೆ ಅತ್ಯಂತ ಒಲಿದವಳಾಗಿ ಅವಳು ಅವನನ್ನು ನೋಡಿ ಸಂತೋಷಪಡುತ್ತಿದ್ದಳು. ಅವಳು ಇತಿಹಾಸ ಪ್ರಸಿದ್ಧಳಾಗಿದ್ದಾಳೆ.ಅವಳು ಜೊಮ್ಮಯ್ಯನಿಂದ ಅರಮನೆಯಲ್ಲಾದ ಪ್ರಮಾದವನ್ನು ಅರಿತುವಳಾಗಿ ಅವನನ್ನು ಅರಸನು ಕರಿಸಿದ್ದಾನೆಂಬುದನ್ನು ತಿಳಿದು ಅವನನ್ನು ಈ ಆಪತ್ತಿನಿಂದ ಉಳಿಸಬೇಕೆಂದು ಬಯಸಿ ಒಂದು ಉಪಾಯವನ್ನು ಯೋಜಿಸಿದಳು. ಅದು ಏನಂದರೆ:— ಜೊಮ್ಮಯ್ಯನು ಅರಸನು ಭವಿ ಎಂದು ತಿಳಿದು ಅವನಿಗೆ ಅವನು ಎಂದೂ ನಮಸ್ಕರಿಸುವದಿಲ್ಲ. ಈ ಕಾಲದಲ್ಲಿ ನಾನು ಅವನು ಅವನಿಗೆ ನಮಸ್ಕರಿಸುವಂತೆ ಮಾಡಿದ್ದಾದರೆ ಅರಸನ ಕೋಪವು ಅಡಗುವದು ಎಂದು ಭಾವಿಸಿ ಶಿವಭಕ್ತೆಯಾದ ಅವಳು ಓಲಗದಲ್ಲಿ ಅರಸನ ಹಿಂಬದಿಯಲ್ಲಿ ನಿಂತುಕೊಂಡು ತನ್ನ ಪ್ರಾಣಲಿಂಗವನ್ನು ಅರಸನು ಅರಿಯದಂತೆ ಅವನ ಹಿಂಬದಿಗೆ ಎತ್ತಿಕೊಂಡು ನಿಂತುಕೊಂಡಳು. ಇದರ ಉದ್ದೇಶವು ಜೊಮ್ಮಯ್ಯನು ಅರಸನೆದುರಿಗೆ ಬಂದಾಗ ತನ್ನೆದುರಿಗೆ ಆ ಲಿಂಗವನ್ನು ಕಂಡು ಅದಕ್ಕೆ ನಮಸ್ಕರಿಸುವನು. ಹೀಗೆ ಅವನು ನಮಸ್ಕರಿಸಲು ರಾಜನು ತನಗೆಯೇ ನಮಸ್ಕರಿಸಿದನೆಂದು ಅವನು ಭಾವಿಸಿ ಅವನಿಗೆ ಪ್ರೀತನಾಗುವನು ಎಂದು ತಿಳಿದು ಅವಳು ಈ ಉಪಾಯವನ್ನು ಯೋಜಿಸಿದ್ದಳು.

ಸ್ವಲ್ಪ ಹೊತ್ತಿನಲ್ಲಿ ಜೊಮ್ಮಯ್ಯನು ಓಲಗವನ್ನು ಪ್ರವೇಶಿಸಿ ಅರಸನ ಸಮ್ಮುಖಕ್ಕೆ ನಡೆದು ಬರುತ್ತಿರಲು ಅವನು ತನ್ನ ಇದಿರಿಗೆ ಲಕುಮಾದೇವಿಯ ಕೈಯಲ್ಲಿ ಒಂದು ಲಿಂಗವು ಹೊಳೆಯುತ್ತಿರುವದನ್ನು ಕಂಡು ಅವನಲ್ಲಿ ನಿಜಭಕ್ತಿಯುಂಟಾಯಿತು. ಅದರ ಭರದಲ್ಲಿ ಅವನು ಅರಸನ ಎದುರಿನಲ್ಲಿ ಸಾಷ್ಟಾಂಗ ಹಾಕಿದನು. ಅರಸನು ಇವನ್ನು ನೋಡಿ ಆಶ್ಚರ್ಯಚಕಿತನಾದನು.

ಆದರೆ ಅಷ್ಟರಲ್ಲಿ ಒಂದು ಅದ್ಭುತವಾಯಿತು. ಲಕುಮಾದೇವಿಯು ಕೈಯಲ್ಲಿ ಪ್ರಕಾಶಿಸುತ್ತಿದ್ದ ಆ ಲಿಂಗವು ಅರಸನ ಹಿಂದೆ ಉಳಿಯದೆ ಅದು ತಾನೇ ಮುಂದುವರಿದು ಗಗನವೇ ತನ್ನ ಆಸನವಾಗಿ ಇಟ್ಟುಕೊಂಡಂತೆ ಸಭಾಮಧ್ಯದಲ್ಲಿ ಅಂತರಾಳದಲ್ಲಿ ಬಂದು ನಿಂತಿತು. ಅರಸನು ಅದನ್ನು ನೋಡಿ

ರಂಜದಿರೆಂದೋಂದೆರಡಡಿಯನಿದಿರಾಗಿ ನಡೆದು ಜಡಿದು ನುಡಿದು ಸಹಿ ಘಡಸಾವವನ ಮನೆಯಾನೆಗೆ ಶಾಶ್ವತನ ಮನೆಯಾನೆ ತೊಲಗುವದಲ್ಲಿಂ ತೆಗೆ ತೆಗೆ ನಿಲ್ಲು ನಿಲ್ಲಿತ್ತ ಬಾರದಿರೆನ್ನಾಣೆಯೆಂದೆತ್ತಿ ಹಸ್ತನಿವಾರಣೆಯಿಂದಂ ಹೂಂಕರಿಸಿ ನಡೆತರ್ಪ ಮದದಾನೆ ಭೋಂಕನೆ ನಿಂದು ತಾಳವಟ್ಟವುಂ ತೂಗದೊಡಲನೊಲೆಯದಗ್ರಪಲ್ಲವಮನಲುಗದೆ ಸುಂಡಿಲಂ ಭಂಡಾರಿಸಿ ದಂತೆ ಕಂಡರಿಸಿದಂತೆ ನಟ್ಟು ನಿಂದಾರೆಕಾರರಿರಿದೊಡಂ ಮಾವುತರಾ ರ್ಪೋಡಂ ನೆರವ ನೆರವಿ ಬೊಬ್ಬಿಟ್ಟೊಡಂ ಮಣ್ಣಾನೆಯಂತೆ ಮಿಡುಕ ದಿರೆ ಕಂಡು ಕಂಡು ಭಯಂಗೊಂಡು ನೋಡುತಿರ್ಪ ಪಸಾಯಿತರು ಪರಿದು ಬಂದರಸಂಗೆ ಮೆಯ್ಯಿಕ್ಕಿನಿಂದು.

ಎಲೆ ದೇವಾ ನಮ್ಮ ಪಟ್ಟದಾನೆ ಮದಂಗೊಂಡು ಸೂರ್ಯವೀಧಿ ಯೊಳಟ್ಟುತ್ತಂ ತುಳಿವುತ್ತಂ ಬರ್ಪಲ್ಲಿ ಬಾಹೂರ ಬೊಮ್ಮಯ್ಯನೆಂದೆಂಬ ಪರಭಕ್ತಂ ತೊಲಗದಂಜದೈಯ್ತಂದು ಸಾವವನ ಮನೆಯಾನೆಗೆ ಶಾಶ್ವ ತನ ಮನೆಯಾನೆ ಓಸರಿಸುವದಲ್ಲೆಂದಾಜ್ಞಾಪಿಸೆ ಮತ್ತ ಗಜಮತ್ತಿತ್ತ ಮಿಸುಕವೆ ನಿಂದಿರ್ದಪುದೆಂದು ಬಿನ್ನವಿಸಿದ ಬಿನ್ನಪದೊಡನೆ ಪೆರ್ಮಾಡಿ ರಾಯನಿರ್ದ ಪರಿಯೊಳಿದ್ದು ಕಾಲ್ನಡೆಯೊಳೈತಂದು ಮುಂದಿರ್ದಾನೆ ಯುಮಂ ಕಟ್ಟಿದಿರೊಳಿರ್ದ ಬೊಮ್ಮಯ್ಯಗಳುಮಂ ಕಂಡು.

ಎಲೆ ಭಕ್ತಾ ನೀಂ ಶಾಶ್ವತನ ಮನೆಯಾನೆಯಾದೊಡೀಂ ಎನ್ನಾನೆ ಯೊಡನೆ ಕೈಯಿಕ್ಕಿ ಗೆಲ್ದೆಯಲ್ಲದೆ ಮಂತ್ರದಿಂ ಮಾಯದಿಂ ಗತಿಸ್ತಂಭವಂ ಮಾಳ್ಪುದಿದು ಕುಟಿಲಮಲ್ಲದೆ ದಿಟಮಲ್ತು ಇಂತೆಂದು ನುಡಿದ ಭೂಪ ತಿಯ ಮೊಗಮಂ ನೋಡಿ ಮುಗುಳ್ನಗೆ ನಗುತ್ತಂ ಧೈರ್ಯನಿಧಿ ಮಾಯಾ ಮದಹರಣಂ ಬಾಹೂರು ಬೊಮ್ಮಯ್ಯಂ ಅರಸಂಗಿಂತೆಂದಂ ಕೇಳೆಲೆ ಪುರುಳನರಿಯದರಸುಮರುಳೆ ಗಣನಾಥರ ಮುಂದಿಂದ್ರನೈರಾವತಂ ವಭ್ರುಚ್ಛಾಯೆ ಅಗ್ನಿಯ ಪುಂಡರೀಕಂ ನೀರೊಳಗಣ ತಾವರೆ ಯಮನ ವಾಹನಂ ಮನೆಯ ಮಹಿಷಂ ನೈಋತ್ಯನ ಕುಮುದಂ ನೀಲೋತ್ಪಲಂ ವರುಣನಂಜನಂ ಕಣ್ಣ ಕಾಡಿಗೆ ಪವನನ ಪುಷ್ಪದತ್ತಂ ಕೆಯ್ಯಪೂಮಾಲೆ ಕುಬೇರನ ಸಾರ್ವಭೌಮಂ ಮಣ್ಣಾನೆ ಧನದಮಿತ್ರನ ಸುಪ್ರತೀಕಂ ಸ್ಥಾಣು ವಶವರ್ತಿ ಎನಿಪ ಕಟ್ಟುಬ್ಬಟೆಯ ತೇಜದ ಘನ ಮಹಿಮರಪ್ಪೆಮ್ಮೊಡನೆ ನಿನ್ನಾನೆ ಕೆಯ್ಯಿಕ್ಕುವದುಂಟುಂಟೆದೇ ಮಾಣ್ಬುದೆಂದಾಕ್ಷೇಪಿಸಿನುಡಿದು ತನ್ನ

# ಭಂಡಾರಿ ಶಾಂತಯ್ಯಗಳ ವಚನಗಳು



೧. ಆಗೆಯುದ ಭಾವಿಯುಲ್ಲಿ ಸೆಲೆ ಇಲ್ಲದ ಸೀರಿದೆ. ಸೇದುವದಕ್ಕೆ ಹುರಿಯಿಲ್ಲದ ಕಣ್ಣಿ ತುಂಬುವುದಕ್ಕೆ ಬಾಯಿಲ್ಲದ ಕುಂಭ ಸೇದುವಾತನ ಕಣ್ಣು ತಲೆಯ ಹಿಂದೆ ಕಣ್ಣಿಯು ತೆಗವ ಕೈ ಇಲ್ಲದೆ ಬಾಯಿಯು ತಡಿ ತಡ ಹಾಯಿತ್ತು ಅಲೇಕನಾದ. ಶೂನ್ಯ ಕಲ್ಲಿನೊಳಗಾದ ಕಾರಣ.

ಟೀಕೆ:— ಶೃತ ಜ್ಞಾನಕ್ಕಸಾಧ್ಯವಾದ ಪರಮಾಮೃತ ತುಂಬಿ ಕೊಂಡಿರ್ದ ಚಿತ್ಕೂಪವೆಂಬುದೀಗ ಆಗೆಯುದ ಭಾವಿಯುಲ್ಲಿ ಎಂಬ ಶಬ್ದ ಕ್ಕರ್ಥ. ಆ ಚಿತ್ಕೂಪದಲ್ಲಿ ಭಿನ್ನಜ್ಞಾನವಿಲ್ಲದ ಪರಮಾಮೃತ ರಸವಿರು ತ್ತಿಹುದೆಂಬುದೀಗ ಸೆಲೆ ಇಲ್ಲದ ಸೀರಿದೆ ಎಂಬ ಶಬ್ದಕ್ಕರ್ಥ. ಆ ಪರಮಾ ಮೃತ ರಸವ ಅಂತರಂಗ ಬಹಿರಂಗದಲ್ಲಿ ಸಂಬಂಧವ ಮಾಡುವದಕ್ಕೆ ಶಿವತತ್ವವನರಿಯಬೇಕೆಂಬ ಭ್ರಾಂತಳಿದು ಸ್ವಾನುಭಾವ ಸೂತ್ರದಿಂ ಸಂಬಂಧವ ಮಾಡಿದನೆಂಬುದೀಗ ಸೇದುವದಕ್ಕೆ ಹುರಿಯಿಲ್ಲದ ಕಣ್ಣಿ ಎಂಬ ಶಬ್ದಕ್ಕರ್ಥ. ಆ ಪರಮಾಮೃತ ರಸವನವಗ್ರಹಿಸುವದಕ್ಕೆ ಭಿನ್ನಾ ಪೇಕ್ಷೆ ಇಲ್ಲದ ಅಖಂಡ ಚಿದ್ಬ್ರಾಂಡವೇ ಗಡಿಗೆಯಾಗಿಹುದೆಂಬುದೀಗ ತುಂಬುವುದಕ್ಕೆ ಬಾಯಿಲ್ಲದ ಕುಂಭವೆಂಬ ಶಬ್ದಕ್ಕರ್ಥ. ಆ ಪರಮಾ ಮೃತ ರಸವನು ಸ್ವಾನುಭಾವಸೂತ್ರದಿಂ ಸಂಬಂಧವ ಮಾಡುತ್ತಿರ್ದ ಶರಣನ ಸುಜ್ಞಾನ ದೃಷ್ಟಿಯು ಜ್ಞಾನಸ್ವರೂಪನಾದ ಪರಶಿವತತ್ವದಲ್ಲಿ ಲೀಯವಾಗಲಾ ಸ್ವಾನುಭಾವ ಸೂತ್ರದಿಂದವಗ್ರಹಿಸುವ ಸದ್ಭಾವ ಹಸ್ತ ವಿಲ್ಲದೆ ಅಹಂ ಬ್ರಹ್ಮನೆನಲು ಚಿತ್ಸ್ವರೂಪವನೊಳಕೊಂಡಿರ್ಪ ಗುರು ಮಾರ್ಗಾಚಾರ ಭಿನ್ನವಾಯಿತ್ತೆಂಬುದೀಗ ಸೇದುವಾತನ ಕಣ್ಣು ತಲೆಯ ಹಿಂದೆ ಕಣ್ಣಿಯು ತೆಗೆವ ಕೈಯಿಲ್ಲದ ಭಾವಿಯ ತಡಿ ತಡಹಾಯಿತ್ತು ಎಂಬ ಶಬ್ದಕ್ಕರ್ಥ. ಆ ಗುರುಮಾರ್ಗಾಚಾರಭಿನ್ನವಾಗಲು ಸಮಸ್ತ ವಿಶ್ವವು ಗಮಿಸುವುದಕ್ಕೆಯೂ ಲಯಿಸುವುದಕ್ಕೆಯೂ ಮಾತೃಸ್ಥಾನವಾದ ಚಿತ್ತು

ಭಕ್ತ ಜನಂಗಳ ಭಕ್ತಿ ಪಾಶಕ್ಕೊಳಗಾಯಿತ್ತೆಂಬುದೀಗ ಆಲದ ಹಣ್ಣಿಗೆ ವಮೌನವ ಹಕ್ಕಿ ಈರೇಳು ಕೋಟಿ ಕೂಡಿ ಎಂಭತ್ತುನಾಲ್ಕುಲಕ್ಷ ಬೇಟೆಕಾರರ ಬಲೆಯೊಳಗಾಯಿತ್ತು ಇದರೊಲವರವ ಕೇಳಿಹರೆಂದು ಅಲೇಕನಾದ ಶೂನ್ಯ ಕಲ್ಲಿನ ಸಿಳಯುದೊಳಗಾದನೆಂಬ ಶಬ್ದಕ್ಕರ್ಥ.

೯. ಎತ್ತಬಾರದ ಕಲ್ಲು ನೀರ ಮೇಲೆ ತೆಪ್ಪದಂತೆ ಹೋಗುವಾಗ ಮೇಲೆ ಕುಳಿತು ಒತ್ತುವರ ನುಂಗಿತ್ತು. ನುಂಗಿದವರು ಅಲ್ಲಿದ್ದಂತೆ ಹೊಳೆಯು ನೀರ ತಪ್ಪಲಿಕೆ ಕುಡಿದು ಆ ತೆಪ್ಪ ಪೃಥ್ವಿಯಲ್ಲಿ ನಿಂದಿತ್ತು. ಈ ಗುಣ ಬಿತ್ತಿಯು ಕೇಳಿಹರೆಂದು ಅಲೇಕನಾದ ಶೂನ್ಯ ಕಲ್ಲಿನ ಮರೆಯಾದ.

ಟೀಕು: — ಭಿನ್ನ ಜ್ಞಾನಿಗಳ ಅಪ್ಯಾಯನಕ್ಕೆ ಸಾಧ್ಯವಾದ ಸರ್ವಾಚಾರ ಸಂಪತ್ತನೊಳಕೊಂಡಿರ್ಪ ನಿಷ್ಕಲ ಪರಬ್ರಹ್ಮವೆಂಬುದೀಗ ಎತ್ತ ಬಾರದ ಕಲ್ಲು ಎಂಬ ಶಬ್ದಕ್ಕರ್ಥ. ಆ ಭಿನ್ನ ಜ್ಞಾನಿಗಳ ಸಂಚಲ ರೂಪವಾದ ಮನೋಮಧ್ಯದಲ್ಲಿ ಆ ಪರಬ್ರಹ್ಮ ಅನ್ಯೋನ್ಯವಾಗಿಹುದೆಂಬುದೀಗ ನೀರ ಮೇಲೆ ತೆಪ್ಪದಂತೆ ಹೋಗುವಾಗ ಎಂಬ ಶಬ್ದಕ್ಕರ್ಥ. ಆ ಲಿಂಗ ಸಂಬಂಧಿಗಳಾಗಿ ಜ್ಞಾನಕ್ರಿಯೆವಿಡಿದಾಚರಿಸುತ್ತಿರ್ಪ ಭಕ್ತ ಜನಂಗಳ ತಾನೆ ಒಳಕೊಂಡಿರುತ್ತಿಹುದೆಂಬುದೀಗ ಮೇಲೆ ಕುಳಿತು ಒತ್ತುವರ ನುಂಗಿತ್ತು ಎಂಬ ಶಬ್ದಕ್ಕರ್ಥ ಆ ಪರಬ್ರಹ್ಮದಲ್ಲಿ ಅಡಗಿರ್ಪ ಭಕ್ತಜನಂಗಳು ತಮ್ಮ ನಿಜವ ತಾವರಿಯದೆ ಭಿನ್ನಾಪೇಕ್ಷೆಯಿಂ ಫಲಪದಗಳನಿಚ್ಛಿಸಿ ಆ ಫಲಪದಂಗಳಿಂ ಸಂಸಾರ ವಿಷಯ ಜಲ ಪ್ರವಾಹ ಭಿನ್ನಾಚಾರದಲ್ಲಿ ನಿಂತು ಸೇವಿಸುತ್ತಿಹರೆಂಬುದೀಗ ನುಂಗಿದವರು ಅಲ್ಲಿದ್ದಂತೆ ಹೊಳೆಯು ನೀರ ತಪ್ಪಲಿಕೆ ಕುಡಿದು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಜಲ ಪ್ರವಾಹದಲ್ಲಿ ಮುಳುಗಿದ ಅದ್ವೈತಿಗಳ ದೇಹದಲ್ಲಿ ಸರ್ವಾಚಾರ ಸಂಪತ್ತಿನ ಪಾತ್ರ ಸ್ವರೂಪವಾದ ಚಿದ್ಘನಲಿಂಗವು ಅಡಗಿ ಹೋಯಿತ್ತೆಂಬುದೀಗ ಆ ತೆಪ್ಪ ಪೃಥ್ವಿಯಲ್ಲಿ ನಿಂದಿತ್ತು. ಈ ಗುಣ ಬಿತ್ತಿಯು ಕೇಳಿಹರೆಂದು ಅಲೇಕನಾದ ಶೂನ್ಯ ಕಲ್ಲಿನ ಮರೆಯಾದನೆಂಬ ಶಬ್ದಕ್ಕರ್ಥ.

೧೦. ಊರ ಹೊರಗೊಂದು ನಡು ಮಠ ಆದರೊಳಗೆ ಅಡಗಿರ್ಪರು ಐವರು ಕಳ್ಳರು. ಒಬ್ಬನರಿಯೆ ಬಲೆಯುವ ಒಬ್ಬ ಹುಲಿಯ ಬಲೆಯುವ

ಮಧ್ಯದಲ್ಲಿ ನಿಲಬಾರದ ದುರ್ಗಂಧ. ಆ ತಾಯಗರ್ಭದಲ್ಲಿ ಅಸ್ಥಿ ತಾಕಿದರೆ ತ್ರಿಶೂಲದಲ್ಲಿ ಇರಿದಂತೆ, ಆ ತಾಯಿ ನೀರ ಕುಡಿದರೆ ಹಿಡಿಗಲ್ಲು ಬಿದ್ದಂತೆ, ಆ ತಾಯಿ ಉಂಡ ಅನ್ನದ ತುತ್ತು ಕಾರಸಿಡಿಲು ಬಿದ್ದಂತೆ, ಆ ತಾಯಿ ಕುಡಿದ ಕಾರವು ಕಾಳಕೂಟ ವಿಷದಂತೆ, ಆ ತಾಯಿ ಹಸಿದಿದ್ದರೆ ಕಾಡ ಗಿಚ್ಚಿನಲ್ಲಿ ಸಿಕ್ಕಿದಂತೆ, ಆ ತಾಯಿ ಸೀರೆಯಂ ಬಿಗಿದುಟ್ಟರೆ ಕಾಲಪಾಶದಲ್ಲಿ ಬಿಗಿದಂತೆ, ಆ ತಾಯಿ ನಡೆದಲ್ಲಿ ಕುಂಬಳ ಕಾಯನೆತ್ತಿ ಹಾಕಿದಂತೆ, ಆ ತಾಯಿ ಕೋಪಿಸಿದರೆ ಕುಮ್ಮಟಿಯಲ್ಲಿದ್ದಂತೆ, ಆ ತಾಯಿ ನಿದ್ರೆಯಲ್ಲಿ ಉಚ್ಛ್ವಾಸ ನಿಶ್ವಾಸಂಗೈವಡೆ ಕೋದಂಬ ಸೇದಿದಂತೆ ಆ ತಾಯ ಗರ್ಭ ದಲ್ಲಿ ಕೀಲಹುಳುವು ಕಡಿದೊಡೆ ಕಾಲಸರ್ಪ ಮಿಡಿಗಪ್ಪೆಯ ಕಡಿದಂತೆ, ಅಂತಲ್ಲದೆ ಕವಲುವೊದಲುಗೂಡಮ. ಅದರಿಂದ ಪಿಂಡಕ್ಕೆ ಮೊದಲು ಮಾಸಕ್ಕೆ ನೂರು ಕೋಟಿ ಬಾಧೆ, ಎರಡನೆಯ ಮಾಸಕ್ಕೆ ಐವತ್ತು ಕೋಟಿ ಬಾಧೆ, ಮೂರನೆಯ ಮಾಸಕ್ಕೆ ಇಪ್ಪತ್ತೈದುಕೋಟಿ ಬಾಧೆ, ನಾಲ್ಕನೆಯ ಮಾಸಕ್ಕೆ ಹನ್ನೆರಡುಕೋಟಿ ಬಾಧೆ, ಐದನೆಯ ಮಾಸಕ್ಕೆ ಆರುಕೆ ಬಾಧೆ, ಆರನೆಯ ಮಾಸಕ್ಕೆ ಮೂರು ಕೋಟಿ ಬಾಧೆ, ಅದರ ಮೇಲೆ ದಿವ್ಯಜ್ಞಾನ ಹುಟ್ಟಿ ಹಿಂದಣ ಜನ್ಮ ನೂರು ಮುಂದಣ ಜನ್ಮ ನೂರು ತನ್ನ ಜಾತಿ ಸ್ಮರತ್ವವನರಿದು, ತನ್ನ ಹೀನಾಧಿ ಕಜನ್ಮವನ್ನು ತನ್ನ ಸ್ವರ್ಗನರಕವನ್ನು ತನ್ನ ಸುಖದುಃಖವನ್ನು ತನ್ನ ಸ್ತುತಿನಿಂದೆಯನ್ನು ತನ್ನ ಕರ್ತವ್ಯ ಭೃತ್ಯತ್ವವನ್ನು ತನ್ನ ಸಿರಿ ಬಡತನ ವನ್ನು ತನ್ನ ರೂಪುಕುರೂಪನ್ನು ತನ್ನ ಸತ್ಯಾಸತ್ಯವನ್ನು ತಿಳಿದು ಸರ್ವರಲ್ಲಿಯೂ ಶಿವನೇ ಪೂಜ್ಯನೆಂದರಿದು, ಸರ್ವರೂ ಪೂಜಕರೆಂದರಿದು, ನೋಟಕ್ಕೆ ಶಿವನೇ ಕರ್ತ, "ಅಸೌಯೋವಸರ್ವತಿನೀಲಗ್ರೀವೋವಿಲೋಹಿತಃ" ಎಂಬ ಶ್ರುತಿ ಸಾಕ್ಷಿಯಾಗಿ ಆತ್ಮಚಕ್ಷುಚೈತನ್ಯನಾಗಿ ಮನಸ್ಸಿಗೆ ಪ್ರೇರಕತ್ವವ ಮಾಡುವಾತನು ಶಿವನೇ. ಅದರಿಂದ ನೋಟಕ್ಕೂ ಮನಸ್ಸಿಗೂ ಶಿವನೇ ಕರ್ತನು. ಆ ನೋಟವನ್ನೂ ಮನಸ್ಸನ್ನೂ ಅಪಾತ್ರವ ಮಾಡಿದ ಕಾರಣ ಈ ದೇಹಪಾಶವು ಎನಗೆ ಬಂದಿತೆಂದು ಈ ನೋಟವನ್ನೂ ಮನಸ್ಸನ್ನೂ ಶಿವನಿಗೆ ಒಪ್ಪಿಸಿದರೆ ಚಿನ್ಮೂರ್ತಿಯಾಗುವೆನೆಂದು ಈ ನೋಟವನ್ನೂ ಮನಸ್ಸನ್ನೂ ಒಪ್ಪಿಸುವ ಸಕೀಲು ಎನಗೆ ತಿಳಿಯದು. ವೀರಮಹೇಶ್ವರ ರಿಗೆ ತಿಳಿವುದು. ಅವರ ಸೇವೆಯ ಮಾಡಿ ನೋಟವನ್ನೂ ಮನಸ್ಸನ್ನೂ ಶಿವನಿಗೊಪ್ಪಿಸಿ ದೇಹಭಾರವನಿಳುಹುವೆನು. ವಿಷಯದಿಂದ ಬಂದ ಭಾರ

ದ್ವಿಜರ ನೊಡಗೂಡುವುದು ಬಿಡದು. ಎನ್ನೊಡೆಯ ಬಸವಣ್ಣ ಹೇಳಿದ ಮಾತಿಗೆ ಅಡಿ ಇಡಲಮ್ಮದೆ ಕಟ್ಟಿದೆ. ಹಿಡಿದರ್ಚಿಸುವದಕ್ಕೆ ಶಿರದ ಕಡೆಯ ಕಾಣೆ. ಮಜ್ಜನ ಮಂಡಿಗೆಂದರಿಯೆ. ಪಾದಕ್ಕೆಂದರಿಯೆ. ಕುಸುಮವನಿಕ್ಕು ವದಕ್ಕೆ ಸಸಿಯಾದೆ. ಮಕುಟದಲ್ಲಿ ಪಾದಕ್ಕೆ ಮದನ ಪಿತನ ಅಕ್ಷಿಯದೆ. ಉಂಗುಷ್ಟದಲ್ಲಿ ಊಟಕ್ಕೆ ಬಾಯಿ ಕಾಣೆ. ಕೂಟಕ್ಕೆ ಅವಯವಂಗ ಳಿಲ್ಲ. ಮಾತಿಗಾತ್ಮನ ಕಾಣೆ. ಇದೇತರ ಮರಿ ಪಾಷಾಣದಂತಿದೆ. ಇದರಾಟವೆನಗೆ ಕಾಟವಾಗಿದೆ· ಅಲೇಕನಾದ ಶೂನ್ಯಕಲ್ಲಾದ ಭೇದವ ಎನಗೆ ಹೇಳು.

೭. ಊರೊಳಗಣ ಅರುಳಿಯ ಮರದಲ್ಲಿ ಮೂರು ವರ್ಣದ ಗಿಳಿ ವರಿಯನಿಕ್ಕಿತ್ತು. ಬಲಿದು ರೆಕ್ಕೆ ಹಾರಲಾರದು. ಕೊಕ್ಕು ಬಲಿದು ಕೆಂಪಾಗದು. ಬಾಯಿ ಬಲಿದು ಹಣ್ಣ ಮೆಲಲಾರದು. ಅದು ಓದಿ ಸುವವರಿಗೆ ಅಸಾಧ್ಯ. ಅಲೇಕನಾದ ಇದರೊಲವರವರ ಕೇಳಹರೆಂದು ಕಲ್ಲಿನೊಳಗಾದ.

ಟೀಕೆ:— ಪಂಚಭೂತ ಗ್ರಾಮವೆಂಬುದೀಗ ಊರೆಂಬ ಶಬ್ದಕ್ಕರ್ಥ. ಅಂತಸ್ಥ ದೇಹದ ಮಧ್ಯದಲ್ಲಿ ಶಬ್ದ ಜಾಲಂಗಳಿಂದ ಉಲುಹುತ್ತಿಹ ವಾಗ್ಜಾಲವೆಂಬುದೀಗ ಊರೊಳಗಣ ಅರುಳಿಯ ಮರದಲ್ಲಿ ಎಂಬ ಶಬ್ದ ಕ್ಕರ್ಥ. ಆ ವಾಗ್ಜಾಲ ಭ್ರಾಂತಿನಲ್ಲಿರ್ಪ ಗುಣತ್ರಯ ಸಂಬಂಧಿಯಾದ ಜೀವಹಂಸನಿಂ ಜೀವತ್ರಯಂಗಳು ಉದಿಸಿದನೆಂಬುದೀಗ ಮೂರು ವರ್ಣದ ಗಿಳಿವರಿಯನಿಕ್ಕಿತ್ತೆಂಬ ಶಬ್ದಕ್ಕರ್ಥ. ಶಿವ ಕೃಪೆಯಿಂದ ಜೀವತ್ರಯಂಗಳ ಮಧ್ಯದಲ್ಲಿ ಸಮ್ಯಜ್ಞಾನ ಪ್ರಭಾವಿಸಲು ಶ್ರೀಗುರು ಕಾರುಣ್ಯದಿಂ ಸರ್ವಾಂಗ ಲಿಂಗ ಸಂಬಂಧಿಯಾಗಲು ಭಕ್ತಿ ಜ್ಞಾನಂಗಳು ನಿರ್ಧರವಾದವೆಂಬು ದೀಗ ರೆಕ್ಕೆ ಬಲಿದು ಎಂಬ ಶಬ್ದಕ್ಕರ್ಥ. ಆ ಭಕ್ತಿ ಜ್ಞಾನಂಗಳೆರಡು ನಿರ್ಧರವಾದ ಚಿದಾತ್ಮನು ಅನ್ಯವಾದ ಮಾಯಾ ಪ್ರಪಂಚಿನತ್ತ ಹೋಗದೆಂಬುದೀಗ ಹಾರಲಾರದು ಎಂಬ ಶಬ್ದಕ್ಕರ್ಥ. ಅಂತು ಮಾಯಾ ಪ್ರಪಂಚು ನಷ್ಟವಾಗಲು ಶರಣನ ಶಿವಭಾವ ನಿರ್ಧರವಾಗಿ ರಜೋ ಗುಣವ ಹೊದ್ದದೆಂಬುದೀಗ ಕೊಕ್ಕು ಬಲಿದು ಕೆಂಪಾಗದು ಎಂಬ ಶಬ್ದಕ್ಕರ್ಥ. ಅಂತು ರಜೋಗುಣ ನಿವೃತ್ತಿಯಾಗಲು ಶರಣನ ಶಿವಾ ಪೇಕ್ಷೆ ಲಿಂಗದಲ್ಲಿ ಸುಸ್ಥಿರವಾಗಿ ಭಿನ್ನ ಫಲಪದಂಗಳ ಸ್ವಿಕರಿಸದೆಂಬು

ದೀಗ ಬಾಯುಬಲಿದು ಹಣ್ಣು ಮೆಲಲಾರದು ಎಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನ ಶ್ರುತಜ್ಞಾನದಿಂದರಿದಿಹೆನೆಂದೊಡೆ ಸಾಧ್ಯವಲ್ಲವೆಂಬುದೀಗ ಅದು ಓದಿಸುವವರಿಗೆ ಅಸಾಧ್ಯ ಅಲೇಕನಾದ ಇದರೊಲವರವ ಕೇಳಿಹರೆಂದು ಕಲ್ಲಿನೊಳಗಾದನೆಂಬ ಶಬ್ದಕ್ಕರ್ಥ.

೮. ಊರ್ಧ್ವ ಭೂಮಿಯ ವಿರಾಗದಲ್ಲಿ ಸಪ್ತ ಸಮುದ್ರಕ್ಕೆ ಭೂಮಿಯೊಂದೇ. ಆ ಭೂಮಿಯ ಮಧ್ಯದಲ್ಲೊಂದು ವಟವೃಕ್ಷ ಹುಟ್ಟಿತ್ತು. ಕೊಂಬು ಮೂರು ಅವರ ಬೆಂಬಳಿಯಲ್ಲಿ ಹುಟ್ಟಿದ ಕವಲಿಗೆ ಲೆಕ್ಕವಿಲ್ಲ. ಆ ಆಲದ ಹಣ್ಣಿಗೆ ಮೌನದ ಹಕ್ಕಿ ಈ ರೇಳು ಕೋಟಿ ಕೂಡಿ ಎಂಬತ್ತು. ನಾಲ್ಕು ಲಕ್ಷ ಬೇಟೆಕಾರರ ಬಲೆಗೊಳಗಾಯಿತ್ತು. ಇದರೊಲವರವ ಕೇಳಿಹರೆಂದು ಅಲೇಕನಾದ ಶೂನ್ಯಕಲ್ಲಿನ ನಿಳಯದುಃಗಾದ.

ಟೀಕು:—ಅನೇಕ ಕೋಟಿ ಬ್ರಹ್ಮಾಂಡಂಗಳನೊಳಕೊಂಡು ಊರ್ಧ್ವವಾಗಿರ್ಪ ನಿಷ್ಕಲ ಶಿವತತ್ವವೆಂಬುದೀಗ ಊರ್ಧ್ವ ಎಂಬ ಶಬ್ದಕ್ಕರ್ಥ. ಆ ನಿಷ್ಕಲ ಶಿವತತ್ವಕ್ಕಾಧಾರವಾದ ಚಿತ್ಪೃಥ್ವಿಗೆ ಮತ್ತೊಂದು ಬಯಕೆ ಇಲ್ಲದೆ ಪರಮ ಸಂತೋಷದಲಿ ಇರುತ್ತಿಹುದೆಂಬುದೀಗ ಭೂಮಿಯ ವಿರಾಗದಲ್ಲಿ ಎಂಬ ಶಬ್ದಕ್ಕರ್ಥ. ಸಪ್ತ ಸಮುದ್ರಂಗಳು ಮೊದಲಾದ ಅನೇಕ ತತ್ವ ಬ್ರಹ್ಮಾಂಡಂಗಳಿಗೆ ಆ ಚಿತ್ತೇ ಆಧಾರವಾಗಿಹುದೆಂಬುದೀಗ ಸಪ್ತ ಸಮುದ್ರಕ್ಕೆ ಭೂಮಿಯೊಂದೇ ಎಂಬ ಶಬ್ದಕ್ಕರ್ಥ. ಆ ಚಿತ್ ಪೃಥ್ವಿಯ ಮಧ್ಯದಲ್ಲಿ ಅನೇಕ ಬ್ರಹ್ಮಾಂಡಂಗಳನೊಳಕೊಂಡಿರ್ಪ ಪರಬ್ರಹ್ಮ ವೃಕ್ಷ ಹುಟ್ಟಿತ್ತೆಂಬುದೀಗ ಆ ಭೂಮಿಯ ಮಧ್ಯದಲೊಂದು ವಟವೃಕ್ಷ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮ ವೃಕ್ಷದಿಂ ಶಿವತತ್ವ ಸದಾಶಿವತತ್ವ ಮಹೇಶ್ವರತತ್ವವೆಂಬ ತ್ರಿತತ್ವ ಉದಯವಾದವೆಂಬುದೀಗ ಕೊಂಬು ಮೂರು ಎಂಬ ಶಬ್ದಕ್ಕರ್ಥ. ಆ ಮಹೇಶ್ವರ ತತ್ವದಿಂ ಹುಟ್ಟಿದ ಅನೇಕ ಲೀಲಾವಿಗ್ರಹ ಮೂರ್ತಿಗಳೆಂಬುದೀಗ ಅವರ ಬೆಂಬಳಿಯಲ್ಲಿ ಹುಟ್ಟಿದ ಕವಲಿಗೆ ಲೆಕ್ಕವಿಲ್ಲವೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮ ವೃಕ್ಷದ ಉದಯವಾದ ಮುಕ್ತಿ ಫಳವೆನಿಸುವ ಚಿದ್ಘನ ಲಿಂಗವ ಶಬ್ದಜಾಲಂಗಳಿಂದಳಿದು ನಿಃಶಬ್ದಸ್ವರೂಪವಾದ ಪರಮಾತ್ಮನೆಂಬ ಪಕ್ಷಿಯು ಅನೇಕ ಕರಣಂಗಳನು ತನ್ನ ಶಿವಭಾವದಲ್ಲಿ ಅವಗ್ರಹಿಸಿಕೊಂಡು ಸರ್ವಾಚಾರ ಸಂಪತ್ತು ಮೊದಲಾದ ಅನೇಕ ಶೀಲ ವ್ರತ ನಿಯಮಂಗಳಿಂ ಸಾಧಿಸುವ

ಘೀತಿ ಘನವಾಯಿತ್ತೆಂಬುದೀಗ ತೋಳನ ಬಾಧೆ ಬಿಡದು ಎಂಬ ಶಬ್ದಕ್ಕರ್ಥ. ಅಂತು ಉತ್ಪತ್ತಿ ಸ್ಥಿತಿ ಲಯಕ್ಕೊಳಗಾಗಿ ಹೋಗುವದಕ್ಕೆ ಮೊದಲೇ ಸುಜ್ಞಾನೋದಯದಿಂ ನಿಜವನರಿದು ಗುರು ಕಾರುಣ್ಯದಿಂ ಮೋಕ್ಷವನೆಯ್ದಬೇಡೆಂಬುದೀಗ ಕೂಳು ಹೋದ ಮುನ್ನವೇ ಅರಿ ಅಲೇಕನಾದ ಶೂನ್ಯ ಕಲ್ಲಿನೊಳಗಾದವನಾ ಎಂಬ ಶಬ್ದಕ್ಕರ್ಥ

೪. ಆದಿಯನಾದಿಯ ಮಧ್ಯದ ಭೂಮಿಯಲ್ಲಿ ಒಂದು ಸಾಗರ ಹುಟ್ಟಿತ್ತು. ಸಾಗರದ ನಡುವೆ ಒಂದು ಸಲಿಲ. ಸಲಿಲದ ಮೇಲೊಂದು ನಿಳಯ. ನಿಳಯದೊಳಗೊಬ್ಬ ಸೂಳೆ, ಯೋನಿ ಎಂಟು, ಮೊಲೆ ಮೂರು, ತಲೆ ಆರು, ಕೈ ಐದು, ಕಾಲೊಂದು, ಇಂತೀ ನಟಣೆಯನಾಡುತಿರ ಲಾಗಿ ನೋಡಿದವನ ಮನ ಸೋತು ಕೂಡಿಹನೆಂದಡೆ ಕೂಡಬಾರದು. ಯೋನಿ ಎಂಟಾದವಳ ಹಿಡಿವಡೆ ಮೊಲೆ ಕೂರಲಗು. ಚುಂಬನಕ್ಕಧರ ನಂಜು ತೆಕ್ಕೆಗೆ ಅಳವಲ್ಲ. ಇದು ಎನಗೆ ಸುಖಕ್ಕೆಚ್ಚುಗವೆಂದು ಬಿಚ್ಚಿಡೆ ಇವಳ ಕೂಟ ಒಚ್ಚತ ಬೇಡ ಅಲೇಕನಾದ ಶೂನ್ಯ ಕಲ್ಲಿನ ಮರೆಯಾದವನೆ.

ಟೀಕೆ:— ದೇಹ ಪ್ರಾಣಂಗಳ ಮಧ್ಯವೆನಿಸುವ ಅಂತರ್ದೇಹದಲ್ಲಿ ಸಂಸಾರ ಸಾಗರವಿರುತ್ತಿಹುದೆಂಬುದೀಗ ಆದಿಯನಾದಿಯ ಮಧ್ಯದ ಭೂಮಿಯಲ್ಲಿ ಒಂದು ಸಾಗರ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸಂಸಾರ ಸಮುದ್ರದ ಮಧ್ಯದಲ್ಲಿ ಸಂಚಲ ರೂಪವಾದ ಮನೋಜಲ ಸಂಬಂಧವಾಗಿಹುದೆಂಬುದೀಗ ಸಾಗರದ ನಡುವೆ ಒಂದು ಸಲಿಲವೆಂಬ ಶಬ್ದಕ್ಕರ್ಥ. ಅಂತಪ್ಪ ಮನೋಜಲವನೊಳಕೊಂಡು ಸೂಕ್ಷ್ಮಾಂತರಂಗ ವೆಂಬ ನಿಳಯ ಒಪ್ಪುತ್ತಿಹುದೆಂಬುದೀಗ ಸಲಿಲದ ಮೇಲೊಂದು ನಿಳಯ ವೆಂಬ ಶಬ್ದಕ್ಕರ್ಥ. ಅಂತಪ್ಪಂತರಂಗದಲ್ಲಿ ಪ್ರಪಂಚು ರೂಪವಾದ ಮಾಯೆ ಇರುತ್ತಿಹಳೆಂಬುದೀಗ ನಿಳಯದೊಳಗೊಬ್ಬ ಸೂಳೆ ಎಂಬ ಶಬ್ದಕ್ಕರ್ಥ. ಆ ಪ್ರಪಂಚು ರೂಪುವಾದ ಮಾಯೆಗೆ ಅಷ್ಟ ತನುಗಳೇ ಭಗವಾಗೊಪ್ಪುತ್ತಿಹುದೆಂಬುದೀಗ ಯೋನಿ ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಮಲತ್ರಯ ಮೂರು ಸ್ಥಾನವಾಗಿಹುದೆಂಬುದೀಗ ಮೊಲೆ ಮೂರು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಅರಿಷಡ್ವರ್ಗಂಗಳೇ ಅಜ್ಞಾನ ಸಂಬಂಧದಿಂ ಶಿರಸ್ಸುಗಳಾಗಿರುತ್ತವೆಂಬುದೀಗ ತಲೆ ಆರು ಎಂಬ ಶಬ್ದ

ಕ್ಕರ್ಥ. ಆ ಮಾಯೆಗೆ ಸಕಲ ಪ್ರಪಂಚು ಹಿಡಿವುದಕ್ಕೆ ಪಂಚ ಕರಣಂಗಳೇ ಹಸ್ತವಾಗಿರುತ್ತಿಹವೆಂಬುದೀಗ ಕೈ ಐದು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ದುಶ್ಚರಿತ್ರವೆಂಬ ಚರಣ ಒಂದೇ ಎಂಬುದೀಗ ಕಾಲೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ನಾನಾ ಪ್ರಪಂಚಿನ ವಿಕಾರದ ಹೆಚ್ಚುಗೆಯಿಂ ಚರಿಸುತ್ತಿರಲು ಎಂಬುದೀಗ ಇಂತೀ ನಟಣೆಯಲಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಆ ಮಾಯೆಯ ಸ್ವರೂಪು ಲಾವಣ್ಯವನು ಕಾಮವಿಕಾರ ದೃಷ್ಟಿಯಿಂ ನೋಡಿದ ಜೀವನು ಆ ಕಾಮ ವಿಕಾರದಲ್ಲಿ ಮಗ್ನನಾಗಿರುತ್ತಿಹನೆಂಬುದೀಗ ನೋಡಿದವನ ಮನ ಸೋತು ಎಂಬ ಶಬ್ದಕ್ಕರ್ಥ. ಅಂತಪ್ಪಷ್ಟತನುಗಳೇ ಭಗವಾಗಿರ್ಪ ಅದ್ಭುತವಾದ ಮಾಯೆಯಲ್ಲಿ ಕೂಡಿಹೆನೆಂದಡೆ ಕೂಡಬಾರದೆಂಬುದೀಗ ಕೂಡಿಹೆನೆಂದೊಡೆ ಕೂಡಬಾರದು ಯೋನಿ ಎಂಟಾದವಳೆಂಬುದೀಗ ಶಬ್ದಕ್ಕರ್ಥ ಆ ಸಂಸಾರ ವಿಷಯ ರಸವ ತುಂಬಿಕೊಂಡಿರ್ದ ಘಟಸ್ವರೂಪಿನೀ ಸ್ತನವ ಸಂಕಲ್ಪ ಹಸ್ತದಿಂ ಸಿಡಿವಡೆ ಅತ್ಯಂತ ಕ್ರೂರವಾದ ಅಜ್ಞಾನ ಸ್ವರೂಪ ವಾಗಿಹುದೆಂಬುದೀಗ ಹಿಡಿವಡೆ ಮೊಲೆ ಕೂರಲಗು ಎಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯ ಸುಖವನನುಭವಿಸಿಹೆನೆಂದೊಡೆ ಅತ್ಯಂತ ವಿಷ ಮಯವಾಗಿರುತ್ತಿಹದೆಂಬುದೀಗ ಚುಂಬನಕ್ಕಧರ ನಂಜೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನದ ಮಾಯೆಯನಪ್ಪಿಹೆನೆಂದೊಡೆ ಅಸಾಧ್ಯತರವಾಗಿಹುದು ಜೀವರಿಗೆಂಬುದೀಗ ತೆಕ್ಕೆಗೆ ಅಳವಲ್ಲ ಇದು ಎನಗೆ ಸುಖಕಚ್ಚುಗವೆಂದು ಬೆಚ್ಚಿದೆ. ಇವಳ ಕೂಟ ಒಚ್ಚುತ ಬೇಡ. ಅಲೇಕನಾದ ಶೂನ್ಯ ಕಲ್ಲಿನ ಮರೆಯಾದವಳೆಂಬ ಶಬ್ದಕ್ಕರ್ಥ.

೫. ಆರೈದು ಕಾಣುವದಕ್ಕೆ ಸ್ಥಾಣು ಕರ್ತನಲ್ಲ. ನೋಯಿಸದೆ ಕಾಂಬುದಕ್ಕೆ ಅರಡಿಯಲ್ಲ ನೋಯದೆ ಕಾಂಬುದಕ್ಕೆ ಪಿಪೀಲಿಕನಲ್ಲ. ಬಂಧಿಸಿ ಕಾಂಬುವುದಕ್ಕೆ ಚಂದನದ ಶಿಲೆಯಲ್ಲ. ಭಕ್ತಿ ಎಂಬಂತಹ ಸತಿ ನಾನಾಗಿ ವಿರಕ್ತಿ ಎಂಬ ಘನಲಿಂಗ ಕೂಟಪುರುಷ ನೀನಾಗಿ ಇಂತೀ ಉಭಯದಿಂದೊದಗಿದ ರೂಪ ನಾಮವೇನೆಂಬೆ ? ಅಲೇಕನಾದ ಶೂನ್ಯ ಕಲ್ಲಿನ ಹಂಗ ಬಿಡು ಬೇಡಿಕೊಂಬೆ.

೬. ಇನ್ನೆಲ್ಲರ ಕೇಳುವುದಕ್ಕೆ ಕುಲ, ಛಲ, ಮಲ, ದೇಹಿಕರು ಹಿಡಿದೆನ್ನ ಎದೆಯಲ್ಲಿ ಕಟ್ಟಿದ ಎಡೆಯಾಸೆ ಬಿಶಮು. ಕೊಡುವ ಕೊಂಬಲ್ಲಿ

ಲಿಂಗ ಚೈತನ್ಯ ಸ್ವರೂಪವಾದ ಪರಬ್ರಹ್ಮವೆಂಬುದೀಗ ಅಲೇಕನಾದ ಎಂಬ ಶಬ್ದಕ್ಕರ್ಥ. ಆ ನಿರಾಕಾರವಾದ ಪರಬ್ರಹ್ಮವು ಕಲು ಹೃದಯವಾದಾತ್ಮನ ಮಧ್ಯದಲ್ಲಿ ಅಂತರ್ಗತವಾಯಿತ್ತೆಂಬುದೀಗ ಶೂನ್ಯ ಕಲ್ಲಿನೊಳಗಾದ ಕಾರಣ ಎಂಬ ಶಬ್ದಕ್ಕರ್ಥ.

೨. ಅಂಗ ಕೋಟಿ ಭುಜ ಆಳುವೇರಿ ತಲೆ ತೆನೆ ಕಣ್ಣು ಅಂಬುಗಂಡಿ ಕಾದುವ ಅರಸು ಅಸುರಾಜ ಕೂಟದ ಮನೆಯು ಐದು ಮಂದಿ ಎಂಟು ಘಟಾನೆ ಪಂಚವಿಂಶತಿ ಕುದುರೆ ಆಳು ಪರಿವಾರ ಕರಣಂಗಳ ಮೊತ್ತ ಕೂಡಿ ಇರಿಯಿತ್ತು. ಅರಿರಾಜ ತಮ ವಿರೋಧಿ ಒಡನೆ ಮುರಿದ ಅಸುರಾಜ ಪಶುಪತಿಯು ಗೆದ್ದ ಎನಗಾಯಿತ್ತು ಹೇಳಾ ಅಲೇಕನಾದ ಶೂನ್ಯ ಕಲ್ಲಿನೊಳಗಾದವನೇ.

ಟೀಕೆ:— ಸರ್ವಾಂಗ ಲಿಂಗ ಸಂಬಂಧಿಯಾದ ಶರಣನ ಪ್ರಸಾದ ಕಾಯವೇ ಕೋಟಿಯಾದ ಕಾರಣ ಅಂಗಕೋಟಿಯೆಂಬ ಶಬ್ದಕ್ಕರ್ಥ. ಭಕ್ತಿ ನಿಷ್ಠೆಯೊಡನೆ ಕೂಡಿದ ಭುಜವೇ ಆಳುವೇರಿಯಾದವೆಂಬುದೀಗ ಭುಜ ಆಳುವೇರಿಯೆಂಬ ಶಬ್ದಕ್ಕರ್ಥ. ಸುಜ್ಞಾನ ಪ್ರಕಾಶವೇ ತೆನೆಯಾಯಿತ್ತಾಗಿ ತಲೆ ತೆನೆಯೆಂಬ ಶಬ್ದಕ್ಕರ್ಥ. ಅವಿರಳ ಜ್ಞಾನ ದೃಕ್ಕಿನಿಂ ನೋಡುತ್ತಿಹನೆಂಬುದೀಗ ಕಣ್ಣು ಅಂಬುಗಂಡಿಯೆಂಬ ಶಬ್ದಕ್ಕರ್ಥ. ಜ್ಞಾನಕ್ರಿಯೆಯಿಂದಾಚರಿಸುವ ಶರಣನ ಅಸುವೆಂದೊಡೆ ಜೀವನು. ಅಂತಪ್ಪ ಜೀವಂಗೆ ಒಡೆಯನಾಗಿಹ ಶರಣನೆಂಬುದೀಗ ಕಾದುವ ಅರಸು ಅಸುರಾಜನೆಂಬ ಶಬ್ದಕ್ಕರ್ಥ. ಪಂಚಕರಣಂಗಳ ವರ್ತನೆ ನಿವೃತ್ತಿಯಾಗಿ ಜ್ಞಾನಕರ್ತಗಣ್ಣಂಗಳಾಗಿ ಆತ್ಮನಿಗೆ ಸಹಾಯವಾಗಿಹ ಕಾರಣ ಕೂಟದ ಮನೆಯು ಐದು ಮಂದಿ ಎಂಬ ಶಬ್ದಕ್ಕರ್ಥ. ಅಷ್ಟಮದವಳಿದು ಚಿದಹಂಕಾರ ಸ್ವರೂಪವಾದ ಕಾರಣ ಎಂಟು ಘಟಾನೆ ಎಂಬ ಶಬ್ದಕ್ಕರ್ಥ. ಇಪ್ಪತ್ತೈದು ತತ್ವಭಾವವಳಿದು ಲಿಂಗತತ್ವವಾಗಿಹವೆಂಬುದೀಗ ಪಂಚವಿಂಶತಿ ಕುದುರೆ ಎಂಬ ಶಬ್ದಕ್ಕರ್ಥ. ಜೀವತ್ರಯಂಗಳಿಗೆ ಆತ್ಮವೆಂಬ ಆತ್ಮತ್ರಯ ಮಲತ್ರಯವೆಂಬುದೀಗ ಪರಿವಾರವೆಂಬ ಶಬ್ದಕ್ಕರ್ಥ. ಸಕಲ ಕರಣಂಗಳ ಮೊತ್ತವೆಲ್ಲವು ಜ್ಞಾನ ಕರಣಂಗಳಾಗಿ ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪನಾದ ಶರಣನು ಈ ಪ್ರಕಾರದಲ್ಲಿ ಜ್ಞಾನ ಕ್ರಿವಿಡಿದಾಚರಿಸುತ್ತಿರಲಾಗಿ ಎಂಬುದೀಗ ಕೂಡಿ ಇರಿಯಿತ್ತು ಎಂಬ ಶಬ್ದಕ್ಕರ್ಥ. ಜ್ಞಾನ

ಕಲಾತ್ಮಂಗೆ ಹಗೆಯಾಗಿರ್ದ ಅರಿಷಡ್ವರ್ಗವೆಂಬುದೀಗ ಅರಿರಾಜನೆಂಬ ಶಬ್ದಕ್ಕರ್ಥ. ಆ ಅರಿ ಷಡ್ವರ್ಗಂಗಳನು ಕ್ರಿಯೆಯಿಂದ ನಿವೃತ್ತಿ ಮಾಡಿದ ಶರಣನು ಚಿದಗ್ನಿಯಿಂದಜ್ಞಾನ ತಮಸ್ಸನು ದಹಿಸಿದನೆಂಬುದೀಗ ತನು ವಿರೋಧಿಯೆಂಬ ಶಬ್ದಕ್ಕರ್ಥ. ಇಂತಪ್ಪ ಶರಣನಿಗೆ ಪರಶಿವ ಸೋತು ತನ್ನ ನಿಜಪದವ ಕೊಟ್ಟನೆಂಬುದೀಗ ಒಡನೆ ಮುರಿದನೆಂಬ ಶಬ್ದಕ್ಕರ್ಥ. ಆ ಜ್ಞಾನ ಕಲಾತ್ಮನು ಶಿವನು ಕೊಡುವ ಖಂಡಿತ ಫಲ ಪದಂಗಳ ಸತ್ಕ್ರಿಯಾ ಚರಣೆಯಿಂದ ಧ್ವಂಸ ಮಾಡಿದನೆಂಬುದೀಗ ಅಸುರಾಜ ಪಶುಪತಿಯ ಗೆದ್ದ ಎನಗಾಯಿತ್ತು ಕೇಳಾ ಅಲೇಕನಾದ ಶೂನ್ಯ ಕಲ್ಲಿನೊಳಗಾದವನೇ ಎಂಬ ಶಬ್ದಕ್ಕರ್ಥ.

೩. ಆಡಿನ ಕೋಡಿನ ತುದಿಯ ಇಂಬಿನಲ್ಲಿ ಮೂರು ತೋಳನ ಅಗಡ ಘನವಾಯಿತ್ತು. ಬೇಟೆಯು ಬೆಂಬಳಿಗೆ ಸಿಕ್ಕವು. ನಾಯ ತೊಟ್ಟಿಗೆ ತೊಡಕವು. ಹಿಂಡಿನ ಗೊಂದಲದಲ್ಲಿ ಹೊಕ್ಕು ಆಡ ತಿಂದಿಹವು. ಆಡ ಕೂಡ ಕಳಲಿಲ್ಲ. ತೋಳನ ಬಾಧೆ ಬಿಡದು. ಕೂಳು ಹೋದ ಮುನ್ನವೇ ಅರಿ ಅಲೇಕನಾದ ಶೂನ್ಯಕಲ್ಲಿನೊಳಗಾದವನ.

ಟೀಕೆ: — ರಜೋಗಣ ಸಂಬಂಧವಾದ ಜೀವನ ಅಹಂಕಾರ ಮಮಕಾರಂಗಳಗ್ರದಲ್ಲಿ ಎಂಬುದೀಗ ಆಡಿನ ಕೋಡಿನ ತುದಿಯ ಇಂಬಿನಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಮಮಕಾರಂಗಳ ಸಂಕಲ್ಪ ಮಾರ್ಗದಿಂ ಉತ್ಪತ್ತಿ ಸ್ಥಿತಿ ಲಯಂಗಳ ಭೀತಿ ಘನವಾಯಿತ್ತಾತ್ಮಂಗೆ ಎಂಬುದೀಗ ಮೂರು ತೋಳನ ಅಗಡ ಘನವಾಯಿತ್ತೆಂಬ ಶಬ್ದಕ್ಕರ್ಥ. ಅಂತು ತಮ್ಮ ನಿಜ ವನರಿಯದೆ ಇರ್ಪ ಖಂಡಿತ ಜ್ಞಾನಿಗಳ ಭಿನ್ನಕ್ರಿಯೆ ಭಿನ್ನಜ್ಞಾನಕ್ಕೆ ಸಾಧ್ಯವಲ್ಲವೆಂಬುದೀಗ ಬೇಟೆಯು ಬೆಂಬಳಿಗೆ ಸಿಕ್ಕವು ಎಂಬ ಶಬ್ದಕ್ಕರ್ಥ. ಅಂತು ಪಂಚೇಂದ್ರಿಯಂಗಳೆಂಬ ಶ್ವಾನಗಳ ಕರಣ ಕರ್ಕಶಕ್ಕೆ ಸಿಕ್ಕವೆಂಬುದೀಗ ನಾಯ ತೊಟ್ಟಿಗೆ ತೊಡಕವು ಎಂಬ ಶಬ್ದಕ್ಕರ್ಥ. ಆ ಸಕಲ ಕರಣಂಗಳ ಸಮೂಹದಲ್ಲಿ ಹೊಕ್ಕು ಜೀವತ್ರಯಂಗಳ ಭಕ್ಷಿಸುತ್ತಿಹವೆಂಬುದೀಗ ಹಿಂಡಿನ ಗೊಂದಲದಲ್ಲಿ ಹೊಕ್ಕು ಆಡ ತಿಂದಿಹವು ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳನೊಳಕೊಂಬುವುದಕ್ಕೆ ಗುರು ಮಾರ್ಗಾಚಾರವಿಲ್ಲದೆ ಹೋಯಿತ್ತೆಂಬುದೀಗ ಆಡ ಕೂಡ ಕಳಲಿಲ್ಲವೆಂಬ ಶಬ್ದಕ್ಕರ್ಥ. ಅಂತಪ್ಪ ಗುರುಮಾರ್ಗಾಚಾರವಿಲ್ಲಾಗಿ ಉತ್ಪತ್ತಿ ಸ್ಥಿತಿಲಯದ

# ವಚನಶಾಸ್ತ್ರಸಾರ ಗ್ರಂಥಗಳು.

( ರಾ॥ ಸಾ॥ ಪಿ. ಜಿ. ಹಳಕಟ್ಟಿ ಇವರಿಂದ ವಿರಚಿತವಾದವುಗಳು. )

೧) ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ ೨—೮—೦

(೨) " ಉತ್ತರಾರ್ಧ ೧—೧೨—೦

ಈ ಎರಡು ಗ್ರಂಥಗಳ ಮೂಲಕ ವೀರಶೈವ ಧರ್ಮದ ಸಾಮಾನ್ಯ ತತ್ವಗಳನ್ನು ಅರಿಯಬಹುದು.

(೩) ವಚನಶಾಸ್ತ್ರಸಾರ ಭಾಗ ೨ ೪—೮—೦

ಇದರಲ್ಲಿ ಷಟ್‌ಸ್ಥಲ ಸಿದ್ಧಾಂತದ ನಿರೂಪಣೆ ಇದೆ.

(೪) ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ೨—೪—೦

ಇದರಲ್ಲಿ ವೀರಶೈವರ ಕ್ರಿಯೆಗಳ ಮತ್ತು ಅಷ್ಟಾವರಣಗಳ ಸಾಮಾನ್ಯ ನಿರೂಪಣೆ ಇರುವದಲ್ಲದೆ ಗುರು, ಲಿಂಗ, ಜಂಗಮ ಇವುಗಳ ಸವಿಸ್ತಾರವಾದ ವಿವರಣೆ ಇರುತ್ತದೆ.

ಈ ನಾಲ್ಕು ಗ್ರಂಥಗಳ ಒಟ್ಟು ಪುಟ ಸಂಖ್ಯೆ ೧೫೮೩ ಇದ್ದು ಇವುಗಳ ಬೆಲೆಯು ೧೧ ರೂಪಾಯಿ ಇರುತ್ತದೆ. ಆದರೆ ಈ ಗ್ರಂಥಗಳೆಲ್ಲವನ್ನೂ ಏಕಕಾಲಕ್ಕೆ ತೆಗೆದುಕೊಂಡಲ್ಲಿ ರೂಪಾಯಿಗಳಿಗೆ ಇವುಗಳು ಮೂರುನಾಲ್ಕಾಂಶ ಬೆಲೆಗೆ ಅಂದರೆ ಒಟ್ಟು ೮—೪—೦ ದೊರೆಯುವವು. ಟಪಾಲಖರ್ಚ ಪ್ರತ್ಯೇಕ.

ದೊರೆಯುವ ಸ್ಥಳ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

ವಿಜಾಪುರ.

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀ ಬುರುಜಾಟಣಿಯಲ್ಲಿರುವ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ





ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೫ ] ಡಿಶಂಬರ ೧೯೪೦. [ ಸಂಚಿಕೆ ೩


## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೫ | ಡಿಸೆಂಬರ ೧೯೪೦. | ಸಂಚಿಕೆ ೩

## ವೀರಶೈವ ವಾಙ್ಮಯಾವತಾರವನ್ನು ಕುರಿತು.

(ಲೇಖಕರು:— ವಿದ್ಯಾಸಿಧಿ, ಪಂಡಿತ ಚಿದಿರೆಮಠದ ವೀರಭದ್ರಶಾಸ್ತ್ರಿಗಳು
ಸಿಕಿಂದರಾಬಾದ )

"ಪ್ರಬುದ್ಧಕರ್ನಾಟಕ"ದ ಗತಸಂಚಿಕೆಯಲ್ಲಿ ಶ್ರೀಮಾನ್ ಸಿ. ನಾರಾಯಣರಾವ್, ಎಂ. ಎ. ಪಿ. ಎಚ್. ಡಿ. ಅವರ "ವೀರಶೈವ ವಾಙ್ಮಯಾವತಾರ" ವೆಂಬ ಭಾಷಣವನ್ನು ಪ್ರಕಟಿಸಲಾಗಿದೆ. ಅದರಲ್ಲಿರುವ ಅನೇಕ ವಿಧಾನಗಳು ತರ್ಕಶುದ್ಧವಾಗಿಲ್ಲದುದರಿಂದ ಅವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ಪ್ರಕಟಿಸುತ್ತಿರುವೆನು.

"......ವೀರಶೈವ ಮತಕ್ಕೆ ಪ್ರಮಾಣವೆಂದು ಹೇಳಲ್ಪಡುವ 'ಶೈವ ಸಿದ್ಧಾಂತಶಿಖಾಮಣಿ' ಎಂಬ ಗ್ರಂಥದಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥವು ಈಚಿಯದು......ಇದನ್ನು ವೀರಣಾರಾಧ್ಯನ ಪೌತ್ರನೂ ಸಿದ್ಧಯ್ಯನ ಪುತ್ರನೂ ಆದ ರೇವಣನೆಂಬವನು ರೇಣುಕಕೃತಗ್ರಂಥಕ್ಕೆ ಟೀಕಾರೂಪವಾಗಿ ರಚಿಸಿದ್ದಾನೆ" ಎಂಬುದು ರಾಯರ ಮೊದಲನೆಯ ವಿಧಾನವಾಗಿದೆ. ಇದು ತುಂಬಾ ಪ್ರಮಾದಿಕವಾಗಿದೆ. ವೀರಶೈವವನ್ನು ಶೈವವೆಂದು ಸಾಮಾನ್ಯವಾಗಿ ಹೇಳಬಹುದಾದರೂ ಉದ್ದೇಶಪೂರ್ವಕವಾಗಿ ಶೈವವೆನಲಾಗದು. ತೆಲುಗು ದೇಶದ 'ಆರಾಧ್ಯರು' ತಮ್ಮನ್ನೂ ಕೆಲವು ವೀರಶೈವ ಗ್ರಂಥಗಳನ್ನೂ 'ಶೈವ' ಶಬ್ದದಿಂದ ವ್ಯವಹಾರ ಮಾಡುವುದುಂಟು. ಇದನ್ನು ವಿಮರ್ಶಿಸದೆ ಅವರು ಪ್ರಕಟಿಸಿದ ಹಾಗೆ 'ಶೈವ

'ಸಿದ್ಧಾಂತಶಿಖಾಮಣಿ' ಎಂದು ಬರೆದಿದ್ದಾರೆ. ಇದರ ರೂಢನಾಮವು 'ಸಿದ್ಧಾಂತಶಿಖಾಮಣಿ'ಯೇ ಆಗಿದೆ. ಗ್ರಂಥಕರ್ತನೇ ಪುಸ್ತಕದ ಅಂತ್ಯದಲ್ಲಿ "ಶ್ರೀ ವೇದಾಗಮ ವೀರಶೈವಸರಣಿಂ.. ಶ್ರೀ ಸಿದ್ಧಾಂತಶಿಖಾಮಣಿಂ" ಎಂಬ ಶ್ಲೋಕದಿಂದ "ವೀರಶೈವ ಸಿದ್ಧಾಂತಶಿಖಾಮಣಿ"ಯನ್ನಾಗಿಯೇ ಸ್ಪಷ್ಟಪಡಿಸಿದ್ದಾನೆ, ಶೈವವಲ್ಲ. ಈ ಗ್ರಂಥವನ್ನು ಸಿದ್ಧಯ್ಯನ ಮಗನಾದ ರೇವಣಸು ರಚಿಸಿದ್ದಾನೆಂದು ಶ್ರೀ ನಾರಾಯಣರಾವ್ ಅವರಂತಹ ವಿದ್ವಾಂಸರು ಬರೆದಿದ್ದಾರೆಂಬುದು ವ್ಯಸನಕರವಾದ ವಿಷಯ. ಗ್ರಂಥಾದಿಯ

"ಆಸೀದ್ ಶಿವಯೋಗೀತಿ ವಿಖ್ಯಾತಃ ॥೧೩॥
ತಸ್ಯ ವಂಶೇ ಮುದ್ದದೇವಾಭಿಧಾಚಾರ್ಯಃ ॥೧೫॥
ತಸ್ಯಾಸೀನ್ನಂದನಃ ಸಿದ್ಧನಾಥಾಭಿಧಃ ॥೧೭॥
ತಸ್ಯ ನಂದನಃ . ಅಭವಚ್ಛಿವಯೋಗೀತಿ ॥೨೦॥
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥೩೧॥

ಈ ಶ್ಲೋಕಗಳಿಂದ ಶಿವಯೋಗಿಯ ಪ್ರಪೌತ್ರನೂ ಮುದ್ದದೇವನ ಪೌತ್ರನೂ ಸಿದ್ಧನಾಥನ ಪುತ್ರನೂ ಆದ ಶಿವಯೋಗಿ ಶಿವಾಚಾರ್ಯನೇ ಸಿದ್ಧಾಂತಶಿಖಾಮಣಿಯನ್ನು ವಿರಚಿಸಿದ್ದಾನೆಂಬುದು ನಿರ್ವಿವಾದವಾಗಿದೆ. ರಾಯರ ಪ್ರಮಾದಕ್ಕೆ ಕಾರಣವೇನೆಂದರೆ ಯೇಲೂರಿನ ಶ್ರೀ ಮುಲ್ಲಮುಪಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿಗಳು ೧೮೬೭ ರಲ್ಲಿ ತೆಲುಗಕ್ಷರಗಳಿಂದ ಸಿದ್ಧಾಂತಶಿಖಾಮಣಿಯೊಂದನ್ನು ಮುದ್ರಿಸಿದ್ದಾರೆ. ಅವರು ಸೊಸಲೆ ರೇವಣಾರಾಧ್ಯನ ಕನ್ನಡ ಟೀಕೆಯಿಂದ ಕೂಡಿದ ಸಂಸ್ಕೃತ ಪ್ರತಿಯನ್ನು ಆಧಾರವಾಗಿರಿಸಿಕೊಂಡು ತೆಲುಗು ಪ್ರತಿಯನ್ನು ಸಿದ್ಧಗೊಳಿಸುವಾಗ ಕನ್ನಡ ಟೀಕೆಯನ್ನು ಬಿಟ್ಟರೂ ಸೊಸಲಿ ರೇವಣಾರಾಧ್ಯನ ಟೀಕೆಯ ಆದಿಯಲ್ಲಿರುವ ಕೆಲವು ಶ್ಲೋಕಗಳನ್ನು ಪ್ರಮಾದದಿಂದ ಮೂಲಸಿದ್ಧಾಂತಶಿಖಾಮಣಿಯ ಆದಿಯಲ್ಲಿ ಸೇರಿಸಿ ಮುದ್ರಿಸಿರುವರು. ಆದರೂ ಸಿದ್ಧಾಂತಶಿಖಾಮಣಿಗೆ ಟೀಕೆಯನ್ನು ರಚಿಸುತ್ತೇನೆಂತಲೇ ಆತನು ಹೇಳಿದನೇ ಹೊರತು ಸಿದ್ಧಾಂತಶಿಖಾಮಣಿಯನ್ನು ಆತನೇ ರಚಿಸಿರಬಹುದೆಂಬ ಭ್ರಮೆಗೆ ಅವಕಾಶವಿಲ್ಲ. ಸಿದ್ಧಾಂತಶಿಖಾಮಣಿಯನ್ನು ಮೊಟ್ಟಮೊದಲು ಪ್ರಕಟಿಸಿದ ಕೈ. ವಾ. ವೀರಸಂಗಪ್ಪನವರ ಪ್ರತಿಯನ್ನಾಗಲಿ ವಾರದವರ ಪ್ರತಿಯನ್ನಾಗಲಿ ಆಮೇಲೆ ಮುದ್ರಿತವಾದ ವಿವಿಧಭಾಷೆಯ ಪ್ರತಿಗಳನ್ನಾಗಲಿ ಪ್ರಾಚೀನವಾದ ತಾಳದೋಲೆಯ ಪ್ರತಿಗಳನ್ನಾಗಲಿ ನೋಡಿದರೆ ಈ ಭ್ರಮೆಗೆ

ಅವಕಾಶವಿಲ್ಲ. ತಮ್ಮ ಪ್ರತಿಯನ್ನಾದರೂ ರಾಯರು ಸರಿಯಾಗಿ ನೋಡ ಬಹುದಾಗಿದ್ದಿತು. "ತ್ರೈಲೋಕ್ಯಸಂಪದಾಲೇಖ್ಯ" ಎಂಬ ಶ್ಲೋಕದಿಂದ ಸಿದ್ಧಾಂತಶಿಖಾಮಣಿಯ ಆರಂಭ. ಮಲ್ಲಿಕಾರ್ಜುನಶಾಸ್ತ್ರಿಗಳು ಮುದ್ರಿಸಿದ "ಯಸ್ಮೋಮೇಶ್ವರಲಿಂಗ—" ದಿಂದ "ಮಯಾ ಟೀಕಾ ಕಾರಯತೇ ಶ್ರೀ ಸಿದ್ಧಾಂತಶಿಖಾಮಣೇಃ" ಎಂಬ ವರೆಗಿರುವ ಶ್ಲೋಕಗಳು ಸೊಸಲೆ ರೇವಣಾರಾಧ್ಯನವೆಂಬುವನ್ನು ಸುಲಭವಾಗಿ ತಿಳಿಯಬಹುದು.

ಈ ಗ್ರಂಥವು ಈಚೆಯದೆಂಬ ವಾಕ್ಯದಲ್ಲಿ ರಾಯರ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯದಿದ್ದರೂ ಸೊಸಲೆ ರೇವಣಾರಾಧ್ಯನ ಸಮಕಾಲಿಕ ಗ್ರಂಥವ (೧೭ನೆಯ ಶತಮಾನದಲ್ಲಿ ಹುಟ್ಟಿದುದು) ನ್ನಾಗಿ ಅವರು ಊಹಿಸಿದಂತೆ ತೋರುತ್ತದೆ. ಇದೂ ಸಮಂಜಸವಲ್ಲ. ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗಿಂತಲೂ ಪೂರ್ವದಲ್ಲಿ ಕ್ರಿ. ಶ. ೧೧ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ ಶ್ರೀಪತಿ ಪಂಡಿತಾರಾಧ್ಯನು ವಿರಚಿಸಿದ ಶ್ರೀಕರಭಾಷ್ಯದಲ್ಲಿ ಅನೇಕಸಲ ಈ ಸಿದ್ಧಾಂತಶಿಖಾಮಣಿಯು ಸಗೌರವವಾಗಿ ಉದಾಹೃತವಾಗಿರುವದರಿಂದ ಶ್ರೀಪತಿ ಪಂಡಿತನಿಗಿಂತಲೂ ಆ ಗ್ರಂಥವು ಪ್ರಾಚೀನವೆಂದು ನಿಸ್ಸಂದೇಹವಾಗಿ ಸ್ವೀಕರಿಸಬಹುದು. ಶ್ರೀಕರ ಭಾಷ್ಯವನ್ನು ಸಂಪಾದನೆ ಮಾಡಿದ ಶ್ರೀ ಸಿ. ಹಯವದನರಾಯರು ಆ ಭಾಷ್ಯದ ಕಾಲವನ್ನು ೧೪ನೆಯ ಶತಮಾನದವರೆಗೆ ಬಲಾತ್ಕಾರವಾಗಿ ಎಳದಿರುವರೆ ಹೊರತು ಅದರಲ್ಲಿ ತಥ್ಯಾಂಶವೇನೂ ಇಲ್ಲ. ಯಾರಿಂದಲೋ ಅನ್ಯರಿಂದ ಇತ್ತೀಚೆಗೆ ಸೇರಿಸಲ್ಪಟ್ಟ ಮಧ್ವಶಬ್ದವನ್ನು ಬಹಳವಾಗಿ ನಂಬಿಕೊಂಡು ಶ್ರೀಕಂಠಾಚಾರ್ಯ ಭಾಸ್ಕರಾಚಾರ್ಯರ ಕಾಲವನ್ನೂ ಅಸಮಂಜಸವಾಗಿ ನಿರ್ಣಯಿಸಿ ಶ್ರೀಕರಭಾಷ್ಯದ ಶ್ರೀಪತಿಪಂಡಿತನ ಸಮಯವನ್ನೂ ಕೆಳಕ್ಕೆ ತಳ್ಳಿದ್ದಾರೆ. ಹಯವದನರಾಯರ ಶ್ರೀಕರಭಾಷ್ಯ ಪ್ರತಿಗೆ ಮೂಲವಾದ ದೇವಿಡೀ ಜಮೀಂದಾರ್ ಶ್ರೀ ಕಂದುಕೂರು ಬಾಲಸೂರ್ಯ ಪ್ರಸಾದ ಮಹಾಶಯರ ಪ್ರಾಚೀನ ಪ್ರತಿಯಲ್ಲಾಗಲಿ ಸಿಕಿಂದ್ರಾಬಾದಿನ ಪ್ರಾಚೀನ ಬರಹದ ಪ್ರತಿಯಲ್ಲಾಗಲಿ ಮಧ್ವಶಬ್ದವಿಲ್ಲ. ಶ್ರೀಕಂಠಾಚಾರ್ಯನ ಕಾಲವಾದರೂ ಮದ್ರಾಸ ಯುೂನಿವರ್ಸಿಟಿಯ " Sivadwaita Sreekantha " (ಶ್ರೀಕಂಠನ ಶಿವಾದ್ವೈತ) ಎಂಬ ಪುಸ್ತಕದಲ್ಲಿ ಹತ್ತನೆಯ ಶತಾಬ್ದಿಯೊಂದು ನಿರ್ಣೀತವಾಗಿದೆ. ಹಯವದನರಾಯರು ಮಾಡಿದ ಕಾಲ ಸೂಚನೆಗಳೆಲ್ಲವೂ "ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ"ವೆಂಬ

ಪುಸ್ತಕದಲ್ಲಿ ಸಪ್ರಮಾಣವಾಗಿ ನಿರಾಕರಿಸಲ್ಪಟ್ಟಿವೆ. ಇವರ ಇಂಗ್ಲೀಷು
ಪೀಠಿಕೆಯನ್ನು ನೋಡಿ ಸಿದ್ಧಾಂತಶಿಖಾಮಣಿಗೆ ಸೊಸಲೆ ರೇವಣಾರಾ
ಧ್ಯನು ಕರ್ತನೆಂಬುದನ್ನೂ ನಾರಾಯಣರಾಯರು ನಂಬಿರಬಹುದು.
ಹಯವದನರಾಯರೇನೋ ಮದ್ರಾಸು ಓರಿಯಂಟಲ್ ಲೈಬ್ರರಿಯ ಕೇಟ
ಲಾಗನ್ನು ನೋಡಿ ಕರ್ತೃನಿರ್ಣಯ ಮಾಡಿಕೊಂಡಿರುವರು. ಮೂಲ
ಗ್ರಂಥವನ್ನು ನೋಡದೆ ಪರಪ್ರತ್ಯಯ ಮಾಡಿದರೆ ಇದಕ್ಕೂ ಹೆಚ್ಚಿನ
ಫಲವಾಗಲಾರದೆಂಬುದು ಸರಿಯೇ! ಶ್ರೀಕಂಠಶಿವಾಚಾರ್ಯನೂ ತನ್ನ
ಬ್ರಹ್ಮಸೂತ್ರಭಾಷ್ಯದ ಚತುರ್ಥಾಧ್ಯಾಯ ೪ನೆಯ ಪಾದದ "ಅವಿಭಾ
ಗೇನ ದೃಷ್ಟತ್ವಾತ್" ಎಂಬ ಸೂತ್ರವ್ಯಾಖ್ಯಾನದಲ್ಲಿ ಸಿದ್ಧಾಂತಶಿಖಾಮ
ಣಿಯ (೯-೧೪) "ಮುಕ್ತಃ ಶಿವಸಮೋ ಭವೇತ್" ಎಂಬ ಪ್ರಮಾಣ
ವನ್ನುದ್ಧರಿಸಿದ್ದಾನೆ. ಇದರಿಂದ ಸಿದ್ಧಾಂತಶಿಖಾಮಣಿಯು ಹತ್ತನೆಯ
ಶತಮಾನದಲ್ಲಿ ಪ್ರಸಿದ್ಧವಾಗಿದ್ದಿತೆಂಬುದು ಸ್ಪಷ್ಟವಾಗುತ್ತಿದೆ. ಅದರ ರಚನೆ
ಪ್ರತಿಪಾದನೆ ಮೊದಲಾದವುಗಳು ಕೂಡ ಅದರ ಪ್ರಾಚೀನತ್ವವನ್ನು ಸೂಚಿ
ಸಲು ಸಮರ್ಥವಾಗಿವೆ.

ಶ್ರೀ ಸಿ. ನಾರಾಯಣರಾಯರೇ ಇತ್ತೀಚೆಗೆ ಪ್ರಕಟಿಸಿದ ತೆಲುಗು
ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿಯೂ ಪ್ರಬುದ್ಧ ಕರ್ಣಾಟಕದ
ಲೇಖದಲ್ಲಿಯೂ ಹಯವದನರಾಯರ ಶ್ರೀಕರಭಾಷ್ಯ ಶ್ರೀಪತಿ ಪಂಡಿತ
ಕಾಲನಿರ್ಣಯವನ್ನು ಸರಿಯಾದುದಲ್ಲವೆಂದು ಹೇಳಿ ಶ್ರೀಪತಿ ಪಂಡಿತನು
೧೧ನೆಯ ಶತಮಾನದಲ್ಲಿದ್ದನೆಂಬುದನ್ನು ಸ್ವೀಕರಿಸಿದ್ದಾರೆ. ಅವನು ರಚಿ
ಸಿದ ಭಾಷ್ಯದಲ್ಲಿಯೇ ಸಗೌರವವಾಗಿ ಉದ್ಧರಿಸಲ್ಪಟ್ಟ ಸಿದ್ಧಾಂತಶಿಖಾ
ಮಣಿಯ ವಿಷಯವಾಗಿ "ಈ ಗ್ರಂಥವು ಈಚೆಯದು" ಎಂದು ಹೇಳು
ವದಾದರೆ ಹಯವದನರಾಯರ ಪೀಠಿಕೆಯ ಹೊರತು ಶ್ರೀಕರಭಾಷ್ಯ
ವನ್ನಾಗಲಿ ಸಿದ್ಧಾಂತಶಿಖಾಮಣಿಯನ್ನಾಗಲಿ ನಾರಾಯಣರಾಯರು ಅವ
ಲೋಕನೆ ಮಾಡಿಲ್ಲವೆಂತಲೇ ಭಾವಿಸಬೇಕಾಗುವುದು.

ಶ್ರೀ ತೋಂಟದಾರ್ಯರು ಸಿದ್ಧಾಂತಶಿಖಾಮಣಿಗೆ ತತ್ತ್ವದೀಪಿಕೆ
ಯೆಂಬ ಸಂಸ್ಕೃತ ಟೀಕೆಯನ್ನು ರಚಿಸಿದ್ದಾರೆ. ಅವರು ೧೬ನೆಯ ಶತ
ಮಾನದವರು ಅಂದರೆ ಬಹಳ ಆಧುನಿಕರಾದುದರಿಂದ ಸಿದ್ಧಾಂತಶಿಖಾ
ಮಣಿಯಲ್ಲಿರುವ "ಮುದ್ದದೇವ" ಎಂಬ ಶಬ್ದವನ್ನು ನೋಡಿ ತಮ್ಮ
ಕರ್ಣಾಟಕದ ಸೋಲಾಪುರದ ಮುದ್ದನ ಗೌಡನೆಂದು ಭ್ರಮಿಸಿ "ಸಿದ್ಧ

ನಾಥ" ನೆಂಬ ಹೆಸರಿಗೆ ಸಿದ್ಧರಾಮನೆಂಬ ವಿಪರೀತಾರ್ಥವನ್ನು ಬರೆದಿದ್ದಾರೆ. ಇದು ಸಹಜವಾಗಿ ಜರುಗಿದ ಪಂಡಿತಪ್ರಮಾದವಾಗಿದೆ. ಇದನ್ನೇ ಪರಮಾರ್ಥವೆಂದು ನಂಬಿ ಸಿದ್ಧಾಂತಶಿಖಾಮಣಿಯ ಕಾಲವನ್ನು ೧೨ನೆಯ ಶತಾಬ್ದಿಯೆಂದು ತಿಳಿದವರೂ ಕೆಲವರುಂಟು. ಇದರಲ್ಲಿ ಎಷ್ಟೂ ಸತ್ಯಾಂಶವಿಲ್ಲ. ತೆಲಗುದೇಶದ ಕೊಲನುಪಾಕೆ (ಕುಲ್ಯಪಾಕ) ಯಲ್ಲಿ ಅವತರಿಸಿದ ರೇಣುಕನ ಮಹಿಮೆ ವಿಶೇಷಗಳನ್ನು ಪರಂಪರೆಯಾಗಿ ತನ್ನ ಆಚಾರ್ಯ ವಂಶಪುರುಷರಿಂದ ತಿಳಿದ ಆಂಧ್ರ ದೇಶದವನೇ ಆದ ಶಿವಯೋಗಿ ಶಿವಾಚಾರ್ಯನು ಸಿದ್ಧಾಂತಶಿಖಾಮಣಿಯನ್ನು ರಚಿಸಿರುವನು. ಸಿದ್ಧಾಂತಶಿಖಾಮಣಿಯ ಶ್ಲೋಕಗಳಲ್ಲಿ ಅನೇಕ ಕಡೆ ಆಂಧ್ರಭಾಷೆಯ ಸಂಪ್ರದಾಯದಂತೆ ಯತಿಸ್ಥಾನವನ್ನು ಸಮಾಕ್ಷರ ಮೈತ್ರಿಯಿಂದ ರಚಿಸಿದ ಪಾದಗಳಿರುವದರಿಂದ ಆತನು ಆಂಧ್ರದೇಶದ ಕವಿಯೆಂದು ಸುಲಭವಾಗಿ ತಿಳಿಯಬಹುದು. ಯತಿಸ್ಥಾನದಲ್ಲಿ ಅಕ್ಷರಮೈತ್ರಿಯ ಪದ್ಧತಿಯು ಕನ್ನಡ ಭಾಷೆಯದಲ್ಲ. ಇದರ ಪ್ರಸ್ತಾರವು ಮತ್ತೊಮ್ಮೆ ಪ್ರಕಟಿಸಲಾಗುವುದು. ಸಿದ್ಧರಾಮನಿಗೆ ಶಿವಯೋಗಿಯೆಂಬ ಮಗನಿದ್ದಂತೆಯೂ ಪೌರಾಣಿಕ ಪ್ರತೀತಿಯಿಲ್ಲ. ಸಿದ್ಧಾಂತಶಿಖಾಮಣಿಯಲ್ಲಿಯ ಸಿದ್ಧನಾಥನು ಸೊನ್ನಲಿಗೆಯ ಸಿದ್ಧರಾಮನೆಂದಿಗೂ ಅಲ್ಲ. ಸಿದ್ಧರಾಮನೇ ಆದ ಪಕ್ಷದಲ್ಲಿ ಆ ಹೆಸರನ್ನು ಸ್ಪಷ್ಟವಾಗಿ ಬರೆಯಲು ಛಂದೋಭಂಗಾದಿ ಯಾವ ಪ್ರತಿಬಂಧಕವೂ ಇರಲಿಲ್ಲ. ಮುದ್ದದೇವನು ಮುದ್ದನಗೌಡನೂ ಆಗಲಾರ. ಸೊನ್ನಲಿಗೆಯ ಮುದ್ದನಗೌಡನು ಲಿಂಗಾಂಗಿಯಲ್ಲ. ಸಿದ್ಧಾಂತಶಿಖಾಮಣಿಯ ಮುದ್ದದೇವನು ಅನೂಚಾನವಾಗಿ ಬಂದ ವೀರಶೈವಾಚಾರ್ಯ ಕುಲದಲ್ಲಿ ಹುಟ್ಟಿದವನೆಂತಲೂ ಇವರೆಲ್ಲರೂ ವೇದಾಗಮವಿಶಾರದರೂ ತಪಸ್ಸಂಪನ್ನರೂ ಆಗಿದ್ದರೆಂತಲೂ ಗ್ರಂಥಕರ್ತೃ ವಂಶಪರಿಚಯದಿಂದ ಸುಲಭವಾಗಿ ತಿಳಿಯತಕ್ಕ ಮಾತಾಗಿದೆ. ಶಿವಯೋಗಯ್ಯ ಮುದ್ದಯ್ಯ ಸಿದ್ಧನಾಥಯ್ಯ ಎಂಬ ಹೆಸರುಗಳು ಕುಲ್ಯಪಾಕದ ಪ್ರಾಚೀನ ಮಾಹೇಶ್ವರರಲ್ಲಿ ಹೆಚ್ಚಾಗಿಯೂ ಈಗ ಸ್ವಲ್ಪವಾಗಿಯೂ ಇವೆ. ರೇಣುಕನಿಗೆ ಸಿದ್ಧನಾಥನೆಂಬ ವಿಶೇಷಣವಿದ್ದಂತೆಯೂ (೨೧-೫೦) ಕುಲ್ಯಪಾಕವೆಂಬ ಕ್ಷೇತ್ರವು ರೇಣುಕನಿಗೆ ಸ್ವಸ್ಥಲವಾಗಿದ್ದಂತೆಯೂ (೨೧-೩೯) ಸಿದ್ಧಾಂತಶಿಖಾಮಣಿಯಿಂದ ಸ್ಪಷ್ಟವಾಗಿ ತಿಳಿಯುತ್ತಿರುವದರಿಂದ ಈ ಗ್ರಂಥವು ಆಂಧ್ರದೇಶದಿಂದ ಅವತರಿಸಿತೆಂದು ನಿರ್ಣಯಿಸುವದೇ ಸಮಂಜಸವಾಗಿದೆ. ಇದು ಸ್ವಲ್ಪ ಸೂಕ್ಷ್ಮಾಂಶವಾದುದರಿಂದ ಆಧುನಿಕರಾದ ಪೌರಾ

ಣಿಕರೂ ಕೆಲವು ಕರ್ನಾಟಕ ಲೇಖಕರೂ ರೇಣುಕ ರೇವಣಸಿದ್ಧ ಎಂಬ ಹೆಸರುಗಳುಳ್ಳ ಅನೇಕ ವ್ಯಕ್ತಿಗಳನ್ನು ತಿಳಿಯದೆ ತದ್ವಿವಾಡೆಯ ರೇವಣ ಸಿದ್ಧನಿಗೆ ಗಂಟುಹಾಕಿಕೊಂಡು ರೇಣುಕಾಚಾರ್ಯನ ಕಾಲವನ್ನು ೧೨ನೆಯ ಶತಾಬ್ದವೆಂದು ಬರೆದುಕೊಳ್ಳುತ್ತಿದ್ದಾರೆಯೇ ಹೊರತು ಇದು ಐತಿಹಾಸಿಕ ಸತ್ಯವಲ್ಲ. ರೇಣುಕನ ಉಪದೇಶರೂಪವಾಗಿ ಶಿವಯೋಗಿ ಶಿವಾಚಾರ್ಯನಿಂದ ರಚಿತವಾದ ಸಿದ್ಧಾಂತಶಿಖಾಮಣಿಯು ೧೦ನೆಯ ಶತಾಬ್ದದಲ್ಲಿಯೇ ಪ್ರಸಿದ್ಧವಾಗಿದ್ದು ವಿದ್ವದಾದರವನ್ನು ಪಡೆದಿದ್ದಿತೆಂಬುದಕ್ಕೆ ಶ್ರೀಕಂಠ ಶ್ರೀಕರಭಾಷ್ಯಗಳೇ ಸಾಕ್ಷಿಯಾಗಿವೆ.

ಶ್ರೀಕರಭಾಷ್ಯದಲ್ಲಿಯ ಸಿದ್ಧಾಂತವು "ಬಸವನ ಅನಂತರದಲ್ಲಿ ವಿಸ್ತರಿಸಿದ ವೀರಶೈವಸಿದ್ಧಾಂತದಿಂದ ಭೇದಿಸುತ್ತದೆ." ಎಂಬ ವಿಚಿತ್ರಘೋಷಣೆಯನ್ನು ಅವರು ಬೈಲಿಗೆ ಹಾಕಿದ್ದಾರೆ. ಶ್ರೀಮಾನ್ ನಾರಾಯಣರಾಯರು ದಯಮಾಡಿ ಮೂಲಗ್ರಂಥಗಳಾದ ಶಿವಾಗಮ ಸಿದ್ಧಾಂತಶಿಖಾಮಣಿಗಳನ್ನೂ ಶ್ರೀಕರಭಾಷ್ಯವನ್ನೂ ಸ್ವತಃ ನೋಡಿ ಉಭಯ ಸಿದ್ಧಾಂತಗಳಿಗೆ ಇರುವ ವಿರೋಧವನ್ನು ಆಯಾ ಗ್ರಂಥಗಳ ಸ್ಥಲ ನಿರ್ದೇಶಪೂರ್ವಕವಾಗಿ ಪ್ರತಿಪಾದಿಸುವದಾದರೆ ತಕ್ಕ ಸಮಾಧಾನವನ್ನು ಬರೆಯಬಹುದು. ಹಯವದನರಾಯರ ಉಪೋದ್ಘಾತವನ್ನೇ ಅನುಸರಿಸಿ ಬರೆಯುತ್ತ ಹೋದರೆ ಪ್ರಯೋಜನವಾಗಲಾರದು. ಶ್ರೀಕರಭಾಷ್ಯದಲ್ಲಿ ಹೇಳಲ್ಪಟ್ಟ ಸೃಷ್ಟಿ, ಸ್ಥಿತಿ, ಲಯ, ವಾಚಿಕ, ಕಾಯಿಕ, ಮಾನಸಿಕ ಎಂಬ ಷಟ್‌ಸ್ಥಲಗಳು ವೀರಶೈವ ಗ್ರಂಥಗಳಲ್ಲಿ ದೊರೆಯವೆ 'ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಎಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿರುವದರಿಂದ ಪ್ರಾಚೀನ ವೀರಶೈವ ಮತಕ್ಕಿಂತಲೂ ಅರ್ವಾಚೀನ ವೀರಶೈವಮತವು ಬೇರೆ ಇದೆಯೆಂದು ನಾರಾಯಣ ರಾಯರು ಬರೆದಿದ್ದಾರೆ. ಇದು ಅತ್ಯದ್ಭುತವಾದ ಪೂರ್ವಪಕ್ಷವೆಂದು ಅವರು ನಂಬಿರಬಹುದು. ಭಾಷ್ಯದಲ್ಲಿ ನಿರೂಪಿಸತಕ್ಕ ವಿಷಯಗಳಾವುವೆಂಬುದು ಅವರಿಗೆ ಬೇಕಾಗಿಲ್ಲ. ತಾವು ಕೇಳಿದ ಪ್ರಶ್ನೆಗಳಿಗೆ ಭಾಷ್ಯದಲ್ಲಿ ಉತ್ತರ ದೊರೆತರೆ ಅದನ್ನು ವೀರಶೈವ ಗ್ರಂಥವನ್ನಾಗಿ ಸ್ವೀಕರಿಸಲು ಅವರು ಸಂಸಿದ್ಧರಾಗಿರುವರು. ಇದು ಸಾಮಾನ್ಯವಾದ ಉಪಕಾರವಲ್ಲ. ಮನುಸ್ಮೃತಿಯಲ್ಲಿರುವ ಸ್ಮಾರ್ತಪ್ರಕ್ರಿಯೆಗಳೆಲ್ಲ ಶಂಕರಭಾಷ್ಯದಲ್ಲಿಯೂ ಪಾಂಚರಾತ್ರಾಗಮಪ್ರಕ್ರಿಯೆಗಳೆಲ್ಲ ರಾಮಾನುಜಭಾಷ್ಯದಲ್ಲಿಯೂ

ಪ್ರತಿಪಾದಿಸಲ್ಪಟ್ಟಿವೆ ಎಂಬ ನಂಬಿಕೆಯಿಂದ ಶಿವಾಗಮದ ಪ್ರಕ್ರಿಯೆಗಳಾದ ಏಕೋತ್ತರ ಶತಸ್ಥಲಗಳೂ ಲಿಂಗಧಾರಣವಿಧಾನವೂ ಪಾದಪೂಜಾಪದ್ಧತಿಯೂ ಸಮಾಧಿಮಾಡುವ ಸಲಕರಣಗಳೂ ಶ್ರೀಕರಭಾಷ್ಯದಲ್ಲಿ ವಿವರಿಸಲ್ಪಡದಿರುವದರಿಂದ ಅದು ಅರ್ವಾಚೀನ ವೀರಶೈವರ ಗ್ರಂಥವಲ್ಲವೆಂದು ನಿರ್ಣಯಿಸತಕ್ಕ ಮಹಾನುಭಾವರಿಗೆ ಹೇಳತಕ್ಕದಿಲ್ಲ. ಶ್ರೀಕರಭಾಷ್ಯವು ಶಿವತತ್ತ್ವ, ಭೇದಾಭೇದ (ಶಕ್ತಿವಿಶಿಷ್ಟಾದ್ವೈತ), ಲಿಂಗಧಾರಣ ಶಿವಜಗತ್ಕಾರಣತ್ವ, ಶಿವಾಗಮ ಪ್ರಾಮಾಣ್ಯಗಳೆಂಬ ಮುಖ್ಯವಾದ ವಿಷಯಗಳನ್ನು ಸಿದ್ಧಾಂತಗೊಳಿಸಲು ಹುಟ್ಟಿರುವದೇ ಹೊರತು ವೀರಶೈವರ ಎಲ್ಲ ವಿಷಯಗಳನ್ನೂ ಸಂಗ್ರಹಿಸುವದಕ್ಕಲ್ಲ. ಶಿವಪರಬ್ರಹ್ಮನ ಸವಿಶೇಷತ್ವವನ್ನೂ ಸರ್ವಕರ್ತೃತ್ವವನ್ನೂ ಸಿದ್ಧಾಂತಗೊಳಿಸುವ ಪ್ರಸಂಗದಲ್ಲಿ ಅವನಿಗೆ ಸೃಷ್ಟಿಸ್ಥಿತಿಲಯವಾಚಕ ಕಾಯಿಕ ಮಾನಸಿಕ (ಇಚ್ಛಾಕ್ರಿಯಾಜ್ಞಾನ) ಗಳೆಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿವೆ. ಅಂದರೆ ಶಿವನ ವಿವಿಧ ಶಕ್ತಿಗಳೇ ಜಗತ್ತಿಗೆ ಉಪಾದಾನಕಾರಣವೆಂಬುದು ನಿರೂಪಿಸಲಾಗಿದೆ. ಇವು ಆರೂ ಶಿವನ ಶಕ್ತಿಗಳೇ ಹೊರತು ಬೇರಲ್ಲ. ಇವು ಸಹಜವಾಗಿ ಸೃಷ್ಟಿಸ್ಥಿತಿಲಯತಿರೋಧಾನ ಅನುಗ್ರಹಗಳೆಂಬ ಶಿವಾಗಮಗಳ ಪಂಚಕೃತ್ಯಗಳಲ್ಲಿ ಅಂತರ್ಗತವಾಗಿವೆ. ಇವನ್ನೇ ಶ್ರೀಕರ ಭಾಷ್ಯಕಾರನು ಸ್ಥಲಗಳೆಂದು ಹೇಳಿದ್ದಾನೆ. ಇದು ಆತನಿಗೆ ಬಹಳ ಇಷ್ಟವಾದ ವಿಷಯವಾದುದರಿಂದ ಶಿವನಿಗೆ "ಅದ್ವಿತೀಯ ಷಟ್‌ಸ್ಥಲ ಪರಶಿವಬ್ರಹ್ಮ" ಎಂಬ ವಿಶೇಷಣವನ್ನು ಅನೇಕಸಲ ಉಪಯೋಗಿಸಿದ್ದಾನೆ. ಈ ವಿಶೇಷಣವು ಶಿವನ ಹೊರತು ಮತ್ತಾರಿಗೂ ಸಲ್ಲತಕ್ಕುದಲ್ಲವೆಂಬ ಅಭಿಪ್ರಾಯವನ್ನು "ಅದ್ವಿತೀಯ" ಶಬ್ದದಿಂದ ಶ್ರೀಕರಭಾಷ್ಯಕಾರನು ಸಾರಿದ್ದಾನೆ. ಈ ಪ್ರಸಂಗದಲ್ಲಿ ಜೀವನು ಭಕ್ತಾದಿ ಷಟ್‌ಸ್ಥಲಕ್ರಮವನ್ನು ಅನುಸರಿಸಿ ದೇವತ್ವವನ್ನು ಸಂಪಾದಿಸುವ ಪದ್ಧತಿಯು ಶ್ರೀಕರಭಾಷ್ಯಕಾರನಿಂದ ನಿರೂಪಿತವಾಗಿಲ್ಲ. ಆದರೆ ಭಾಷ್ಯಕಾರನು ಈ ವಿಷಯವನ್ನೇ ಹೇಳಿಲ್ಲವೆಂಬುದು ಅಸಂಬದ್ಧ ವಿಧಾನವಾಗಿದೆ. ಶ್ರೀಕರಭಾಷ್ಯದ ಪ್ರಥಮಾಧ್ಯಾಯ ದ್ವಿತೀಯ ಸೂತ್ರದ ಕಡೆಯ ಭಾಷ್ಯದಲ್ಲಿ—

"ಯದ್ಭಕ್ತಸ್ಥಲಮಿತ್ಯಾಹುಸ್ತತ್ಸರ್ವಜ್ಞತ್ವಮುಚ್ಯತೇ ।
ಯನ್ಮಾಹೇಶರಕಂ ನಾಮ ಸಾ ತೃಪ್ತಿರ್ಮಮ ಶಾಂಕರಿ ॥
ಯತ್ಪ್ರಸಾದಾಭಿಧಂ ನಾಮ ತದ್ಬೋಧೋ ಮೇ ನಿರಂಕುಶಃ ।
ಯತ್ಪ್ರಾಣಲಿಂಗಕಂ ನಾಮ ತತ್ಸ್ವಾತಂತ್ರ್ಯಮುದಾಹೃತಂ ॥

ಯದಸ್ತಿ ಶರಣಂ ನಾಮ ಹ್ಯಲುಪ್ತಾ ಶಕ್ತಿರುಚ್ಯತೇ ।
ಯದೈಕ್ಯಸ್ಥಲಮೂರ್ಧ್ವಸ್ಥಂ ಹ್ಯನಂತಾ ಶಕ್ತಿರುಚ್ಯತೇ ॥
(ಇತಿ ಜನ್ಮಾದ್ಯಧಿಕರಣಾಂತೇ)

ಎಂದು ಭಕ್ತ, ಮಾಹೇಶ್ವರ, ಪ್ರಸಾದ, ಪ್ರಾಣಲಿಂಗ, ಶರಣ, ಐಕ್ಯ, ಸ್ಥಳಗಳನ್ನು ಭೇರೀನಿನಾದದಿಂದ ಹೇಳಿರುವುದು ಪುಸ್ತಕ ನೋಡದವರಿಗೆ ಗೋಚರವಾಗುವುದಿಲ್ಲವಷ್ಟೆ! ವೀರಶೈವನಿಗೆ ಆರು ಸ್ಥಲಗಳೇ ಅಲ್ಲ. ತದಂತರ್ಗತಗಳಾದ ನೂರೊಂದು ಸ್ಥಲಗಳಿವೆ ಇವೆಲ್ಲವೂ ಶಿವಾಗಮಗಳಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ಹೇಳಿರುವದನ್ನು ತಿಳಿಯದೆ "ಈ ವಿವರಣವು ಎಂದಿನಿಂದ ಬರುತ್ತಿದೆಯೋ ಹೇಳಲಿಕ್ಕೆ ಆಧಾರಗಳಿಲ್ಲ" ವೆಂದು ನಾರಾಯಣಾಯರು ಚಿಂತಿಸುತ್ತಿದ್ದಾರೆ. ಅವರ ಈ ಬರಹವು ಕೇವಲ ನಿರಾಧಾರವಾಗಿದೆ. ವೀರಶೈವಮತದ ಗ್ರಂಥಗಳನ್ನು ಅವಲೋಕಿಸದೆ ಕೇವಲ ಊಹೆಗಳಿಂದಲೇ ಮತಚರಿತ್ರೆಯನ್ನೂ ತತ್ತ್ವಗಳನ್ನೂ ನಿರೂಪಿಸುವುದು ಸುಲಭವಲ್ಲ.

ಶಿವತತ್ತ್ವಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ರಚಿಸಿರುವುದು ಆಂಧ್ರದೇಶದಲ್ಲಿ ಸುಪ್ರಸಿದ್ಧವಾದ ವಿಷಯ. ಅದನ್ನು ಪ್ರಕಟಿಸಿದ ಆಂಧ್ರಸಾಹಿತ್ಯ ಪರಿಷತ್ತಿನವರೂ ಶ್ರೀ ಕೊ॥ ಲಕ್ಷ್ಮಣರಾಯರಂತಹ ಉದ್ದಾಮ ಪರಿಶೋಧಕರೂ ಅದನ್ನು ಪಂಡಿತಾರಾಧ್ಯರ ಕೃತಿಯೆಂದೇ ನಿರ್ಣಯಿಸಿದ್ದಾರೆ. ಆ ಗ್ರಂಥದಲ್ಲಿ ಸ್ವತಃ ಮಲ್ಲಿಕಾರ್ಜುನ ಪಂಡಿತನೇ—

ಒಂಡೇನಿ ಮಲ್ಲಿಕಾರ್ಜುನ
ಪಂಡಿತುಡನ ನುಂಡುಕಂಟಿ ಪ್ರಮಥಲಲೋನೆ
ನ್ನಂಡೊಕೊ ನೀ ಯಾಜ್ಞೋನ್ನತಿ
ನುಂಷಂ ಗಾಂತು ನನಿ ಕೋರುಚುಂಡುದು ರುದ್ರಾ

ಎಂಬ ಪದ್ಯದಿಂದ ತಾನೇ ಈ ಶಿವತತ್ತ್ವಸಾರವನ್ನು ರಚಿಸಿದ್ದಾನೆಂಬುದನ್ನು ಸ್ಪಷ್ಟಗೊಳಿಸಿದ್ದಾನೆ. ಆತನ ಅನಂತರದಲ್ಲಿದ್ದ ಪಾಲ್ಕುರಿಕಿ ಸೋಮನಾಥನು ತನ್ನ ಪಂಡಿತಾರಾಧ್ಯ ಚರಿತ್ರೆಯ ದೀಕ್ಷಾಪ್ರಕರಣದಲ್ಲಿ—

ಅಂತ ಬಂಡಿತಮಲ್ಲಿಕಾರ್ಜುನ ಪ್ರಭುವು.
ಶಿವತತ್ತ್ವಸಾರ ಸಂಚಿತ ಮಹಾಮಹಿಮ
'ಶಿವತತ್ತ್ವಸಾರ'ಮ್ಮು ಶಿವಕೃತಿ ಜೊಗಡು

ಎಂಬ ಅಂಶದಿಂದಲೂ ಚತುರ್ವೇದಸಾರದಲ್ಲಿಯ ಮತ್ತೊಂದು ಪದ್ಯದಿಂದಲೂ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ಆ ಗ್ರಂಥವನ್ನು ರಚಿಸಿದ್ದಾನೆಂದು ಹೇಳಿದ್ದಾನೆ. ಆಂಧ್ರಲೋಕವೆಲ್ಲವೂ ಇದನ್ನೇ ನಿಜವೆಂದು ತಿಳಿದಿದೆ. ಇದೇ ಡಾ. ನಾರಾಯಣರಾಯರೂ ಇತ್ತೀಚೆಗೆ ತಾವು ಪ್ರಕಟಿಸಿದ ಆಂಧ್ರ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿ (ಪುಟ ೭೯) ಶಿವತತ್ತ್ವಸಾರವನ್ನು ಪಂಡಿತಾರಾಧ್ಯನ ಕೃತಿಯೆಂತಲೇ ಬರೆದಿದ್ದಾರೆ. ಆದರೆ ಪ್ರಬುದ್ಧ ಕರ್ಣಾಟಕದ ಗತಲೇಖದಲ್ಲಿ "ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವತತ್ತ್ವಸಾರವನ್ನು ಬರೆಯಲಿಲ್ಲವೆಂದೇ ನನ್ನ ಅಭಿಪ್ರಾಯ" ವೆಂದು ಸಾರಿದ್ದಾರೆ. ೧೨ನೆಯ ಶತಾಬ್ದಿಯ ಇಷ್ಟು ಸುಪ್ರಸಿದ್ಧವಾದ ಗ್ರಂಥವನ್ನು ೧೪ನೆಯ ಶತಮಾನದ ವರೆಗೆ ಎಳೆಯುವದಕ್ಕಾಗಿ ಅವರು ತೋರಿಸಿದ ಯುಕ್ತಿಯು ಹೀಗಿದೆ— "ಸೋಮನಾಥನ ಪಂಡಿತಾರಾಧ್ಯ ಚರಿತ್ರದಲ್ಲಿ ಶಿವತತ್ತ್ವಸಾರವೆಲ್ಲಾ ಪ್ರತ್ಯಕ್ಷರವೂ ಸೇರಿದೆ. ಸೋಮನಾಥನಂತಹ ಮಹಾತ್ಮರಿಗೆ ಗ್ರಂಥಚೌರ್ಯವನ್ನು ಆಪಾದಿಸುವದು ನ್ಯಾಯವಲ್ಲ. ತಾನೇ ತನ್ನ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಪಂಡಿತಾರಾಧ್ಯನ ಹೆಸರಿನಿಂದ ಪ್ರಕಟಿಸಿರಬಹುದೆಂದು ನನಗೆ ತೋರುತ್ತದೆ."

ಸೋಮನಾಥನಂತಹ ಮಹಾತ್ಮನು ಗ್ರಂಥಚೌರ್ಯ ಮಾಡುವುದು ಅನುಚಿತವಾಗಿದ್ದರೆ, ತಾನು ಸೃಷ್ಟಿಸಿದ ಗ್ರಂಥವನ್ನು ಸುಪ್ರಸಿದ್ಧ ಪಂಡಿತಶಿರೋಮಣಿಯಾದ ಮಲ್ಲಿಕಾರ್ಜುನ ಪಂಡಿತನ ಹೆಸರಿನಿಂದ ಪ್ರಕಟಿಸಿದನೆಂಬುದು, "ಮದ್ಯಪಾನ ಮಾಡಿಲ್ಲ, ಮಾಂಸಭಕ್ಷಣ ಮಾಡಿದ್ದಾನೆ" ಎಂಬ ಹಾಗಿದೆ. ಅಖಂಡ ಪಂಡಿತನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಅನೇಕ ಗ್ರಂಥಗಳು ರಚಿಸಲ್ಪಟ್ಟಿದ್ದರೂ ಸೌಭಾಗ್ಯವಶದಿಂದ ಶಿವತತ್ತ್ವಸಾರವೊಂದು ಮಾತ್ರ ಲಭಿಸಿದೆ. ಅದು ಶೈಲಿಯಲ್ಲಿಯೂ ವಿಷಯನಿರೂಪಣ ಪದ್ಧತಿಯಲ್ಲಿಯೂ ಪ್ರತ್ಯೇಕತೆಯುಳ್ಳದ್ದಾಗಿ ಸೋಮನಾಥನ ಕವಿತೆಗಿಂತಲೂ ಭಿನ್ನತೆಯನ್ನು ಸ್ಪಷ್ಟಗೊಳಿಸಲು ಸಮರ್ಥವಾಗಿದೆ. ಅದನ್ನು ಸೋಮನಾಥನು ರಚಿಸಿರುವನೆಂಬುದು ಕೇವಲ ಸಾಹಸದ ಮಾತು. ಅದನ್ನು ನೋಡಿಯೇ ಸೋಮನಾಥನು ಅನುಭವಸಾರವನ್ನೂ ಕಾಕತಿ ಗಣಪತಿ ದೇವನು ಶಿವಯೋಗಸಾರವನ್ನೂ ರಚಿಸಿದ್ದಾರೆ. ಅನುಭವಸಾರವೆಂಬ ಕೃತಿಯಲ್ಲಿಯೇ ಶಿವತತ್ತ್ವಗಳನ್ನು ಸೋಮನಾಥನು

ನಿರೂಪಿಸಿರುವಾಗ ಮತ್ತೊಂದು "ಶಿವತತ್ತ್ವಸಾರ"ವನ್ನು ಬರೆದು ಪಿಷ್ಟ ಪೇಷಣಮಾಡುವ ಆವಶ್ಯಕತೆಯೇ ಇಲ್ಲ. ಸೋಮನಾಥನು ಆಂಧ್ರಭಾಷಾ ಪಾರಂಗತನೂ ವೇದವೇದಾಂತಾಭಿಜ್ಞನೂ ಆದ ಪ್ರೌಢಕವಿಯಾಗಿದ್ದಾನೆ. ಅವನು ವೇದೋಪನಿಷತ್ಸಾರಗಳನ್ನು ಹೇಳುವಾಗ ತನ್ನ ಕವಿತೆಯಲ್ಲಿ ಆಯಾ ವೇದವಾಕ್ಯಗಳನ್ನೇ ಹೊಂದಿಸಿದ್ದಾನೆ. ಇಂತಹ ಪ್ರಚಂಡ ಪ್ರತಿಭೆಯಿಂದ ಆತನ ದ್ವಿಪದ ಕಾವ್ಯವು ತುಂಬಿತುಳುಕುತ್ತಿದೆ. ಅದ ರಂತೆಯೇ ತನ್ನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಶ್ರೀಮಲ್ಲಿಕಾರ್ಜುನ ಪಂಡಿ ತಾರಾಧ್ಯನ ಉಪದೇಶ ವಿಶೇಷಗಳನ್ನು ತಿಳಿಸುವದಕ್ಕಾಗಿ ಆತನ ಶಿವ ತತ್ವಸಾರವನ್ನೇ ಆಯಾ ವಾಕ್ಯಗಳಲ್ಲಿ ಸಂಗ್ರಹಿಸಿ ಸೋಮನಾಥನು ನಿರೂಪಿಸುತ್ತ ಗ್ರಂಥರಚನೆ ಮಾಡಿರುವದು ಸಯುಕ್ತಿಕವಾಗಿಯೂ ಸಂಪ್ರ ದಾಯಶುದ್ಧವಾಗಿಯೂ ಇದೆ. ಪಂಡಿತಾರಾಧ್ಯನ ಸಿದ್ಧಾಂತವನ್ನು ಪಂಡಿ ತಾರಾಧ್ಯನ ವಾಕ್ಯಗಳಿಂದಲೇ ಹೇಳಿರುವ ಪದ್ಧತಿಯು ಪ್ರಶಂಸನೀಯ ವಾದುದಲ್ಲವೆ? ಇದನ್ನೇ ಗ್ರಂಥಚೌರ್ಯವೆಂದು ಹೇಳುವದಾದರೆ ಸುಪ್ರಸಿದ್ಧ ಆಚಾರ್ಯರ ಗ್ರಂಥಗಳನ್ನೆಲ್ಲ ಆಧುನಿಕ ಕಲ್ಪಿತಗಳೆನ್ನಬ ಹುದು. ವಿದ್ಯಾರಣ್ಯರ ಪಂಚದಶ್ಯಾದಿ ಗ್ರಂಥಗಳಲ್ಲಿ ಶಾಂಕರಭಾಷ್ಯದ ಅನೇಕ ಸಿದ್ಧಾಂತ ವಾಕ್ಯಗಳು ತುಂಬಿರುವದರಿಂದ ವಿದ್ಯಾರಣ್ಯರೇ ಶಂಕರ ಭಾಷ್ಯವನ್ನು ಹುಟ್ಟಿಸಿರಬಹುದಲ್ಲವೆ! ಅಪ್ಪಯ್ಯದೀಕ್ಷಿತರ ರತ್ನತ್ರಯಪರೀಕ್ಷೆ, ಶಿವಾದ್ವೈತನಿರ್ಣಯ, ಶಿಖರಿಣೀಮಾಲಾ ಮೊದಲಾದ ಗ್ರಂಥಗಳಲ್ಲಿ ಶ್ರೀ ಕಂಠ ಶಿವಾಚಾರ್ಯನ ಭಾಷ್ಯಸೂಕ್ತಿಗಳೂ ಸಿದ್ಧಾಂತವೂ ತುಂಬಿರುವ ದರಿಂದ ಶ್ರೀಕಂಠಭಾಷ್ಯವನ್ನು ಅಪ್ಪಯ್ಯದೀಕ್ಷಿತರೇ ಹುಟ್ಟಿಸಿರಬಹುದು. ಹೀಗೆಯೇ ಅನೇಕ ಗ್ರಂಥಗಳನ್ನು ತಲೆಕೆಳಗೆ ಮಾಡಬಹುದು.

ಶಿವತತ್ತ್ವಸಾರದ ಆಧುನಿಕತ್ವವನ್ನು ಹೇಳುವದರಲ್ಲಿ ಒಂದು ರಹ ಸ್ಯವಿದೆ. ಆ ಗ್ರಂಥದಲ್ಲಿ ಗುರುಜಂಗಮ ನಾಮಗಳೂ ಶ್ರೀಪತಿ ಪಂಡಿತ ನಾಮವೂ ಬಂದಿವೆ. ಇವು ಶ್ರೀಪತಿ ಪಂಡಿತನ ಮತ್ತು ವೀರಶೈವ ಮತದ ಕಾಲವನ್ನು ೧೧ನೆಯ ಶತಮಾನದಕ್ಕಿಂತಲೂ ಹಿಂದೆ ಎಂದು ನಿರ್ಣಯಿಸಲು ಮುಖ್ಯ ಸಹಾಯಕಾರಿಗಳಾಗಿವೆ. ಇದು ರಾಯರಿಗೆ ಇಷ್ಟವಿಲ್ಲ. ಹೊರಗೆ ನೋಡುವದಕ್ಕೆ ಹಯವದನರಾಯರು ನಿರ್ಣಯಿಸಿದ ಶ್ರೀಕರಭಾಷ್ಯದ ಕಾಲವನ್ನು ಖಂಡಿಸಿದ ಹಾಗೆ ನಟಿಸಿ ಶಿವತತ್ತ್ವಸಾ ರವು ೧೪ನೆಯ ಶತಮಾನದಲ್ಲಿ ಹುಟ್ಟಿದಂತೆ ಹೇಳಿದರೆ ಶ್ರೀಕರಭಾಷ್ಯ ಶ್ರೀಪತಿಪಂಡಿತರ ಕಾಲವೂ ಸಂಶಯಕಲ್ಲೋಲವಾಗುವದಷ್ಟೆ? ನಾರಾಯ

ಣರಾಯರ ಈ ವೈಖರಿಯು ಚರಿತ್ರೆ ಪರಿಶೋಧನೆಯಲ್ಲಿ ಎಷ್ಟರಮಟ್ಟಿಗೆ ಸಹಾಯಕವಾಗುವುದೆಂಬುದನ್ನು ಸತ್ಯಶೀಲರಾಲೋಚಿಸಲಿ!

ಶಿವತತ್ತ್ವಸಾರದ ಕನ್ನಡ ಅನುವಾದದ ಪ್ರತಿಯೂ ಇತ್ತೀಚೆಗೆ ದೊರಕಿದೆ. ಅದರ ಬಗ್ಗೆ ಶ್ರೀ ವೇ. ಪ್ರಭಾಕರಶಾಸ್ತ್ರಿಗಳ ಲೇಖವನ್ನು ನಮ್ಮ ವಿಭೂತಿ ವರ್ಷ ೨, ಸಂಚಿಕೆ ೪ರಲ್ಲಿ ನೋಡಬಹುದು. ನಾನು ಹಿಂದೆ ಉದಹರಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ತ್ವಸಾರದ ತೆಲುಗು ಪದ್ಯಕ್ಕೆ—

ಧರೆಯೊಳಗೆ ಮಲ್ಲಿಕಾರ್ಜುನ ವರಪಂಡಿತನೆನಿಸುತಿಹುದರಿಂ ನಿನ್ನಾಜ್ಞಾ।
ಭರವೆಸೆಯಲ್ ಪ್ರಮಥರೊಳಾ ನಿರಲೆಂದೀಕ್ಷಿಸುವ ನಿಮ್ಮ ಬಯಸುವೆ ನೀಶಾ ॥

ಎಂಬ ಕನ್ನಡ ಪದ್ಯವು ಕನ್ನಡ ಶಿವತತ್ತ್ವಸಾರದಲ್ಲಿಯೂ ಇರುವದರಿಂದ ಆಂಧ್ರ ಶಿವತತ್ತ್ವಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ವಿರಚಿಸಿದ್ದಾನೆಂಬುದು ಸಿದ್ಧಾಂತವೇ ಸರಿ. ಕನ್ನಡ ಶಿವತತ್ತ್ವಸಾರದ ಕರ್ತೃತ್ವದ ವಿಷಯದಲ್ಲಿ ಇನ್ನೂ ವ್ಯಕ್ತಿನಿರ್ಣಯವಾಗಿಲ್ಲ. ನಾರಾಯಣರಾಯರಿಗೂ ಈ ವಿಷಯ ತಿಳಿಯುವದಕ್ಕಾಗಿ 'ವಿಭೂತಿ' ಸಂಚಿಕೆ ಕಳುಹಿಸಲಾಗಿದೆ.

"ಬಸವನಿಗೆ ಪೂರ್ವದಲ್ಲಿ ಈ ಅರ್ವಾಚೀನರೂಪದಿಂದ ವೀರಶೈವವು ಇತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ" ಎಂದು ಬರೆಯುವ ರಾಯರಿಗೆ ಮತ್ತೊಮ್ಮೆ ವೀರಶೈವ ಮತಗ್ರಂಥಗಳನ್ನು ಸರಿಯಾಗಿ ಪರಿಶೀಲಿಸಿ ತಮ್ಮ ಊಹೆಗಳನ್ನು ಸರಿಪಡಿಸಿಕೊಳ್ಳಬೇಕೆಂದು ನಿವೇದಿಸುತ್ತೇನೆ.

ಇನ್ನು ವೀರಶೈವರ ಕನ್ನಡ ವಚನಗ್ರಂಥಗಳ ಹೆಸರುಗಳನ್ನೇನೋ ಅವರು ಬಹಳವಾಗಿ ಉದಾಹರಿಸಿದ್ದಾರೆ. ಆದರೆ ಅವುಗಳಲ್ಲಿಯೂ ಕೂಡ "ಬರೀಭಕ್ತಿ ಶಿವಸಾಮರಸ್ಯಯಾಚನೆಗ"ಳಿದ್ದಂತೆ ರಾಯರು ಭಾವಿಸಿದ್ದರಿಂದ ಶ್ರೀ ರಾಯರು ಅವುಗಳನ್ನೂ ನೋಡದೆ ಅವುಗಳಲ್ಲಿರುವ ವಿಸ್ತಾರವಾದ ಷಟ್‌ಸ್ಥಳ— ಅಷ್ಟಾವರಣಾದಿಗಳನ್ನು ತಿಳಿದಿಲ್ಲವೆಂದು ಗೊತ್ತಾಗುತ್ತದೆ. ವಚನಗಳ ಕಾಲದ ವಿಷಯದಲ್ಲಿ ಒಂದು ತೊಡಕಿರುವುದೇನೋ ಸತ್ಯ. ಶ್ರೀರಂಗನಾಥ ದಿವಾಕರರು ತಮ್ಮ 'ವಚನಶಾಸ್ತ್ರರಹಸ್ಯ'ವಂತಹ

ಹೆಬ್ಬೊತ್ತಿಗೆಯಲ್ಲಿಯೂ ವಚನಗಳ ಕಾಲದ ವಿಷಯವಾಗಿ ಜಾಣ್ಮೆಯಿಂದ ಮೌನವಹಿಸಿದ್ದಾರೆ. ವಚನಗಳ ವಿಷಯದಲ್ಲಿ ಪರಿಶ್ರಮಪಡುತ್ತಲಿರುವ ವರೂ ಅವುಗಳ ಕಾಲವನ್ನು ನಿಷ್ಕಪಟವಾಗಿ ಹೇಳುತ್ತಿಲ್ಲ. ಶ್ರೀ ಬಸವಾದಿಗಳ ಕಾಲದಲ್ಲಿಯೂ ಅವರಿಂದ ಹೇಳಲ್ಪಟ್ಟ ವಚನಗಳು ಪ್ರಚಾರದಲ್ಲಿದ್ದು ಅನಂತರದಲ್ಲಿ ಕ್ರಮಕ್ರಮವಾಗಿ ೧೬ನೆಯ ಶತಮಾನದ ಪ್ರಾಂತದಲ್ಲಿ ಈಗ ಕಾಣುವ ವಚನಗಳು ಪೂರ್ತಿಯಾಗಿ ಗ್ರಂಥರೂಪಕ್ಕೆ ಬಂದಿರಬಹುದೆಂದು ಕೆಲವು ಕಾರಣಗಳಿಂದ ನಾನು ನಂಬಿದ್ದೇನೆ. ಇದು ಸರಿಯಲ್ಲವೆಂದು ಸಪ್ರಮಾಣವಾಗಿ ಯಾರಾದರೂ ನಿರೂಪಿಸಿದರೆ ಆದರದಿಂದ ಸ್ವೀಕರಿಸುವದರಲ್ಲಿ ನನಗೆ ಸಂಕೋಚವಿಲ್ಲ. ಆದರೆ ಪ್ರಾಚೀನರ ಮೂಲವಿಲ್ಲದಲೇ ಇತ್ತೀಚೆಗೆ ಯಾರೋ ಸಂಪೂರ್ಣ ಹೊಸದಾಗಿ ರಚಿಸಿ ಬಸವಾದಿಗಳ ಹೆಸರಿನಿಂದ ಪ್ರಸಿದ್ಧ ಮಾಡಿದ್ದಾರೆಂಬ ನಾರಾಯಣರಾಯರ ಸಿದ್ಧಾಂತವು ಮಾತ್ರ ಸ್ವಾಪ್ರಮಾದಿಕವೆಂದು ಹೇಳಬಹುದು. ಈಗಿನ ಗ್ರಂಥಗಳಲ್ಲಿಯ ಕೆಲವು ವಚನಗಳು ಆಯಾ ಪ್ರಾಚೀನ ವ್ಯಕ್ತಿಗಳಿಂದಲೇ ಹೇಳಲ್ಪಟ್ಟಿರಬೇಕೆನ್ನುವಷ್ಟು ಸ್ಫೂರ್ತಿಯನ್ನೊಳಗೊಂಡಿವೆ.

"ವೀರಶೈವಾಚಾರ್ಯ ಪಂಚಕದಲ್ಲಿ ಕೆಲವರು ಬಸವನಿಗೆ ಪೂರ್ವಿಕರು, ಕೆಲವರು ಸಮಕಾಲಿಕರು, ಕೆಲವರು ಈಚೆಯವರು" ಎಂದು ರಾಯರು ಹೇಳಿಬಿಟ್ಟಿದ್ದಾರೆ. ಇದು ಕನ್ನಡ ಕವಿಚರಿತೆಯ ಸಂಗ್ರಹಾನುವಾದವೆಂತಲೂ ಹೇಳಬಹುದು.

ಶ್ರೀಕರಭಾಷ್ಯದ ಆದಿಯಲ್ಲಿ ಪ್ರಸಿದ್ಧನಾದ ರೇಣುಕಾಚಾರ್ಯನನ್ನೂ ತನ್ನ ಗುರುವಾದ ಏಕೋರಾಮಾಚಾರ್ಯನನ್ನೂ ಶ್ರೀಪತಿಪಂಡಿತನು ಸ್ತುತಿಸಿದ್ದಾನೆ. ದ್ವಿತೀಯಾಧ್ಯಾಯ ತೃತೀಯ ಪಾದದ "ಸಮಾಧ್ಯಭಾವಾಚ್ಚ ॥೩೯॥ ಎಂಬ ಸೂತ್ರದ ಭಾಷ್ಯದಲ್ಲಿ ಮರುಲಸಿದ್ಧ (ದಾರುಕಾಚಾರ್ಯ) ನನ್ನೂ ಹೇಳಿದ್ದಾನೆ. ರೇವಣ-ಮರುಲ-ಏಕೋರಾಮರ ಹೆಸರುಗಳು ಭಾಷ್ಯದಲ್ಲಿ ನಾಲ್ಕಾರು ಸಲ ಬಂದಿರುವದರಿಂದ ಇವರು ಶ್ರೀಪತಿಗಿಂತಲೂ ಪೂರ್ವಿಕರೆಂತಲೇ ಸಹಜವಾಗಿ ಗ್ರಹಿಸಬಹುದು. ಪಂಚಾಚಾರ್ಯ ಪಂಚವೋತ್ಪತ್ತಿ-ಶಂಕರಸಂಹಿತಾ-ವೀರಲೈಂಗೋಪನಿಷತ್-ನಾರಾಯಣೋಪನಿಷದ್ಭಾಷ್ಯಗಳಲ್ಲಿ ವೀರಶೈವಾಚಾರ್ಯರಾದ ಪಂಡಿತಾರಾಧ್ಯ ವಿಶ್ವಾರಾಧ್ಯ ನಾಮಗಳೂ ಬಂದಿವೆ. ತೆಲುಗು ದೇಶದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ವೀರಶೈವಾಚಾರ್ಯ (ಪಂಡಿತಾರಾಧ್ಯನಿ

ಗಿಂತಲೂ ಬೇರೆಂಬುದನ್ನು ತಿಳಿಯದೆ ಅನೇಕರು ಭ್ರಮೆಗೊಳಗಾಗಿ ದ್ದಾರೆ ಮಲ್ಲಿಕಾರ್ಜುನ ಪಂಡಿತನು ಗೃಹಸ್ಥನಾಗಿದ್ದು ಆತನ ವಂಶ ಪರಂಪರೆಯೂ ಈಗ ಇದೆ. ವೀರಶೈವಾಚಾರ್ಯ ಪಂಡಿತಾರಾಧ್ಯನೂ ಆತನ ಶಿಷ್ಯ ಚಂದ್ರಗುಂಡ ಶಿವಾಚಾರ್ಯನೂ ಶ್ರೀಶೈಲ ಗುರುಪೀಠಾ ಧಿಕಾರಿಗಳಾಗಿದ್ದ ಪ್ರಾಚೀನರೆಂತಲೂ ಆ ಪೀಠವೀಗಲೂ ಪರಂಪರೆಯಾಗಿ ವೀರಶೈವಾಧೀನವಾಗಿ (ಗುಂತಕಲ್ಲಿನಲ್ಲಿ) ಇದೆಯೆಂತಲೂ ಅನೇಕ ಐತಿ ಹಾಸಿಕ ಆಧಾರಗಳನ್ನು "ಆಚಾರ್ಯ ಪಂಡಿತ" ನೆಂಬ ಲೇಖದಲ್ಲಿ (ವಿಭೂತಿ ೧—೧೨. ೨—೧) ಪ್ರಕಟಿಸಲಾಗಿದೆ. ಶಿವಪಂಚಸ್ತವಕ್ಕೆ ಟೀಕೆ ಯನ್ನು ಬರೆದಿರುವ ಆಧುನಿಕ ವಿಶ್ವಾರಾಧ್ಯನನ್ನು ಕೆಲವರು ಪಂಚಾ ಚಾರ್ಯರಲ್ಲಿ ಒಬ್ಬನನ್ನಾಗಿಯೂ ಭಾವಿಸಿದ್ದಾರೆ. ಚತುರಾಚಾರ್ಯ ವ್ಯವಹಾರವೂ ಇರುವದರಿಂದ ವಿಶ್ವಾರಾಧ್ಯನು ಆಧುನಿಕನಾಗಿರಬಹು ದೆಂದು ಮತ್ತೆ ಕೆಲವರು ಊಹಿಸುತ್ತಿರುವರು. ಇದು ಸರಿಯಲ್ಲ. ಪಂಚ ಕಲಶಾರ್ಚನೆಯಲ್ಲಿ ನಾಲ್ವರನ್ನು ಋತ್ವಿಜರನ್ನಾಗಿಯೂ ಒಬ್ಬನನ್ನು ಗುರು ವನ್ನಾಗಿಯೂ ವಿನಿಯೋಗಿಸುವಾಗ ಸಾಮಾನ್ಯವಾಗಿ ಚತುರಾಚಾರ್ಯ ವ್ಯವಹಾರವನ್ನು ಮಾಡಿದರೂ ಇಲ್ಲಿ ಗುರುಶಬ್ದದಿಂದ ವಿಶ್ವಾರಾಧ್ಯನೇ ಸೂಚಿತನಾಗುತ್ತಿದ್ದಾನೆಂಬುದನ್ನು ಸಂಪ್ರದಾಯಜ್ಞರಿಗೆ ಹೇಳಬೇಕಾಗಿಲ್ಲ. "ಕಾಶೀಪೀಠಾಚೇ ಪ್ರಾಚೀನತ್ವ" ಎಂಬ ನನ್ನ ಮರಾಠಿ ಪುಸ್ತಕದಲ್ಲಿ ಈ ವಿಷಯವು ವಿಪುಲವಾಗಿ ನಿರೂಪಿಸಲ್ಪಟ್ಟಿದೆ. ಶಿವಾಗಮ ಶಂಕರ ಸಂಹಿತಾದಿಗಳಲ್ಲಿ ಹೇಳದಂತೆಯೂ, ಪರಂಪರೆಯಾಗಿ ಬಂದ ಪ್ರಕಾರ ವಾಗಿಯೂ ಪಂಚಾಚಾರ್ಯರು ಬಸವಾದಿಗಳಿಗಿಂತಲೂ ಪೂರ್ವಿಕರೇ ಹೊರತು ಯಾವುದಾದರೂ ಒಂದು ನಾಮಸಾಮ್ಯವು ಕಂಡಕೂಡಲೇ ಅವರನ್ನು ಆಚಾರ್ಯಪಂಚಕದಲ್ಲಿ ಸೇರಿಸುವುದು ಸಯುಕ್ತಿಕವಲ್ಲ.

ರಾಯರು ತಿಳಿದಂತೆ ಹರಿಹರನ ಕಾಲವು ಉದ್ಭಟಕಾವ್ಯದ ಸೋಮ ರಾಜನ ಕಾಲದ ಮೇಲೆ ಆಧಾರಪಟ್ಟಿಲ್ಲ. ಅನೇಕಗಳಾದ ಪ್ರಮಾಣ ಗಳಿಂದ "ಹರಿಹರದೇವ" ಎಂಬ ಗ್ರಂಥದಲ್ಲಿ ಹರಿಹರನ ಕಾಲವು ಕ್ರಿ. ಶ. ೧೨೧೬ ಎಂದು ನಿರ್ಣಯಿಸಲಾಗಿದೆ. ೧೨೪೫ರಲ್ಲಿದ್ದ ಮಲ್ಲಿ ಕಾರ್ಜುನಕವಿ ತನ್ನ ಸೂಕ್ತಿಸುಧಾರ್ಣವದಲ್ಲಿ ಹರಿಹರನ ಗಿರಿಜಾಕಲ್ಯಾ ಣದ ಪದ್ಯಗಳನ್ನು ಉದಾಹರಿಸಿದ್ದಾನೆನ್ನುವದನ್ನೂ ಡಾ. ವೆಂಕಟ ಸುಬ್ಬಯ್ಯನವರ ವಾದವನ್ನು ವಿಮರ್ಶಿಸಿ ಸೋಮರಾಜನ 'ಸಾಸಿರದ

ನೂಱುಂ ಸಂದ' ಎಂಬ ಕವಿಚರಿತಕಾರರ ಪಾಠವೇ ಸರಿಯಾದುದೆಂಬುದನ್ನೂ ವಿಪುಲವಾಗಿ ಆ ಗ್ರಂಥದಲ್ಲಿ ನಿರೂಪಿಸಿದುದು ನಾರಾಯಣರಾಯರಿಗೆ ಗೊತ್ತಿಲ್ಲದಂತೆ ತೋರುತ್ತದೆ. ಆದರೂ ನಾನು ನೋಡಿದ ಒಂದು ವಿಷಯವನ್ನು ಬರೆಯುವದು ಆವಶ್ಯಕವೆಂದು ಕಾಣಿಸುತ್ತದೆ. ಕಳೆದ ೧೯೩೨ರ ಸುಮಾರಕ್ಕೆ ರಾಣಿಬೆನ್ನೂರು ಪ್ರಾಂತದಿಂದ ಮುದೇನೂರು ಹಿರಿಯಮಠದ ಶ್ರೀ ವಾಗೀಶ ಶಿವಾಚಾರ್ಯ ಸ್ವಾಮಿಗಳವರು ಕಾಶಿಗೆ ತಂದಿದ್ದ ಸೋಮರಾಜನ ಉದ್ಭಟಕಾವ್ಯದ ತಾಳದೋಲೆಯ ಪ್ರತಿಯಲ್ಲಿ 'ಸಾಸಿರದ ನೂಱುಂ ಸಂದ ನಾಲ್ವತ್ತು ನಾಲ್ಕನೆಯಾ' (ಶಾ. ಶ. ೧೧೪೪) ಎಂಬ ಪಾಠವನ್ನೇ ನಾನು ಸ್ಪಷ್ಟವಾಗಿ ನೋಡಿದ್ದೇನೆ. ಪುನಃ ಆ ಪ್ರತಿಯಲ್ಲಿಯ ಓಲೆಯನ್ನು ಸಪ್ರತಿಬಿಂಬವಾಗಿ (ಫೋಟೊ ಸಹಿತ) ಮುಂದೆ ಪ್ರಕಟಿಸಲುದ್ಯುಕ್ತನಾಗಿರುವೆನು. ಇನ್ನು ಚಿತ್ರಭಾನು ಸಂವತ್ಸರವು ಶಾ. ೧೧೪೪ರಲ್ಲಿಯೇ ಆಗುತ್ತಿರುವದರಿಂದ 'ಸಂದ' ಎಂಬುದನ್ನು ಸರಿಮಾಡುವುದು ಹೇಗೆ ಎಂದು ಆಕ್ಷೇಪವುಂಟು. ಸೋಮರಾಜನ ಪಾಠವು ಶಾ. ಶ. ೧೪೪೪ರ ಎಂದು ಅರ್ಥಮಾಡಿದಾಗಲೂ ಈ ಆಕ್ಷೇಪವು ತಪ್ಪುವುದಿಲ್ಲ. 'ಸಂದ'ಕ್ಕೆ 'ಹೋದ' ಎಂತಲೇ ಸಹಜವಾಗಿ ಅರ್ಥವಾಗುತ್ತಿದ್ದರೂ ಶಾ. ೧೧೬೫ರಲ್ಲಿ ಚಿತ್ರಭಾನು ಇಲ್ಲದಿರುವದರಿಂದ ಶಾ. ೧೧೪೩ ಸಂವತ್ಸರಗಳು ಕಳೆದು (ಸಂದ) ಶಾ ೧೧೪೪ನೆಯ ವರ್ಷಾರಂಭವೆಂಬುದನ್ನೇ ಗ್ರಹಿಸಬೇಕಾಗುವುದು. ಕೆಲವು ಶಾಸನಾದಿಗಳಲ್ಲಿ ಗತವರ್ಷಗಳೂ ವರ್ತಮಾನ ವರ್ಷಗಳೂ ಹೇಳಲ್ಪಟ್ಟಿರುವದರಿಂದ ಈ ವಿಧವಾದ ಒಂದು ವರ್ಷದ ತಾರತಮ್ಯವನ್ನು ಸ್ವೀಕರಿಸುವುದು ಅನುಚಿತವೇನೂ ಅಲ್ಲ. 'ನೂಱುಂ ಸಂದ' ಎಂಬ ಪ್ರಯೋಗಗಳ ಶುದ್ಧಾಶುದ್ಧತೆ ಹೇಗಿದ್ದರೂ ಸೋಮರಾಜನ ಪ್ರಯೋಗವು ಇದ್ದಕ್ಕಿದ್ದ ಹಾಗೆ ಗ್ರಹಿಸಲ್ಪಡಬೇಕೆಂಬ ಅಭಿಪ್ರಾಯವನ್ನು ನಾನು ಸಮರ್ಥಿಸುತ್ತೇನೆ.

ಪಾಲ್ಕುರಿಕೆ ಸೋಮನಾಥನ ಕಾಲವೂ ಸೋಮರಾಜನ ಹೇಳಿಕೆಯನ್ನವಲಂಬಿಸಿಲ್ಲ. ಪಿಡುಪರ್ತಿ ಸೋಮನಾಥನು ಹೇಳಿದ ಹಾಗೆ ಓರುಗಲ್ಲಿನ ಮೊದಲನೆಯ ಪ್ರತಾಪರುದ್ರನ ಕಾಲದಲ್ಲಿ ಅಂದರೆ ಕ್ರಿ ಶ. ೧೧೯೦ ರಲ್ಲಿಯೇ ಪಾಲ್ಕುರಿಕಿ ಸೋಮನಾಥನು ಇದ್ದನೆಂಬುದನ್ನು ಗ್ರಹಿಸುವದಕ್ಕೆ ಬಾಧಕ ಪ್ರಮಾಣಗಳೇನೂ ಇಲ್ಲ. ಆಂಧ್ರ ಹಿಸ್ಟಾರಿಕಲ್ ಸೋಸೈಟಿಯವರ 'ಕಾಕತೀಯ ಸಂಚಿಕೆ' ಯಲ್ಲಿ ಹೀಗೆಯೇ ಸೋಮ

ನಾಥನ ಕಾಲವು ನಿರೂಪಿಸಲ್ಪಟ್ಟಿದೆ. ಮತ್ತೊಂದು ವಿಶೇಷವೂ ಇದೆ. ಪಾಲ್ಕುರಿಕಿ ಸೋಮನಾಥನು ಆಂಧ್ರದೇಶದಲ್ಲಿಯೂ ಹರಿಹರ ಕವಿಯು ಕರ್ಣಾಟಕ ದೇಶದಲ್ಲಿಯೂ ದೂರಸ್ಥರಾಗಿರುವದರಿಂದಲೂ ಸಮಕಾಲಿಕ ರಾದುದರಿಂದಲೂ ತಮ್ಮ ತಮ್ಮ ಬಸವಚರಿತ್ರೆಗಳಲ್ಲಿ ಪರಸ್ಪರವಾಗಿ ನಾಮೋಲ್ಲೇಖನೆ ಮಾಡಿಲ್ಲ. ಆದುದರಿಂದಲೇ ಉಭಯರ ಗ್ರಂಥಗ ಳಲ್ಲಿ ಬಸವನ ಕಥಾಂಶಗಳ ಬಗ್ಗೆ ವಿರೋಧವಿದೆ. ರಾಯರು ಹೇಳಿ ದಂತೆ ಸೋಮನಾಥನು ೧೩ನೆಯ ಶತಮಾನದ ಕೊನೆಯಲ್ಲಿದ್ದರೆ ಹರಿ ಹರನ ಬಸವರಗಳೆಯನ್ನು ಅವಶ್ಯವಾಗಿ ಅವಲೋಕಿಸಿ ಆತನ ನಾಮೋ ಲ್ಲೇಖನವನ್ನು ತನ್ನ ಬಸವ ಪುರಾಣದಲ್ಲಿ ಮಾಡದೇ ಬಿಡುತ್ತಿರಲಿಲ್ಲ. ಕಾರಣವೇನೆಂದರೆ ಬಸವೇಶ್ವರನ ಚರಿತ್ರೆಯ ಬಗ್ಗೆ ಅನೇಕ ಅಂಶಗ ಳನ್ನು ಸಂಗ್ರಹಿಸುವದಕ್ಕೋಸ್ಕರ ಸೋಮನಾಥನು ಅವಶ್ಯವಾಗಿ ಪ್ರಯ ತ್ನಪಟ್ಟಿರಬೇಕು. ಎಲ್ಲಿಯೂ ಕೃತಿರೂಪದಿಂದ ಆಗ ಸೋಮನಾಥನಿಗೆ ಸಿಕ್ಕಿಲ್ಲ. ಆದುದರಿಂದಲೇ 'ಶಿವಭಕ್ತರ ಹೇಳಿಕೆಯನ್ನನುಸರಿಸಿ ಇದನ್ನು ರಚಿಸುತ್ತಿರುವೆ' ನೆಂದು ಬಸವಪುರಾಣದಲ್ಲಿ ಸೋಮನಾಥನು ಸೂಚಿ ಸಿದ್ದಾನೆ. ಸೋಮನಾಥನು ಬಸವನ ಕಾಲಕ್ಕೆ ಅಂದರೆ ಕ್ರಿ. ಶ. ೧೧೬೮ರ ಪ್ರಾಂತದಲ್ಲಿ ಹುಟ್ಟಿ ೧೧೯೦ರ ಪ್ರಾಂತದಲ್ಲಿ ಪಂಡಿತಾರಾಧ್ಯನ ಶಿಷ್ಯ ರಿಂದಲೂ ವೀರಶೈವ ಭಕ್ತರಿಂದಲೂ ಕೇಳಿದ ಕಥಾಂಶಗಳನ್ನು ಸಂಗ್ರ ಹಿಸಿ ಬಸವ ಪುರಾಣವನ್ನು ರಚಿಸಿ ಆಂಧ್ರ ಕರ್ಣಾಟಕ ದೇಶಗಳಲ್ಲಿ ಪ್ರಸಿದ್ಧಿಯನ್ನು ಹೊಂದಿ ಪಂಡಿತಾರಾಧ್ಯ ಚರಿತ್ರಾದಿ ಪ್ರೌಢ ಗ್ರಂಥಗ ಳನ್ನು ನಿರ್ಮಿಸಿ ಸುಮಾರು ೧೨೨೪ ಸಂವತ್ಸರದ ಸಮೀಪದ ವರೆಗೂ ಜೀವಿಸಿರಬಹುದು. ಬಸವನ ಅನಂತರ ಎರಡು ಶತಾಬ್ದಿಗಳು ಕಳೆದ ಮೇಲೆ ಬಸವ ಪುರಾಣದ ರಚನೆಯಾಗಿದ್ದರೆ ಅದರಲ್ಲಿ ಅಂತಹ ಸ್ಫೂರ್ತಿಯೇ ಬರುತ್ತಿರಲಿಲ್ಲ. ಅಂತಹ ಸುಪ್ರಸಿದ್ಧನಾದ ಬಸವನ ಕಾಲ ದಲ್ಲಿ ಕವಿಗಳು ಯಾರೂ ಇರಲಿಲ್ಲ. ಹದಿನಾಲ್ಕನೆಯ ಶತಮಾನದ ವರೆಗೂ ಆತನ ಚರಿತ್ರೆ ಜಗತ್ತಿಗೆ ಗೊತ್ತಿಲ್ಲವೆಂದು ಹೇಳಿದರೆ ಅಸಂಗ ತವಾಗುವದಷ್ಟೆ ! ಬಸವನ ಕಾಲಕ್ಕೆ ಸಮೀಪಸ್ಥರಾದ ಹರಿಹರನೂ ಸೋಮನಾಥನೂ ತಮ್ಮ ತಮ್ಮ ಮಾತೃಭಾಷೆಯಲ್ಲಿ ಬಸವ ಚರಿತ್ರೆಗ ಳನ್ನು ರಚಿಸಿದ್ದಾರೆಂತಲೂ ಆಮೇಲೆ ಇವನ್ನನುಸರಿಸಿ ಇತರ ಪುರಾಣ ಗಳು ಹುಟ್ಟಿದವೆಂದೂ ಭಾವಿಸುವದೇ ಸಮಂಜಸವಾಗಿದೆ. ಆದುದ ರಿಂದ ಸೋಮನಾಥನು ೧೩೦೦ರ ಪ್ರಾಂತದಲ್ಲಿದ್ದನೆಂದು ರಾಯರು ಕಲ್ಪಿ

ಸಿದ ಕಾಲವು ಗಾಳಿಯ ಮಾತೇ ಹೊರತು ಅದಕ್ಕೆ ಆಧಾರವಿಲ್ಲ. ಹರಿಹರ ಕೆರೆಯ ಪದ್ಮರಸರು ಮಲ್ಲಿಕಾರ್ಜುನ ಕವಿಯ (ಕ್ರಿ ಶ. ೧೨೪೫) ಸೂಕ್ತಿ ಸುಧಾರ್ಣವದಲ್ಲಿ ಹೆಸರ್ಗೊಳ್ಳಲ್ಪಟ್ಟಿದ್ದಾರೆಂಬ ವಿಷಯವು ರಾಯರಿಗೆ ಗೊತ್ತಿಲ್ಲದೆ ಎಲ್ಲರನ್ನು ಹದಿಮೂರನೆಯ ಶತಾಬ್ದಿಯ ಅಂತ್ಯದಲ್ಲಿ ಇರಿಸಬೇಕೆಂದು ಪ್ರಯತ್ನಿಸುತ್ತಿದ್ದಾರೆ.

ರಾಯರಿಗೆ 'ಶಿವಾನುಭವ'ದಲ್ಲಿ ಪ್ರಕಟಿತವಾದ ಬಸವೇಶ್ವರನ ಅರ್ಜುನವಾಡ ಶಿಲಾಶಾಸನದ ವಿಷಯವು ಗೊತ್ತಿಲ್ಲದುದರಿಂದ ಬಸವನು ನಿಜವಾಗಿ ಇದ್ದನೋ ಇಲ್ಲವೋ ಎಂದು ಏನೇನೋ ಬರೆದಿದ್ದಾರೆ. ಬಸವನು ಬಿಜ್ಜಳನ ಹತ್ತಿರ ಬಹಳ ಸ್ವಲ್ಪಕಾಲ ಅಂದರೆ ಐದಾರು ವರ್ಷಗಳು ಮಾತ್ರ ಇರುವದರಿಂದಲೂ ಅದು ಕ್ರಾಂತಿಯ ಕಾಲವಾದುದರಿಂದಲೂ ಬಿಜ್ಜಳನ ಶಾಸನಗಳೆಲ್ಲವೂ ಬಸವನ ಮಂತ್ರಿತ್ವದ ಕಾಲಕ್ಕಿಂತ ಪೂರ್ವಕಾಲದವಾದುದರಿಂದಲೂ ಬಿಜ್ಜಳನ ಶಾಸನಗಳಲ್ಲಿ ಬಸವನು ಹೇಳಲ್ಪಟ್ಟಿಲ್ಲ. ಈ ವಿಷಯದಲ್ಲಿಯು ರಾಯರ ಬರಹಗಳು ಸಪ್ರಯೋಜನವಾಗಿಲ್ಲ. ಇನ್ನೊಂದು ಅದ್ಭುತ ವಿಷಯವೇನೆಂದರೆ ಅಬ್ಲೂರಿನ ಏಕಾಂತ ರಾಮಯ್ಯನ ಶಿಲಾಶಾಸನದಲ್ಲಿ ಬಸವನ ಹೆಸರು ಬಂದಿದೆಯೆಂದು ರಾಯರು ಜ್ಯೋತಿಷ ಹೇಳುತ್ತಿರುವರು. ಬಸವನ ಹೆಸರು ಬಂದಿಲ್ಲವೆಂಬುದನ್ನು ಸತ್ಯವಾಗಿ ರಾಯರು ಶಾಸನ ನೋಡಿದಾಗ ತಿಳಿಯಬಹುದು. ಇನ್ನು ಮುನವಳ್ಳಿ ಶಾಸನದ ಬಸವನೇ ಕಲ್ಯಾಣದ ಬಸವನೆಂದು ಅವರು ಪ್ರತಿಪಾದಿಸಹತ್ತಿದ್ದಾರೆಯೇ ಹೊರತು ಆ ಶಾಸನವನ್ನಾದರೂ ರಾಯರು ಸರಿಯಾಗಿ ಅರ್ಥಮಾಡಿಲ್ಲ. ೧೨೬೦ ರಲ್ಲಿ ಹುಟ್ಟಿದ ಅರ್ಜುನವಾಡದ ಶಿಲಾಶಾಸನವು Epigraphia Indica, Vol. XXI, p. 9 ರಲ್ಲಿಯೂ ಮುದ್ರಿತವಾಗಿದೆ. ಅದರಿಂದ ಬಸವನು ಬಾಗೇವಾಡಿಯವನೆಂತಲೂ ಮಾದಿರಾಜನ ಮಗನೆಂತಲೂ ಸಂಗಮೇಶ್ವರನ ಶಿಷ್ಯನೆಂತಲೂ ಸ್ಪಷ್ಟವಾಗಿ ಗೊತ್ತಾಗಿ ಬಿಡುವುದು. ಅರ್ಜುನವಾಡದ ಶಾಸನವನ್ನು ನೋಡದ ಡಾ: ಫ್ಲೀಟುಸಾಹೇಬರು Epigraphia Indica Vol. V ನಲ್ಲಿ ಮನಗೋಳಿ ಶಾಸನದ ಬಗ್ಗೆ ಬರೆದಿರುವ ಅಸಂಗತ ವಾಕ್ಯಗಳು ಉಂಟು. ಅದೇ ಪುಸ್ತಕದಲ್ಲಿಯ ಅಬ್ಲೂರು ಶಾಸನದ ವಿವರಣದಲ್ಲೂ ಫ್ಲೀಟ್‌ರವರು ಬರೆದ ವಿಷಯವು ಸಂಗತವಾಗಿಲ್ಲ. ಇದನ್ನೇ ಬಹಳ ಪ್ರಮಾಣವನ್ನಾಗಿ ನಂಬಿ ಮೂಲಶಾಸನಗಳನ್ನು ನೋಡದೆ, ಡಾ.

ರಾಯರೂ ಅಡ್ಡಹಾದಿ ಹಿಡಿದಿರುವರು. ಪ್ರಬುದ್ಧಕರ್ಣಾಟಕ ಲೇಖದಲ್ಲಿಯೂ ತಮ್ಮ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿಯೂ ಮನಗೋಳಿ ಬಸವನನ್ನು ಬಾಗೇವಾಡಿ ಬಸವನನ್ನಾಗಿ ಹೇಳುತ್ತ ಹೋಗಿದ್ದಾರೆ. ಇದರ ಬಗ್ಗೆ ಸ್ವಲ್ಪ ಸರಿಯಾದ ವಿವರಣೆಯನ್ನು ಮಾಡುವುದು ಅವಶ್ಯಕವೆಂದು ತೋರುತ್ತದೆ.

ಕ್ರಿ. ಶ. ೯೭೩-೯೯೭ ರಲ್ಲಿದ್ದ ದ್ವಿತೀಯ ತೈಲಪದೇವನಿಂದ ಮನಗೋಳಿ (ಮಣಿಂಗವಲ್ಲಿ)ಯ ಅಗ್ರಹಾರವನ್ನು ಪಡೆದ ಹಾರೀತಗೋತ್ರದ ಮಾಧವನು ಬಸವೇಶ್ವರನ ತಂದೆಯಾದ ಮಾದಿರಾಜನೆಂದು ಇವರು ಭ್ರಮೆಗೊಳಗಾಗಿದ್ದಾರೆ. ಹಾಗಾದರೆ ಹತ್ತನೆಯ ಶತಮಾನದಲ್ಲಿಯೇ ಬಸವನು ಹುಟ್ಟಿರಬೇಕಾಗುವುದು. ಇದರಿಂದಾಗುವ ಚಾರಿತ್ರಕಹತ್ಯೆಯನ್ನು ಇವರು ಗಮನಿಸಿದಂತೆ ಕಾಣುವುದಿಲ್ಲ. ಮತ್ತು ಕಾಶ್ಯಪಗೋತ್ರದ ಚಂಡಿರಾಜಪುತ್ರ ಬಸವರಸಯ್ಯನನ್ನೂ ಬಸವೇಶ್ವರನನ್ನಾಗಿ ಹೇಳುವ ಫ್ಲೀಟರ ಸಿದ್ಧಾಂತವು ಎಷ್ಟು ಅವಿಚಾರಮೂಲಕವಾಗಿದೆಯೆಂಬುದು ಸ್ಪಷ್ಟವೇ ಸರಿ. ಮನಗೋಳಿಯಲ್ಲಿಯ ಕಲಿದೇವೇಶ್ವರನ ಆಲಯವು ೨ನೆಯ ಜಗದೇಕ ಮಲ್ಲನಿಗಿಂತಲೂ (ಕ್ರಿ. ಶ. ೧೧೪೨) ಪೂರ್ವದಲ್ಲಿಯೇ ಇದ್ದಂತೆಯೂ, ಆ ಆಲಯವನ್ನು ನಿರ್ಮಿಸಿದ ಬಸವರಸಯ್ಯನು ಅವನಿಗಿಂತ ಹಿಂದಿನವನೆಂತಲೂ ಶಾಸನದ ಭಾಷೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ತಿಳಿಯುವದು. ಅಂದರೆ ಅಲ್ಲಿಯ ಬಸವರಸಯ್ಯನು ಜಗದೇಕಮಲ್ಲನ ಸಮಕಾಲಿಕನಲ್ಲ. ಬಸವರಸಯ್ಯನು ಆಲಯವನ್ನು ನಿರ್ಮಿಸಿದ ೧೪೫ ವರ್ಷಗಳ ಅನಂತರದಲ್ಲಿ ಜಗದೇಕಮಲ್ಲನೂ ಬಂದು ಮನಗೋಳಿಯ ಮಾದಿರಾಜಾದಿಗಳ ಪ್ರಾರ್ಥನೆಯಂತೆ ೧೧೪೨ ರಲ್ಲಿ ಆಲಯಕ್ಕಾಗಿ ಮತ್ತೊಂದು ದಾನವನ್ನು ಕಾಲಾಮುಖ ಸದ್ಯೋಜಾತಪಂಡಿತನಿಗೆ ದಾನಮಾಡಿದ್ದಾನೆ. ಈ ಬಸವರಸಯ್ಯನಿಗೂ ೨ನೆಯ ಜಗದೇಕ ಮಲ್ಲನಿಗೂ ಯಾವ ಸಂಬಂಧವೂ ಸಮಕಾಲಿಕತ್ವವೂ ಇಲ್ಲ. ಈ ಉಭಯರಿಗೂ ಬಾಗೇವಾಡಿಯ ಬಸವನಿಗೂ ಮೊದಲೇ ಸಂಬಂಧವಿಲ್ಲ. ಬಸವೇಶ್ವರನಿಗಿಂತಲೂ ಪೂರ್ವದಲ್ಲಿ "ಬಸವ" ಶಬ್ದವು ಪ್ರಚಾರವಾಗಿದ್ದುದನ್ನು ತಿಳಿಯದೆ ಆ ಹೆಸರಿನವರನ್ನೆಲ್ಲ ಬಾಗೇವಾಡಿ ಬಸವನಿಗೆ ಗಂಟುಹಾಕಲು ಹವಣಿಸುವದರಲ್ಲಿ ತಥ್ಯವೇನೂ ಇಲ್ಲ. ಬಸವೇಶ್ವರನ ವಂಶದ ಗೋತ್ರಾದಿಗಳು ಎಲ್ಲಿಯೂ ಹೇಳಲ್ಪಡದಿರುವದರಿಂದ ರಾಯರು ಮಾಡಿದ ಗೋತ್ರಾನ್ವೇಷಣವೂ ನಿಷ್ಫಲವಾಗಿದೆ.

ಶ್ರೀ ರಾಯರು ಬಳ್ಳಾರಿ ಜಿಲ್ಲಾ ಹಡಗಲಿ ತಾಲೂಕು ಒರುವಾಯಿ ಗ್ರಾಮದ ಬೆಣಕಪ್ಪನ ಗುಡಿಯಲ್ಲಿದ್ದ ಶಾಸನವೊಂದನ್ನು ಸಮನ್ವಯ ಮಾಡಲು ಹೊರಟಿದ್ದಾರೆ. (ಕ್ರಿ. ಶ. ೧೨೦೩ ರಲ್ಲಿ ಹುಟ್ಟಿದ ಈ ಶಾಸನವು South Indian Inscriptions, Vol. IX, Part I. ಪುಸ್ತಕದಲ್ಲಿ ೩೩೪ನೆಯ ಶಾಸನ.) ಅದರಲ್ಲಿರುವ ಮುಖ್ಯಾಂಶವು ಹೀಗಿದೆ—

"ಸ್ವಸ್ತಿ ಶ್ರೀಮತು ಯಾದವನಾರಾಯಣಂ ಪ್ರತಾಪಚಕ್ರವರ್ತಿ ಹೊಯ್ಸಳ ವೀರಬಲ್ಲಾಳದೇವರಾಜ್ಯಸಮುದ್ಧರ ಬಸವದಂಡನಾಯಕ ಗುಣಪ್ರಭಾವವೆಂತೆಂದೊಡೆ—

ನುಡಿವಂ ಸತ್ಯವಚೋಕ್ತಿಯಂ, ಸಕಲಧರ್ಮವ್ಯಾಪ್ತಿಯಿಂದರ್ಥಮಂ
ಪಡೆವಂ, ವಿಪ್ರಸುರಾದಿಶಿಷ್ಟಜನತಾಸಂತುಷ್ಟಿಯಾಗಲ್ಕೆ ತಾ
ಕೊಡುವಂ, ದ್ರವ್ಯಮನೀಗುಣಾಶ್ರಯಮುಮಂ ಲೋಕಂಬ ಬಾಪ್ಪೆಂಬಿನಂ
ಪಡೆವಂ, ಸದ್ಗುಣಿ ದಂಡನಾಥಬಸವಂ ಪ್ರಖ್ಯಾತಿಯುಂ ಕೀರ್ತಿಯುಂ
ಕಲಿಯುಮ್ಮತದಂಡನಾಥರ ಲಲಿತಾತ್ಮಜನೆಂದೊಡೊಪ್ಪುಗುಂ ಕವಿತನಮುಂ
ಸಲೆಸತ್ಯಾಮೃತವಾಕ್ಯಂ ಕುಲತಿಲಕಂ ಬಸವದಂಡನಾಥಾಧಿಪನೊಳ್ ॥

ಶ್ರೀಮದೀಶ್ವರಸಂವತ್ಸರ ಶ್ರಾವಣ ಬಹುಳ ಅಮಾವಾಸ್ಯಾ ಶುಕ್ರವಾರ ಸೂರ್ಯಗ್ರಹಣದಂದು ಶ್ರೀವಿನಾಯಕದೇವರ್ಗೆ ರಣಧವಳ ಬಸವಚಮೂಪಂ ಧಾರಾಪೂರ್ವಕಂ ಮಾಡಿಕೊಟ್ಟು... '—

ಇದರಲ್ಲಿಯ ಬಸವದಂಡನಾಥನು ಬಾಗೆವಾಡಿಯ ಬಸವನೆಂದು ಹೇಳುವುದು ತುಂಬಾ ಪರಿಹಾಸದ ಮಾತಾಗಿದೆ. ಕಲಿಯುಮ್ಮತದಂಡನಾಥನ ಮಗನೂ ವೀರಬಲ್ಲಾಳನ ಮಂತ್ರಿಯೂ ರಣಧವಳ ಬಿರುದಾಂಕಿತನೂ ಆದ ಒರುವಾಯಿ ಶಾಸನದ ಬಸವನು ಎಂದೆಂದಿಗೂ ಕಲ್ಯಾಣದ ಬಸವನಾಗಲಾರ. ಮತ್ತೊಂದು ಆಶ್ಚರ್ಯಕರವಾದ ವಿಷಯವೇನಂದರೆ ಮನಗೋಳಿಯ ಬಸವನನ್ನೂ ಒರುವಾಯಿ ಬಸವನನ್ನೂ ಒಂದು ಮಾಡಿ ಕಲ್ಯಾಣ ಬಸವನ ರೂಪವನ್ನು ತಯಾರ್ಮಾಡಲು ರಾಯರು ಯತ್ನಿಸಿದ್ದಾರೆ. ಅದಕ್ಕಾಗಿ ಬಿಜ್ಜಳನು ಮೃತಿಪಟ್ಟನಂತರ ಹೊಯ್ಸಳ ಬಲ್ಲಾಳನ ಹತ್ತಿರಕ್ಕೆ ಬಂದು ಬಿಜ್ಜಳನ ವಂಶವನ್ನು ಸಂಪೂರ್ಣವಾಗಿ ನಾಶಗೊಳಿಸಲು ಬಸವೇಶ್ವರನು ಹೆಣಗಾಡಿದ್ದಾನೆಂದು ರಾಯರು ಬರೆದಿದ್ದಾರೆ. ಮಹಾಪುರುಷರ ಮೇಲೆ ಹೇಯವಾದ ಅಪರಾಧಗಳನ್ನು ಹೊರಿಸುವ ಸಾಹಸವಿದೆಂದು ನಾನು ಹೇಳುತ್ತೇನೆ. ಈ ಮಾತುಗಳನ್ನೇ

ನಂಬಿದರೆ ಬಸವೇಶ್ವರನು ಎನೆಯ ತೈಲಪನ ಮೊದಲ್ಗೊಂಡು ಹೊಯ್ಸಳದ ವೀರಬಲ್ಲಾಳನ ವರೆಗೆ ಅಂದರೆ ೧೨೦ ವರ್ಷಗಳ ಕಾಲ ಬಾಳಿದನೆಂದು ಹೇಳಬೇಕಾಗುವುದು. ಈ ಅಸಂಬದ್ಧ ವಿಷಯಗಳನ್ನು ಉದಾಸೀನ ಮಾಡಿ ಪಾಲ್ಕುರಿಕಿ ಸೋಮನಾಥನು ಹೇಳಿದಂತೆಯೂ, ಸಂಪ್ರದಾಯದಲ್ಲಿದ್ದಂತೆಯೂ ಬಸವೇಶ್ವರನು ಯೌವನದಲ್ಲಿ (೩೦, ೩೫ ವರ್ಷಗಳ ವಯಸ್ಸಿನಲ್ಲಿ) ಬಿಜ್ಜಳನೊಡನೆಯೇ ಶಿವೈಕ್ಯವಾಗಿರುವನೆಂಬುದೇ ಸರ್ವಸಮ್ಮತವಾಗಿದೆ. "ಬಸವೇಶ್ವರನ ಬಗ್ಗೆ ಶಾಸನ ಸಾಮಗ್ರಿ" ಎಂಬ ಲೇಖ (ವಿಭೂತಿ ೬-೪) ದಲ್ಲಿ ಇದನ್ನು ವಿಸ್ತರಿಸಿದೆ.

ಪಾಲ್ಕುರಿಕಿ ಸೋಮನಾಥನು "ಮೈಸೂರು ರಾಷ್ಟ್ರದ ತುಮಕೂರು ಜಿಲ್ಲಾ ಪಾಲ್ಕುರಿಕಿಯಲ್ಲಿ ಹುಟ್ಟಿದವ" ನೆಂಬ ಒಂದು ನವೀನ 'ಇತಿಹಾಸವನ್ನು ಅವರು ಹೇಳಿದ್ದಾರೆ. ಇದು ಅಸತ್ಯವಾದ ವಿಷಯವೆಂದು ನಾನು ಧಾರಾಳವಾಗಿ ಹೇಳಲಿಚ್ಛಿಸುತ್ತೇನೆ. ಒಂದು ನಾಮಸಾಮ್ಯವು ಸಿಕ್ಕಿದ ಕೂಡಲೇ ನಿಜಾಮ ದೇಶದ ಸುಪ್ರಸಿದ್ಧವಾದ ಓರುಗಲ್ಲಿನ ಹತ್ತರ ಇರುವ ''ಪಾಲ್ಕುರಿಕಿ'' ಯನ್ನು ತುಮಕೂರಿನ '' ಹಾಲ್ಕುರಕಿ ''ಯನ್ನಾಗಿ. ಹೇಳುವದು ತುಂಬಾ ಅನ್ಯಾಯ. ಈ ಎರಡು ಗ್ರಾಮಗಳನ್ನೂ ರಾಯರು ನೋಡಿದಂತಿಲ್ಲ. ನಾನು ೧೯೬೪ ರಲ್ಲಿ ತುಮಕೂರು ತಾಲೂಕಿನ ಹಾಲ್ಕುರಿಕೆಯನ್ನೂ ನಾಲ್ಕೈದು ಸಲ ಓರುಗಲ್ಲಿನ ಹತ್ತರ ಇರುವ ಪಾಲ್ಕುರಿಕಿಯನ್ನೂ ನೋಡಿದ್ದೇನೆ. ರಾಯರು ಹೇಳಿದಂತೆ " ಪಾಲುಗುರ್ತಿ " ಯೆಂಬ ವ್ಯವಹಾರವು ಅದಕ್ಕೆ ಇಲ್ಲ. ಪ್ರಾಚೀನ ಕಾಲದಿಂದ ಈ ವರೆಗೂ ಅದಕ್ಕೆ 'ಪಾಲ್ಕುರಿಕಿ' ಎಂಬುದೇ ಶಿಷ್ಟ ವ್ಯವಹಾರವು. "ಪಾಲಕುರ್ತಿ" ಎಂಬ ಗ್ರಾಮ್ಯಜನರ ವ್ಯವಹಾರವೂ ಈಗ ಉಂಟು. ಸೋಮೇಶ್ವರ ದೇವಾಲಯವೂ ಸೋಮನಾಥನ ಸಮಾಧಿಯೂ ಈ ಊರಲ್ಲಿ ಇದ್ದು ಈಗಲೂ ಜಂಗಮಮಾಹೇಶ್ವರರ ಅಧೀನದಲ್ಲಿದೆ. ಪಾಲ್ಕುರಿಕಿ ಸೋಮನಾಥನ ಜ್ಞಾತಿಗಳಾಗಿ ತೋರುವ 'ಪಾಲಕುರಿಕಿ' ಎಂಬ ಮನೆಯ ಹೆಸರುಳ್ಳ ಮಾಹೇಶ್ವರರು, ವರಂಗಲ್ ಜಿಲ್ಲೆಯ ರಘುನಾಥಪಲ್ಲಿಯ ಹತ್ತಿರದಲ್ಲೂ ಸಿಕಿಂದ್ರಾಬಾದಿನಲ್ಲೂ ಏಂಜಾಲದಲ್ಲೂ ಈಗಲೂ ಇದ್ದಾರೆ. ಸೋಮನಾಥನ ಶಿಷ್ಯರಾಗಿ ಕಾಣುವ "ಪಿಡುಪರ್ತಿ" ಯವರೂ, ಬೀಗರಾಗಿ ಕಾಣುವ "ವಿಭೂತಿ" "ಶಿವರಾತ್ರಿ" ಯವರೂ ಗುರುಗಳ ಸ್ಥಾನವಾದ ''ಕಟ್ಟಿಕೂರೂ" ಇದೇ ಪ್ರಾಂತದಲ್ಲಿ ಒತ್ತಟ್ಟಿಗೇನೇ ಹತ್ತಿರ ಹತ್ತಿರ ಇವೆ. "ವರಂಗಲ್ಲಿನ ಪ್ರತಾಪರುದ್ರನು ಸೋಮನಾಥನ ಪುರಾಣವನ್ನು ಕೇಳಿ

ದ್ದನು" ಎಂಬ ಪಿಡುಪರ್ತಿ ಕವಿಯ ಹೇಳಿಕೆಯೂ ಮೇಲಿನ ಅಂಶಗಳನ್ನು ಬಲಪಡಿಸುತ್ತದೆ. ಸೋಮನಾಥನ ಗ್ರಂಥಗಳೂ ಈ ದೇಶದಲ್ಲಿ ಬಹಳ ಪ್ರಚಾರವಾಗಿವೆ. ೧೫ ವರ್ಷಗಳ ಹಿಂದೆ ಈ ಪಾಲ್ಕುರಿಕೆಯನ್ನು ನೋಡಿ ಪರಿಶೀಲನೆ ಮಾಡಿದ ಸುಪ್ರಸಿದ್ಧರಾದ ಶ್ರೀ ಶೇಷಾದ್ರಿ ರಮಣ ಕವಿಗಳು ತಮ್ಮ "ನಿಜಾಂರಾಷ್ಟ್ರ ಪ್ರಶಂಸೆ" ಎಂಬ ತೆಲುಗು ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ—

"ಸೋಮನಾಥನು ಓರುಗಲ್ಲಿಗೆ ಮೂರುಗಾವದ ದೂರದಲ್ಲಿರುವ ಪಾಲ್ಕುರಿಕೆಯಲ್ಲಿ ಶಿವೈಕ್ಯನಾದನು. ಆ ಪ್ರದೇಶದಲ್ಲಿ ಮಠವೊಂದು ದೇವಾಲಯದಂತೆ ಕಟ್ಟಲ್ಪಟ್ಟಿದೆ. ಅಲ್ಲೊಂದು ಶಿವಲಿಂಗವನ್ನು ಪ್ರತಿಷ್ಠಿಸಿ ಈಗಲೂ ಜಂಗಮರು ಪೂಜಿಸುತ್ತಿರುತ್ತಾರೆ. ಕವಿವರ್ಯನು ಶಿವೈಕ್ಯವಾದ ಸ್ಥಳದಲ್ಲಿ ದೊಡ್ಡ ಉತ್ಸವವು ಜರುಗಿಸಲ್ಪಡುತ್ತಿದೆ. ಕವಿಚರಿತ್ರೆಯನ್ನು ಗ್ರಂಥಸ್ಥ ಮಾಡಲಿಚ್ಛೆಯಾದರೆ ಇಲ್ಲಿ ಬಹಳ ಚರಿತ್ರೆ ರಹಸ್ಯಗಳು ಲಭಿಸುವುವು. ಸೋಮನಾಥನ ಗ್ರಂಥಗಳು ಕೂಡ ಇಲ್ಲಿ ಬಹಳ ವ್ಯಾಪಕವಾಗಿವೆ"—(೯೫ನೆಯ ಪುಟ.)

ಇತ್ಯಾದಿ ಪ್ರಮಾಣಗಳಿಂದ ಪಾಲ್ಕುರಿಕಿ ಸೋಮನಾಥ ಕವಿಯ ಜನ್ಮನಿವಾಸ ಭೂಮಿಯು ಓರಂಗಲ್ಲಿನ ಹತ್ತಿರ ಇರುವ ಆಂಧ್ರದೇಶದ "ಪಾಲಕುರಿಕಿ" ಯೇ ಎಂಬುದು ಸಿದ್ಧಾಂತವೇ ಸರಿ. 'ಪಾಲ್ಕುರಿಕಿ' ಎಂಬ ಶಬ್ದವು ಈಗಿನ ಪ್ರಾಂತವಿಭಾಗವನ್ನನುಸರಿಸಿ ಕನ್ನಡ ನುಡಿಯೆಂದು ರಾಯರ ಹೇಳಿಕೆಯಿದೆ. ಅದು ಪ್ರಾಚೀನಕಾಲದಲ್ಲಿ ಯಾವ ಭಾಷೆಗೆ ಸೇರಿರುವುದೆಂಬುದನ್ನು ಹೇಳುವುದು ಸಾಧ್ಯವಿಲ್ಲ. ಅದು ಆಂಧ್ರ ಭಾಷೆಯದೇ ಏಕಾಗಬಾರದು? 'ಕುರ್ರು' ಎಂಬುದು ಔಪವಿಭಕ್ತಿಕವಾಗಿ "ಕುರಿಕಿ'' ಯಾಗುತ್ತದೆ. ಅಂಗಲಕುರ್ರು=ಅಂಗಲಕುರಿಕಿ, ಮೋತುಕುರ್ರು=ಮೋತ್ಕುರಿಕಿ ಮೊದಲಾದ ಗ್ರಾಮದ ರೂಪಗಳು ಆಂಧ್ರದೇಶದಲ್ಲಿಯೂ ಉಂಟು. ತುಮಕೂರಿನ ಹಾಲ್ಕುರಿಕೆಯು ಸೋಮನಾಥ ಕವಿಯ ಯಾವ ಸ್ಮೃತಿಯಿಂದಲೂ ಕೂಡಿರುವದಿಲ್ಲ. ಪಿಡುಪರ್ತಿ, ವಿಭೂತಿ ಮುಂತಾದ ಉಪನಾಮಗಳುಳ್ಳ ಜಂಗಮರಾಗಲಿ ಸೋಮನಾಥನ ಗ್ರಂಥಗಳಾಗಲಿ ಹಾಲ್ಕುರಿಕೆಯಲ್ಲಿಲ್ಲ. ಸೋಮನಾಥನ ಊರೆಂದು ಹೇಳುವ ಸಂಪ್ರದಾಯವೂ ಇಲ್ಲ. ಒಂದೆರಡು ತೆಲಗು ಸೊಟ್ಟ ಪುಟ್ಟ ನುಡಿಗಳು ಆ ಊರಲ್ಲಿ ಕೆಲವರಿಗೆ ತಿಳಿದರೂ ಅದು ಶುದ್ಧ ಕನ್ನಡ ಪ್ರದೇಶವೇ ಆಗಿದೆ. ಪಾಲ್ಕುರಿಕಿ ಸೋಮನಾಥನು ಅಲ್ಲಿ ಹುಟ್ಟಿ

ದ್ದರೆ ಅವನಿಗೆ ಕನ್ನಡದಲ್ಲಿಯೇ ದೊಡ್ಡ ಪಾಂಡಿತ್ಯವು ಸಹಜವಾಗಿ ಲಭಿಸಬೇಕಾಗಿದ್ದಿತು. ಅವನು ತನ್ನ ಬಸವಪುರಾಣವನ್ನು ಬಸವನ ಮತ್ತು ತನ್ನ ಮಾತೃಭಾಷೆಯಾದ ಕನ್ನಡದಲ್ಲಿಯೇ ರಚಿಸುತ್ತಿದ್ದನು. ಹಾಲ್ಕುರಿಕೆಯು ಪ್ರಾಚೀನಕಾಲದಿಂದ ಇದ್ದು ಸೋಮನಾಥನ ಭೂಮಿಯಾಗಿದ್ದರೆ ಅಪ್ರಸಿದ್ಧವಾಗಿರಲು ಕಾರಣಗಳಿಲ್ಲ. ಸೋಮನಾಥನು ಶುದ್ಧ ಆಂಧ್ರದೇಶ ಮಧ್ಯದಲ್ಲಿ ಹುಟ್ಟಿದನೆಂಬದನ್ನು ಆತನ ತೆಲಗು ಜಾಣ್ಣುಡಿಯ ಬಗುವಿನಿಂದಲೇ ತಿಳಿಯಬಹುದು. ಬಸವಪುರಾಣದ ರಚನೆಮಾಡಿದ ಮೇಲೆ ಸೊಮನಾಥನಿಗೆ ಪ್ರಸಿದ್ಧಿಯುಂಟಾಗಿ ದೇಶದೇಶಾಂತರಗಳ ಸಂಚಾರದ ಮೂಲಕವಾಗಿ ಆತನಿಗೆ ತಮಿಳು, ಕನ್ನಡ, ಮರಾಠಿ ಭಾಷೆಗಳೂ ಬಂದಿರಬಹುದು. ಅಷ್ಟೇ ಹೊರತು ಕನ್ನಡಭಾಷೆಯಲ್ಲಿ ಸರಿಯಾದ ಪಾಂಡಿತ್ಯವಿತ್ತೆಂಬುದಕ್ಕೆ ನಿದರ್ಶನಗಳಿಲ್ಲ.

ವೀರಶೈವ ವಾಙ್ಮಯವು, ಸಂಸ್ಕೃತ ಆಂಧ್ರ ಕರ್ನಾಟಕ ಮಹಾರಾಷ್ಟ್ರ ದ್ರವಿಡಭಾಷೆಗಳಲ್ಲಿ ಅನಂತವಾಗಿದೆ. ಅಚ್ಚಾದ ಸಾಮಗ್ರಿಯೇ ಎರಡೆತ್ತುಗಳ ಗಾಡಿಗೆ ಸರಿಹೋಗುವಷ್ಟಿದೆ. ೧೫—೨೦ ವರ್ಷಗಳಿಂದ ವೀರಶೈವರ ಪತ್ರಿಕಾ ಪ್ರಂಪಂಚವೂ ಆರಂಭವಾಗಿದೆ. ಅನೇಕ ವಿಮರ್ಶೆಗಳೂ ಬಂದಿವೆ. ಬಹಳ ಪ್ರಾಚೀನಕಾಲದಿಂದಲೂ ಪ್ರಚಾರದಲ್ಲಿರುವ ವೀರಶೈವ ವಾಙ್ಮಯವು ೧೨ ನೇ ಶತಮಾನದಲ್ಲಿ ಹುಟ್ಟಿತೆಂಬುದು ಸಾಹಸವೇ ಸರಿ. ಶ್ರೀ ಹಯವದನರಾಯರ ಶ್ರೀಕರಭಾಷ್ಯದ ಇಂಗ್ಲೀಷು ಪೀಠಿಕೆಯೂ ಶ್ರೀ ನಾರಾಯಣರಾಯರ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯೂ ಅಪಸಿದ್ಧಾಂತಗಳಿಂದ ತುಂಬಿರುವವು. ಗ್ರಂಥಗಳನ್ನೂ ಶಾಸನಗಳನ್ನೂ ಸರಿಯಾಗಿ ಪರಿಶೀಲಿಸದೆ ಸಂಪ್ರದಾಯವನ್ನೂ ತಿಳಿಯದೆ" ಚರಿತ್ರಗ್ರಂಥಗಳ " ಹೆಸರಿನಿಂದ ಪ್ರಕಟಿಸಿದರೆ ಪ್ರಯೋಜನವಾಗಲಾರದು. ಸುಮ್ಮನೆ ಕಲ್ಪನಾತ್ಮಕವಾಗಿ ಬರೆಯುತ್ತ ಹೋದರೆ ವಿವಾದ ವಿಸ್ತಾರವಾಗುವದಲ್ಲದೆ ಪರಿಶ್ರಮೆಯ ಸಫಲವಾಗುವದಿಲ್ಲ. ಸಪ್ರಮಾಣವಾಗಿ ಗುಣದೋಷಾದಿಗಳನ್ನು ನಿರೂಪಿಸಿದರೆ ಯಾರಿಗೂ ಹಾನಿಯಿಲ್ಲವಷ್ಟೆ! ಪರಿಶೋಧಕನು ಬಹಳವಾಗಿ ನೋಡಿ ಸ್ವಲ್ಪವಾಗಿ ಬರೆಯಬೇಕೇ ಹೊರತು ಸ್ವಲ್ಪವಾಗಿ ನೋಡಿ ಬಹಳವಾಗಿ ಬರೆಯಬಾರದೆಂದು ನಿವೇದಿಸುತ್ತೇನೆ.

# ಶಿವನ ಸ್ವರೂಪ.

(ಲೇಖಕರು— ಬ. ಚೆ. ಪಟ್ಟೇದ ಮು. ವಂಟಮುರಿ)

ದೇವರಿಗೆ ಶಿವನೆಂದೂ, ಪರಮಾತ್ಮನೆಂದೂ ಅನೇಕ ಹೆಸರುಗಳು ಇವೆ. ಅವನನ್ನು ವೀರಶೈವರು ಶಿವಲಿಂಗ, ಪರಶಿವಲಿಂಗವೆಂತಲೂ ಕರೆದಿದ್ದಾರೆ. ಅವನು ಸಾಕಾರನೂ ನಿರಾಕಾರನೂ ಇರುವನೆಂದು ಎಲ್ಲ ಹಿಂದುಗಳಂತೆ ಅವರದಾದರೂ ನಂಬಿಗೆಯಿದೆ. ಈ ಬಗ್ಗೆ ಶ್ರೀ ಬಸವಣ್ಣನವರು— ಸಕಲ ನಿಃಕಲ ಕೂಡಿಕೊಂಡಿಪ್ಪೆಯಾಗಿ, ಸಕಲನು ನೀನೇ, ನಿಃಕಲನು ನೀನೇ ಕಂಡಯ್ಯಾ. ಎತ್ತೆತ್ತ ನೋಡಿದತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಮುಖ ನೀನೇ ದೇವಾ. ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮ ದೇವಾ " ಎಂದು ನುಡಿದಿದ್ದಾರೆ. ಈ ವಚನದಿಂದ ದೇವರು ಸಾಕಾರನಾಗಿಯೂ, ನಿರಾಕಾರನಾಗಿಯೂ ಇರುವನೆಂದು ತಾನೇ ವ್ಯಕ್ತವಾಗುತ್ತದೆ. ಆದರೆ ಕೆಲವು ಅನ್ಯ ಧರ್ಮದವರು ಆತನು ಬರೇ ನಿರಾಕಾರನೆಂದು ವಾದಿಸುವರು. ಹೂವಿನ ವಿನಾ ಸುಗಂಧವೂ, ಹಣ್ಣಿನ ವಿನಾ ಸ್ವಾದವೂ, ಶರೀರದ ವಿನಾ ಪ್ರಾಣವೂ ಇರುವದುಂಟೆ ? ಸಾಕಾರವನ್ನು ಬಿಟ್ಟು ನಿರಾಕಾರವನ್ನು ತಿಳಿಯುವದು ಹೇಗೆ ? ಆಕಾರದ ಮೇಲಿಂದಲೇ ನಿರಾಕಾರವನ್ನು ಊಹಿಸಬೇಕಾಗುತ್ತದೆ. ಆ ಕಾರಣ ಸಗುಣತ್ವದಿಂದಲೇ ನಿರ್ಗುಣ ಸ್ವರೂಪವನ್ನು ಅರಿತುಕೊಳ್ಳುವದು, ದೊಡ್ಡವರಿಗೂ, ಸಣ್ಣವರಿಗೂ, ಜ್ಞಾನಿಗಳಿಗೂ, ಅಜ್ಞಾನಿಗಳಿಗೂ ಸುಲಭ ಸಾಧ್ಯವಾಗಿದೆ.

ಕೆಲವು ಮತದವರು, ದೇವರೆಂಬ ಒಬ್ಬ ಅಸಾಮಾನ್ಯ ವ್ಯಕ್ತಿಯು ಆಕಾಶದಲ್ಲಿ ಎಲ್ಲಿಯೋ ಇರುವನೆಂದು ತಿಳಿದಿರುವಂತೆ ಕಾಣುತ್ತದೆ. ಆದರೆ ಹಿಂದುಗಳು, ಆತನು ಅಣುರೇಣು ತೃಣಕಾಷ್ಠಾದಿಗಳಲ್ಲಿ ವಿಶ್ವವ್ಯಾಪಿಯೂ, ಅಷ್ಟಲ್ಲದೆ ಮತ್ತೂ ಹೆಚ್ಚಾಗಿ ಮಿಗೆ ಮೀರಿ ನಿಂತವನೂ, ಅಖಂಡನೂ, ಅದ್ವಯನೂ ಮುಂತಾಗಿ ಇರುವನೆಂದು ತಿಳಿದಿದ್ದಾರೆ. ತೋರುವ ಚರಾಚರ ಜಗವೆಲ್ಲ ಅವನ ದೃಶ್ಯ (ಸಾಕಾರ) ಸ್ವರೂಪ

ವೆಂದೂ, ಆ ಎಲ್ಲದರಲ್ಲಿಯೂ ಅವನು ವ್ಯಾಪಿಸಿ ಜಗತ್ತಿನ ಸೂತ್ರ ಚಾಲ ಕತ್ವವನ್ನು ವಹಿಸಿರುವ ಅಗಾಧ ಶಕ್ತಿಯು ಇಲ್ಲವೆ ಚೈತನ್ಯವು ಅದೃಶ್ಯ (ನಿರಾಕಾರ) ಸ್ವರೂಪವೆಂದು ಭಾವಿಸಿದ್ದಾರೆ. ಸಾಕಾರ ನಿರಾಕಾರಗಳೆ ರಡರ ಪೂಜೆಯೂ ಹಿಂದುಗಳಿಗೆ ಗ್ರಾಹ್ಯವಾಗಿದೆ. ಮೊಟ್ಟ ಮೊದಲು ಸಾಕಾರದಿಂದ ದೇವರಾರಾಧನೆಯು ಆರಂಭವಾದರೂ, ಮುಂದೆ ನಿರಾಕಾರ ಪರಮಾತ್ಮನನ್ನು ಪೂಜಿಸುವದರಲ್ಲಿಯೇ ಅದರ ಪರ್ಯವಸಾನವಾಗು ವದು. ಅದೃಶ್ಯ ಉಗಿಯೇ ದೃಶ್ಯ ಮಂಜು ಮೋಡ ಜಲ ಬರ್ಫವಾಗು ವಂತೆ, ನಿರಾಕಾರ ಪರಮಾತ್ಮನೇ ದೃಶ್ಯ ಜಗವಾಗಿರುವನು. ಹೇಗೆ ಉಗಿಯ ಸಲುವಾಗಿ ನೀರು ಬರ್ಫಗಳನ್ನು ತ್ಯಜಿಸುವ ಕಾರಣ ಬೀಳುವ ದಿಲ್ಲವೋ, ಹಾಗೆ ನಿರಾಕಾರದ ಸಲುವಾಗಿ, ನಮಗೆ ಆಕಾರವನ್ನು ಬಿಟ್ಟುಕೊಡುವ ಅವಶ್ಯಕತೆ ಏನೂ ಇಲ್ಲ. ಸಾಕಾರವನ್ನು ಹಿಡಿದೇ ನಿರಾ ಕಾರದ ಪ್ರಾಪ್ತಿಯನ್ನೂ ತತ್ಪರಿಣಾಮವನ್ನೂ ಹೊಂದಲು ಯಾವ ಪ್ರತಿ ಬಂಧವೂ ಇಲ್ಲ. ಇದರ ಮರ್ಮವನರಿಯದ ಪರಧರ್ಮಿಗಳು ನಮ್ಮ ಆಕಾರ (ಸಗುಣ ಮೂರ್ತಿ) ಪೂಜೆಯನ್ನು ವಿರೋಧಿಸಿ ಎಷ್ಟು ಹೋರಾ ಡಿದರೂ, ಹಿಂದುತ್ವದ ಮೇಲಿನ ಪ್ರೇಮವೂ, ಅಭಿಮಾನವೂ ಅಚ್ಚಳಿ ಯದೆ ಉಳಿದಿರುತ್ತವೆ. ಆದರೂ ಈಚಿಗೆ ಹಿಂದುಗಳ ಮೂರ್ತಿಪೂ ಜೆಯು ಅತಿರೇಕವನ್ನು ಹೊಂದಿ, ಅಸಹ್ಯವಾಗಿದೆ ಎಂಬುದನ್ನು ಮಾತ್ರ ಒಪ್ಪಲೇಬೇಕು. ಅಜ್ಞರು ಮೂರ್ತಿ ಪೂಜೆಯ ಗುಟ್ಟು ಅರಿತುಕೊಳ್ಳದೆ, ಬರೇ ದುರಭಿಮಾನಿಗಳಾಗಿ ತಮ್ಮ ತಮ್ಮ ಇಷ್ಟ ಮೂರ್ತಿಗಳ ಪಕ್ಷವಿ ಡಿದು, ಸಮಾಜದಲ್ಲಿ ಒಡಕು ಹುಟ್ಟಿಸಿ, ಅನರ್ಥವನ್ನು ಉಂಟು ಮಾಡು ತ್ತಿರುವದು ಸರಿಯಲ್ಲ. ಈ ಸಂಗತಿಯನ್ನು ಲಕ್ಷಕ್ಕೆ ತಂದು ವೀರಶೈವರು ಅನೇಕ ಮೂರ್ತಿಗಳಾರಾಧನೆಯನ್ನು ಹಳಿದು, ಒಂದೇ ಒಂದಾದ ಇಷ್ಟಲಿಂಗದ ಪೂಜೆಯನ್ನು ಬಳಕೆಯಲ್ಲಿ ತಂದಿದ್ದಾರೆ. ಅದು ಸಾಕಾರ ನಿರಾಕಾರವೆರಡನ್ನೂ ಒಳಕೊಂಡಿದೆ. ಆದರೂ ಬಹು ಸಂಖ್ಯಾಕರಾದ ಇತರ ಹಿಂದುಗಳ ಸಂಸರ್ಗ ದೋಷವು ವೀರಶೈವರನ್ನೂ ಅಂಟಿಕೊಂಡಿದೆ.

ಪರಧರ್ಮೀಯರು, ಮನುಷ್ಯರೆಲ್ಲರು ದೇವರ ಮಕ್ಕಳೆಂದು ಬಗೆದು ಪರಸ್ಪರವಾಗಿ ಬಂಧುಪ್ರೇಮವನ್ನು ಬೆಳಸಲಿಕ್ಕೆ ಹವಣಿಸುತ್ತಿದ್ದರೆ, ಹಿಂದು ಗಳಾದ ನಾವು ಎಲ್ಲ ಮಾನವ ಜಾತಿಯಲ್ಲದೆ, ಮಿಕ್ಕ ಯಾವತ್ತು ಸ್ಥಿರ ಚರ ಜಗತ್ತನ್ನು ಸಹ, ಕೇವಲ ಪರಮಾತ್ಮ ಸ್ವರೂಪ ಅರ್ಥಾತ್

ಸ್ವಸ್ವರೂಪವೆಂದೇ ಎಣಿಸುತ್ತೇವೆ. ಇದಕ್ಕಿಂತಲೂ ಮೇಲಾದ ಸದ್ಭಾವನೆ ತಾಳುವದು ದುರ್ಲಭ. ಆದಕಾರಣ ಎಲ್ಲ ಧರ್ಮದವರ ಬಗ್ಗೆ ನಮ್ಮಲ್ಲಿ ಆದರ ಬುದ್ಧಿಯೂ ಸಹಾನುಭೂತಿಯೂ ಪರಕೀಯರಿಗಿಂತ ಹೆಚ್ಚಾಗಿ ಸ್ಥಿರಪಟ್ಟಿವೆ. ಮನುಷ್ಯನು ಅವಿದ್ಯಾ ಮೂಲಕದಿಂದ ಆ ಜ್ಞಾನವನ್ನು ತ್ಯಜಿಸಿ, ತಮೋಗುಣಗಳನ್ನೂ ಜೀವ ಭಾವನೆಯನ್ನೂ ಅಳಿದು, ಶಿವ ಗುಣ ಸಂಪನ್ನನಾಗಿ, ತದನುಸಾರ ವರ್ತಿಸಿ, ಅಹಂಕಾರವನ್ನು ಮರೆದು ಪರಮಾತ್ಮನಲ್ಲಿ ಏಕವಾಗುವದೇ ಕೊನೆಯ ಗುರಿಯು.

ಈ ಜಗತ್ತಿನಲ್ಲಿ ಅತ್ಯಂತ ಗೂಢವಾದ ವಿಷಯವೆಂದರೆ ದೇವರೇ. ಬಹಳ ದಿವಸಗಳ ಹಿಂದೆ ಪ್ರಚಲಿತವಿದ್ದ ಕ್ರಮಿಕ ಳ ನೆಯ ಪುಸ್ತಕದಲ್ಲಿ "ದೇವರನ್ನು ಯಾರೂ ನೋಡಿಲ್ಲ" ಎಂಬದೊಂದು ಪಾಠವಿತ್ತು. ಸ್ಥೂಲ ದೇಹದ ಚರ್ಮ ಚಕ್ಷುವಿನಿಂದ ಮಾತ್ರ ದೇವರನ್ನು ಕಾಣುವದು ಅಸಾಧ್ಯ ವೆಂಬುದೇ ಅದರ ತಾತ್ಪರ್ಯ. ಯಾಕಂದರೆ ಈ ಕಣ್ಣುಗಳಲ್ಲಿ ಜಗ ತ್ತಿನೊಳಗಿನ ನಾನಾ ವಿಧ ಸ್ಥೂಲ ಪದಾರ್ಥಗಳನ್ನು ಮಾತ್ರ ಭಿನ್ನ ಭಿನ್ನ ಸ್ವರೂಪದಲ್ಲಿ ಕಾಣುವ ಸಾಮರ್ಥ್ಯವುಂಟು. ಆ ವಸ್ತುಗಳಿಗೆಲ್ಲ ರೂಪ ಗಳನ್ನನುಸರಿಸಿ ಪ್ರತ್ಯೇಕವಾದ ಹೆಸರುಗಳು ರೂಢವಾಗಿರುವರಿಂದ, ಅವನ್ನು ಕಂಡಕೂಡಲೆ ಆ ನಾಮರೂಪಗಳೇ ಮುಂದೆ ಬಂದು ನಿಲ್ಲುತ್ತವೆ. ಅವುಗಳಲ್ಲಿ ವ್ಯಕ್ತವಾಗಿರುವ ದೇವತ್ವವು ನಮಗೆ ಎಷ್ಟು ಮಾತ್ರವೂ ತೋರುವದೇ ಇಲ್ಲ. ಅದಕ್ಕೆ ದಿವ್ಯದೃಷ್ಟಿಯು ಬೇಕು. ಅಂತಹ ದೃಷ್ಟಿ ಯೆಂದರೆ ಮೇಲ್ತರದ ಅತ್ಯುಚ್ಚ ಜ್ಞಾನವೇ ಹೊರತು ಅನ್ಯವಲ್ಲ. ಇಂತಹ ದೃಷ್ಟಿಯನ್ನು ಪಡೆದವರಿಗೆ ದೇವರು ಎಲ್ಲೆಲ್ಲಿಯೂ ತುಂಬಿ ನಿಂತಿದ್ದಾನೆ. ಅವನಲ್ಲದೆ ಮತ್ತಾವುದೂ ಅವರಿಗೆ ಗೋಚರಿಸುವದೇ ಇಲ್ಲ. ಈ ಬಗ್ಗೆ ಮಹಾನುಭಾವರಾದ ಶ್ರೀಬಸವಣ್ಣನವರ ವಚನವು ಮೇಲೆ ಕೊಡಲ್ಪಟ್ಟಿದೆ. ಇದು ಸುಜ್ಞಾನಸಂಪನ್ನರ ಮಾತಾಯಿತು. ನಮಗೆ ಈಗ ಅವರ ಗೊಡವೆ ಬೇಡ. ಆದರೆ ಮಿಕ್ಕವರ ಸಲುವಾಗಿ ಪುರಾಣಾದಿ ಗ್ರಂಥಗಳು ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ ಕರ್ತನಾದ ಸಕಲ ಪರಮೇಶ್ವರನ ಮಸಮಸಕಾದ ಕಲ್ಪನೆಯನ್ನಾದರೂ ತಂದುಕೊ ಡುವ ಕುರಿತು, ಏನು ಉಸುರಿರುವವೋ ಅದನ್ನೇ ಸ್ವಲ್ಪದರಲ್ಲಿ ವಿವೇ ಚಿಸುವದು ಈ ಬರಹದ ಉದ್ದೇಶವಾಗಿದೆ.

ಹಿಂದ ತತ್ವಶಾಸ್ತ್ರಜ್ಞರು ಸ್ಥೂಲಮಾನದಿಂದ ವಿಶ್ವರೂಪಿ ದೃಶ್ಯ ದೇವನನ್ನು ಏಣ್ಮೈಯ್ಯನೆಂದು ವರ್ಣಿಸಿರುವರು. ಪೃಥ್ವಿ ಜಲ ಅಗ್ನಿ ವಾಯು ಆಕಾಶಗಳೆಂಬೈದು ಮಹಾಭೂತಗಳು, ರವಿ ಶಶಿಗಳೆಂಬ ದಿವ್ಯವಾದ ಮಹಾಪ್ರಕಾಶಿಕೆಗಳು, ಆತ್ಮನೆಂಬ ಸರ್ವವ್ಯಾಪಿ ಚೈತನ್ಯ ಶಕ್ತಿಯು ಈ ಎಂಟು ಒಡವೆಗಳಿಂದ ಜಗತ್ತು ಉತ್ಪತ್ತಿಹೊಂದಿ ಬಾಳಿ, ತನ್ನ ಕಾರ್ಯದಲ್ಲಿ ಅವ್ಯಾಹತವಾಗಿ ನಿಮಗ್ನವಾಗಿರುವದರಿಂದ ಇವೇ ದೇವರ ಅಷ್ಟತನುವೆಂದು (ಸಾಕಾರಸ್ಥೂಲ ಸ್ವರೂಪವೆಂದು) ಹೇಳಿದ್ದಾರೆ. ಇದಲ್ಲದೆ ಪುರಾಣದಲ್ಲಿ ಅವನಿಗೆ (ಶಿವನಿಗೆ) ಮನುಜ ಪ್ರಾಣಿಯಂತೆಯೇ, ತದ್ರೂಪ ಆಕಾರವನ್ನು ಕಲ್ಪಿಸಿ ಬರೆದಿದ್ದಾರೆ. ಅದರೆ ಅವನಿಗೆ ಐದು ಮುಖಗಳೂ ಮೂರು ಕಣ್ಣುಗಳೂ ಹತ್ತು ತೋಳುಗಳೂ ಇರುವವೆಂದಿದ್ದಾರೆ. ಹಾಗು ಅವನು — ಗಂಗೆ, ಚಂದ್ರ, ವಿಷ, ಭಸ್ಮ, ತ್ರಿಶೂಲ, ಸರ್ಪ, ಗಜ ಚರ್ಮ, ರುಂಡಮಾಲೆಗಳನ್ನು ಧರಿಸಿಕೊಂಡಿರುವನು. ನಂದಿ ವಾಹನನಾಗಿರುವನು. ಸ್ಮಶಾನದಲ್ಲಿ ವಾಸಿಸುವನು. ಭೂತಗಣದಿಂದ ಸೇವಿಸಲ್ಪಡುವನು. ಮನಬಂದಂತೆ ತಾಂಡವನೃತ್ಯಮಾಡುವನು. ಕಾಮಸಂಹರ-ಕಾಲಿಮರ್ದನ-ಸ್ವಯಂಭುವಾಗಿರುವನು. ಆದರೂ ಅವನಿಗೆ ಪಾರ್ವತಿ ಎಂಬ ಹೆಂಡತಿಯೂ ವಿಘ್ನೇಶ್ವರ ಷಣ್ಮುಖ ವೀರಭದ್ರರೆಂಬ ಮೂವರು ಮಕ್ಕಳೂ ಇರುವರು. ಭಿಕ್ಷೆಯಿಂದ ಜೀವಿಸುವನು ಇತ್ಯಾದಿ ಇತ್ಯಾದಿ ಉಲ್ಲೇಖಿಸಿರುವರು. ಇವೆಲ್ಲ ಉತ್ಪ್ರೇಕ್ಷಾ ರೂಪವಾಗಿರುವದರಿಂದ ಹೀಗೆಂದರೇನೆಂಬದನ್ನು ಕೆಳಗೆ ಕ್ರಮವಾಗಿ ಯಥಾಮತಿ ಆಲೋಚಿಸುವೆನು.

೧ ಪಂಚಮುಖಗಳು— ಪೃಥ್ವಿ, ಜಲ, ಅಗ್ನಿ, ವಾಯು ಆಕಾಶಗಳೆಂಬ ಐದು ಮಹಾಭೂತಗಳೇ ಶಿವನ ಸ್ಥೂಲಪಂಚಮುಖಗಳೆಂದು ನಿರೂಪಿತವಾಗಿವೆ. ಇವುಗಳ ದ್ವಾರವಾಗಿಯೇ ಅವನು ಸಾಕಾರತ್ವವನ್ನು ಹೊಂದುವನು. ಈ ಪಂಚತತ್ವಗಳು ಪಂಚೀಕೃತದಿಂದ ೨೫ ತತ್ವಗಳಾಗಿ ಪಿಂಡಾಂಡವಾಗಿರುವದು. ಪಿಂಡಾಂಡದಲ್ಲಿದ್ದುದೇ ಬ್ರಹ್ಮಾಂಡದಲ್ಲಿಯೂ ಇರುವದು.

೨ ತ್ರಿನೇತ್ರಗಳು— ಜಗತ್ತಿನಲ್ಲಿರುವ ಸೂರ್ಯ ಚಂದ್ರ ಅಗ್ನಿಗಳೆಂಬ ಪ್ರಕಾಶಿತ ವಸ್ತುಗಳೇ ಶಿವನ ಮೂರು ಕಣ್ಣುಗಳು. ಸೂರ್ಯನು ಉಗ್ರನಾಗಿ ಪ್ರಖರತೆಯಿಂದ ಪ್ರಕಾಶಿಸುತ್ತಾನೆ. ಚಂದ್ರನು ಸೌಮ್ಯನಾಗಿ

ಶಾಂತಸ್ವರೂಪದಿಂದ ಬೆಳಗುವನು. ಅಗ್ನಿಯು ಪ್ರಕಾಶಿಸುವದಲ್ಲದೆ, ಸರ್ವಪದಾರ್ಥಗಳನ್ನು ಉರುಹಿ ಒಂದೇ ಒಂದಾದ ಐಕ್ಯ ಸ್ವರೂಪದ ಭಸ್ಮಸ್ಥಿತಿಗೆ ತರುವನು. ಇದು ಹಣೆಗಣ್ಣೆಂದೂ ಪ್ರಳಯ ಕಾಲದಲ್ಲಿ ತೆರೆಯಲ್ಪಡುವದೆಂದೂ ಹೇಳಿದ್ದಾರೆ. ಇದೇ ಅಚ್ಚ ರುದ್ರಾಕ್ಷಿಯು. ನಿಜವಾಗಿ, ಈ ಅಗ್ನಿನೇತ್ರವು ಜ್ಞಾನಸ್ವರೂಪವು. ತಲೆಯಲ್ಲಿರುವ ಬಿಂದುವಿನ ಶಕ್ತಿಯು. ಐಕ್ಯಸ್ವರೂಪದ ಸತ್ಯಜ್ಞಾನದಿಂದಲೇ ಜಗವು ನಾಶವಾಗಿ, ಒಂದೇ ಒಂದು ಪರಬ್ರಹ್ಮ (ಪರಮಾತ್ಮ) ಉಳಿಯುವದು. ಇದೇ ಜಗತ್ಪ್ರಳಯವು. ಅವಶೇಷ ಪರಮಾತ್ಮನೇ ಭಸ್ಮವು. ಭಸ್ಮಕ್ಕೂ ಪರಮಾತ್ಮತ್ವಕ್ಕೂ ಅಭೇದವು. ಈ ಮೂರು ನೇತ್ರಗಳನ್ನು ನಿರೀಕ್ಷಿಸಿದರೆ ಶಿವನು ತೇಜೋರೂಪಿಯಲ್ಲದೆ, ಉಗ್ರನೂ ಸೌಮ್ಯನೂ ಜ್ಞಾನನಿಧಿಯೂ ಆಗಿರುವನೆಂಬುದು ವ್ಯಕ್ತವಾಗುತ್ತದೆ.

೩ ದಶಭುಜಗಳು— ಸುತ್ತುಮುತ್ತಲಿನ ಪೂರ್ವಾದಿ ಎಂಟು ದಿಕ್ಕುಗಳೂ, ಕೆಳಗೆ ಮೇಲೆ ಎಂಬೆರಡು ಬದಿಗಳೂ ಕೂಡಿ ಹತ್ತು ದಿಕ್ಕುಗಳಾಗುವವು. ಇವೇ ಪರಮಾತ್ಮ ತೋಳುಗಳೆಂದು ಬಗೆದಿರುವರು. ಇದರಿಂದ ಅವನು ಎಲ್ಲೆಲ್ಲಿಯೂ ವ್ಯಾಪ್ತನಾಗಿರುವನೆಂಬುದು ಸೂಚಿತವಾಗುವದು.

೪ ಗಂಗಾಧರ— ಶಿವನು ಗಂಗೆಯನ್ನು ಜಡೆಯಲ್ಲಿ ಧರಿಸಿದ್ದಾನೆ. ಗಂಗೆಯೆಂದರೆ ನೀರು, ಜಡೆಯೆಂದರೆ ಮೋಡಗಳು. ಈ ಮೇಘಗಳಿಂದಲೇ ಮಳೆಯ ರೂಪದಿಂದ ನಮಗೆ ನೀರು ಸಿಗುವದಿಲ್ಲವೇ? ಆದುದರಿಂದ ಶಿವನು ಗಂಗಾಧರನೆಂದು ಹೇಳಲ್ಪಟ್ಟನು.

೫ ಚಂದ್ರಧಾರಿ— ಶಿವನು ಚಂದ್ರನನ್ನು ಶಿರದಲ್ಲಿ ಧರಿಸಿರುವನೆಂದು ಕಲ್ಪಿಸಿ, ಅವನಿಗೆ ಚಂದ್ರಶೇಖರನೆನ್ನುವರು. ಚಂದ್ರನಂತೆ ಪರಹಿತ ಗುಣವುಳ್ಳವನೂ ಅಮೃತತ್ವ ನೀಡುವವನೂ ಆದುದರಿಂದಲೇ ಅವನು ಚಂದ್ರಧರನೆಂದು ಹೇಳಲ್ಪಟ್ಟನು. ಇದರಿಂದ ಶಿವನು ಶಾಂತನೂ ಕಲ್ಯಾಣಕರ ಸ್ವರೂಪನೂ ಭಕ್ತವತ್ಸಲನೂ ಉದ್ಧಾರಕನೂ ಎಂಬದು ತಾನೇ ವ್ಯಕ್ತವಾಗುವದು.

೬ ವಿಷಧರ— ವಿಷ-ಅಮೃತವೆಂಬೆರಡು ಪದಾರ್ಥಗಳು ತೀರ ವಿರುದ್ಧವಾದವುಗಳು. ಅಮೃತವು ಮರಣವನ್ನು ತಪ್ಪಿಸಿದರೆ, ವಿಷವು ಅದನ್ನು

ಒದಗಿಸುತ್ತದೆ. ಸಂಸಾರದಲ್ಲಿ ಸುಖ ದುಃಖಗಳೆರಡೂ ಒಂದರೊಳಗೊಂದು ಬೆರೆದೇ ಇರುವವು. ನಾವು ಶುದ್ಧ ಸುಖವನ್ನು ಬಯಸಿದರೆ ಅದರೊಡನೆಯೇ ಅನಿಷ್ಟವಾದ ದುಃಖವು ತಾನು ಸಿದ್ಧವಾಗಿ ನಿಂತಿರುವದು. ಈ ಸುಖ ದುಃಖಗಳೇ ಲೌಕಿಕದಲ್ಲಿ ಅಮೃತ - ವಿಷಗಳೆಂದು ಭಾವಿಸಲ್ಪಟ್ಟಿವೆ. ಜ್ಞಾನಿಗಳ ದೃಷ್ಟಿಯಲ್ಲಿ ನಿಜವಾಗಿ ದುಃಖವು ಇಲ್ಲೇ ಇಲ್ಲ. ಅದು ಕೇವಲ ಅಜ್ಞಾನದ ಫಲವು. ಅವೆರಡಕ್ಕೂ ಪರಮಾತ್ಮನೇ ಆಶ್ರಯನಾಗಿರುವದರಿಂದ ಅವನಿಗೆ ಎರಡೂ ಪ್ರಿಯ. ದುಃಖವನ್ನಾದರೂ ಅಷ್ಟೇ ಆನಂದದಿಂದ ಆತನು ಗ್ರಹಿಸುವನು. ಆದುದರಿಂದ ಅವನು ವಿಷಧರನೆಂದು ಪ್ರಸಿದ್ಧಿ ಪಡೆದನು. ಇದೇ ಕಾರಣದಿಂದಲೇ ಅವನಿಗೆ ನೀಲಕಂಠನೆಂದೂ ಕರೆದರು. ದುಃಖವು ಗದ್ಗದ ಸ್ವರೂಪದಿಂದ ಕಂಠದಲ್ಲಿಯೇ ಪ್ರಕಟವಾಗುವದರಿಂದ ಅವನು ವಿಷವನ್ನು ಕಂಠದಲ್ಲಿಟ್ಟುಕೊಂಡಿರುವನೆಂದು ಭಾವಿಸಿದರು.

೭ ಭಸ್ಮ ಚರ್ಚಿತ— ಈ ಭಸ್ಮವು, ಭಿನ್ನ ಭಿನ್ನ ಸ್ವರೂಪದ ಪದಾರ್ಥಗಳು ಅಗ್ನಿಯಿಂದ ಸುಟ್ಟಮೇಲೆ ಉಳಿಯುವ ಐಕ್ಯ ಸ್ವರೂಪದ ವಸ್ತುವು. ಆದುದರಿಂದ ಇದು ಪರಮಾತ್ಮ ಸ್ವರೂಪವೆಂದು ಮೇಲೆ ನೇತ್ರದ ವರ್ಣನೆಯಲ್ಲಿ ಹೇಳಿರುತ್ತದೆ. ಪರಮಾತ್ಮನು ಚಿತಾ ಭಸ್ಮವನ್ನು ತನ್ನಂಗಕ್ಕೆ ಪೂಸಿಕೊಳ್ಳುವನೆಂದು ಪೌರಾಣಿಕರು ಹೇಳುತ್ತಾರೆ. ಇಲ್ಲಿ ಜಗತ್ತೇ ಚಿತೆಯು. ಹಣೆಗಣ್ಣೆನಿಸುವ ಜ್ಞಾನಾಗ್ನಿಯಿಂದ ಅದನ್ನು ಉರುಹಲು (ನಾಮ ರೂಪಗಳನ್ನು ಕಳೆಯಲು), ಅದು ಒಂದೇ ಒಂದಾದ ಸಚ್ಚಿದಾನಂದ ಪರಮಾತ್ಮ ಸ್ವರೂಪವೇ ಉಳಿಯುವದು. ಆ ಉಳುಮೆಯೇ ಶಿವನಾಗಿರುವದರಿಂದ ಅವನು ಭಸ್ಮ ಚರ್ಚಿತನೆಂದು ಹೇಳಲ್ಪಟ್ಟನು.

೮ ತ್ರಿಶೂಲಪಾಣಿ— ತ್ರಿಪುರಾಸುರರೆನಿಸಿದ ಆಣವ-ಮಾಯಾ-ಕಾರ್ಮಿಕಗಳೆಂಬ ಮೂರ್ಮಲಗಳನ್ನು, ಏಕಕಾಲಕ್ಕೆ ನಾಶಗೊಳಿಸುವ ಸಲುವಾಗಿ, ಮೂರು ಮೊನೆಗಳುಳ್ಳ ಶಸ್ತ್ರವನ್ನು (ಇಷ್ಟ-ಪ್ರಾಣ-ಭಾವಗಳೆಂಬ ಲಿಂಗ ರೂಪವನ್ನು) ಧರಿಸಿದನು. ಇವನ್ನೇ ಗುರು-ಲಿಂಗ-ಜಂಗಮವೆಂದೂ ವಿಭೂತಿ ರುದ್ರಾಕ್ಷಿ ಮಂತ್ರಯವೆಂದೂ ಸಹ ಹೇಳಬಹುದು. ಈ ಮೂರು ಒಂದೇ ಸ್ವರೂಪವಾಗಿದ್ದು ಹೆಸರಿನಲ್ಲಿ ಮಾತ್ರ ಭಿನ್ನವೆನಿಸುತ್ತವೆ. ತ್ರಿದಳಾತ್ಮಕವಾದ ಬಿಲ್ವಪತ್ರೆಯು ಈ ತ್ರಿಶೂಲ ಸ್ವರೂಪವೆಂಬ

ಭಾವನೆಯನ್ನು ತಳೆದೇ, ಲಿಂಗಾಯತರು ಲಿಂಗಪೂಜೆಯಲ್ಲಿ ಅದಕ್ಕೆ ಅಷ್ಟೊಂದು ಅಗ್ರಸ್ಥಾನವನ್ನು ಕೊಟ್ಟಿರುವರು.

೯ ಸರ್ಪಭೂಷಣ— ಸುಷುಮ್ನಾ ನಾಡಿಯೇ ಕುಂಡಲಿ ಸರ್ಪವಾಗಿರುವದು. ಇದು ಶಿರದಿಂದ ಹೊರಟು ಕಶೇರುಕಾರಜ್ಜು (ಮೆದುಳಬಳ್ಳಿ) ಎನ್ನಿಸಿಕೊಂಡು, ಬೆನ್ನೆಲುಬಿನ ಮಣಿಗಳೊಳಗಿಂದ ಕೆಳಮುಖವಾಗಿ ಹಬ್ಬಿರುವದು. ಅದರಿಂದ ಹೊರಟ ಜ್ಞಾನ ತಂತುಗಳು ಭ್ರೂಮಧ್ಯ, ಕಂಠ, ಹೃದಯ, ನಾಭಿ, ಗುಹ್ಯ, ಗುದಗಳೆಂಬ ಷಟ್‌ಸ್ಥಾನಗಳಲ್ಲಿ ಕೇಂದ್ರೀಕೃತವಾಗಿ, ಲಿಂಗ (ಜ್ಞಾನ) ಸ್ವರೂಪವನ್ನು ಹೊಂದಿವೆ. ಇವೇ ದೇಹಗತ ಷಡ್ಲಿಂಗಗಳು. ಆದುದರಿಂದ ಶಿವನು ಫಣಿ ಭೂಷಣನಾದನು.

೧೦ ಗಜಚರ್ಮಾಂಬರಧಾರಿ— ಗಜವೆಂದರೆ ಅಹಂಕಾರವು. ಇದರಲ್ಲಿ ದೇಹ ಪ್ರಾಣಗಳೆರಡೂ ಬರುತ್ತವೆ. ಅದನ್ನು ( ಪ್ರಸಾದಿ ಸ್ಥಾನದಲ್ಲಿ ಹೇಳಿದಂತೆ ) ಶಿವನೊಳಡಗಿಸುವದರಿಂದ, ಅದು ಶಿವ ಸ್ವರೂಪವೇ ಆಗಿ, ಅವನನ್ನೇ ಆಶ್ರಯಿಸುವದು. ಅದರಿಂದ "ನಾನು" ಎಂದು ಹೇಳಲ್ಪಡುವ ಸ್ಥೂಲಕಾಯವು ದೇವಾಲಯವಾಗಿ, ಒಳಗಿರುವ ಪ್ರಾಣವೇ ಲಿಂಗವಾಗುವದರಿಂದ, ಆ ಶಿವಲಿಂಗಕ್ಕೆ ಭಕ್ತ ಕಾಯವು ಮೇಲುಹೊದಿಕೆ (ಅಂದರೆ ಚರ್ಮ) ವಾಯಿತು. ಅರ್ಥಾತ್ ಶಿವನು ಗಜಚರ್ಮಾಂಬರಧಾರಿಯಾದನು.

೧೧ ರುಂಡಮಾಲಾಧರ— ಭಕ್ತವತ್ಸಲನಾದ ಶಿವನು, ಸದ್ಭಕ್ತರನ್ನು ತನ್ನಲ್ಲಿ ಬೆರಿಸಿಕೊಂಬುವದು ಸರ್ವಶ್ರುತವಷ್ಟೆ ! ಅದನ್ನೇ ಸ್ಥೂಲ ರೂಪದಲ್ಲಿ ಹೀಗೆ ವರ್ಣಿಸಿದ್ದಾರೆ. ಅವರ ದೇಹವನ್ನೇ ( ಅದರಲ್ಲಿ ಉತ್ತಮಾಂಗವೆನಿಸಿದ ಶಿರವನ್ನೇ ) ತಾನು ಸ್ವೀಕರಿಸಿಕೊಂಡನೆಂಬದನ್ನು ತೋರಿಸುವ ದೆಸೆಯಿಂದಲೇ ಅವನು ರುಂಡಮಾಲಾಧರನೆಂದು ಬಣ್ಣಿಸಲ್ಪಟ್ಟನು.

೧೨ ನಂದಿವಾಹನ— ನಂದಿಯೆಂದರೆ ಪರಿಪೂರ್ಣ ಸ್ವರೂಪರ (ಚತುಷ್ಪಾದಯುತನಾದ) ಧರ್ಮವು. ಶಿವನು ಸದ್ಧರ್ಮದಲ್ಲಿಯೇ ತೋರುವನಾದುದರಿಂದ ಆತನು ನಂದಿವಾಹನನಾದನು.

೧೩ ಸ್ಮಶಾನವಾಸಿ— ಯದ್ದೃಷ್ಟಂ ತನ್ನಷ್ಟಂ" ಎಂಬಂತೆ ಜಗವೆಲ್ಲ ಲಯಕ್ಕೆ ಸ್ಥಾನವಾಗಿರುವದರಿಂದ ಅದು ಸ್ಮಶಾನವೇ ಸರಿ! ಈ ಜಗತ್ತಿನಲ್ಲಿಯೇ ಪರಮಾತ್ಮನು ಚೈತನ್ಯ ಸ್ವರೂಪವಾಗಿ ಬೆರೆದು ವಾಸಿಸುವದರಿಂದ, ಅವನು "ಸ್ಮಶಾನವಾಸಿ" ಎಂಬುದು ಸತ್ಯವಲ್ಲವೇ ?

೧೪ ಭೂತಗಣಸೇವಿತ— ಭೂತಗಣವೆಂದರೆ ಪಂಚಮಹಾ ಭೂತಗಳು. ಇವನ್ನು ಪಂಚಮುಖಗಳ ಉಲ್ಲೇಖದಲ್ಲಿ ವಿಶದೀಕರಿಸಿರುತ್ತದೆ. ಅವುಗಳ ಮುಖಾಂತರವಾಗಿಯೇ ಪರಮಾತ್ಮನು ಸ್ಥೂಲಪ್ರಪಂಚವಾಗಿ (ನಾನಾ ರೂಪದ ಚರಾಚರ ವಸ್ತುಗಳಾಗಿ) ಪ್ರಕಟವಾಗುವದರಿಂದ ಶಿವನು ಭೂತಗಣಸೇವಿತನೆಂದು ಹೇಳಿಸಿಕೊಂಡನು.

೧೫ ತಾಂಡವನರ್ತನ— ಜಗತ್ತೇ ಪರಮಾತ್ಮನ ವಿರಾಟ್‌ಸ್ವರೂಪವು. ಅದು ಬಹು ವಿಧವಾದ ಅಸಂಖ್ಯ ಚರಾಚರಗಳಿಂದ ಕೂಡಿರುವದು. ಅವುಗಳಿಗೆಲ್ಲ ಚೈತನ್ಯ ಸ್ವರೂಪದಿಂದ ಪರಮಾತ್ಮನೇ ಸೂತ್ರಚಾಲಕನು. ಅವುಗಳ ಚಲನವಲನಾತ್ಮಕ ಅನಂತ ಕ್ರಿಯೆಗಳು, ನಿರಾತಂಕವಾಗಿ ನಡೆದೇ ಇರುವವು. ಈ ಎಲ್ಲ ಚೇಷ್ಟೆಗಳ ಸಮಷ್ಟಿ ಸ್ವರೂಪವೇ ಆ ಪರಮಾತ್ಮನ ಮನಸೋಕ್ತವಾದ ತಾಂಡವನೃತ್ಯ (ಲೀಲೆ) ಆಗಿರುವದು. ಜಗತ್ತು ಪರಮಾತ್ಮನ ವಿಶ್ವತೋ (ಎಲ್ಲೆಡೆಗೆ) ಬಾಹು-ಮುಖ ಚಕ್ಷು-ಪಾದಗಳುಳ್ಳದ್ದಾಗಿರುವದೆಂಬದು ಪ್ರತ್ಯಕ್ಷ ತೋರುತ್ತದಷ್ಟೆ. ಈ ಎಲ್ಲ ಅವಯವಗಳಿಂದ ಸದೋದಿತವಾಗಿ ನಡೆದಿರುವ ಅಪಾರವಾದ ವ್ಯಾಪಾರಗಳ ಪರಿಣಾಮವೇ ತಾಂಡವನೃತ್ಯವೆನಿಸುವದು.

೧೬ ಪಾರ್ವತೀವಲ್ಲಭ- ಪಾರ್ವತಿಯು ಹಿಮವಂತರಾಜನ ಮಗಳು. ಹಿಮಾಲಯ ಪರ್ವತದಿಂದ ಅನೇಕ ನದಿಗಳು ಉಗಮ ಹೊಂದಿ ಹರಿದು ಆ ಪರ್ವತದ ಮಣ್ಣನ್ನು ಎಳೆದು ತಂದು, ಉತ್ತರ ಹಿಂದುಸ್ಥಾನದ ಬೈಲು ಭೂಮಿಯನ್ನೆಲ್ಲ ಬಹು ಬೆಳೆಯುಳ್ಳ ಭೂಮಿಯನ್ನಾಗಿ ಮಾಡಿರುತ್ತವೆ. (ಬೇರೆ ಕಡೆಗೆ ಇದೇ ಕ್ರಮವು). ಆರ್ಯರು ತಾವು ಮೊದಲು ಉತ್ತರ ಹಿಂದುಸ್ತಾನದಲ್ಲಿಯೇ ಈ ಅನುಭವವನ್ನು ಪಡೆದುದರಿಂದ, ಈ ಫಲಭರಿತವಾದ ಭೂದೇವಿಯೇ ಗಿರಿಕನ್ಯೆ ಎಂದು ಊಹಿಸಿದರು. ಇವಳೇ ಪಾರ್ವತಿಯು. (ಪರ್ವತ-ಇ) ಈಕೆಯೇ ಸಕಲ ಪ್ರಾಣಿಗಳ ಅನ್ನದಾತೆ ಎಂದು ಅನ್ನಪೂರ್ಣೆ ಎಂಬ ಅಭಿಧಾನವನ್ನು ಹೊಂದಿರುವಳು.

೧೭ ಮಕ್ಕಳೊಂದಿಗ— ಶಿವನಿಗೆ ಗಜಾನನ, ಷಣ್ಮುಖ, ವೀರೇಶರೆಂಬ ಮೂವರು ಮಕ್ಕಳಿರುವರೆಂದು ಹೇಳಿದ್ದಾರೆ. ಈ ವಿಷಯವಾಗಿ ಆಲೋಚಿಸುವಾ.

(ಅ) ಗಜಾನನ— ಇವನಿಗೆ ವಿಘ್ನೇಶ್ವರನೆಂದೂ, ಗಣಪತಿ (ವಿನಾಯಕ) ನೆಂದೂ ಬೇರೆ ಹೆಸರುಗಳೂ ಸಹ ಉಂಟು. ಶಿವನು ಚಿದ್ರೂಪನು. "ಪ್ರಜ್ಞಾನಂ ಬ್ರಹ್ಮ" ಎಂದು ಶೃತಿಯು ಸಾರುತ್ತದೆ. ಈ ಶಿವನ ಮಕ್ಕಳೆಂದರೆ ಜ್ಞಾನದ ಸಂತತಿಯೇ ಹೊರತು, ಮತ್ತೇನೂ ಅಲ್ಲ. ಜ್ಞಾನದಲ್ಲಿಯೇ ಚಾತುರ್ಯವು ತಲೆದೋರುತ್ತದೆ. ಬಗೆಬಗೆಯ ಯುಕ್ತಿ ಪ್ರಯುಕ್ತಿಗಳು ಹೊರಹೊಮ್ಮುತ್ತವೆ. ಇವುಗಳವಲಂಬನದಿಂದ ನಡೆದರೆ ಸರ್ವ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವವು. ಬರೇ ಶಕ್ತಿಯನ್ನುಪಯೋಗಿಸಿದರೆ ಹಸಗೆಡುವ ಸಂಭವವುಂಟು. ಆದುದರಿಂದ ಈ ಚಾತುರ್ಯ ಯುಕ್ತಿಗಳಿಗೆ ವಿಘ್ನೇಶ್ವರನೆಂದು ಕರೆದಿರುವರು. ಪ್ರತಿಯೊಂದು ಕಾರ್ಯಾರಂಭದಲ್ಲಿ ವಿಘ್ನೇಶ್ವರನನ್ನು ಪೂಜಿಸಬೇಕು. ಅಂದರೆ "ಶಕ್ತಿಪ್ರಯೋಗವನ್ನೇ ಅವಲಂಬಿಸುವದಕ್ಕಿಂತ ಮೊದಲು, ಯುಕ್ತಿ ಪ್ರಯುಕ್ತಿಗಳಿಂದ ಕಾರ್ಯ ಸಾಧಿಸಬಹುದೇನು," ಎಂಬ ಆಲೋಚನೆಯನ್ನು ಮಾಡಬೇಕು. ಇದೇ ವಿಘ್ನೇಶ್ವರ ಪೂಜೆಯ ಅರ್ಥವು. ಇಂತಹ ಹಂಚಿಕೆಗಾರನೇ ಸಮಾಜದಲ್ಲಿ ಮುಂದೆ ಬಂದು ಮೆರೆಯುವನು. ಅವನೇ ಮುಖಂಡನು ಅಥವಾ ವಿನಾಯಕನು. ಜ್ಞಾನ-ಯುಕ್ತಿ-ಚಾತುರ್ಯಗಳು ತಲೆಯ ಕೆಲಸಗಳು. ತಲೆಯಿಂದ ದೊಡ್ಡವನೆಂದು ತೋರಿಸುವ ಸಲುವಾಗಿಯೇ ಆತನಿಗೆ ಆನೆಯ ಶಿರವನ್ನು ಯೋಜಿಸಿದ್ದಾರೆ.

ಗಣಪತಿಯ ಬಗ್ಗೆ ಇರುವ ಒಂದು ಆಖ್ಯಾಯಿಕೆಯನ್ನು ಇಲ್ಲಿ ಹೇಳುವದು ಅಪ್ರಸ್ತುತವಾಗಲಾರದು. ಅದೇನೆಂದರೆ:- ಒಮ್ಮೆ ಶಿವನು ಜಗತ್ ಪ್ರದಕ್ಷಿಣೆಯನ್ನು ಮಾಡಿ ಮೊದಲು ಬಂದವರಿಗೆ ಬಹುಮಾನವನ್ನಿಟ್ಟಾಗ ಗುಹನು, ಶಕ್ತಿ ಪ್ರಯೋಗದಿಂದ ಬೇಗ ಸುತ್ತರಿದು ಬರಬೇಕೆಂದೂ, ತಾನೇ ಪಾರಿತೋಷಕ ಪಡೆಯಬೇಕೆಂದೂ, ಗಡಿಬಿಡಿಯಿಂದ ಮಯೂರ ವಾಹನನಾಗಿ ಭೂಪ್ರದಕ್ಷಿಣೆಗೆ ಹೊರಟು ಹೋದನು. ಆದರೆ ಸ್ಥೂಲಕಾಯನಾದ ಗಣಪತಿಯು ಚತುರನೂ, ಯುಕ್ತಿಗಾರನೂ ಆದುದರಿಂದ, ಜಗತ್ತು ಶಿವನಲ್ಲೇ ಗರ್ಭೀಕರಿಸಿರುವದನ್ನರಿತು, ಅವನಿಗೇ

ಪ್ರದಕ್ಷಿಣೆ ಹಾಕಿ ಸ್ವಸ್ಥ ಕುಳಿತುಬಿಟ್ಟನು. ಆಗ ಅವನ ಜಾಣತನಕ್ಕೆ ಮೆಚ್ಚಿ ಶಿವನು ಗಜಾನನಿಗೇ ಮೆಚ್ಚುಗೊಟ್ಟನು. ಇದರಿಂದ ಗಣಪತಿಯ ನಿಜ ಸ್ವರೂಪವೇನೆಂಬದು ವಿದಿತವಾಗುವದಿಲ್ಲವೆ ?

ಇವನು ಪಾರ್ವತೀ ಪುತ್ರನು. ಸ್ವತಃ ದೇವಿಯರೇ ನಿರ್ಮಿಸಿದರಂತೆ. ಹೀಗೆ ಬರೇ ಶಕ್ತಿ ಸಂಜಾತನಾದವನಿಂದ ಅದಾವ ಕಾರ್ಯವೂ ಆಗದೆಂದು ಬಗೆದು ಪರಮಾತ್ಮನು ಕೃಪಾಭರಿತನಾಗಿ, ಆತನ ಮೊದಲಿನ ತಲೆಯನ್ನು ತೆಗೆದು, ತಾನು ಅದೇ ಅನುಗ್ರಹಿಸಿ ಸ್ವೀಕರಿಸಿ ತಂದ ಗಜಾಸುರನ ಬೃಹನ್ಮಸ್ತಕವನ್ನು ದಯಪಾಲಿಸಿದನು. ಹೀಗೆ ಅವನು ಶಿವಕರುಣೆಯಿಂದ ವಿಘ್ನಹರನೂ, ಗಜವದನನೂ ಆದನು; ಇರಲಿ. ಶಕ್ತಿಯ ಪ್ರಯೋಗ ಮಾಡಿ ಮಾಡಿ ಬೇಸತ್ತು ಹತಾಶರಾದ ಮೇಲೆ ಮನುಷ್ಯರು ಯುಕ್ತಿಯ ಕಡೆಗೆ ತಿರುಗುವ ಪರಿಪಾಠವುಂಟು. ಆದುದರಿಂದ ಶಕ್ತಿಯೇ ಯುಕ್ತಿಯ ತಾಯಿಯು.

(ಬ) ಷಣ್ಮುಖ— ತಾರಕಾಸುರನ (ಅವಿದ್ಯೆಯೆನಿಸುವ ಅಜ್ಞಾನದ) ಸಂಹಾರಕ್ಕೆ ಈತನ ಜನ್ಮವಾಯಿತು. ಶಿವನ ಅಚ್ಚ ವೀರ್ಯವು (ಜ್ಞಾನದ ಅಚ್ಚ ಕೆಚ್ಚು) ಅಗ್ನಿಯ ಮುಖಾಂತರವಾಗಿ, ಚಮತ್ಕಾರ ರೀತಿಯಿಂದ ಋಷಿಪತ್ನಿ ( ಋಷಿಗಳೆಂಬ ಪತ್ನಿ ) ಯರ ಗರ್ಭದಲ್ಲಿ ಸೇರಿ, ಅಲ್ಲಿಂದ ಗಳಿತವಾಗಿ ಪುನಃ ಕಲೆತು ಮುಖಗಳು (೬) ಆರಾದರೂ ದೇಹವು ಒಂದೇ ಇರುವ ವಿಚಿತ್ರ ಶಿಸುವು ಉತ್ಪನ್ನವಾಯಿತು. ಅದನ್ನೇ ಪಾರ್ವತೀ ದೇವಿಯು ಸಲುಹಿ ಮಾತೆ ಎನಿಸಿದಳು. ಈತನು ಮಹಾಜ್ಞಾನಿಯೂ, ಪರಮ ವೈರಾಗ್ಯಶೀಲನೂ ಆದನು.

ಜೀವೇಶ್ವರೈಕ್ಯವೆಂಬ ಆತ್ಯಂತಿಕ ನಿಜ ಜ್ಞಾನವನ್ನು ಬೇರೆ ಬೇರೆ ಮಾರ್ಗಗಳಿಂದ ತೋರಿಸಿಕೊಡುವ ಷಡ್ದರ್ಶನಗಳೆಂಬ ಆರು ಶಾಸ್ತ್ರಗಳನ್ನು ಬೇರೆ ಬೇರೆ ಋಷಿ ಜನರು ಬರೆದದ್ದು ಎಲ್ಲರಿಗೂ ಗೊತ್ತುಂಟು. ಇಂತಹ ಶುದ್ಧ ಶಿವಜ್ಞಾನವು ಅವರ ಗರ್ಭದಲ್ಲಿ ಮೂಡಿ ಹೊರಬಿದ್ದುದರಿಂದ ಋಷಿಪತ್ನಿಯರಿಂದ ಜನ್ಮವಾಯಿತೆಂದು, ಸುತ್ತು ಹಾಕಿ ಪೌರಾಣಿಕರು ವರ್ಣಿಸಿರುವರು. ಗ್ರಂಥಗಳು ಭಿನ್ನವಾಗಿದ್ದರೂ ಒಂದೇವೊಂದಾದ ವಿಷಯವನ್ನೇ ಪ್ರತಿಪಾದಿಸುವದರಿಂದ, “ ಮುಖಗಳು ಆರು, ದೇಹವು ಒಂದೇ ” ಎಂದು ಹೇಳಿದ್ದಾರೆ.

(ಕ) ವೀರಭದ್ರ— ಸೃಷ್ಟಿಯ ಸ್ವಾಭಾವಿಕವಾದ ನಿಗ್ರಹ ಶಕ್ತಿಯೇ ( ನಿಯತಿ ತತ್ವರೇ ) ಈ ವೀರಭದ್ರನು. ಅಜ್ಞಾನ ವಶದಿಂದ ಸೃಷ್ಟಿಯ ನಿಯಮಗಳನ್ನು ಉಲ್ಲಂಘಿಸುವವರಿಗೆ ಅದು ತಪ್ಪದೆ ಶಿಕ್ಷಿಸುವದು. ''ವಿನಾಶಕಾಲೇ ವಿಪರೀತ ಬುದ್ಧಿಃ" ಎಂದು ಸುಭಾಷಿತ ಉಂಟು. ಮನುಷ್ಯನು ದುರ್ಬುದ್ಧಿಯನ್ನು ಹಿಡಿದರೆ, ಅವನು ತನ್ನ ಮರಣಕ್ಕೆ ತಾನೇ ಆಮಂತ್ರಣವನ್ನಿತ್ತನೆಂದು ತಿಳಿಯಬೇಕು. ದುಷ್ಟತನ, ದುರಾಚಾರ, ಪರಪೀಡೆ, ಮದಾಂಧತೆ, ಕ್ರೂರ ಕೃತ್ಯಗಳು ಇವೇ ಮೊದಲಾದವು ದುರ್ಬುದ್ಧಿಯ ಲಕ್ಷಣಗಳು. ಇವುಗಳಿಂದ ಮನುಷ್ಯನು ತಾನೇ ನಾಶವಾಗುತ್ತಾನೆ.

"ದೇವಂ ಕೊಲ್ಲಂ ಮುನಿದರಿಗಳ್ ಪೋಲ್ ಕೋಲಿಂದಂ ।
ದಾವಂ ವಧ್ಯಂ ಕುಮತಿಯ ನವಗೀವಂ ಮುನ್ನಂ ॥

ಎಂದು ನೀತಿಯುಂಟು. ಆದಕಾರಣ ಶಿವನ ಅವಕೃಪೆಯೇ ವೀರಭದ್ರನು (ನಿಗ್ರಹಶಕ್ತಿಯು) ಎಂಬದರಲ್ಲೇನೂ ಸಂದೇಹವಿಲ್ಲ. ದಕ್ಷಾಧ್ವರ ಕಾಲದಲ್ಲಿ ವೀರಭದ್ರನ ಜನ್ಮವಾಯಿತೆಂದು ಪುರಾಣವುಂಟು. ಆಗ ದಕ್ಷಬ್ರಹ್ಮನ ನಾಸ್ತಿಕ್ಯ ಬುದ್ಧಿ, ಅಹಂಕಾರ, ಅವಿವೇಕತನಗಳ ಅತಿರೇಕವಾಯಿತು. ಅದನ್ನು ಕಂಡು ಶಿವನು ಅತ್ಯಂತ ತ್ರಾಸಗೊಂಡು ವೀರಭದ್ರನನ್ನು ಸೃಜಿಸಿ ದಕ್ಷನನ್ನು ಶಿಕ್ಷಿಸುವದು ಅವಶ್ಯವಾಯಿತೆಂದು ಪೌರಾಣಿಕರ ಮತವು.

೧೫. ಕಾಮಸಂಹರ— ಕಾಮವೆಂದರೆ ಬಯಕೆಯು. ಜಗತ್ತಿನೊಳಗಿನ ಸರ್ವ ಪದಾರ್ಥಗಳನ್ನು ಮನುಷ್ಯನು ಇಚ್ಛಿಸುವದು ಸ್ವಾಭಾವಿಕವು. ಅದರಲ್ಲಿಯೂ ಸ್ತ್ರೀ ವಿಷಯಕ ಮೋಹವು ದುರ್ನಿವಾರವಾಗಿರುವದರಿಂದ, ಆ ಬಯಕೆಯೇ ಮುಖ್ಯವಾಗಿ ಕಾಮವೆನಿಸುತ್ತದೆ. ಜಗತ್ತು (ಅಂದರೆ ಅದರೊಳಗಿನ ಸರ್ವ ಪದಾರ್ಥಗಳು) ಶಿವನಲ್ಲಿಯೇ ಹುಟ್ಟಿ ಬೆಳೆದು ಅಡಗುವವಾದ ಕಾರಣ, ಅವೆಲ್ಲ ಅವನಿಗೆ ಅಭಿನ್ನವಾಗಿಯೇ ಉಂಟು. ಆದುದರಿಂದ ಅವುಗಳ ಆಶೆಯು ಅವನಿಗೆ ಹುಟ್ಟುವದು ಅಸಂಭವ. ಅಂತೇ ಅವನು ಸದಾ ಶಾಂತನೂ ಆನಂದಘನನೂ ಆಗಿ ಕಾಮಸಂಹಾರಕನೆನಿಸಿರುವನು.

೧೯ ಕಾಲಮರ್ದನ— ಅಂದರೆ ಯಮನನ್ನು ನಾಶಗೊಳಿಸಿದವ. ಕಾಲವು ದಿನ ತಿಂಗಳು ವರ್ಷಾದಿಗಳಿಂದ ಎಣಿಸಲ್ಪಡುತ್ತದೆ. ಇವೆಲ್ಲ ಸೂರ್ಯನಿಂದಲೇ ಹುಟ್ಟುವದರಿಂದ ಅವನೇ ಯಮನ ತಂದೆಯೂ ಗಿರುವನು. ಕೀರ್ತನಕಾರರು ಕಾಲನಿಗೆ "ಯಮಾಜಿಭಾಸ್ಕರ"ನೆಂದೂ ಹೆಸರಿಟ್ಟಿದ್ದಾರೆ. ಯಾರ ಅಸ್ತಿತ್ವಕ್ಕಾದರೂ ಕಾಲಮರ್ಯಾದೆ (ಆಯುಷ್ಯ) ಉಂಟು. ಅದು ಅನುಲ್ಲಂಘನೀಯವು. ಮನುಷ್ಯರು ಕಾಲಾಧೀನತೆಗೆ ಮರಣವೆನ್ನುತ್ತಾರೆ. ಇಂತಹ ಸಾವು ಶಿವನಿಗೆ ಇಲ್ಲವೇ ಇಲ್ಲ. ಜಗತ್ತಿನ ಆದಿಕಾರಣನು ಅವನೇ ಆಗಿರುವದರಿಂದ ಅವೆಲ್ಲ ಕೊನೆಗೆ ಅವನಲ್ಲೇ ಲೀನವಾಗುವವು. ಆದರೆ ಆ ಮೂಲಕಾರಣವಾದ ವಸ್ತುವು ಅಭಂಗವಾಗಿ ಉಳಿದೇ ಉಳಿಯುವದು. ಮಣ್ಣಿನಿಂದ ಉದ್ಭವಿಸಿದ ವಿವಿಧ ಮಡಿಕೆಗಳು ನಾಶವಾದರೂ ಅವುಗಳಿಗೆ ಕಾರಣವಾದ (ಮೂಲಧನವಾದ) ಮಣ್ಣು ಕಡೆಗೆ ನಿರ್ಬಾಧವಾಗಿ ಇರುವದಲ್ಲವೇ? ಹಾಗೇ ಪ್ರಳಯ ಮಹಾ ಪ್ರಳಯವಾದರೂ ಕೂಡ ಶಿವನು ನಿತ್ಯನಾಗಿರುವನು. ಆದುದರಿಂದ ಅವನು ಕಾಲನನ್ನು ಜಯಿಸಿದವನಾಗಿ "ಮೃತ್ಯುಂಜಯ" ನೆಂದು ಹೆಸರು ಪಡೆದಿರುವನು.

೨೦ ಸ್ವಯಂಭು— ಸಕಲ ಜಗತ್ತಿನ ಹುಟ್ಟಿಗೆಲ್ಲ ತಾನೇ ಕಾರಣನೆನಿಸುವ ಪರಮಾತ್ಮನಿಗೆ ಜನ್ಮ ಕೊಡುವ ಆವ ವಸ್ತು ಇರುವದು? ಹಾಗೆ ಇರುವದು ಶಕ್ಯವಿಲ್ಲ. ಆದಕಾರಣ ಅವನು ಸ್ವಯಂಭು (ಸ್ವತಃ ಸಿದ್ಧ, ತನ್ನಿಂದತಾನೇ ಆದವ) ನೆಂಬುದರಲ್ಲೇನು ಸಂದೇಹ? ಅವನಿಗೆ ಜನ್ಮವಿಲ್ಲೆಂಬುವದರಿಂದಲೇ ಅವನನ್ನು 'ಅಭವ' ನೆಂದು ಕರೆಯುವರು.

೨೧ ಭಿಕ್ಷುಕ— ದೇವರು ನಿಷ್ಕಾಮನೆಂದು ಮೇಲೆ ಹೇಳಿದೆಯಷ್ಟೇ! ಹಾಗಾದರೆ ಅವನು ಭಿಕ್ಷುಕನಾಗುವದು ಹೇಗೆ? ನಿಷ್ಕಾಮಿ ಮತ್ತು ಭಿಕ್ಷುಕ ಇವೆರಡೂ ಶಬ್ದಗಳು ವಿರುದ್ಧಾರ್ಥದವು. ಶಿವನು ತನ್ನ ವಿನೋದಕ್ಕಾಗಿ ಜಗತ್ತನ್ನು ನಿರ್ಮಿಸಿ, ಅದರ ಸಂರಕ್ಷಣೆಗೆ ಬೇಕಾಗುವ ಎಲ್ಲ ಪದಾರ್ಥಗಳನ್ನೂ ಸೌಕರ್ಯಗಳನ್ನೂ (ಉದಾಹರಣಾರ್ಥವಾಗಿ, ನೀರು, ಆಹಾರ, ಮಳೆ ಬೆಳೆ, ಬೆಳಕು ಇತ್ಯಾದಿಗಳನ್ನು) ನಿರಪೇಕ್ಷ ಬುದ್ಧಿಯಿಂದ ಒದಗಿಸಿರುತ್ತಾನೆ. ಅದರ ಯಾವ ಪ್ರತಿಫಲವೂ ಅವನಿಗೆ ಬೇಡ. ಇದು ಎಲ್ಲ ಪ್ರಾಣಿಗಳಾಗಿ ಅವನು ಮಾಡಿದವರ ಪ್ರದಾನ. ಹೀಗಿದ್ದು ಆತನು ಪುನಃ ಭಿಕ್ಷುಕನಾಗಿ ಭಿಕ್ಷಾವೃತ್ತಿಯನ್ನವಲಂಬಿಸಿರುವನೆಂಬುದರ ಅರ್ಥ

ವೇನು ? ಅದು ಇಷ್ಟೇ:- ಅವನ ಭಿಕ್ಷೆಯು. ಇತರರಂತಹದಲ್ಲ ಅವನು ಸದಾ ಆನಂದ ಘನನು ಆದಾಗ್ಯೂ ಒಂದು ವಸ್ತುವು ಅವನಿಗೆ ಬೇಕಾಗಿದೆ. ಅದು ಅತ್ಯಂತ ಪ್ರೀತ್ಯಾಸ್ಪದವಾಗಿ ಬಿಟ್ಟಿದೆ. ಅದನ್ನು ಶ್ರೀ ಬಸವಣ್ಣನವರು ಒಡೆದು ಹೇಳಿದ್ದಾರೆ. "ವೇದಪ್ರಿಯ ಶಿವನೆಂಬರು, ಅವನು ವೇದಪ್ರಿಯನಲ್ಲ. ನಾದಪ್ರಿಯ ಶಿವನೆಂಬರು, ಅವನು ನಾದಪ್ರಿಯನಲ್ಲ... ...ಭಕ್ತಿ ಪ್ರಿಯ ನಮ್ಮ ಕೂಡಲಸಂಗಮದೇವ" ಆದುದರಿಂದ. ಶಿವನಿಗೆ ಭಕ್ತರಲ್ಲಿ ಇದೊಂದೇ ಪದಾರ್ಥದ ಭಿಕ್ಷೆ ಬೇಕಾಗಿದೆ. ಅದನ್ನೇ ನೀಡಿರೆಂದು ಅವನು ಮನೆಮನೆಗೆ ತಿರುಗಾಡುತ್ತಾನೆ. ಭಕ್ತಿಯ ಭಿಕ್ಷೆಯನ್ನು ಅವನಿಗೆ ಹಾಕುವದೆಂದರೆ — ಜ್ಞಾನಿಗಳೂ ಸದಾಚಾರಿಗಳೂ ಧರ್ಮಿಷ್ಠರೂ ಆಗಿ ಬಾಳಿ, ಕೊನೆಗೆ ಅವನನ್ನೇ ಸೇರುವದು, ಎಂದು ತಿಳಿಯಬೇಕು. ಈ ಭಿಕ್ಷೆಯನ್ನು ಅವನು ತನ್ನ ಸಲುವಾಗಿ ಬೇಡುವದಿಲ್ಲ. ನಮ್ಮ ಉದ್ಧಾರಕ್ಕಾಗಿಯೇ ಸರಿ.

ಇಷ್ಟಕ್ಕೇ ತಿರಲಿಲ್ಲ. ಇನ್ನೂ ಅನೇಕ ವಿಷಯಗಳು ಇವೆ. ಆದಾಗ್ಯೂ ಮೇಲಿನ ವಿವರಣೆಯಿಂದ ಸಾಕಾರ ದೇವರ ಮೂರ್ತಿಯನ್ನು ಆದಾವ ರೀತಿಯಿಂದ ಸಜ್ಜುಗೊಳಿಸಿರುವರೆಂಬದರ ಕಲ್ಪನೆಯು ಸಾಮಾನ್ಯ ಜನರಿಗೆ ಹೊಳೆಯದೆ ಇರದು. ಈ ಬರೆಹದಲ್ಲಿ ನಾನು ಕಾಣಿಸಿದುದೆಲ್ಲ ಕೇವಲ ನಿಜವಾದುದೆಂದೇ ತಿಳಿಯಬಾರದು. ನನ್ನ ಬುದ್ಧಿಗೆ ಗೋಚರಿಸಿದಂತೆ ನಾನು ನಿರೂಪಿಸಿರುವೆನು. ಬಲ್ಲ ಮಹಾನುಭಾವರು ಓದಿ ನೋಡಿ, ತಮ್ಮ ಅಭಿಪ್ರಾಯವನ್ನು ಪ್ರಕಟಿಸಿ, ಜನತೆಯ ಮುಂದೆ ಸತ್ಯ ಸ್ವರೂಪವನ್ನು ಅವಶ್ಯವಾಗಿ ಇಡಬೇಕೆಂದು ಕೋರುವೆನು.

# ಬಸವೇಶ್ವರನಕಿಂತಲೂ ಮೊದಲಿನ ವೀರಶೈವ ಧರ್ಮ.

( ಲೇಖಕರು— ರಾ॰ ಸಾ॥ ಫ. ಗು. ಹಳಕಟ್ಟಿ. )

ವೀರಶೈವ ಧರ್ಮದ ಸ್ವರೂಪು ಬಸವೇಶ್ವರನ ಕಾಲಕ್ಕಿಂತಲೂ ಮೊದಲು ಹೇಗಿತ್ತೆಂಬುದನ್ನು ವಿವರಿಸುವದೇ ಪ್ರಸ್ತುತ ಲೇಖದ ಮುಖ್ಯ ಉದ್ದೇಶವಾಗಿದೆ. ಈ ವಿಷಯವು ಬಹು ವಾದಗ್ರಸ್ತವಾದುದೆಂಬದನ್ನು ನಾವು ಅರಿತಿದ್ದೇವೆ. ಆದರೆ ನಮ್ಮ ವಾಚಕರು ಈ ಮಹತ್ವದ ವಿಷಯುವನ್ನು ಕುರಿತು ಹೆಚ್ಚಿಗೆ ವಿಚಾರ ಮಾಡಬೇಕೆಂದೆಣಿಸಿ ಕೆಲವು ಸಂಗತಿಗಳನ್ನು ನಾವು ಅವರ ಮುಂದಿಡಲು ಅಪೇಕ್ಷಿಸಿದ್ದೇವೆ. ಅವುಗಳನ್ನು ಅವರು ಲಕ್ಷಿಸಬೇಕೆಂದು ನಮ್ಮ ಸವಿನಯು ವಿನಂತಿ ಇದೆ.

ಅನೇಕರು, ಮುಖ್ಯವಾಗಿ ವೀರಶೈವೇತರರು ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮವೇ ಅಸ್ತಿತ್ವದಲ್ಲಿದ್ದಿಲ್ಲವೆಂದು ಅಭಿಪ್ರಾಯ ಪಡುವದುಂಟು. ಈಚೀಚೆಗೆ ವೀರಶೈವರಲ್ಲಿಯೂ ಕೂಡ ಕೆಲವರು ಇದೇ ಅಭಿಪ್ರಾಯುವನ್ನೇ ಸಮರ್ಥಿಸುವದು ತೋರಿಬರುತ್ತದೆ. ಆದರೆ ಈ ತರದ ವಿಧಾನಗಳಲ್ಲಿ ಸತ್ಯತೆಯು ಇಲ್ಲೆಂಬುದು ಈಗ ಹೆಚ್ಚು ಹೆಚ್ಚು ದೃಢಪಡುತ್ತಾ ನಡಿದದೆ. ಬೇರೆ ಕೆಲವರು ಮುಖ್ಯವಾಗಿ ವೀರಶೈವರಲ್ಲಿಯ ಪುರಾಣ ಮತವಾದಿಗಳು ವೀರಶೈವ ಧರ್ಮವು ಬಹು ಪುರಾತನ ಕಾಲದಿಂದಲೂ ಅಚ್ಚಳಿಯದೆ ಈಗಿದ್ದ ಹಾಗೆಯೇ ಯಾವಾಗಲೂ ಇತ್ತೆಂದು ಅಭಿಪ್ರಾಯುಪಡುವದು ತೋರಿ ಬರುತ್ತದೆ. ಆದರೆ ಇವರ ಈ ತರದ ವಿಧಾನವೂ ಸಮರ್ಥನೀಯುವಲ್ಲವೆಂದು ನಮಗೆ ತೋರುತ್ತದೆ. ಯಾಕಂದರೆ ಹಿಂದೂ ಧರ್ಮದ ಸ್ವರೂಪದಲ್ಲಿ ಕಾಲ ಕಾಲಕ್ಕೆ ಬದಲಾವಣೆಗಳಾಗುತ್ತ ಬಂದಿವೆಂಬುದು ಸ್ಪಷ್ಟವಾಗಿ ಕಂಡು ಬರುತ್ತದೆ. ಅದು ವೇದಕಾಲದಲ್ಲಿದ್ದಂತೆ ಉಪನಿಷತ್ತಿನ ಕಾಲದಲ್ಲಿರಲಿಲ್ಲ. ಉಪನಿಷತ್ತಿನ ಕಾಲದಲ್ಲಿ ಇದ್ದಂತೆ ಪೌರಾಣಿಕ ಕಾಲದಲ್ಲಿ ಇಂಲಿಲ್ಲ. ಈ ಪ್ರಕಾರ ಅದರಲ್ಲಿ ಬದಲಾವಣೆಗಳಾಗುತ್ತಲೇ ಬಂದಿರುತ್ತವೆ. ಇದೇ ಸ್ಥಿತಿಯು ಶೈವ ಧರ್ಮಗಳಲ್ಲಿಯೂ ಕಂಡುಬರುತ್ತದೆ. ವೀರಶೈವವು ಈ ಶೈವಧರ್ಮಗಳಲ್ಲೊಂದಾಗಿದ್ದು ಇದರಲ್ಲಿಯೂ ಕೂಡ ಕಾಲ ಕಾಲಕ್ಕೆ ಪರಿಸ್ಥಿತಿಗೆ ಅನುಸಾರವಾಗಿ ಬದಲಾ

ವಣೆಗಳಾಗುತ್ತ ಬಂದಿವೆಂಬುದು ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಅದಕ್ಕೆ ಒಂದು ವಿಶೇಷ ಸ್ವರೂಪು ಉಂಟಾಯಿತು. ಆದರೆ ಇದು ಅವನ ತರುವಾಯದ ಶತಮಾನಗಳಲ್ಲಿ ಅಚ್ಚಳಿಯದೆ ಉಳಿಯಿತೆಂದು ಹೇಳಲಿಕ್ಕೆ ಬರುವದಿಲ್ಲ. ಅದರಲ್ಲಿ ಅನೇಕ ವ್ಯತ್ಯಾಸಗಳಾದವು. ಆದರೆ ಎಲ್ಲಿಯ ವರೆಗೆ ಅದರ ಮುಖ್ಯ ಸ್ವರೂಪದಲ್ಲಿ ಬದಲಾವಣೆಗಳಾಗಿಲ್ಲವೋ ಆ ವರೆಗೆ ಅದು ಹೊಸ ಧರ್ಮವೆಂದು ಹೇಳಲಿಕ್ಕೆ ಬರಲಾರದು. ಅದೇ ಮೇರೆಗೆ ಬಸವೇಶ್ವರನಕಿಂತಲೂ ಮೊದಲು ಪ್ರಚಲಿತವಿದ್ದ ಧರ್ಮದಲ್ಲಿ ವೀರಶೈವತ್ವದ ಮುಖ್ಯ ಲಕ್ಷಣಗಳು ಕಂಡು ಬರುತ್ತಿದ್ದರೆ ಅದರಲ್ಲಿ ಕೆಲವು ವ್ಯತ್ಯಾಸಗಳು ಕಂಡು ಬಂದರೂ ಕೂಡ ಇವುಗಳ ಮೂಲಕ ಆಗ ವೀರಶೈವ ಧರ್ಮವೇ ಇರಲಿಲ್ಲವೆಂದು ಹೇಳುವದು ಅಷ್ಟೇ ತಪ್ಪಾದದ್ದು ಇರುತ್ತದೆ.

ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮವಿತ್ತೆಂಬುದಕ್ಕೆ ಶಿಲಾಶಾಸನಗಳಲ್ಲಿ ಅನೇಕ ಆಧಾರಗಳು ಈಚೆಗೆ ದೊರೆತಿರುತ್ತವೆ. ೧೧ ನೆಯ ಶತಮಾನದ ಮಧ್ಯಭಾಗದಲ್ಲಿದ್ದ ದೇವರ ದಾಸಿಮಯ್ಯ, ಮತ್ತು ಸುಗ್ಗಳೆ ಇವರ ಉಲ್ಲೇಖಗಳಿದ್ದ ಶಿಲಾಶಾಸನಗಳು ಈಗ ಉಪಲಬ್ಧವಾಗಿವೆ. ಮುಂದೆ ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನ ಕಾಲದಲ್ಲಿ ಕೊಂಡಗುಳಿಯ ಕೇಶಿರಾಜ, ತೆಲುಗು ಜೊಮ್ಮಯ್ಯ ಇಳಿಹಾಳಿ ಬ್ರಹ್ಮಯ್ಯ, ಬಾಹೂರು ಬ್ರಹ್ಮಯ್ಯ ಇವರು ಪ್ರಸಿದ್ಧಿಗೆ ಬಂದದ್ದು ಕಂಡು ಬರುತ್ತದೆ. ಇವರ ತರುವಾಯ ಕೆಲವು ವರ್ಷಗಳಲ್ಲಿ, ಆದರೆ ಬಸವೇಶ್ವರನಕಿಂತ ಮೊದಲು, ರೇವಣ ಸಿದ್ಧೇಶ್ವರ, ಅವನ ಮಗ ರುದ್ರಮುನಿ, ಈ ರುದ್ರಮುನಿಯ ಶಿಷ್ಯ ಹಾವಿನಹಾಳ ಕಲ್ಲಿದೇವ, ಮತ್ತು ಗೋರಕ್ಷ ಇವರು ಪ್ರಸಿದ್ಧಿಗೆ ಬಂದರು. ಇವರಲ್ಲದೆ, ಇವರಕಿಂತ ಮೊದಲು ಜಯಸಿಂಹರಾಜನ ಕಾಲದಲ್ಲಿ ಶಂಕರ ದಾಸಿಮಯ್ಯ ಚೋಳರಾಜನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಚನ್ನಯ್ಯ ಹಾಗೂ ಕೆಂಭಾವಿ ಭೋಗಣ್ಣ, ಸಾಮವೇದಿ ಮತ್ತು ಶ್ವಪಚಯ್ಯ ಇವರೂ ಕೂಡ ಬಸವೇಶ್ವರನಕಿಂತ ಮೊದಲು ಇದ್ದರೆಂದು ಅವರ ಚರಿತ್ರೆಗಳಿಂದ ಕಂಡುಬರುತ್ತದೆ. ಇವರೆಲ್ಲರು ವೀರಶೈವರೆಂದು ಎಲ್ಲ ವಚನಕಾರರೂ ಅನೇಕ ವೀರಶೈವ ಗ್ರಂಥಕಾರರೂ ಅವರನ್ನು ತಮ್ಮ ಗ್ರಂಥಗಳಲ್ಲಿ ಬಹುಪೂಜ್ಯ ಭಾವದಿಂದ ವರ್ಣಿಸಿದ್ದುಂಟು. ಒಂದು ವೇಳೆ ಅವರು ಬೇರೆ ಧರ್ಮದವರಾಗಿದ್ದರೆ ಅವರನ್ನು ಹಾಗೆ ಇವರು ಎಂದೂ ಹೊಗಳುತ್ತಿದ್ದಿಲ್ಲ..

ಈಗ ನಾವು ಬಸವೇಶ್ವರನಕಿಂತಲೂ ಮೊದಲು ಆಗಿ ಹೋದ ಈ ಮಹಾಪುರುಷರ ವಿಚಾರಗಳೇನಿದ್ದವೆಂಬುದನ್ನು ಕಂಡು ಹಿಡಿಯುವದು ಬಹು ಮಹತ್ವದ ವಿಷಯವಾಗಿದೆ. ಒಂದು ವೇಳೆ ಅವರ ವಿಚಾರಗಳಲ್ಲಿ ವೀರಶೈವ ಧರ್ಮದ ಲಕ್ಷಣಗಳು ಕಂಡು ಬಂದಲ್ಲಿ ವೀರಶೈವ ಧರ್ಮವು ಬಸವೇಶ್ವರನಕಿಂತಲೂ ಮೊದಲು ನಿಜವಾಗಿ ಅಸ್ತಿತ್ವದಲ್ಲಿತ್ತೆಂದು ನಾವು ಭಾವಿಸಬೇಕಾಗುವದು. ಈ ಹಿಂದಿನ ಶಿವಶರಣರ ಚರಿತ್ರೆಗಳು ನಮಗೆ ಉಪಲಬ್ಧವಿವೆ. ಅವುಗಳಲ್ಲಿ ಸ್ವಾಭಾವಿಕವಾಗಿ ಕೆಲವು ಅದ್ಭುತ ಸಂಗತಿಗಳು ಕಂಡು ಬರುತ್ತವೆ. ಆದರೆ ಅವುಗಳನ್ನು ನಾವು ಲಕ್ಷಿಸದೆ, ಅವರ ಚರಿತ್ರೆಗಳಲ್ಲಿ ವೀರಶೈವತ್ವದ ಲಕ್ಷಣಗಳು ತೋರಿಬರುತ್ತವೋ ಹೇಗೆಂಬುದನ್ನು ನಾವು ಪರೀಕ್ಷಿಸುವದು ಮಹತ್ವದ್ದಾಗಿದೆ. ಹೀಗೆ ನಾವು ಪರೀಕ್ಷಿಸುವಲ್ಲಿ ಅವರ ವರ್ತನೆಗಳು ವೀರಶೈವ ಧರ್ಮಕ್ಕೆ ಹೊಂದುವವೆಂದು ಕಂಡು ಬಂದದ್ದಾದರೆ ಅವರ ಕಾಲದಲ್ಲಿ ವೀರಶೈವ ಧರ್ಮವು ಇತ್ತೆಂತಲೇ ನಾವು ಹೇಳಬೇಕಾಗುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ನಾವು ಕೆಲವು ಸಂಗತಿಗಳನ್ನು ನಮ್ಮ ವಾಚಕರ ಎದುರಿಗೆ ಇಡಲು ಪ್ರಯತ್ನಿಸುತ್ತೇವೆ. ಅವು ಮುಂದಿನ ಲೇಖಾಂಕದಲ್ಲಿ ವಿವರಿಸಲ್ಪಡುವವು.

(ಮುಂದುವರಿಯುವದು.)

# ಸ್ಫುಟವಿಷಯಂಗಳು.



**ಶಿವಾನುಭವ ಸಂಘಗಳು**— ನಾವು ಹೋದ ತಿಂಗಳಿನ ಶಿವಾನುಭವದ ಸಂಚಿಕೆಯಲ್ಲಿ ಶಿವಾನುಭವ ಸಂಘಗಳ ಸ್ಥಾಪನೆಯು ವಿಷಯವಾಗಿ ವಿವರಿಸಿದ್ದು ವಾಚಕರ ಲಕ್ಷದಲ್ಲಿರಬಹುದು. ಈ ತಿಂಗಳಿನಲ್ಲಿ ಕಲಘಟಗಿ ತಾಲೂಕಿನಲ್ಲಿ ಬೊಮ್ಮಿಗಟ್ಟಿ ಮುಕ್ಕಲ್ಲ ಮತ್ತು ಬೆಲವಂತರ ಮತ್ತು ಬೆಳಗಾವಿ ಜಿಲ್ಲಾ ಚಿಕ್ಕೋಡಿ ತಾಲೂಕಿನಲ್ಲಿ ಗಳತಗಿ ಈ ಗ್ರಾಮುಗಳಲ್ಲಿ ಈ ಸಂಘಗಳು ಸ್ಥಾಪಿಸಲ್ಪಟ್ಟಿರುತ್ತವೆ. ಬೊಮ್ಮಿಗಟ್ಟಿಯಲ್ಲಿ ೧೮ ಜನರು ಸಂಘಕ್ಕೆ ಸಭಾಸದರು ಆಗಲು ಒಪ್ಪಿದ್ದಾರೆ. ಇದಕ್ಕೆ ಅಧ್ಯಕ್ಷರು ಶ್ರೀ ಚನ್ನವೀರಯ್ಯ ಗಂಗಯ್ಯ ಸುರಗಿ ಮಠ ಮತ್ತು ಕಾರ್ಯದರ್ಶಿಗಳು (೧) ಶ್ರೀ ವೀರಭದ್ರಪ್ಪಾ ರುದ್ರಪ್ಪಾ ತಿರಲಾಪೂರ ಮತ್ತು (೨) ಶ್ರೀ ಬಸವಣ್ಣೆಪ್ಪ ಪರಪ್ಪ ನೇನೆಕ್ಕಿ ಇವರು ಇದ್ದಾರೆ. ಈ ಸಭಾಸದರು ತಮ್ಮಲ್ಲಿ ರೂ. ೬—೬—೦ ವರ್ಗಣೀ ಮಾಡಿಕೊಂಡಿದ್ದಾರೆ. ಮುಕ್ಕಲ್ಲ ಗ್ರಾಮದಲ್ಲಿ ಸ್ಥಾಪಿಸಲ್ಪಟ್ಟ ಶಿವಾನುಭವ ಸಂಘಕ್ಕೆ ೧೫ ಜನ ಸಭಾಸದರಿದ್ದು ಅದಕ್ಕೆ ಅಧ್ಯಕ್ಷರು ಶ್ರೀ ರೇವಣಸಿದ್ದಯ್ಯ ವೀರಯ್ಯ ಹಿರೇಮಠ ಮತ್ತು ಕಾರ್ಯದರ್ಶಿಗಳು ಶ್ರೀ ಗಿರೆಪ್ಪಾ ಶಿವಬಸಪ್ಪಾ ಬಡಿಗೇರ ಇವರು ಇದ್ದಾರೆ. ಬೆಲವಂತರ ಗ್ರಾಮದಲ್ಲಿ ಸ್ಥಾಪಿತವಾದ ಸಂಘಕ್ಕೆ ೩೬ ಜನ ಸಭಾಸದರಿದ್ದು ಅದಕ್ಕೆ ಅಧ್ಯಕ್ಷರು ಶ್ರೀ ಶಿವಪ್ಪ ಕಲ್ಲಪ್ಪ ಕರಲಟ್ಟಿ ಮತ್ತು ಕಾರ್ಯದರ್ಶಿಗಳು (೧) ಶ್ರೀ ನಿಂಗಪ್ಪ ಫಕೀರಪ್ಪ ಅಣ್ಣಿಗೇರಿ ಮತ್ತು (೨) ಶ್ರೀ ಚನಬಸಯ್ಯಾ ಕರಬಸಯ್ಯಾ ಹಿರೇಮಠ ಇವರು ಇದ್ದಾರೆ. ಈ ಸಂಘಗಳು ಶ್ರೀಯುತ ಭೀಮಪ್ಪ ಸತ್ಯಪ್ಪ ಮಡಿವಾಳರ ಇವರ ಪರಿಶ್ರಮದಿಂದ ಏರ್ಪಡಿಸಲ್ಪಟ್ಟಿರುತ್ತವೆ. ಗಳತಿಗಿಯಲ್ಲಿ ೯ ಜನ ಸಭಾಸದರು ಇದ್ದಾರೆ. ಈ ಪ್ರಕಾರ ಈ ವರೆಗೆ ಬೇರೆ ಬೇರೆ ಗ್ರಾಮುಗಳಲ್ಲಿ ಒಟ್ಟು ೭೧ ಶಿವಾನುಭವ ಸಂಘಗಳು ಸ್ಥಾಪಿತವಾಗಿರುತ್ತವೆ.

**ಬೋಧಕ ವರ್ಗಗಳು**:— ಇನ್ನು ಮುಂದೆ ಈ ಸಂಘಗಳ ಗೋಸ್ಕರ ಬೋಧಕ ವರ್ಗಗಳನ್ನು ಅನುಕೂಲ ಸ್ಥಳಗಳಲ್ಲಿ ಏರ್ಪಡಿಸುವದು ಬಹಳ ಅವಶ್ಯವಾಗಹತ್ತಿರುತ್ತದೆ. ಈ ವರ್ಗಗಳ ಮೂಲಕ ಎಲ್ಲ ಕಡೆಗೂ ಈ ಸಂಘಗಳು ವ್ಯವಸ್ಥಿತವಾಗಿಯೂ, ಕ್ರಮಬದ್ಧವಾಗಿಯೂ

ಕಾರ್ಯಮಾಡಲು ಶಕ್ಯವಾಗುವದು. ಮೊದಲು ವಿಜಾಪುರ ಪಟ್ಟಣ ದಲ್ಲಿ ಈ ವರ್ಗವು ಪ್ರಾರಂಭಿಸಲ್ಪಡುವದು. ಈ ವರ್ಗಕ್ಕೆ ಕೆಳಗೆ ಕಾಣಿಸಿದ ಗ್ರಾಮುಗಳಲ್ಲಿಯ ಗ್ರಾಮ ಉಪನ್ಯಾಸಕರು ಅಥವಾ ಗ್ರಾಮ ಬೋಧಕರು ಬರಮಾಡಲ್ಪಡುವರು. ಆ ಗ್ರಾಮುಗಳು ಯಾವವೆಂದರೆ:—

೧ ಬಂಥನಾಳ, ೨ ಶಿರಶ್ಯಾಡ, ೩ ಲೋಣಿ, ೩ ಲಚ್ಯಾಣ, ೫ ಚಡ ಚಣ, ೬ ಬಬಲೇಶ್ವರ, ೭. ನಾಗಠಾಣ ೮ ದಾಶ್ಯಾಳ, ೯. ಸಿಂದಗಿ, ೧೦ ಧವಳಗಿ, ೧೧ ಗುಡೂರ, ೧೨ ಇಳಕಲ್ಲ, ೧೩ ಧಾಣಕಶಿರೂರ, ೧೪ ಬೇಲೂರ, ೧೫ ಚೊಳಚಗೋಡ, ೧೬. ಟಾಕಳಿ, ೧೭ ಬೂದೀ ಹಾಳ, ೧೮ ಕನಮಡಿ. ಈ ಎಲ್ಲ ಗ್ರಾಮುಗಳು ವಿಜಾಪೂರ ಜಿಲ್ಹೆ ಯಲ್ಲಿಯವು ಇವೆ. ಇವಲ್ಲದೆ ಅಥಣಿ ತಾಲೂಕಿನಲ್ಲಿಯ ಕೆಳಗಿನ ಗ್ರಾಮ ಗಳೂ ಇದರಲ್ಲಿ ಸಮಾವೇಶಮಾಡಲ್ಪಡುವವು. ಅವು ಯಾವವೆಂದರೆ— ೧೯ ತೆಲಸಂಗ, ೨೦ ಹಾಲಳ್ಳಿ, ೨೧ ಸವದಿ. ಮತ್ತು ಸಂಸ್ಥಾನಗಳಲ್ಲಿ ರುವ ೨೨ ಹುನೂರ, (ಸಂ. ಜಮುಖಂಡಿ) ೨೩ ಜತ್ತಿ, ಈ ಪ್ರಕಾರ ೨೩ ಸಂಘಗಳಿಂದ ಪ್ರತಿನಿಧಿಗಳು ಈ ಬೋಧಕ ವರ್ಗದಲ್ಲಿ ಬರಮಾ ಡಿಕೊಳ್ಳಲ್ಪಡುವರು. ಇಷ್ಟರಲ್ಲಿಯೇ ನಮಗೆ ಸವದಿ, ಹುನೂರ, ಲೋಣಿ, ಬಬಲೇಶ್ವರ, ಬಂಥನಾಳ, ತೆಲಸಂಗ ಮತ್ತು ಧವಳಗಿ ಈ ಗ್ರಾಮುಗಳಲ್ಲಿ ಕಾರ್ಯಮಾಡಲಿಚ್ಛಿಸುವವರು ತಮ್ಮ ಹೆಸರಗಳನ್ನು ಕಳಿ ಸಿದ್ದಾರೆ. ಇವರಲ್ಲಿ ಧವಳಗಿಯುವರು ೭ ಜನರು ಇದ್ದಾರೆ. ಇವರೆ ಲ್ಲಿರೂ ತಮ್ಮ ತಮ್ಮ ಖರ್ಚಿನಿಂದಲೇ ವಿಜಾಪುರಕ್ಕೆ ಬಂದು ಈ ಶಿಕ್ಷಣ ಹೊಂದಲು ಒಪ್ಪಿಕೊಂಡಿದ್ದಾರೆ. ಕೊಡಗು ಮತ್ತು ಬೆಳಗಾವಿ ಜಿಲ್ಲೆ ಯಿಂದಲೂ ಕೆಲವು ಗ್ರಾಮುಗಳಿಂದ ಹೆಸರುಗಳು ನಮ್ಮ ಕಡೆಗೆ ಬಂದಿವೆ. ಆದರೆ ಅವರಿಗೋಸ್ಕರ ಅವರಿಗೆ ಸಮೀಪವಿರುವ ಬೇರೊಂದು ಅನು ಕೂಲ ಸ್ಥಳದಲ್ಲಿ ಬೋಧಕ ವರ್ಗಗಳು ಏರ್ಪಡಿಸಲ್ಪಡುವವು.

ವಿಜಾಪುರ ಪಟ್ಟಣಕ್ಕೆ ಸಂಬಂಧಿಸಿದ ಮೇಲೆ ಕಾಣಿಸಿದ ೨೩ ಗ್ರಾ ಮುಗಳಲ್ಲಿಯ ಪ್ರತಿನಿಧಿಗಳಲ್ಲಿ ಬಹುಶಃ ಕ್ಷಿ ಜನರು ಸುಶಿಕ್ಷಿತರೂ, ಈ ಮೊದಲಿಗೆ ಕೆಲಮಟ್ಟಿಗಾದರೂ ಧಾರ್ಮಿಕ ವಿಷಯುಗಳನ್ನು ವ್ಯಾಸಂಗ ಮಾಡಿದವರೂ, ಈ ಭಾಗದಲ್ಲಿಯ ಪ್ರಮುಖ ಮಠಾಧಿಕಾರಿಗಳೂ ಇದ್ದಾರೆ. ಆದ್ದರಿಂದ ಇಲ್ಲಿಗೆ ಈ ವರ್ಗವನ್ನು ೧ ತಿಂಗಳಾಗಲಿ ಅಥವಾ ೮-೧೦ ದಿವಸಗಳಾಗಲಿ ನಡಿಸುವದು ಅನಾವಶ್ಯಕವೆಂದು ತೋರು

ತ್ತಿದೆ. ಅವರಿಗೋಸ್ಕರ ೨-೩ ದಿವಸಗಳು ಮಾತ್ರ ಈ ವರ್ಗ ನಡಿಸಿದರೆ ಸಾಕೆಂದು ನಮಗೆ ತೋರುತ್ತದೆ. ಈ ಅವಧಿಯಲ್ಲಿ ಗ್ರಾಮಾಂತರಗಳಲ್ಲಿ ಧರ್ಮಬೋಧೆಯನ್ನು ಹೇಗೆ ನಡಿಸತಕ್ಕದ್ದು, ಆಯಾ ಗ್ರಾಮಗಳಲ್ಲಿ ಯಾನ ಯಾವ ಕಾರ್ಯಗಳನ್ನು ಕೈಕೊಳ್ಳತಕ್ಕದ್ದು, ಈ ಮೊದಲಾದ ಸಾಮಾನ್ಯ ವಿಷಯಗಳು ಮುಖ್ಯವಾಗಿ ಮುಂದಿನ ಕಾರ್ಯಕ್ರಮಗಳು ಎಲ್ಲರೊಡನೆ ಚರ್ಚಿಸಲ್ಪಡುವವು.

**ಪಠ್ಯಪುಸ್ತಕಗಳು:**— ಆದರೆ ಈ ಕಾರ್ಯದಲ್ಲಿ ಶಿವಾನುಭವ ಸಂಘಗಳಿಗೋಸ್ಕರ ಕೆಲವು ಪಠ್ಯ ಪುಸ್ತಕಗಳನ್ನು ನಿರ್ಮಿಸುವದು ಬಹು ಅವಶ್ಯವೆಂದು ತೋರಹತ್ತಿರುತ್ತದೆ. ಈ ಕಾರ್ಯವನ್ನು ನಾವು ಈಗ ಕೈಕೊಂಡಿದ್ದೇವೆ. ಈ ಪುಸ್ತಕಗಳು ಹೇಗಿರಬೇಕೆಂಬುದನ್ನು ಕುರಿತು ಶ್ರೀಮನ್ನಿರಂಜನ ಸಂಗನಬಸವ ಸ್ವಾಮಿಗಳು ಬಂಥನಾಳ, ಶ್ರೀ ಬಸವಲಿಂಗ ಸ್ವಾಮಿಗಳು ತೆಲಸಂಗ, ಶ್ರೀ ಶಾಂತವೀರಸ್ವಾಮಿಗಳು ಬಬಲೇಶ್ವರ, ಅಲ್ಲದೆ ವಿಜಾಪುರ ಪಟ್ಟಣದಲ್ಲಿಯ ಕೆಲವು ಸುಶಿಕ್ಷಿತರು ಮತ್ತು ಶಿವಾನುಭವ ಸಂಘಗಳಲ್ಲಿ ಈ ವರೆಗೆ ಬೋಧ ಮಾಡುತ್ತ ಬಂದಿರುವ ಪ್ರಾಥಮಿಕ ಶಾಲೆಗಳ ಕೆಲವು ಶಿಕ್ಷಕರು ಇವರೊಡನೆ ಅನೇಕಸಲ ಚರ್ಚೆಗಳನ್ನು ನಡಿಸಿ ಇಷ್ಟರಲ್ಲಿಯೇ ಕೆಲವೊಂದು ಕ್ರಮವು ಗೊತ್ತು ಪಡಿಸಲ್ಪಟ್ಟಿರುತ್ತದೆ. ಮುಖ್ಯವಾಗಿ ಹಳ್ಳಿಯ ಜನರಿಗೆ ಉಪಯೋಗ ಬೀಳುವಂಥ ಮತ್ತು ಅವರಿಗೆ ಶೀಘ್ರ ತಿಳಿಯುವಂಥ ಪಠ್ಯಪುಸ್ತಕಗಳು ಬೇಕಾಗಿವೆ. ಹೀಗೆ ಒಟ್ಟಿಗೆ ೬ ಪುಸ್ತಕಗಳು ರಚಿಸಲ್ಪಡುವವು. ಅವುಗಳು ಯಾವವೆಂದರೆ— (೧) ವೀರಶೈವ ಧಾರ್ಮಿಕ ಸಾಮಾನ್ಯ ತತ್ವಗಳ ವಿವರಣೆ (೨) ವೀರಶೈವರ ಧಾರ್ಮಿಕ ಆಚಾರಗಳು, ಅಷ್ಟಾವರಣ ಪಂಚಾಚಾರ ಮೊದಲಾದವುಗಳ ವಿವರಣೆ (೩) ವೀರಶೈವ ಸಂಸ್ಕೃತಿಯ ಇತಿಹಾಸ ಮತ್ತು ವೀರಶೈವ ಧಾರ್ಮಿಕ ಮತ್ತು ರಾಜಕೀಯ ಮಹಾಪುರುಷರ ಚರಿತ್ರೆಗಳು (೪) ಗೃಹ ಸುಧಾರಣೆ ಮತ್ತು ವ್ಯವಸ್ಥೆ (೫) ಬಾಲಬಾಲಕಿಯರಿಗೋಸ್ಕರ ನೈತಿಕ ಮತ್ತು ಭಕ್ತಿಪರವಾದ ವಚನಗಳು, (೬) ಮತ್ತು ಸಂಗೀತ ವಚನಗಳು. ಇವುಗಳಲ್ಲಿ ಕಡೆಯದು ಈಗ ಪ್ರಸಿದ್ಧವಾಗಿದೆ. ಮೊದಲನೆಯ ಪುಸ್ತಕವು ಜಾನೇವಾರಿ ತಿಂಗಳಿನ ಅಂತ್ಯದಲ್ಲಿ ಪ್ರಸಿದ್ಧಿಸಲ್ಪಡುವದು. ಅದು ಪ್ರಸಿದ್ಧವಾದ ಕೂಡಲೆ ಶಿವಾನುಭವ ಸಂಘಗಳ ಬೋಧಕ ವರ್ಗಕ್ಕೆ ಬರಲಿಚ್ಛಿಸುವ ಬೋಧಕರು ಅದನ್ನು

ತರಿಸಿಕೊಳ್ಳತಕ್ಕದ್ದು. ಅವರು ಅದರಲ್ಲಿಯ ವಿಷಯಗಳನ್ನು ಮೊದಲು ಚನ್ನಾಗಿ ಅಭ್ಯಾಸ ಮಾಡಿಕೊಂಡು ವಿಜಾಪುರದಲ್ಲಿ ಪ್ರಾರಂಭವಾಗತಕ್ಕ ಬೋಧಕ ವರ್ಗಕ್ಕೆ ಬರತಕ್ಕದ್ದು. ಇದರಿಂದ ಬೋಧಕ ವರ್ಗದ ಕಾರ್ಯ ಗಳನ್ನು ಸುಲಭವಾಗಿ ಮತ್ತು ತೀವ್ರವಾಗಿ ಜರಗಿಸಲಿಕ್ಕೆ ಶಕ್ಯವಾಗು ತ್ತದೆ. ಈ ತರದ ಪ್ರಯತ್ನದಿಂದ ವೀರಶೈವರ ಧರ್ಮದ ಬಗ್ಗೆ ಜಾಗ್ರ ತಿಯು ಗ್ರಾಮಾಂತರಗಳಲ್ಲಿ ತೀವ್ರವಾಗಿ ಮತ್ತು ವ್ಯವಸ್ಥಿತವಾಗಿ ಪಸರಿ ಸುತ್ತ ಹೋಗುವದೆಂದು ನಾವು ಭರವಸೆ ತಾಳಿದ್ದೇವೆ.

ಬೋಧಕವರ್ಗದ ಕಾರ್ಯಗಳು ಮುಗಿದ ಕೂಡಲೆ ಬೋಧಕರು ತಮ್ಮ ತಮ್ಮ ಗ್ರಾಮಗಳಿಗೆ ಹೋಗಿ ಅಲ್ಲಿಯ ಪರಿಸ್ಥಿತಿಗೆ ಅನುಗುಣ ವಾಗಿ ಆವಶ್ಯಕ ಕಾರ್ಯಕ್ರಮಗಳನ್ನು ಏರ್ಪಡಿಸಿಕೊಂಡು ಕಾರ್ಯಕ್ಕೆ ಪ್ರಾರಂಭಿಸುವದು ಆವಶ್ಯಕವು. ವಿಜಾಪುರ ಜಿಲ್ಲೆಯಲ್ಲಿ ಬಂದ ಅನು ಭವದ ಮೇಲಿಂದ ಬೇರೆ ಜಿಲ್ಲೆಗಳಲ್ಲಿಯೂ ಪ್ರಾಂತಗಳಲ್ಲಿಯೂ ಇದೇ ತರದ ಏರ್ಪಾಡು ಮಾಡಲ್ಪಡುವದು.

ಷಟ್‌ಸ್ಥಲ ಸಿದ್ಧಾಂತದ ಬಗ್ಗೆ ಅನೇಕರು ಅನೇಕ ಗ್ರಂಥಗಳನ್ನು ಈ ವರೆಗೆ ಪ್ರಕಟ ಮಾಡಿರುತ್ತಾರೆ. ವೃತ್ತ ಪತ್ರಿಕೆಗಳಲ್ಲಿಯೂ ಮಾಸಿಕ ಪತ್ರಗಳಲ್ಲಿಯೂ ಈ ವಿಷಯದ ಬಗ್ಗೆ ಅನೇಕ ಲೇಖಗಳು ಮೇಲಿಂದ ಮೇಲೆ ಬರುತ್ತಾ ಇವೆ. ಅನೇಕ ವಿದ್ವಾಂಸರು ಶಿವಶರಣರ ವಚನಗಳ ಬಗ್ಗೆ ಮಹತ್ವದ ಉಪನ್ಯಾಸಗಳನ್ನು ಕಾಲಕಾಲಕ್ಕೆ ಮಾಡುವದುಂಟು. ಆದರೆ ಷಟ್‌ಸ್ಥಲ ಶಾಸ್ತ್ರ ಅಥವಾ ವೀರಶೈವ ಧರ್ಮದ ತಿಳುವಳಿಕೆಯು ಮಾತ್ರ ಗ್ರಾಮಾಂತರಗಳಲ್ಲಿ ಅತ್ಯಲ್ಪವಾಗಿರುತ್ತದೆ ಅಥವಾ ಅದು ಇಲ್ಲವೆಂದು ಹೇಳಿದರೂ ಅಡ್ಡಿ ಇಲ್ಲ. ಅದರ ಸಾಮಾನ್ಯ ತತ್ವಗಳು ಜನರಿಗೆ ಇನ್ನೂ ಅಪ ರಿಚಿತವಾಗಿರುತ್ತವೆ. ವಚನಕಾರರು ವಿಶ್ವಬಂಧುತ್ವಭಾವವುಳ್ಳವರು, ಅಸ್ಪೃಶ್ಯತಾನಿವಾರಣೆ ಮಾಡಿದವರು, ಉದಾರ ಮತವಾದಿಗಳು, ಜಾತಿ ಭೇದವನ್ನು ತೆಗೆದು ಹಾಕಿದವರು, ವಾಙ್ಮಯ ಕ್ರಾಂತಿಯನ್ನು ಮಾಡಿದ ವರು, ಎಂದು ಹೇಳಿದ ಮಾತ್ರಕ್ಕೆ ವೀರಶೈವ ಮತತತ್ವ ಬೋಧೆಯಾಗ ಲಾರದು. ಆದರೆ ಷಟ್‌ಸ್ಥಲಶಾಸ್ತ್ರ ಸಿದ್ಧಾಂತದ ವ್ಯವಸ್ಥಿತ ಅಭ್ಯಾಸವು ಮತ್ತು ಅದಕ್ಕನುಸಾರವಾದ ಆಚರಣೆಯು ಸಮಾಜದಲ್ಲಿ ಎಲ್ಲ ಕಡೆಗೆ ನೆಲೆಗೊಳ್ಳಬೇಕು. ಇದು ಆಗದ ಹೊರ್ತು ವೀರಶೈವ ಸಂಸ್ಕೃತಿಯ ಬಗ್ಗೆ ಪ್ರಯತ್ನಗಳು ನಡೆದವೆಂದು ಭಾವಿಸಲಿಕ್ಕೆ ಬರಲಾರದು. ಆದ್ದರಿಂದ ಇನ್ನು

ಮುಂದೆ ಶಿವಾನುಭವ ಸಂಘಗಳಲ್ಲಿ ಷಟ್‌ಸ್ಥಲ ಸಿದ್ಧಾಂತದ ತತ್ವಗಳ ಅಭ್ಯಾಸವು ಸರಿಯಾಗಿ ಜರಗಬೇಕು, ಮತ್ತು ಶಕ್ಯವಿದ್ದಷ್ಟರ ಮಟ್ಟಿಗೆ ಗ್ರಾಮಗಳಲ್ಲಿ ಅವುಗಳಂತೆ ಆಚರಣೆಗಳೂ ನಡೆಯಬೇಕು, ಈ ಧ್ಯೇಯ ವನ್ನಿಟ್ಟುಕೊಂಡು ಶಿವಾನುಭವ ಸಂಘಗಳು ಕಾರ್ಯ ಮಾಡುವದು ಬಹಳ ಅವಶ್ಯವಾಗಿರುತ್ತದೆ.

ಈ ತರದ ಕಾರ್ಯಗಳನ್ನು ಈಗಿನ ವೀರಶೈವ ಸಂಸ್ಕೃತ ಪಾಠಶಾಲೆ ಗಳ ಮುಖಾಂತರ ನಡಿಸುವದು ಬಹು ಅನುಕೂಲವಾದುದು. ಆದರೆ ಅವೆಲ್ಲವುಗಳಲ್ಲಿ ವೀರಶೈವ ಸಂಸ್ಕೃತಿಯ ಅಭ್ಯಾಸವು ನಡಿದಿರುವದಿಲ್ಲ. ನಡಿ ದಿದ್ದರೂ ಅದು ಅಪೂರ್ಣವಾಗಿರುತ್ತದೆ. ಅಥವಾ ಅದಕ್ಕೆ ಮುಖ್ಯ ಸ್ಥಾನವು ಕೊಡಲ್ಪಟ್ಟಿರುವದಿಲ್ಲ. ಆದರೆ ಅವುಗಳಲ್ಲಿ ವೀರಶೈವ ಸಂಸ್ಕೃ ತಿಯ ಅಭ್ಯಾಸಕ್ಕಿಂತಲೂ ಬ್ರಾಹ್ಮಣ ವೈದಿಕ ಸಂಸ್ಕೃತಿಯ ಅಭ್ಯಾಸವೇ ಹೆಚ್ಚಾಗಿ ನಡೆಯುತ್ತಾ ಇದೆ. ಕೆಲವು ಪಾಠ ಶಾಲೆಗಳಲ್ಲಿ ಒಂದೆರಡು ವಚನಗ್ರಂಥಗಳನ್ನು ಓದಿಸುವದುಂಟು. ಆದರೆ ಇಷ್ಟರಿಂದ ಈ ಕಾರ್ಯವು ನೆರವೇರದು. ಅನೇಕ ಪಾಠಶಾಲೆಗಳಲ್ಲಿ ಕಲಕತ್ತಾ, ಬನಾರಸ ಇಲ್ಲಿ ನಡೆ ಯುವ ಪರೀಕ್ಷಾವ್ಯವಸ್ಥೆಗಳಿಗೆ ಅನುಗುಣವಾಗಿ ಅಭ್ಯಾಸಗಳು ನಡೆದಿರು ತ್ತವೆ. ಆದರೆ ಇವುಗಳು ವೀರಶೈವ ಸಂಸ್ಕೃತಿಯ ಅಭ್ಯಾಸವೆನಿಸಿಕೊಳ್ಳ ಲಾರವು. ಷಟ್‌ಸ್ಥಲ ಸಿದ್ಧಾಂತದ ಅಭಿವೃದ್ಧಿಗೋಸ್ಕರ ಸ್ವತಂತ್ರವಾದ ಪರೀಕ್ಷಾ ವ್ಯವಸ್ಥೆಯು ಸಮಾಜದಲ್ಲಿ ಆಗುವದು ಬಹು ಅವಶ್ಯವಿದೆ. ಶಿವಾನುಭವ ಸಂಘಗಳ ಮೂಲಕ ಇದರ ಅಭ್ಯಾಸವು ಮುಂದುವರಿ ಯುತ್ತ ಹೋದ ಹಾಗೆ ಅದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಪರೀ ಕ್ಷೆಗಳನ್ನು ತೆಗೆದುಕೊಳ್ಳುವ ಕಾಲವು ಮುಂದೆ ಬರಬಹುದೆಂದು ನಾವು ನಿರೀಕ್ಷಿಸಿದ್ದೇವೆ.

ಈಚೆಗೆ ಕೆಲವು ಮಹನೀಯರು ಶಿವಾನುಭವ ಸಂಘಗಳ ಕಾರ್ಯ ಗಳ ಬಗ್ಗೆ ತಾವು ಸಹಾನುಭೂತಿಯುಳ್ಳವರೆಂದು ನಮಗೆ ತಿಳಿಸುತ್ತಾ ಇದ್ದಾರೆ. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಆದರೆ ಇನ್ನುಮುಂದೆ ಕಾರ್ಯ ಮಾಡತಕ್ಕ ಕಾಲವಾಗಿರುತ್ತದೆ. ಆದ್ದ ರಿಂದ ಈ ಮಹನೀಯರು ತಮ್ಮ ಗ್ರಾಮದಲ್ಲಿಯೇ ಒಂದು ಸಂಘವನ್ನು ಕೂಡಲೆ ಸ್ಥಾಪಿಸಿಕೊಂಡು ತಮ್ಮ ಜ್ಞಾನದ ಲಾಭವನ್ನು ತಮ್ಮಲ್ಲಿಯ ಅಜ್ಞ ಬಾಂಧವರಿಗೆ ಉಂಟು ಮಾಡಿಕೊಡಲು ಮೊದಲು ಪ್ರಾರಂಭಿಸಬೇಕೆಂದು

ನಾವು ಅವರಿಗೆ ನಮ್ರಪೂರ್ವಕವಾಗಿ ಸೂಚಿಸುತ್ತೇವೆ. ಇಂಥ ಕಾರ್ಯಕ್ಕೆ ಯಾವ ಖರ್ಚುವೆಚ್ಚವು ಬೇಕಾಗಿಲ್ಲ. ಸ್ವಲ್ಪ ಕಿಮ್ಮತ್ತಿನಲ್ಲಿ ಶಿವಾನುಭವ ಶಾಸ್ತ್ರದ ಗ್ರಂಥಗಳು ದೊರೆಯುತ್ತಲಿವೆ. ಅವುಗಳನ್ನು ಅವರು ಕರಿಸಿಕೊಂಡು ಓದಿ ಅಭ್ಯಾಸ ಮಾಡಿ ತಮ್ಮ ಸಮೀಪದವರಿಗೆ ತಿಳಿಸಿ ಹೇಳಹತ್ತಬೇಕು. ಈ ಕಾರ್ಯವನ್ನು ಅವರು ನಡಿಸಿದ ಕೂಡಲೆ ಶಿವಾನುಭವ ಸಂಘವು ಅವರಿದ್ದಲ್ಲಿಯೇ ತಾನಾಗಿ ಉಂಟಾಗುವದು. ಇಂಥ ಸಂಘಗಳು ಕರ್ನಾಟಕದಲ್ಲಿ ಇಷ್ಟರಲ್ಲಿ ಸಾವಿರಾರು ಸಂಖ್ಯೆಯಿಂದ ಆಗತಕ್ಕದ್ದಾಗಿತ್ತು. ಈ ಸ್ಥಿತಿಯು ಇನ್ನೂ ಪ್ರಾಪ್ತವಾಗದಿರುವದು ಬಹು ವಿಷಾದಕರವು. ಗ್ರಾಮಾಂತರಗಳಲ್ಲಿ ಅಸಂಖ್ಯ ಮಠಾಧಿಕಾರಿಗಳಿರುವರು. ಆದರೆ ಅವರು ತಮ್ಮ ಕರ್ತವ್ಯದಿಂದ ಈಗ ಚ್ಯುತಿಯನ್ನು ಹೊಂದಿರುವರು. ಅವರೂ ಸಂಸ್ಕೃತಿಪ್ರಿಯರಾದ ಸುಶಿಕ್ಷಿತರೂ ಈ ಕಾರ್ಯವನ್ನು ಕೈಕೊಳ್ಳಬಹುದಾಗಿದೆ. ಬಸವಾದಿ ಪ್ರಮಥರ ಕಾಲದ ತರುವಾಯ ಕೆಲವು ಶತಮಾನಗಳ ವರೆಗೆ ಈ ತರದ ಕಾರ್ಯಗಳು ವೀರಶೈವ ಸಮಾಜದಲ್ಲಿ ನಡಿದವು. ಆದರಿಂದ ಅದು ಆಗ ಒಂದು ಬಹು ಪ್ರಬಲವಾದ ಸಮಾಜವಾಯಿತು. ಮತ್ತು ಅದರ ಪ್ರಭಾವವು ಕರ್ನಾಟಕದಲ್ಲಿ ಮಾತ್ರವಲ್ಲದೆ ಆಂಧ್ರ, ತಮಿಳು, ಮಲಿಯಾಳ ದೇಶಗಳಲ್ಲಿಯೂ ಕೂಡ ಹಬ್ಬಿತು. ಅಂದರೆ ಯಾವ ಪ್ರಾಂತಗಳಲ್ಲಿ ವೀರಶೈವರ ಸಂಖ್ಯೆಯು ಅತ್ಯಲ್ಪವಾಗಿರುತ್ತದೆಯೋ ಅಂಥಲ್ಲಿಯೂ ಕೂಡ ವರ್ಚಸ್ಸುಳ್ಳ ಸಮಾಜವು ಅದಾಯಿತು. ಮಹತ್ವದ ರಾಜಮನೆತನಗಳೂ ರಾಜ್ಯಾಧಿಕಾರಿಗಳೂ ಈ ಧರ್ಮವನ್ನು ಅಂಗೀಕರಿಸಿದರು. ಮತ್ತು ವೀರಶೈವ ಜನಾಂಗದ ಸಂಖ್ಯೆಯು ದೇಶದಲ್ಲೆಲ್ಲ ಬಹು ಭರದಿಂದ ಹೆಚ್ಚಿತು. ಈ ರೀತಿಯಾಗಿ ಈಗಲೂ ಎಲ್ಲ ಕಡೆಗೆ ಪ್ರಯತ್ನಗಳು ನಡೆಯುವದು ಬಹು ಅವಶ್ಯವಾಗಿದೆ. ವೀರಶೈವ ಧರ್ಮದ ತತ್ವಗಳು ವಿಶಾಲವಾದವುಗಳೂ ಸಾಂಪ್ರತ ಸ್ಥಿತಿಗೆ ಅನುಗುಣವಾದವುಗಳೂ ಇದ್ದು ಈಗಿನ ಸಮಾಜದ ಪ್ರಗತಿಯನ್ನು ಅವು ಕುಂಠಿತ ಮಾಡುವಂಥವಲ್ಲ. ಆದುದರಿಂದ ಅವುಗಳ ಪ್ರಸಾರಕ್ಕೋಸ್ಕರ ಹೆಚ್ಚಾಗಿ ದೇಶದಲ್ಲಿ ಪ್ರಯತ್ನಗಳುಂಟಾಗುವವೆಂದು ನಾವು ಭರವಸೆ ತಾಳಿದ್ದೇವೆ.

**ಶಿವಾನುಭವ ಪತ್ರಿಕೆಗೋಸ್ಕರ ವಿನಂತಿಃ—** ಶಿವಾನುಭವ ಪತ್ರಿಕೆಯು ವೀರಶೈವ ಸಂಸ್ಕೃತಿಯ ವಿಷಯವಾಗಿ ಮಾಡುತ್ತಿರುವ ಪ್ರಯತ್ನಗಳನ್ನು ಅದರ ವಾಚಕರೆಲ್ಲರೂ ಅರಿತಿದ್ದಾರೆ. ಆದರೆ ಅದಕ್ಕೆ ವೀರ

ಶೈವ ಸಮಾಜದ ಸಹಾಯವು ಅದು ಹುಟ್ಟಿದಂದಿನಿಂದಲೂ ಈ ವರೆಗೆ ಕಿಂಚಿತ್ತಾದರೂ ಇಲ್ಲವೆಂದು ನಾವು ಬಹು ವಿಷಾದ ಪೂರ್ವಕವಾಗಿ ಹೇಳಬೇಕಾಗುವ ಪ್ರಸಂಗವು ಬಂದಿರುತ್ತದೆ. ಆರಂಭದಲ್ಲಿ ೨-೩ ವರ್ಷ ಮಾತ್ರ ಆದಕ್ಕೆ ೬೦೦-೭೦೦ ಚಂದಾದಾರರಾದರು. ಆದರೆ ಅಂದಿನಿಂದ ಈ ವರೆಗೆ ಆದಕ್ಕೆ ೧೫೦ ರಿಂದ ೨೦೦ ರ ವರೆಗೆ ಮಾತ್ರ ವರ್ಗಣೀದಾರರು ಉಳಿದಿದ್ದಾರೆ. ಈಚೀಚಿಗಂತೂ ಇವರ ಸಂಖ್ಯೆಯು ಅತ್ಯಲ್ಪವಾಗಿದೆ. ಈ ಆರೇಳು ವರ್ಷ ನಮ್ಮ ಸ್ವಂತದ ಖರ್ಚಿನಿಂದ ಈ ಪತ್ರಿಕೆಯನ್ನು ನಾವು ನಡಿಸಬೇಕಾಗಿದೆ. ನಾವು ಸ್ವತಃ ಗ್ರಾಮಾಂತರಗಳಿಗೆ ಹೋಗಿ ಚಂದಾದಾರರಿಗೋಸ್ಕರ ಪ್ರಯತ್ನ ಮಾಡುವದು ಆಗಿರುವದಿಲ್ಲ. ಇದು ನಮ್ಮ ದೇಹಸ್ಥಿತಿ ಮತ್ತು ಇಲ್ಲಿಯ ಕಾರ್ಯಬಾಹುಲ್ಯದ ಮೂಲಕ ಅಶಕ್ಯವಾಗಿರುತ್ತದೆ. ಪ್ರಮುಖ ಪಟ್ಟಣಗಳಲ್ಲಿಯ ಸುಶಿಕ್ಷಿತ ಮಹಾಜನರೂ, ಅದರಂತೆಯೇ ಶ್ರೀಮಂತರೂ, ಮಠಾಧಿಕಾರಿಗಳೂ ನಮ್ಮ ಪತ್ರಿಕೆಗೋಸ್ಕರ ಪೂರ್ಣ ಉಪೇಕ್ಷಾ ಬುದ್ಧಿಯುಳ್ಳವರು. ಇವರು ಸಂಸ್ಕೃತಿ ಸಂಶೋಧನ, ವಾಙ್ಮಯಪ್ರೀತಿ ಇವುಗಳಿಗೆ ತೀರ ಹೊರತಾದವರೆಂದು ಹೇಳಲು ಪ್ರತ್ಯವಾಯವಿಲ್ಲ. ಇದಕ್ಕೆ ಕೆಲವರು ಮಾತ್ರ ಅಪವಾದವಾಗಿದ್ದಾರೆ. ಆದರೆ ಕೇವಲ ಜನರ ಬೆಂಬಲದ ಮೇಲಿಂದ ನಡೆಯುವ ಈ ಪತ್ರಿಕೆಯನ್ನು ನಡಿಸುವದು ಕಷ್ಟಕರವಾಗಹತ್ತಿದೆ. ಆದ್ದರಿಂದ ನಮ್ಮ ಪತ್ರಿಕೆಯ ಚಂದಾದಾರರು ಮತ್ತು ಹಿತಚಿಂತಕರು ತಮ್ಮಲ್ಲಿ ಕೆಲವರನ್ನಾದರೂ ಚಂದಾದಾರರನ್ನಾಗಿ ಮಾಡಿಕೊಟ್ಟಲ್ಲಿ ನಾವು ಅವರಿಗೆ ಬಹಳ ಕೃತಜ್ಞರಾಗುವೆವು.

ಈ ಐದು ಶಕ್ತಿಗಳೇ ಜಗತ್ತಿನ ದೃಶ್ಯ ಪದಾರ್ಥಗಳನ್ನು ಉಂಟು ಮಾಡು ತ್ತವೆ. ಈ ಪ್ರಕಾರ ಇವೆಲ್ಲವುಗಳ ಕ್ರಮವಿರುತ್ತದೆ. ಅಂದರೆ ಮೂಲಪ್ರಣ ಮದಲ್ಲಿ ಮತ್ತು ಅದಕ್ಕೆ ಸಂಬಂಧಿಸಿದ ಪ್ರಣವಾಕ್ಷರಗಳಲ್ಲಿ ಜಗತ್ತಿಗೆ ಕಾರಣವಾಗಿರುವ ಕಲೆಗಳೂ ಶಕ್ತಿಗಳೂ ಹುದುಗಿರುತ್ತವೆ. ಹೀಗೆ ಈ ಎಲ್ಲಕ್ಕೆ ಮೂಲ ಆಧಾರವಾದವುಗಳು ಮಂತ್ರಗಳೇ. ನಿವೃತ್ತಿಕಲೆಯು ಕಾರ್ಯವು ಜಗತ್ತಿನ ಪ್ರಗತಿಯು ಆಗುವಲ್ಲಿ ಅದನ್ನು ಪರಮಾತ್ಮನತ್ತ ಒಯ್ಯು ವದು ಇರುತ್ತದೆ. ಅಂದರೆ ಮಾಲಿನ್ಯವನ್ನು ತೊಳೆಯುವದೇ ಅದರ ಕಾರ್ಯವು. ಪ್ರತಿಷ್ಠಾ ಕಲೆಯ ಕಾರ್ಯವು ಪ್ರಗತಿಯಲ್ಲಿ ಸ್ಥಿರತೆಯ ನ್ನುಂಟು ಮಾಡುವದು ಇದೆ. ಶಾಂತಿ, ಶಾಂತ್ಯಾತೀತ ಇವುಗಳು ಜಗತ್ತಿನ ಕಾರ್ಯಗಳಲ್ಲಿ ಶಾಂತಿಯನ್ನು ಅಂದರೆ ಯಾವ ತರದ ಅವ್ಯವಸ್ಥಿತ ಚಲನೆ ಯನ್ನುಂಟು ಮಾಡಗೊಡದೆ ಅವುಗಳನ್ನು ನಿಧಾನವಾಗಿ ಸರಿಯಾದ ಮಾರ್ಗ ದಿಂದ ಒಯ್ಯುವ ಕಾರ್ಯಗಳನ್ನು ಮಾಡುತ್ತವೆ. ಈ ಕಲೆಗಳಿಗನುಸಾರ ವಾಗಿ ಆಯಾ ಶಕ್ತಿಗಳೂ ಉಂಟಾಗುತ್ತವೆ. ಹೀಗೆ ಉಂಟಾದ ಶಕ್ತಿಗಳು ಉಚ್ಚತರದ ಕಾರ್ಯಗಳಲ್ಲಿ ತೊಡಗಿಸುವಂಥವು ಇರುತ್ತವೆ. ನಿವೃತ್ತಿಯಲ್ಲಿ ಕ್ರಿಯಾಶಕ್ತಿ, ಪ್ರತಿಷ್ಠೆಯಲ್ಲಿ ಜ್ಞಾನಶಕ್ತಿ, ವಿದ್ಯೆಯಲ್ಲಿ ಇಚ್ಛಾಶಕ್ತಿ, ಶಾಂತಿ ಯಲ್ಲಿ ಆದಿಶಕ್ತಿ, ಶಾಂತ್ಯಾತೀತೆಯಲ್ಲಿ ಪರಾಶಕ್ತಿ, ಇವುಗಳು ಉದ್ಭವಿಸು ತ್ತವೆ. ಶಾಂತ್ಯಾತೀತೋತ್ತರೆಯಲ್ಲಿ ಚಿತ್‌ಶಕ್ತಿಯು ಇರುತ್ತದೆ. ಅದೇ ಮಹಾಲಿಂಗವು, ಅಥವಾ ಮೂಲ ಪ್ರಣಮವು. ಈ ಕಲೆಗಳು, ಶಕ್ತಿಗಳು ನ, ಮ, ಶಿ, ವಾ, ಯ ಎಂಬ ಪ್ರಣವಾಕ್ಷರಗಳೊಳಗಿಂದಲೇ ವ್ಯಕ್ತ ವಾಗುತ್ತವೆ. ಮನುಷ್ಯನು ಇವುಗಳನ್ನು ತಿಳಿದುಕೊಂಡು ಆಚರಿಸಿದಲ್ಲಿ ಅವನಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಎಂಬ ಲಿಂಗಗಳು ಕ್ರಮೇಣ ಬೆಳಗಹತ್ತುತ್ತವೆ. ಈ ಲಿಂಗ ಗಳ ಅಂತಿಮ ಸ್ಥಿತಿಯು ಮಹಾಲಿಂಗವೇ ಇರುತ್ತದೆ. ಮನುಷ್ಯನು ಅದರಲ್ಲಿ ಬೆರೆತಲ್ಲಿ ಶೂನ್ಯ ಸ್ಥಿತಿಯೊಳಗೆ ಹೋಗುತ್ತಾನೆ.

(೩೧) ಸಂಜ್ಞೆಗಳು— ಇವು ಐದು ಇವೆ. ಅವು ೧ ಪರ ೨ ಗೂಢ. ೩ ಶರೀರಸ್ಥ. ೪ ಲಿಂಗಕ್ಷೇತ್ರ. ೫ ಅನಾದಿ ಈ ಪ್ರಕಾರ ಇರುತ್ತವೆ. ಪರಮಾತ್ಮನ ಇರವು ಹೇಗಿರುತ್ತದೆಂಬುದನ್ನು ಇವುಗಳು ವಿವರಿಸುತ್ತವೆ.

- ೧. ಪರಮಾತ್ಮನು 'ಪರ' ಎಂದರೆ ಸೃಷ್ಟಿಸಲ್ಪಟ್ಟ ಎಲ್ಲ ವಸ್ತುಗಳಿಗೆ ಮೀರಿದವನೆಂಬ ಅರ್ಥವು. ಅಂದರೆ ಅವೆಲ್ಲವುಗಳಿಗೂ ಮಿಗಿಲಾದವನು. ಅವನು ವಿಚಾರಕ್ಕೆ ಮೀರಿದವನು, ಮನುಷ್ಯನ ಇಂದ್ರಿಯಗಳಿಗೆ ಅಗೋಚರನು ಇದ್ದಾನೆ. (೨) ಅವನು ಗೂಢನಾಗಿರುತ್ತಾನೆ. ಅಂದರೆ ಅವನು ಪ್ರಕಟವಾಗಿ ಅಥವಾ ಪ್ರತ್ಯಕ್ಷವಾಗಿ ಮನುಷ್ಯನಿಗೆ ಕಾಣಿಸಿ ಕೊಳ್ಳನು. ಯಾಕಂದರೆ ಅವನಿಗೆ ಆಕಾರವಿಲ್ಲ, ಮತ್ತು ಯಾವ ತರ ಹದ ಅವಯವಗಳಿಲ್ಲ. ೩. ಹೀಗಿದ್ದರೂ ಅವನು ಪದಾರ್ಥಗಳಲ್ಲಿ, ಚರಾಚರ ವಸ್ತುಗಳಲ್ಲೆಲ್ಲ ಇದ್ದಾನೆ. ಅಂದರೆ ಅವನಿಗೆ ವಾಸಿಸಲು ಯಾವದೇ ಒಂದು ವಿಶಿಷ್ಟ ಸ್ಥಾನವಿಲ್ಲ. ಅವನು ಸರ್ವ ವ್ಯಾಪಿಯು. ಆದ್ದರಿಂದ ಅವನು ಎಲ್ಲವುಗಳಲ್ಲಿಯೂ ಇರುತ್ತಾನೆ. ಆದ್ದರಿಂದ ಅವನು ಶರೀರಸ್ಥನೆಂದು ಹೇಳಲ್ಪಟ್ಟಿದ್ದಾನೆ. ೪. ಅವನು ಹೀಗೆ ಶರೀರಸ್ಥನಾಗಿದ್ದರೂ ಪದಾರ್ಥಗಳಲ್ಲಿ ಅವನು ಲಿಂಗ ರೂಪನಾಗಿ ಇದ್ದಾನೆ. ಆ ರೀತಿಯಾಗಿದ್ದುಕೊಂಡು ಎಲ್ಲವುಗಳಿಗೂ ಪ್ರೇರಕನಾಗಿ ವರ್ತಿಸುತ್ತಾನೆ. ಅಂದರೆ ಅವನು ಪ್ರತ್ಯಕ್ಷನಾಗಿ ಪ್ರಾಣಿಗಳಂತೆ ಕಾರ್ಯಗಳನ್ನು ಮಾಡುವದಿಲ್ಲ. ಅವನು ಮಾಡುವದಿದ್ದರೆ ಈ ಲಿಂಗಚೈತನ್ಯ ಮೂಲಕ ಮನುಷ್ಯನ ಅಥವಾ ಪದಾರ್ಥಗಳ ವ್ಯವಹರಣೆಗೆ ಕಾರಣನಾಗುತ್ತಾನೆ. ಈ ವ್ಯವಹರಣೆಯು ಯೋಗ್ಯ ಮಾರ್ಗದಲ್ಲಿದ್ದರೆ ಅದು ಲಿಂಗವಶದಿಂದ ಉಂಟಾದುದೆಂದು ತಿಳಿಯಬೇಕು. ಇಲ್ಲದಿದ್ದರೆ ಅದು ಮಾಯಾ ವಶವಾದುದು. ಆದ್ದರಿಂದ ಅವನು ಲಿಂಗಕ್ಷೇತ್ರನೆಂದು ಹೇಳಲ್ಪಡುತ್ತಾನೆ. ೫. ಪರಮಾತ್ಮನು ಅನಾದಿಯಾಗಿದ್ದಾನೆ. ಅಂದರೆ ಅವನಿಗೆ ಆದಿ ಎಂದರೆ ಹುಟ್ಟು ಎಂಬುದಿಲ್ಲ.' ಹುಟ್ಟು ಇಲ್ಲದ್ದರಿಂದ ಅವನಿಗೆ ಅಂತ್ಯ ಎಂದರೆ ಮರಣವೂ ಇಲ್ಲ. ಹೀಗೆ ಈ ಐದು ಗುಣಗಳಿಂದ ಅವನನ್ನು ನಾವು ಗುರುತಿಸಬೇಕು. ಈ ಗುರುತುಗಳಿಗೆ ಸಂಜ್ಞೆ ಎಂಬ ಹೆಸರು.

(೩.೨) ಲಕ್ಷಣಗಳು:— ಇವು ಐದು ಇವೆ. ಅವು ೧ ಸತ್ ೨ ಚಿತ್ ೩ ಆನಂದ ೪ ನಿತ್ಯ ೫ ಪರಿಪೂರ್ಣ ಈ ಪ್ರಕಾರ ಇರುತ್ತವೆ. ಇವು ಪರಮಾತ್ಮನ ಸ್ವರೂಪವನ್ನು ಹೇಳುತ್ತವೆ. (೧) ಪರಮಾತ್ಮನು ಸತ್ ಸ್ವರೂಪನಾಗಿದ್ದಾನೆ. ಅಂದರೆ ಅವನಿಗೆ ಅಸ್ತಿತ್ವವು ಇದೆ. ನಾಸ್ತಿಕರು ಪರಮಾತ್ಮನು ಇಲ್ಲೆಂದು ಪ್ರತಿಪಾದಿಸುತ್ತಾರೆ. ಆದರೆ ವೀರಶೈವರು ಪರಮಾತ್ಮನು ಇದ್ದಾನೆಂದು ಭಾವಿಸುವದುಂಟು.

(೨) ಪರಮಾತ್ಮನು ಚಿತ್‌ಸ್ವರೂಪನಾಗಿದ್ದಾನೆ. ಚಿತ್ ಎಂದರೆ ಚೈತನ್ಯವು. ಇದು ಇಡೀ ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿರುತ್ತದೆ. ಇದಕ್ಕೆ ಚಿತ್ ಶಕ್ತಿ ಎಂತಲೂ ಹೆಸರಿದೆ. (೩) ಪರಮಾತ್ಮನು ಆನಂದ ಸ್ವರೂಪನು. ಇಲ್ಲಿ ಆನಂದವೆಂದರೆ ಜ್ಞಾನ ಅಥವಾ ಅರಿವು ಎಂಬು ತಿಳಿಯಬೇಕು. ಇದಕ್ಕೆ ಚ್ಯುತಿಯು ಅಥವಾ ಕೊರತೆಯು ಇಲ್ಲ. ಈ ಆನಂದವು ಜ್ಞಾನ, ಅರಿವು, ಬೆಳಗು, ಸಾಮರಸ್ಯ, ಪ್ರಕಾಶ, ಪರಸುಖ, ಪ್ರಭೆ, ಜ್ಞಾನಾನಂದ ಈ ಮೊದಲಾದ ಶಬ್ದಗಳಿಂದಲೂ ಕರೆಯಲ್ಪಡುವದುಂಟು. ಈ ಆನಂದವು ಮನುಷ್ಯನ ಇಂದ್ರಿಯಾನಂದಕ್ಕೆ ನಿಲುಕದಂಥಾದ್ದು. (೪) ಪರಮಾತ್ಮನು ನಿತ್ಯನಾಗಿದ್ದಾನೆ. ಅಂದರೆ ಆವನು ನಾಶರಹಿತನು. ಅವನಿಗೆ ಮರಣವಿಲ್ಲ. (೫) ಅವನು ಪರಿಪೂರ್ಣನಾಗಿದ್ದಾನೆ. ಜಗತ್ತಿನಲ್ಲಿಯ ಮಿಕ್ಕ ವಸ್ತುಗಳೆಲ್ಲವೂ ಅಪೂರ್ಣವಾದವುಗಳು. ಅವುಗಳಲ್ಲಿ ಆವುದಾದರೊಂದು ಕೊರತೆಯು ಇದ್ದೇ ಇರುತ್ತದೆ. ಇಂಥ ಕೊರತೆಯು ಪರಮಾತ್ಮನಲ್ಲಿರುವದಿಲ್ಲ.

(೩೩) ಪ್ರಣವಗಳು— ನ, ಮ, ಶಿ, ವಾ, ಯ- ಇವು ಪ್ರಣವುಗಳೆಂದು ಹೇಳಲ್ಪಡುತ್ತಿವೆ. ಅವು ಓಂಕಾರದಿಂದ ಉದ್ಭವಿಸುತ್ತವೆ. ಇವು ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳಲ್ಲೆಲ್ಲ ತುಂಬಿವೆ. ಓಂಕಾರವು ಆಯಾ ಪದಾರ್ಥಗಳ ಪ್ರಗತಿಯ ಮೇರೆಗೆ ಈ ಪಂಚ ಪ್ರಣವುಗಳ ಮೂಲಕ ಜಗತ್ತನ್ನು ಆವರಿಸಿರುತ್ತದೆ. ಇವುಗಳು ಪದಾರ್ಥಗಳಲ್ಲಿ ಅವವುಗಳ ವಿಶಿಷ್ಟ ಚೈತನ್ಯವನ್ನು ಉಂಟುಮಾಡುತ್ತವೆ. ನ, ಮ, ಶಿ, ವಾ, ಯ, ಇವುಗಳಲ್ಲಿ ನ ಕಾರಕ್ಕಿಂತಲೂ ಮ ಕಾರವು ಹೆಚ್ಚು ಸೂಕ್ಷ್ಮವು. ಮ ಕಾರಕ್ಕಿಂತಲೂ ಶಿ ಕಾರವು, ಶಿ ಕಾರಕ್ಕಿಂತಲೂ ವ ಕಾರವು, ವ ಕಾರಕ್ಕಿಂತಲೂ ಯ ಕಾರವು ಹೆಚ್ಚು ಹೆಚ್ಚು ಸೂಕ್ಷ್ಮತರವಾಗಿ ಇರುತ್ತವೆ. ಈ ಪ್ರಣವುಗಳು ಆಯಾ ಪದಾರ್ಥಗಳ ವಿಶೇಷ ಶಕ್ತಿಗೆ ಮತ್ತು ಕಾರ್ಯಗಳಿಗೆ ಕಾರಣಗಳಾಗಿರುತ್ತವೆ.

ಓಂಕಾರಕ್ಕೆ ಮೂಲ ಪ್ರಣವವೆಂತಲೂ ಉಳಿದ ಐದು ಪ್ರಣವುಗಳಿಗೆ ಬರೇ ಪ್ರಣವುಗಳೆಂತಲೂ ಪ್ರಣವಾಕ್ಷರಗಳೆಂತಲೂ ಹೆಸರುಗಳಿವೆ. ವೀರಶೈವರಲ್ಲಿ ಈ ಪ್ರಣವುಗಳ ಮೂಲಕ ಅನೇಕ ಬಗೆಯ ಜಪಗಳುಂಟಾಗಿವೆ. ಅವುಗಳ ಜಪಗಳನ್ನು ಮಾಡುವಲ್ಲಿ ಆ ಪ್ರಣವುಗಳ ಅರ್ಥವನ್ನು

ತಿಳಿದುಕೊಂಡು ಜಪಮಾಡುವದನ್ನು ಗೊತ್ತುಮಾಡಿಕೊಳ್ಳಬೇಕು. ಹೀಗೆ ಜಪಿಸಿದಲ್ಲಿ ಅವು ಪರಿಣಾಮಕಾರಿಗಳು. ಆ ಅರ್ಥಗಳು ಆಯಾ ಪ್ರಣ ವಗಳಲ್ಲಿ ಗರ್ಭಿತವಾಗಿದ್ದು, ಅವುಗಳ ರೀತಿಯನ್ನು ಗುರುಮುಖದಿಂದ ಅರಿಯಬೇಕೆಂಬ ಸಾಂಪ್ರದಾಯವಿದೆ.

ಈ ಪ್ರಣವಗಳು ಪಂಚಸಾದಾಖ್ಯಗಳನ್ನು ಸೂಚಿಸುತ್ತವೆ. ಜಗತ್ತಿನ ಆರಂಭದಲ್ಲಿ ಈ ಸಾದಾಖ್ಯಗಳಲ್ಲಿ ಉತ್ಪನ್ನವಾಗುವ ಶಕ್ತಿ ಮೊದಲಾದವುಗ ಳಿಗೆ ಈ ಪ್ರಣವಗಳೇ ಮೂಲಕಾರಣಗಳು. ಜಗತ್ತಿನಲ್ಲಿದ್ದಂತೆಯೇ ದೇಹವ ಲ್ಲಿಯೂ ಕೂಡ ಇವು ಇರುತ್ತವೆ. ಇವು ಅಲ್ಲಿ ಇರುವ ಮುಖ್ಯ ಸ್ಥಾನಗಳೆಂದರೆ ಷಟ್ ಚಕ್ರಗಳು. ಅವುಗಳಲ್ಲಿದ್ದುಕೊಂಡು ಅವು ಮನುಷ್ಯನ ವ್ಯಾಪಾರ ಗಳಿಗೆ ಪ್ರೇರಣೆಮಾಡುತ್ತವೆ. ಪ್ರಣವಗಳ ಮೂಲಕ ಈ ವ್ಯಾಪಾರಗಳು ಸನ್ಮಾರ್ಗದಲ್ಲಿ ಸಾಗುತ್ತವೆ. ಹೀಗೆ ಸನ್ಮಾರ್ಗದಲ್ಲಿ ಹೋದದ್ದಾದರೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮಹಾಲಿಂಗ ಇವುಗಳು ಆಯಾ ಚಕ್ರಗಳಲ್ಲಿ ಬೆಳಗಹತ್ತುತ್ತವೆ. ಈ ಪ್ರಣ ವಗಳನ್ನು ಸರಿಯಾಗಿ ಧ್ಯಾನಿಸಿದಲ್ಲಿ ಈ ಲಿಂಗಗಳು ಆಯಾ ಚಕ್ರಗಳಲ್ಲಿ ದೃಢಪಡುತ್ತವೆ. ಆದರೆ ಭಕ್ತಿ ಪೂರ್ವಕವಾಗಿ ಮತ್ತು ಅವುಗಳ ಅರ್ಥ ಗಳನ್ನು ತಿಳಿದುಕೊಂಡು ಅವುಗಳನ್ನು ಧ್ಯಾನಿಸತಕ್ಕದ್ದು. ಈ ತರದ ಧ್ಯಾನವು ಶಿವಯೋಗಕ್ಕೆ ಮುಖ್ಯ ಸಾಧನವು.

'ಓಂ ನಮಃಶಿವಾಯ' ಇದು ಷಡಕ್ಷರ ಮಂತ್ರವೆಂದು ಹೇಳಲ್ಪಡು ತ್ತದೆ. ಮೂಲ ಪ್ರಣವವನ್ನು ಬಿಟ್ಟು ಉಚ್ಚರಿಸಿದರೆ, ಅದು ಪಂಚಾ ಕ್ಷರೀ ಮಂತ್ರವೆಂದೆನಿಸಿಕೊಳ್ಳಲ್ಪಡುತ್ತದೆ. ಓಂಕಾರವು ಅವ್ಯಕ್ತವಾದುದು. ಆದರೂ ಅದರ ಭಾವವನ್ನಿಟ್ಟುಕೊಂಡು ಅದನ್ನು ಉಚ್ಚರಿಸಿದಲ್ಲಿ ಅದು ಷಡಕ್ಷರ ಮಂತ್ರವಾಗುವದು. ದೀಕ್ಷಾ ಕಾಲದಲ್ಲಿ ಈ ಮಂತ್ರವನ್ನು ಗುರುವು ಉಪದೇಶಿಸುತ್ತಾನೆ. ಹೀಗೆ ಉಪದೇಶಿಸಿ ಅವನು ಮಂತ್ರದ ಅರ್ಥ ವನ್ನೂ ತಿಳಿಸಿ ಕೊಡುವನು. ಆದನ್ನು ದೀಕ್ಷೆ ಹೊಂದುವವನು ತಿಳಿದು ಕೊಂಡು ಅದರಂತೆ ಆಚರಿಸತಕ್ಕದ್ದು. ಈ ಆಚರಣೆಯೇ ಶಿವಯೋ ಗಕ್ಕೆ ಮುಖ್ಯಾಂಗವಾಗಿರುತ್ತದೆ. ಆದ್ದರಿಂದ ವೀರಶೈವರಲ್ಲಿ ಈ ಪಂಚಾ ಕ್ಷರೀ ಮಂತ್ರದ ಮಹತ್ವವು ಬಹಳವಿರುತ್ತದೆ. ಎಲ್ಲ ಮಂತ್ರಗಳ ಸಾರ ವೆಂತಲೂ ಅದು ಹೇಳಲ್ಪಡುತ್ತದೆ.

ಪ್ರಣವಗಳು ಪರಶಿವನ ಪಂಚಮುಖಗಳ ದ್ಯೋತಕಗಳಾಗಿವೆ. ದೀಕ್ಷೆ, ಲಗ್ನ, ಮೊದಲಾದ ಕಾಲಗಳಲ್ಲಿ ಪಂಚಕಲಶಗಳನ್ನು ಸ್ಥಾಪಿಸುವದುಂಟಷ್ಟೇ. ಆಗ ಅವು ಪರಶಿವನ ಪಂಚ ಮುಖಗಳೆಂದು ಭಾವಿಸಲ್ಪಡುತ್ತವೆ. ಆಗ ಈ ಪ್ರಣವುಗಳು ಆಯಾ ಸ್ಥಾನಗಳಲ್ಲಿ ಸ್ಥಾಪಿಸಲ್ಪಡುವದುಂಟು.

ಪ್ರಣವುಗಳು ದೇಹದಲ್ಲಿಯೂ ಕೂಡ ಸ್ಥಾಪಿಸಲ್ಪಡುತ್ತವೆ. ಇಂದ್ರಿಯಗಳಲ್ಲಿಯೂ ಅವುಗಳು ಸ್ಥಾಪಿಸಲ್ಪಡುವದುಂಟು. ವೀರಶೈವರಲ್ಲಿ ಉದ್ಧರಣೆಗಳೆಂಬವುಗಳಿವೆ. ಅವು ಷಟ್‌ಸ್ಥಲ ಶಾಸ್ತ್ರ ತತ್ವ ಬೋಧಕಗಳಾಗಿರುತ್ತವೆ. ಅವುಗಳಲ್ಲಿ ಪ್ರಣವುಗಳ ಮೂಲಕವಾಗಿಯೇ ಈ ತತ್ವಗಳು ಹೇಳಲ್ಪಟ್ಟಿರುತ್ತವೆ.

(೩೪) ಆತ್ಮ:— ಎಲ್ಲ ಶರೀರಗಳಲ್ಲಿ ಆತ್ಮನು ಪ್ರತ್ಯೇಕವಾಗಿ ವಾಸಿಸುತ್ತಾನೆ. ಈ ಆತ್ಮನು ಪರಶಿವನ ಅಂಶವೇ ಇರುತ್ತದೆ. ಅದು ಪರಶಿವನಿಂದ ಉಗಮವಾಗಿ ಸೃಷ್ಟ ಪದಾರ್ಥಗಳಲ್ಲೆಲ್ಲ ಇದ್ದರೂ ಕಾಣದಂತಿರುತ್ತದೆ. ಮನುಷ್ಯನು ಮಾಯಾವಶನಾದಲ್ಲಿ ಪರಶಿವನ ಪೂರ್ಣ ಸ್ಥಿತಿಯು ಈ ಆತ್ಮನಲ್ಲಿ ತೋರಲಾರದು. ಆದರೆ ಮನುಷ್ಯನು ಸನ್ಮಾರ್ಗೀಯಾದಲ್ಲಿ ಪರಶಿವನ ಜ್ಯೋತಿಯು ಲಿಂಗ ರೂಪವಾಗಿ ಮನುಷ್ಯನಲ್ಲಿ ಕಾಣಹತ್ತುವದು. ಆಗ ಆತ್ಮನು ಪ್ರಕಟವಾಗಹತ್ತುವನು. ಜಡ ಪದಾರ್ಥಗಳಲ್ಲಿ ಈ ಪ್ರಗತಿಯು ಅತ್ಯಲ್ಪವಾದುದು. ಆದರೆ ಉಚ್ಚತರದ ಪ್ರಾಣಿ ಜಾತಿಗಳಲ್ಲಿ ಈ ಆತ್ಮನ ಪರಿಸ್ಥಿತಿಯು ಹೆಚ್ಚುವಿಕೆಯನ್ನು ಹೊಂದುತ್ತ ಹೋಗುತ್ತದೆ. ಹೀಗೆ ಆತ್ಮನು ಶಿವಾಂಶಿಕನಾಗಿರುತ್ತಾನೆ. ಅವನು ಪರಮಾತ್ಮನಿಗೆ ಸಂಬಂಧಪಟ್ಟವನು. ಆದರೆ ಶರೀರದಲ್ಲಿ ಮನಸ್ಸು, ಬುದ್ಧಿ, ಇಂದ್ರಿಯಗಳು, ಪ್ರಾಣ ಇವುಗಳಲ್ಲಿ ಅವನನ್ನು ಗುರುತಿಸಲಿಕ್ಕೆ ಬಾರದಿದ್ದರೂ ಇವೆಲ್ಲವುಗಳು ಅವನಿಗೆ ಸಂಬಂಧಿಸಿಕೊಂಡು ತಮ್ಮ ತಮ್ಮ ಕ್ರಿಯೆಗಳನ್ನು ಮಾಡುತ್ತವೆ. ಆತ್ಮನು ಸಾಯುವದಿಲ್ಲ. ಅವನು ಮರಣರಹಿತನಾದವನು. ಅವನು ಕಡೆಗೆ ಪರಶಿವನಲ್ಲಿಯೇ ಅಡಗುವನು. ಆ ವರೆಗೆ ಅವನು ಜನ್ಮಾಂತರಗಳನ್ನು ಎತ್ತುತ್ತ ಹೋಗುತ್ತಾನೆ.

(೩೫) ಆತ್ಮತ್ರಯಗಳು:—ಇವು ಜೀವಾತ್ಮ, ಅಂತರಾತ್ಮ ಮತ್ತು ಪರಮಾತ್ಮಗಳೆಂದು ಇರುತ್ತವೆ. (೧) ಜೀವಾತ್ಮನು ಸಂಸಾರದಿಂದ ತುಂಬಿ

ಕೊಂಡವನು. ಇದರಲ್ಲಿಯೇ ಅವನು ತೊಳಲಿ ಬಳಲಿ ಕಷ್ಟ ಪಡುತ್ತಾನೆ. ತಾನಾರೆಂಬುದನ್ನು ಅವನು ಅರಿಯನು. ತ ಮಸ ಭಾವಕ್ಕೆ ಒಳಗಾಗಿ ವ್ಯವಹರಿಸುತ್ತಾನೆ. (೨) ಆದರೆ ಅಂತರಾತ್ಮನು ಜೀವಾತ್ಮನಕಿಂತಲೂ ಉಚ್ಚಸ್ಥಿತಿಯನ್ನು ಹೊಂದಿದವನು. ತಾಮಸ ಸ್ವಭಾವವನ್ನು ಬಹು ಮಟ್ಟಿಗೆ ತೊಲಗಿಸಿದವನು. ತೊಲಗಿಸಿದರೂ ಕೂಡ ಸಂಸಾರವನ್ನು ಸಂಪೂರ್ಣವಾಗಿ ಬಿಟ್ಟವನಲ್ಲ. ಒಂದು ವೇಳೆ ಅದನ್ನು ಬಿಡದಿದ್ದರೂ ಕೂಡ ಅದರಲ್ಲಿ ಇಲ್ಲದ ಹಾಗೆ ಇರುತ್ತಾನೆ. ಯಾಕಂದರೆ ಪರಮಾತ್ಮನ ಅರಿವು ಅವನಲ್ಲಿ ಉಂಟಾಗಿರುತ್ತದೆ. ಆತನು ಆತ್ಮವಿವೇಕಿಯು. ಹೀಗೆ ಅಂತರಾತ್ಮನ ಸ್ಥಿತಿಯು ಇರುತ್ತದೆ. (೩) ಪರಮಾತ್ಮನು ಈ ಅಂತರಾತ್ಮನ ಕಿಂತಲೂ ಉಚ್ಚತರದ ಸ್ಥಿತಿಯನ್ನು ಹೊಂದಿರುತ್ತಾನೆ. ಅವನು ಕಾರಣ ಶರೀರಿಯಾಗಿ ಅಲ್ಲಿ ಪ್ರಕಟತರ ಲಿಂಗ ಸ್ಥಿತಿಯನ್ನು ಹೊಂದಿ ಶರೀರದ ಎಲ್ಲ ವ್ಯಾಪಾರಗಳಲ್ಲಿ ಲಿಂಗ ಚೈತನ್ಯವನ್ನು ಉಂಟುಮಾಡಲು ಶಕ್ತನಾಗಿರುತ್ತಾನೆ. ಅವನು ನಿಃಕಲನು. ಯಾಕಂದರೆ ಅವನಲ್ಲಿ ಜ್ಞಾನವು ನಿರ್ಧಾರವಾಗಿರುತ್ತದೆ. ಅವನು ಇಹಲೋಕದ ಮತ್ತು ಪರಲೋಕದ ಸಕಲ ಸಂಸ್ಕೃತಿಗಳನ್ನು ತೊಲಗಿಸಿದವನು.

ಜೀವಾತ್ಮನಿಗೆ ಬಹಿರಂಗ ಸ್ಥಿತಿಯು ಮಾತ್ರ ಇದೆ. ಆದರೆ ಅಂತರಾತ್ಮನಿಗೆ ಅಂತರಂಗ ಸ್ಥಿತಿಯು ಇದೆ. ಇವುಗಳ ಪ್ರಗತಿಯ ಮೂಲಕವೇ ಪರಮಾತ್ಮನು ಮನುಷ್ಯನಲ್ಲೆಲ್ಲ ಉಚ್ಚತರದ ಸ್ಥಿತಿಯನ್ನು ಐದಿಸುತ್ತಾನೆ. ಜೀವಾತ್ಮ ಅಂತರಾತ್ಮರು ಪರಸ್ಪರಾವಲಂಬಿಗಳಾಗಿದ್ದಾರೆ. ಇವುಗಳ ಶ್ರೇಷ್ಠತರ ಸ್ಥಿತಿಯ ಮೂಲಕವೇ ಪರಮಾತ್ಮನು ಮನುಷ್ಯನಲ್ಲಿ ತೋರುತ್ತಾನೆ. ಜೀವಾತ್ಮ ಅಂತರಾತ್ಮ ಪರಮಾತ್ಮರ ಪ್ರಗತಿ ಎಂದರೆ ಸ್ಥೂಲ, ಕಾರಣ ಶರೀರಗಳಲ್ಲಿ ಅನುಕ್ರಮವಾಗಿ ಸಂಬಂಧಿಸಿದ ಇಷ್ಟಲಿಂಗ, ಪ್ರಾಣಲಿಂಗ ಭಾವಲಿಂಗ ಇವುಗಳು ಪ್ರಕಟವಾಗುವದೇ ಇರುತ್ತದೆ. ಇವೆಲ್ಲವು ಪ್ರಕಟ ಹೊಂದಿದ ಕೂಡಲೆ ಆತ್ಮನು ಪರಶಿವನಲ್ಲಿ ಬೆರೆಯುವನು. ಅದೇ ಲಿಂಗಾಂಗ ಸಾಮರಸ್ಯವು.

(೩೬) ಕೋಶಗಳುಃ— ಇವು ಅನ್ನಮಯಕೋಶ, ಪ್ರಾಣಮಯ ಕೋಶ, ಮನೋಮಯಕೋಶ, ವಿಜ್ಞಾನಮಯ ಕೋಶ, ಮತ್ತು ಆನಂದ ಮಯ ಕೋಶ, ಎಂದಿರುತ್ತವೆ. (೧) ಸ್ಥೂಲ ದೇಹವೇ ಅನ್ನಮಯ ಕೋಶವೆನಿಸಿಕೊಳ್ಳುತ್ತದೆ. ಅನ್ನದಿಂದ ಇದು ಪುಷ್ಟಿಯನ್ನುಹೊಂದುತ್ತದೆ.

(೨) ಶರೀರದಲ್ಲಿ ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಉಂಟು. ಇವುಗಳ ಮೂಲಕ ಅದರ ವ್ಯಾಪಾರಗಳು ನಡೆಯುತ್ತವೆ. ಈ ಇಂದ್ರಿಯ ಗಳ ಮೂಲಕ ಮನುಷ್ಯನಿಗೆ ಮುಟ್ಟಿದರೆ ತಿಳಿಯುತ್ತದೆ. ಕರೆದರೆ ಅವನಿಗೆ ಕೇಳುತ್ತದೆ. ಶರೀರದಲ್ಲಿ ಪ್ರಾಣವಿದೆಂಬುದಕ್ಕೆ ಈ ವ್ಯಾಪಾರಗಳೇ ಚಿನ್ಹವು. ಇದೇ ಪ್ರಾಣಮಯ ಕೋಶವು (೩) ಮನುಷ್ಯನಲ್ಲಿ ಚಿತ್ತ, ಬುದ್ಧಿ, ಅಹಂಕಾರಗಳೆಂಬುವು ಇವೆ. ಇವುಗಳ ವ್ಯಾಪಾರವೇ ಮನೋಮಯ ಕೋಶವು. (೪) ಮೇಲೆ ವಿವರಿಸಿದ ಕೋಶಗಳ ಮೂಲಕ ಮನುಷ್ಯನು ನಿರ್ಧರಿಸುತ್ತಾನೆ, ತಿಳಿಯುತ್ತಾನೆ, ಪದಾರ್ಥಗಳ ನಿಜ ಸ್ವರೂಪನ್ನು ಗ್ರಹಿಸು ತ್ತಾನೆ. ಇದೇ ವಿಜ್ಞಾನಮಯ ಕೋಶವು. (೫) ಆದರೆ ಈ ಎಲ್ಲ ವ್ಯಾಪಾ ರಗಳು ಅಳಿದು ಹೋಗಿ ಬಾಹ್ಯವೇನೂ ತೋರದೆ ಇರಲು ಮನುಷ್ಯನಲ್ಲಿ ನಿಜ ಸುಖವು ತಲೆದೋರುತ್ತದೆ. ಇದು ಶಾಶ್ವತವಾದುದು. ಇದೇ ಆನಂದ ಮಯಕೋಶವು. ಮನುಷ್ಯನ ಪ್ರಗತಿಯು ಈ ಎಲ್ಲ ಕೋಶಗಳಲ್ಲಿ ಉಂ ಟಾಗಬೇಕು. ಆದರೆ ಮನುಷ್ಯನ ಆಚರಣೆಗಳ ಪ್ರಕಾರ ಈ ಸ್ಥಿತಿಯು ಕ್ರಮೇಣ ಜರಗುತ್ತಿದೆ. ಅದು ಪೂರ್ಣತೆಯನ್ನು ಹೊಂದಿದ ಕೂಡಲೆ ಅವನಲ್ಲಿ ಶಾಶ್ವತ ಸುಖವು ತಲೆದೋರುತ್ತದೆ.

(೩೭) ಶಕ್ತಿಗಳು— ಇವು ಕ್ರಿಯಾಶಕ್ತಿ, ಜ್ಞಾನ ಶಕ್ತಿ, ಇಚ್ಛಾ ಶಕ್ತಿ, ಆದಿಶಕ್ತಿ, ಪರಾಶಕ್ತಿ ಮತ್ತು ಚಿತ್‌ಶಕ್ತಿ ಎಂದು ಆರು ಇರು ತ್ತವೆ. ಹಿಂದೆ ಕ್ರಮಾಂಕ ೧೨ ನೆಯದರಲ್ಲಿ ಶಕ್ತಿ ಎಂಬುದು ಹೇಳಲ್ಪ ಟ್ಟಿದೆ. ಇದರ ಆರು ಸ್ವರೂಪಗಳೇ ಇವು ಇರುತ್ತವೆ. (೧) ಕರ್ಮೇಂ ದ್ರಿಯಗಳಾದ ವಾಕ್, ಪಾದ, ಪಾಣಿ, ಪಾಯು, ಗುಹ್ಯ ಇವುಗಳ ವ್ಯಾಪಾರಗಳು ಈ ಕ್ರಿಯಾ ಶಕ್ತಿಯಿಂದ ಜರಗುತ್ತವೆ. ಬಾಹ್ಯ ಕ್ರಿಯೆ ಗಳು ಈ ಶಕ್ತಿಯಿಂದಲೇ ನಡಿಯುತ್ತವೆ. (೨) ಆದರೆ ಈ ಕರ್ಮೇಂ ದ್ರಿಯಗಳು ಸ್ವತಂತ್ರವಾಗಿ ವ್ಯವಹರಿಸಲಾರವು. ಅವುಗಳಿಗೆ ಜ್ಞಾನ ಶಕ್ತಿಯ ಸಹಾಯವು ಬೇಕು. ಶ್ರೋತ್ರ, ತ್ವಕ್ಚು, ನೇತ್ರ, ಜಿಹ್ವೆ, ಘ್ರಾಣ ಇವುಗಳು ಜ್ಞಾನೇಂದ್ರಿಯಗಳು. ಈ ಜ್ಞಾನೇಂದ್ರಿಯಗಳಿಂದಲೇ ಜ್ಞಾನ ಶಕ್ತಿಯು ಬಲಪಡುವದು. ಕ್ರಿಯಾ ಶಕ್ತಿಗೆ ಈ ಜ್ಞಾನ ಶಕ್ತಿಯ ಸಹಾ ಯವು ಅತ್ಯವಶ್ಯವಾಗಿ ಬೇಕು. ಇಲ್ಲದಿದ್ದರೆ ಮನುಷ್ಯನ ಕ್ರಿಯೆಗಳು ತಪ್ಪಿ ಹೋಗುವವು. (೩) ಕ್ರಿಯಾ ಶಕ್ತಿ ಮತ್ತು ಜ್ಞಾನ ಶಕ್ತಿ ಇವುಗಳ ಚಲನೆಗೆ ಇಚ್ಛಾ ಶಕ್ತಿಯೂ ಅವಶ್ಯವಾದುದು. ಮನುಷ್ಯನಿಗೆ ಇಚ್ಛೆ

ಬಾಹೂರಬೊಮ್ಮಯ್ಯನೀ ಬಂದನೆಂದೆಂಬ
ಸಾಹಸಾಭರಣನೀ ಬಂದಪಂ ಸಾರೆಂಬ
ಉರುವಣೆಯ ಸಡಿಯುರವಣ್ಮಿಂದೆ ಬರುತಿರೆ ಕಂಡು
ಪಿರಿದು ರಭಸಂಗಳಾಗಲ್ಕೆ ಬೊಬ್ಬುಳಿಗೊಂಡು
ಗಿಳಿ ತುಂಬಿ ಕೋಗಿಲೆಯ ಹಿಂಡು ಕೆದರಿದ ತೆರದಿ
ಕಳಹಂಸೆ ಕೇಕಿ ಕೋಕಾಳಿ ಹೆದರಿದ ತೆರದಿ
ಎಲ್ಲಾ ಜನಂ ಕೆದರಿ ಚಲ್ಲೆ ತಾನೈತಂದು
ಸಲ್ಲೀಲೆಯಿಂದೆ ಶಂಕರನನಪ್ಪುತ್ತಂದು
ಪಾದೋದಕಂ ಪ್ರಸಾದಂಗಳಂ ಕೈಕೊಂಡು
ಆದರಂ ಮಿಗೆ ಶೈವಸಂಪದವನೆಡೆಗೊಂಡು
ಇರುತಿರಲ್ಬೋಗಮಂಟಪದೊಳಗೆ ನಿಲಲಲ್ಲಿ
ಹರನ ಮುಂದಣ ಪಾತ್ರವೇಕಾಡದೆನಲಲ್ಲಿ

ಕೇಳುತೆ ಸುಖಪ್ರಿಯಂ ಸುಖವಳಿದು ನೆರೆ ನೊಂದು
ಆಳನಟ್ಟಳಲಿಂದ ಮುಳಿದು ನುಡಿದಪನಂದು
ಎಲೆ ಭಕ್ತ ಶಿವಭಕ್ತ ಜನದ ಸುಖಮಂ ಕೆಡಿಸಿ
ನೆಲೆಗೊಂಡ ನೃತ್ಯಮಂ ನೋಳ್ಪ ಭರವಂ ನಿಲಿಸಿ
ಓಲಗದ ಸುಖಲತೆಯನುಡಿಗಿ ಕುಡಿಯಂ ಕುಯ್ದು
ಆಲೋಕಿಸುವ ಜನದ ಕಣ್ಗೆ ಕಸವಂ ಹೊಯ್ದು
ಇನ್ನಾಡವೇಳ್ದೊಡಂ ಪಾತ್ರವೇಕಾಡುವುದು
ಮುನ್ನೊಪ್ಪುವೀ ನೃತ್ಯವೇಕೆ ಹಸನಾದಪುದು
ಹೊಸೆದ ಹೂ ನವ ಪರಿಮಳಂಗುಡಲ್ಬಲ್ಲುದೇ
ಬಿಸಿಲೊಳ್ಕೈದಿಲ್ವಿಕಾಸಮನೈದಬಲ್ಲುದೇ
ಇಂತು ಸುಖಮಂ ಕೆಡಿಸಿ ನೀ ಮಾಡಿತೇನಿಲ್ಲಿ
ಕಂತುಹರನಲ್ಲಿ ಪಡೆದರ್ಥವೇನಿಂತಿಲ್ಲಿ
ಎನೆ ಕೇಳ್ದು ಬಾಹೂರಬೊಮ್ಮಿತಂದೆಗಳಂದು
ಮನದೊಳಗೆ ಸುಯ್ದು ಭಕ್ತನನೀಕ್ಷಿಸುತೆ ನಿಂದು
ದೇವ ಎನ್ನಂ ದೂರಿ ತೋರವೇಳ್ಪುದು ನಿನಗೆ
ದೇವ ಬೆಸಸುವುದು ಬೆಸಸುವುದಂಜಲೇಕೆನಗೆ

# ಪ್ರಸ್ತಾವನೆ.

ಈ ಗ್ರಂಥದಲ್ಲಿ ನಾವು ಏಲೇಶಕೇತಯ್ಯನ ೨೩ ವಚನಗಳನ್ನು ಪ್ರಸಿದ್ಧಿಸಿದ್ದೇವೆ. ಇವುಗಳು ಮಹೇಶ್ವರ ಸ್ಥಲವನ್ನೇ ಅನುವರ್ತಿಸಿರುತ್ತವೆ. ಈ ಸ್ಥಲದ ಮುಖ್ಯ ವೈಶಿಷ್ಟ್ಯವು ಕೈಕೊಂಡ ವ್ರತವನ್ನು ಏಕ ನಿಷ್ಠೆಯಿಂದ ಪಾಲಿಸುವದೇ ಇದ್ದು ಈ ವಚನಗಳು ಈ ಭಾವವನ್ನೇ ವ್ಯಕ್ತಪಡಿಸುತ್ತವೆ. ಇವುಗಳನ್ನು ನಾವು ಬೇರೆ ಬೇರೆ ವಚನಗಳ ಸಂಗ್ರಹ ಗ್ರಂಥಗಳೊಳಗಿಂದ ಆಯ್ದು ಇದರಲ್ಲಿ ಪ್ರಸಿದ್ಧಿಸಿದ್ದೇವೆ. ಇವುಗಳಿಗೂ ರೆಮ್ಮವ್ವೆಯ ವಚನಗಳಿಗೂ ಬಹಳ ಸಾಮ್ಯವಿದೆ. ಉಭಯತರೂ ಭಕ್ತನು ತಾನು ಕೈಕೊಂಡ ಕಾರ್ಯಗಳನ್ನು ದೃಢಚಿತ್ತದಿಂದ ನಿರ್ವಹಿಸಬೇಕೆಂದು ಅಭಿಪ್ರಾಯಪಡುತ್ತಾರೆ. ಉಭಯತರೂ ಮಹೇಶ್ವರ ಸ್ಥಲದವರು. ಆದ್ದರಿಂದ ಈ ವಚನಗಳೆಲ್ಲವೂ ಮಹೇಶ್ವರಸ್ಥಲದ ಭಾವವನ್ನು ವ್ಯಕ್ತಪಡಿಸುತ್ತಿದ್ದು ಅವುಗಳನ್ನು ನಾವು ಆದರ ಆರು ಸ್ಥಲಗಳಾಗಿ ವಿಂಗಡಿಸಿ ಆ ರೀತಿ ಕ್ರಮಗೊಳಿಸಿ ಇದರಲ್ಲಿ ಅಚ್ಚು ಹಾಕಿದ್ದೇವೆ.

ಈ ವಚನಕಾರನ ಚರಿತ್ರೆಯು "ಬಸವಪುರಾಣದ ಕಥಾಸಾಗರ" ಎಂಬ ಗ್ರಂಥದಲ್ಲಿ ಮಾತ್ರ ಉಪಲಬ್ಧವಿರುತ್ತದೆ. ಅದರಲ್ಲಿ ಹೇಳಲ್ಪಟ್ಟಿರುವದು ಏನೆಂದರೆ:—

"ಏಲೇಶ್ವರದ ಕೇತಯ್ಯನು ಒಬ್ಬ ರಾಜನು ಕೊಟ್ಟ ಲಿಂಗಮುದ್ರೆಯ ಭೂಮಿಯಲ್ಲಿ ಆರಂಬವ ಮಾಡಿಕೊಂಡು ವೀರಶೈವರ ಪಾಡುತ ವೀರಶೈವರ ನೋಡುತ ವೀರಶೈವರ ಗೀತವ ಕೇಳುತ ವೀರಶೈವರಿಗೆ ನೀಡುತ ಆರವತ್ತುನಾಲ್ಕು ಶೀಲಕ್ಕೆ ಮುಖ್ಯವಾಗಿ ಜಂಗಮ ಪ್ರಸಾದವ ಕೊಂಬುತ ಶೈವರಿಗೆ ತಲೆವಾಗ, ಶೈವರ ಕೂಡೆ ಮಾತನಾಡದೆ ಇರಲು, ಅವರು ನೆರೆದು ನಮ್ಮ ಜರೆಯುತ್ತ ಇದ್ದಾನೆ ಎಂದು ಸೂರ್ಯನ ಕತ್ತಲೆ ಮುತ್ತುವಂತೆ ಕೇತಯ್ಯಗಳ ಮುತ್ತಿಕೊಳಲು ಕೇತಯ್ಯನು ವೀರಶೈವವಧಿಕವೆಂದು ವಾದದಲ್ಲಿ ಗೆದ್ದು ಶಿವನ ತೃಪ್ತಿಯ ಪಡೆದನು."

ಏಲೇಶಕೇತಯ್ಯನ ಸ್ಥಳವು ಯಾದಗಿರಿಯ ಗ್ರಾಮಕ್ಕೆ ಸಮೀಪಕ್ಕಿರುವ ಏಳೇರಿ ಎಂಬುದಿದೆ. ಇಲ್ಲಿಯೇ ಕೇತಯ್ಯನು ವಾಸಮಾಡಿ

ಕೊಂಡಿರಬಹುದೆಂದು ತೋರುತ್ತದೆ. ಈ ವಿಷಯಸಂಬಂಧವಾಗಿ ವಾಚಕರು “ರೆಮ್ಮವ್ವೆಯ ವಚನಗಳು” ಇದರ ಪ್ರಸ್ತಾವನೆಯನ್ನೂ ನೋಡಬೇಕೆಂದು ನಮ್ಮ ಸೂಚನೆ ಇದೆ.

ವಿಜಾಪುರ
೯-೭-೧೯೪೧

ಫ. ಗು. ಹಳಕಟ್ಟಿ
ಸಂಪಾದಕ.

# ಭಕ್ತ ಸ್ಥಲ.

(೧) ಆವ ಲಿಂಗವ ತೊಟ್ಟಡೇನು ? ಪಂಚಾಂಗನಿಯರ ಸೋಂಕ. ಕರವಿರ್ದಡೇನು ? ಮತ್ತೊಂದನಪಹರಿಸಿ ತೆಗೆಯು. ಕರ್ಣವಿರ್ದಡೇನು ? ಮತ್ತೊಂದು ಶಬ್ದವ ಕೇಳ. ಕಂಗಳಿದ್ದಡೇನು? ಲಿಂಗವಲ್ಲದುದ ನೋಡ. ನಾಸಿಕವಿದ್ದಡೇನು ? ಅರ್ಪಿತವಲ್ಲದುದ ವಾಸಿಸ. ಜಿಹ್ವೆ ಇರ್ದಡೇನು ? ಪ್ರಸಾದವಲ್ಲದುದ ಸ್ವೀಕರಿಸ. ಇಂತಿವರೆಲ್ಲರಲ್ಲಿ ಸರ್ವಾವಧಾನಿಯಾಗಿ ನಡೆ ನುಡಿ ಅರಿವು ಶುದ್ಧಾತ್ಮನು ಏಲೇಶ್ವರ ಲಿಂಗ.

ಭಾವ:— ವಚನಗಳಲ್ಲಿ 'ಅವಧಾನ', 'ಅವಧಾನಿ', 'ಸರ್ವಾವಧಾನಿ' ಎಂಬ ಶಬ್ದಗಳು ಪದೇ ಪದೇ ಬರುತ್ತವೆ. ಅವಧಾನವೆಂದರೆ ಮನಸ್ಸಿನ ಏಕಾಗ್ರತೆ. ಇದು ಅದರ ಸರಳಾರ್ಥವು. ಆದರೆ ಮನಸ್ಸಿನ ಏಕಾಗ್ರತೆ ಎಂದರೆ ಆವ ಕಾರ್ಯಗಳನ್ನು ಮಾಡದೆ, ಒಂದು ವಸ್ತುವನ್ನು ಧ್ಯಾನಿಸುತ್ತ ಸುಮ್ಮನೆ ಕುಳ್ಳಿರುವದು ಅಲ್ಲ. ಹೀಗೆ ನಡೆಯುವವನು ಸೋಮಾರಿ ಎಂದು ವಚನಕಾರರು ಭಾವಿಸಿ ಇಂಥವನನ್ನು ಹಳಿಯುತ್ತಾರೆ. ಅವಧಾನದಲ್ಲಿ ಇಂದ್ರಿಯಗಳ ಚಟುವಟಿಕೆ ಇರಬೇಕು. ಈ ಚಟುವಟಿಕೆಯ ರೀತಿಯನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ನೈತಿಕಾಚಾರವುಳ್ಳವನಾಗಿ ವರ್ತಿಸಿದಲ್ಲಿ ಇಂದ್ರಿಯಗಳ ಯೋಗ್ಯ ಚಟುವಟಿಕೆ ಎಂದು ವಚನಕಾರನ ಅಭಿಪ್ರಾಯವಿದೆ. ಹೀಗೆ ವರ್ತಿಸುವವನು 'ಸರ್ವಾವಧಾನಿ' ಎಂದು ಇಲ್ಲಿ ಹೇಳುತ್ತಾನೆ. ಇಂಥವನ ಅರಿವು ಶುದ್ಧವಾಗುವದು. ಹೀಗೆ ಅದು ಶುದ್ಧವಾಗಲು ಅವನು ಪರಬ್ರಹ್ಮಸ್ವರೂಪನೇ ಆಗುವನು.

(೨) ಬಸವೇಶ್ವರನಿಂಗೆ ಸರ್ವಗುಣಶೀಲ. ಚನ್ನಬಸವೇಶ್ವರಂಗೆ ದಿವ್ಯಜ್ಞಾನಗುಣಶೀಲ. ಮಡಿವಾಳಯ್ಯಂಗೆ ವೀರಗುಣಶೀಲ. ಅಜಗಣ್ಣಯ್ಯಂಗೆ ಐಕ್ಯಗುಣಶೀಲ. ಸಿದ್ಧರಾಮಯ್ಯಂಗೆ ಯೋಗಗುಣಶೀಲ. ನಿಜಗುಣಂಗೆ ಆತ್ಮಗುಣಶೀಲ. ಚಂದಯ್ಯಂಗೆ ವೈರಾಗ್ಯಗುಣಶೀಲ. ಘಟ್ಟಿವಾಳಂಗೆ ತ್ರಿವಿಧ ಗುಣಶೀಲ. ಮೋಳಿಗಯ್ಯಂಗೆ ಭೇದಗುಣಶೀಲ. ಅಕ್ಕಗಳಿಗೆ ನಿರ್ವಾಣಗುಣಶೀಲ. ಮಿಕ್ಕಿದ ಪ್ರಮಥರಿಗೆಲ್ಲಕ್ಕು ಸ್ವತಂತ್ರ-ಗುಣಶೀಲ. ಎನಗೆ ಏಲೇಶ್ವರ ಲಿಂಗವು ಕೊಟ್ಟದ್ದೊಂದೇ ವಿಶ್ವಾಸ ಶೀಲ.

ಭಾವ:-— ಪ್ರತಿಯೊಬ್ಬನಿಗೆ ಕೆಲವೊಂದು ವಿಶಿಷ್ಟ ಗುಣವಿರುತ್ತದೆ. ಒಬ್ಬನು ಶ್ರದ್ಧೆಗೆ ಒಲಿದವನಿದ್ದರೆ, ಇನ್ನೊಬ್ಬನು ಯೌಗಿಕ ಗುಣಗಳುಳ್ಳವನಿರುತ್ತಾನೆ. ಮತ್ತೊಬ್ಬನು ವೈರಾಗ್ಯಕ್ಕೆ ಒಲಿದವನಿರುತ್ತಾನೆ. ಹೀಗೆ ಜನರು ಭಿನ್ನ ಭಿನ್ನ ಸ್ವಭಾವದವರಿರುತ್ತಾರೆ. ಆದರೂ ಅವರು ತಮ್ಮ ತಮ್ಮ ಪ್ರಭಾವದಲ್ಲಿಯೇ ಇದ್ದುಕೊಂಡು ಅದರಲ್ಲಿಯೇ ತಮ್ಮ ಹೆಚ್ಚಳವನ್ನು ಹೊಂದಬಹುದು. ಈ ತತ್ವಕ್ಕನುಸಾರವಾಗಿ ಷಟ್‌ಸ್ಥಲಶಾಸ್ತ್ರದ ಯೋಜನೆ ಇದೆ. ಆದರೆ ವಚನಕಾರನು ತನ್ನ ಈ ವಚನದಲ್ಲಿ ತಾನು ಹೆಚ್ಚಿನ ಸ್ಥಲದವನಲ್ಲ, ಆದರೆ ವಿಶ್ವಾಸ ಒಂದು ಮಾತ್ರ ತನ್ನಲ್ಲಿದೆ, ಆದರಿಂದಲೇ ತಾನು ಮೋಕ್ಷವನ್ನು ಹೊಂದುವೆನೆಂದು ಹೇಳುತ್ತಾನೆ.

(೩) ಬೇಡಿ ಮಾಡುವ ಭಕ್ತನಿರುಹೆಂತೆಂದಡೆ ಈಗಾಗಲೆಂಬ ಬಯಕೆ ಮರೆತು:ಸತಿಸುತರಿಗೆನ್ನದೆ ಇಂತೀ ಭಕ್ತಿಯೇ ಗತಿಯಾಗಿ ಸತ್ಯವೇ ಒಡಲಾಗಿ ನಿತ್ಯಾನಿತ್ಯವ ತಿಳಿದು ಮಾಡುವ ಸದ್ಭಕ್ತ ಬೇಡಿಹೆನೆಂಬ ಭಾವವಿಲ್ಲ. ಏಲೇಶ್ವರ ಲಿಂಗವ ಮುಟ್ಟುವ ಗೊತ್ತಿನ ಬಚ್ಚಿಟ್ಟ ಬಯಕೆ.

ಭಾವ:— ಭಕ್ತನ ರೀತಿಯು ಸ್ವಾರ್ಥರಹಿತವಾಗಿರುತ್ತದೆ. ತನಗೋಸ್ಕರ ಮಾಡುವ ಭಾವವು ಅವನಲ್ಲಿಲ್ಲ. ಅವನಿಗೆ ಭಕ್ತಿಯೇ ಗತಿಯು, ಸತ್ಯವೇ ಅವನ ಶರೀರವು. ಸತ್ಯಾಸತ್ಯವಾವುದು ಎಂಬುದನ್ನು ಅವನು ತಿಳಿಯುತ್ತಾನೆ. ಯಾರನ್ನೂ ಅವನು ಯಾಚಿಸುವದಿಲ್ಲ. ಅವನು ಸ್ವತಂತ್ರನು.

---

## ಮಹೇಶ್ವರ ಸ್ಥಲ.

(೪) ತಾವರೆಯ ಎಲೆಯ ಮೇಲಣ ನೀರಿನಂತೆ, ಎನ್ನ ಮನವಾವ ವ್ರತವ ನೆಮ್ಮದಿದೆ ನೋಡಾ! ಅಯ್ಯಾ ಎನ್ನ ಮನ ಸಂದೇಹದಿಂದ ಮಹಾವ್ರತಿಗಳ ಸಂಗ ಸುಸಂಗಕ್ಕೆ ಬಾರದಿದೆ ನೋಡಾ! ಎಲೆ ಅಯ್ಯ ಕ್ರಿಯೆಯನೊಲ್ಲದು, ಅರಿವನರಿಯದು. ಬರುದೊರೆ ಹೋಹ ಎನ್ನ ಮನ ಕ್ಕೊಂದು ಕುರುಹು ತೋರಾ ಏಲೇಶ್ವರಲಿಂಗಾ.

ಭಾವ:— ನಿಷ್ಠೆ ಎಂದರೆ ಹಿಡಿದ ಕಾರ್ಯಗಳನ್ನು ಬಿಡದಿರುವದು. ಇದು ಮಹೇಶ್ವರನ ಲಕ್ಷಣವು. ಆದರೆ ಮನುಷ್ಯನು ತಾನು ಮಾಡುವ ಕಾರ್ಯದಲ್ಲಿ ಮನಸ್ಸು ಹಾಕುವದಿಲ್ಲ. ತಾವರೆಯ ಮೇಲಿನ

ಸೀರಿನಂತಿರುತ್ತಾನೆ. ಅವನಲ್ಲಿ ತನ್ನ ಕಾರ್ಯದ ಬಗ್ಗೆ ವಿಶ್ವಾಸವಿಲ್ಲ. ಇಂಥವನಿಗೆ ಅರಿವು ಉಂಟಾಗದು. ಆದರೆ ಅವನಿಗೊಂದು ಕುರುಹು ಅಂದರೆ ಧ್ಯೇಯವು ಬೇಕು. ಇವನ್ನು ತನ್ನೆದುರಿಗಿಟ್ಟುಕೊಂಡು ಆಚರಿಸಿದಲ್ಲಿ ಅವನಿಗೆ ಕಾರ್ಯಗಳು ಸಾಧ್ಯವಾಗುವವು.

(೫) ಎನ್ನ ನೇಮಕ್ಕೆ ತಪ್ಪದ ಗುರು. ಎನ್ನ ಶೀಲಕ್ಕೆ ತಪ್ಪದ ಲಿಂಗ. ಎನ್ನ ವ್ರತಾಚಾರಕ್ಕೆ ತಪ್ಪದ ಜಂಗಮ. ಎನ್ನ ಮನೋಮೂರ್ತಿ ಹೀಗಲ್ಲದೆ ಕ್ರಿಯೆಗೆ ನಿಲ್ಲದ ಗುರು ಆತ ಭವಭಾರಿ. ಆಚಾರಕ್ಕೆ ಸಲ್ಲದ ಲಿಂಗ ಅದು ಪಾಷಾಣ. ವ್ರತಾಚಾರದ ದೆಸೆಯ ದೂಷಿಸುವ ಜಂಗಮ ವೇಷದ ಘಾತಕ. ಇಂತು ವ್ರತಕ್ಕೆ ಎನ್ನಾಚಾರಕ್ಕೆ ಎನ್ನ ಭಾವಕ್ಕೆ ಸಮಕ್ರಿಯಾವಂತನಾಗಿ ಸಮಶೀಲವಂತನಾಗಿ ಸಮಭಾವವಂತನಾಗಿ, ಸಮರಥ ಸತ್ಪಥನಾಗಿಪ್ಪಾತನೇ ಎನ್ನ ತ್ರಿವಿಧಕ್ಕೊಡೆಯ. ಈ ಗುಣಕ್ಕೊಡೆಯ ಈ ಗುಣಕೊಪ್ಪದ ತ್ರಿವಿಧದ ಕಚ್ಚುಟಕ್ಕೆ ಮೆಚ್ಚಿ ಹೋರುವ ಎನ್ನ ವ್ರತಾಚಾರಕ್ಕನುಕೂಲವಾಗದನ ಏಲೇಶ್ವರಲಿಂಗವಾಯಿತ್ತಾದಡೂ ಇಹಪರಕ್ಕೆ ಹೊರಗೆಂದು ಡಂಗುರವಿಕ್ಕಿದೆ.

ಭಾವ:— ವಚನಕಾರನು ಇಲ್ಲಿ ಗುರುಲಿಂಗ ಜಂಗಮದ ಕಾರ್ಯಗಳನ್ನು ಒಂದು ವಿಧವಾಗಿ ವಿವರಿಸಿದ್ದಾನೆ. ಮನುಷ್ಯನ ಕ್ರಿಯೆಗಳಲ್ಲಿ ಅವನು ನೇಮ, ಶೀಲ, ವ್ರತ ಎಂದು ಮೂರು ವರ್ಗಗಳನ್ನು ಮಾಡಿದ್ದಾನೆ. ನೇಮವು ಸ್ಥೂಲವಾದುದು, ಅದಕ್ಕೂ ಸೂಕ್ಷ್ಮವಾದುದು ಶೀಲ, ಈ ಶೀಲಕ್ಕಿಂತಲೂ ಸೂಕ್ಷ್ಮವಾದುದು ವ್ರತ, ಹೀಗೆ ಅವನು ಭಾಗಗಳನ್ನು ಮಾಡಿದ್ದಾನೆ. ನೇಮವು ಗುರುವಿಗೆ ಸಂಬಂಧಿಸಿದ್ದು, ಶೀಲವು ಲಿಂಗಕ್ಕೆ ಸಂಬಂಧಿಸಿದ್ದು, ವ್ರತವು ಜಂಗಮಕ್ಕೆ ಸಂಬಂಧಿಸಿದ್ದು, ಎಂದು ಅವನು ಹೇಳುತ್ತಾನೆ. ಈ ವಿಧವನ್ನು ಅರಿತು ಆಚರಿಸಬೇಕೆಂದು ವಚನಕಾರನ ಅಭಿಪ್ರಾಯವು.

(೬) ತಾ ನೇಮವ ಮಾಡಿಕೊಂಡು, ಕೃಷಿಬೆವಸಾಯವಿಲ್ಲದೆ ಒಡೆಯರ ಕಟ್ಟಣೆಯುಪ್ಪರವದಿಗೊಡಲೆಂದು(?) ಹಿಂಗಲ್ಲದೆ ಎನ್ನ ಒಡಲ ಹೊರೆದೆನೆಂದು ಹೋದ ತಾವಿನಲ್ಲಿ ಓಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೇ ಬಲ್ಲಿರಿ ಏಲೇಶ್ವರ ಲಿಂಗವೇ.

ಭಾವಃ— ನೇಮ ಮಾಡುವವನು ಕಾಯಕವನ್ನು ಆಚರಿಸಬೇಕು. ಅಂದರೆ ಸ್ವಾವಲಂಬಿಯಾಗಿರಬೇಕು. ಅವನು ಭಿಕ್ಷೆಯನ್ನು ಬೇಡಬಾರದು. ಶೀಲವಂತರೆನಿಸಿಕೊಳ್ಳುವವರೂ ಕೂಡ ಇಂಥವನಿಗೆ ಭಿಕ್ಷೆಯನ್ನು ಹಾಕಬಾರದು ಎಂಬ ಭಾವವು ಇದರಲ್ಲಿದೆ. ಈ ವಚನವು ಕೆಲವೆಡೆಗಳಲ್ಲಿ ಅಶುದ್ಧವಾಗಿದೆ.

(೭) ಸತಿಸಂತಪುರುಷರಿಗೆಲ್ಲಕ್ಕು ಬೇರೊಂದೊಡಲುಳ್ಳನ್ನಕ್ಕ ವ್ರತದ ಕ್ರಿ. ಭಾವಬೇಕಾದಲ್ಲಿ ಬೇರೊಬ್ಬೊಡೆಯರ ಕಟ್ಟಣೆ ಬೇಕು. ಸತ್ಪಥಕ್ಕೆ ಇದು ಹಾದಿ, ಪ್ರಶಸ್ಥಲದ ಭಕ್ತಿ ಯುಕ್ತಿ, ಏಲೇಶ್ವರಲಿಂಗವ ಮುಟ್ಟುವ ಗೊತ್ತು.

ಭಾವಃ— ವೀರಶೈವ ಧರ್ಮದ ಮೇರೆಗೆ ಸ್ತ್ರೀಪುರುಷರು ಸ್ವತಂತ್ರರು. ಆದ್ದರಿಂದ ಅವರ ವ್ರತಗಳು, ಕ್ರಿಯೆಗಳು ಮತ್ತು ಭಾವಗಳು ಬೇರೆ ಬೇರೆ ಇರಬಹುದು. ಈ ಸ್ಥಿತಿಯಲ್ಲಿ ಅವರು ತಮ್ಮ ತಮ್ಮ ವಿಚಾರಗಳಿಗನುಕೂಲರಾದ ಒಡೆಯರನ್ನು ಆರಿಸಿಕೊಂಡು ತಮ್ಮ ತಮ್ಮ ಕ್ರಿಯೆಗಳನ್ನು ಆಚರಿಸತಕ್ಕದ್ದು.

(೮) ಭಕ್ತರ ಆಶ್ರಯಕ್ಕೆ ಭಕ್ತರು ಹೋಹಲ್ಲಿ ಅವರ ನಿತ್ಯ ಕೃತ್ಯವ ವಿಚಾರಿಸಿ ತಮ್ಮ ನೇಮಕ್ಕೆ ಅವರ ಭಾವ ಒಂದಾದಲ್ಲಿ ತಮ್ಮ ಕೃತ್ಯದ ಒಡೆಯರು ಮುಂತಾಗಿ ಹೋಗಬೇಕು. ಹೀಗಲ್ಲದೆ ಭಕ್ತರ ಆಶ್ರಯಕ್ಕೆ ಒಡೆಯರ ಕಟ್ಟಣೆ ಉಂಟೆಂದು ತಮ್ಮ ಒಡೆಯರ ಬಿಟ್ಟು ತುಡುಗುಣಿತನದಲ್ಲಿ ತಿಂಬವಂಗೆ ವ್ರತ ಉಂಟೇ? ಇಂತೀ ಬಿಡುಮುಡಿಯ ಭಂಡರ ನೊಪ್ಪ ಏಲೇಶ್ವರಲಿಂಗ.

ಭಾವಃ— ಒಂದೇ ವಿಧದ ಭಾವ ಮತ್ತು ವಿಚಾರವುಳ್ಳವರು ಒಟ್ಟಾಗಿ ಸೇರಿಕೊಂಡು ತಮ್ಮ ಕೃತ್ಯಗಳನ್ನು ನಡಿಸಬೇಕೆಂದು ಈ ವಚನದ ಭಾವಾರ್ಥವಿದೆ. ಇಂಥ ಸಮಯದಲ್ಲಿ ಬರೇ ಭಕ್ತರಷ್ಟೇ ಅಲ್ಲ, ಅವರ ಒಡೆಯರೂ ಕೂಡ ಸೇರಿ ಕಾರ್ಯಮಾಡತಕ್ಕದ್ದು.

(೯) ನಾನಾಪ್ರಭೇದ ವ್ರತದ ಸಾಧಿಸಿ ಭೇದಿಸುವಲ್ಲಿ ಬಾಹ್ಯ ಅಂತರಂಗ ಉಭಯ ಏಕವಾಗಿ ಜಾಗ್ರತ್ ಸ್ವಪ್ನ, ಸುಷುಪ್ತಿಗಳಲ್ಲಿ ಕೊಂಡ ವ್ರತಕ್ಕೆ ಭಿನ್ನಭಾವವಿಲ್ಲದೆ ಎಲ್ಲ ಎಚ್ಚರಿಕೆಯಲ್ಲಿ ಬಲ್ಲವನಾಗಿ ಅರಿದು ಬಿಟ್ಟು ಮರೆದೆನೆಂದು, ಮತ್ತರಿದು ನಡೆದಿಹೆನೆಂಬುದು ವ್ರತಕ್ಕೆ ಅದೇ

ಮರವೆ. ಇಲ್ಲವೆ ಜೇಡನ ಮುಂದಣ ನೆಯಿಗೆಯು ನೂಲೇ? ಲೋಹದ ಭಾಂಡವೇ? ಅದು ಕುಂಭದ ಘಟದಂತೆ, ವ್ರತ ತಪ್ಪಿದಲ್ಲಿಯೇ ತಪ್ಪಿನೊಪ್ಪವಿಲ್ಲ. ಏಲೇಶ್ವರ ಲಿಂಗನಾಯಿತ್ತಾದಡೂ ಧಿಕ್ಕರಿಸಿಬಿಡುವೆನು.

ಭಾವ:— ಒಂದು ವ್ರತವನ್ನು ಕೈಕೊಂಡ ಬಳಿಕ ಅದರಂತೆಯೇ ನಡೆಯಬೇಕು. ಅದನ್ನು ಒಮ್ಮೆ ಹಿಡಿಯುವದೂ ಮತ್ತೊಮ್ಮೆ ಬಿಡುವದೂ ಮಾಡಕೂಡದು. ಅದರಲ್ಲಿ ನಿಶ್ಚಯ ಬೇಕೆಂಬ ಭಾವವಿದೆ.

(೧೦) ಒಡೆಯರು, ಭಕ್ತರು ತಾವೆಂದು ಅಡಿಮೆಟ್ಟಿ ಹೋಹಲ್ಲಿ ತಡೆಯಿತ್ತು ಶಕುನವೆಂದು ಉಳಿದಡೆ ಕಾಗೆ ವಿಹಂಗ ಮಾರ್ಜಾಲ ಮುಸೆವಕ್ಕಿ ಗಾರ್ದಭ ಶ್ವಾನ ಸಂದೇಹಿಗಳು ಮೊದಲಾದ ಸಂಕಲ್ಪಕ್ಕೊಳಗಾದಲ್ಲಿ ವ್ರತಕ್ಕೆ ಭಂಗ ಆಚಾರಕ್ಕೆ ದೂರ. ಅದೆಂತೆಂದಡೆ, ಅಂಗಕ್ಕೆ ಆಚಾರ ಸಂಬಂಧಿಸಿದಲ್ಲಿ ಮನಕ್ಕೆ ಅರಿವು, ಅರಿವಿಂಗೆ ವ್ರತವ ಮಾಡಿದಲ್ಲಿ ಬೇರೊಂದು ಪರಿಹರಿಸುವ ನಿಮಿತ್ಯ ಉಂಟೇ? ಇಂತೀ ಸತ್ಕ್ರಿಯಾವಂತಗೆ ಕಷ್ಟಜೀವದ ಲಕ್ಷಣದಲ್ಲಿ ಚಿತ್ತ ಮುಚ್ಚಿಹನ್ನಕ್ಕ ತನು ಆಚಾರ ಭ್ರಷ್ಟ ಏಲೇಶ್ವರಲಿಂಗಕ್ಕೆ ದೂರ.

ಭಾವ:— ವ್ರತವನ್ನು ಕೈಕೊಂಡ ಬಳಿಕ ಅದನ್ನು ಮಾಡುವಲ್ಲಿ ಶಕುನ, ಅಪಶಕುನವೆಂದು ಭಾವಿಸಬಾರದು. ಹೀಗೆ ಸಂದೇಹ ಮಾಡಿದ್ದಾದರೆ ಅದು ವ್ರತಕ್ಕೆ ಭಂಗವು - ಅಂಗಕ್ಕೆ ಆಚಾರ ಮತ್ತು ಮನಕ್ಕೆ ಅರಿವು, ಅರಿವಿಗೆ ವ್ರತವು ಇರತಕ್ಕದ್ದು. ಹೀಗೆ ಜರಗಿದ ಕೂಡಲೆ ಯಾವ ಶಕುನವನ್ನೂ ನೋಡತಕ್ಕದ್ದಲ್ಲ.

(೧೧) ಹೆಂಡತಿ ಗಂಡನ ಒಡೆಯರೆಂದು ಕೂಡಿಕೊಳ್ಳುವ ಜಗಭಂಡೆಯ ನೋಡಾ. ಕೂಟಕ್ಕೆ ಪುರುಷನಾಗಿ ನೇಮಕ್ಕೆ ಮಡಿಯುತನ ಉಂಟೆ? ಇಂತೀ ಜಾರಿಯ ನೇಮ, ಮೂತ್ರದಪ್ಪರಕ್ಕೀಡು. ಇಂತೀ ದುರಾಚಾರಿಗಳು ಜಂಗಮವೆಂದು ಅವರೊಡನೆ ಕೂಡಿಕೊಂಡುಂಬ ಜಗಭಂಡರ ನೇಮ ಸುಸಂಗವಲ್ಲ ಏಲೇಶ್ವರಲಿಂಗಕ್ಕೆ.

ಭಾವ:— ವ್ರತವನ್ನು ಮಾಡುವಲ್ಲಿ ಸದಾಚಾರವಿರಬೇಕು. ಸ್ತ್ರೀಯಳೂ ಸದಾಚಾರಿಯಾಗಿರಬೇಕು. ತನ್ನ ಗಂಡನ ಒಡೆಯರೆಂದು ಅವರೊಡನಿರುವದು ಜಾರತ್ವವು. ಮತ್ತು ಇಂಥ ಜಂಗಮರೂ ಭಂಡರು.

(೧೨) ಸರ್ವಾಂಗವಾದ ಮುಖ ಆತ್ಮವಾದ ಇಂತೀ ವ್ರತನೇಮದ, ಕಟ್ಟಿನಲ್ಲಿ ಇಪ್ಪವನ ಇರವು ತನ್ನ ನೇಮಕ್ಕೆ ನೇಮದನನ್ನೀಕರಿಸಿದವ ನಲ್ಲಿ ಅಂಗ ಬಂಧವ ತೆಗದು ತೋರುವುದು. ಮುಖ ಬಂಧವ ತೆಗೆದು ನೋಡುವುದು. ಆತ್ಮ ಬಂಧನ ಬಿಟ್ಟು ಮಾತನಾಡುವುದು. ಇಂತೀ ಭಾಷೆಗೆ ಭಾಷೆ ಒಳಗಾದವನಲ್ಲ. ಇದು ನಿಹಿತದ ವ್ರತ ಏಲೇಶ್ವರ ಲಿಂಗಕ್ಕೆ.

ಭಾವ:— ವಚನವು ಅಶುದ್ಧವದೆ. ಚನ್ನಾಗಿ ಅರ್ಥವಾಗುವದಿಲ್ಲ.

---

## ಪ್ರಸಾದಿಸ್ಥಲ.

(೧೩) ವ್ರತಸ್ಥನಾಗಿದ್ದಾತ ಸಮೂಹಪ್ರಸಾದವ ಕೊಳಲಾಗದು. ಅದೆಂತೆಂದಡೆ ಬಾಲರು ಭ್ರಾಮಕರು, ಚೋರರು, ಕಟುಗರು, ಪರದಾರಿಗಳು, ಜಾರರು, ಪಗುಡಿ ಪರಿಹಾಸಕರು, ಅವರಲ್ಲಿ ಪ್ರಸಾದನಚ್ಚು ಮೆಚ್ಚುಂಟೆ ? ಪ್ರಸಾದವ ಕೊಂಬಲ್ಲಿ ಸಮಶೀಲ ಸಂಪನ್ನರ ಏಕಲಿಂಗ ನಿಷ್ಠಾವಂತರು, ಸರ್ವಾಂಗಲಿಂಗ ಪರಿಪೂರ್ಣರು, ಪರಮ ನಿರ್ವಾಣರು, ಇಂತಿವರೊಳಗಾದ ಸರ್ವಗುಣಸಂಪನ್ನರಿಗೆ ಪ್ರಸಾದವಲ್ಲದೆ, ಕಾಗೆಯಂತೆ ಕರೆದು, ಕೋಳಿಯಂತೆ ಕೂಗಿ, ಡೊಂಬರಂತೆ ಕೂಡಿ, ಆಡಿ, ಬಾಗಿ ಹಿಂಗದಿರ್ದಡೆ ಕೊಂಡಾಡುವ ಲಾಗ ನೋಡಿಕೊಳ್ಳಿ. ನಿಮ್ಮ ಭಾವಕ್ಕೆ ದೃಷ್ಟ. ಸತ್ಯಕ್ಕೆ ಮರೆ ಇಲ್ಲ. ಭಕ್ತಿಗೆ ಇದಿರೆಡೆಯಿಲ್ಲ. ವ್ರತ ಕೆಟ್ಟವಂಗೆ ಆಚಾರ ಭ್ರಷ್ಟಂಗೆ ಕಟ್ಟು ಮೆಟ್ಟು ಮಾಡಲಿಲ್ಲ. ಇದು ಕಟ್ಟಾಚಾರಿಯ ದೃಷ್ಟ ಏಲೇಶ್ವರ ಲಿಂಗ. ಸರ್ವಶೀಲವಂತನಾದ ಸಂಬಂಧದ ಸಂಪದವಂಗ.

ಭಾವ:— ವೀರಶೈವರಲ್ಲಿ ಸಾಮೂಹಿಕ ಆರಾಧನೆ ಇಲ್ಲ. ಅವರ ಆರಾಧನೆಯು ವೈಯ್ಯಕ್ತಿಕವಾಗಿದೆ. ಸಮಶೀಲವಂತರು ಕೂಡಿ ಪ್ರಸಾದವನ್ನು ಸ್ವೀಕರಿಸಬಹುದು. ಆದರೆ ಸಾಮೂಹಿಕ ಆರಾಧನೆಯ ಕಾಲದಲ್ಲಿ ಮತಭ್ರಷ್ಟರು ಸೇರಿಕೊಳ್ಳಲು ಆಸ್ಪದವಿದ್ದಲ್ಲಿ ಇಂಥ ಆರಾಧನೆಗೆ ಮಹತ್ವವಿಲ್ಲ.

(೧೪) ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನವಪ್ಪ ಪ್ರಸಾದಂಗಳನರಿವಡೆ ಆಯತ ಸ್ವಾಯತ ಸನ್ನಿಹಿತ. ಗುರುಭಕ್ತನಾದಲ್ಲಿ ವಿವರವ ತಿಳಿಯಬೇಕು ಲಿಂಗಭಕ್ತನಾದಲ್ಲಿ ಗುಣವನರಿಯಬೇಕು. ಜಂಗಮಭಕ್ತನಾದಲ್ಲಿ ಉಭ

ಯುವ ವಿವರಿಸಲಿಲ್ಲ. ಮಹಾಶ್ರಮಥರಲ್ಲಿ ಪ್ರಸನ್ನನಾಗಲಾಗಿ ಗುರು, ಲಿಂಗ, ಜಂಗಮ ಮೂರೊಂದಾಯಿತ್ತು. ಆ ತ್ರಿವಿಧ ಪ್ರಸಾದವನರಿತು ಗಣಪ್ರಸಾದವ ಕೊಂಬುವುದು. ಆ ಗುಣ ಸ್ವಸ್ಥವಾಗಿ ಮಹಾಪ್ರಸಾದ ವಾಯಿತ್ತು. ಆ ಪ್ರಸಾದವ ಕೊಂಡು ಏಲೇಶ್ವರಲಿಂಗವು ಸರ್ವಶೀಲವಂತ ನಾದ.

ಭಾವಃ— ಗುರು, ಲಿಂಗ, ಜಂಗಮ ಪ್ರಸಾದದ ವಿವರವನ್ನು ಇಲ್ಲಿ ವಚನಕಾರನು ಹೇಳಿದ್ದಾನೆ. ಗುರುವನರಿದಲ್ಲಿ ಶುದ್ಧ ಪ್ರಸಾದವು. ಲಿಂಗ ವನರಿದಲ್ಲಿ ಸಿದ್ಧ ಪ್ರಸಾದವು. ಜಂಗಮವನರಿದಲ್ಲಿ ಪ್ರಸಿದ್ಧ ಪ್ರಸಾದವು. ಅವುಗಳಿಗೆ ಅನುಕ್ರಮವಾಗಿ ಆಯುತ, ಸ್ವಾಯುತ, ಸನ್ನಿಹಿತವೆಂತಲೂ ಹೆಸರುಗಳಿವೆ. ಆಯುತನಾದವನು ನಿಜಸ್ಥಿತಿಯನ್ನರಿಯಬೇಕು. ಸ್ವಾಯು ತನಾದವನು ಗುಣಗಳನ್ನರಿಯಬೇಕು. ಸನ್ನಿಹಿತನಾದವನು ಒಳಹೊರ ಗೆಂದು ಭೇದವನ್ನು ದೂರಮಾಡಬೇಕು. ಈ ಗುಣಗಳೆಲ್ಲವೂ ಕೂಡಿದಲ್ಲಿ ಗುರು, ಲಿಂಗ, ಜಂಗಮಗಳು ಒಂದಾಗುವವು - ಇದೇ ಮಹಾಪ್ರಸಾದ ವೆನಿಸಿಕೊಳ್ಳುತ್ತದೆ.

(೧೫) ಜಂಗಮದ ಮುಂದಿಟ್ಟು ಕೊಂಡಿಹೆನೆಂಬ ಸರ್ವ ಸಮ ಯಾಚಾರ ಸಂಪತ್ತಿನಿರವು ಮಜ್ಜನ ಭೋಜನ ಅಂವಣ ಛತ್ರಚಾ ಮರ ಕರಿ ತುರಗ ದರ್ಪಣ ಹಲ್ಲುಕಡ್ಡಿ ಪರಿಮಳಗಂಧ ತಾಂಬೂಲ ರತ್ನಾ ಭರಣ ಒಡೆಯಂಗಾಯಿತ್ತೆಂದು ಆ ಒಡೆಯನ ವಾಚ್ಯಪ್ರಸಾದದಿಂದ ಮಹಾಪ್ರಸಾದವೆಂದು ಕೂಟಸ್ಥನಾಗಬೇಕು. ಇಂತೀ ಭಾವ ಸರ್ವಸಮ ಯಾಚಾರ. ಈ ವರ್ತನದಂಗ ನಿಂದಾತನ ಸಂಗ ಏಲೇಶ್ವರ ರಾಮೇಶ್ವರ ಲಿಂಗವು ಆ ಭಕ್ತನಂಗ.

ಭಾವಃ— ಗುರುಲಿಂಗ ಜಂಗಮದ ಅರ್ಪಣವು. ಅವರ ಭಾವ ದಲ್ಲಿದೆಯೇ ಹೊರತು ಪ್ರತ್ಯಕ್ಷ ಕೊಟ್ಟುದಲ್ಲ.

(೧೬) ಓಗರ ಮೇಲೋಗರವನುಂಬನ್ನಕ್ಕ ಗಡಿತಡಿಯ ಕಾಯಿಸಿ ಮತ್ತೆ ಒಡೆಯರ ಕರೆ ಎಂದು, ಒಡೆಯರು ಬಂದಲ್ಲಿ ಒಡೆಯರ ಪಾದ ವೆಂದು ಅಡಿಯ ತೊಳೆದ ನೀರ ತಾ ಕುಡಿವುತ್ತ ಲಿಂಗಮಜ್ಜನವೆಂದೆ ರೆವುತ್ತ ಅವರು ಉಂಡು ಮಿಕ್ಕ ಓಗರವ ಪ್ರಸಾದವೆಂದು ಲಿಂಗಕ್ಕೆ ತೋರುತ್ತ ತಾವು ಭುಂಜಿಸುತ್ತ ಕೊಟ್ಟು ತಾ ಕೊಂಬುತ್ತ ಇಂತಿವರು

ತಮ್ಮ ವ್ರತವ ತಾವರಿಯದೆ ತಮ್ಮ ಭಾವವ ತಾವರಿಯದೆ ಸುರೆಯ ಕುಡಿದವರಂತೆ ಮರುಳು ಗ್ರಹ ಹೊಡೆದವರಂತೆ ಇಂತೀ ತ್ರಿವಿಧಗೂಡಿಹ ಭಕ್ತ ಅಸಗ ನೀರಡಿಸಿ ಸತ್ತಂತಾಯಿತ್ತು. ಆ ಗುಣ ಕಟ್ಟಣೆ ಏಲೇಶ್ವರ ಲಿಂಗವ ಮುಟ್ಟದೆ ಇತ್ತಲೆ ಉಳಿಯಿತ್ತು.

ಭಾವ:— ಪಾದೋದಕ ಪ್ರಸಾದವು ಕೇವಲ ಬಾಹ್ಯ ಆಚರಣೆಯಲ್ಲಿರುವದಿಲ್ಲ. ಅದರಿಂದ ಅಂತರಂಗದ ಉನ್ನತಿಯಾಗಬೇಕು. ಅದರ ಈ ನಿಜಸ್ಥಿತಿಯನ್ನು ಅರಿತು ಆಚರಿಸಬೇಕು. ಇಲ್ಲದಿದ್ದರೆ ಅದು ಪರಮಾತ್ಮನನ್ನು ಮುಟ್ಟಲಾರದು.

(೧೭) ಗುರುಪ್ರಸಾದಿ ಆ ಗುರು ಪ್ರಸಾದವ ಲಿಂಗಕ್ಕರ್ಪಿಸಲಾಗದು. ಲಿಂಗಪ್ರಸಾದಿ ಆ ಪ್ರಸಾದವ ಜಂಗಮ ಪ್ರಸಾದದಲ್ಲಿ ಕೂಡಲಾಗದು. ಇಂತೀ ಪ್ರಸಾದವ ತಾ ಸ್ವೀಕರಿಸುವಲ್ಲಿ ತನ್ನ ದೃಷ್ಟವ ಇಷ್ಟಕ್ಕೆ ಅರ್ಪಿಸದೆ ಮುಟ್ಟಲಾಗದು. ಇಂತೀ ಭಾವ ಅಮೃತದಲ್ಲಿ ವಿಷ ಬೆರೆದಂತೆ ಅಮೃತವ ಚೆಲ್ಲ ಬಾರದು. ವಿಷವ ಮುಟ್ಟಬಾರದು. ಗೋವು ಮಾಣಿಕವ ನುಂಗಿದಂತೆ ಗೋವು ಕೊಲಬಾರದು. ಮಾಣಿಕವ ಬಿಡಬಾರದು. ಗೋವು ಸಾಯದೆ ಮಾಣಿಕ ಕೆಡದೆ ಬಾಹ ಹಾದಿಯ ಬಲ್ಲರೆ ಆತ ತ್ರಿವಿಧ ಪ್ರಸಾದಿ ಎಂಬ ಗುಣ ಏಲೇಶ್ವರಲಿಂಗಕ್ಕೂ ಅಸಾಧ್ಯ ನೋಡಾ.

ಭಾವ:— ಇಲ್ಲಿ ಪ್ರಸಾದವನ್ನು ಗ್ರಹಣ ಮಾಡುವ ರೀತಿಯನ್ನು ಹೇಳುತ್ತಾನೆ. ಯಾವ ಪ್ರಸಾದವು ಯಾತಕ್ಕೆ ಸಂಬಂಧಿಸಿರುತ್ತದೋ ಅದಕ್ಕೆಯೇ ಅರ್ಪಿಸಬೇಕು. ಈ ಸಂಬಂಧವು ಇಷ್ಟಲಿಂಗದ ಮುಖಾಂತರವೇ ಜರಗುವದು. ಪ್ರಸಾದದ ಮೂಲಕ ಕೆಡಕಾದದ್ದು ಅವುದೋ ಅದು ಅದನ್ನು ಗ್ರಹಿಸುವವನನ್ನು ಮುಟ್ಟುವದಿಲ್ಲ. ಆದರೆ ಉತ್ತಮವಾದುದು ಅವುದೋ ಅದು ಮಾತ್ರ ಪರಿಣಾಮಕಾರಿಯಾಗುತ್ತದೆ. ಈ ರೀತಿಯನ್ನು ಅರಿತಲ್ಲಿ ಅವನು ಪ್ರಸಾದಿಯು. ಇದು ಪರಮಾತ್ಮನಿಗೂ ಕೂಡ ಅಸಾಧ್ಯವೆಂದು ವಚನಕಾರನು ಹೇಳುತ್ತಾನೆ.

(೧೮) ತನುಶೀಲ ಗುರುಭಕ್ತಿ, ಮನಶೀಲ ಲಿಂಗಭಕ್ತಿ, ಧನಶೀಲ ಜಂಗಮಭಕ್ತಿ ತ್ರಿವಿಧಶೀಲ ಮಹಾಭಕ್ತಿ, ಅಂಗಮನ ಭಾವ ಕರಣಂಗಳಲ್ಲಿ ವ್ರತದಂಗವೇ ಪ್ರಾಣವೆಂದಿಪ್ಪುದು ಛಲಭಕ್ತಿ. ಇಂತೀ ಭೇದ ಭಾವಂಗಳಲ್ಲಿ ಅಣುಮಾತ್ರ ತಪ್ಪದೆ ಕ್ಷಣಮಾತ್ರ ಸೈರಿಸೆನೆಂಬುದು ನಿಷ್ಠೆಯುಭಕ್ತಿ.

ಇಂತೀ ವರ್ತಕ ಶುದ್ಧ ಸಧ್ಭಕ್ತಂಗೆ ಮರ್ತ್ಯ ಕೈಲಾಸವೆಂಬುದು ಗೊತ್ತಿಲ್ಲ. ಆತ ವ್ರತಲಕ್ಷಣಮೂರ್ತಿ ಏಲೇಶ್ವರಲಿಂಗವು ತಾನೆ.

ಭಾವಃ— ಗುರು ಲಿಂಗ ಜಂಗಮ ಭೇದವನ್ನು ಬೇರೊಂದು ವಿಧವಾಗಿ ಇಲ್ಲಿ ವಚನಕಾರನು ಹೇಳಿದ್ದಾನೆ. ತನು, ಮನ, ಧನದ ಅರ್ಪಣವೇ ಗುರುಲಿಂಗ ಜಂಗಮವೆನಿಸಿಕೊಳ್ಳುತ್ತದೆ.

---

## ಪ್ರಾಣಲಿಂಗಿ ಸ್ಥಲ.

(೧೯) ಜಲ ನೆಲ ಶಿಲೆ ತಾ ಮಾಡುವ ಹೊಲ ಮುಂತಾಗಿ ಸರ್ವವೆಲ್ಲವು ಲಿಂಗಾಯತ ಸಂಬಂಧವಾಗಿ, ಭವಿಸಂಗ, ಭವಿ ನಿರೀಕ್ಷಣೆ, ಭವಿ ಉಪೇಕ್ಷೆ, ಭವಿದ್ರವ್ಯಂಗಳನೊಲ್ಲದೆ ಶಿವನಂತಲ್ಲಿ, ಶಿವನ ಪೂಜೆಯ ಮಾಡುವಲ್ಲಿ, ಶಿವಮೂರ್ತಿ ಧ್ಯಾನದಿಂದ ಶಿವಲಿಂಗಾರ್ಚನೆಯ ಮಾಡುವಲ್ಲಿ, ಶಿವಪ್ರಸಾದವ ತಂದು ಒಡೆಯನಗಿತ್ತು, ಆ ಪ್ರಸಾದವ ಏಲೇಶ್ವರ ಲಿಂಗಕ್ಕೆ ಕೊಟ್ಟ ಆ ವ್ರತಭಾವಿಗೆ ನಮೋ ನಮೋ ಎನುತಿರ್ದೆ.

ಭಾವಃ— ಇಲ್ಲಿ ಲಿಂಗಾಯುತ ಶಬ್ದವನ್ನು ವಚನಕಾರನು ಉಪಯೋಗಿಸಿದ್ದಾನೆ. ಆಯುತ, ಸ್ವಾಯುತ, ಸನ್ನಿಹಿತ ಎಂಬ ಶಬ್ದಗಳ ಮೂಲಕ ಲಿಂಗದ ಸಂಬಂಧವನ್ನು ವಚನಕಾರರು ಹೇಳುವದುಂಟು. ಇವು ಲಿಂಗಾಯುತ, ಲಿಂಗಸ್ವಾಯುತ, ಲಿಂಗಸನ್ನಿಹಿತ ಈ ಶಬ್ದಗಳೇ ಇರುತ್ತವೆ. ಶಿವಮೂರ್ತಿ ಧ್ಯಾನದ ವಿಧವನ್ನು ವಚನಕಾರನು ಹೇಳಿದ್ದಾನೆ.

---

## ಶರಣಸ್ಥಲ.

(೨೦) ಉಂಡವರ ನೋಡಿ ತಮ್ಮ ಬಂಧುಬಳಗವ ನೋಡಿ, ಅವರು ಜಂಗಮವೆಂದು ತನ್ನ ಕಟ್ಟಣೆಯವರೆಂದು ಮಾಡುವ ಅಂದಣಿಗರು ಜಗಭಂಡರು ವ್ರತದಂಗದ ಸಂಗವಲ್ಲ ಏಲೇಶ್ವರಲಿಂಗಕ್ಕೆ ದೂರ.

ಭಾವಃ— ಜಂಗಮರು ತಮ್ಮ ಸಂಬಂಧಿಕರೆಂದು ಭಾವಿಸಿ ಅವರನ್ನು ಮನ್ನಿಸಕೂಡದು. ಅವರ ನಡೆನುಡಿಯನ್ನು ಪರೀಕ್ಷಿಸಿ ಜಂಗಮವೆಂದು ಭಾವಿಸಬೇಕು.

(೨೧) ಕೂಷ್ಮಭಾಜನ ಚಿಲುವೆ ಮೊಹರ್ಣ ಫಲ ಸರ್ವಮಯ ಸಮಯ ಸುಯಿಧಾನ ಸಂಗ್ರಹಂಗಳಲ್ಲಿ ಲಿಂಗಮುಖವಾಗಿ, ತಂದ ಮತ್ತೆ ಮನೆಯಲ್ಲಿ ಲಿಂಗಬಾಹ್ಯ ಕಂಡಸೆಂದು ಅವಗೆ ಲಿಂಗವ ಕಟ್ಟಬಹುದೇ? ಅಲ್ಲ. ಆ ಲಿಂಗದ್ರವ್ಯವ ಸೂಸಬಹುದೇ? ಲಿಂಗಾಂಗಿಗಳು ನೀವೇ ಉಭಯದ ಸಂದ ತಿಳಿದುನೋಡಿ ಕಟ್ಟಿದ ಘಟ ತಪ್ಪದಂತೆ, ಲಿಂಗದ್ರವ್ಯವ ಸೂಸದಂತೆ, ಸಂದೇಹವ ಸಂಬಂಧದಲ್ಲಿ ಸಾಯದಂತೆ, ಲಿಂಗದ್ರವ್ಯ ಕೆಡದಂತೆ ಸುಸಂಗವ ತಿಳಿದು ನೋಡಿ ಏಲೇಶ್ವರಲಿಂಗದಲ್ಲಿ ವ್ರತವ ನಂಗೀಕರಿಸಬಲ್ಲಡೆ.

ಭಾವಃ— ವಚನವು ಶುದ್ಧವಿಲ್ಲ. ಅರ್ಥವು ಅಸ್ಪಷ್ಟವಾಗಿದೆ.

(೨೨) ತಂದೆಯು ಮಗ ಕರೆದು ಮಗನ ತಂದೆ ಕರೆದು ಭಾವನ ಮೈದುನ ಕರೆದು ಮೈದುನನ ಭಾವ ಕರೆದು ತಮ್ಮ ಬಂಧುಗಳ ಜಂಗಮವೆಂದು ಕೂಡಿಕೊಂಡುಂಬ ಜಗಭಂಡರ ನೇಮ ಸುಸಂಗವಲ್ಲ ಏಲೇಶ್ವರ ಲಿಂಗಕ್ಕೆ.

ಭಾವಃ— ತಂದೆ, ಮಗ, ಭಾವ, ಮೈದುನ, ಬಂಧುಗಳು ಜಂಗಮವೆಂದು ಭಾವಿಸಿ ಆದಕ್ಕೋಸ್ಕರ ಮಾತ್ರ ಅವರನ್ನು ಮನ್ನಿಸಬಾರದು. ಅವರ ಶೀಲ ಆಚಾರಗಳನ್ನು ನೋಡಬೇಕೆಂದು ವಚನಕಾರನ ಅಭಿಪ್ರಾಯ.

---

## ಐಕ್ಯಸ್ಥಲ.

(೨೩) ಕ್ರಿ ನಿಃಕ್ರಿ ಎಂಬ ಭಯವಾವುದು? ತನ್ನನರಿದಲ್ಲಿಯೇ ಕ್ರಿ, ತನ್ನ ಮರೆದಲ್ಲಿ ನಿಃಕ್ರಿ. ತಾನೆಂಬುದುಳ್ಳನ್ನಕ್ಕ ಸರ್ವಕ್ರಿ ಸಂಭ್ರಮಿಸಬೇಕು. ತಾನೆಂಬುದು ತೋರದಲ್ಲಿ, ಕ್ರಿ ಎಂಬುದೇನೂ ಇಲ್ಲ. ಇಂತೀ ಭಾವವ ತಿಳಿದು ನಿಂದು ನೀವೆ ನೋಡಿಕೊಳ್ಳಿ. ಇದಕ್ಕೆ ಸಂದೇಹವಿಲ್ಲ. ಏಲೇಶ್ವರಲಿಂಗವೇ ಸಾಕ್ಷಿ.

ಭಾವಃ— ಮನುಷ್ಯನು ತನ್ನನ್ನು ತಾನೇ ತಿಳಿದು ಆಚರಿಸತಕ್ಕದ್ದು. ಮೊದಲು ಕ್ರಿಯೆಯುಂಟಾಗುತ್ತದೆ. ಆಮೇಲೆ ನಿಃಕ್ರಿಯು ಒದಗುತ್ತದೆ. ಅರಿತಲ್ಲಿಯೇ ಕ್ರಿ, ಮರೆತಲ್ಲಿಯೇ ನಿಃಕ್ರಿ. ತಾನು ಎಂಬುದು ಇರುವವರೆಗೆ ಕ್ರಿಯೆಯು. ಅದು ಮರೆತಿದ್ದರೆ ಕ್ರಿಯೆಯು ಉಳಿಯುವದಿಲ್ಲ.

ಲಿಂಗದ ಮರ್ಮವನ್ನು ಹೆಚ್ಚಿಗೆ ತಿಳಿದು ಆಚರಿಸುವವನು ಲಿಂಗಸ್ವಾಯತ, ಇದಕ್ಕೂ ಹೆಚ್ಚಿಗೆ ತಿಳಿದವನು ಲಿಂಗ ಸನ್ನಿಹಿತನು, ಎಂದು ಇವರು ಹೇಳಲ್ಪಡುತ್ತಾರೆ. ಇವುಗಳ ಮುಂದಿನ ತರಗತಿಗಳು ಕಳಾಗ್ರಾಹಕ, ಮನೋಮಗ್ನತೆ, ಘನಸಾಮರಸ್ಯ ಎಂದಿವೆ. ಇವಾದರೂ ಲಿಂಗದ ಮುಂದಿನ ವಿಕಾಸಾವಸ್ಥೆಯನ್ನು ಸೂಚಿಸುತ್ತವೆ. ಶರಣನು ತನ್ನ ಕಟ್ಟ ಕಡೆಯ ಪೂರ್ಣಸ್ಥಿತಿಯಲ್ಲಿ ಘನಸಾಮರಸ್ಯನೆಂದು ಹೇಳಲ್ಪಡುತ್ತಾನೆ. ಈ ಪ್ರಕಾರ ಶರಣನ ತರಗತಿಗಳಿರುತ್ತವೆ.

(೮೩) ಷಡ್ವಿಧ ಐಕ್ಯ:— ಇವು ಆಚಾರ ತೃಪ್ತಿ, ಗೌರವ ತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಪ್ರಸಾದತೃಪ್ತಿ, ನಿರ್ಭಾವತೃಪ್ತಿ ಎಂದು ಆರು ಇರುತ್ತವೆ. ತೃಪ್ತಿ ಎಂದರೆ ಆಯಾ ಸ್ಥಲಗಳಲ್ಲಿ ಉಂಟಾದ ಅನುಭವಗಳು ಕಾರಣ ಶರೀರದಲ್ಲಿ ಒಟ್ಟುಗೂಡಿದ ಒಂದು ಸ್ಥಿತಿಯು. ಇದು ಅನುಭವವು. ಈ ಅನುಭವವು ಆಗಲು ಮನುಷ್ಯನಲ್ಲಿ ಒಂದು ವಿಧದ ಆನಂದ, ಅಥವಾ ಪ್ರಕಾಶವು ಉಂಟಾಗುತ್ತದೆ. ಇದು ಮನುಷ್ಯನಲ್ಲಿ ಆದ ವಿಕಾಸತೆಯು ಇರುತ್ತದೆ. ಕಡೆಯ ಈ ವಿಕಾಸವು ಮನುಷ್ಯನಲ್ಲಿ ಚಿರಸ್ಥಾಯಿಯಾಗಿ ಉಳಿಯುತ್ತದೆ. ಆಗ ಅದು ಅವನ ರೀತಿ, ನಡತೆ, ಶೀಲ, ಅರಿವು, ಆಚರಣೆ, ತಿಳವಳಿಕೆ, ಮನಸ್ಸು ಇವುಗಳ ಮೇಲೆಲ್ಲ ಒಂದು ಬೆಳಕನ್ನು ಬೀರುತ್ತದೆ. ಇದು ಸ್ವಾನುಭವವು. ಈ ಅನುಭವದಿಂದ ಮನುಷ್ಯನ ಕಾರ್ಯಗಳು ಜಗತ್ತಿನಲ್ಲಿ ಸರಾಗವಾಗಿ, ಯಾವ ತಡೆಗಳಿಲ್ಲದೆ, ಸ್ವಾಭಾವಿಕವಾಗಿ, ಶಾಂತವಾಗಿ, ಹರಿಯುತ್ತ ಹೋಗುತ್ತವೆ. ಇದು ಕಾರಣ ಶರೀರದ ಪೂರ್ಣಾವಸ್ಥೆ ಎಂದು ಹೇಳಬಹುದು. ಇದಕ್ಕೆ ಷಟ್ಸ್ಥಲ ಶಾಸ್ತ್ರಜ್ಞರು, ಜ್ಞಾನಲಿಂಗ, ತೃಪ್ತಿಲಿಂಗ, ಭಾವಲಿಂಗ ಎಂದು ಕರೆಯುವದುಂಟು. ಈ ತೃಪ್ತಿಲಿಂಗವು ಆಯಾ ಆರು ಸ್ಥಲಗಳ ಸಂಬಂಧದ ಮೂಲಕ ಸೂಕ್ಷ್ಮಶರೀರದಲ್ಲಿ ಪ್ರವಹಿಸಹತ್ತಲು ಅದು ಅನುಕ್ರಮವಾಗಿ ಆಚಾರ ತೃಪ್ತಿ, ಗೌರವ ತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಪ್ರಸಾದತೃಪ್ತಿ ಮತ್ತು ಕಡೆಗೆ ನಿರ್ಭಾವ ತೃಪ್ತಿ ಎಂದು ಹೇಳಲ್ಪಡುತ್ತದೆ. ಈ ಸ್ಥಲಗಳು ಸೂಕ್ಷ್ಮಶರೀರದಲ್ಲಿ ಐಕ್ಯ ಸ್ಥಲದ ಆರು ತರಗತಿಗಳು ಇರುತ್ತವೆ.

(೮೪) ಮೂವತ್ತಾರು ಅಂಗಸ್ಥಲಗಳು [೨ನೇ ವಿಧ]:— ಇವುಗಳ ವ್ಯಾಖ್ಯೆಗಳು ಹಿಂದೆ ನಂ॥ ೭೮ ರಿಂದ ೮೩ ರ ವರೆಗೆ ಹೇಳಲ್ಪಟ್ಟಿವೆ.

ಭಕ್ತರಿಗುಂಟೆ ? ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವ್ರತಿಗಳಿಗೀ ತೆರನಲ್ಲದಿಲ್ಲ.

(೫೮) ವ್ರತವ ಮಾಡಿಕೊಂಡಲ್ಲಿ ರತಿಗೆಡೆಗುಡದೆ ಕ್ಷೇತ್ರವಾಸಂಗಳ ಬೇಡದೆ ಪಡಿಯರ ಧಾನ್ಯವೆಂದು ಗುಡಿಗಳ ಹೊಕ್ಕು ಅಡುವೆಯಾಗದಿರ್ಪುದು. ಭಕ್ತ ಭಕ್ತನ ಬೇಡಿದಾಗಳೆ ಕೆಟ್ಟಿತ್ತು ವ್ರತ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ದೂರ.

(೫೯) ಸರ್ವ ಶೀಲದ ವ್ರತದಾಯತವೆಂತೆಂದಡೆ ತನ್ನ ವ್ರತವಿಲ್ಲದ ಗುರುವ ಪೂಜಿಸಲಾಗದು. ವ್ರತವಿಲ್ಲದ ಜಂಗಮದ ಪ್ರಸಾದವ ಕೊಳಲಾಗದು. ವ್ರತವಿಲ್ಲದವರ ಅಂಗಣವ ಮೆಟ್ಟಲಾಗದು. ಅದೆಂತೆಂದೊಡೆ ಗುರುವಿಂಗೆ ಗುರುವುಂಟಾಗಿ ಲಿಂಗಕ್ಕೆ ಉಭಯ ಸಂಬಂಧ ಉಂಟಾಗಿ ಆ ಜಂಗಮಕ್ಕು ಗುರುಲಿಂಗ ಉಭಯ ಉಂಟಾಗಿ ಜಂಗಮವಾದ ಕಾರಣ ಇಂತೀ ಗುರುಲಿಂಗ ಜಂಗಮಕ್ಕೂ ಪಂಚಾಚಾರ ಶುದ್ಧವಿರಬೇಕು. ಪುರುಷನ ಆಚಾರದಲ್ಲಿ ಸತಿ ನಡೆಯಬೇಕಲ್ಲದೆ ಸತಿಗೆ ಸ್ವತಂತ್ರ ಉಂಟೇ ? ಇಂತೀ ಒಡೆಯನ ವ್ರತ ಮೊದಲು ಕಡೆಯಲ್ಲಿ ಭಕ್ತಂಗೆ ಇಂತೀ ಉಭಯದ ವ್ರತವ ಕೂಡಿದಲ್ಲಿ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ವ್ರತವಸ್ತುವು.

(೬೦) ವೇಷ ಎಲ್ಲಿರದು ಸೂಳೆಯಲ್ಲಿ, ಡೊಂಬನಲ್ಲಿ, ಭೈರೂಪನಲ್ಲಿರದೇ ? ವೇಷವ ತೋರಿ ಒಡಲ ಹೊರೆವ ದಾಸಿ ವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೋ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ?

(೬೧) ಅಕ್ಕಮ್ಮಗಳ ವಚನ× ಬತ್ತಲೆ ಇದ್ದವರೆಲ್ಲ ಕತ್ತೆಯ ಮಕ್ಕಳು. ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು. ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ. ಆವ ಪ್ರಕಾರವಾದರೇನು ? ಅರಿವೇ ಮುಖ್ಯವಯ್ಯ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ.

---

× ಟೀಪು:— ಈ ವಚನದ ಆರಂಭದಲ್ಲಿ ಈ ಶಬ್ದಗಳು ಒಂದು ಗ್ರಂಥದಲ್ಲಿ ಬಂದಿವೆ. ಇದರ ಮೇಲಿಂದ ಈ ಮುದ್ರಿಕೆಯು ಸ್ತ್ರೀಯಳದಿರಬಹುದೆಂದು ತೋರುತ್ತದೆ. ಕೇತಯ್ಯನದಾಗಲಿಕ್ಕಿಲ್ಲ.

(೬೨) ನೇಮವ ಮಾಡಿಕೊಂಡು ತನ್ನಯ ಸಂಸಾರದ ಕಾಮ್ಯಾರ್ಥಕ್ಕಾಗಿ ಐದು, ಹತ್ತು, ಹದಿನೈದು ಎಂದು ಮೀರಿ ಬಂದಡೆ ಕೃತ್ಯವಿಲ್ಲೆಂದು ಅವರಿಗಿಕ್ಕಿಹನೆಂದು ಭಕ್ತರ ಮನೆಯ ಹೊಕ್ಕು ಹೊಕ್ಕು ಬೇಡುವ ಭಕ್ತನ ಯುಕ್ತಿಯೇ ? ಆರೊಡವೆಯ ಆರಿಗೆ ಮಾಡಿ ತಾನು ದಾರಿಯಾದೆನೆಂಬ ಭೋಗಿಯ ನೋಡಾ. ವೇಶಿಯ ಪುತ್ರ ಪಿತೃಕವ ಮಾಡಿದಲ್ಲಿ ಅದೇತರ ಊಟ ? ಅದೇತರ ಮಾಟ ? ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಸಲ್ಲದ ನೇಮ.

---

## ಮಹೇಶ್ವರನ ಐಕ್ಯ.

(೬೩) ತನುವಿಂಗೆ ಕ್ರಿ, ಆತ್ಮಂಗೆ ವ್ರತ, ವ್ರತಕ್ಕೆ ನಿಶ್ಚಯ ಕರಿಗೊಂಡು, ಬಾಹ್ಯದ ಕ್ರಿ ಅರಿವಿಂಗೆ, ಆಚರಣೆ ಭಾಷೆಗೆ ಒಸರಿಸದೆ ನಿಂದಾತನೇ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ ತಾನೆ.

(೬೪) ಅಜ ಎಮ್ಮೆ ಹಾಲ ಬಿಟ್ಟಲ್ಲಿ ಹೇರಂಡವ ಬೆಳೆಯಲಿಲ್ಲ. ಬೆಳೆದಡೆ ಮನೆಗೆ ತರಲಿಲ್ಲ. ತರಲಿಲ್ಲದ ಮೇಲೆ ಅಡಲಿಲ್ಲ. ಅದು ದೇವರಗೆ ಹಿತವಲ್ಲ. ಅದು ರಾಕ್ಷಸರ ವಂಶಭೂತವಾದ ಕಾರಣ ಕಂಡುವ ಬಿಟ್ಟು ಕಾಣುದದ ಅರಸಿಕೊಳಬೇಕು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ವ್ರತ ಮುಕ್ತನ ನೇಮ.

---

ನದಲ್ಲಿ ಸ್ವಯಂಪಾಕವ ಮಾಡಿ ಸ್ವಾನುಭಾವದಿಂದ ಲಿಂಗಾರ್ಚನೆಯ ಮಾಡಿ, ಬೇಡದೆ ಕಾಡದೆ ಸ್ವೇಚ್ಛಾಪರನಾಗಿ ಆರೈದು ನಡೆವಲ್ಲಿ ನೀರು ನೆಲ ಬಹುಜಲ ಗ್ರಾಮ ಗಣಸಮೂಹ ಸಂಪದ ಸಮಯಕ್ಕೆ ಸಿಕ್ಕದೆ ತ್ರಿವಿಧಕ್ಕೊಳಗಲ್ಲದೆ ಇಂತೀ ನೇಮವ ತಾನಾಗಿ ತಾನೇ ನೇಮವಾಗಿ ಉಭಯಕ್ಕೆ ತೆರಸಿಲ್ಲದೆ ನಿಂದುದು ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವು ತಾನೆ.

(೫೪) ನಿಚ್ಚ ಚಿಲುಮೆಯ ನೇಮಕ್ಕೆ ಶಿವಭಕ್ತರ ಸೀಮೆಯಲಿಲ್ಲದೆ ಇರಲಿಲ್ಲ. ಶಿವಭಕ್ತರು ಮುಟ್ಟಿ ತಂದ ದ್ರವ್ಯವನಲ್ಲದೆ ಒಪ್ಪಲಿಲ್ಲ. ಭಾಜನಕ್ಕೆ ತಮ್ಮಾಯತದ ಜಲ, ಲಿಂಗಮುದ್ರೆಯ ವೃತ್ತಿಕೆ, ಮಠ ಕಲ್ಲು ಮುಂತಾದ ಮತ್ತಾವ ಗುಣಂಗಳೆಲ್ಲವೂ ಲಿಂಗಧಾರಣದ ಸೀಮೆಯಾಗಿ ಮತ್ತಾವ ಗುಣಂಗಳಿಂದ ಮನ ಮುಟ್ಟುವನ್ನಬರ ಚಿತ್ತ ಸುಯಿಧಾನಿಯಾಗಿ, ತನ್ನ ಆಯತದ ಸುಯಿಧಾನವ ಕುಟ್ಟುವಲ್ಲಿ ಒರಳು ಒನಕೆಯ ಶಬ್ದಂಗಳ ಭವಿಗಳು ಕೇಳದಂತೆ ಸ್ವಯಂಪಾಕವ ಮಾಡುವಲ್ಲಿ ಅಗ್ನಿಯಲ್ಲಿ ಕಾಷ್ಠದಲ್ಲಿ ಭೂಮಿಯಲ್ಲಿ ಸುಜಲದಲ್ಲಿ ಇಂಬಿಡುವಲ್ಲಿ ತೆಗವಕ್ಕೆ ಲಿಂಗ ಸುಯಿಧಾನಿಯಾಗಿ, ದಂತಧಾವನಂಗಳಲ್ಲಿ ಶುಚಿರ್ಭೂತನಾಗಿ, ಜಂಗಮಲಿಂಗದ ಮುಂದಿಟ್ಟು. ಅವರ ಸ್ವೀಕರಿಸುವನ್ನಕ್ಕ ನೇತ್ರ ತುಂಬಿ ನೋಡಿ ಅವರ ಕಾರುಣ್ಯವಂ ಪಡೆದು ಇಪ್ಪುದು ಸದ್ಭಕ್ತನ ವ್ರತ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದ ನೇಮ.

## ಮಹೇಶ್ವರನ ಶರಣ.

(೫೫) ವ್ರತವನಾಶ್ರಯಿಸಿದ ಮತ್ತೆ ಹುಸಿ ಕೊಲೆ ಕಳವು ಪರದಾರವ ಮಾಡುವನ್ನಕ್ಕರ ವ್ರತಕ್ಕೆ ಸಲ್ಲ, ನೇಮಕ್ಕೆ ಸಲ್ಲ, ಆಚಾರವಿಲ್ಲ. ಅವ ರಾಜನೆಂದು ದ್ರವ್ಯದಾಸೆಗಾಗಿ ಆವನ ಮನೆಯ ಹೊಕ್ಕು ವಿಭೂತಿ ವೀಳೆಯ ಮೊದಲಾದ ಉಪಚಾರಕ್ಕೊಳಗಾದವ ಸತ್ತ ಕುಕ್ಕುರನ ಕೀಟಕವ ತಾ ತಿಂದಂತೆ. ಪಂಚಾಚಾರ ಶುದ್ಧತೆಗೆ ಹೊರಗು, ಆಚಾರವೇ ಪ್ರಾಣವಾಗಿಪ್ಪ ರಾಮೇಶ್ವರಲಿಂಗಕ್ಕೆ ಮುನ್ನವೇ ಹೊರಗು.

(೫೬) ವ್ರತವ ಹಿಡಿವಲ್ಲಿ ವ್ರತವ ಉಪದೇಶವ ಮಾಡುವಲ್ಲಿ ಹಿಡಿವಾತನ ಯುಕ್ತಿ ಎಂತೆಂದೊಡೆ ಮನ ವಚನ ಕಾಯ ತ್ರಿಕರಣ ಶುದ್ಧಾತ್ಮನಾಗಿ, ಸತಿಸುತಬಂಧುವರ್ಗಗಳೆಲ್ಲವು ಏಕತ್ರಯವಾಗಿ ನಡೆವುವ ನಡೆಯದೆಂಬುದ ಸ್ಥಿರಕರಿಸಿ ಶೃತ ದೃಷ್ಟಾನುಮಾನ ಮೂರರಸೊಂಪು ಮಾಡಿ ವ್ಯತ್ಯಯವ ತೋರದೆ ವ್ರತವಸ್ತುವನಾಧರಿಸಬೇಕು. ವ್ರತದೀಕ್ಷೆಯ ಮಾಡುವ ಗುರುವಿನಿರವೆಂತೆಂದಡೆ ಅವನಾಗುಚೇಗವನರಿತು, ಈ ವ್ರತನೇಮ ನಿನಗಾಗಲೆಂದು ಇಹಪರದಲ್ಲುಭಯ ದೋಷ ಹಿಂಗೆಮ ಸಂತೈಸುವುದು ಗುರುಸ್ಥಲ. ಅವನ ಗುಣಕ್ಕೆ ಹರುಷತನಾಗಿ ಗಣಸಮೂಹಮಂ ಗೂಡಿ ಗುರುಲಿಂಗಜಂಗಮ ಸಾಕ್ಷಿಯಾಗಿ ಮಾಡುವದೇ ವ್ರತ. ಹೀಗಲ್ಲದೆ ಮನಕ್ಕೆ ಬಂದಂತೆ ತನು ಹರಿದಾಡಿದಂತೆ ಊರೂರ ದಾರಿಗರಲ್ಲಿ ವ್ರತವ ಮಾಡಿಕೊಳ್ಳಿ ಎಂದು ಸಾರಲಿಲ್ಲ. ಇಂತೀ ಉಭಯವನರಿತು ವ್ರತಕ್ಕರ್ಹನಾಗಬೇಕು. ಇಂತೀ ಸರ್ವಗುಣ ಸಂಪನ್ನನಾದಲ್ಲಿ ಮಾಡಿಸಿಕೊಂಬವನು ತಾನೇ, ಮಾಡುವವನು ತಾನೇ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವು ತಾನೇ.

(೫೭) ಮಹಾವ್ರತಸ್ಥರು ವ್ರತಿಗಳ ಮನೆಗೆ ಹೋದಲ್ಲಿ ಕಂಡುದ ಬೇಡದೆ ಬಾಯಿಗೆ ಬಂದಂತೆ ನುಡಿಯದೆ ಕಾಮದೃಷ್ಟಿಯಲ್ಲಿ ಮತ್ತೇನುವ ನೋಡದೆ ಶಿವಲಿಂಗಪೂಜೆ ಶಿವಧ್ಯಾನ ಶಿವಕಥಾ ಪ್ರಸಂಗ ಶಿವಶರಣರ ಸಂಗ ತಮ್ಮ ಕ್ರಿಯಾನುಭಾವದ ವಿಚಾರ ಹೀಗಲ್ಲದೆ ಸರಸ ಸಮ್ಮೇಳ ಪಗುಡಿ ಪರಿಹಾಸಕ ಚದುರಂಗ ನೆತ್ತ ಪಗಡೆ ಜೂಜು ಶಿವ

ಕದಲ್ಲಿ ಕೊಂಬ ಜಿಹ್ವೆ ಔಷಧಿ ಕಷಾಯವೆಂದು ಕೊಂಡರೆ ಪಂಚಾಚಾರಕ್ಕೆ ದೂರ, ಪಾದೋದಕ ಪ್ರಸಾದವಿಲ್ಲ, ಇಹಪರಕ್ಕೆ ಸಲ್ಲ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ ಅವರನೊಲ್ಲ.

(೪೮) ಭವಿಯುಲಾದ ಪಾಕವ ತಂದು ಮನೆಯೊಳಗಿರಿಸಿಕೊಂಡು, ಭುಂಜಿಸುತ್ತ ಅವರ ಮನೆಯುಲೊಲ್ಲೆನೆಂಬುದು ವ್ರತಕ್ಕೆ ಹಾನಿ, ಆಚಾರಕ್ಕೆ ದೂರ, ಪಂಚಾಚಾರ ಶುದ್ಧತೆಗೆ ಹೊರಗು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ ಅವರ ಬಲ್ಲನಾಗಿ ಒಲ್ಲನು.

---

## ಮಹೇಶ್ವರನ ಪ್ರಾಣಲಿಂಗಿ.

(೪೯) ಸತ್ಯ ಸದ್ಗುರು ಕರುಣಿಸಿಕೊಟ್ಟ ನಿತ್ಯ ನಿಃಕಳಂಕ ಲಿಂಗವ ಕರಮನಭಾವದೊಳಗಿರಿಸಿ ಅರ್ಚಿಸಿ ನಿತ್ಯ ಭೋಗವ ಪಡೆಯಲರಿಯದೆ ಗುರುಮಾರ್ಗಾಚಾರಕ್ಕೆ ಹೊರಗಾದ ಜಗದ ಜಡಕಲ್ಲು ಮಣ್ಣು ಮರ ಕಂಚು ಕಾಷ್ಠ ಒರಳು ಒನಕೆ ಪಶು ತಿಥಿ ವಾರ ನಕ್ಷತ್ರ ಹುಣ್ಣಿಮೆ ಅಮಾವಾಸ್ಯ ತಂದೆ ತಾಯಿ ತಿಥಿ ಎಂದು ಪೂಜೆಯ ಮಾಡುವವರ ಹಸ್ತ ಭವಿ. ಆ ಹಸ್ತದಿಂದ ಮಾಡಿದ ಪಾಕ ಭವಿ. ಆ ಪಾಕವ ಶಿವ ಲಿಂಗಕ್ಕರ್ಪಿಸಲಾಗದು. ನಮ್ಮ ಕೂಡಲ ಚನ್ನಸಂಗನ ಶರಣರು ಭವಿ ಪಾಕವ ಮುಟ್ಟದೆ ಸಮಸ್ತ ಮತದಿಂದ ಆಯೋಗ್ಯವಾದ ಪದಾರ್ಥವ ನುಳಿದು ಯೋಗ್ಯಾಯೋಗ್ಯವಾದ ಪದಾರ್ಥವ ಕೊಂಡು ಪಾದೋದಕ ದಲ್ಲಿ ಪವಿತ್ರತೆಯಿಂದ ಸ್ವಪಾಕವ ಮಾಡಿ ಪರಶಿವಲಿಂಗವೆಂದರಿದು ಸುಖಿಸಿ ನಿಜೈಕ್ಯರಾದರು. ಇದನರಿಯದೆ ಆಡಂಬರದ ವೇಷವ ಧರಿಸಿ ಉದಕ ಹೊಯಿದು ಸ್ವಯ ಚರ ಪರ ಷಟ್‌ಸ್ಥಲವ ಬೊಗಳುವ ಕುನ್ನಿಗಳ ಕಂಡು ನಾಚಿತ್ತು ಕಾಣಾ ಎನ್ನ ಮನವು ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೇ.

(೫೦) ಸರ್ವೇಂದ್ರಿಯಂಗಳೊಂದುಮುಖವ ಮಾಡಿ ಸರ್ವ ಮೋಹಂಗಳಲ್ಲಿ ನಿರ್ಮೋಹಿ ತಾನಾಗಿ, ಅಂಗದಿಚ್ಛೆಯ ಮರೆದು, ವ್ರತವೆಂಬಾಚಾರಲಿಂಗವ ಧರಿಸಬೇಕಲ್ಲದೆ, ತನುವಿಗೆ ಬಂದಂತೆ ಮುಟ್ಟಿ, ಮನಸಿಗೆ ಬಂದಂತೆ ಹರಿದು, ನಾನಿಲೆಕ್ಕಬ್ಬ ಶೀಲವಂತನಿದ್ದೇನೆಂದು ಕೋಲಾ

ಟೆಯಂತೆ ಕೂಗುತ್ತ ಕೊರಚುತ್ತ ಅಲ್ಲಿ ಬೊಬ್ಬಿಡುತ್ತ ಶೂಲವನೇರುವ ಕಳ್ಳನಂತೆ ಬಾಹ್ಯದಲ್ಲಿ ಬಾಯಾಲುವೆ. ಹೊರಗಣ ಕ್ರಿಯಾಶುದ್ಧವಾಗಿ, ಒಳಗಣ ಆತ್ಮಶುದ್ಧವಾಗಿಪ್ಪುದು ಪಂಚಾಚಾರ ನಿರುತ, ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ ಸರ್ವಾಂಗಭರಿತನು.

(೫೧) ಸಪ್ಪೆಯ ವ್ರತವೆಂಬುದ ನಾವರಿಯೆವು. ನೀವು ಹೇಳಿ ರಯ್ಯಾ? ಸರ್ವ ಫಲ ರಸ ಕ್ಷೀರ ತೈಲ ಮಧುರ ಇದೆಲ್ಲವ ಮುಂತಾದವ ಕ್ಕೆಲ್ಲಕ್ಕೂ ತಮ್ಮತಮ್ಮಲ್ಲಿ ರುಚಿ ಸಪ್ಪೆಯುವೆನ್ನುವ ಒಂದನೂ ಕಾಣೆ. ಇವ ನೀವೆ ಬಲ್ಲಿರಿ. ಸಪ್ಪೆ ಆವುದೆಂದರೆ ಸುಖ ದುಃಖಗಳೆಂಬುದನರಿಯದೆ ತನುವಾಡಿದಂತೆ ಆಡದೆ ಮನ ಹರಿದಂತೆ ಹರಿಯದೆ ಬಯಕೆ ಅರತು ಭ್ರಮೆ ಹಿಂಗಿ ಸರ್ವ ವಿಕಾರ ವಿಸರ್ಜನವಾಗಿ, ಹಿಂದಾದುದ ಮರೆದು ಮುಂದಕ್ಕೆ ಗತಿ ಎಂದು ಒಂದ ಕಾಣದೆ ಹಿಂದು ಮುಂದೆಂದು ಒಂದನರಿ ಯದೆ ಇದ್ದುದೇ ಸಪ್ಪೆ. ಇದು ಅಂತರಂಗ ವ್ರತ. ಲವಣವ ಬಿಟ್ಟುದು ಬಹಿ ರಂಗದ ಶೀಲ. ಇಂತೀ ಉಭಯ ವ್ರತವು ಏಕವಾದಲ್ಲಿ ಸರ್ವ ಸಪ್ಪೆ ಸಂದಿತ್ತು, ಆಚಾರವೇಪ್ರಾಣವಾದ ರಾಮೇಶ್ವರ ಲಿಂಗಕ್ಕೆ ಸಪ್ಪೆವ್ರತ ಅರ್ಪಿತವಾ ಯಿತ್ತು.

(೫೨) ಸ್ಥಾವರಕ್ಕೆ ಲಿಂಗಮುದ್ರೆ ಪಾಷಾಣಕ್ಕೆ ಲಿಂಗಮುದ್ರೆ ಗೋವಿಗೆ ಲಿಂಗಮುದ್ರೆ ಮತ್ತಾವಾವ ರೂಪಿನಲ್ಲಿ ಲಿಂಗಾಂಕಿತವ ಮಾಡಿ ದಡೂ ಪ್ರೀತಾಂಕಿತಭೇದ. ಅದೆಂತೆಂದಡೆ ತರು ಫಲವ ಹೊತ್ತಂತೆ ಸವಿ ಯನರಿಯದಾಗಿ ಮಾಡಿಕೊಂಡ ನೇಮಕ್ಕೆ ತಮ್ಮ ಭಾವದ ಶಂಕೆಯ ಲ್ಲದೆ ಧರಿಸಿಹವು. ಲಿಂಗವೆಂದರಿಯವು. ತಾನರಿದು ಆ ವ್ರತನೇಮ ಮಾಟವ ಮಾಡುವಲ್ಲಿ ಶೀಲದ ತೊಡಿಗೆ ನೇಮದ ಖಂಡಿತ ಮಾಟದ ಕೂಟ ಇಂತಿವನರಿದು, ತನುಲಿಂಗಾಚಾರ ಮನಕ್ಕೆ ವ್ರತ ಮಾಟಕ್ಕೆ ನೇಮ ಕೂಟಕ್ಕೆ ನಿಶ್ಚಯ ಇಂತೀ ಮರ್ಯಾದಾಟವುಳ್ಳನ್ನಕ್ಕ ಸದಾತ್ಮನಿಹಿತವಿರ ಬೇಕು ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವನರಿವುದಕ್ಕೆ.

(೫೩) ನಿತ್ಯ ಚಿಲುಮೆ ಕೃತ್ಯವೆಂದು ಮಾಡುವಲ್ಲಿ ಮಳಲಿನ ಮರೆಯ ನೀರ ಬಳಸದೆ ಉಂಡೆಮರನ ನೋಡಿ ಮರನಂ ಒಡೆಯದೆ ಜೀರ್ಣವಾದ ಕಾಷ್ಠವಂ ಒಲೆಗಿಕ್ಕದೆ ಧಾನ್ಯ, ಲತೆ, ಪರ್ಣ ಮೊದ ಲಾದ ಪಚ್ಚಪೈರು ಗೆಣಸುಗಳ ಹಳುಕಂ ಮುಟ್ಟದೆ ಲಿಂಗಾವಧಾ

ಬಲ್ಲನೇ ? ಕಾಗೆಗೆ ರಸಾನ್ನ ಮುಂದಿರಲಿಕ್ಕೆ ಹರಿವ ಕೀಟಕಂಗೆ ಸರಿ ಪುದಲ್ಲದೆ ಮೇಲೆ ಅದು ಸವಿ ಸಾರವ ಬಲ್ಲುದೇ ? ಇಂತಿವ ತಮ್ಮ ಜಾತಿಯು ಲಕ್ಷಣವ ಕೊಂದರೂ ಬಿಡವಾಗಿ ವ್ರತಾಚಾರವ ಸಂಬಂಧಿ ಸುವಲ್ಲಿ ಶರಣರೆಲ್ಲರೂ ಕೂಡಿ ಈ ಗುಣ ಅಲ್ಲ ಅಹುದಲ್ಲವೆಂದು ಹೇಳಿ ಕೇಳಿ ಜಾತಿವರ್ಗದ ಗುಣವ ನಿಃಕರಿಸಿ ಬಿಡಿಸಿ ಆಚಾರವೆಂಬ ಸುಜ್ಞಾ ನತೆಯು ಅರಸಿನ ಪಟ್ಟವಂ ಕಟ್ಟಿ ಶರಣರೆಲ್ಲರು ನಿಹಿತಾಚಾರದಲ್ಲಿ ಸಹ ಭೋಜನವ ಮಾಡಿ ಇಂತೀ ಗುಣ ನಿಹಿತ ವ್ರತ ಅಜಾತನ ಒಲುಮೆ, ಆಚಾರವೇ ಪ್ರಾಣವಾದ ರಾಮೇಶ್ವರಲಿಂಗನ ಶೀಲದ ನೇಮ.

(೪೧) ತನ್ನ ತಾ ಬಂದುದ ಸೋಂಕಿಲ್ಲದುದ ವಿಚಾರಿಸಿ ತನ್ನ ಗುರುವಿಂಗೆ ಬಂದುದ ಕೈಕೊಂಬುವುದು. ಬಾರದ ದ್ರವ್ಯಕ್ಕೆ ಭ್ರಮೆಯಿಲ್ಲದೆ ಚಿತ್ತ ತೋರದಿರ್ಪುದು, ಭರಿತಾರ್ಪಣ. ಅರ್ಪಿತವ ಮುಟ್ಟಿ ಅನರ್ಪಿತವ ಜಾಗ್ರತ್ ಸ್ವಪ್ನದಲ್ಲಿ ಮುಟ್ಟದಿರ್ಪುದು ಭರಿತಾರ್ಪಣ. ಲಿಂಗಕ್ಕೆ ಸಂದುದ ನಿರಿಸದೆ ಸಲುವಷ್ಟನೇ ಅರ್ಪಿತವ ಮಾಡಿ ಮುಂದಣ ಸಂದೇಹವ ಮರೆದು ಹಿಂದಣ ಸುಖವನರಿದು ಉಭಯದ ಖಂಡಿತವ ಖಂಡಿಸಿ ನಿಂದುದು ಭರಿತಾರ್ಪಣ. ಹೀಗಲ್ಲದೆ ಭಂಷೆಗೂಳಿನ ಭಟರಂತೆ ಓಗರ ಮೇಲೋಗರದಾಸೆಗೆ ವೇಷದ ದ್ರವ್ಯಕ್ಕಾಸೆ ಮಾಡಲಿಲ್ಲ. ಬಂದುದ ಕೈಕೊಂಡು ಸಂದನಳಿದು ನಿಂದುದೇ ಭರಿತಾರ್ಪಣ. ಆಚಾರವೇ ಪ್ರಾಣ ವಾದ ರಾಮೇಶ್ವರಲಿಂಗಕ್ಕೆ ಕ್ರಿಯಾಭಾವದ ಭೇದ.

(೪೨) ಬಂದುದ ಸಾಕೆನ್ನದೆ ಬಾರದುದ ತಾ ಎನ್ನದೆ, ಗಡಿಗೆ ಬಟ್ಟಲು ನಮ್ಮೊಡೆಯಲ್ಲಿ ಒಡಗೂಡಿ ಸರಿ ಎನ್ನದೆ ಮಂತ್ರ ಭಿನ್ನವಾಗಿ ಮತ್ತಾರಿಗೂ ಪಚಾರಿಸದೆ ಕೆಲಬಲದವರಿಂದ ಅವರಿಗೆ ನೇಮವೆಂದೆನಿಸದೆ ಲಿಂಗಕ್ಕೆ ಬಂದುದ ಸಂದುದ ಆನಂದದಿಂದ ಸ್ವೀಕರಿಸಿ ನಿಂದುದೇ ಭರಿ ತಾರ್ಪಣ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ.

(೪೩) ಒಂದು ವಿಶೇಷವೆಂದು ಹಿಡಿದು, ಮತ್ತೊಂದಧಮವ ಮುಟ್ಟದಿರ್ಪುದೇ ಭರಿತಾರ್ಪಣ. ಪರಸ್ತ್ರೀ ಪರಧನಂಗಳಲ್ಲಿ ದುರ್ವಿಕಾರ ದುಶ್ಚರಿತ್ರದಲ್ಲೊಡಗೂಡದಿರ್ಪುದೇ ಭರಿತಾರ್ಪಣ. ಮರವೆಯಲ್ಲಿ ಬಂದ ದ್ರವ್ಯವ ತಾನರಿದು ಮುಟ್ಟದಲ್ಲಿಯೋ ಭರಿತಾರ್ಪಣ. ತನ್ನ ವ್ರತನೇಮ ನಿತ್ಯ ಕೃತ್ಯಕ್ಕೆ ಅಪರಾಧ ಬಂದಲ್ಲಿ-ಸಕಲವ ನೀತಿಗಳೆದು ಆ ವ್ರತನೇಮ

ಡಾಳಿವಪ್ಪುದೆ ಸಲೆ ಸಂದುದು ಭರಿತಾರ್ಪಣ ಹೀಗಲ್ಲದೆ ಓಗರ ಮೇಲೋ ಗರದ ತಾಗಿಗೆ ಭರಿತಾರ್ಪಣ ಉಂಟೆಂದು ನುಡಿವುದು ಸಹಜವೇ? ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ಭರಿತಾರ್ಪಣದ ಸಹಜಭಾವ.

(೪೪) ಭರಿತಾರ್ಪಣವೆಂದು ಸ್ಥಲವನಂಗೀಕರಿಸಿದಲ್ಲಿ ಭರಿತಾರ್ಪಣ ಅಂಗಕ್ಕೋ ಲಿಂಗಕ್ಕೋ ಆತ್ಮಕ್ಕೋ ಸರ್ವೇಂದ್ರಿಯ ವಿಕಾರಕ್ಕೋ? ಹಿಡಿವ ಬಿಡುವ ಕೊಡುವ ಕೊಂಬ ಸಡಗರಿಸುವ ಎಡೆಗಳಲ್ಲಿಯೋ? ಘೃತ ರಸಾನ್ನ ಸಕಲ ಪದಾರ್ಥಂಗಳಲ್ಲಿ ಯಥೇಷ್ಟವಾಗಿ ಗ್ರಾಹಿಸುವ ಭರಿತವೋ? ಆತ್ಮನ ಕ್ಷುಧೆಯ ಆಶಾಪಾಶವೋ? ಲಿಂಗಕ್ಕೆ ಸಂದುದನೆಲ್ಲವ ಒಂದೇ ಭಾವದಲ್ಲಿ ಕೊಳಬೇಕೆಂಬ ಸಂದೇಹವೋ? ಇಂತೀ ಗುಣಂಗಳಲ್ಲಿ ಆವುದಲ್ಲವೆಂಬುದ ತಿಳಿದು ನೋಡಿಕೊಳ್ಳಿ, ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ.

(೪೫) ಲಿಂಗಗೂಡಿ ಭರಿತಾರ್ಪಣವ ಅಂಗೀಕರಿಸುವಲ್ಲಿ ಭರಿತ ಲಿಂಗಕ್ಕೋ ತನಗೋ ಎಂಬುದ ತಿಳಿದು, ಲಿಂಗವೇ ತನ್ನಂಗವೆಂದೆಂಬ ತಿತ್ತು. ಬಾರದೆಂಬುದ ಆರೈಕೆಯುಳಿದು ಸ್ವಯವಾಗಿ ನಿಂದುದು ನಿಜ ಭರಿತಾರ್ಪಣ. ಹೀಗಲ್ಲದೆ ಸಕಲ ವಿಷಯದಲ್ಲಿ ಹರಿದಾಡುತ್ತ ಆಮಿಷ ತಾಮಸ ರಾಗದ್ವೇಷದಲ್ಲಿ ಬೇವುತ್ತ ಇಂತಿವನರಿಯದೆ ತಮಗೆ ಸಂದು ದಲ್ಲದೆ ಮರೆದೊಂದು ಬಂದಡೆ ಆ ಲಿಂಗ ಪ್ರಸಾದವನಿರಿಸಬಹುದೇ? ನೇಮ ತಪ್ಪಿ ಸೋಂಕಿದಲ್ಲಿ ಕೊಳಬಹುದೇ? ಇಂತೀ ಅರ್ಪಿತದ ಸೋಂಕು ಭರಿತಾರ್ಪಣದ ಪರಿಭಾವವ ನಿಮ್ಮ ನೀವೇ ತಿಳಿದು ನಿಶ್ಚೈಸಿಕೊಳ್ಳಿ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ.

(೪೬). ಸಂದೇಹವ ಹರಿದಂಗಲ್ಲದೆ ಸಹಭೋಜನ ಭಾಜನವಿಲ್ಲ. ಸಂದಿತ್ತು ಸಲ್ಲದೆಂಬ ಸಂಕಲ್ಪವನಳಿದಂಗಲ್ಲದೆ ಭರಿತಾರ್ಪಣವಿಲ್ಲ. ನೇಮ ತಪ್ಪಿದಲ್ಲಿ ಆತ್ಮನಾಶೆ ಬಿಟ್ಟವಂಗಲ್ಲದೆ ಸರ್ವವ್ರತದ ದೆಶೆ ಇಲ್ಲ. ಇಂತೀ ಆಶೆಯ ಪಾಶದಿಂದ ತಾ ಹಿಡಿದ ವ್ರತದ ಭಾಷೆ ತಪ್ಪಿದ ಮೇಲೆ ಪ್ರಾಯಶ್ಚಿತ್ತವೆಂಬುದಿಲ್ಲ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವಾಯಿತ್ತಾದಡೂ ಇಹಪರಕ್ಕೆ ಹೊರಗೆಂದು ಡಂಗುರವಿಕ್ಕುವೆ.

(೪೭) ಪಂಚಾಚಾರವ ಧರಿಸಿದ ಶರೀರಕ್ಕೆ ಅಷ್ಟೋತ್ತರ ಶತವ್ಯಾಧಿ ಬಂದಿತ್ತೆಂದು ಸಂಕಲ್ಪಿಸಬಹುದೇ? ಪಾದತೀರ್ಥ ಪ್ರಸಾದವೆಂದು ನೈಷ್ಠಿ

ಔಷಧಿಯಿಂದ ಘಟವ ಬಿಟ್ಟಡೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಕ್ರಿಯೆ ಭಿನ್ನದೋರಿದಲ್ಲಿಯೇ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿಯೇ ಲೀಯ್ಯ.

(೩೩) ಅರಸಿಗಾಚಾರ ಅನಸರಣೆಯಾಯಿತ್ತೆಂದು ಸದಾಚಾರಿಗಳೆಲ್ಲ ಬನ್ನಿ ಎಂದು, ಹೂಲಿಗೆ ಹಾವ ಕಚ್ಚಿಸಿಕೊಂಡು, ಸಾವ ತೆರನಂತೆ ದ್ರವ್ಯದ ಮುಖದಿಂದ ಸರ್ವರೂ ಕೂಡಿ ತಪ್ಪನೊಪ್ಪಿಕೊಳ್ಳಿ ಎಂದು ದೊಪ್ಪನೆ ಬೀಳುತ್ತ, ತನ್ನ ವ್ರತದ ದರ್ಪಗೆಟ್ಟು, ಕಂಬಳಕ್ಕೆ ಅಮಂಗಲವ ತಿಂಬವನಂತೆ, ದಂದುಗವ ನೋಡಾ. ಇವನ ಸಂಗವ ಮಾಡಿದವನು ಆಚಾರಕ್ಕೆಂದೆ ಹೊರಗು. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗವೇ ನೀನೇ ಬಲ್ಲೆ.

(೩೪) ಚಾಟು ಗುಂಡು ಬಂಧನ ಕಲಹಕೇತ ಯಾಚಕ ಪಗುಡಿ ಪರಿಹಾಸಕಂಗಳಿಂದ ಬೇಡಿ ತಂದು ಗುರುಲಿಂಗ ಜಂಗಮಕ್ಕೆ ಮಾಡಿಹೆನೆನಬಹುದೇ ? ಮಾಡುವ ಠಾವಿನಲ್ಲಿ ಮಾಡಿಕೊಂಬುವರಾರೆಂದು ತಾನರಿದ ಮೇಲೆ ಅಲ್ಲಿ ಬೇಡಬಹುದೇ ? ತಾ ಭಕ್ತಿಯು ಮಾಡಿಹೆನೆಂದು ಕಾಡಬಹುದೇ ? ತಾ ದಾಸೋಹಿಯಾದ ಮೇಲೆ ಅಲ್ಲಿಗೆ ತಾ ದಾಸನಾಗಿ ಸಲ್ಲೀಲೆಯಿಂ ಪ್ರಸಾದವ ಕೊಂಡು ಅಲ್ಲಿ ಇಲ್ಲಿ ಎಲ್ಲಿಯೂ ತಾನಾಗಿರಬೇಕಲ್ಲದೆ ಅಲ್ಲಿ ಮಾಡಿಹೆನೆಂದು ಎಲ್ಲರ ಬೇಡುವ ಕಲ್ಲೆದೆಯವನೊಲ್ಲ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಸಲ್ಲದ ನೇಮ.

(೩೫) ಪಂಚಾಚಾರ ಶುದ್ಧವಾದ ಸದ್ಭಕ್ತಂಗೆ ಪಾದತೀರ್ಥ ಪ್ರಸಾದದಲ್ಲಿ ನಿರುತಂಗೆ ಆ ವ್ರತನೇಮವ ನಡಿಸುವ ಸದ್ವೈವಂಗೆ ಆತನ ಸುಕಾಯಕದಿರವೆಂತೆಂದೊಡೆ ತಾ ದೃಷ್ಟದಲ್ಲಿ ಕಾಂಬುವ ಪ್ರಾಣಿಗಳ ಕೊಲ್ಲದೆ ಕೊಲ್ಲುವದಕ್ಕೊಡಂಬಡದೆ ತಾ ಮಾಡುವ ಕಾಯಕದಲ್ಲಿ ಅಧಮ ವಿಶೇಷವೆಂಬುದನರಿತು ನಡೆನುಡಿ ಸಿದ್ಧಾಂತವಾಗಿ ಲಿಂಗವನೊಡಗೂಡಿಪ್ಪ ಕಾಯಕದಿ ನಿರುತನಾಗಿ ಆ ಮುಖದಿಂದ ಬಂದ ದ್ರವ್ಯವ ಗುರುಲಿಂಗ ಜಂಗಮದ ಮುಂದಿಟ್ಟು ಆ ಪ್ರಸಾದವ ಕೊಂಡ ಸದ್ಭಕ್ತ ಆ ಪ್ರಸಾದವ ಕೊಂಡ ಗುರುವಿಂಗೆ ಇಹಸುಖ, ಲಿಂಗಕ್ಕೆ ಪರಸುಖ, ಜಂಗಮಕ್ಕೆ ಪರಮಸುಖ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕಾ ಭಾವಪ್ರಸಾದವೇ. ಪರಮಪದ.

(೩೬) ಅಸಿ ಮಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಮಾಡಿ, ಭಕ್ತರ ಮಡುಗ ಪಾದತ್ರಾಣ ಮಹರಿ ಬಾಗಿಲುವಾಡ ಬೊಕ್ಕಸ ಬೀಗ ಮುಂತಾದ ಊಳಿಗವಂ ಮಾಡಿಕೊಂಡು ವ್ರತಕ್ಕೆ ಊನಯುವಿಲ್ಲದೆ ಮಾಡುವ ಕೃತ್ಯಕ್ಕೆ ಕಡೆಯಾಗದೆ ಈ ಭಕ್ತನ ಅಂಗಣವೇ ಅವಿಮುಕ್ತಕ್ಷೇತ್ರ. ಆತನ ಮನೆಯು ಆಚಾರವೇ ಪ್ರಾಣವಾಗಿಪ್ಪ ರಾಮೇಶ್ವರಲಿಂಗದಾಶ್ರಯು.

(೩೭) ಎನ್ನಂಗ ಸೀಮೆಯುಲ್ಲಿಪ್ಪ ಗೋ ವತ್ಸ ಮೊದಲಾದ ಘಟಕ್ಕೆಲ್ಲಕ್ಕೂ ಶಿವಲಿಂಗ ಪೂಜೆ ಪಂಚಾಚಾರ ಶುದ್ಧ ನೇಮ ಭಾವ ತಪ್ಪದೆ ಪಾದೋದಕ ಪ್ರಸಾದವಿಲ್ಲದೆ ತೃಣ ಉದಕವ ಮುಟ್ಟಿಸಿದರೆ ಎನ್ನ ಸೀಮೆಗೆ ಎನ್ನ ವ್ರತಾಚಾರಕ್ಕೆ ನಾ ಕೊಂಡ ಗಮನಕ್ಕೆ ಮಾಡಿದಡೆ, ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗಕ್ಕೆ ದೂರ.

(೩೮) ದೃಷ್ಟದಲ್ಲಾಗಾಗ ಅರ್ಪಿಸಿಕೊಂಡಿಹೆನೆಂಬುದು ನಿನ್ನ ಚಿತ್ತದ ಕಲೆಯೋ, ಆ ವಸ್ತುವಿಗೆ ನೀ ತೃಪ್ತಿಯ ಮಾಡಿಹೆನೆಂಬ ನಿಶ್ಚಯವೋ? ವಿಷವ ಬಾಡದಂತೆ ಅಮೃತವ ಘಟ್ಟಿಯಂತೆ ನಿನ್ನ ಸರ್ವಾಂಗದಲ್ಲಿ ಭೇದಿಸಿದ ಲಿಂಗಕ್ಕೆ ಸಹಭೋಜನದ ಭಾವವ ನಿನ್ನ ನೀನೇ ತಿಳಿ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ.

(೩೯) ಲಿಂಗಕ್ಕೂ ತನಗೂ ಸಹಭೋಜನವಾದಲ್ಲಿ ಇದಿರಿಟ್ಟ ಪದಾರ್ಥಂಗಳ ಲಿಂಗಕ್ಕೆ ತೋರಿ ತಾ ಕೊಂಬಲ್ಲಿ ದೃಷ್ಟವಾಯಿತ್ತು. ಸ್ವಪ್ನ ಸುಷುಪ್ತಿಗಳಲ್ಲಿ ಮಿಕ್ಕಾದೇಕಾಂತ ಸತಿಕೂಟಂಗಳಲ್ಲಿ ಅದಕ್ಕೆ ದೃಷ್ಟವಹ ಸಹಭೋಜನವಾವುದಯ್ಯ? ಯೋನಿಸ್ವಪ್ನ ಸುಷುಪ್ತಿ ಮುಂತಾದ ಭಾವವ ಸಹಭೋಜನವೆಲ್ಲಿದ್ದೀತು? ಆ ಭೋಜನದ ಸಹಭೋಜನದ ಸಂಬಂಧ ಎಲ್ಲಿದ್ದೀತು? ಅದು ಕಲ್ಲಿನೊಳಗಣ ನೀರು, ನೀರಿನೊಳಗಣ ಶಿಲೆ. ಅದಾರಿಗೂ ಅಸಾಧ್ಯ ನೋಡಾ. ಅದು ಕಾಯದ ಹೊರಗಾದ ಸುಖದುಃಖದ ಹೊರಗಾದರ್ಪಿತ. ಇಂತೀ ಗೊತ್ತ ಮುಟ್ಟಿ ಸಹಭೋಜನದ ಲ್ಲರ್ಪಿಸಬಲ್ಲವಂಗೆ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವು ಸಹ ಭಾಜನ ಭೋಜನವಾಗಿಪ್ಪನು.

(೪೦) ಕಾಮುಕಗೆ ದುರ್ಜನಗೆ ಕಪಟಿಗೆ ಹೇಮ ಚೋರಗೆ ಕಟುಕ ಸಮ್ಮಗಾರಗೆ ಆವ ಭಾವದ ವ್ರತವ ಮಾಡಲಿಕ್ಕೆ ಆದ ಭಾವಿಸಿ ನಡೆಯ

# ಶಿವಾನುಭವ.

| ವರ್ಷ ೧೫ | ನೋ॰ ೧೯೪೧. | ಸಂಚಿಕೆ ೮ |
| --- | --- | --- |

## ಶಿವಾನುಭವ ಸಂಘಗಳು.

(ರಾ|| ಬ|| ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ.)

ಶಿವಶರಣರ ವಚನ ವಾಙ್ಮಯದ ಪ್ರಕಟನೆಯ ಕಾರ್ಯವನ್ನು ಶಿವಾನುಭವ ಪತ್ರಿಕೆಯು ಕೈಕೊಂಡು ಇಂದಿಗೆ ೧೫ ವರ್ಷಗಳಾದವು. ಈ ಅವಧಿಯಲ್ಲಿ ಅದರ ಮೂಲಕ ಅನೇಕ ಮಹತ್ವದ ಗ್ರಂಥಗಳು ಪ್ರಕಟವಾಗಿರುತ್ತವೆ. ಅವುಗಳ ಸಂಖ್ಯೆಯು ಈಗ ೫೫—೬೦ ವರೆಗೆ ಬಂದಿರುತ್ತದೆ. ಆದರೆ ಅವುಗಳಲ್ಲಿಯ ತತ್ವಗಳನ್ನು ಆಧುನಿಕ ಭಾಷೆಯಲ್ಲಿ ಸುಲಭಭಾಷೆಯಲ್ಲಿ ಗ್ರಂಥರೂಪದಿಂದಾಗಲಿ ಇಲ್ಲವೆ ಲೇಖರೂಪದಿಂದಾಗಲಿ ಜನತೆಯು ಮುಂದಿಡುವ ಕಾಲವು ಪ್ರಾಪ್ತವಾಗಿರುತ್ತದೆ. ಆದ್ದರಿಂದ ಇನ್ನು ಮುಂದೆ ಈ ಬಗೆಯ ಪ್ರಯತ್ನಗಳಿಗೆ ಪ್ರೋತ್ಸಾಹಕೊಡಬೇಕೆಂದು ನಾವು ಬಯಸಿದ್ದೇವೆ. ಅದ್ದರಿಂದ ಈ ದೃಷ್ಟಿಯಿಂದ ಬರೆದ ಲೇಖಗಳಿಗೆ ನಾವು ಈ ಪತ್ರಿಕೆಯಲ್ಲಿ ಇನ್ನು ಮುಂದೆ ಹೆಚ್ಚಾಗಿ ಸ್ಥಳ ಕೊಡುವೆವು.

ಶಿವಾನುಭವ ಶಾಸ್ತ್ರದ ತತ್ವಗಳನ್ನು ಪ್ರಕಟಪಡಿಸುವ ಕಾರ್ಯವು ಎಷ್ಟು ಮಹತ್ವವಾದದ್ದೋ, ಅಷ್ಟೇ ಅವುಗಳನ್ನು ಪ್ರಸಾರಪಡಿಸುವ ಕಾರ್ಯವೂ ಮಹತ್ವದ್ದದೆ. ಈ ಕಾರ್ಯದಲ್ಲಿ ಶಿವಾನುಭವ ಕೂಟಗಳು ಬಹಳ ಸಹಾಯಕಾರಿಗಳಾಗಿವೆ. ಇವುಗಳ ಮೂಲಕ ಶಿವಾನುಭವ ಶಾಸ್ತ್ರದ

ತ್ರಾಹಿ ತ್ರಾಹಿ ತಪ್ಪೆನ್ನದು ಕ್ಷಮೆ ನಿನ್ನದು ಎಂದು ಪ್ರಚಾರಕಾರ್ಯಗಳಿಗೆ ಕಂಕಣಬದ್ಧರಾಗುವುದೇ ಪ್ರಯೋಜನವು. ಇದಕ್ಕೆ ಶಿವಶರಣರ

ವಚನ— ನುಡಿದಂತೆ ನಡೆವುದು. ನಡೆದಂತೆ ನುಡಿವುದು. ಹುಸಿಯು
ನುಡಿದು ತಪ್ಪುವ ಪ್ರಪಂಚಿಯನೊಲ್ಲ ನಮ್ಮ ಕೂಡಲ
ಸಂಗಮದೇವಾ.

ಈ ವಿಷಯವಾಗಿ ಕೆಲವು ಮಹನೀಯರು ಪತ್ರಿಕಾ ಮೂಲಕ ಸಲಹೆಗಳನ್ನು ಕೊಡುವುದು ನೋಡಿದರೆ ಸಕ್ಕರೆಯನ್ನು ಸವಿದರೆ ಹೇಗೆ ಬೇರೆ ರುಚಿ ಇರುವದಿಲ್ಲವೋ ಹಾಗೆಯೇ ಸರಿ.

ಆಡಿದರೇನು ಹಾಡಿದರೇನು ಓದಿದರೇನು
ತ್ರಿವಿಧದಾಸೋಹವಿಲ್ಲದನ್ನಕ್ಕರ? ಆಡದೆ ನವಿಲು
ಹಾಡದೆ ತಂತಿ ಓದದೆ ಗಿಳಿ? ಭಕ್ತಿ ಇಲ್ಲದವರನೊಲ್ಲ
ಕೂಡಲಸಂಗಮದೇವಾ.

# ಬಸವೇಶ್ವರನಕಿಂತಲೂ ಮೊದಲಿನ ವೀರಶೈವ ಧರ್ಮ.

(ಲೇಖಕರು— ರಾ। ಬಾ॥ ಪಿ. ಜಿ. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ)



## ಬ್ರಹ್ಮ, ವಿಷ್ಣು, ರುದ್ರ

( ಹಿಂದಿನಿಂದ ಮುಂದೆ ಸಾಗಿ ಮುಗಿದದ್ದು )

ಈ ಶಿರೋಲೇಖದ ಕೆಳಗೆ ಪರಮಾತ್ಮನ ಬಗ್ಗೆ ವೀರಶೈವರು ಬೇರೆ ಬೇರೆ ಕಾಲಗಳಲ್ಲಿ ಯಾವ ಯಾವ ಅಭಿಪ್ರಾಯಗಳನ್ನು ಹೊಂದಿದವರಾಗಿದ್ದರೆಂಬುದನ್ನು ಕುರಿತು ಹಿಂದಿನ ಸಂಚಿಕೆಗಳಲ್ಲಿ ನಾವು ವಿವೇಚಿಸುತ್ತ ಬಂದಿದೇನೆ. ಪರಮಾತ್ಮನು ಒಬ್ಬನೇ ಇದ್ದಾನೆಂಬ ವಿಚಾರಗಳು ಅತ್ಯಂತ ಮಹತ್ವದ ಧಾರ್ಮಿಕಗ್ರಂಥಗಳಾದ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುತ್ತವೆ. ಅವುಗಳ ತರುವಾಯ ಪೌರಾಣಿಕ ಕಾಲವು ಬಂದೊದಗಿತು. ಆಗ ದೇವರ ಬಗ್ಗೆ ಅನೇಕ ಕಟ್ಟು ಕಥೆಗಳು ಜನರ ರಂಜನೆಗೋಸ್ಕರ ರಚಿಸಲ್ಪಟ್ಟವು. ಈ ಕಾಲದಲ್ಲಿ ಅಸಂಖ್ಯ ದೇವತೆಗಳು ಕಲ್ಪಿಸಲ್ಪಟ್ಟವು. ಇವುಗಳಲ್ಲಿ ಬ್ರಹ್ಮ, ವಿಷ್ಣು, ಶಿವ ಈ ದೇವರುಗಳು ಬಹಳ ಮಹತ್ವದ ಸ್ಥಾನವನ್ನು ಹೊಂದಿದವು. ಇವುಗಳ ಹೆಸರಿನಿಂದ ಅಸಂಖ್ಯ ದೇವಾಲಯಗಳು ಉದ್ಭವಿಸಹತ್ತಿದವು. ಇವರೆಲ್ಲರಿಗೆ ಹೆಂಡಿರು, ಮಕ್ಕಳುಗಳು, ಅಣ್ಣ-ತಮ್ಮಂದಿರು ಸಹ ಇರುತ್ತಾರೆಂದು ತಿಳಿಯಲ್ಪಟ್ಟಿತು. ಸರಸ್ವತೀ, ಲಕ್ಷ್ಮೀ, ಪಾರ್ವತಿ, ಗಣಪತಿ, ಷಣ್ಮುಖ, ವೀರಭದ್ರ ಇವರೇ ಮೊದಲಾದವರು ಇವರು ಇರುತ್ತಾರೆ. ಇದರಿಂದ ಮುಂದೆ ಇವರ ಪೂಜೆಗಳೂ ಸಹ ಜನರಲ್ಲಿ ರೂಢವಾಗಹತ್ತಿದವು. ಈ ಸ್ಥಿತಿಯು ಮೂಲಕ ದೇವರ ವಿಷಯವಾಗಿ ಸಮಾಜದಲ್ಲಿ ಗೊಂದಲುಗಳಿದ್ದವು. ಬರಬರುತ್ತ ವಿಷ್ಣುಭಕ್ತರೂ, ಶಿವಭಕ್ತರೂ ತಮ್ಮತಮ್ಮದೇವರ ಹೆಸರಿನಿಂದ ಪರಸ್ಪರ ದ್ವೇಷವನ್ನು ಸಹ ಮಾಡಹತ್ತಿದರು; ಇಷ್ಟೇ ಅಲ್ಲ, ಅವರು ಪರಸ್ಪರ ಹಿಂಸೆಯನ್ನು ಸಹ ಮಾಡತೊಡಗಿದರು. ಇದರಿಂದ ಹಿಂದೂ ಸಮಾಜದಲ್ಲಿ ಅತ್ಯಂತ ಅವ್ಯವಸ್ಥೆಯುಂಟಾ

ಯಿತು. ಮತ್ತು ಉಪನಿಷತ್ತುಗಳಲ್ಲಿ ದೇವರ ವಿಷಯವಾಗಿ ಕಂಡುಬರುವ ಉಚ್ಚ ಮತ್ತು ಶುದ್ಧ ವಿಚಾರಗಳನ್ನು ಬಹುಜನ ಸಮಾಜವು ಮರೆತು ಬಿಟ್ಟಿತು.

ಬಸವೇಶ್ವರನ ಪೂರ್ವದಲ್ಲಿ ಶಿವ ಮತ್ತು ವಿಷ್ಣು ಈ ದೇವತೆಗಳ ಹೆಸರಿನಿಂದ ಕಲಹಗಳು ವೀರಶೈವ ಸಮಾಜವನ್ನು ತಾಕದೆ ಬಿಡಲಿಲ್ಲ. ರೇವಣಸಿದ್ಧೇಶ್ವರ ಮತ್ತು ಶಂಕರದಾಸಿಮಯ್ಯ ಈ ಶಿವಶರಣರು ಶಿವೋಪಾಸಕರಾಗಿ ವಿಷ್ಣುದೇವಾಲಯಗಳನ್ನು ಕೆಡಿಸಿದ್ದು ಅವರ ಚರಿತ್ರೆಗಳಿಂದ ಕಂಡುಬರುತ್ತದೆ. ಈ ವಿಷಯವನ್ನು ಕುರಿತು ನಾವು ಸವಿಸ್ತಾರವಾಗಿ ಹಿಂದಿನ ಸಂಚಿಕೆಗಳಲ್ಲಿ ಅನೇಕ ಬಾರಿ ವಿವರಿಸಿದ್ದೇವೆ. ಆದರೆ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪವು ಸ್ಥಾಪಿಸಲ್ಪಟ್ಟಿತು. ಈ ಮಂಟಪದಲ್ಲಿ ಸೇರ್ಪಡೆಯಾದ ಶಿವಶರಣರು ಮಾತ್ರ ಈ ತಪ್ಪು ತಿಳುವಳಿಕೆಗಳನ್ನು ದೂರ ಮಾಡಿ, ದೇವರು ಒಬ್ಬನೇ ಇದ್ದಾನೆ, ಅವನು ಸಂಸಾರರಹಿತನೂ, ವಿಶ್ವವ್ಯಾಪಿಯೂ ಆಗಿದ್ದಾನೆ, ಎಂದು ಯಾವ ಉಪನಿಷದ್ವಾಕ್ಯಗಳು ಸಾರುತ್ತವೆಯೋ ಅವುಗಳಲ್ಲಿ ಅಡಕವಾಗಿರುವ ಶ್ರೇಷ್ಠ ತತ್ವಗಳನ್ನು ಜನರಲ್ಲಿ ಪ್ರಸಾರ ಮಾಡಿದರು. ಆದರೆ ಬಸವೇಶ್ವರನು ಪ್ರಬಲನಾಗಿ ಕಲ್ಯಾಣದಲ್ಲಿ ವಾಸಮಾಡಿದ್ದು ಕ್ರಿ. ಶಕೆ ೧೧೬೩ರಿಂದ ೧೧೬೮ದ ವರೆಗೆ ಅಂದರೆ ೫-೬ ವರ್ಷಗಳು ಮಾತ್ರ. ಮುಂದೆ ಮಧುವರಸ ಹರಳಯ್ಯಗಳು ವಧಿಸಲ್ಪಟ್ಟದ್ದರಿಂದ ವೀರಶೈವ ಸಮಾಜದಲ್ಲಿ ಒಂದು ಕ್ಷೋಭವು ಉತ್ಪನ್ನವಾಯಿತು. ಇದರಿಂದ ಆಗಿನ ಶಿವಶರಣರು ಕಲ್ಯಾಣದಲ್ಲಿ ನಿಲ್ಲುವದು ಅಶಕ್ಯವಾಯಿತು. ಆಗ ಅವರು ಆತ್ಮಸಂರಕ್ಷಣೆಗಾಗಿ ಉಳವಿಯ ಮಹಾ ಪರ್ವತ ಪ್ರದೇಶವನ್ನು ಆಶ್ರಯಿಸಬೇಕಾಯಿತು.

ಈ ಸ್ಥಿತಿಯುಂಟಾದರೂ ಕೂಡ, ಶಿವಾನುಭವ ಮಂಟಪದಲ್ಲಿ ಸ್ಥಿರಪಡಿಸಲ್ಪಟ್ಟ ವಿಚಾರಗಳನ್ನು ಬಸವೇಶ್ವರನ ತರುವಾಯ ಉತ್ಪನ್ನರಾದ ಅಸಂಖ್ಯ ವಚನಕಾರರೂ, ಶಿವಶರಣರೂ ಮತ್ತಿಷ್ಟು ಪ್ರಬಲವಾಗಿ ಪ್ರಸಾರಪಡಿಸಿದರು. ಈ ಸಂಗತಿಯು ಅವರ ಅಸಂಖ್ಯ ವಚನಗಳಿಂದ ಕಂಡುಬರುತ್ತದೆ.

ಪರಮಾತ್ಮನ ಬಗ್ಗೆ ಇಂಥ ಉಚ್ಚ ವಿಚಾರಗಳು ಶಿವಶರಣರ ಕಾಲದಲ್ಲಿ ಪ್ರಾದುರ್ಭವಿಸಿದ್ದರಿಂದ ಬ್ರಹ್ಮ, ವಿಷ್ಣು, ಶಿವ ಇವರ ಹೆಸರಿನಿಂದ

ದೇಶದಲ್ಲಿ ಕಲಹಗಳಾಗಲು ಅಥವಾ ಈ ದೇವತೆಗಳಲ್ಲಿ ಯಾರು ಹೆಚ್ಚು, ಯಾರು ಕಡಿಮೆ ಎಂಬದನ್ನು ಕುರಿತು ವಾದಗಳೇಳಲು ಕಾರಣವು ಉಳಿಯಲಿಲ್ಲ. ಈ ತೆರದ ಭಿನ್ನತೆಗಳನ್ನು ಕಲ್ಪಿಸಕೂಡದೆಂದು ಅವರ ಅನೇಕ ಉಕ್ತಿಗಳು ಇರುತ್ತವೆ. ಅವುಗಳಲ್ಲಿ ಕೆಲವುಗಳನ್ನು ನಾವು ಹಿಂದಿನ ಸಂಚಿಕೆಯಲ್ಲಿ ಪ್ರಕಟ ಮಾಡಿದ್ದೇವೆ.

ಈ ಕಾಲದಲ್ಲಿ ಆಗಿ ಹೋದ ಶಿವಶರಣರ ಹೆಸರುಗಳನ್ನೂ ಮುದ್ರಿಕೆಗಳನ್ನೂ ನಾವು ಚನ್ನಾಗಿ ಪರೀಕ್ಷಿಸಬೇಕು ಅಂದರೆ ನಾವು ಮೇಲೆ ಹೇಳಿದ ಈ ವಿಷಯದ ಸತ್ಯತೆಯು ವಾಚಕರಿಗೆ ಮನದಟ್ಟಾಗದೆ ಇರದು. ರಾಮಚಂದ್ರನು ವಿಷ್ಣುವಿನ ಅವತಾರವೆಂದು ಜನರಲ್ಲಿ ಪ್ರಸಿದ್ಧನಾಗಿದ್ದಾನಷ್ಟೇ. ಆದ್ದರಿಂದ ಪೂರ್ಣ ಶಿವಭಕ್ತರು ಅವನನ್ನು ಪೂಜಿಸುವದಿಲ್ಲ. ಪೂಜಿಸುವ ಪದ್ಧತಿಯೂ ಅವರಲ್ಲಿಲ್ಲ. ಆದರೆ ಆತನ ಹೆಸರುಗಳುಳ್ಳ ಅನೇಕ ವಚನಕಾರರು ವೀರಶೈವರಲ್ಲಿ ಆಗಿ ಹೋಗಿದ್ದಾರೆ! ಹಾಗೆಯೇ ಈ ವಚನಕಾರರು ಗ್ರಹಣಮಾಡಿದ ಮುದ್ರಿಕೆಗಳಲ್ಲಿಯೂ ಕೂಡ ರಾಮನ ಹೆಸರುಗಳು ಕಂಡುಬರುತ್ತವೆ!! ಇದು ಲಕ್ಷಿಸತಕ್ಕ ಸಂಗತಿಯಾಗಿದೆ. ಈ ವಿಷಯವಾಗಿ ನಾವು ಕೆಳಗಿನ ಉದಾಹರಣೆಗಳನ್ನು ವಾಚಕರ ಲಕ್ಷ್ಯಕ್ಕೆ ತರುತ್ತೇವೆ.

ದೇವರದಾಸಿಮಯ್ಯನು ಬಹು ಪ್ರಸಿದ್ಧ ವಚನಕಾರನು. ಅವನನ್ನು ಕುರಿತು ಬಸವೇಶ್ವರನು ಅತ್ಯಂತ ಭಕ್ತಿ ಭಾವದಿಂದ ತನ್ನ ವಚನಗಳಲ್ಲಿ ಉಲ್ಲೇಖಿಸುತ್ತಾನೆ. ಆದರೆ ಇವನ ಮುದ್ರಿಕೆಯು 'ರಾಮನಾಥ' ಎಂದು ಇದೆ. ಇದರಲ್ಲಿ ರಾಮ ಎಂಬ ಶಬ್ದವು ಬಂದಿರುತ್ತದೆ!

ರೆಮ್ಮವ್ವೆಯ ಮುದ್ರಿಕೆಯು "ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ" ಎಂದಿದೆ.

ಏಕಾಂತದ ರಾಮಯ್ಯನು ವೀರಶೈವ ಶರಣರಲ್ಲಿ ಮಹತ್ವದ ಸ್ಥಾನವನ್ನು ಹೊಂದಿರುತ್ತಾನೆ. ಇವನು ರಾಮನ ಹೆಸರನ್ನೇ ತನಗೆ ಇಟ್ಟುಕೊಂಡಿದ್ದಾನೆ. ಅಷ್ಟೇ ಅಲ್ಲ, ಅವನ ಮುದ್ರಿಕೆಯಾದ "ಏಕಾಂತ ರಾಮೇಶ್ವರಲಿಂಗ" ಇದರಲ್ಲಿಯೂ ಈ 'ರಾಮ' ಶಬ್ದವು ಬರುತ್ತದೆ.

ಮೆರಮಿಂಡದೇವನೆಂಬ ವಚನಕಾರನು "ಐಘಟದೂರ ರಾಮೇಶ್ವರಲಿಂಗ" ಎಂದು ತನ್ನ ಮುದ್ರಿಕೆಯನ್ನು ಇಟ್ಟುಕೊಂಡಿದ್ದಾನೆ.

ಮಾದರ ಚನ್ನಯ್ಯನ ವಚನಗಳಲ್ಲಿ " ಕಯ್ಯುಳಿಗತ್ತಿ ಅಡಿಗೂಂಟೆ ಕೆಡೆಯಾಗಬೇಡ. ಅರಿ ನಿಜಾತ್ಮರಾಮನಾ "ಎಂಬ ಮುದ್ರಿಕೆಯು ಇದೆ. ಇದರಲ್ಲಿ ಅವನು ಪರಬ್ರಹ್ಮ ತತ್ವವನ್ನು ರಾಮ ಹೆಸರಿನಿಂದಲೇ ಸಂಬೋಧಿಸುತ್ತಾನೆ.

ತಳವಾರ ಕಾಮಿದೇವನು "ಕಾಮಹರಪ್ರಿಯ ರಾಮನಾಥಾ ಎಂತಲೂ, ಬೇರೆ ಮೂವರು ವಚನಕಾರರು ಅನುಕ್ರಮವಾಗಿ "ಮಹಾಲಿಂಗ ಚನ್ನರಾಮ" ಎಂತಲೂ "ರಾಮೇಶ್ವರ ಲಿಂಗ" ಎಂತಲೂ "ಶಾಂತ ರಾಮಲಿಂಗ" ಎಂತಲೂ ತಮ್ಮ ಮುದ್ರಿಕೆಗಳನ್ನು ಇಟ್ಟುಕೊಂಡಿದ್ದಾರೆ.

ಚಂದಿಮರಸನೆಂಬ ವಚನಕಾರನು "ಸಿಮ್ಮಲಿಗೆಯ ಚನ್ನರಾಮ" ಎಂದು ಪರಮಾತ್ಮನನ್ನು ಕುರಿತು ಸಂಬೋಧಿಸುತ್ತಾನೆ. ಇವನು ಬಹು ಪ್ರಸಿದ್ಧನು.

ಗುಪ್ತಮಂಚಣ್ಣನೆಂಬ ಶಿವಶರಣನ ಮುದ್ರಿಕೆಯು ಒಂದು ವಿಶಿಷ್ಟ ತೆರನಾಗಿದೆ. ಅದು "ನಾರಾಯಣ ಪ್ರಿಯ ರಾಮನಾಥಾ" ಎಂದಿದೆ. ಅಂದರೆ ಪರಮಾತ್ಮನನ್ನು ಕುರಿತು ಹೇಳುವಲ್ಲಿ 'ನಾರಾಯಣ'ನಿಗೆ ಪ್ರಿಯನು ಎಂದು ಹೇಳಲು ಅವನಿಗೆ ಎಷ್ಟು ಮಾತ್ರವೂ ಸಂದೇಹವಿಲ್ಲ. ಅವನ ಒಂದು ವಚನವು ಹೇಗಿದೆಂಬದನ್ನು ವಾಚಕರು ವಿಚಾರಮಾಡ ತಕ್ಕದ್ದು. ಅದು ಅವುದೆಂದರೆ:—

"ಜಗವೆಲ್ಲ ಗೋವಿನ ಹಂಗು. ನರಸುರಾದಿಗಳೆಲ್ಲ ಗೋವಿನ ಹಂಗು. ಸಕಲ ಜೀವಾಧಾರ, ಗೋಮಯ, ಗೋಕುಲಕ್ಕೊಡೆಯ, ಗೋಪ್ರಣಮಸ್ವರೂಪ ನಾರಾಯಣ ಪ್ರಿಯ ರಾಮನಾಥಾ"

ಎಂದು ಅವನು ಹೇಳುತ್ತಾನೆ. ಜಗತ್ತಿನಲ್ಲೆಲ್ಲ ಪರಮಾತ್ಮನು ತುಂಬಿಕೊಂಡಿದ್ದಾನೆಂದು ಅನೇಕ ವಚನಕಾರರು ಹೇಳುತ್ತಾರಷ್ಟೇ. ಅವರು ತಮ್ಮ ಸುತ್ತಲೂ ಗೋಚರಿಸುವ ಬನಗಳು, ಬಳ್ಳಿಗಳು, ಚಲಿಸುವ ಹವೆಯು, ಬಿತ್ತುವ ಬೀಜ, ಇವೂ ಕೂಡ ಪರಮಾತ್ಮನ ಕಳೆ ಎಂದು ಅವರು ವಿವರಿಸುತ್ತಾರೆ. ಅದೇ ಮೇರೆಗೆ ಈ ವಚನಕಾರನು ಗೋವಿನ ಮಹತ್ವವನ್ನು ಹೇಳುವಲ್ಲಿ ಈ ಗೋವಿಗೂ ನಾರಾಯಣನಿಗೂ ನಿಕಟ ಸಂಬಂಧವಿದೆ ಎಂದು ಹೇಳಿ, ಪರಮಾತ್ಮನನ್ನು ಕುರಿತು "ನಾರಾಯಣಪ್ರಿಯ ರಾಮನಾಥಾ" ಎಂದು ಸಂಬೋಧಿಸುತ್ತಾನೆ.

ವೀರಶೈವ ವಚನಕಾರರು ವಿಷ್ಣುವಿನ ಕಡುಹಗೆಗಳಾಗಿದ್ದರೆ ಮೇಲೆ ಹೇಳಿದ ರೀತಿಯಿಂದ ಅವರು ಪರಮಾತ್ಮನನ್ನು ಕುರಿತು ವಿಷ್ಣುವಿಗೆ ಸಂಬಂಧಿಸಿ ಹೇಳುತ್ತಿರಲಿಲ್ಲ.

ಈ ಸಂಗತಿಯು ಆಗಿನ ಶಿವಶರಣರಲ್ಲಿ ಮಾತ್ರವಲ್ಲ, ಸಾಮಾನ್ಯ ಜನರಲ್ಲಿಯೂ ಕೂಡ ಇದ್ದುದು ಕಂಡುಬರುತ್ತದೆ. ಹರಿಹರ ಕವಿಯು ವೀರಶೈವ ಕವಿಗಳಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದವನಾಗಿದ್ದಾನಷ್ಟೇ. ಆದರೆ ಅವನ ಹೆಸರನ್ನು ವಾಚಕರು ಪರೀಕ್ಷಿಸಬೇಕು. ಅದರಲ್ಲಿ ಹರಿ, ಹರ ಇವರಲ್ಲಿ ವಿಭೇದವನ್ನು ಕಲ್ಪಿಸಕೂಡದೆಂಬ ಭಾವವು ಪ್ರಕಟವಾಗುವದಿಲ್ಲವೇ ? ಹಾಗೆಯೇ ಅವನ ಸೋದರಳಿಯನಾದ 'ರಾಘವಾಂಕನು' ಶ್ರೀರಾಮನ ಹೆಸರನ್ನೇ ಇಟ್ಟುಕೊಂಡಿದ್ದಾನೆ. ಈ ಉಭಯತರು ಹಿಂದುಗಡೆ ವೀರಶೈವ ಧರ್ಮವನ್ನು ಸ್ವೀಕರಿಸಿದರೆಂದು ಭಾವಿಸಿದರೂ ಕೂಡ, ಅವರು ಆ ಸಮಯದಲ್ಲಿ ವಿಷ್ಣುವಿಗೆ ಸಂಬಂಧಪಟ್ಟ ತಮ್ಮ ಹೆಸರನ್ನು ಬದಲು ಮಾಡಿ ಶಿವನಿಗೆ ಸಂಬಂಧಿಸಿದ ಬೇರೊಂದು ಹೆಸರನ್ನು ಇಟ್ಟುಕೊಂಡು ಪ್ರಸಿದ್ಧಿಗೆ ಬರಬಹುದಾಗಿತ್ತಲ್ಲವೇ ? ಆದರೆ ವಿಷ್ಣುವಿನ ಹೆಸರುಗಳಲ್ಲಿ ಆಕ್ಷೇಪಾರ್ಹವಾದುದು ಆಗಿನ ಕಾಲದಲ್ಲಿಯ ವೀರಶೈವರಿಗೆ ತೋರಿರಲಿಕ್ಕಿಲ್ಲೆಂದು ಕಾಣುತ್ತದೆ. ಆದ್ದರಿಂದಲೇ ಅವರು ಇವುಗಳಲ್ಲಿ ಬದಲಾವಣೆ ಮಾಡಿಲ್ಲೆಂದು ಹೇಳಬೇಕಾಗುತ್ತದೆ. ಬಸವೇಶ್ವರನ ತಂದೆಯ ಹೆಸರು 'ಮಾದರಸ' ಎಂದು ಇದೆ ಇದು ವಿಷ್ಣುವಿನ ಹೆಸರಾದ 'ಮಾಧವ-ಅರಸ' ಎಂಬುದರ ಬೇರೊಂದು ರೂಪವದೆ.

ದೇವರ ವಿಷಯವಾಗಿ ಈ ತರದ ಉದಾರ ವಿಚಾರಗಳ ಪ್ರಭಾವವು ಬಹುಜನ ಸಮಾಜದ ಮೇಲೆ ಆಗ ಸ್ವಾಭಾವಿಕವಾಗಿ ಉಂಟಾಗದೆ ಇರದು. ಇದು ಬಸವೇಶ್ವರನ ಕಾಲದಲ್ಲಿ ಅಂದರೆ ೧೧, ೧೨, ೧೩ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ರಚಿಸಲ್ಪಟ್ಟ ದೇವಾಲಯಗಳಲ್ಲಿ ಕೂಡ ಕಂಡುಬರುತ್ತದೆ. ಅವುಗಳಲ್ಲಿ ಹರಿಹರ ವಿಭೇದವನ್ನು ದೂರೀಕರಿಸಿದ ದೃಶ್ಯಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಉದಾಹರಣಾರ್ಥವಾಗಿ ಐಹೊಳೆ ಗ್ರಾಮದಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಕೆಲವು ಕಡೆಗೆ ಒಂದೇ ಕಟ್ಟಡದಲ್ಲಿ ವಿಷ್ಣುವಿಗೆ ಸಂಬಂಧಿಸಿದ ಚಿತ್ರಗಳೂ ಅವುಗಳ ಮಗ್ಗುಲುಗಳಲ್ಲಿಯೇ ಶಿವನಿಗೆ ಸಂಬಂಧಿಸಿದ ಚಿತ್ರಗಳೂ ಇರುವದನ್ನು ನಾವು ನೋಡುತ್ತೇವೆ. ಮೈಸೂರು ಪ್ರಾಂತದಲ್ಲಿ ತುಂಗಭದ್ರೆಯ ತೀರ

ದಲ್ಲಿರುವ ಹರಿಹರ ಗ್ರಾಮದಲ್ಲಿರುವ ಪ್ರಸಿದ್ಧ ದೇವಾಲಯದಲ್ಲಿ ಇದೇ ಸಂಗತಿಯು ಹೊರಪಡುತ್ತದೆ. ಈ ಸಂಗತಿಗಳು ಏತರ ದ್ಯೋತಕವು? ಪರಮಾತ್ಮನು ಒಬ್ಬನೇ ಇದ್ದಾನೆ ಮತ್ತು ಇತರ ದೇವತೆಗಳೆಲ್ಲ ಅವನ ಅಂಶಗಳು ಇವೆ ಎಂಬ ವಿಚಾರಗಳು ಯಾವ ಕಾಲದಲ್ಲಿ ಪ್ರಚಾರ ಮಾಡಲ್ಪಟ್ಟವೋ ಆ ಕಾಲದಲ್ಲಿ ಈ ದೇವಾಲಯಗಳು ಸ್ಥಾಪಿಸಲ್ಪಟ್ಟಿರಬೇಕು. ೧೧ನೇ ೧೨ನೇ ಶತಮಾನಗಳಲ್ಲಿಯೇ ಅಸಂಖ್ಯ ವಚನಕಾರರು ದೇಶದಲ್ಲಿ ಉತ್ಪನ್ನರಾದರು ಆಗ ಅವರ ಉದಾರ ವಿಚಾರಗಳು ದೇಶಮಧ್ಯದಲ್ಲಿ ಪ್ರಸಾರ ಹೊಂದಿರಲಿಕ್ಕೆಬೇಕು. ಇವರು ಇದ್ದ ಕಾಲಕ್ಕೆ ಇಂಥ ದೇವಾಲಯಗಳು ಉತ್ಪನ್ನಿಸಿವೆ. ಅವುಗಳಲ್ಲಿ ಹರಿ-ಹರ ವಿಭೇದವನ್ನು ದೂರೀಕರಿಸಬಹುದೆಂದು ತೋರುತ್ತದೆ.

"ವೀರಶೈವರ ಪೂರ್ವದ ಹೆಸರು ಯಾವುದು" ಎಂಬ ಶಿರೋಲೇಖದ ಕೆಳಗೆ ಶಿವಾನುಭವ ಸಂಪುಟ ೧೩, ೧೪ ಇವುಗಳಲ್ಲಿ ೮—೧೦ ಲೇಖಗಳು ಅನೇಕಜನ ಮಹನೀಯರಿಂದ ಬರೆಯಲ್ಪಟ್ಟಿವೆ. ಅವುಗಳಲ್ಲಿ ನಾವು ಬರೆದ ಕೆಲವು ಲೇಖಗಳಲ್ಲಿ 'ವೀರಶೈವ' ಎಂಬ ಹೆಸರು ಬಸವೇಶ್ವರನ ಕಾಲದಲ್ಲಿದ್ದಿಲ್ಲೆಂದು ಪ್ರಕಟಪಡಿಸಿದ್ದೇವೆ. ಯಾಕಂದರೆ ಆ ಕಾಲದ ವೀರಶೈವರ ಶಿಲಾಶಾಸನಗಳಲ್ಲಿ ಈ ಶಬ್ದವು ದೊರಕುವದಿಲ್ಲ ಮತ್ತು ಬಸವೇಶ್ವರನ ವಚನಗಳಲ್ಲಿ ಮತ್ತು ಹರಿಹರದೇವನ ಗ್ರಂಥಗಳಲ್ಲಿ ಸಹ ಈ ಶಬ್ದವು ಉಪಯೋಗಿಸಲ್ಪಟ್ಟಿಲ್ಲ. ಇವೇ ಈ ವಿಷಯವಾಗಿ ನಾವು ತೋರಿಸಿದ ಕಾರಣಗಳಲ್ಲಿ ಮಹತ್ವವಾದವುಗಳು. ಹೀಗೆಊಹಿಸಲು ಐತಿಹಾಸಿಕ ಮತ್ತು ಧಾರ್ಮಿಕ ಕಾರಣಗಳೂ ಇವೆ ಎಂಬದು ಈ ಲೇಖದಲ್ಲಿ ಕಾಣಿಸಿದ ಸಂಗತಿಗಳಿಂದ ಕಂಡುಬರುವದು. ಆಗ ಉತ್ಪನ್ನರಾದ ಶಿವಶರಣರು ಪರಮಾತ್ಮನು ಒಬ್ಬನೇ ಇದ್ದಾನೆಂದು ಭಾವಿಸಿ ತ್ರಿಮೂರ್ತಿಗಳಲ್ಲೊಬ್ಬನಾದ ಶಿವನನ್ನು ನಿರಾಕರಿಸಿದ್ದರಿಂದ ಅವರು ವೀರಶೈವ ಎಂಬ ಶಬ್ದವನ್ನು ಉಪಯೋಗಿಸಿಕೊಂಡಿರುವದಿಲ್ಲ. ತಾವು ವೀರಶೈವ ಎಂಬ ಶಬ್ದ ಉಪಯೋಗಿಸುವಲ್ಲಿ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನ ಭಕ್ತರು ಎಂಬ ಭಾವವು ಉಂಟಾಗುತ್ತದೆ. ಆದ್ದರಿಂದ ಯಾವ ಕಾಲದಲ್ಲಿ ಶಿವ-ವಿಷ್ಣು ಈ ದೇವತೆಗಳ ಶ್ರೇಷ್ಠತ್ವದ ಬಗ್ಗೆ ಕೋಲಾಹಲಗಳಿದ್ದವೋ ಆ ಕಾಲದಲ್ಲಿ ಇಂಥ ಶಬ್ದವು ಉತ್ಪನ್ನವಾಗಿರಬೇಕು. ಉದಾಹರಣಾರ್ಥವಾಗಿ ಚೋಳ ರಾಜರಲ್ಲಿ ಒಂದು ಕಾಲದಲ್ಲಿ ಈ ಸ್ಥಿತಿಯುಂಟಾಯಿತು. ಆದ್ದರಿಂದ ಅಲ್ಲಿ ವೀರವೈಷ್ಣವರು ವೀರಶೈವರು, ಎಂಬ ಹೆಸ

ರಿನ ಸಮಾಜಗಳು ಉತ್ಪನ್ನವಾದವು. ತಮಿಳು ದೇಶದಲ್ಲಿ ''ವೀರಶೈವ''ರು ಎಂಬ ಹೆಸರಿನ ಒಂದು ಪಂಗಡವು ಇದೆ ಎಂದು ನಾವು ಕೇಳುತ್ತೇವೆ. ಅದೇ ರೀತಿಯಾಗಿ ಕರ್ನಾಟಕದಲ್ಲಿ ಯಾವ ಕಾಲದಲ್ಲಿ ಶಿವ ಮತ್ತು ವಿಷ್ಣು ಈ ದೇವತೆಗಳ ವಿಷಯವಾಗಿ ಹೋರಾಟಗಳು ಎದ್ದವೋ ಆ ಕಾಲದಲ್ಲಿ ಈ ವೀರಶೈವ ಶಬ್ದವು ಉದ್ಭವಿಸಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಆದ್ದರಿಂದ ಈ ಜಗಳಗಳನ್ನು ದೂರ ಮಾಡಿದ ಶಿವಶರಣರ ಕಾಲದಲ್ಲಿ ಇವರು ತಾವು 'ವೀರಶೈವ' ರೆಂದು ಹೇಳಿಕೊಳ್ಳುವ ಸಂಭವವಿಲ್ಲ. ಆಗ ಇವರು ತಾವು ಶಿವಭಕ್ತರು, ಲಿಂಗವಂತರು, ಲಿಂಗಾಯತರು ಎಂದು ಸಾಮಾನ್ಯ ಹೆಸರಿನಿಂದ ಕರೆದುಕೊಂಡಿರುವದು ಸ್ವಾಭಾವಿಕವಾಗಿದೆ. ಹಾಗೆಯೇ ಅವರು ತಮ್ಮನ್ನು ಕರೆದುಕೊಂಡೂ ಇದ್ದಾರೆ. ಈ ಕಾರಣದಿಂದಲೇ ಈ ಕಾಲದಲ್ಲಿ ಉಂಟಾದ ವಾಙ್ಮಯದಲ್ಲಿ, ಅಂದರೆ ಬಸವೇಶ್ವರನ ವಚನದಲ್ಲಿ ಮತ್ತು ಹರಿಹರನ ಕಾವ್ಯಗಳು ಉದ್ಭವಿಸಿದ ಕಾಲದಲ್ಲಿ ಈ ಶಬ್ದವು ಬಳಕೆಯಲ್ಲಿರಲಿಲ್ಲ.

ಆದರೆ ೧೪ನೇ ಶತಮಾನದಲ್ಲಿ ಉಂಟಾಗಿರುವ ವೀರಶೈವ ಗ್ರಂಥಗಳಲ್ಲಿ "ವೀರಶೈವ" ಎಂಬ ಹೆಸರು ಪ್ರಾದುರ್ಭವಿಸಹತ್ತುತ್ತದೆ. ಭೀಮಕವಿಯ ಬಸವ ಪುರಾಣದಲ್ಲಿ ಈ ಶಬ್ದವು ಅನೇಕ ಬಾರಿ ಬಂದಿರುತ್ತದೆ. ಆದರೆ ಈ ಗ್ರಂಥವು ೧೪ನೇ ಶತಮಾನದ ಮಧ್ಯ ಭಾಗದಲ್ಲಿ ರಚಿತವಾದದ್ದಿರುತ್ತದೆ. ಈ ಕಾಲದಲ್ಲಿ ಪುನಃ ಶಿವ ಮತ್ತು ವಿಷ್ಣು ಈ ದೇವತೆಗಳ ಬಗ್ಗೆ ಪ್ರಾಂತದಲ್ಲಿ ವಾದಗಳು ಉದ್ಭವಿಸಿದ ಹಾಗೆ ತೋರುತ್ತದೆ. ಈ ಶತಮಾನದಲ್ಲಿಯೇ ಶ್ರೀ ಮಧ್ವಾಚಾರ್ಯರ ವೈಷ್ಣವ ಮತವು ಪ್ರಾದುರ್ಭವಿಸಿತು. ಈ ಮತದಲ್ಲಿ ವಿಷ್ಣುವಿಗೆ ಶ್ರೇಷ್ಠ ಸ್ಥಾನವು ಕೊಡಲ್ಪಟ್ಟು ಶಿವ ಮತ್ತು ಶಿವನಿಗೆ ಸಂಬಂಧಿಸಿದ ದೇವತೆಗಳಿಗೆ ಕಡಿಮೆಯ ಸ್ಥಾನವು ಕೊಡಲ್ಪಟ್ಟಿತು. ಇದರಿಂದ ಮೊದಲಿನಂತೆಯೇ ವಿವಾದಗಳು ಉತ್ಪನ್ನವಾಗಿ ವೀರಶೈವರು, ವೀರವೈಷ್ಣವರು ಎಂಬ ಪಂಗಡಗಳುದ್ಭವಿಸಿದವು.

ಇದಲ್ಲದೆ ಈ ೧೪ನೇ ಶತಮಾನದಿಂದೀಚೆಗೆ ಪುರಾತನ ಶಿವಶರಣರ ವಚನಗಳ ಅಭ್ಯಾಸವು ಕಡಿಮೆಯಾಗಹತ್ತಿತು. ಬಹುಶಃ ಅದು ನಿಂತು ಹೋಯಿತೆಂತಲೇ ಹೇಳಬೇಕಾಗುತ್ತದೆ. ಅವುಗಳ ಬದಲು ಸಂಸ್ಕೃತದ ಪ್ರಭಾವವು ಹೆಚ್ಚಹತ್ತಿತು. ಅದರಿಂದ ವಚನಗಳಲ್ಲಿರುವ ಉದಾರ ಮತ್ತು ಶ್ರೇಷ್ಠ ವಿಚಾರಗಳನ್ನು ಸಮಾಜದಲ್ಲಿ ಪರಿಶೀಲಿಸುವ ರೂಢಿಯು ತಪ್ಪಿ

ಹೋಗಹತ್ತಿತು. ಸಂಸ್ಕೃತ ಗ್ರಂಥಗಳೂ ಪುರಾಣಗಳೂ ಬರೆಯಲ್ಪಡಹತ್ತಿದವು. ಮಠಾಧಿಕಾರಿಗಳ ಪ್ರಾಬಲ್ಯವು ಹೆಚ್ಚಿತು. ಇವರು ಯಾವಾಗಲೂ ಪುರಾಣ ಗ್ರಂಥಗಳನ್ನು ಪ್ರೀತಿಸುವವರು. ಮತ್ತು ಅಂಧ ಶ್ರದ್ಧೆಯನ್ನು ಜನರಲ್ಲಿ ಬೀರುವಂಥವರು. ಆದ್ದರಿಂದ ಅವರ ಕಾಲದಲ್ಲಿ ಶಿವಶರಣರ ಚರಿತ್ರೆಗಳಲ್ಲಿ ಅನೇಕ ಅದ್ಭುತ ಸಂಗತಿಗಳು ಸೇರಿಸಲ್ಪಡಹತ್ತಿದವು. ಈ ಚರಿತ್ರೆಗಳು ಕೇವಲ ವಾಙ್ಮಯ ದೃಷ್ಟಿಯಿಂದ ಮಹತ್ವದವಿರಬಹುದು. ಆದರೆ ಅವುಗಳಲ್ಲಿ ವಚನಕಾರರ ವಿಚಾರಗಳ ಕೊಳಹು ಮಾತ್ರ ಕಡಿಮೆಯಾಗಿ ಪೌರಾಣಿಕ ಕಾಲದ ಶಿವ, ಪಾರ್ವತಿ ವೀರಭದ್ರ ಮುಂತಾದ ದೇವತೆಗಳ ಪ್ರಭಾವವು ಹೆಚ್ಚಾಗಹತ್ತಿತು. ಹೀಗೆ ವಚನಕಾರರ ಉಕ್ತಿಗಳ ಮಹತ್ವವು ಕಡಿಮೆಯಾಗಹತ್ತಲು ಅವುಗಳಲ್ಲಿರುವ ವಿಚಾರಗಳ ತಿಳುವಳಿಕೆಯೂ ಕೂಡ ಸಮಾಜದಲ್ಲಿ ಹೊರಟು ಹೋಯಿತು. ಈ ಸ್ಥಿತಿಯಲ್ಲಿ 'ಶಿವ' ಎಂದರೆ ತ್ರಿಮೂರ್ತಿಗಳಲ್ಲಿ ಒಬ್ಬನಾಗಿರುವ ದೇವತೆ ಎಂಬ ಭಾವವು ಸ್ವಾಭಾವಿಕವಾಗಿ ಪುನಃ ಪ್ರಾದುರ್ಭವಿಸಿತು. ಆಗ ಶಿವನ ಪಂಚವಿಂಶತಿ ಲೀಲೆಗಳ ಮೇಲೆ ಗ್ರಂಥಗಳು ರಚಿಸಲ್ಪಡಹತ್ತಿದವು. ವೀರಶೈವ ಮಹಕವಿಯಾದ ವಿರೂಪಾಕ್ಷ ಪಂಡಿತನು ಬರೆದ ಚನ್ನಬಸವ ಪುರಾಣವು ಶಿವನ ೨೫ ಲೀಲೆಗಳ ವರ್ಣನೆಗಳಿಂದ ತುಂಬಿ ಹೋಗಿದೆ. ಆದ್ದರಿಂದ ಇಂಥ ಕಾಲದಲ್ಲಿ "ವೀರಶೈವ" ಈ ಹೆಸರಿಗೆ ಪ್ರಧಾನ್ಯವು ಉಂಟಾಗಹತ್ತಿತು. ಆದರೆ ಬಹುಜನ ಸಮಾಜವು ಮಾತ್ರ ತನ್ನ ಪೂರ್ವದ ಹೆಸರುಗಳಾದ, ಲಿಂಗಾಯತ, ಲಿಂಗವಂತ, ಈ ಶಬ್ದಗಳನ್ನು ಇನ್ನೂ ಬಿಟ್ಟಿಲ್ಲ.

ಈ ಪ್ರಕಾರ ನಾವು ಪರಮಾತ್ಮನ ಬಗ್ಗೆ ವೀರಶೈವ ಸಮಾಜದಲ್ಲಿ ಯಾವ ವಿಚಾರಗಳು ಉದ್ಭವಿಸಿದವು, ಅವುಗಳಲ್ಲಿ ಮಾರ್ಪಾಡುಗಳು ಯಾವ ಯಾವ ಕಾಲಗಳಲ್ಲಿ ಹೇಗೆ ಉಂಟಾದವು ಎಂಬುದರ ವಿಷಯವಾಗಿ ನಾವು ಒಂದು ಲೇಖ ಮಾಲೆಯನ್ನು ಪ್ರಾರಂಭಿಸಿದೆವು. ಈ ಮಾಲೆಯಲ್ಲಿ ಈಗಿನದೇ ಕಡೆಯ ಲೇಖವಾಗಿದೆ. ಇವುಗಳಲ್ಲಿ ನಾವು ಪ್ರಕಟಿಸಿದ ವಿಚಾರಗಳ ವಿಷಯವಾಗಿ ಭಿನ್ನಾಭಿಪ್ರಾಯಗಳಿರಬಹುದು. ಅವುಗಳನ್ನು ವಾಚಕರು ಅವಶ್ಯವಾಗಿ ಪ್ರಕಟ ಮಾಡಬೇಕೆಂದು ನಮ್ಮ ವಿನಂತಿ ಇದೆ.

# ಪಾದೋದಕ.

(ಲೇಖಕರು— ಶ್ರೀ ಮಲ್ಲಿಕಾರ್ಜುನಪ್ಪ ಕರಬಸಪ್ಪ ಮಾಮನಿ
ಮು. ಸವದತ್ತಿ, ಜಿ. ಬೆಳಗಾವ)

[ವೀರಶೈವರಲ್ಲಿ ಅಷ್ಟಾವರಣಗಳಿಗೆ ಸಂಬಂಧಿಸಿದ ಆಚಾರಗಳು ಅತ್ಯಂತ ಮಹತ್ವವಾದವುಗಳು. ಇವುಗಳ ಮರ್ಮವು ಜನರಿಗೆ ಗೊತ್ತಿಲ್ಲದ ಮೂಲಕ ಅವುಗಳ ವಿಷಯವಾಗಿ ತಪ್ಪು ಅಭಿಪ್ರಾಯಗಳು ರೂಢವಾಗಿ' ರುತ್ತವೆ. ಇದರಿಂದ ಬಹುಜನರು ಅವುಗಳ ಆಚರಣೆಯಲ್ಲಿ ಶೈವ ಪದ್ಧತಿಗಳನ್ನು ಸಂಬಂಧಿಸುವದುಂಟು. ಆದರೆ ಶೈವಪದ್ಧತಿಗಳಿಗೂ ವೀರಶೈವಪದ್ಧತಿಗಳಿಗೂ ಮಹದಂತರವಿರುತ್ತದೆ. ಶೈವಪದ್ಧತಿಗಳಲ್ಲಿ ಬ್ರಾಹ್ಮಣರ ಮಾರ್ಗದ ಅನೇಕ ಆಚಾರಗಳು ಸೇರಿಕೊಂಡಿರುತ್ತಿವೆ. ಆದರೆ ವೀರಶೈವ ಪದ್ಧತಿಗಳಲ್ಲಿ ಶುದ್ಧ ತಾತ್ವಿಕ ವಿಚಾರಗಳ ಪ್ರಭಾವವು ಕಂಡು ಬರುತ್ತದೆ. ಅವು ಮನುಷ್ಯನ ಉಚ್ಚತರವ ಧ್ಯೇಯವನ್ನು ಸ್ಪಷ್ಟವಾಗಿ ಕಣ್ಣೆದುರಿಗೆ ತರುತ್ತವೆ. ಅಷ್ಟಾವರಣಗಳಲ್ಲಿ ಮುಖ್ಯವಾಗಿರುವ 'ಲಿಂಗ' ಇದರ ಅರ್ಥದ ಬಗ್ಗೆ ತಪ್ಪು ಕಲ್ಪನೆಗಳು ಇರುವವರಿಂದ 'ಲಿಂಗಧಾರಣ' ಈ ವಿಷಯದ ಬಗ್ಗೆ ಎಷ್ಟು ಭಿನ್ನಾಭಿಪ್ರಾಯಗಳು ಉಂಟಾಗಿರುತ್ತವೆಂಬುದು ಶಿವಾನುಭವ ಪತ್ರಿಕೆಯಲ್ಲಿ ಬಂದ ಅನೇಕ ಲೇಖಗಳಿಂದ ವಾಚಕರಿಗೆ ಕಂಡುಬರದೆ ಇರಲಾರದು. ವೀರಶೈವರ ಪ್ರತಿಯೊಂದು ಆವರಣದ ಬಗ್ಗೆ ಇದೇ ಸ್ಥಿತಿಯು ಇರುತ್ತದೆ. ಪಾದೋದಕ ಇದರ ಬಗ್ಗೆಯೂ ಹೀಗೆಯೇ ವಿಪರೀತ ಕಲ್ಪನೆಗಳು ಜನರಲ್ಲಿ ಇರುತ್ತವೆ. ಈ ಆವರಣದ ಉದ್ದೇಶವು ಜನರಿಗೆ ತಿಳಿದಿರುವುದಿಲ್ಲ. ಅಷ್ಟಾವರಣಗಳು ಮತ್ತು ತಾನು ಇವುಗಳಲ್ಲಿ ಇರುವ ಸಾಮರಸ್ಯ ಭಾವವನ್ನು ಉಂಟುಮಾಡಲಿಕ್ಕೆ ಅದೊಂದು ವಿಶಿಷ್ಟ ತೆರದ ಆಚರಣೆಯಾಗಿದೆ. ಇದರ ಸ್ವರೂಪದ ಬಗ್ಗೆ ಶಿವಶರಣರಲ್ಲಿ ಇರುವ ಅಭಿಪ್ರಾಯಗಳನ್ನು ಅರಿಯುವದು ಬಹು ಅವಶ್ಯವು. ಆದ್ದರಿಂದ ಈ ವಿಷಯದ ಬಗ್ಗೆ ಬರೆದುಬಂದ ಕೆಲವೊಂದು ಪತ್ರವ್ಯವಹಾರವನ್ನು ನಾವು ಇಲ್ಲಿ ಕೊಟ್ಟಿರುತ್ತೇವೆ. ಆದರ ವಿಷಯದ ಬಗ್ಗೆ ವಾಚಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಬಹುದಾಗಿದೆ- **ಸಂಪಾದಕ**]

ಕಾಶಿಯಲ್ಲಿ ಅಧ್ಯಯನ ಮಾಡಿ ಬಂದ ಹೂಲೀ ಹಿರೇಮಠದ ಶ್ರೀ ನೀಲಕಂಠ ಚರಮೂರ್ತಿಗಳವರು "ತತ್ವಪದಗಳು" ಎಂಬ ಹೆಸರಿನ ಪುಸ್ತಕವನ್ನು ಅಚ್ಚುಹಾಕಿದ್ದಾರೆ. ಅದರಲ್ಲಿ ಪಾದೋದಕದ ಸಂಬಂಧವಾಗಿ ೨ ಪದಗಳನ್ನು ಬರೆದಿದ್ದಾರೆ. ಅವುಗಳ ತಾತ್ಪರ್ಯವು:— ಜಂಗಮದ ಪಾದೋದಕವನ್ನು ಇಷ್ಟಲಿಂಗಕ್ಕೆ ಎರೆಯುವದು ಸರಿಯಾದದ್ದಲ್ಲ. ಜಂಗಮರು ಲಿಂಗಕ್ಕಿಂತ ಶ್ರೇಷ್ಠರೆಂದರೆ ಅವರು ತಾವೇಕೆ ಲಿಂಗಕಟ್ಟಿಕೊಂಡು ಅದನ್ನು ಪೂಜಿಸುತ್ತಾರೆ? ತಾವೇ ಕಟ್ಟಿಕೊಂಡು ಪೂಜಿಸುವ ಲಿಂಗಕ್ಕೆ ಪಾದೋದಕವನ್ನು ಹಾಕುವದು ಮಹಾಪಾಪವಲ್ಲವೇ? ಎಂದು ಬರೆದಿರುತ್ತಾರೆ. ಅವರು ಅಚ್ಚು ಹಾಕಿದ ಪದಗಳು ಯಾವವೆಂದರೆ:—

(೧)

ಲಿಂಗಕ್ಕೆ ಎರೆಯುವರೋ। ಪಾದೋದಕ।
ಲಿಂಗಕ್ಕೆ ಎರೆಯುವರೋ ॥ಪಲ್ಲ॥
ಲಿಂಗಕ್ಕೆ ಎರೆಯುತ ಜಂಗಮರೆಲ್ಲರು। ಲಿಂಗದ್ರೋಹ।
ಮಾಡಿ ಭಂಗಪೊಂದುತಲಿಹರೋ ॥ಅ॥
ಲಿಂಗವ ಪೂಜಿಸುತ। ಮುಕ್ತಿಯ ಬೇಡಿ।
ಅಂಗದೋಳ್ ಕಟ್ಟಿಹರೋ। ಜಂಗಮ
ದೈವತಲಿಂಗವೆಂದರಿಯದೆ। ಜಂಗಮ
ಪಾದದಿ ಲಿಂಗವಿಡುವರಯ್ಯೋ ॥೧॥
ಜಂಗಮ ಶ್ರೇಷ್ಠವೆಂದು। ಪಾದೋದಕ।
ಲಿಂಗಕ್ಕೆ ಎರೆವರೇ। ಜಂಗಮ
ಶ್ರೇಷ್ಠನೆಂದರೆ ತಾನು ಜಂಗಮ। ಲಿಂಗವ
ಕಟ್ಟುತ ಪೂಜಿಸುವನ್ಯಾಕೋ ॥೨॥
ಗುರು ಸನ್ಯಾಸಿಗಳೆಲ್ಲರು। ಅರಿಯದೆ ತಮ್ಮ
ಪರಶಿವಲಿಂಗವನ್ನು। ಚರಣ
ದುದಕದಿಂದ ಭರದಿಂದ ತೊಳೆಯುತ
ದುರಿತವ ಮಾಡುತ। ನರಕ ಪೊಂದುವರಯ್ಯೋ ॥೩॥
ಸಿದ್ಧಿಸೌಖ್ಯವನೀವ। ಶಿವಲಿಂಗಕ್ಕೆ
ಶುದ್ಧೋದಕದಿಂದ। ಸಿದ್ಧನಂಜೇ

ಶನು ಪೇಳುವ ರೀತಿಯಿಂ । ಶುದ್ಧ
ಪೂಜೆಯ ಮಾಡಿ । ಸಿದ್ಧಿ ಪೊಂದದೆ ಜನರು ॥೪॥

(೨)

ಪಾದೋದಕವನು । ಎರೆವರು ನೋಡೊ ॥ಪಲ್ಲ॥
ಭೇದವನು ಮಾಡುತಲಿ ಲಿಂಗದ ಮೇಲೆ ॥ಅ॥
ಲಿಂಗವ ಪೂಜಿಸಿ ಮುಕ್ತಿಯ ಬೇಡಿ ।
ಇಂಗಿತವರಿಯದೆ ಮೂರ್ಖರು ತಮ್ಮ ॥೧॥
ಜಂಗಮ ಲಿಂಗದಿಂದಧಿಕನೆಂದರೆ ತಾ ।
ಲಿಂಗವ ಪೂಜಿಸುವದು ತರವಿಹುದೇ ॥೨॥
ಲಿಂಗದ ಶ್ರೇಷ್ಠವಿದೆಂದರೆ ತನ್ನಯ ।
ಅಂಗದ ಜಲವನು ಎರೆವುದು ಸರಿಯೆ ॥೩॥
ಪಾದೋದಕವನು ಪೇಯ ಪದಾರ್ಥಕೆ
ಶೋಧಿಸಿ ಕೋಲಿಸಿ ಪಾಪವ ಮಾಡಿ ॥೪॥
ಪಾದೋದಕವನು ಲಿಂಗಕ್ಕೆ ಅರ್ಪಿಸಿ ।
ಸಾಧಿಸಿ ತತ್ ಪ್ರಸಾದವ ಮಾಡಿ ॥೫॥
ಸಿದ್ಧಸಂಜೀಶನ ತತ್ವವ ತಿಳಿಯದೆ ।
ಶುದ್ಧ ಪಾಪದ ಕರ್ಮ ಮಾಡುತ ಜನರು ॥೬॥

ಆದರೆ ಲಿಂಗಾಯತ ಮತದ ಸಾಂಪ್ರದಾಯವು ಅನಾದಿ ಕಾಲದಿಂದ ಜಂಗಮರ ಪಾದೋದಕವನ್ನು ಲಿಂಗಕ್ಕೆ ಎರೆದು ಅದನ್ನು ಸೇವಿಸುವದು ಇರುತ್ತದೆ. ಇದು ಶಿವಾಗಮಗಳನುಮತವಾಗಿ ಮಹಾತ್ಮರಿಂದ ಹಾಕಿದ ಪದ್ಧತಿಯಾಗಿದೆ. ಇದು ಕೆಳಗೆ ಕಾಣಿಸಿದ ಪ್ರಮಾಣಗಳಿಂದ ವ್ಯಕ್ತವಾಗುತ್ತದೆ.

ಆಗಮಪ್ರಮಾಣ ॥ ಮತ್ಪಾದತೋ ಯೋ ದೇವಾನಾಂ
ವರ್ತತೇಚ್ಛಾಮಹೇಶ್ವರೀ ॥ ಪ್ರಮಥಾನಾಂ ಪಾದ
ತೋಯೋಮಾದಿಚ್ಛಾವರ್ತತೇ ನಿಶಂ ॥
ಚರಪಾದೋದ್ಭವಂ ತೀರ್ಥಂ ಲಿಂಗಮಜ್ಜನ
ಮುತ್ತಮಂ ಅಂಗುಲೀಭ್ಯಃಪಂಚಧಾರಾನಾಮಿ
ಕಾಗ್ರಗತಾತಥಾ । ಪ್ರಾಣೇಷ್ಟಭಾವಲಿಂಗಂಹಿ
ಸಂಸ್ನಾಪ್ಯ ಶಿವಮಂತ್ರತಃ । ಪಂಚಾಂಗುಲಿ ಶಿಖಾ

ನಾನು ಶಿವಶರಣರ ನೈತಿಕ ಮಾರ್ಗವನ್ನು ಶಕ್ಯವಿದ್ದಷ್ಟರ ಮಟ್ಟಿಗೆ ಅನುಸರಿಸುತ್ತ ನನ್ನ ಆರ್ಥಿಕ, ಮಾನಸಿಕ, ಶಾರೀರಿಕ ಹಾನಿಯನ್ನುಂಟು ಮಾಡುವ ದುರ್ವ್ಯಸನಗಳನ್ನೂ, ದುಶ್ಚಟಗಳನ್ನೂ, ದುರ್ನಡತೆಗಳನ್ನೂ ಬಿಟ್ಟು ಕೊಡುವೆನು.

ಕಾಯಕದ ತತ್ವಗಳನ್ನು ತಿಳಿದುಕೊಂಡು ಆಚರಿಸುವದು.

(೫) ಪ್ರತಿಯೊಬ್ಬ ವೀರಶೈವನು ಒಂದು ಉದ್ಯೋಗವನ್ನು ಮಾಡಿಯೇ ತನ್ನ ಉಪಜೀವನವನ್ನು ಸಾಗಿಸಬೇಕೆಂದು ಶಿವಶರಣರ ತತ್ವವಿದೆ. ಈ ಕಾರ್ಯದಲ್ಲಿ ಅವರು ಲಿಂಗಾನುಸಂಧಾನದ ವಿಚಾರಗಳನ್ನು ಅಡಕ ಮಾಡಿದ್ದಾರೆ. ಈ ದೃಷ್ಟಿಯಿಂದ ಮಾಡಿದ ಉದ್ಯೋಗಕ್ಕೆ ಅವರು ಕಾಯಕವೆಂಬ ಹೆಸರು ಕೊಟ್ಟಿದ್ದಾರೆ. ಆದ್ದರಿಂದ ವೀರಶೈವರು ಯಾರೂ ಭಿಕ್ಷೆಯನ್ನು ಬೇಡಬಾರದು. ಈ ನಿಯಮವು ಮಠಾಧಿಕಾರಿಗಳಿಗೂ, ಜಂಗಮರಿಗೂ, ಸ್ತ್ರೀಯರಿಗೂ ಕೂಡ ಅನ್ವಯಿಸುತ್ತದೆ. ಆದ್ದರಿಂದ ಅವರೆಲ್ಲರೂ ಒಂದು ಕಾಯಕವನ್ನು ಮಾಡುತ್ತ ತಮ್ಮ ನಿರ್ವಾಹವನ್ನು ಸಾಗಿಸತಕ್ಕದ್ದು. ಆದರೆ ಮಠಾಧಿಕಾರಿಗಳು ಮಾಡತಕ್ಕ ಬೋಧಕ ಕಾರ್ಯಗಳು ಕಾಯಕಗಳಿರುತ್ತವೆ. ಸ್ತ್ರೀಯರು ಮಾಡತಕ್ಕ ಶಿಶುಪೋಷಣೆ, ಅಡಿಗೆ, ಮತ್ತು ಗೃಹಕೃತ್ಯಾದಿ ಕಾರ್ಯಗಳು ಉತ್ತಮ ತರದ ಕಾಯಕಗಳು. ಹಾಗೆಯೇ ಅನೇಕರು ಮಾಡುತ್ತಿರುವ ಸಾರ್ವಜನಿಕ ಉಪಯುಕ್ತ ಕಾರ್ಯಗಳಾದರೂ ಕಾಯಕಗಳೆಂದು ತಿಳಿಯತಕ್ಕದ್ದು. ಆದ್ದರಿಂದ ಇಂಥವರ ಪ್ರಯತ್ನಗಳ ಉಪಯೋಗ ಮಾಡಿಕೊಳ್ಳುವವರು ಅವರಿಗೆ ಯೋಗ್ಯ ಪ್ರತಿಫಲವನ್ನು ಕೊಡಲೇಬೇಕು ಆದರೆ ಕೆಲವು ಉದ್ಯೋಗಗಳು ಕಾಯಕಗಳೆಂದು ಭಾವಿಸಲು ಬರಲಾರದು. ಉದಾ:—ಸ್ವತಃ ಒಕ್ಕಲುತನ ಮಾಡದೆ ತಮ್ಮ ಎಲ್ಲ ಜಮೀನುಗಳನ್ನು ಬೇರೆಯವರಿಗೆ ಸಾಗಿಸುತ್ತ ತಾವು ಕೆಲಸ ಮಾಡದೆ ಇರುವದು, ಬಾಡಿಗೆಯ ಮನೆಗಳಿದ್ದು, ತಾವು ಏನೂ ಶ್ರಮ ಮಾಡದೆ ಅವುಗಳ ಉತ್ಪನ್ನದ ಮೇಲೆಯೇ ಉಪಜೀವಿಸುವದು, ನಿವೃತ್ತ ಸರಕಾರೀ ಅಧಿಕಾರಿಗಳಿದ್ದು, ಅವರು ತಮ್ಮ ಪೆನಶನದ ಮೇಲೆ ಮಾತ್ರ ಉಪಜೀವಿಸುತ್ತ ಸೋಮಾರಿತನದಿಂದ ಕಾಲಕಳೆಯುವದು, ಶ್ರೀಮಂತರಾಗಿದ್ದು, ತಮ್ಮ ಠೇವಿನಿಂದ ಬರುವ ಬಡ್ಡಿಯಿಂದ ತಮ್ಮ ನಿರ್ವಾಹ ಸಾಗಿಸುವುದು,

ಇವು ಕಾಯಕಗಳೆಂದು ಹೇಳಲಿಕ್ಕೆ ಬರಲಾರದು. ಇವರೆಲ್ಲರೂ ಬೇರೊಂದು ಉದ್ಯೋಗವನ್ನು ಅಥವಾ ತಮ್ಮ ಇದ್ದ ಉದ್ಯೋಗದಲ್ಲಿಯೇ ಹೆಚ್ಚಿಗೆ ಮನಸ್ಸು ಹಾಕಿ ಅದರಲ್ಲಿ ದುಡಿಯುವದನ್ನು ಮಾಡಬೇಕು. ಮನುಷ್ಯನು ತನ್ನ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕ ಶಕ್ತಿ ಇರುವ ವರೆಗೆ ಒಂದು ಕಾಯಕವನ್ನು ಮಾಡಲೇಬೇಕು. ಇದಕ್ಕೆ ವಿರುದ್ಧವಾದ ವರ್ತನೆಯು ಶಿವಾನುಭವ ಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಯಾಕಂದರೆ ಕಾಯಕವಲ್ಲಿ ಶಾರೀರಿಕ, ಮಾನಸಿಕ, ಮತ್ತು ಬೌದ್ಧಿಕ ಶ್ರಮದ ಕೆಲಸಗಳಿರುತ್ತವೆ. ಈ ಶ್ರಮದ ಮೂಲಕವಾಗಿಯೇ ಇಂದ್ರಿಯಗಳ ವಿಕಾಸವಾಗುತ್ತದೆ. ಈ ವಿಕಾಸದಲ್ಲಿಯೇ ಆತ್ಮಸುಧಾರಣೆ ಇರುತ್ತದೆ. ಕಾಯಕದ ಉದ್ದೇಶವು ಕೇವಲ ಉಪಜೀವನವಲ್ಲ. ಆದರಲ್ಲಿ ಲಿಂಗ ಶಕ್ತಿಯ ವಿಕಾಸವೂ ಇರುತ್ತದೆ. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟದೆ. ಅದು ಯಾವದೆಂದರೆ:—

ನಾನು ನನ್ನ ಮಾನಸಿಕ, ಶಾರೀರಿಕ, ಬೌದ್ಧಿಕ ಶಕ್ತಿಯು ಇರುವ ವರೆಗೂ ಅದನ್ನು ಸರಿಯಾದ ಮಾರ್ಗದಿಂದ ಉಪಯೋಗಿಸುತ್ತ ನನ್ನ ಉಪಜೀವನವನ್ನು ಸಾಗಿಸುವೆನು. ನಾನು ಪರಾವಲಂಬಿಯಾಗುವದಿಲ್ಲ. ನಾನು ಕೆಲವೊಂದು ಸತ್ಯ ಶುದ್ಧ ಕಾಯಕವನ್ನು ಮಾಡಿಯೇ ಉಪಜೀವಿಸುವೆನು.

### ಕಾಯಕವನ್ನು ಮಾಡಿದ ಬಳಿಕ ಉಳಿದ ವೇಳೆಯನ್ನು ಉಪಯುಕ್ತ ಕಾರ್ಯಗಳಿಗಾಗಿ ಉಪಯೋಗಿಸುವುದು.

(೬) ಮನುಷ್ಯನು ತನ್ನ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಅವನಿಗೆ ಕೆಲವು ವೇಳೆಯು ಹೆಚ್ಚಿಗೆ ಉಳಿಯುವದುಂಟು. ಹೀಗೆ ಉಳಿದದ್ದಾದರೆ, ಆಗ ಕೆಲವೊಂದು ಉಪಯುಕ್ತ ಕಾರ್ಯದಲ್ಲಿ ಅಂದರೆ ಆತ್ಮೋದ್ಧಾರ, ಸಮಾಜೋದ್ಧಾರ ಮೊದಲಾದ ಕಾರ್ಯಗಳನ್ನು ಮಾಡುವಲ್ಲಿ, ಆ ವೇಳೆಯನ್ನು ಕಳೆಯತಕ್ಕದ್ದು. ಉಪಜೀವನಕ್ಕೋಸ್ಕರ ಕಾಯಕ ಮಾಡುವ ಅವಶ್ಯಕತೆ ಇಲ್ಲದವರು ಈ ಸೂಚನೆಯನ್ನು ಪಾಲಿಸುವದು ಯುಕ್ತವಾದುದು. ಅದು ಯಾವದೆಂದರೆ:—

ಶಾಸ್ತ್ರದಲ್ಲಿ ಅಡಕವಾಗಿವೆ. ಅದರಲ್ಲಿ ಕ್ರಿಯೆಗಳ ಸಂಖ್ಯೆಯು ಬಹಳ ಕಡಿಮೆ. ಕಡಿಮೆ ಇದ್ದರೂ ಇದ್ದವುಗಳು ಗರ್ಭಿತಾರ್ಥವುಳ್ಳವೂ, ಭಾವನಾ ಪೂರ್ಣವೂ ಆಗಿರುತ್ತವೆ. ಅವುಗಳ ಮಾರ್ಗವನ್ನು ವೀರಶೈವ ಸ್ತ್ರೀ ಪುರುಷರೆಲ್ಲರೂ ಅರಿಯುವದು ಅವಶ್ಯವು. ಇದನ್ನು ಅರಿಯಲು ವಚನ ಶಾಸ್ತ್ರದಷ್ಟು ಅತ್ಯುತ್ತಮವಾದ ವಾಙ್ಮಯವು ವೀರಶೈವ ಧರ್ಮದಲ್ಲಿ ಬೇರೆ ಯಾವದೂ ಇಲ್ಲೆಂದು ಹೇಳಬಹುದು. ಆದ್ದರಿಂದ ಶಿವಾನುಭವ ಸಂಘ ಗಳ ಪ್ರತಿಯೊಬ್ಬ ಸಭಾಸದನು ವಚನ ಗ್ರಂಥಗಳನ್ನು ಆಗಿಂದಾಗ್ಗೆ ಓದುವ ಅಭ್ಯಾಸವನ್ನು ಇಟ್ಟುಕೊಳ್ಳಬೇಕು. ಮತ್ತು ಅವುಗಳ ಮೂಲಕ ಷಟ್‌ಸ್ಥಲ ಶಾಸ್ತ್ರದ ಮಾರ್ಗವನ್ನು ಅರಿಯಬೇಕು. ಇದು ತನ್ನ ಪ್ರಥಮ ಕರ್ತವ್ಯವೆಂದು ಅವನು ಭಾವಿಸಬೇಕು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ.

<u>ನಾನು ದಿನಾಲು ಅಥವಾ ವಾರದಲ್ಲಿ ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ ಶಿವಶರಣರ ವಚನಗಳನ್ನು ತಪ್ಪದೆ ಓದುವೆನು. ಮತ್ತು ಷಟ್‌ಸ್ಥಲಶಾಸ್ತ್ರದ ಮಾರ್ಗಗಳನ್ನು ತಿಳಿಯಲು ಪ್ರಯತ್ನಿಸುವೆನು.</u>

### ಪರಮಾತ್ಮನೊಬ್ಬನೇ ಇದ್ದಾನೆಂದು ನಂಬುವುದು.

(೨) ವೀರಶೈವ ಧರ್ಮದಲ್ಲಿ ಪರಮಾತ್ಮನು ಒಬ್ಬನೇ ಇದ್ದಾನೆ ಮತ್ತು ಅನೇಕ ದೇವತೆಗಳನ್ನು ವೀರಶೈವರು ಪೂಜಿಸಬಾರದು, ಎಂಬ ತತ್ವವು ಮುಖ್ಯವಾದುದು. ಅಲ್ಲದೆ ಪರಮಾತ್ಮನು ತನ್ನಲ್ಲಿಯೇ ಇದ್ದಾನೆಂತಲೂ ಅವನನ್ನು ತನ್ನಲ್ಲಿಯೇ ಕಾಣಬೇಕೆಂತಲೂ ವಚನಶಾಸ್ತ್ರವು ಹೇಳುತ್ತಿದೆ. ಮತ್ತು ಅವನನ್ನು ಹೀಗೆ ಕಾಣುವ ರೀತಿಯನ್ನು ಅದು ಸವಿಸ್ತಾರವಾಗಿ ಬೋಧಿಸುತ್ತದೆ. ಇದಕ್ಕೆ ಷಟ್‌ಸ್ಥಲ ಶಾಸ್ತ್ರವೆಂಬ ಹೆಸರು. ಈ ಶಾಸ್ತ್ರದಂತೆ ವೀರಶೈವರು ಶಕ್ಯವಿದ್ದಷ್ಟರಮಟ್ಟಿಗೆ ನಡೆಯುವದು ಅವರ ಕರ್ತವ್ಯವಾಗಿದೆ. ಆದರೆ ಅನೇಕ ದೇವತೆಗಳನ್ನು ನಂಬಿದರೆ ಈ ಮಾರ್ಗದಂತೆ ನಡಿಯಲು ಶಕ್ಯವಲ್ಲ. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ—

<u>ಪರಮಾತ್ಮನು ಒಬ್ಬನೇ ಇದ್ದಾನೆಂದು ನಾನು ನಂಬುವೆನು ಮತ್ತು ಅನೇಕ ದೇವತೆಗಳನ್ನು ನಾನು ನಂಬುವದಿಲ್ಲ.</u>

ಲಿಂಗಪೂಜೆಯ ಮೂಲಕ ಲಿಂಗಾನುಸಂಧಾನದಲ್ಲಿರುವದು.

(೩) ಎಲ್ಲ ಧರ್ಮಗಳಲ್ಲಿ ಆಚರಣೆಗೋಸ್ಕರ ಕೆಲವು ಧಾರ್ಮಿಕ ಕ್ರಿಯೆಗಳಿರುತ್ತವೆ. ವೀರಶೈವರಲ್ಲಿ ಲಿಂಗಧಾರಣೆಯು ಮಹತ್ವದ್ದಿದ್ದು ಅವರು ಯಾವಾಗಲೂ ಲಿಂಗಧಾರಕರಾಗಿ ಅದರ ಪೂಜೆಯನ್ನು ಮಾಡ ತಕ್ಕದ್ದು. ಇದು ಅವರ ಮುಖ್ಯ ಧಾರ್ಮಿಕ ಕ್ರಿಯೆಯಾಗಿದೆ. ಆದರೆ ವೀರಶೈವರ ಈ ಕ್ರಿಯೆಯಲ್ಲಿ ಬರೇ ಬಾಹ್ಯ ಉಪಚಾರಗಳು ಮುಖ್ಯವಾದವುಗಳಲ್ಲ. ಅದರಲ್ಲಿ ಆತ್ಮಾನುಸಂಧಾನದ ಅಥವಾ ಶಿವಯೋಗದ ತತ್ವಗಳು ಅಡಕವಾಗಿರುತ್ತವೆ. ಈ ರೀತಿಯನ್ನು ವಚನ ಶಾಸ್ತ್ರದಿಂದ ವೀರಶೈವರು ಅರಿಯತಕ್ಕದ್ದು. ಹೀಗೆ ಅರಿತು ಆಚರಿಸಿದಲ್ಲಿ ಮನುಷ್ಯನ ನೈತಿಕ, ಮಾನಸಿಕ, ಬೌದ್ಧಿಕ ಮತ್ತು ಯೌಗಿಕ ಸಾಮರ್ಥ್ಯವು ಬೆಳೆಯುತ್ತ ಹೋಗುತ್ತದೆ. ಹೀಗೆ ಶಿವಶರಣರ ಅಭಿಪ್ರಾಯವಿದೆ. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ ಅದು ಯಾವದೆಂದರೆ—

ನಾನು ಯಾವಾಗಲೂ ಲಿಂಗಧಾರಕನಾಗಿ ಪ್ರತಿದಿವಸ ಒಮ್ಮೆಯಾದರೂ ಕ್ರಮಯುಕ್ತ ರೀತಿಯಿಂದ ಲಿಂಗಪೂಜೆಯನ್ನು ಮಾಡಿ ಲಿಂಗಾನುಸಂಧಾನದಲ್ಲಿರುವೆನು.

ದುರ್ವ್ಯಸನ, ದುಶ್ಚಟ ಮತ್ತು ದುರ್ನಡತೆಗಳನ್ನು ಬಿಡುವುದು.

(೪) ಶಿವಶರಣರು ನೈತಿಕಾಚಾರಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ಉನ್ನತವಾದ ನೈತಿಕಾಚರಣೆಯಿಂದ ಲಿಂಗಶಕ್ತಿಯು ಮನುಷ್ಯನಲ್ಲಿ ಬಲಗೊಳ್ಳುತ್ತದೆಂದು ಅವರು ಅಭಿಪ್ರಾಯಪಡುತ್ತಾರೆ. ನೀತಿಶಾಸ್ತ್ರದ ಮೇಲೆಯೇ ಅವರ ಷಟ್‌ಸ್ಥಲ ಶಾಸ್ತ್ರವು ನೆಲೆಗೊಳಿಸಲ್ಪಟ್ಟಿದೆ. ಆದ್ದರಿಂದ ನೀತಿಯು ವಚನಗಳು ವಚನಗ್ರಂಥಗಳಲ್ಲಿ ಆಗಿಂದಾಗೆ ಬರುತ್ತವೆ. ಆದ್ದರಿಂದ ಇಂಥ ನೀತಿಯ ವಿಷಯಗಳನ್ನು ಶಕ್ಯವಿದ್ದಷ್ಟು ಎಲ್ಲರೂ ಪಾಲಿಸಲೇಬೇಕು. ಆದರೆ ಬಹು ಜನರಲ್ಲಿ ಅನೇಕ ತರದ ದುರ್ವ್ಯಸನಗಳೂ, ದುಶ್ಚಟಗಳೂ, ದುರ್ನಡೆತೆಗಳೂ ಇರುತ್ತವೆ. ಇವು ಅವರ ಆರ್ಥಿಕ, ಮಾನಸಿಕ, ಶಾರೀರಿಕ ಮತ್ತು ಬೌದ್ಧಿಕ ಹಾನಿಯನ್ನುಂಟುಮಾಡುತ್ತವೆ. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ—

ಅಭ್ಯಾಸವು ಎಲ್ಲ ಕಡೆಗೂ ನಡೆಯಲು ಅನುಕೂಲವಾಗುವದು. ವೀರ ಶೈವರು ಮುಂದೆ ಮಾಡತಕ್ಕ ಮಹತ್ವದ ಕಾರ್ಯವು ಇದಾಗಿದೆ.

ಇಂಥ ಸಂಘಗಳನ್ನು ಸ್ಥಾಪಿಸಲು ನಾವು ಹೋದ ವರ್ಷ ನವ ಕರ್ನಾಟಕ ಮತ್ತು ಶಿವಾನುಭವ ಪತ್ರಿಕೆಗಳ ಮೂಲಕ ವಿಶೇಷ ಪ್ರಯತ್ನಿಸುತ್ತ ಬಂದೆವು. ಇದರಿಂದ ಅನೇಕ ಶಿವಾನುಭವ ಸಂಘಗಳು ಅನೇಕ ಕಡೆಗೆ ಸ್ಥಾಪಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವುಗಳು ಚನ್ನಾಗಿ ಕಾರ್ಯ ಮಾಡುತ್ತಲಿವೆ. ಉಳಿದವುಗಳು ಅಷ್ಟು ಚನ್ನಾಗಿ ಕಾರ್ಯ ಮಾಡುತ್ತಿರುವದಿಲ್ಲ. ಈ ಸ್ಥಿತಿಯು ಹೀಗೆ ಆರಂಭದಲ್ಲಿರುವದು ಸ್ವಾಭಾವಿಕವಾಗಿದೆ. ಆದರೆ ಶಿವಾನುಭವ ಶಾಸ್ತ್ರದ ಬಗ್ಗೆ ಯಾರಿಗೆ ಪ್ರೀತಿಯು ಇರುತ್ತದೋ ಅವರು ಈ ಕಾರ್ಯವನ್ನು ಬಿಟ್ಟುಬಿಡದೆ ತಮ್ಮ ಗ್ರಾಮದಲ್ಲಿ ಮುಂದುವರಿಸುತ್ತಲೇ ಇರಬೇಕೆಂದು ನಮ್ಮ ಸೂಚನೆ ಇದೆ.

ಶಿವಾನುಭವ ಶಾಸ್ತ್ರದ ಮುಖ್ಯ ಉದ್ದೇಶವು ಆತ್ಮಸುಧಾರಣೆಯಾಗಿದೆ. ಇದರಲ್ಲಿ ಅನೇಕ ವಿಷಯಗಳು ಅಡಕವಾಗುತ್ತವೆ. ಆದರೆ ಅವುಗಳಲ್ಲಿ ಮುಖ್ಯವಾದ ಕೆಲವುಗಳನ್ನು ಮಾತ್ರ ಆರಿಸಿ ಶಿವಾನುಭವ ಸಂಘಗಳೂ ಅವುಗಳ ಸಭಾಸದರೂ ಆಚರಣೆಯಲ್ಲಿ ತರಲು ಯತ್ನಿಸಬೇಕು. ಈ ದೃಷ್ಟಿಯಿಂದ ನಾವು ಕೆಳಗೆ ಕೆಲವು ಸೂಚನೆಗಳನ್ನು ಮಾಡಿದ್ದೇವೆ. ಇವು ನಮ್ಮ 'ಶಿಫಾರಸು'ಗಳೆಂದು ತಿಳಿಯಬೇಕೇ ಹೊರತು ಅವು ಯಾರಿಗೂ ಬಂಧನಕಾರಕವಲ್ಲ. ಪ್ರತಿಯೊಂದು ಶಿವಾನುಭವ ಸಂಘವು ತನ್ನ ಕಾರ್ಯಕ್ರಮವನ್ನು ಏರ್ಪಡಿಸಲು ಅದು ಸ್ವತಂತ್ರವಾಗಿರುತ್ತದೆ.

ಈಚೆಗೆ ಅನೇಕ ಕಡೆಗೆ ಶಿವಾನುಭವ ಸಂಘಗಳನ್ನು ಏರ್ಪಡಿಸುವ ಕಾರ್ಯವನ್ನು ಅನೇಕ ವ್ಯಕ್ತಿಗಳೂ ಸ್ವಾಮಿಗಳೂ ಕೈಕೊಳ್ಳಹತ್ತಿರುತ್ತಾರೆ. ಇದು ಅತ್ಯಾನಂದಕರವಾಗಿರುತ್ತದೆ. ಕೆಲವು ದಿವಸಗಳ ಹಿಂದೆ ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಅನೇಕ ಮಹಾಸ್ವಾಮಿಗಳೂ ಸಭ್ಯಗೃಹಸ್ಥರೂ ಹಿರೇಕೆರೂರ ತಾಲೂಕು ಹಾವಸಭಾವಿಯಲ್ಲಿ ಸೇರಿ ಇಂಥ ಸಂಸ್ಥೆಗಳನ್ನು ಸ್ಥಾಪಿಸಲು ಮುಂದುವರಿದಿರುತ್ತಾರೆ. ಇದೇ ಮೇರೆಗೆ ಎಲ್ಲ ಕಡೆಗೂ ಪ್ರಯತ್ನಗಳಾಗಬೇಕು. ಹೀಗೆ ಕಾರ್ಯಗಳು ನಡೆದದ್ದಾದರೆ ಸಮಾಜದಲ್ಲಿ ಯೋಗ್ಯ ಸಂಘಟನೆಯುಂಟಾಗುವದು ಸುಲಭವಾಗುವದು.

# ಶಿವಾನುಭವ ಸಂಘಗಳ ಸಭಾಸದರು ಕೈಕೊಳ್ಳಬಹುದಾದ ಕಾರ್ಯಕ್ರಮದ ಬಗ್ಗೆ ಸೂಚನೆಗಳು.

ಶಿವಾನುಭವ ಸಂಘಗಳ ಸಭಾಸದರು ಕೈಕೊಳ್ಳಬಹುದಾದ ಕಾರ್ಯಕ್ರಮದಲ್ಲಿ ನಾವು ಮೂರು ವಿಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ:—

(೧) ಆತ್ಮಸುಧಾರಣೆಯ ಕಾರ್ಯಗಳು (೨) ಕುಟುಂಬ ಸುಧಾರಣೆಯ ಕಾರ್ಯಗಳು (೩) ಶಿವಾನುಭವ ಸಂಘಕ್ಕೋಸ್ಕರ ಮಾಡುವ ಕಾರ್ಯಗಳು. ಪ್ರತಿಯೊಬ್ಬನು ಈ ಮೂರೂ ಕರ್ತವ್ಯಗಳನ್ನು ಜರುಗಿಸುವದು ಬಹಳ ಅವಶ್ಯವಿರುತ್ತದೆ.

ಮನುಷ್ಯನು ಆಚರಿಸತಕ್ಕ ಕಾರ್ಯಗಳು ಅಸಂಖ್ಯವಾಗಿರುತ್ತವೆ. ಆದರೆ ಅವುಗಳಲ್ಲಿ ಬಹುಜನಸಮಾಜಕ್ಕೆ ಯಾವವು ಈ ಕಾಲಕ್ಕೆ ಅತ್ಯಂತ ಅವಶ್ಯವೋ ಮತ್ತು ಯಾವವು ವ್ಯವಹಾರ್ಯವೋ ಅವುಗಳನ್ನು ಮುಖ್ಯವಾಗಿ ಆರಿಸಿ, ಅವುಗಳಲ್ಲಿ ಕೆಲವುಗಳನ್ನು ಮಾತ್ರ ಕೈಕೊಂಡು ಕಾರ್ಯಾರಂಭ ಮಾಡುವುದು ಯೋಗ್ಯವಾಗಿದೆ. ಈ ದೃಷ್ಟಿಯಿಂದ ಈ ಕೆಳಗಿನ ಸೂಚನೆಗಳು ಮಾಡಲ್ಪಟ್ಟಿವೆ. ಈ ಸೂಚನೆಗಳು ಕೇವಲ ಮಾರ್ಗದರ್ಶಿಯಾಗಿವೆ ಎಂದು ಮಾತ್ರ ತಿಳಿಯಬೇಕು. ವ್ಯಕ್ತಿಗಳು ಮತ್ತು ಶಿವಾನುಭವ ಸಂಘಗಳು ತಮ್ಮ ತಮ್ಮ ಕಾರ್ಯಕ್ರಮಗಳನ್ನು ಗೊತ್ತುಪಡಿಸಿಕೊಳ್ಳಲಿಕ್ಕೆ ಅವೆಲ್ಲವೂ ಸ್ವತಂತ್ರವಾಗಿವೆ.

(೧)

## ಆತ್ಮಸುಧಾರಣೆಯ ಕಾರ್ಯಗಳು.

ವಚನಗ್ರಂಥಗಳ ಅಭ್ಯಾಸಮಾಡುವದು ಮತ್ತು ಷಟ್‌ಸ್ಥಲ ತತ್ವಗಳ ಜ್ಞಾನ ಮಾಡಿಕೊಳ್ಳುವದು.

(೧) ವೀರಶೈವ ಧರ್ಮವು ಸ್ವಾನುಭವಕ್ಕೆ ಮತ್ತು ಆತ್ಮೋನ್ನತಿಗೆ ಬಹಳ ಮಹತ್ವವನ್ನು ಕೊಟ್ಟಿರುತ್ತದೆ. ಅದರ ತತ್ವಗಳು ಷಟ್‌ಸ್ಥಲ

ನಾನು ನಿತ್ಯದ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಉಳಿದ ವೇಳೆಯನ್ನು ನಾನು ಆತ್ಮಸುಧಾರಣೆಗಾಗಿ ಅಥವಾ ನನ್ನ ಕುಟುಂಬದ ಸುಧಾರಣೆಗಾಗಿ ಅಥವಾ ಸಮಾಜದ ಕೆಲವೊಂದು ಉಪಯುಕ್ತ ಕಾರ್ಯಕ್ಕಾಗಿ ಉಪಯೋಗಿಸುವೆನು.

ಜ್ಯೋತಿಷ್ಯ, ಶಕುನ ಮೊದಲಾದವುಗಳನ್ನು ಸಂಬದಿರುವುದು.

(೭) ಜ್ಯೋತಿಷ್ಯ, ಶಕುನ ಇಂಥವುಗಳನ್ನು ಅವಲಂಬಿಸಿ ಕಾರ್ಯ ಮಾಡಬಾರದೆಂದು ಶಿವಶರಣರ ಅಭಿಪ್ರಾಯವದೆ. ಇಲ್ಲಿ ಈ ತರದ ಶಾಸ್ತ್ರಗಳ ಸತ್ಯಾಸತ್ಯತೆಯ ಬಗ್ಗೆ ಪ್ರಶ್ನೆಯು ಇರುವದಿಲ್ಲ. ಆದರೆ ಈ ಮಾರ್ಗದಿಂದ ನಡೆಯುವದು ಶಿವಶರಣರ ಮತಕ್ಕೆ ವಿರೋಧವಾದದ್ದು. ಯಾಕಂದರೆ ಷಟ್‌ಸ್ಥಲ ಶಾಸ್ತ್ರದ ಮರ್ಮವನ್ನು ವೀರಶೈವನು ಅರಿತುಕೊಂಡು ಶಿವಾರ್ಪಣ ಭಾವದಿಂದ ತನ್ನ ಕಾರ್ಯಗಳನ್ನು ಮಾಡಬೇಕು ಮತ್ತು ಹೀಗೆ ಮಾಡುವುದರಿಂದ ಅವನ ಕರ್ಮಗಳು ನಷ್ಟವಾಗುವವು ಎಂದು ಶಿವಶರಣರ ಅಭಿಪ್ರಾಯವಿರುತ್ತದೆ. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ—

ನಾನು ಯಾವ ಕಾರ್ಯದಲ್ಲಿಯೂ ಜ್ಯೋತಿಷ್ಯ, ಶಕುನ, ಮೊದಲಾದವುಗಳನ್ನು ಕೇಳುವದಿಲ್ಲ. ಆದರೆ ಶಿವಶರಣರ ಷಟ್‌ಸ್ಥಲ ಶಾಸ್ತ್ರ, ನೀತಿ ಶಾಸ್ತ್ರ ಮತ್ತು ಅನುಭವ ವಿದ್ಯೆ ಇವುಗಳನ್ನು ತಿಳಿದುಕೊಂಡು ಅವುಗಳಂತೆ ಆಚರಿಸುತ್ತ ನನಗೆ ಉಂಟಾದ ಸ್ವಾನುಭವ ಮತ್ತು ತಿಳುವಳಿಕೆಯಿಂದಲೇ ನಾನು ನನ್ನ ಕಾರ್ಯಗಳನ್ನು ಮಾಡುತ್ತ ಹೋಗುವೆನು.

ಅನಾವಶ್ಯಕ ಖರ್ಚು ಮಾಡದಿರುವುದು.

(೮) ಶಿವಶರಣರು ಶುಭಾಶುಭ ಕಾರ್ಯಗಳು, ಹಬ್ಬ ಹುಣ್ಣಿಮೆಗಳು, ತೀರ್ಥ ಯಾತ್ರೆಗಳು, ದೇವಾಲಯಗಳು ಇವುಗಳಿಗೆ ಮಹತ್ವ ಕೊಡುವದಿಲ್ಲ. ಹಾಗೆಯೇ ತಮಗೆ ಸಂಬಂಧಿಸದೆ ಇದ್ದ ದೇವತೆಗಳ ಜಾತ್ರೆಗಳನ್ನೂ ಹಬ್ಬಗಳನ್ನೂ ಉತ್ಸವಗಳನ್ನೂ ಅವರು ಮಾಡತಕ್ಕ

ದ್ದಲ್ಲ. ವಚನ ಶಾಸ್ತ್ರದ ಪ್ರಕಾರ ಇವುಗಳ ಮೇಲಿನ ನಂಬಿಗೆಯು ವೀರಶೈವರ ಧಾರ್ಮಿಕ ಉನ್ನತಿಗೆ ಕಾರಣವಲ್ಲ. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ಶುಭಾಶುಭ ಮತ್ತು ನನ್ನ ಮನೆತನದ ಕಾರ್ಯಗಳಿಗೋಸ್ಕರ ಅನಾವಶ್ಯಕ ಖರ್ಚು ಮಾಡುವದಿಲ್ಲ. ಹಾಗೆಯೇ ವೀರಶೈವರಿಗೆ ಸಂಬಂಧಿಸದೆ ಇದ್ದ ಕೆಲವೊಂದು ದೇವತೆಯ ಜಾತ್ರೆ, ಉತ್ಸವ, ಹಬ್ಬಗಳನ್ನು ನಾನು ಪಾಲಿಸುವದಿಲ್ಲ.

### ಶಿವಾರ್ಪಣ ಬುದ್ಧಿಯಿಂದ ತನ್ನ ಕಾರ್ಯಮಾಡುವುದು.

(೯) ಜನರಲ್ಲಿ ತಮ್ಮ ಕೀರ್ತಿಗಾಗಿ ಕಾರ್ಯ ಮಾಡುವ ಹಂಬಲವು ಬಹು ಹೆಚ್ಚಿಗಿರುತ್ತದೆ. ಆದರೆ ಶಿವಶರಣರ ತತ್ವದ ಪ್ರಕಾರ ಮನುಷ್ಯನು ಯಾವ ಕಾರ್ಯ ಮಾಡಿದರೂ ಅದರಿಂದ ಯಾವ ಫಲವನ್ನು ಅಪೇಕ್ಷಿಸದೆ ಶಿವಾರ್ಪಣ ಬುದ್ಧಿಯಿಂದಲೇ ಅದನ್ನು ಮಾಡುವದು ಅವನ ಕರ್ತವ್ಯವು. ಕಾರ್ಯ ಮಾಡುವಲ್ಲಿ ಆತ್ಮಪ್ರತಿಷ್ಠೆ ಎಂಬುದು ಅವನಲ್ಲಿ ಇರಕೂಡದು. ಆದರೆ ಸಾಮಾನ್ಯವಾಗಿ ಜನರು ಕೇವಲ ಆತ್ಮಪ್ರತಿಷ್ಠೆಗಾಗಿ ಕಾರ್ಯ ಮಾಡುತ್ತಿರುವುದರಿಂದ ಅವರಲ್ಲಿ ಪರಸ್ಪರ ಕಲಹಗಳು, ಈರ್ಷೆಗಳು, ಅಸೂಯೆಗಳು, ಮನಸ್ತಾಪಗಳು ಉಂಟಾಗುತ್ತವೆ. ಮತ್ತು ಸಮಾಜದಲ್ಲಿ ಪ್ರೇಮ ಮತ್ತು ಐಕ್ಯತೆಯು ಉಳಿಯುವದಿಲ್ಲ. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ಮಾಡುವ ಎಲ್ಲ ಕಾರ್ಯಗಳನ್ನು ಶಿವಾರ್ಪಣ ಬುದ್ಧಿಯಿಂದಲೇ ಮಾಡುವೆನು.

( ೨ )

## ಕುಟುಂಬ ಸುಧಾರಣೆಯ ಕಾರ್ಯಗಳು.

ಹಿಂದೆ ಸೂಚಿಸಿದಂತೆ ಆತ್ಮಸುಧಾರಣೆಯನ್ನು ಮಾಡಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಈ ಕಾರ್ಯವು ಎಷ್ಟು ಮಹತ್ವವಾದದ್ದೋ, ಅಷ್ಟೇ ತನ್ನ ಮನೆಯಲ್ಲಿರುವ ಎಲ್ಲ ಜನರನ್ನು ಸುಧಾರಿಸು

ವದು ಮಹತ್ವವಾದದ್ದು. ಕುಟುಂಬದಲ್ಲಿ ತಾನು, ತನ್ನ ಹೆಂಡಿರು ಮಕ್ಕಳು, ತನ್ನ ಆಶ್ರಿತರು, ಸೇವಕರು ಇವರೆಲ್ಲರೂ ಬರುತ್ತಾರೆ. ಇವರು ಸುಧಾರಿಸಿದವರು ಇರದಿದ್ದರೆ ಆತ್ಮಸುಧಾರಣೆಗೆ ಪ್ರತಿಬಂಧವು ಉಂಟಾಗುತ್ತದೆ. ಆದ್ದರಿಂದ ಕೆಳಗಿನ ಸೂಚನೆಗಳು ಮಾಡಲ್ಪಟ್ಟಿವೆ.

ತನ್ನ ಕುಟುಂಬದಲ್ಲಿ ವಚನಗ್ರಂಥಗಳ ಅಭ್ಯಾಸ ನಡಿಸುವುದು.

(೧೦) ಪ್ರತಿಯೊಬ್ಬನು ಶಿವಶರಣರ ತತ್ವಗಳನ್ನು ತಾನು ಅರಿತುಕೊಳ್ಳುವದಲ್ಲದೆ ಅವುಗಳನ್ನು ಮನೆಯಲ್ಲಿರುವ ಎಲ್ಲರಿಗೂ ತಿಳಿಸಿ ಹೇಳಿ ಅವರು ಅವುಗಳಂತೆ ಶಕ್ಯವಿದ್ದಷ್ಟುರ ಮಟ್ಟಿಗೆ ನಡೆಯುವಂತೆ ಪ್ರಯತ್ನಿಸುವದು ಅವಶ್ಯವು. ಹೀಗೆ ವರ್ತಿಸುವದು ಪ್ರತಿಯೊಬ್ಬ ಕುಟುಂಬಸ್ಥನ ಮುಖ್ಯ ಕರ್ತವ್ಯವೆಂದು ಭಾವಿಸಬೇಕು. ಇದಕ್ಕೋಸ್ಕರ ಅವನು ವಾರದಲ್ಲಿ ಅಥವಾ ಪ್ರತಿದಿನ ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ ಆಗ ಕುಟುಂಬದವರನ್ನೆಲ್ಲ ಒತ್ತಟ್ಟಿಗೆ ಕೂಡಿಸಿ ಶಿವಶರಣರ ವಚನಗಳನ್ನು ತನಗೆ ತಿಳಿದಷ್ಟುರ ಮಟ್ಟಿಗೆ ಅವರಿಗೆ ತಿಳಿಸಿ ಹೇಳಬೇಕು. ಇದಲ್ಲದೆ ತನ್ನ ನಿತ್ಯದ ವ್ಯವಹಾರದಲ್ಲಿ ತನಗೆ ಕಂಡು ಬಂದ ಅನುಭವಗಳನ್ನೂ ಸಮಾಜದಲ್ಲಿ ನಡೆದ ಅಥವಾ ನಡೆಯುತ್ತಿರುವ ವಿಶೇಷ ಸಂಗತಿಗಳನ್ನೂ ಅವರಿಗೆ ತಿಳಿಸಿ ಹೇಳಬೇಕು. ಈ ಕ್ರಮವು ಪ್ರತಿ ಕುಟುಂಬದಲ್ಲಿಯೂ ಯಾವಾಗಲೂ ನಡೆಯಬೇಕು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ ಆಗ ನನ್ನ ಕುಟುಂಬದವರೊಂದಿಗೆ ಶಿವಶರಣರ ತತ್ವಗಳನ್ನು ಓದುವೆನು ಮತ್ತು ಚರ್ಚಿಸುವೆನು ಅಥವಾ ಅಲ್ಲಿ ಆಗ ಬೇರೆಯವರು ಹೇಳಿದ್ದನ್ನು ನಾನು ಮನಮುಟ್ಟಿ ಕೇಳುವೆನು.

ಕುಟುಂಬದಲ್ಲಿ ಜ್ಞಾನ ಸಂಪಾದನೆಯ ಕಾರ್ಯಗಳಿಗೋಸ್ಕರ ಪ್ರಯತ್ನಿಸುವುದು.

(೧೧) ವೀರಶೈವ ಧರ್ಮದಲ್ಲಿ ಜ್ಞಾನ ಮತ್ತು ಅನುಭವ ಇವುಗಳಿಗೆ ಬಹಳ ಮಹತ್ವದ ಸ್ಥಾನವಿದೆ. ಆದ್ದರಿಂದ ಎಲ್ಲರೂ ಶಿವಶರಣರ

ವಿಚಾರಗಳನ್ನು ತಾವೇ ಓದಿಕೊಂಡು ತಿಳಿದುಕೊಳ್ಳುವುದು ಬಹು ಅಗತ್ಯವು. ಆದ್ದರಿಂದ ಮನೆಯಲ್ಲಿರುವ ಸಣ್ಣವರೂ, ದೊಡ್ಡವರೂ, ಸ್ತ್ರೀಯರೂ, ಪುರುಷರೂ ಎಲ್ಲರೂ ಓದುಬರಹ ಕಲಿಯಬೇಕು. ಅವರಲ್ಲಿ ಕೆಲವರು ಕೆಲಮಟ್ಟಿಗೆ ಮಾತ್ರ ಕಲಿತವರಿರಬಹುದು. ಅವರು ಇನ್ನೂ ಹೆಚ್ಚಿಗೆ ಜ್ಞಾನ ಸಂಪಾದನೆ ಮಾಡುವಂತೆ ಕುಟುಂಬದ ಯಜಮಾನನು ಮತ್ತು ಅದರಲ್ಲಿಯ ಎಲ್ಲ ಸುಶಿಕ್ಷಿತ ಸ್ತ್ರೀಪುರುಷರು ಪ್ರಯತ್ನಿಸಬೇಕು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ಓದು ಬರಹ ಗೊತ್ತಿಲ್ಲದ ನನ್ನ ಕುಟುಂಬದವರಿಗೆಲ್ಲ ಓದು ಬರಹ ಕಲಿಸುವೆನು ಅಥವಾ ಅವರಿಗೆ ಕಲಿಸುವ ವ್ಯವಸ್ಥೆ ಮಾಡುವೆನು. ಮತ್ತು ಅವರು ಕಲಿತವರಿದ್ದರೆ ಅವರ ಜ್ಞಾನ ಸಂಪಾದನೆಯ ಕಾರ್ಯಗಳು ಹೆಚ್ಚಾಗಿ ಮುಂದುವರಿಯುವಂತೆ ಏರ್ಪಾಡು ಮಾಡುವೆನು.

ಮನೆತನದ ದಿನಚರಿಯು ಕಾರ್ಯಗಳನ್ನು ಸುವ್ಯವಸ್ಥೆಯಿಂದಲೂ ನಿಯಮಿತತನದಿಂದಲೂ ಮಾಡುವುದು.

(೧೨) ನಮ್ಮ ದೇಶದಲ್ಲಿ ಶಿಸ್ತು, ಪದ್ಧತಿ, ಅಚ್ಚುಕಟ್ಟುತನ, ವ್ಯವಸ್ಥೆ, ಸ್ವಚ್ಛತೆ ಇವು ಇರದ್ದರಿಂದ ಅದು ಅನೇಕ ಹಾನಿಗಳಿಗೆ ಈಡಾಗಿರುತ್ತದೆ. ಈ ಸ್ಥಿತಿಯುಂಟಾಗಲಿಕ್ಕೆ ಮನೆತನಗಳಲ್ಲಿರುವ ಅವ್ಯವಸ್ಥೆಯೇ ಮುಖ್ಯ ಕಾರಣವು. ಆದ್ದರಿಂದ ಸ್ತ್ರೀ ಪುರುಷರು ತಮ್ಮ ಉಡಿಗೆ ತೊಡಿಗೆಗಳನ್ನು ಮತ್ತು ಮನೆಯಲ್ಲಿರುವ ಎಲ್ಲ ಸಾಮಾನುಗಳನ್ನು ಅಚ್ಚುಕಟ್ಟುತನದಿಂದ ಮತ್ತು ಸ್ವಚ್ಛತೆಯಿಂದ ಇಡಲು ಪ್ರಯತ್ನಿಸತಕ್ಕದ್ದು. ಅದರಂತೆ ಮನೆತನದಲ್ಲಿ ದಿನಾಲು ನಡೆಯುವ ದಿನಚರಿಯ ಕಾರ್ಯಗಳನ್ನಾದರೂ ಸುವ್ಯವಸ್ಥೆಯಿಂದ ಮತ್ತು ವೇಳೆಗೆ ಸರಿಯಾಗಿ ಮಾಡಲು ಪ್ರಯತ್ನಿಸತಕ್ಕದ್ದು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯ ಮನೆತನಗಳಲ್ಲಿ ಈ ವ್ಯವಸ್ಥೆಯು ತಪ್ಪದೆ ಇರುವದುಂಟು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ—

ನಾನು ನನ್ನ ಗೃಹಕೃತ್ಯಕ್ಕೆ ಬೇಕಾಗುವ ಆವಶ್ಯಕ ಜೀನಸುಗಳನ್ನೂ ಕುಟುಂಬದವರ ಉಡಿಗೆ ತೊಡಿಗೆಗಳನ್ನೂ ಸುವ್ಯವಸ್ಥೆಯಿಂದಲೂ ಸ್ವಚ್ಛತೆಯಿಂದಲೂ ಇಡುವೆನು. ಮತ್ತು ಮನೆತನದ ದಿನಚರಿಯ ಕಾರ್ಯ

ಗಳಲ್ಲಿ ಶಿಸ್ತು, ಪದ್ಧತಿ, ಅಚ್ಚುಕಟ್ಟುತನ, ನಿಯಮಿತತನ, ಸ್ವಚ್ಛತೆ ಇವುಗಳಿರುವಂತೆ ಪ್ರಯತ್ನಿಸುವೆನು.

ಕುಟುಂಬದ ಜನರೆಲ್ಲರೂ ಆರೋಗ್ಯದ ನಿಯಮಗಳನ್ನು ತಿಳಿದುಕೊಂಡು ಅವುಗಳನ್ನು ಪಾಲಿಸುವುದು.

(೧೩) ಶಿವಶರಣರು ಆರೋಗ್ಯತೆಗೆ ಮತ್ತು ಶರೀರ ಪಾಲನೆಗೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ ಇದು ಅವರ ವಚನಗಳಿಂದ ತಿಳಿದು ಬರುತ್ತಿದೆ. ಚಿರಂಜೀವಿ ಎಂದರೆ 'ನಿರೋಗಿ' ಎಂತಲೂ 'ಬಹು ದಿವಸ ಬಾಳುವವ' ಎಂತಲೂ ಅವರು ಹೇಳಿದ್ದಾರೆ. ಇಂದ್ರಿಯಗಳ ತೀಕ್ಷ್ಣತೆಯು ಶಿವಾನುಭವದ ಕಾರ್ಯಗಳಿಗೆ ಯಾವಾಗಲೂ ಬಹಳ ಸಹಾಯಕಾರಿಯು. ಆದ್ದರಿಂದ ಕುಟುಂಬದ ಜನರೆಲ್ಲರೂ ಆರೋಗ್ಯದ ನಿಯಮಗಳನ್ನು ಅರಿತುಕೊಂಡು ಅವುಗಳನ್ನು ಪಾಲಿಸತಕ್ಕದ್ದು. ಇದೊಂದು ತಾವು ಮಾಡತಕ್ಕ ಧಾರ್ಮಿಕ ಕೃತ್ಯವೆಂದು ಭಾವಿಸಬೇಕು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ಕುಟುಂಬದವರೆಲ್ಲರಿಗೂ ಆರೋಗ್ಯದ ನಿಯಮಗಳನ್ನು ತಿಳಿಸಿ ಕೊಟ್ಟು ಅವರು ಹಾಗೆ ನಡೆಯುವಂತೆ ನಾನು ಪ್ರಯತ್ನಿಸುವೆನು.

ಮನೆಯಲ್ಲಿ ಶಿವಾನುಭವ ಮಂಟಪವನ್ನು ಸ್ಥಾಪಿಸುವುದು.

(೧೪) ಕುಟುಂಬದ ಜನರೆಲ್ಲರೂ ಶಿವಾನುಭವದ ವಿಚಾರಗಳನ್ನರಿತು ಅದರಂತೆ ಆಚರಿಸುವದು ಅವಶ್ಯವಾಗಿರುವದರಿಂದ ಈ ಕಾರ್ಯವನ್ನು ಮಾಡುವದಕ್ಕೋಸ್ಕರ ತಾನಿರತಕ್ಕ ಮನೆಯಲ್ಲಿಯ ಕೆಲವೊಂದು ಭಾಗವನ್ನು ಕಾದಿಡತಕ್ಕದ್ದು. ಇದಕ್ಕೆ 'ಶಿವಾನುಭವ ಮಂಟಪ' ಎಂಬ ಹೆಸರು ಇರತಕ್ಕದ್ದು. ಇದನ್ನು ಶುದ್ಧವಾಗಿಯೂ, ಪವಿತ್ರವಾಗಿಯೂ ಇಡತಕ್ಕದ್ದು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ನನ್ನ ಮನೆಯಲ್ಲಿ ಕೆಲವೊಂದು ಸ್ಥಳವನ್ನು ಗೊತ್ತುಪಡಿಸಿ ಅದನ್ನು ಶಿವಾನುಭವ ಕಾರ್ಯಗಳಿಗೋಸ್ಕರ ಉಪಯೋಗಿಸುವೆನು.

ಅದನ್ನು ಶುದ್ಧವಾಗಿಯೂ ಪವಿತ್ರವಾಗಿಯೂ ಇಡುವೆನು. ಅದು ನನ್ನ ಮನೆಯಲ್ಲಿಯ ಶಿವಾನುಭವ ಮಂಟಪ " ವೆಂದು ಭಾವಿಸುವೆನು. ಮನೆಯಲ್ಲಿ ಹೀಗೆ ವ್ಯವಸ್ಥೆ ಮಾಡುವದು ಶಕ್ಯವಿಲ್ಲದಿದ್ದರೆ ಶಿವಾನುಭವದ ಕಾರ್ಯಗಳನ್ನು ನಡೆಯಿಸುವ ಸ್ಥಳವನ್ನು ಆಗಿನ ಪೂರ್ತಿಯಾದರೂ ಪವಿತ್ರವಾದುದೆಂದು ಭಾವಿಸಿ ಅದರಂತೆ ಆಚರಿಸುವೆನು.

ಈ ಕಾರ್ಯಕ್ರಮ ಪತ್ರಿಕೆಯಲ್ಲಿಯ ಕಾರ್ಯಗಳನ್ನು ಕ್ರಮೇಣ ಕೈಕೊಳ್ಳುತ್ತ ಹೋಗುವುದು.

(೧೫) ಈ ಕಾರ್ಯಕ್ರಮ ಪತ್ರಿಕೆಯಲ್ಲಿ ಅನೇಕ ಸೂಚನೆಗಳಿದ್ದು ಅವುಗಳನ್ನು ಪ್ರತಿಯೊಬ್ಬನು ತನ್ನ ಕುಟುಂಬದ ಜನರಿಗೆಲ್ಲ ತಿಳಿಸಿ ಹೇಳತಕ್ಕದ್ದು. ಮತ್ತು ಅವುಗಳಲ್ಲಿ ಅವರು ತಮಗೆ ಬೇಕಾದ ಕನಿಷ್ಠ ಯಾವದಾದರೂ ಒಂದನ್ನು ಆರಂಭದಲ್ಲಿ ಕೈಕೊಳ್ಳುವಂತೆಯೂ, ಮುಂದೆ ಹೆಚ್ಚಿಗೆ ಉಳಿದವುಗಳನ್ನೂ ಕ್ರಮೇಣ ಆರಿಸುತ್ತ ಹೋಗುವಂತೆಯೂ ಪ್ರೋತ್ಸಾಹಿಸತಕ್ಕದ್ದು. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ.

ಈ ಕಾರ್ಯಕ್ರಮ ಪತ್ರಿಕೆಯಲ್ಲಿ ಕಾಣಿಸಿದ ವಿಷಯಗಳಲ್ಲಿ ಕನಿಷ್ಠ ಒಂದನ್ನಾದರೂ ನನ್ನ ಕುಟುಂಬದಲ್ಲಿಯ ಎಲ್ಲ ಸ್ತ್ರೀ ಪುರುಷರು ಆರಂಭದಲ್ಲಿ ಕೈಕೊಂಡು ಅವರು ಹಾಗೆ ನಡೆಯುವಂತೆಯೂ ಮುಂದೆ ಬರಬರುತ್ತ ತಮ್ಮ ಇಚ್ಛೆಗೆ ಬಂದ ಹೊಸ ಹೊಸ ಸುಧಾರಣೆಯ ಕಾರ್ಯಗಳನ್ನು ಅವರು ಕೈಕೊಳ್ಳುತ್ತ ಹೋಗುವಂತೆಯೂ ಅವರಿಗೆ ನಾನು ಪ್ರೋತ್ಸಾಹಿಸುವೆನು.

(೩)

## ಶಿವಾನುಭವ ಸಂಘಕ್ಕೋಸ್ಕರ ಮಾಡುವ ಕಾರ್ಯಗಳು.

### ಶಿವಾನುಭವ ಸಂಘದ ಸಭಾಸದನಾಗಿರುವುದು.

(೧೬) ಮನುಷ್ಯನು ತನ್ನ ಮತ್ತು ತನ್ನ ಕುಟುಂಬದ ಸುಧಾರಣೆಯನ್ನು ಮಾಡುವ ಕಾರ್ಯದಲ್ಲಿ ಶಿವಾನುಭವ ಸಂಘಗಳು ಅವನಿಗೆ ಬಹಳ ಸಹಾಯಕಾರಿಯಾದವುಗಳು. ಅದರಂತೆಯೇ ಅವುಗಳು ಜನಸುಧಾ

ರಣೆಯ ಕಾರ್ಯಗಳಲ್ಲಿಯೂ ಅವನಿಗೆ ಸಹಾಯವಾಗುತ್ತವೆ. ಶಿವಾನುಭವ ಸಂಘಗಳಿಗೆ ಸಭಾಸದನಾಗುವ ಉದ್ದೇಶಗಳು ಇವೇ ಇರುತ್ತವೆ. ಆದ್ದರಿಂದ ಶಿವಶರಣರ ವಿಚಾರಗಳು ಸಮ್ಮತವಿರುವಂಥ, ಅವುಗಳಿಗನುಸಾರವಾಗಿ ನಡೆಯಲು ಪ್ರಯತ್ನಿಸುವಂಥ, ಮತ್ತು ಉಚ್ಚ ವರ್ತನೆಯುಳ್ಳಂಥ ಸಭಾಸದರಿರುವ ಒಂದು ಶಿವಾನುಭವ ಸಂಘಕ್ಕೆ ಅವನು ಸಭಾಸದನಾಗತಕ್ಕದ್ದು. ಆಮೇಲೆ ಅವನು ಅದರ ಕಾರ್ಯಗಳಲ್ಲಿ ಪೂರ್ಣ ಮನಸ್ಸು ಹಾಕಿ ಸುಧಾರಣೆಯ ಕೆಲವೊಂದು ಕಾರ್ಯಕ್ರಮವನ್ನು ಕೈಕೊಂಡು ಅದು ಪ್ರಚಾರದಲ್ಲಿ ಬರುವಂತೆ ಪ್ರಯತ್ನಿಸತಕ್ಕದ್ದು. ಈ ಕಾರ್ಯಕ್ರಮದಲ್ಲಿ ತನ್ನ ಮತ್ತು ತನ್ನ ಕುಟುಂಬದವರಿಗೋಸ್ಕರ ತಾನು ಮಾಡತಕ್ಕ ಕಾರ್ಯಗಳೇ ಮಹತ್ವವಾದವುಗಳಿರುತ್ತವೆ. ಆದ್ದರಿಂದ ಶಿವಾನುಭವ ಸಂಘಗಳು ತಮ್ಮ ಸಭಾಸದರಿಗೆ ಯಾವ ಸುಧಾರಣೆಯ ಕಾರ್ಯಗಳು ಶಕ್ಯವೋ ಅಂಥವುಗಳನ್ನು ಅವು ಕೈಕೊಳ್ಳತಕ್ಕದ್ದು. ಈ ಕಾರ್ಯಗಳು ಅವರಿಗೆ ಸಿದ್ಧಿಸುತ್ತ ಹೋದ ಹಾಗೆ ಸಾರ್ವಜನಿಕ ಕಾರ್ಯಗಳನ್ನು ಮಾಡಲು ಅವಶ್ಯವಿರುವ ಯೋಗ್ಯತೆಯು ಅವರಿಗೆ ಪ್ರಾಪ್ತವಾಗುತ್ತ ಹೋಗುತ್ತದೆ. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟದೆ. ಅದು ಯಾವದೆಂದರೆ:—

ನಾನು ಕೆಲವೊಂದು ಶಿವಾನುಭವ ಸಂಘದ ಸಭಾಸದನಾಗುವೆನು. ಮತ್ತು ಅಲ್ಲಿ ಗೊತ್ತುಪಡಿಸಿದ ಕಾರ್ಯಕ್ರಮದಂತೆ ನಡೆಯಲು ನಾನು ಮನಃಪೂರ್ವಕವಾಗಿ ಪ್ರಯತ್ನಿಸುವೆನು.

**ಶಿವಾನುಭವ ಸಂಘದ ಸಭಾಸದರು ಪರಸ್ಪರ, ಸಹಕಾರ ಪರಸ್ಪರ ಪ್ರೇಮ ಮತ್ತು ಪರಸ್ಪರ ಬಂಧುಭಾವದಿಂದ ವರ್ತಿಸುವುದು.**

(೧೭) ಶಿವಾನುಭವ ಸಂಘಗಳ ಸಭಾಸದರು ಯಾವ ಪಂಗಡ, ಜಾತಿ, ಮತ, ಧರ್ಮದವರಿದ್ದರೂ ಕೂಡ ಅವರಲ್ಲಿ ಯಾವಾಗಲೂ ಪರಸ್ಪರ ಸಹಕಾರ, ಪರಸ್ಪರಪ್ರೇಮ, ಬಂಧು ಭಾವಗಳು ಇರತಕ್ಕದ್ದು. ಸಭಾಸದರಲ್ಲಿ ಮಠಾಧಿಕಾರಿಗಳು, ಅಧಿಕಾರಸ್ಥರು, ಶ್ರೀಮಂತರು, ಬಡವರು, ಸ್ಪೃಶ್ಯರು, ಅಸ್ಪೃಶ್ಯರು, ಹೀಗೆ ಅನೇಕರು ಇರಬಹುದು. ಆದರೆ ಅವರಲ್ಲಿ ಯಾರೂ ಶಿವಾನುಭವ ಸಂಘದವರು ಕೈಕೊಂಡ ಕಾರ್ಯಗಳಲ್ಲಿ ತಮ್ಮ ತಮ್ಮಲ್ಲಿ

ಯಾವ ತರದ ಉಚ್ಚ ನೀಚ ಭಾವವನ್ನು ಅಥವಾ ಭಿನ್ನತೆಯನ್ನು ಕಲ್ಪಿಸಕೂಡದು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ಶಿವಾನುಭವ ಸಂಘದ ಸಭಾಸದರೊಡನೆ ನಾನು ಯಾವಾಗಲೂ ಪರಸ್ಪರ ಸಹಕಾರ, ಪರಸ್ಪರ ಪ್ರೇಮ ಮತ್ತು ಬಂಧುಭಾವದಿಂದ ವರ್ತಿಸುವೆನು. ಅವರಲ್ಲಿ ಯಾವತರದ ಉಚ್ಚ ನೀಚ ಭಾವವನ್ನು ಕಲ್ಪಿಸುವದಿಲ್ಲ.

**ಶಿವಾನುಭವ ಸಂಘಗಳ ಸಭಾಸದರಲ್ಲಿ ಪರಸ್ಪರ ಲಗ್ನ, ಪರಸ್ಪರ ಊಟ ಉಪಚಾರಗಳಿಗೋಸ್ಕರ ಪ್ರೋತ್ಸಾಹಿಸುವುದು.**

(೧೮) ವೀರಶೈವ ಸಮಾಜದಲ್ಲಿ ಅನೇಕ ಒಳಪಂಗಡಗಳಿವೆ. ಅವುಗಳಲ್ಲಿ ಪರಸ್ಪರ ಭೋಜನ ಮತ್ತು ಪರಸ್ಪರ ಲಗ್ನ ವ್ಯವಹಾರಾದಿಗಳು ನಿರಾತಂಕವಾಗಿ ನಡೆಯುವದಿಲ್ಲ. ಆದರೆ ಇದು ಶಿವಶರಣರ ವಿಚಾರಗಳಿಗೆ ಸಮ್ಮತವಾದುದಲ್ಲ. ಈ ಸ್ಥಿತಿಯನ್ನು ದೂರ ಮಾಡುವದು ಎಲ್ಲ ಶಿವಾನುಭವ ಸಂಘಗಳ ಮುಖ್ಯ ಕಾರ್ಯವಾಗಿದೆ.

ಆದರೆ ಇಂಥ ಕಾರ್ಯಗಳನ್ನು ಮಾಡುವಲ್ಲಿ ಆರಂಭದಲ್ಲಿ ಬಹು ಜಾಗ್ರತೆಯಿಂದ ವರ್ತಿಸುವದು ಅವಶ್ಯವಾಗಿದೆ. ಯಾಕಂದರೆ ಈ ಕಾರ್ಯಗಳು ವ್ಯಕ್ತಿಯ ಒಲವು ಮತ್ತು ಅವನ ಮನಸ್ಸಿನ ಸಿದ್ಧತೆ ಇವುಗಳ ಮೇಲೆ ಅವಲಂಬಿಸಿರುತ್ತವೆ. ಬಹು ದಿವಸ ನೆಲೆಗೊಂಡ ರೂಢಿಗಳು ಬಲಾತ್ಕಾರದಿಂದ ಹೋಗಲಾರವು. ಒಂದು ವೇಳೆ ಬಲಾತ್ಕಾರದಿಂದ ಅವುಗಳನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾದರೆ ಸಮಾಜದಲ್ಲಿ ಕಲಹಗಳೆದ್ದು ವಿಪರೀತ ಪರಿಣಾಮಗಳಾಗುತ್ತವೆ. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ಶಿವಾನುಭವ ಸಂಘದ ವೀರಶೈವ ಸಭಾಸದರು ಬೇರೆ ಬೇರೆ ಪಂಗಡದವರಿದ್ದಲ್ಲಿ ಅವರಲ್ಲಿ ಪರಸ್ಪರ ಲಗ್ನ, ಪರಸ್ಪರ ಊಟೋಪಚಾರಗಳು ನಡೆಯುವಂತೆ ಪ್ರೋತ್ಸಾಹಿಸುವೆನು. ಒಂದು ವೇಳೆ ಅವರಲ್ಲಿ ಯಾರಾದರೂ ಈ ಕಾರ್ಯಗಳನ್ನು ಕೈಕೊಂಡರೆ ನಾನು ಅವರಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುವೆನು.

ವಚನಶಾಸ್ತ್ರದ ತತ್ವಗಳನ್ನು ಪ್ರಸಾರಮಾಡುವ ಕಾರ್ಯಗಳಿಗೆ ಸಹಾಯ ಮಾಡುವದು.

(೧೯) ವಚನಶಾಸ್ತ್ರವು ಮಾನವೀ ಜನಾಂಗದ ಹಿತಕ್ಕೋಸ್ಕರ ಇರುತ್ತದೆ. ಆದ್ದರಿಂದ ಅದರ ತತ್ವಗಳನ್ನು ಬಹುಜನ ಸಮಾಜದಲ್ಲಿ ಪ್ರಸಾರ ಪಡಿಸುವದು ಅವಶ್ಯವದೆ. ಇದು ವ್ಯಾಖ್ಯಾನಗಳು, ಪ್ರವಚನ ಗಳು, ವೀರಶೈವರಲ್ಲಿ ಆಗಿಹೋದ ಶಿವಶರಣರ ಮತ್ತು ಮಹಾಪುರು ಷರ ಜಯಂತಿಗಳು, ವಚನಗಾಯನ, ವಚನಸ್ಪರ್ಧೆಗಳು, ಪ್ರಹಸನ ಗಳು, ಶಿವಶರಣರಿಗೆ ಸಂಬಂಧಿಸಿದ ನಾಟಕಗಳು, ಅನೇಕತರದ ಪುಸ್ತಕ ಗಳ ಪ್ರಸಾರ, ವ್ಯಾಖ್ಯಾನಗಳು, ಅಭ್ಯಾಸಕೂಟಗಳು ಭಜನಾ ಸಂಘ ಗಳು, ಶಿವಶರಣರ ರಗಳೆಗಳ ಮತ್ತು ಲಾವಣಿಗಳ ಹಾಡುವಿಕೆ ಇವೇ ಮೊದಲಾದ ಪ್ರಯತ್ನಗಳ ಮೂಲಕ ಯಾವಾಗಲೂ ನಡೆಯುತ್ತಿರಬೇಕು. ಇಂಥ ಕಾರ್ಯಕ್ರಮಗಳನ್ನು ಶಿವಾನುಭವ ಸಂಘಗಳು ಅವಶ್ಯವಾಗಿ ಗ್ರಾಮಗಳಲ್ಲಿ ಆಗಿಂದಾಗ್ಗೆ ಏರ್ಪಡಿಸಬೇಕು. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ಶಿವಶರಣರ ತತ್ವಗಳನ್ನು ಜನತೆಯಲ್ಲಿ ಪ್ರಸಾರ ಮಾಡಲೂ ಹೀಗೆ ಪ್ರಸಾರ ಮಾಡುವ ಕಾರ್ಯಗಳಿಗೆ ನನಗೆ ಶಕ್ಯವಿದ್ದಷ್ಟರ ಮಟ್ಟಿಗೆ ಸಹಾಯ ಮಾಡಲೂ ಪ್ರಯತ್ನಿಸುವೆನು.

ವೀರಶೈವ ಮಹಾಪುರುಷರನ್ನು ಪೂಜ್ಯ ಭಾವದಿಂದ ಕಾಣುವದು.

(೨೦) ವೀರಶೈವ ಸಮಾಜದಲ್ಲಿ ಅನೇಕ ಮಹಾಪುರುಷರು ಆಗಿ ಹೋಗಿದ್ದಾರೆ. ಅವರಲ್ಲಿ ಅನೇಕರು ಧರ್ಮಪ್ರವರ್ತಕರೂ, ಶಿವಾನು ಭವಿಗಳೂ, ರಾಜಕೀಯ ಪುರುಷರೂ, ಧಾರ್ಮಿಕ ಪುರುಷರೂ, ಗ್ರಂಥ ಕಾರರೂ, ವಚನಕಾರರೂ, ಸಾಧುಗಳೂ ಇದ್ದಾರೆ. ಅವರು ರೇವಣ ಸಿದ್ಧ, ಪ್ರಭುದೇವ, ದೇವರದಾಸಿಮಯ್ಯ. ಏಕೋರಾಮಾರಾಧ್ಯ, ಶಂಕರ ದಾಸಿಮಯ್ಯ, ಪಂಡಿತಾರಾಧ್ಯ, ಮರುಳಾರಾಧ್ಯ, ರುದ್ರಮುನಿ, ಬಸವ, ಮಹಾದೇವಿಯಕ್ಕ, ಸಿದ್ಧರಾಮ, ಮಡಿವಾಳ ಮಾಚಿದೇವ, ಚೆನ್ನ ಬಸವ, ಹಡಪದಪ್ಪಣ್ಣ, ಚನ್ನಯ್ಯ, ಮಧುವರಸ, ಕಕ್ಕಯ್ಯ, ಹರಳಯ್ಯ. ಹರಿಹರ, ಕಾಮವಾಂಕ, ಸಾರಂಗದೇವ, ತೋಂಟದಾರ್ಯ, ಷಡಕ್ಷರ ದೇವ, ಕೆಳದಿಯ ಬಸವರಾಜ, ಅಂಬಿಗರ ಚೌಡಯ್ಯ, ಇವರೇ ಮೊದ

ಲಾದವರು ಇದ್ದಾರೆ. ಆದರೆ ಈಚೆಗೆ ಕೆಲವರು ಅವರನ್ನು ಹಳಿಯುವ ಪ್ರವೃತ್ತಿಯನ್ನು ತೋರಿಸುವದುಂಟು. ಇದು ಬಹುಶಃ ಅವರ ಚರಿತ್ರೆಗಳನ್ನು ತಿಳಿಯದ್ದರ ಮೂಲಕ ಇರುತ್ತದೆ. ಆದರೆ ಶಿವಾನುಭವ ಸಂಘಗಳು ಇಂಥ ಸ್ಥಿತಿಯನ್ನು ದೂರಮಾಡಲು ಅವಶ್ಯವಾಗಿ ಪ್ರಯತ್ನಿಸತಕ್ಕದ್ದು. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆಃ—

ನಾನು ವೀರಶೈವ ಸಮಾಜದಲ್ಲಿ ಧಾರ್ಮಿಕ, ಸಾಮಾಜಿಕ ವಾಙ್ಮಯಾತ್ಮಕ ರಾಜಕೀಯ ಮೊದಲಾದ ಪ್ರಯತ್ನಗಳನ್ನು ಮಾಡಿಹೋದ ಮಹಾಪುರುಷರ ಚರಿತ್ರೆಗಳನ್ನು ತಿಳಿದುಕೊಂಡು ಅವರನ್ನು ಅತ್ಯಂತ ಪೂಜ್ಯಭಾವದಿಂದಲೂ ಆದರದಿಂದಲೂ ಕಾಣುವೆನು.

**ಶಿವಾನುಭವ ಸಂಘಗಳು ತಮ್ಮ ಸಭಾಸದರ ಔದ್ಯೋಗಿಕ ಮತ್ತು ಆರ್ಥಿಕ ಸುಧಾರಣೆಗಳಿಗೋಸ್ಕರ ಪರಸ್ಪರ ಸಹಾಯ ಮಾಡುವದು.**

(೨೧) ಶಿವಾನುಭವ ಸಂಘಗಳ ಸಭಾಸದರು ಕಾಯಕದ ದೃಷ್ಟಿಯಿಂದ ಉಚ್ಚ ಸ್ಥಿತಿಯನ್ನು ಹೊಂದಲು ಪ್ರಯತ್ನಿಸುವದು ಅವಶ್ಯವು. ಇದು ವೈಯಕ್ತಿಕ ಮತ್ತು ಸಾಮೂಹಿಕ ಪ್ರಯತ್ನಗಳಿಂದ ಜರಗತಕ್ಕದ್ದು. ಸಾಮೂಹಿಕ ಪ್ರಯತ್ನಗಳನ್ನು ಮಾಡುವಲ್ಲಿ ಸಭಾಸದರು ಯಾವಾಗಲೂ ಪರಸ್ಪರ ಸಹಾಯ ಮಾಡತಕ್ಕದ್ದು. ಸಂಘಗಳಾದರೂ ಈ ವಿಷಯಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟು ಅವಶ್ಯಕ ಕಾರ್ಯಕ್ರಮಗಳನ್ನು ಕೈಕೊಳ್ಳತಕ್ಕದ್ದು. ಹೀಗೆ ಪ್ರಯತ್ನಿಸುವಲ್ಲಿ ಎಲ್ಲ ಕಡೆಯ ಶಿವಾನುಭವ ಸಂಘಗಳು ಪರಸ್ಪರ ಸಹಾಯ ಮಾಡತಕ್ಕದ್ದು. ಒಂದು ವೇಳೆ ಇತರ ಸಮಾಜದವರೊಡನೆ ಅವು ಪ್ರಯತ್ನ ಮಾಡುವದು ಅವಶ್ಯವಿದ್ದಲ್ಲಿ ಹಾಗೆ ಅವು ಪ್ರಯತ್ನಿಸಲೂ ಬೇಕು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆಃ—

ಶಿವಾನುಭವ ಸಂಘಗಳು ತಮ್ಮ ಸಭಾಸದರ ಔದ್ಯೋಗಿಕ ಮತ್ತು ಆರ್ಥಿಕ ಸುಧಾರಣೆಗೋಸ್ಕರ ಕೈಕೊಂಡ ಪ್ರಯತ್ನಗಳಿಗೆ ನಾನು ಸಹಾಯ ಮಾಡುವೆನು.

## ವೀರಶೈವ ವಾಙ್ಮಯ ಮತ್ತು ಕಲೆಗಳಿಗೆ ಸಹಾಯ ಮಾಡುವದು.

(೨೨) ಪ್ರತಿಯೊಬ್ಬನು ತನ್ನ ಮತ್ತು ತನ್ನ ಕುಟುಂಬದ ಸ.ಧಾರಣೆಗಾಗಿ ಆವಶ್ಯಕ ಖರ್ಚನ್ನು ಮಾಡಲೇ ಬೇಕಾಗುತ್ತದೆ. ಆದರೆ ಇಂಥ ಖರ್ಚಿನಲ್ಲಿ ತನ್ನ ಮತ್ತು ತನ್ನ ಸಮಾಜದ ಸಂಸ್ಕೃತಿ ಪೋಷಣೆಗಾಗಿ ಅಂದರೆ ವಾಙ್ಮಯ, ಕಲೆ, ಇವೇ ಮೊದಲಾದವುಗಳ ಅಭಿವೃದ್ಧಿಗಾಗಿ ತನ್ನ ಉತ್ಪನ್ನದ ಕೆಲವು ಭಾಗ ಹಣವನ್ನು ಕಾದಿಡುವದು ಬಹು ಅವಶ್ಯವು. ಈ ಹಣದ ಉಪಯೋಗವನ್ನು ಸಭಾಸದರು ತಮ್ಮ ಮನೆಯಲ್ಲಿ ಪುಸ್ತಕಾಲಯ ಮೊದಲಾದವುಗಳನ್ನು ಸ್ಥಾಪಿಸುವದಕ್ಕೋಸ್ಕರ ವಿನಿಯೋಗಿಸತಕ್ಕದ್ದು. ಆದರೆ ಸಂಘದ ಸಭಾಸದರ ಆರ್ಥಿಕ ಮೊದಲಾದ ಪರಿಸ್ಥಿತಿಗೋಸ್ಕರ ಇಂಥ ಪ್ರಯತ್ನಗಳು ಅವರಿಗೆ ಶಕ್ಯವಿಲ್ಲದೆ ಹೋದರೆ ಅಂಥವರಿಗೋಸ್ಕರ ಪುಸ್ತಕಾಲಯ ಮೊದಲಾದ ಸಾಮಾನ್ಯ ಏರ್ಪಾಡುಗಳನ್ನು ಮಾಡಿ ಅವುಗಳಿಗೋಸ್ಕರ ಹೀಗೆ ಕಾದಿಟ್ಟ ಹಣವನ್ನು ವಿನಿಯೋಗಿಸತಕ್ಕದ್ದು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ನನ್ನ ವಾರ್ಷಿಕ ಉತ್ಪನ್ನದಲ್ಲಿ ೧೦೦ರಲ್ಲಿ ೨ಕ್ಕೆ ಕಡಿಮೆಯಿಲ್ಲದಷ್ಟು ಹಣವನ್ನು ನನ್ನ ಕುಟುಂಬದ ಜನರಲ್ಲೆಲ್ಲ ವಾಙ್ಮಯಪ್ರೀತಿ ಮತ್ತು ಕಲೆಗಳ ಜ್ಞಾನ, ಇವುಗಳನ್ನು ಹೆಚ್ಚಿಸುವದಕ್ಕೋಸ್ಕರ ವೆಚ್ಚ ಮಾಡುವೆನು. ಮತ್ತು ಇಂಥ ಕಾರ್ಯಗಳಿಗೆ ಸಹಾಯಕಾರಿಯಾಗುವಂಥ ಎಲ್ಲ ಪ್ರಯತ್ನಗಳಿಗೂ ನಾನು ಶಕ್ಯವಿದ್ದಷ್ಟು ಸಹಾಯ ಮಾಡುವೆನು.

## ಶಿವಾನುಭವ ಸಂಘಗಳಿಗೆ ಸಹಾಯ ಮಾಡುವದು.

(೨೩) ಸಭಾಸದರು ಶಿವಾನುಭವ ಸಂಘಗಳ ಕಾರ್ಯಗಳಿಗಾಗಿ ತಮ್ಮ ಉತ್ಪನ್ನದಲ್ಲಿ ಕೆಲವು ಭಾಗ ಹಣವನ್ನು ಕೊಡುವದು ಅವಶ್ಯವು. ಆದ್ದರಿಂದ ಕೆಳಗಿನ ಸೂಚನೆಯು ಮಾಡಲ್ಪಟ್ಟಿದೆ. ಅದು ಯಾವದೆಂದರೆ:—

ನಾನು ನನ್ನ ವಾರ್ಷಿಕ ಉತ್ಪನ್ನದಲ್ಲಿ ೧೦೦ರಲ್ಲಿ ೧ಕ್ಕೆ ಕಡಿಮೆಯಲ್ಲದಷ್ಟು ಹಣವನ್ನು ಶಿವಾನುಭವ ಸಂಘಕ್ಕೆ ಅರ್ಪಿಸುವೆನು.

## ಶಿವಾನುಭವ ಸಂಘಗಳ ಅಧಿಕಾರ ಸ್ಥಾನಗಳನ್ನು ದೊರಕಿಸಲು ವಿಶೇಷ ಪ್ರಯತ್ನ ಮಾಡದೆ ಇರುವದು.

(೨೪) ಶಿವಾನುಭವ ಸಂಘಗಳಿಗೋಸ್ಕರ ಅಧ್ಯಕ್ಷ, ಕಾರ್ಯದರ್ಶಿ, ಹೀಗೆ ಕೆಲವು ಕಾರ್ಯಕರ್ತರನ್ನು ನೇಮಿಸುವ ವಾಡಿಕೆಯು ಈಗ ಇರುತ್ತದೆ. ಕೆಲವು ದಿವಸಗಳ ತರುವಾಯ ಈ ಸಂಘಗಳ ಮಹತ್ವವು ಬೆಳೆದ ಹಾಗೆ ಇಂಥ ಅಧಿಕಾರ ಸ್ಥಾನಗಳನ್ನು ಪಡೆಯಲು ಮೇಲಾಟಗಳು ಸಭಾಸದರಲ್ಲಿ ನಡೆಯಬಹುದು. ಹೀಗಾಗುವದು ಬಹು ಅನಿಷ್ಟವು ಆದ್ದರಿಂದ ಈ ಸ್ಥಿತಿಯುಂಟಾಗದಂತೆ ಮೊದಲಿನಿಂದಲೇ ಸಭಾಸದರು ಎಚ್ಚರ ಪಡುವದು ಅವಶ್ಯವು. ಆದ್ದರಿಂದ ಈ ಕೆಳಗಿನ ಸೂಚನೆಯು ಮಾಡಲ್ಪಟ್ಟದೆ. ಅದು ಯಾವದೆಂದರೆ:—

ನಾನು ಶಿವಾನುಭವಸಂಘದ ಅಧಿಕಾರ ಸ್ಥಾನಗಳನ್ನು ಪಡೆಯಲು ಯಾವ ತರದ ವಿಶೇಷ ಪ್ರಯತ್ನಗಳನ್ನು ಮಾಡುವದಿಲ್ಲ. ನಾನು ಯೋಗ್ಯತೆಯನ್ನು ನೋಡಿಯೇ ನನ್ನ ಮತವನ್ನು ಕೊಡುವೆನು. ಮತ್ತು ಸಂಘದವರು ನನ್ನನ್ನು ಯಾವ ಸ್ಥಾನಕ್ಕೆ ನೇಮಿಸುತ್ತಾರೋ ಅದಕ್ಕೆ ನಾನು ಒಪ್ಪಿಗೆ ಕೊಟ್ಟು ಆ ಸ್ಥಾನವನ್ನು ಸ್ವೀಕರಿಸಿ ಮನಃಪೂರ್ವಕವಾಗಿ ಆ ಕಾರ್ಯ ಮಾಡುವೆನು.

# ಶಿವದೀಕ್ಷೆ ಅರ್ಥಾತ್ ಲಿಂಗಧಾರಣ.

(ಲೇಖಕ:— ಶ್ರೀಯುತ ಬಸಪ್ಪ ಚನ್ನಪ್ಪ ಪಟ್ಟೇದ)

ಈ ಶಿರೋಲೇಖದಲ್ಲಿ ಕಾಣಿಸಿದ ವಿಷಯದ ಮೇಲೆ ಶ್ರೀಕಾನಕಾನಹಳ್ಳಿ ಬಸಪ್ಪ ಬೆಂಗಳೂರನಗರ ಅವರು ಶಿವಾನುಭವದ ಎಪ್ರೀಲ್ (೧೯೪೧)ಸಂಚಿಕೆಯಲ್ಲಿ ನಾನು ಮಾರ್ಚ ತಿಂಗಳಲ್ಲಿ ಅದೇ ಪತ್ರಿಕೆಯೊಳಗೆ ಪ್ರಸಿದ್ಧಿಸಿದ ಲೇಖವನ್ನು ಆಮೂಲಾಗ್ರ ವಿರೋಧಿಸಿರುವರು. ಶ್ರೀಮಾನ್ ಕೀರ್ತನಕೇಸರಿ ಹುಲಕುಂಟಿಮಠದ ಶಿವಮೂರ್ತಿಶಾಸ್ತ್ರಿಗಳ "ಲಿಂಗಧಾರಣ ಮತ್ತು ಶಿವದೀಕ್ಷೆ" ಎಂಬ ಲೇಖಕ್ಕೆ ಪ್ರತಿಯಾಗಿ ಶ್ರೀ ಜೀರಗೆಯವರು ಶಿವಾನುಭವದ ಜನವರಿ ಸಂಚಿಕೆಯಲ್ಲಿ ಪ್ರತಿಪಾದಿಸಿದ್ದೇ ನ್ಯಾಯವೂ ಯುಕ್ತವೂ ಆಗಿರುವದೆಂಬುದೇ ಅವರ ಆಶಯ.

ನನ್ನ ಅಭಿಪ್ರಾಯವನ್ನು ತಳ್ಳಿ ಹಾಕಿದರೆಂದು ನನಗೇನು ವಿಷಾದವೆನಿಸುವದಿಲ್ಲ. ಹೇಗೂ ಸತ್ಯವಾದುದೇ ಹೊರಬೀಳಲೆಂಬುದೇ ನನ್ನ ಅಪೇಕ್ಷೆ. ತಪ್ಪು ಯಾರಲ್ಲಿ ಸಂಭವಿಸುವದಿಲ್ಲ? ಅದು ಎಲ್ಲರ ಪಾಲಿಗೂ ಹೆಚ್ಚುಗಲಿ ಕಡಿಮೆಯಾಗಲಿ ಬಂದೇ ಬರುವದುಂಟು ಆದರೆ ಹೇಗಿದ್ದರೂ ತನ್ನದೇ ಸರಿ ಎಂದು ಯಾರೂ ದುರಾಗ್ರಹಕ್ಕೆ ಬೀಳಬಾರದು. ಸದಸದ್ವಿವೇಕವನ್ನು ಸ್ಮರಿಸಿ ತಮ್ಮ ತಪ್ಪಿದ್ದರೆ ಸರಳತನದಿಂದ ಒಡಂಬಡಬೇಕು. ಅದೇ ದೊಡ್ಡತನದ ಲಕ್ಷಣ! ತಪ್ಪು ಒಪ್ಪಿಕೊಂಡರೆ ಕಡಿಮೆತನ ಬರುತ್ತದೆಂದು ತಿಳಿಯುವದು ದಡ್ಡತನ. ಶಿವಾನುಭವದಲ್ಲಿ ಕಾಲಿಟ್ಟವರಿಗಂತೂ ಅದು ತೀರ ನಿಂದ್ಯ. ಈ ಮಾತು ಮೊದಲು ಎಲ್ಲರೂ ಲಕ್ಷಿಸಬೇಕು. ಸತ್ಯವನ್ನು ಪ್ರೀತಿಸಬೇಕು. ಸಂಘಟನೆಯನ್ನು ಹೊಂದಬೇಕು.

೧ ಜನ್ಮಲಿಂಗಧಾರಣದ ನಂತರ ಶಿವದೀಕ್ಷೆಯು ಅವಶ್ಯವಾದುದೆಂಬುದಕ್ಕೆ ನಾನು ಹಿಂದಿನ ಲೇಖದಲ್ಲಿ (೧) ಶೀಲಗಳ ಆಧಾರ (೨) ಈಗ ಬಳಕೆಯಲ್ಲಿರುವ ದಶಕರ್ಮ ಪದ್ಧತಿ, ಸ್ವಯಂಪುರೋಹಿತ ಎಂಬ ಸಂಸ್ಕಾರಬೋಧಕ ಪುಸ್ತಕಗಳ ಆಧಾರ (೩) ಮಾಹೇಶ್ವರರೆಂದಿನಿಸಿಕೊಳ್ಳುವವರಲ್ಲಿ ಜನ್ಮಲಿಂಗ ಧಾರಣವಲ್ಲದೆ ಶಿವದೀಕ್ಷೆಯೂ ಬಳಕೆಯಲ್ಲಿರುವದೆಂಬದರ ಆಧಾರಗಳನ್ನು ಮುಂದೆ ಮಾಡಿದ್ದು ಈ ಮೂರರ

ಬಗ್ಗೆ ಕೇವಲ ಮೌನವನ್ನು ಧರಿಸಿ, ಬದಿಗಿರಿಸಿ, ಶ್ರೀ ಪಟ್ಟೇದ ಅವರು "ಭಕ್ತರು ಬೇರೆ, ಮಾಹೇಶ್ವರರು ಬೇರೆ, ಭಕ್ತರಿಗೆ ಲಿಂಗಧಾರಣೆ ಮಹೇಶ್ವರರಿಗೆ ಶಿವದೀಕ್ಷೆ" ಎಂಬ ವಿಚಿತ್ರ ವಿಂಗಡಿಕೆಯನ್ನು ಮಾಡಿದ್ದಾರೆ, ಎಂಬ ವ್ಯರ್ಥವಾದ ಹುಯಿಲು ಶ್ರೀಮಾನ್ನರು ಎಬ್ಬಿಸಿದ್ದಾರೆ. ಹೀಗೆ ವಿಂಗಡಿಸುವವನು ನಾನಲ್ಲ ಎಂಬುದನ್ನು ಅದೇ ಎಪ್ರೀಲ ಸಂಚಿಕೆಯೊಳಗಿನ ನನ್ನ "ಲಿಂಗಾಯತ ಸಮಾಜ ರಚನೆ" ಎಂಬ ಲೇಖವು ತಾನೇ ಹೇಳುತ್ತದೆ. ಭಕ್ತ, ಮಹೇಶ್ವರ ಇವು ನನ್ನ ಶಬ್ದಗಳಲ್ಲ. ಜನ್ಮಸಿದ್ಧ ಮೇಲು ಕೀಳುಗಳನ್ನು ಸ್ಥಾಪಿಸಿ ತಮ್ಮ ಶ್ರೇಷ್ಠತ್ವವನ್ನು ಬದುಕಿಸಿಕೊಳ್ಳಬೇಕೆಂದು ಯತ್ನಿಸುವ ಸ್ವಾರ್ಥಿ ಜನರು ರೂಢಿಯಲ್ಲಿ ಉಪಯೋಗಿಸುತ್ತಿರುವ ಶಬ್ದಗಳವು. ನಾನಾದರೂ ವೀರಶೈವರೆಲ್ಲರೂ ಸಮಾನಸ್ಕಂದರೆನ್ನುವವನೇ. ಹೀಗೆ ಅವರು ಒಂದು ಇದ್ದು ಇದ್ದು, ಒಬ್ಬರಿಗೆ ಜನ್ಮಲಿಂಗಧಾರಣವಷ್ಟೇ ಏಕೆ? ಇನ್ನೊಬ್ಬರಿಗೆ ಜನ್ಮಲಿಂಗ ಧಾರಣವಲ್ಲದೆ ಮತ್ತೆ ಶಿವದೀಕ್ಷೆ ಏಕೆ, ಎಂಬುದೇ ನನ್ನ ಕೇಳಿಕೆ. ಒಬ್ಬರಿಗೆ ಶಿವದೀಕ್ಷೆಯ ಆವಶ್ಯಕತೆಯಿದ್ದುದಾದರೆ, ಇನ್ನೊಬ್ಬರಿಗೂ ಅದು ಬೇಕೇ ಬೇಕು, ಎಂದು ಹೇಳುವದೇ ನನ್ನ ಮುಖ್ಯೋದ್ದೇಶ. ಇದನ್ನು ಶ್ರೀ ಕಾನಕಾನಹಳ್ಳಿಯವರು ಹಾರಿಸಿಯೇ ಬಿಟ್ಟುದು ಸರಿಯಲ್ಲ.

೨ ಕೂಸಿಗೆ ಗರ್ಭದಲ್ಲಿರುವಾಗಲೇ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರ ಹೇಯ ಸ್ಥಲಗಳ ಅರಿವು ಆಗಿರುತ್ತದೆಂದು ಶ್ರೀಮಾನರು ಬರೆದಿರುತ್ತಾರೆ. ಪಿಂಡಕ್ಕೆ ಹಿಂದಣ ಜನ್ಮದ ಸ್ಮರಣೆಯು ಬಂದು "ಈಗ ಈ ಪ್ರಪಂಚಕ್ಕೆ ಏಕೆ ಇಳಿದು ಬಂದೆನಪ್ಪಾ" ಎಂಬ ಸಂಸ್ಕಾರ ಹೇಯ ಉಂಟಾಗಿರುತ್ತದೆಂದು ಹೇಳುತ್ತಾರೆ. (ಆದರೆ ಪ್ರಸೂತವಾಯುವಿನ ಪ್ರಬಲ ಹೊಡತದಿಂದ ಅದೆಲ್ಲ ಆಗಲೇ ಮಾಯವಾಗಿ ಬಿಡುವುದೆಂಬುದನ್ನು ಮಾತ್ರ ಅವರು ಹೇಳಿರುವದಿಲ್ಲ) ಎಂಟನೆಯ ತಿಂಗಳಲ್ಲಿ ತಾಯಿಯ ಮುಖಾಂತರವಾಗಿ ಗುರುಕರುಣ, ಲಿಂಗಧಾರಣಗಳೂ ಒದಗುತ್ತವೆ. ಹೀಗೆ ಐದು ಸ್ಥಲಗಳು ಗರ್ಭದಲ್ಲಿರುವಾಗಲೇ ಅದಕ್ಕೆ ಸಂಭವಿಸಿದ ಮೇಲೆ ಅದರ ಸುಪರಿಣಾಮವು ಮುಂದುವರಿಯುತ್ತ ಉಳಿದ ತೊಂಬತ್ತಾರು ಸ್ಥಳಗಳನ್ನು ಕೂಡ ಅಲ್ಲೇ ದಾಟಿ ಇಹಲೋಕಕ್ಕೆ ಬರುವುದೆಂದು, ಅದೇಕೆ ಊಹಿಸಬಾರದು? ಹಾಗೆ ಒಮ್ಮೆ ಊಹಿಸಿ ಬಿಟ್ಟರೆ ಮುಂದೆ ಈ ಲೋಕದಲ್ಲಿ ಮನಬಂದಂತೆ ಹರಿದಾಡಲಿಕ್ಕೆ ಅದಾವ ತೊಂದರೆಯೂ ಉಳಿಯುತ್ತಿದ್ದಿಲ್ಲವಲ್ಲ!

೩ "ಜನ್ಮಲಿಂಗಧಾರಣೆಗೆ ಸಾಮಾನ್ಯ ಮಹೇಶ್ವರರೇ ಸಾಕು ಆದರೆ ಶಿವದೀಕ್ಷೆಗೆ ವಿಶೇಷರೆಂದೆನಿಸುವ ಷಟ್ಟಚರಾಧಿಕಾರಿಗಳಲ್ಲದೆ ಸಾಗದು." ಎಂದು ಹಿಂದಿನ ಲೇಖದಲ್ಲಿ ನಾನು ಬರೆದುದು ನನ್ನ ಹೊಸ ಶೋಧವೇನೂ ಅಲ್ಲ. ಈಗ ವ್ಯವಹಾರದಲ್ಲಿ ರೂಢವಿರುವದನ್ನೇ ಬರೆದಿರುವೆನೆಂಬುದನ್ನು ಲಕ್ಷಿಸಬೇಕು. ಸಾಮಾನ್ಯರು ವಿಶೇಷರು ಯಾರು? ಎಂಬದನ್ನು ನನ್ನ "ಲಿಂಗಾಯತ ಸಮಾಜ ರಚನೆ"ಯು ಲೇಖದಲ್ಲಿ ನೋಡಬಹುದು. ಲಿಂಗಧಾರಿಗಳ ಕೂಟ್ಟಿಯಲ್ಲಿ ಹುಟ್ಟಿದ ಕೂಸಿಗೆ ಜನ್ಮಲಿಂಗಧಾರಣ, ಶಿವದೀಕ್ಷೆಗಳೆರಡೂ ಬೇಕು. ಅಲಿಂಗಿಗಳಿಗೆ ಶಿವದೀಕ್ಷೆಯೊಂದೇ ಸಾಕು. ಅದರಲ್ಲಿಯೇ ಎರಡೂ ಬರುತ್ತವೆ. ಜನ್ಮಲಿಂಗ ಧಾರಣೆಯಲ್ಲಿ ಶಿವದೀಕ್ಷೆಯ ಪ್ರಯೋಜಕತ್ವವು ದೊರೆಯುವದಿಲ್ಲೆಂದೂ ಅವೆರಡರಲ್ಲಿಯೂ ತಾರತಮ್ಯವಿರುವುದೆಂದೂ ನನ್ನ ಸಾಧಾರ ಗ್ರಹಿಕೆ ಇರುವದರಿಂದ, ಆ ಬಗ್ಗೆ ಹಿಂದಿನ ಲೇಖದಲ್ಲಿ ವಿಸ್ತಾರವಾಗಿ ಬರೆದಿರುವೆನು.

೪ "ಲಿಂಗ ಮುಟ್ಟಲೊಡನೆ ಶಿವಕುಲವಪ್ಪುದು ತಪ್ಪದು" ಎಂದು ಶರಣರು ಹೇಳಿದ್ದು ಸತ್ಯವು ಆದರೆ ಅದು ಜನ್ಮಲಿಂಗಧಾರಣೆಯಲ್ಲಿ ಶಿವದೀಕ್ಷೆಯೇ! ಯಾಕಂದರೆ ಸಿದ್ಧಾಂತ ಶಿಖಾಮಣಿಯು ಗುರುಕಾರುಣ್ಯಸ್ಥಲದೊಳಗೆ—

ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಭಯಾನ್ವಿತಃ।
ಷಣ್ಮಾಸಾನ್ವತ್ಸರಂ ವಾಪಿ ಯಾವದೇಷಃ ಪ್ರಸೀದತಿ ॥

ಪ್ರಸನ್ನಂ ಪರಮಾಚಾರ್ಯಂ......ಪ್ರಾರ್ಥಯೇತ್......ರಕ್ಷಮಾಂ ಭವರೋಗಿಣಂ। ಎಂದು ಉಲ್ಲೇಖಿಸಿದ್ದಾರೆ. ಹೀಗೆ ಬೇಡಿಕೊಂಡ ಶಿಷ್ಯನ ಶಕ್ತಿಪಾತ ಲಕ್ಷಣವನ್ನು ಗುರುವು ಒಳಿತಾಗಿ ಪರೀಕ್ಷಿಸಿ ನೋಡಿ ಕೃಪೆ ಮಾಡುವನು, ಎಂದು ಹೇಳಿರುತ್ತದೆ. ಅದಕಾರಣ ಅವನು ಗರ್ಭಸ್ಥ ಶಿಶುವಲ್ಲ ವಯಸ್ಕನಾದವನೇ ಇರಬೇಕೆಂಬದು ಸ್ಪಷ್ಟವು. ಈ ರೀತಿ ಗುರುಕರುಣೆಯಿಂದ ಲಿಂಗವಡೆದು ಅದು ಮುಟ್ಟಲೊಡನೆ (ಅಂತರ್ಬಾಹ್ಯದಲ್ಲಿ ವೇದ್ಯವಾದಾಗ) ಶಿವಕುಲವಪ್ಪುದು ತಪ್ಪದು; ಎಂಬುದನ್ನೇ ಮೇಲಿನ ವಚನದಲ್ಲಿ ಘೋಷಿಸಲಾಗಿದೆ. ಬದನೆಕಾಯಿ ಧರಿಸಿದ ಭವಿ ಜನರ ಕಥೆಯಾದರೂ ಅಕ್ಷರಶಃ ಇದನ್ನೇ ಅನುಸರಿಸುತ್ತದೆ.

೫ "ಈ ಪಟ್ಟೀದವರು ಹೇಳುವಂತೆ ತಂದೆ ತಾಯಿಗಳು ಲಿಂಗ ಮಾರ್ಗವನ್ನು ಚರಿಸುವವರಲ್ಲದಿದ್ದರೆ, ಅವರು ಲಿಂಗವಂತ ಪಥಕ್ಕೇ ಸಲ್ಲರು. ಅವರು ಲಿಂಗಾಯತರೇ ಅಲ್ಲ. ಅವರ ಮಾತು ನಮಗೆ ಬೇಡವೇ ಬೇಡ" ಎಂದು ಬರೆದರೇನು ತೀರಲಿಲ್ಲ. ಅಂತಹ ಜನ್ಮಲಿಂಗ ಧಾರಿ ಬಹುಜನ ಸಮಾಜವು ಇತ್ತಕಡೆಗೆ ಅವರಂತೆ ಅನ್ಯತ್ರಸಹ ಇದ್ದು ದೇನೂ ಸುಳ್ಳಾಗಲಾರದು. ಅವರು ಜನ್ಮಲಿಂಗಧಾರಣವಾಗಿಯೂ ಇಂತಹ ಹೀನ ಸ್ಥಿತಿಯಲ್ಲಿ ಬಾಳಲಿಕ್ಕೆ ಕಾರಣವೇನೆಂಬುದನ್ನು ಲಕ್ಷಿಸುವದು ಉಚಿತ ವಲ್ಲವೇ? ವಯಸ್ಕರಾದ ಮೇಲೆ ಶಿವದೀಕ್ಷೆ ಪಡೆಯದಿದ್ದುದರಿಂದಲೇ ಅವರ ಗತಿ ಹೀಗಾಗಿದೆ. ಇವರನ್ನಂತೂ ಬಿಡಿರಿ! ಹಾಯಸ್ಕೂಲು ಕಾಲೇಜುಗಳಲ್ಲಿ ಓದುತ್ತಿರುವ ಅನೇಕ ಪ್ರಬುದ್ಧರು, ಈಗ ಇಷ್ಟಲಿಂಗ ವಿಭೂತಿ ಮೊದಲಾದವನ್ನು ತಿರಸ್ಕರಿಸಿ ಅಂಗದಿಂದ ತೆಗೆದು ಹಾಕಿ ಮನಬಂದಂತೆ ನಡೆಯುತ್ತಿರುವರು. ಇದರ ಕಾರಣವೇನು? ಶಿವದೀಕ್ಷೆ ಯಿಲ್ಲದುದರ ದುಷ್ಪರಿಣಾಮವೇ ಅಲ್ಲವೇನಿದು? ಇಷ್ಟೊಂದು ಅಧೋ ಗತಿಗೆ ಸುಶಿಕ್ಷಿತರೂ ಅಶಿಕ್ಷಿತರೂ ಕೂಡೇ ಇಳಿಯುತ್ತಿರುವಾಗ ಕಣ್ತೆ ರೆದು ನೋಡದೆ, ಮತ್ತೂ ಶಿವದೀಕ್ಷೆಯನ್ನು ಅಲ್ಲಗಳೆದು ಜನ್ಮಲಿಂಗ ಧಾರಣವೊಂದನ್ನೇ ಎತ್ತಿ ಹಿಡಿದು, ಅದೊಂದರಿಂದಲೇ ಸಂತುಷ್ಟರಾಗಿ ಧನ್ಯತೆ ಪಡೆಯುವಂತಹ ವಿಚಾರವಂತರಿಗೆ, ಬೇರೆ ಅರಿಯದವರೇನು ಹೇಳುವದು?

೬ "ನೀನು ಧರಿಸಿದ ಲಿಂಗವು ದೇವರು. ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ. ನಮಗೆ ಸುಖದುಃಖನೆಲ್ಲವೂ ಅವನಿಂದಲೇ ಪ್ರಾಪ್ತಿಸು ತ್ತವೆ; ಆದುದರಿಂದ ಅವನನ್ನು ಪೂಜಿಸಬೇಕು." ಈ ವಾಕ್ಯಗಳು ಹುಚ್ಚರ ಉಚ್ಚಾರಗಳೆಂದು ಶ್ರೀಮಾನ್ ಕಾನಕಾನಹಳ್ಳಿಯವರು ಭಾವಿ ಸಿದ್ದಾರೆ. ಅವರು ಕೆಳಗಿನ ವಿವರಣೆಯನ್ನು ಗಮನಿಸುವರೆಂದು ನಂಬಿ ರುವೆನು.

(ಅ) ಮಡಿಕೆಗೆ ಮಣ್ಣೇ ಪಿಂಡವು. (ಮೂಲ ಕಾರಣವು) ಆಭರ ಣಗಳಿಗೆ ಹೊನ್ನೇ ಪಿಂಡವು. ಅದರಂತೆ ಜಗತ್ತಿಗೆ ಅದರಲ್ಲಿರುವ ಸಕಲ ವಸ್ತುಗಳಿಗೆ ಅಂತರ್ಬಾಹ್ಯದಲ್ಲಿಯೂ ಪರಮಾತ್ಮನೇ - ದೇವರೇ - ಲಿಂಗವೇ ಪಿಂಡವು. ಅಣೋರಣೀಯಾನ್ ಮಹತೋ ಮಹೀಯಾನ್ " ಎಂಬುದು ಅದನ್ನೇ ಸಾರುತ್ತದೆ. ಮೊದಲು ಏನೂ ಅರಿಯದ ಬಾಲ

ಕರಿಗೆ "ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು......"
ಇತ್ಯಾದಿ, ಸೂಕ್ಷ್ಮನಿರಾಕಾರ ಸ್ವರೂಪ ಹೇಳುವದು ಸಾಧ್ಯವೇ? ಅದು
ತಮ್ಮಂತಹ ಬಲಿತ ಜ್ಞಾನಿಗಳಿಗೆ! ಆ ಮಗುವಿಗೆ ಮೊದಲು ಆಸ್ತಿಕ್ಯ
ಬುದ್ಧಿಯನ್ನು - ದೇವರ ಕಲ್ಪನೆಯನ್ನು - ಹುಟ್ಟಿಸಿದರೆ, ಅವೇ ಜಗತ್ತಿನ
ಆದಿಕಾರಣ (ಮೂಲ ಪಿಂಡ)ವೆಂದು ಹೇಳಲಿಕ್ಕೆ ಅವಕಾಶ ಮಾಡಿಕೊ
ಟ್ಟಂತಾಗುವದಿಲ್ಲವೇ? ಲಿಂಗವು ದೇವರು ಎಂಬ ಭಾವನೆಯು ಅವ
ನ್ನಲ್ಲಿ ಒಡಮೂಡಿದರೆ, ಅದು ಪಿಂಡಸ್ಥಲದ ಬೀಜರೂಪ ಭಾವನೆಯಾ
ಗಲಿಲ್ಲವೇ? ಇದು ಯಾವ ಗ್ರಂಥದಲ್ಲಿ ಇಲ್ಲ, ಹೇಳಿರಿ ನೋಡುವಾ?

(ಬ) ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ. ನಮಗೆ ತೋರುವ
ಜಗವು (ನಾವು ಸಹ)ಲಿಂಗದಿಂದಲೇ ಉದ್ಭವಿಸಿದ್ದೇವೆ. ಲಿಂಗದ ಹೊರತು
ವಿಶ್ವದಲ್ಲಿ ಬೇರೊಂದಿಲ್ಲೆಂದು ತಿಳಿದರೆ, ಪಿಂಡಜ್ಞಾನವಾಗಲಿಲ್ಲವೇ?
"ಕಾಳಿಯ ಕಂಕಾಳದಿಂದ ಮುನ್ನ" ಇದ್ದುದು ಲಿಂಗವೇ ಅಲ್ಲವೇ?
ಮತ್ತೇನಾದರೂ ಉಂಟೋ! ಕಾಳಿಯ ಕಂಕಾಳವೂ ತೋರುವ ತೋರಿ
ಕೆಯೆಲ್ಲವೂ ಲಿಂಗವೇ ಅಹುದೆಂಬುದನ್ನು ಅರಿಯುವದು ಬಿಟ್ಟು,
ಪಿಂಡದ ನಿಜಜ್ಞಾನವು ಮತ್ತೆ ಬೇರೆ ಉಳಿಯಿತೇ? "ಲಿಂಗರೂಪಂ
ಜಗತ್ಸರ್ವಂ" ಎಂಬುದೇನು ಹೇಳುತ್ತದೆ ವಿಚಾರಿಸಿರುವಿರಾ?

(ಕ) ನಮಗಾಗುವ ಸುಖದುಃಖಗಳೆಲ್ಲ ಅವನಿಂದಲೇ ಆಗುತ್ತವೆ.
ಆದುದರಿಂದ ಅವನನ್ನು ಪೂಜಿಸಬೇಕು. ಇಲ್ಲಿ ಅವನಿಂದಲೇ ಅಂದರೆ
ಲಿಂಗಸ್ವರೂಪದ ಸಟಿಪಟಿ ತಿಳುವಳಿಕೆಯಿಂದಲೇ ಎಂದರಿಯಬೇಕು.
ಅವನನ್ನು ಪೂಜಿಸಬೇಕು. ಅಂದರೆ ಲಿಂಗದ ನಿಜಸ್ವರೂಪದ ಜ್ಞಾನ
ವನ್ನು ಪಡೆಯಬೇಕು ಎಂಬ ಭಾವ ಈ ಮಾತಿನಲ್ಲಿ ಅದಾವ ದೋಷ
ವದೆ? ನಮ್ಮ ಕರ್ಮಗಳು ಲಿಂಗಜ್ಞಾನದ ಅಭಾವದ ಮೂಲಕವಾ
ಗಿಯೇ ಅಲ್ಲದ ಮಾರ್ಗದಲ್ಲಿ ನಡೆಯುವದರಿಂದ ದುಃಖವೂ, ಲಿಂಗದ
ಸರಿಯಾದ ಮಾರ್ಗದಲ್ಲಿ ಸಾಗುವದರಿಂದ ಸುಖವೂ ಪ್ರಾಪ್ತವಾಗುವ
ದೆಂದು ಹೇಳುವದು ಪ್ರಮಾದವೇ? ಅಜ್ಞಾನದಿಂದ ಸಂಸಾರವನ್ನು
(ವಿಷಯಗಳನ್ನು) ಅತಿಕ್ರಮಿಸಿ ಹಿಂಬಾಲಿಸುವದೇ ನಮ್ಮ ದುಃಖಕ್ಕೆ
ಕಾರಣವೆಂದು ತಿಳಿದರೆ, ಅದರಲ್ಲಿ ಹೇಯ ಬುದ್ಧಿಯುಂಟಾಗುವದಿಲ್ಲವೆ?
ಎಳೆಯರ ಬುದ್ಧಿಯ ಆಕಲನ ಮಾಡಿ ಅದಕ್ಕೆ ಅನುರೂಪವಾಗಿಯೇ

ಅವರಿಗೆ ಹೇಳುತ್ತ ಹೋಗುವದು ಸಯುಕ್ತಿಕವಲ್ಲವೇ? ತಮ್ಮಂತಹ ಬಲ್ಲವರು ಹೀಗೆ ಅರಿಯದವರಂತೆ ಮಾಡುವದು ಸರಿಯಲ್ಲ. ತಾವು ಸಂಸಾರ ಹೇಯವನ್ನು ಕುರಿತು ಸವಿಸ್ತಾರವಾಗಿ ನಿರೂಪಿಸಿರುವದು ಪ್ರೌಢ ಬುದ್ಧಿಯುವರಿಗೆ ಸರಿಹೋಗುವ ವಿಷಯ. ಮೊದಲು ಬಾಲಕರ ಮನದಲ್ಲಿ ಬೀಜರೂಪವಿಂದಲೇ ಬಿತ್ತಬೇಕಾಗುವದೆಂಬದನ್ನು ಲಕ್ಷಿಸಿದರೆ, ನಾನು ಹೇಳಿದ್ದರಲ್ಲಿ ತುಸುವಾದರೂ ಅರ್ಥವುಂಟೆಂಬುದು ತಮಗೂ ಹೊಳೆದೀತು.

೭ "ಯೋಗ್ಯ ಗುರುವನ್ನೇ ಹಿಂಬಾಲಿಸುವದು ವಿಹಿತ" ಎಂದು ನಾನೇ ಅನ್ನುವದಿಲ್ಲ. ಕೆಳಗಿನ ಚಂದಿಮರಸನ ವಚನ ಹಾಗು ಸರ್ವಜ್ಞನ ವಚನಗಳನ್ನು ನೋಡಿರಿ.

(ಅ) ಅರಿಯುವ ಗುರು ಅರಿಯದ ಶಿಷ್ಯಂಗೆ ಅನುಗ್ರಹ ಮಾಡಿದ ಡೇನರ್‍ಪುದೋ? ಅಂಧಕನ ಕೈಯ ಅಂಧಕ ಹಿಡಿದಂತೆ; ಮುಂದೇನಪ್ಪುದೋ ಹೇಳು ಮರುಳೇ. ಬಹು ಮಾತಿನ ರಂಜನೆಯ ಮಾಡದಿರು. ಸಿಮ್ಮಲಿಗೆಯ ಚೆನ್ನರಾಮನೊಬ್ಬನೇ ಹುಸಿಯ ಹಸರದವನಲ್ಲ.

(ಬ) ಬಳ್ಳಿಗುರುಡರ ಕೂಡಿ ಹಳ್ಳವನು ಬಿದ್ದಂತೆ।<br>ಒಳ್ಳೆಯಾ ಗುರುವಿನುಪದೇಶವಿಲ್ಲದಿರೆ।<br>ಎಲ್ಲಿಯುದು ಮುಕ್ತಿ. —ಸರ್ವಜ್ಞ॥

೮ "ಲಿಂಗಧಾರಣವು ಲಿಂಗಮುದ್ರೆಯೆಂದು ನಾನು .....ಕೇಳಿಲ್ಲ" ನೀವು ಕೇಳಿರಲಿಕ್ಕಿಲ್ಲ ಸರಿ! ಆದರೂ ಲಿಂಗ ಹಾಗು ಮುದ್ರೆ ಎಂಬೆರಡೂ ಶಬ್ದಗಳು ಸಮಾನಾರ್ಥದವೆಂಬುದೇನೂ ಸುಳ್ಳಲ್ಲ. ಪರಮಾತ್ಮನ ಚಿಹ್ನವೇ ಲಿಂಗ. ಲಿಂಗದ ಚಿಹ್ನವೇ ಮುದ್ರೆ. ಆದುದರಿಂದ ಲಿಂಗ,ಮುದ್ರೆ, ಲಿಂಗಮುದ್ರೆ ಇವುಗಳೆಲ್ಲ ಸಾಮಾನ್ಯವಾಗಿ ಒಂದೇ. ಮನುಷ್ಯನು ಪರಮಾತ್ಮನ ಸ್ವರೂಪವರಿತು ತದನುಸಾರ ಆಚರಿಸಿದರೆ, ಅವನು ಧರಿಸಿದ್ದು ಲಿಂಗವಾಗುವದು. ಪರಮಾತ್ಮನ ಸ್ವರೂಪಜ್ಞಾನವಿಲ್ಲದೆ ಅಜ್ಞಾನಸ್ಥಿತಿಯಲ್ಲಿ ಮನಸೋಕ್ತ ವರ್ತಿಸಿದರೆ, ಅವನು ಪಶುಸಮಾನನಾಗಿ ಆ ಧರಿಸಿದ ಲಿಂಗವೇ ಲಿಂಗಮುದ್ರೆಯಾಗುವದು. ಚಿಕ್ಕತನದಲ್ಲಿ ಜ್ಞಾನಹೀನನಾದ ಬಾಲಕನು ಪಶುವೃತ್ತಿಯುವನಾದುದರಿಂದ ಅವನು ಧರಿಸಿದ್ದು ಲಿಂಗಮುದ್ರೆಯೆಂಬುದು

ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾದದ್ದು. ಹೊಂದುವವರಿಗೆ ಅವನು ಲಿಂಗದೇವನ ಹೆಸರಿನಿಂದ ನಿಶ್ಚಯಿಸಿದ ಕನ್ಯೆಯೇ ಸರಿ. ಸತಿ ಸ್ವರೂಪಕ್ಕೆ ಎಂದೂ ಬರಲಾರನು.

೯ "ಮಗುವಿಗೆ ಚಿಕ್ಕ ವಯಸ್ಸಿನಲ್ಲಿ ಲಿಂಗಧಾರಣ ಮಾಡಿ ಅದು ಲಿಂಗವಂತ ತಾಯಿತಂದೆ ಬಂಧುಗಳ ಜೊತೆಯಲ್ಲಿ ಅನುಕರಣಮಾಡಿ, ಒಳ್ಳೆ ಶಿವಭಕ್ತಿ ಸಂಪನ್ನನೂ, ಷಟ್‌ಸ್ಥಲ ಆಚಾರಸ್ಥನೂ ಆಗುವನೆಂಬದರಲ್ಲಿ ಯಾವ ಸಂದೇಹವೂ ಇಲ್ಲ. ಈ ವಿಚಾರದ ಶ್ರೀಮಾನ್ ಜೋಗೆಯವರು ಹೇಳಿರುವದು ಸತ್ಯವಾದುದು" ಎಂದು ಶ್ರೀ ಕಾನಕಾನಹಳ್ಳಿಯವರು ಬರೆದಿರುವರು. ಇಲ್ಲಿ ಮಾತ್ರ ಮಗುವಿಗೆ ಮನೆಯವರ ಸಹವಾಸದಿಂದ ಅನುಕರಣ ಮಾಡಿ ಒಳ್ಳೇ ಭಕ್ತಿ ಸಂಪನ್ನನೂ......... ಇತ್ಯಾದಿ ಮೇಲೆ ಬರೆದಂತೆ ಆಗುವನೆಂಬದರಲ್ಲಿ ಅವರಿಗೆ ಪ್ರಾಮಾಣಿಕ ಬುದ್ಧಿಯಿಂದ ತೋರುತ್ತದೆ. ಆದರೆ ಅದನ್ನೇ ನಾನು "ಹುಡುಗನ ಅನುಭವ" ಎಂದು ಬರೆದದ್ದನ್ನು "ಹುಡುಗರ ಜೊತೆಗೆ ಗೋಲಿ, ಗಜ್ಜುಗ ಆಡುವದು... ಇತ್ಯಾದಿ ರೀತಿಯಿಂದ ಮನದಣಿವಂತೆ ಚೇಷ್ಟಿಸುತ್ತಾರೆ. ಇದೊಂದು ಸೌಜನ್ಯದ ಮಾದರಿಯೇ!

೧೦ "ಅನುಭವಿಗಳಾದ ಮಠಾಧಿಕಾರಿಗಳು ಸಿಗದಿದ್ದಲ್ಲಿ ತಮ್ಮಲ್ಲೇ ಅನುಭವಿಗಳಾದವರನ್ನು ಕರಕೊಂಡು ಕಾರ್ಯಗಳನ್ನು ನಡೆಸುವದು ಜಾಣತನವಲ್ಲವೇ?" ಎಂದು ಶ್ರೀ ಕಾನಕಾನಹಳ್ಳಿಯವರು ಬರೆದುದು ಬಹು ಯೋಗ್ಯವಾದುದೂ ಸಶಾಸ್ತ್ರವೂ ಸರಿ. ಆದರೆ ರೂಢಿಯು ಹಾಗಿಲ್ಲ. ಎಂತಹವರಿದ್ದರೂ ಅಯ್ಯನವರೆಂದೆನ್ನಿಸಿಕೊಳ್ಳುವ ಜಾತಿಯವರೇ ಆ ಕಾರ್ಯಗಳನ್ನು ಮಾಡುವದು ತಕ್ಕದೆಂದು ಜನರ ಪರಂಪರಾಗತ ತಿಳಿವಳಿಕೆ. ಇದಕ್ಕೇನು ಗತಿ? ರೂಢಿತಪ್ಪಿಸಿ ನಡೆಯುವದು ಒಳ್ಳೊಳ್ಳೆ ಬಲ್ಲಿದರಿಗೇ ಅಸಾಧ್ಯವಾಗಿರುವಲ್ಲಿ ಸಾಮಾನ್ಯ ಜನತೆಗೆ ಅದು ಒಗ್ಗಬಹುದೇ ಎಂಬದೊಂದು ಕಠಿಣ ಸಮಸ್ಯೆಯಾಗಿದೆ. ಈಗ ಮಾಹೇಶ್ವರರೆಂದು ಹೇಳಿಕೊಳ್ಳುವ ಅಯ್ಯಗಳೂ ಅವರ ಮುಗದಡಣದಲ್ಲಿ ಸಿಕ್ಕ ಇತರರೂ ಒಪ್ಪಿಸುವಷ್ಟರಿರಬಹುದೇ?

೧೧ "ಲಿಂಗಧಾರಣ ಮಾಡುವವನು ದಡ್ಡನಿರಲಿ, ಜಾಣನಿರಲಿ, ಮೇಲ್ಕಂಡ ಕಾರ್ಯಗಳು ಸಾಂಗೋಪಾಂಗವಾಗಿ ನಡದೇ ನಡೆಯು

ಬೇಕು"— ಹೀಗೆನ್ನುವ ನಿಮ್ಮ ಮಾತು ಕೇಳಬೇಕೋ? "ಅರಿಯದ ಗುರು ಅರಿಯದ ಶಿಷ್ಯಂಗೆ ಅನುಗ್ರಹ ಮಾಡಿದಡೆ..." ಎಂಬ ಚೆಂದಿಮರಸರೇ ಮೊದಲಾದ ಪೂರ್ವಿಗರ ಮಾತು ಕೇಳಬೇಕೋ? ನೀವು ಹೇಳಿದಂತೆ ಮಾಡಿ ಅಷ್ಟಕ್ಕೆ ಬಿಟ್ಟರೆ, ಅದರ ಸುಪರಿಣಾಮವು ಸಮಾಜದಲ್ಲಿ ತೋರುವ ದಿಲ್ಲೆಂದಮೇಲೆ ಅದನ್ನು ಹೇಗೆ ಅವಲಂಬಿಸಬೇಕು?

೧೨. "ಕೂಸಿನ ತಲೆಯ ಮೇಲೆ ಹಸ್ತವಿಡುವದು, ಕಿವಿಯಲ್ಲಿ ಮಂತ್ರೋಪದೇಶಮಾಡುವದು, ಮುಂತಾದ ವಿಷಯಗಳು ಇತ್ತ ಕಡೆಯ ಅನುಭವದಿಂದ ನೋಡಿದರೆ, ಕೇವಲ ಕಟ್ಟುಕಥೆಗಳಂತೆ ತೋರುತ್ತವೆ"— ಎಂದು ನಾನು ಬಾಯ್ಬಿಟ್ಟಿದ್ದನ್ನು ತಾವು ಬರೆದು, ಬಳ್ಳಿ ಆಶ್ಚರ್ಯವ್ಯಕ್ತಗೊಳಿಸಿರುವಿರಿ. ಅದು ಬಹಳ ಶೋಚನೀಯವಾದ ಸಂಗತಿಯೆಂದು ನುಡಿದಿರುವಿರಿ. ನಿಮಗೆ ಈ ವಿಷಯದಲ್ಲಿ ಸಂದೇಹವಿಟ್ಟರೆ, ಕೃಪೆ ಮಾಡಿ ಇತ್ತ ಕಡೆಗೊಮ್ಮೆ ತಾವು ದಯಮಾಡಿಸಿದಲ್ಲಿ, ನಾನು ತಮ್ಮೊಡನೆ ತಿರುಗಾಡಿ ಪ್ರತ್ಯಕ್ಷ ತೋರಿಸಿ ಕೊಡಲಿಕ್ಕೆ ಸಿದ್ಧನಿರುವೆನು ಆಗ ತಾವು ಈ ಕೊರತೆಗಳನ್ನು ಹೊಗಲಾಡಿಸಲಿಕ್ಕೆ ನನಗೂ ಇತ್ತಣ ಉಳಿದ ಹಿರಿಯರಿಗೂ ನೆರವಾಗಬೇಕೆಂದು ಅಂಗಲಾಚಿ ಬಿನ್ನವಿಸುವೆನು.

ಈ ಮೇರೆಗೆ ಶ್ರೀ ಕಾನಕಾನಹಳ್ಳಿಯವರ ಬರಹದ ವಿಷಯವಾಗಿ ನನ್ನ ನಿಜವಾದ ಸ್ಪಷ್ಟ ಮತವನ್ನು ಬೈಲಿಗರೆಸಿರುವೆನು. ಜನ್ಮ ಲಿಂಗ ಧಾರಣೆ ಹಾಗು ಶಿವದೀಕ್ಷೆ ಇವು ತತ್ವಶಃ ಒಂದೇ ಇದ್ದರೂ "ಧರಿಸುವವರ" ವಯೋಮಾನದಿಂದ ಅವುಗಳಲ್ಲಿ ತಾರತಮ್ಯವು ಸಂಭವಿಸುತ್ತದೆ. ಉದಾಃ — ಚಿಕ್ಕದಿರುವಾಗ ಮಿಡಿ, ದೊಡ್ಡದಾದಾಗ ಕಾಯಿ, ಪಕ್ವವಾದಾಗ ಹಣ್ಣು ಎಂಬ ಹೆಸರುಗಳು ಒಂದೇ ವಸ್ತುವಿಗೆ, ಬೇರೆ ಬೇರೆ ಕಾಲದಲ್ಲಿ, ಬೇರೆ ಬೇರೆ ಅವಸ್ಥೆಗಳಲ್ಲಿ, ಬೇರೆ ಬೇರೆ ಗುಣ ಧರ್ಮಗಳಿಂದ ಬರುತ್ತಿರುವದನ್ನು ನಾವು ನೆನೆಯಬೇಕು. ಆದುದರಿಂದ ವಿನಾಕಾರಣ ವಾದ ಬಲಿಸದೆ, ವಿತುಷ್ಟಕ್ಕೆಡೆಯಾಗದಂತೆ, ಪರಿಣಾಮದ ಕಡೆ ಲಕ್ಷಗೊಟ್ಟು, ವಿವೇಕವನ್ನು ಧರಿಸುವದು ವಿಹಿತ! ಪಿಂಡಸ್ಥಲ, ಪಿಂಡಜ್ಞಾನಸ್ಥಲ ಮುಂತಾದ ತಾತ್ವಿಕ ವಿಷಯದಲ್ಲಿ ಒಣ ವಾದ ವಿವಾದ ನಡಿಸುವದರಲ್ಲೇ ಮಗ್ನರಾಗಿರುವ ನಾವುಗಳು, ಅವುಗಳ ಅರಿವು ಹಿಡಿದು ಪ್ರತ್ಯಕ್ಷ ವರ್ತನ ಮಾಡುವದು, ಎಷ್ಟೊಂದು ಪ್ರಯೋಜನಕಾರಿಯೆಂದು ಹೇಳುವದೇ ಕಷ್ಟ! ಈಗ ನಮಗೆ ಅತ್ಯವಶ್ಯವಾಗಿ ಬೇಕಾದುದು ಸಂಘ

ಟನೆ. ಪ್ರತಿಷ್ಠೆ, ಮತ್ಸರ, ದುರಭಿಮಾನ ಮೊದಲಾದವನ್ನು ಮುಂದೆ ತರುವ ಕಾಲವಿದಲ್ಲ. ಕೊಟ್ಟು ಕುಟ್ಟುವದರಿಂದ ಹುಟ್ಟುವದೇನು? ವಿದ್ಯೆಯನ್ನು ವಿವಾದದಲ್ಲಿ ಬಳಸುವದು ಶಠಂಭಾವವನ್ನೂ, ಸವಿನಯಕ್ಕೆ ವಿನಿಯೋಗಿಸುವದು ಸೌಜನ್ಯವನ್ನೂ ಸೂಚಿಸುತ್ತವೆಂದು ಸುಭಾಷಿತ ಕಾರರು ಹೇಳುವದನ್ನು ಮರೆಯಕೂಡದು. ಇದೇ ವಿಚಾರದಿಂದ ಈ ವಾದವನ್ನು ನಾನು ಇಷ್ಟಕ್ಕೇ ಸಮಾಪ್ತಿಗೊಳಿಸಲಿಚ್ಛಿಸುತ್ತೇನೆ.

---

# ದೀಕ್ಷಾವಾದ

(ಲೇಖಕರು:- ಶ್ರೀ. ಮಾ. ನಂ. ನಂಜಪ್ಪನವರು ಬೆಂಗಳೂರುನಗರ.)

ನಮ್ಮ ಈ ಲಿಂಗಾಯತ ಸಮಾಜದಲ್ಲಿ ಪರಿಸ್ಥಿತಿ ಮತ್ತು ಸಹವಾಸ ದೋಷಗಳ ಫಲವಾಗಿ ಇತರ ದೇವತೆಗಳ ಪೂಜಾಪದ್ಧತಿ, ವೈದಿಕಮತಾ ನುಯಾಯಿಗಳ ವರ್ಣವ್ಯವಸ್ಥೆಯ ಅನುಕರಣ, ಬ್ರಾಹ್ಮಣಬಂಧುಗಳ ಆಚಾರ ವಿಚಾರ ನಡೆನುಡಿಗಳ ಅನುಸರಿಸುವಿಕೆ ಮುಂತಾದವುಗಳು ಅನಿವಾರ್ಯವಾಗಿ ಬೇರೂರುತ್ತಿರುವುದು ಸಾಲದೆಂದು ನಮ್ಮಲ್ಲಿಯ ಕೆಲ ಸ್ವಾರ್ಥಿಗಳಾದ ಧರ್ಮಾಧಿಕಾರಿಗಳು ಈಗ ಬಳಕೆಗೆ ಬರುತ್ತಿರುವ ನಮ್ಮ ದೀಕ್ಷಾಪದ್ಧತಿಯಲ್ಲಿಯೂ "ಭಕ್ತದೀಕ್ಷೆ ಮಾಹೇಶ್ವರದೀಕ್ಷೆ" ಮುಂತಾಗಿ ಭಿನ್ನಭೇದಾಚರಣೆಯ ವಿಧಿಗಳನ್ನು ಕಲ್ಪಿಸಿ ವೀರಶೈವರಲ್ಲಿಯೇ ಮೇಲು ಕೀಳುಗಳ ಕುಕಲ್ಪನೆಯನ್ನು ಬಿತ್ತತೊಡಗಿದರಲ್ಲದೆ ತಮ್ಮ ನೂತನ ಸೃಷ್ಟಿ ಯಾದ ಮಾಹೇಶ್ವರ ದೀಕ್ಷಾವಿಧಿಯ "ಜೋಳಿಗೆ"ಯ ಅನುಗ್ರಹದಿಂದ ಸಮಾಜಕ್ಕೆ ಉಪದ್ರವಕಾರಿಯೂ, ಸ್ವಪ್ರತಿಷ್ಠಾಸ್ಥಾಪಕರದೂ ಆದ ದೊಡ್ಡ ದೊಂದು "ಭಿಕ್ಷುಕರ ತಂಡ" ವನ್ನೂ ನಿರ್ಮಿಸಿದ್ದಾರೆ. ಈಗ ಈ ಜೋಳಿ ಗೆಯ ಮಾಹೇಶ್ವರರ ಉಪಟಳವು ಸಹಿಸಲಸಾಧ್ಯವಾಗಿದೆ.

ಈ ಉಪಟಳವು ಸಾಲದೆಂದೋ ಏನೋ ಇತ್ತೀಚಿಗೆ ವೀರಶೈವರಲ್ಲಿ ನಡೆಯುವ "ಲಿಂಗಧಾರಣ ಸಂಸ್ಕಾರವೇಬೇರೆ, ವೀರಶೈವ ದೀಕ್ಷಾಸಂಸ್ಕಾ ರವೇ ಬೇರೆ" ಎಂಬ ವಾದವೊಂದು ತಲೆ ಎತ್ತಿಕೊಂಡಿದೆ. ಆದರೆ ಈ

ವಿವಾದವು ಈಗಲೇ ತಲೆಯೆತ್ತಿಕೊಂಡುದು ಒಂದು ರೀತಿಯಿಂದ ಒಳ್ಳೆಯದೇ ಆಗಿದೆ. ಏಕೆಂದರೆ ಇತ್ತೀಚೆಗೆ ನಮ್ಮ ಸಮಾಜದ ಧರ್ಮಾಧಿಕಾರಿಗಳು ಕೆಲ ಸ್ವಾರ್ಥಿಗಳ ಮಹತ್ಪ್ರಯತ್ನದ ಫಲವಾಗಿ— ಒಂದೇ ಸಂಸ್ಕಾರವನ್ನು "ಲಿಂಗಧಾರಣ—ವೀರಶೈವದೀಕ್ಷೆ ಎಂದು ಎರಡಾಗಿ ವಿಭಾಗಿಸಿ ಈ ಎರಡು ಸಂಸ್ಕಾರಗಳಿಗೂ ವಿಪರೀತ ಭಿನ್ನಭೇದಗಳನ್ನು ಕಲ್ಪಿಸಿ ಒಂದು ಕೀಳು ಮತ್ತೊಂದು ಮೇಲು ಎಂಬುದಾಗಿಯೂ ಎರಡನ್ನೂ ಬೇರೆ ಬೇರೆಯಾಗಿಯೇ ಪಡೆಯಬೇಕೆಂದೂ ಬೋಧಿಸುತ್ತಿರುವುದಲ್ಲದೆ ಕಾರ್ಯತಃ ಆಚರಿಸುತ್ತಲೂ ಇದ್ದಾರೆ. ಈ ನಡೆವಳಿಕೆಯು ಎಷ್ಟನೆಯ ಇಸವಿಯಿಂದೀಚೆಗೆ ಪ್ರಾರಂಭವಾಯಿತೆಂಬುದನ್ನು ಶೋಧಿಸಬೇಕಾಗಿದೆ.

ಇಂತಹ ಸಮಯದಲ್ಲಿ "ಧಾರಣ-ದೀಕ್ಷೆಗಳು ಭಿನ್ನ ಸಂಸ್ಕಾರಗಳಲ್ಲವೆಂದೂ ಮೂಲತಃ ಇದು ಒಂದೇ ಸಂಸ್ಕಾರವೆಂಬುದನ್ನೂ ಧಾರಣ ದೀಕ್ಷೆಗಳೆರಡೂ ಒಂದನ್ನು ಬಿಟ್ಟು ಮತ್ತೊಂದಿರದೆ ಒಂದರೊಡನೊಂದು ಅಭೇದ್ಯವಾಗಿ ಹೆಣೆದುಕೊಂಡಿವೆಯೆಂದೂ ಒಂದನ್ನುಬಿಟ್ಟರೆ ಮತ್ತೊಂದು ದೊರೆಯುವುದೇ ಇಲ್ಲವೆಂದೂ ನಿಜಸ್ಥಿತಿಯನ್ನು ಬಹಿರಂಗಪಡಿಸುವುದಕ್ಕಾಗಿ ಈ ವಿವಾದವು ಈಗ ಪ್ರಾರಂಭವಾಗಿರುವುದು ಸಕಾಲೋಚಿತವಾದುದಾಗಿಯೇ ಇದೆ.

ಈ ವಿವಾದವನ್ನು ಕುರಿತು ಈಗಾಗಲೇ ಶ್ರೀಗಳಾದ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು, ಜೀರಗೆ ಕ. ಬಸವಪ್ಪ ಬಿ. ಎ; ಅವರು, ಕಾನಕಾನಹಳ್ಳಿ ಬಸಪ್ಪನವರು, ಮಂಟೆಮುರಿಯ ಬಸವಪ್ಪ ಚನ್ನಪ್ಪ ಪಟ್ಟೇದ ಅವರು, ಶ್ರೀಸಿದ್ಧವೀರದೇವರು, "ಓರ್ವ ವೀರಶೈವ"ರು ಇವರುಗಳು ಶಿವಾನುಭವ ಮತ್ತು ಶರಣಸಾಹಿತ್ಯ ಪತ್ರಿಕೆಗಳಲ್ಲಿ ಲೇಖಗಳ ಮೂಲಕ ಕೆಲವರು ವಿದ್ವತ್ಪೂರ್ಣವಾಗಿಯೂ ಕೆಲವರು ವಿದ್ವತ್ತು ಮತ್ತು ಅನುಭವ ಪೂರ್ಣವಾಗಿಯೂ ಚರ್ಚೆಯನ್ನು ನಡೆಯಿಸಿದ್ದಾರೆ.

ಶ್ರೀ ಶಿವಮೂರ್ತಿಶಾಸ್ತ್ರಿಗಳವರೂ ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ ಅವರೂ ಲಿಂಗಧಾರಣ ಹೊಂದಿದವರೂ ಪುನಃ ದೀಕ್ಷೆಹೊಂದಲೇಬೇಕೆಂದೂ ದೀಕ್ಷೆಹೊಂದುವವರು ಲಿಂಗಧಾರಿಗಳಾಗಿಯೇ ಇರಬೇಕೆಂದೂ ಇಲ್ಲದಿದ್ದರೆ ನಿಷ್ಪ್ರಯೋಜನವೆಂದೂ ವಾದಿಸಿದ್ದಾರೆ.

ಆದರೆ ಇವರ ವಾದದ ಹಿಂದೆಯೇ ಓದುಗರಲ್ಲಿ, ಈ ಎರಡೂ ಬೇರೆ ಬೇರೆಯೆ? ಒಂದೇ ಅಲ್ಲವೆ? ವೀರಶೈವ ದೀಕ್ಷೆಯು ಲಿಂಗಧಾರಣ ಸಹಿತವಾದ ಅಭಿನ್ನವಾದ ಏಕ ಮಾತ್ರ ಸಂಸ್ಕಾರವಲ್ಲವೆ? ಅಥವ ಲಿಂಗ ಧಾರಣವು ವೀರಶೈವ ದೀಕ್ಷಾಸಹಿತವಾದ ಪ್ರತ್ಯೇಕಿಸಲು ಸಾಧ್ಯವಲ್ಲದ ಸಮ್ಮಿಳಿತ ಸಂಸ್ಕಾರವಲ್ಲವೆ? ಎಂಬ ಪ್ರಶ್ನೆಗಳು ತಾವಾಗಿಯೇ ಉದ್ಭವಿಸುತ್ತವೆ.

ಹೀಗೆ ಉದ್ಭವಿಸುವ ಈ ಪ್ರಶ್ನೆಗಳ ಮೂಲಕ ಪರಿಶೀಲಿಸುವುದಾದರೆ ಶ್ರೀ ಶಾಸ್ತ್ರಿಗಳ ಮತ್ತು ಶ್ರೀ ಪಟ್ಟೇಯವರ ವಾದವು ತೇಲಿ ಹೋಗುತ್ತದೆ. ಹೇಗೆಂದರೆ ಶ್ರೀ ಶಾಸ್ತ್ರಿಗಳವರು ತಮ್ಮ ವಾದದ ಸಮರ್ಥನೆಗಾಗಿ

"ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ ವೈಶ್ಯನಾಗಲಿ ಆವಜಾತಿಯಲ್ಲಿ ಹುಟ್ಟಿದಾತನಾದರೂ ಆಗಲಿ ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗವ ಧರಿಸಿ ಆಚಾರ ಸಂಪನ್ನ ಸತ್ಕ್ರಿಯನಾದ ಮಹಾತ್ಮನೇ ಮೂರು ಲೋಕಕ್ಕೆ ಅಧಿಕಾರಿಯು ನೋಡಾ ಅಖಂಡೇಶ್ವರಾ"

"ನೀರುಗಟ್ಟಿಗೋಡು ಮುತ್ತಪ್ಪುದಲ್ಲದೆ ಮುತ್ತುನೀರಪ್ಪುದೇನಯ್ಯ? ಹೀನ ಜಾತಿಯಲ್ಲಿ ಜನಿಸಿದ ನರನು ಗುರುವಿನ ಕಾರುಣ್ಯದಿಂದ ಶಿವಜಾತಾಭರಣನಾದ ಬಳಿಕ ಮರಳಿ ನರನಪ್ಪನೇನಯ್ಯ? ಅಖಂಡೇಶ್ವರಾ"

"ಪಟ್ಟವಕಟ್ಟಿದ ಬಳಿಕ ಲಕ್ಷಣವನರಸುವರೇನಯ್ಯ?"

ಮುಂತಾದ ವಚನಗಳನ್ನೂ—

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜಮುಚ್ಯತೇ ।
ಇತೀವ ಜನ್ಮನಾ ಶೂದ್ರೋ ದೀಕ್ಷಯಾ ಶ್ಶಿವತಾಂ ವ್ರಜೇತ್ ॥
ಶಿವದೀಕ್ಷಾವಿಜಾತಸ್ಯ ಪೂರ್ವಜಾತಿರ್ನವಿದ್ಯತೇ ।
ಇತ್ಯಾಗಮ ಪ್ರಮಾಣೇನ ನಿಶ್ಚಿತಾರ್ಥೋಯಮಾಸ್ತಿಕೈಃ ॥
ಶಿವಸಂಸ್ಕಾರಯುಕ್ತೇಷು ಜಾತಿಭೇದೋ ನ ವಿದ್ಯತೇ ।
ಕಾಷ್ಠೇಷು ವಹ್ನಿ ದಗ್ಧೇಷು ಯಥಾರೂಪಂ ನ ವಿದ್ಯತೇ॥"

ಮುಂತಾದ ಸಂಸ್ಕೃತ ಶ್ಲೋಕಗಳನ್ನೂ ಉದಾಹರಿಸಿದ್ದಾರೆಯಲ್ಲದೆ "ಮೇಲೆ ಉದಾಹರಿಸಿದ ಪ್ರಾಚೀನ ವಿದ್ವಾಂಸರ ವಚನಗಳು ವೀರಶೈವರು ಶಿವ

ದೀಕ್ಷೆಯಿಂದ ಆಣವಾದಿ ಮಲಗಳನ್ನು ಕಳೆದುಕೊಂಡು ಮೋಕ್ಷಾಧಿಕಾರಿಗಳಾಗುವರೆಂದೂ.........ಮುಂತಾಗಿ ವಿವರಣೆಯನ್ನೂ ಬರೆದಿದ್ದಾರೆ.

ಶ್ರೀ ಶಾಸ್ತ್ರಿಗಳವರು ಮೇಲಣ ವಚನ ಮತ್ತು ಶ್ಲೋಕಗಳಿಂದ "ವೀರಶೈವರು ಪುನಃ ಶಿವದೀಕ್ಷೆಯನ್ನು ಪಡೆದು ಮೋಕ್ಷಾಧಿಕಾರಿಗಳಾಗಬೇಕು." ಎಂಬುದಾಗಿ ಹೇಗೆ ಅರ್ಥಮಾಡಿದರೋ ನಮಗಂತೂ ತಿಳಿಯಲಿಲ್ಲ.

ಮೇಲಣ ವಚನ ಮತ್ತು ಶ್ಲೋಕಗಳಿಂದ ವಿಪ್ರಮೊದಲ್ಗೊಂಡು ಅಂತ್ಯಜ ಕಡೆಯಾಗಿ ಭವಿಗಳಾದ ಸಮಸ್ತರೂ ವೀರಶೈವ ದೀಕ್ಷೆಯನ್ನು ಹೊಂದಿದರೆ ನಿತ್ಯಮುಕ್ತಿಯ ಅಧಿಕಾರಿಗಳಾಗುವರೆಂದೂ ಇಂದು ವೀರಶೈವ ದೀಕ್ಷೆಯನ್ನು ಪಡೆದವರು ನಾಳೆ ವೀರಶೈವ ದೀಕ್ಷೆ ಪಡೆದವರೊಡನೆ ಯಾವ ವಿಧವಾದ ಭಿನ್ನಭೇದ ಮೇಲು ಕೀಳುಗಳನ್ನು ಎಣಿಸಬಾರದೆಂತಲೂ "ವೀರಶೈವ" ದೀಕ್ಷಿತರಾದವರೆಲ್ಲರೂ ಸಮಾನಸ್ಕಂದರೆಂತಲೂ ಒಬ್ಬರು ಮತ್ತೊಬ್ಬರನ್ನು ಶಿವಸ್ವರೂಪಿಗಳನ್ನಾಗಿ ಭಾವಿಸಬೇಕೆಂತಲೂ ಪೂರ್ವಾಶ್ರಮದ ಜಾತಿಭೇದಗಳು ನಾಶವಾಗಿ ಹೋಗುವುದರಿಂದ ಅವುಗಳನ್ನು ವೀರಶೈವದೀಕ್ಷಿತರಾದವರು ಮರೆತುಬಿಡಬೇಕೆಂದೂ ಅರ್ಥವಾಗುತ್ತದೆಯೇ ಹೊರತು ಶ್ರೀ ಶಾಸ್ತ್ರಿಗಳವರು ಬರೆದಿರುವಂತೆ "ವೀರಶೈವರು ಪುನಃ ಶಿವದೀಕ್ಷೆಯನ್ನು ಪಡೆಯಬೇಕು" ಎಂದರ್ಥವಾಗುವುದಿಲ್ಲ.

ಬಸವಪ್ರಭು ರೇವಣಸಿದ್ಧಾದಿ ಗಣವರರೆಲ್ಲರೂ ಭವಿಗಳ ಭವಿತನವನ್ನು ಹಿಂಗಿಸಿ "ವೀರಶೈವ" ಧರ್ಮದ ವಿಸ್ತರಣದ ಮಹತ್ಕಾರ್ಯದಲ್ಲಿ ನಿರತರಾಗಿದ್ದು ಆ ಮಹತ್ಕಾರ್ಯಕ್ಕೆ ಪೋಷಕವಾಗುವಂತೆ ಸಿದ್ಧಾಂತಗೊಳಿಸಲ್ಪಟ್ಟಿರುವ ಮೇಲಣ ವಚನ ಮತ್ತು ಶ್ಲೋಕಗಳನ್ನು ಶ್ರೀ ಶಾಸ್ತ್ರಿಗಳವರು ಭವಿತನವನ್ನು ಕಳೆದುಕೊಂಡು ಶಿವಜೀವೈಕ್ಯಾನುಸಂಧಾನಿಗಳಾದ "ವೀರಶೈವರು ಪುನಃ ದೀಕ್ಷೆಯನ್ನು ಪಡೆಯಬೇಕು, ಎಂಬ ವಿಚಿತ್ರ ವಾದಕ್ಕೆ ಪೋಷಕವೆಂದು ಬಳಸಿಕೊಂಡಿರುವುದು ಆಶ್ಚರ್ಯಕರವೂ ವಿಷಾದಕರವೂ ಆಗಿದೆ.

ಶ್ರೀ ಶಾಸ್ತ್ರಿಗಳವರು ಇಷ್ಟಕ್ಕೆ ನಿಲ್ಲದೆ ದೀಕ್ಷೆಯನ್ನು "ದ್ವಿಜ" ರ ಉಪನಯನ ಕರ್ಮಕ್ಕೆ ಹೋಲಿಸಿರುವರಲ್ಲದೆ "ಮತ್ತೆ ಕೆಲವರು ಲಿಂಗಧಾರಣವೇ ಶಿವದೀಕ್ಷೆ ಎಂದು ಭ್ರಾಂತಿಪಟ್ಟಿದ್ದಾರೆ. ಇದು ಆಶ್ಚರ್ಯಕರ

ವಾದ ಸಂಗತಿಯೋ ಸರಿ......!" ಎಂದು ಮುಂತಾಗಿಯೂ ಬರೆದಿದ್ದಾರೆ. ಲಿಂಗಧಾರಣವೆಂದರೂ ದೀಕ್ಷೆ ಎಂದರೂ ಅಭಿನ್ನವೆಂದು ತಿಳಿದಿರುವುದು ಆಶ್ಚರ್ಯಕರವೋ ಅಥವ "ಭವಿಗಳು" ವೀರಶೈವ ದೀಕ್ಷೆಯನ್ನು ಹೊಂದಿ ಪುನೀತರಾಗುವುದಕ್ಕಾಗಿ ಬೋಧಿಸಲ್ಪಟ್ಟಿರುವ ವಚನಗಳನ್ನೂ ಶ್ಲೋಕಗಳನ್ನೂ "ವೀರಶೈವರು ಪುನಃ ಶಿವದೀಕ್ಷೆಯನ್ನು ಪಡೆಯಬೇಕೆಂಬ ವಿಚಿತ್ರ ವಾದದ ಸಮರ್ಥನೆಗಾಗಿ ಶ್ರೀ ಶಾಸ್ತ್ರಿಗಳವರು ಬಳಸಿಕೊಂಡಿರುವುದು ಆಶ್ಚರ್ಯ ಮತ್ತು ಭ್ರಾಂತಿಕಾರಕವೋ ಎಂಬುದನ್ನು ಓದುಗರೂ ಅನುಭವಿಗಳೂ ನಿರ್ಣಯಿಸಬೇಕಾಗಿದೆ.

ಇನ್ನು ಶ್ರೀ ಬಸವಪ್ಪ ಪಟ್ಟೇದ ಅವರು: ಲಿಂಗಧಾರಣೆಯನ್ನು ಸ್ಥಿರ-ಚರವಸ್ತುವಾಹನಾದಿಗಳಿಗೆ ಒತ್ತುವಂತಹ ಲಿಂಗಮುದ್ರೆ ಎಂಬ ಸಂಸ್ಕಾರಕ್ಕೆ ಸಮಾನವೆಂದು ಹೋಲಿಸಿದ್ದಾರೆ.

ಶ್ರೀಯುತರು ಯಾವುದೋ ಯೋಚನೆಯಲ್ಲಿದ್ದು ಮರವೆಯಲ್ಲಿದ್ದಾಗ ಈ ಹೋಲಿಕೆಯನ್ನು ಮಾಡಿರಬಹುದೆಂದು ತೋರುತ್ತದೆ. ಏಕೆಂದರೆ ಸ್ಥಿರಚಿತ್ತದಲ್ಲಿದ್ದಾಗ ಅವರಿಗೂ ಸಹ ಹೀಗೆ ಹೋಲಿಸಲು ಮನಸ್ಸು ಬರುವುದಿಲ್ಲ. ಲಿಂಗಮುದ್ರೆಯನ್ನು ಒತ್ತುವುದಕ್ಕೂ ಲಿಂಗಧಾರಣ ಸಂಸ್ಕಾರಕ್ಕೂ ಸಮಾನತೆಯ ಕಲ್ಪನೆಯನ್ನಾದರೂ ಯೋಚಿಸಬಹುದೆ? ಶ್ರೀ ಪಟ್ಟೆಯವರ ಲೇಖನದ ಮೂಲಕ ನೋಡುವುದಾದರೆ ಅವರಲ್ಲಿ ಧರ್ಮ ಮತ್ತು ಸಮಾಜದ ಮೇಲಣ ಅಭಿಮಾನವು ತುಂಬಿತುಳುಕುತ್ತಿದೆ. ಆದರೆ ಅವರು ಈ ಹೋಲಿಕೆಯನ್ನು ಏಕೆ ಮಾಡಿದರೋ ತಿಳಿಯದಾಗಿದೆ.

ವೀರಶೈವರ ಬಳಕೆಯ ಸಮಸ್ತ ವಸ್ತುವಾಹನಾದಿಗಳಿಗೂ "ಲಿಂಗಮುದ್ರೆ" ಇರಬೇಕೆಂಬ ರೂಢಿ ಇದ್ದರೂ ಮನೆಯಲ್ಲಿ ಜನಿಸುವ ಶಿಶುವಿಗೂ (ತಾಯಿಯ ಗರ್ಭದಲ್ಲಿದ್ದಾಗ) ಮತ್ತು ಮೊದಲು ಭವಿಗಳಾಗಿದ್ದು ನಂತರ ವೀರಶೈವ ದೀಕ್ಷೆಯನ್ನು ಪಡೆಯುವವರಿಗೂ ದೀಕ್ಷಾಪೂರ್ವಕ ಗುರುವಿನಿಂದ ಅನುಗ್ರಹಿಸಲ್ಪಡುವ ಲಿಂಗಧಾರಣವನ್ನು ಲಿಂಗಮುದ್ರಾ ಸಂಸ್ಕಾರಕ್ಕೆ ಹೋಲಿಸಬಹುದೆ? ಹಾಗೆ ಹೋಲಿಸಬಹುದಾಗಿದ್ದರೆ ನಮ್ಮ ಪುರಾತನರೆಲ್ಲರೂ ಅದನ್ನು "ಲಿಂಗಮುದ್ರಾ" ಸಂಸ್ಕಾರವೆಂದೇ ಕರೆಯಬಹುದಾಗಿದ್ದಿತಲ್ಲದೆ ಜನರು ಅವರವರ ಶ್ರೀಮಂತಿಕೆಯನ್ನನುಸರಿಸಿ ಬೆಳ್ಳಿ, ಬಂಗಾರ, ತಾಮ್ರ, ಪಂಚಲೋಹ ಮುಂತಾದ

ಲೋಹಗಳ ತಗಡುಗಳಿಂದ ಲಿಂಗದ ಆಕಾರವನ್ನು ಕತ್ತರಿಸಿ ಶಿಶುಗಳ-ದೀಕ್ಷಿತರ-ಕೊರಳಿಗೋ ರಟ್ಟೆಗೋ ಕಟ್ಟುವ ಪದ್ಧತಿಯನ್ನು ಏರ್ಪಡಿಸುತ್ತಿದ್ದರಲ್ಲವೆ? ಅಥವ ಪಶುಗಳಿಗೆ ಲೋಹವನ್ನು ಕೆಂಪಗೆ ಕಾಯಿಸಿ ಮುದ್ರೆಯನ್ನು ಒತ್ತುವ ಅಮಾನುಷ ಪದ್ಧತಿಯನ್ನೇ ಶಿಶುಗಳಿಗೂ - ಅನ್ವಯಿಸುವಂತೆ ವಿಧಿಸುತ್ತಿದ್ದರಲ್ಲವೆ?

ಆದರೆ ನಮ್ಮ ಪುರಾತನರು ಹಾಗೆ ಅಮಾನುಷ ರೀತಿಯು ಬರೆ ಎಳೆಯುವ ಅಥವ ಲಿಂಗಾಕಾರದ ಲೋಹದ ಬಿಲ್ಲೆಗಳನ್ನು ಕಟ್ಟುವ ಯಾವ ವಿಧಾನವನ್ನೂ ಪರಿಗ್ರಹಿಸದೆ ಗರ್ಭದಲ್ಲಿರುವ ಶಿಶುವಿಗಾಗಲಿ ವಯಸ್ಕರಿಗಾಗಲಿ ಗುರುವಿನಿಂದಲೇ ದೀಕ್ಷಾಪೂರ್ವಕ ವಿಶಿಷ್ಟ ಸಂಸ್ಕಾರದಿಂದ ಪರಿಶುದ್ಧವಾದ ಲಿಂಗವನ್ನು ನೆಲೆಕಲೆಗಳನ್ನರಿತು ಧಾರಣಮಾಡಿಸುವ ಸಾಂಪ್ರದಾಯವನ್ನೇಕೆ ಅನುಸರಿಸಿದರು? ಇದರಲ್ಲೊಂದು ವೈಶಿಷ್ಟ್ಯವಿರಲೇಬೇಕಲ್ಲವೆ? ಆ ವೈಶಿಷ್ಟ್ಯವು ಎಲ್ಲ ಮತಗಳ ಸಂಸ್ಕಾರಗಳಿಗಿಂತಲೂ ವಿಶೇಷಾರ್ಥದಿಂದ ಕೂಡಿದ ಆಧ್ಯಾತ್ಮಿಕ ವೈವಿಧ್ಯತೆಯಿಂದ ಕೂಡಿದ ಸಂಸ್ಕಾರವಾಗಿದೆಯಲ್ಲವೆ?

ಇನ್ನು ಶ್ರೀ ಪಟ್ಟೆಯವರು “ ಜನ್ಮಲಿಂಗಧಾರಣವು ಅಲಿಂಗಿಸಂಪರ್ಕ ತಪ್ಪಿಸಿ ಶೀಲಪಾಲನೆ ಮಾಡಿಕೊಳ್ಳುವ ಉದ್ದೇಶದಿಂದ ತಂದೆ-ತಾಯಿಗಳು ಮಾಡಿದ ಯೋಜನೆ ” ಎನ್ನುತ್ತಾರೆ ಇದನ್ನಾದರೂ ಒಪ್ಪಬಹುದೆ?

ಲಿಂಗಾಯತರು ತಮ್ಮ ಮಕ್ಕಳ ಶೀಲಪಾಲನೆಗಾಗಿ ಮಾತ್ರವಾದರೆ ಹುಟ್ಟುವುದಕ್ಕೆ ಮೊದಲೇ ಲಿಂಗವನ್ನು ಧರಿಸಿರಲೇಬೇಕೆ? ಹಾಗೆ ನೋಡಿದರೂ ಶಿಶುವು ತನ್ನ ತಂದೆ ತಾಯಿ ಬಂಧುಬಳಗದ ಸಹವಾಸ ಸಹಚರ್ಯೆಗಳ ಫಲವಾಗಿಯೋ ತಾನೂ ವೀರಶೈವರ ಮನೆಯ ಶಿಶುವಿನಂತೆ ಶೀಲಾಚಾರಗಳಿಂದ ಕೂಡಿರುತ್ತದೆಯೇ ಹೊರ್ತು ಸ್ವಯಂಪರಿಪೂರ್ಣ ಜ್ಞಾನದಿಂದ ಶೀಲಾಚಾರಗಳನ್ನು ಕಾಪಾಡಿಕೊಳ್ಳುತ್ತದೆಂದು ಯಾರೂ ಹೇಳುವಹಾಗಿಲ್ಲ.

ಆದರೆ ಶಿಶುವಿಗೆ ಸ್ವಯಂ ಪರಿಪೂರ್ಣ ಜ್ಞಾನವಿಲ್ಲದಿದ್ದರೂ ಬೀಜವೃಕ್ಷನ್ಯಾಯದಂತೆ ಕ್ರಮಕ್ರಮವಾಗಿ ಬೆಳೆಯುವ ಬಲಿಯುವ ಜ್ಞಾನವು ಇದ್ದೇ ಇರುತ್ತದೆ. ಆದುದರಿಂದ ಆ ಶಿಶುದೆಸೆಯಲ್ಲಿ ಗುರುವಿನಿಂದ ಅನು

ಗ್ರಹಿಸಲ್ಪಡುವ ಲಿಂಗದ ಜ್ಞಾನವೂ ಕ್ರಮಕ್ರಮವಾಗಿ ಬೆಳೆದು ಬಲಿಯುವ ಶಿಶುಬುದ್ಧಿಯ ಜೊತೆಯಲ್ಲಿಯೇ ಬೆಳೆಯುತ್ತದೆ. ಇದು ಸಾಧ್ಯವಿಲ್ಲ ವೆನ್ನುವದಾದರೆ ಶ್ರೀ ಪಟ್ಟಿಯವರೇ ಹೇಳುವಂತೆ ಶಿಶುವು ಶೀಲಾಚಾರ ಗಳನ್ನು ಹೆಚ್ಚಿಸಿಕೊಳ್ಳುವುದಾದರೂ ಹೇಗೆ ಸಾಧ್ಯ ?

ಲಿಂಗಜ್ಞಾನದ ಬೆಳವಣಿಗೆಗಾಗಲಿ ಶೀಲಾಚಾರಗಳ ಬೆಳವಣಿಗೆಗಾ ಗಲಿ ಕ್ರಮಕ್ರಮವಾಗಿ ಬೆಳೆಯುವ ಬುದ್ಧಿ ಜ್ಞಾನಗಳ ಅವಶ್ಯಕತೆಯು ಬೇಕೇಬೇಕು. ಶಿಶುವಿನಲ್ಲಿ ಅದು ಇದ್ದೇ ಇರುತ್ತದೆ. ಹಾಗೆ ಇರುವುದನ್ನ ರಿತೇ ನಮ್ಮ ಆದ್ಯರು ಶಿಶುವು ಗರ್ಭದಲ್ಲಿರುವಾಗಲೇ ಲಿಂಗಧಾರಣ ಮಾಡುವ ವ್ಯವಸ್ಥೆ ಮಾಡಿರುವರಲ್ಲದೆ ಅದನ್ನು ಲಿಂಗ ಮುದ್ರಾ ಸಂಸ್ಕಾ ರವೆನ್ನದೆ "ಗರ್ಭಾಷ್ಟಮ ದೀಕ್ಷಾ" ಎಂದು ಸ್ಪಷ್ಟವಾಗಿ ಕರೆದಿದ್ದಾರೆ. ಇಂತಪ್ಪ ಲಿಂಗಧಾರಣವನ್ನು ಲಿಂಗ ಮುದ್ರೆ ಎನ್ನಬಹುದೆ ?

ಶೀಲಾಚಾರಕ್ಕೆ ಮಾತ್ರವಾದರೆ ಶಿಶುವಿಗೆ ಲಿಂಗಧಾರಣವನ್ನೇ ಏಕೆ ಮಾಡಬೇಕು ? ಬ್ರಾಹ್ಮಣಾದಿ ತ್ರೈವರ್ಣಿಕರು ತಮ್ಮ ಶಿಶುಗಳಿಗೆ-ಬಾಲ ಕರಿಗೆ-ಶೀಲಾಚಾರ ಪಾಲನೆಗಾಗಿ ಉಪನಯನಕ್ಕೆ ಪೂರ್ವಭಾವಿಯಾಗಿ ಉಪನಯನಕ್ಕೇ ಹೋಲುವಂತಹ ಯಾವದಾದರೂ ಸಂಸ್ಕಾರವನ್ನು ಮಾಡುತ್ತಾರೆಯೆ ? ಇಲ್ಲವಾದರೂ ಆಯಾವರ್ಣದವರ ಶಿಶುಗಳು-ಬಾಲ ಕರು-ಆಯಾವರ್ಣದವರ ಶೀಲಾಚಾರಗಳಂತೆಯೇ ಇರುವುದಿಲ್ಲವೇ ? ಹೀಗೆ ಇರುವುದಕ್ಕೆ ಶಿಶುವಿನ-ಬಾಲಕನ-ತಂದೆತಾಯಿ ಬಂಧುಬಳಗ ದವರ ಸಹವಾಸ ಸಹಚರ್ಯಗಳೇ ಕಾರಣವಲ್ಲವೇ ? ಹೀಗಿರುವಾಗ ವೀರಶೈವರು ಮಾತ್ರ ಶೀಲಾಚಾರಪಾಲನೆಗಾಗಿ ಶಿಶುವಿಗೆ ಇನ್ನೂ ಮಾತೃ ಗರ್ಭದಲ್ಲಿದ್ದಾಗಲೇ ಲಿಂಗಧಾರಣೆ ಮಾಡಬೇಕೆಂದು ಏಕೆ ನಿರ್ಣಯಿಸಿ ದ್ದಾರೆ ? ಸಮಾಜ ಶಾಸ್ತ್ರ, ದೇಹ ಶಾಸ್ತ್ರ, ಮನಶಾಸ್ತ್ರಾದಿಗಳನ್ನೆಲ್ಲಾ ಪರಿಶೀಲಿಸಿಯೇ ಧರ್ಮ ಸಂಸ್ಕೃತಿಗಳನ್ನು ಶಿಶುದೆಸೆಯಲ್ಲಿಯೇ ವೃದ್ಧಿಗೂ ಡಿಸುವ ಈ ಮಹದ್ಯೋಜನೆಯನ್ನು ಕಂಡು ಹಿಡಿದು ಆಚರಣೆಯಲ್ಲಿ ತಂದಿ ರುವರಲ್ಲವೆ ?

ವಚನಶಾಸ್ತ್ರಕಾರರೆಲ್ಲರೂ ಗರ್ಭಾಷ್ಟಮದೀಕ್ಷೆಯನ್ನೇ ಹೇಳಿದ್ದಾ ರೆಯಲ್ಲದೆ ಅದನ್ನು ಲಿಂಗಮುದ್ರೆಗೆ ಸಮಾನವೆಂಬ ತಾತ್ಪರಭಾವದಿಂದ ಕಾಣದೆ "ಲಿಂಗಧಾರಣ" ವೆಂದೇ ಕರೆದಿದ್ದಾರೆ. ಉದಾಹರಣೆಗೆ ಈ ಕೆಳಗಣ ವಚನಗಳನ್ನು ನೋಡಬಹುದು.

(ಶಿವಾನುಭವ ಪತ್ರಿಕೆಯ ೧೫ನೆಯ ಸಂಪುಟದ ೬ನೇ ಸಂಚಿಕೆಯೊಡನೆ ಪ್ರಕಟವಾಗಿರುವ ಮಹಾನುಭಾವೆಯರಾದ ರೆಮ್ಮವ್ವೆಯರ ವಚನಗಳು:)

"ಖಂಡಿತವ್ರತದ ನಿರಂಗನ ವ್ರತವೆಂತುಟು ಎಂದರೆ ತನ್ನ ಸತಿಗೆ ಗರ್ಭ ತಲೆದೋರಿದಲ್ಲಿಯೇ ಮುಖವ ಕಾಂಬುದಕ್ಕೆ ಮುನ್ನವೇ ಲಿಂಗ ಧಾರಣ ಮಾಡಿ ನೋಡಿದ ಮತ್ತೆ ಗಣಸಾಕ್ಷಿಯಾಗಿ ವಿಭೂತಿಯ ಪಟ್ಟವ ಕಟ್ಟಿ ಇಪ್ಪುದೇ ವ್ರತಶೀಲನೇಮ ಹಾಗಲ್ಲದೆ ದೀಕ್ಷೆಯತನದಲ್ಲಿ ಮಕ್ಕಳಿಗೆ ಸಂದೇಹದ ವ್ರತವ ಕಟ್ಟಬಹುದೇ ಬುದ್ಧಿಯಾದಂದಿಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು........................ಈಡು ಮಾಡುವ ವ್ರತಭಂಗಿತನ ಕಂಡು ಅವನೊಡನೆ ನುಡಿದಡೆ ಕುಂಭೀನರಕ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವೇ ಅವನ ಹಿಂಗಿರಬೇಕು." "ತಾ ವ್ರತಿಯಾಗಿ ಮಕ್ಕಳೆಂದು ಮಾಡದಿರ್ದಡೆ ಆ ವ್ರತಕ್ಕೆ ತಾನೇ ಹೊರಗು. ತನ್ನಂಗಮನಭಾವ ಕರಣಂಗಳಲ್ಲಿ ಸಂಗದಲ್ಲಿ ಇದ್ದವರೆಲ್ಲಕ್ಕೂ ತನ್ನಂಗದ ವ್ರತವ ಮಾಡಬೇಕು. ಇದು ಸೀಮೆವಂತರ ಯುಕ್ತಿ. ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಾಚಾರದ ಗೊತ್ತು."

ಹೀಗಿದ್ದರೂ ಈ ವಿಚಾರವಾಗಿ ತರ್ಕಬದ್ಧವಾಗಿಯೂ ಅನುಭವ ಯುಕ್ತವಾಗಿಯೂ ಮೊದಲು ಚರ್ಚೆಯನ್ನಾರಂಭಿಸಿದ ಶ್ರೀ ಜೀರಿಗೆ ಕ. ಬಸವಪ್ಪ ಬಿ. ಎ. ಅವರ ಲೇಖನದ ಮೇಲೆ ಶ್ರೀ ಶಾಸ್ತ್ರಿಗಳೂ ಮತ್ತು ಶ್ರೀ ಪಟ್ಟೇದ ಅವರೂ ಕುಪಿತರಾಗಿ ಲೇಖನಗಳನ್ನು ಪ್ರಾರಂಭಿಸಿದಂತೆ ತೋರುತ್ತದೆ. ಅವರ ಲೇಖನಗಳಲ್ಲಿ ಕೋಪದ ಛಾಯೆಯು ಅಲ್ಲಲ್ಲಿ ಎದ್ದು ಕಾಣುತ್ತದೆ. ಧಾರ್ಮಿಕ - ತಾತ್ವಿಕ - ವಿಚಾರಗಳನ್ನು ಚರ್ಚಿಸುವಾಗ ಶಾಂತಮನಸ್ಸಿನಿಂದ ತತ್ವಗಳನ್ನು ಕುರಿತು ಚರ್ಚಿಸಬೇಕು. ಆ ಚರ್ಚೆಯು " ವಾದೇ ವಾದೇ ಜಾಯತೇ ತತ್ವಬೋಧಃ " ಎಂಬುಕ್ತಿಯನ್ನು ಅನ್ವರ್ಥಗೊಳಿಸಬೇಕು.

ಈ ವಿಷಯದಲ್ಲಿ ಶ್ರೀ ಕಾನಕಾನಹಳ್ಳಿ ಬಸಪ್ಪನವರ ಲೇಖನವು ಸಮಂಜಸ ವಿಚಾರಗಳಿಂದ ಕೂಡಿದೆಯಲ್ಲದೆ ಶಿವಾನುಭವದಲ್ಲಿ 'ಓರ್ವ ವೀರಶೈವ' ಎಂಬವರ ಹೆಸರಿನಿಂದ ಪ್ರಕಟವಾಗಿರುವ ಲೇಖನವು ಈ

ಚರ್ಚೆಯನ್ನು ಕುರಿತು ಅತ್ಯಂತ ವಿಚಾರಪೂರಿತ ಮತ್ತು ಸಮಂಜಸ ಅಭಿಪ್ರಾಯಗಳನ್ನು ವಾಚಕರ ಮುಂದೆ ಇಟ್ಟಿದೆ.

ಇನ್ನು ಈಗ ನಡೆಯುತ್ತಿರುವ ದೀಕ್ಷೆಯ ವಿಚಾರ—

(೧) ಗರ್ಭಾಷ್ಟಮ ದೀಕ್ಷಾ ಕಾಲದಲ್ಲಿ ಅಥವಾ ಶಿಶುದೆಶೆಯಲ್ಲಿ ಶ್ರೀಗುರುವು ಜಲಾಧಿವಾಸ ಧಾನ್ಯಾದಿ ವಾಸಾದಿ ವಿಧಾನಗಳಿಂದ ಶುದ್ಧಗೊಳಿಸಿ ಶಿಲಾದೋಷವನ್ನು ಹೋಗಲಾಡಿಸಿ ಶಿವತತ್ವವನ್ನು ಆರೋಹಿಸಿ ಹಸ್ತ ಮಸ್ತಕ ಸಂಯೋಗ ಪೂರ್ವಕ ಧಾರಣೆ ಮಾಡಿದ ಲಿಂಗವನ್ನು, ಈಗ ರೂಢಿಯಲ್ಲಿ ಬರುತ್ತಿರುವ 'ಶಿವದೀಕ್ಷಾ ಸಂಸ್ಕಾರ' ವನ್ನು ಮಾಡುವ ಸಮಯದಲ್ಲಿ ಪುನಃ ಅದೇ ಲಿಂಗವನ್ನು ಧಾನ್ಯಾಧಿವಾಸ ಜಲಾಧಿವಾಸಾದಿ ಶುದ್ಧೀಕರಣ ವಿಧಿಗೊಳಪಡಿಸುತ್ತಾರೆ, ಇದು ಸರಿಯೆ? ಹೀಗೆ ಮಾಡುವುದರಿಂದ ಆ ಲಿಂಗವು ಮೊದಲನೆಯ ಬಾರಿ ಪಡೆದ ಸಂಸ್ಕಾರವೂ ಶ್ರೀಗುರುವಿನ ಹಸ್ತ ಮಸ್ತಕ ಸಂಯೋಗಾದಿ ಕಾರ್ಯವಿಧಿಗಳೂ ನಿಷ್ಪ್ರಯೋಜನವೆಂದರ್ಥವಾಗುವುದಲ್ಲವೆ? ಹಾಗೆ ನಿಷ್ಪ್ರಯೋಜನವೆನ್ನುವುದು ಯುಕ್ತವೇ? ನಮ್ಮ ಆದ್ಯರು ಅಂತಹ ನಿಷ್ಪ್ರಯೋಜನಕಾರಿಗಳಾದ ವಿಧಿವಿಧಾನಗಳನ್ನು ಆಚರಣೆಯಲ್ಲಿ ತಂದಿರುವರೆಂಬುದನ್ನು ಸುಲಭವಾಗಿ ನಂಬಲಾದೀತೆ?

(೨) ಈಗಿನ ಶಿವದೀಕ್ಷಾ ಮಹೋತ್ಸವಗಳಲ್ಲಿ ನಡೆಯುವ ಮತ್ತೊಂದು ಆಶ್ಚರ್ಯ ಪ್ರಸಂಗವೇನೆಂದರೆ:— ಕೆಲವೆಡೆಗಳಲ್ಲಿ ಅವು ಪ್ರಸಿದ್ಧ ಮಠಗಳಾಗಿರುತ್ತವೆ. ಹೆಸರು ವಾಸಿಯಾದ ಶಾಸ್ತ್ರಿಗಳ ತಂಡವು ಕಾರ್ಯ ನಿರ್ವಾಹಕ್ಕೆ ಕಂಕಣಬದ್ಧವಾಗಿ ನಿಂತಿರುತ್ತದೆ. ಅಂತಹ ಕಡೆಗಳಲ್ಲಿ ಶಿವದೀಕ್ಷೆಯನ್ನು ಹೊಂದಲು ಬಂದಿರುವ ಬಾಲಕ ಬಾಲಕಿಯರ ಲಿಂಗಗಳನ್ನೆಲ್ಲಾ ತೆಗೆದುಕೊಂಡು ರಾಶಿಯಾಗಿ ಸೇರಿಸಿ ಒಂದು ದೊಡ್ಡ ಕಟ್ಟೆಯಲ್ಲಿ ಅವುಗಳನ್ನೆಲ್ಲಾ ಜೋಡಿಸಿ ಒಟ್ಟಿಗೆ ಸಂಸ್ಕರಿಸಿ ಒಬ್ಬೊಬ್ಬರಿಗೆ ಒಂದೊಂದರಂತೆ ಧಾರಣೆ ಮಾಡಿ ಬಿಡುತ್ತಾರೆ. ಹೀಗೆ ಧಾರಣೆ ಮಾಡುವಾಗ ಮೊದಲು ಒಬ್ಬ ಬಾಲಕ ಅಥವಾ ಬಾಲಕಿಯದಾಗಿದ್ದ ಲಿಂಗವು ಈಗ ಬೇರೆ ಮತ್ತೊಬ್ಬರದಾಗಿ ಹೋಗುತ್ತದೆ. ಹೀಗೆ ಮಾಡುವುದು ಯುಕ್ತವೇ? ಒಬ್ಬರ ಲಿಂಗವನ್ನು ಮತ್ತೊಬ್ಬರಿಗೆ ಬದಲಾಯಿಸುವುದು ಅತ್ಯಂತ ನಿಷೇಧಾರ್ಹವಾದ ಮತ್ತು ಅಶಾಸ್ತ್ರೀಯವಾದ ಕಾರ್ಯ

ವಲ್ಲವೆ ? ಇದನ್ನು ಪರ್ಯಾಲೋಚಿಸಿದರೆ ಈಗಿನ ದೀಕ್ಷಾ ಪದ್ಧತಿ ಕುರಿತು ಅನೇಕ ಸಂಶಯಾಸ್ಪದವಾದ ಪ್ರಶ್ನೆಗಳು ಉದ್ಭವಿಸುತ್ತವೆಯಲ್ಲವೆ?

(೩) ಈಗ ನಡೆಯುತ್ತಿರುವ ದೀಕ್ಷಾ ಸಂಸ್ಕಾರವು ಬುದ್ಧಿಯು ಬಂದು ಗುರುಗಳಿಂದ (ಸೆರೆ ಬಿಡಿಸಿಕೊಳ್ಳುವ) ಕ್ರಮವಾದ ಲಿಂಗ ಪೂಜಾವಿಧಾನ ವನ್ನಳವಡಿಸಿಕೊಂಡು ತ್ರಿಕಾಲ ಲಿಂಗಪೂಜೆಯನ್ನು ಮಾಡುತ್ತಿರುವ ಬಾಲಕ ಬಾಲಕಿಯರಿಗೂ ಇನ್ನು ಬುದ್ಧಿಯೇ ಬಾರದಿರುವ ಲಿಂಗಪೂಜೆಯ ವಿಧಾ ನವನ್ನು ಕ್ರಮ ಪ್ರಾಪ್ತವಾಗಿ ಅರಿಯದ ಹಸುಳೆಗಳಿಗೂ ಯಾವ ವ್ಯತ್ಯಾ ಸವೂ ಇಲ್ಲದೆ ಒಂದೇ ಬಗೆಯ ಸಂಸ್ಕಾರ ಕಾರ್ಯಗಳನ್ನು ಶಿವದೀಕ್ಷಾ ಕಾಲದಲ್ಲಿ ನೆರವೇರಿಸುತ್ತಾರೆ. ಇದು ಸರಿಯೆ ? ಹೀಗೆ ಮಾಡುವುದ ರಲ್ಲಿ ಯಾವುದೋ ಒಂದೂ ಲೋಪವೋ ನ್ಯೂನತೆಯೋ ಅನುಕರಣವೋ ಇರುವಂತೆ ಭಾಸವಾಗುವುದಲ್ಲವೆ ?

(೪) ಇನ್ನೂ ಮಾತೃಗರ್ಭದಲ್ಲಿರುವಾಗಲೇ ಶಿವದೀಕ್ಷೆಯಲ್ಲಿ ವೀರ ಶೈವ ದೀಕ್ಷೆಯನ್ನು ಪಡೆದಿರುವ ಶಿಸುವಿಗೆ ಅದು ಬೆಳೆದು ಬಲಿಯು ವಾಗ ಮತ್ತೊಮ್ಮೆ ಗುರುವಿನಿಂದ ಕ್ರಮವಾದ ಲಿಂಗಪೂಜಾವಿಧಾನ ಮತ್ತು ವೀರಶೈವಾಚರಣೆಗಳನ್ನು ಬೋಧಿಸುವುದು ಯುಕ್ತವೇ ಹೊರತು ಈಗ ಭವಿಗಳನ್ನು ವೀರಶೈವರನ್ನಾಗಿಸುವಾಗ ನಡೆಸುವಂತೆ ವೀರಶೈವ ಬಾಲಕ ಬಾಲಕಿಯರಿಗೂ ಪುನಃ ನೂತನವಾಗಿ "ಶಿವದೀಕ್ಷೆ" ಎಂದು ಮಾಡಿಸಿ ಅವರಿಂದ ಭಿಕ್ಷಾಟನ ಲೀಲೆಯನ್ನು ಮಾಡಿಸುವ ಅನುಕರಣ ದಾಚರಣೆಯು ಅಪ್ರಕೃತವಲ್ಲವೆ ?

(೫) ಈ ಎಲ್ಲ ಪ್ರಶ್ನೆಗಳನ್ನೂ ಪರಿಶೀಲಿಸುವುದರಿಂದ ವೀರಶೈವ ಬಾಲಕ ಬಾಲಕಿಯರಿಗೆ ಹಿಂದಿನಿಂದ ರೂಢಿಯಲ್ಲಿರುವ "ಸೆರೆಬಿಡಿಸುವ" ಪದ್ಧತಿಯೇ ಸರಿ ಮತ್ತು ಸಾಕೆಂದೂ ಈಗ ಎಂಟು ಮತ್ತು ಹದಿ ನಾರು ವರ್ಷಗಳಿಗೂ ಇನ್ನೂ ವೃದ್ಧರಿಗೂ ನಡೆಸಬೇಕೆಂದು ರೂಢಿ ಯಲ್ಲಿ ತರುತ್ತಿರುವ "ಶಿವದೀಕ್ಷೆ" ಎಂಬ ಕಾರ್ಯಕ್ರಮವು "ದ್ವಿಜ" ರ ಅನುಕರಣದಿಂದ ರೂಢಿಯಲ್ಲಿ ಬರುತ್ತಿದೆಯೆಂದೂ, ಈಗ ಮಠಗಳಲ್ಲಿ ಆಗಾಗ್ಗೆ ಸಾಮೂಹಿಕವಾಗಿ ನೆರವೇರುತ್ತಿರುವ "ದೀಕ್ಷಾಮಹೋತ್ಸವ" ಕಾರ್ಯವಿಧಾನವು ನಮ್ಮ ಪುರಾತನರು ಆಯಾ ಮಠಗಳಲ್ಲಿ ನೆರವೇರಿ ಸುತ್ತಿದ್ದ-ಭವಿಗಳನ್ನು ಭಕ್ತರನ್ನಾಗಿಸುವ-"ವೀರಶೈವ ದೀಕ್ಷಾಮಹೋತ್ಸವ"

ದ ಸಂಕೇತವಾಗಿದ್ದು ಕಾಲ ವ್ಯತ್ಯಾಸದಿಂದಲೂ ತಿಳಿವಳಿಕೆಯು ವ್ಯತ್ಯಾಸದಿಂದಲೂ ಮಾರ್ಪಾಟನ್ನು ಹೊಂದಿ ಈಗ ಅದು "ವೀರಶೈವರಿಗೆ ಪುನಃ ಶಿವದೀಕ್ಷೆ" ಕೊಡುವ ಪರಿಪಾಠಿಯಾಗಿ ಪರಿಣಮಿಸಿದೆಯೆಂದೂ ಕಂಡು ಬರುವುದಲ್ಲವೆ ?

ಮೇಲೆ ಕಂಡ ಈ ಪ್ರಶ್ನೆಗಳನ್ನು ಜಿಜ್ಞಾಸುಗಳೆಲ್ಲರೂ ಚೆನ್ನಾಗಿ ಪರ್ಯಾಲೋಚಿಸಬೇಕಾಗಿದೆಯಲ್ಲದೆ ಧರ್ಮಪರಿಪಾಲನೆಯ ಮುಖ್ಯಾಧಿಕಾರಿಗಳಾದ ನಮ್ಮ ಮಠಾಧಿಪತಿಗಳೂ ಸಹ ಚೆನ್ನಾಗಿ ಪರ್ಯಾಲೋಚಿಸಿ ನಿಜಾಚರಣೆಯ ರೀತಿ ನೀತಿಗಳನ್ನು ಅಧಿಕಾರವಾಣಿಯಿಂದ ಪ್ರಸಿದ್ಧಿಸುವವರಾಗಬೇಕು.

---

## ಶಿವದೀಕ್ಷೆ ಅರ್ಥಾತ್ ಲಿಂಗಧಾರಣ ಎಂಬ ಬಗೆ.

ಲೇ.--- ಎನ್ ರಾಚೂಟಯ್ಯ ಕಾನಕಾನಹಳ್ಳಿ.

ಹಿಂದೆ ಶಿವಮೂರ್ತಿ ಶಾಸ್ತ್ರಿಗಳು ಶಿವದೀಕ್ಷೆಯ ವಿಷಯವಾಗಿ ಪ್ರಕಟಿಸಿದ್ದರು. ಅದಕ್ಕಾಗಿ ಶ್ರೀಮಾನ್ ಕ. ಬಿ. ಎ. ಬೆಂಗಳೂರು ಅವರು ಕೊಟ್ಟಿರುವ ಸಲಹೆಯು ಸರಿಯಾದುದೆಂದು ಕಂಡು ಬರುತ್ತದೆ. ಆದರೆ ಈಗಿನ ಆಲಸ್ಯ ಜನರಿಗೆ ಸರಿ ಬೀಳುವದಿಲ್ಲ. ಇದಕ್ಕೆ ಪ್ರಭುಗಳು ಒಂದು ಸನ್ನಿವೇಶದಲ್ಲಿ ಅಪ್ಪಣೆ ಕೊಡಿಸಿರುವುದನ್ನು ನೋಡುವ. "ನಡವಳಿಗಳೇ ನಾದಡಾಗಲಿ ನುಡಿವಳಿಯೊಳತಿ ಜಾಣನಾದಿರಿ ಪೊಡವಿಯಲಿ ನೀವ ಹುದು ಮಜಭಾಪೆನುತ ನಸುನಗುತಾ ನಡೆಯಿರ್ಕೈ ಶಿವಲಿಂಗ ಭಕ್ತಿಯ ಬೆಡಗನೇಕಾಂತದಲಿ ನಿಮಗೊಡಬಡಿಸಿ ಹೇಳುವೆನೆನುತ ಬಂದನು ಬಳಿಕ ಪ್ರಭುರಾಯ !" ನಂತರ ಮೊಗ್ಗೆಯ ಮಾಯಿ ದೇವರು ಹೇಳಿರುವುದು. "ಕುಲಿಂಗವ ಸುಮ್ಮನೆ ಮನಂಗದಲ್ಲಿಧರಿಸಿರ್ಪದತ್ಯಧಿಕಂ ನಿರುತಂ ಶಿವಾಧವಾ." ಇದೂ ಅಲ್ಲದೆ ವೀರಶೈವಾಮೃತ ಮಹಾಪುರಾಣದಲ್ಲಿಯೂ

ಇನ್ನೂ ಅನೇಕ ಶಿವಶರಣರ ವಚನಗಳಲ್ಲಿಯೂ ಏಕೋತ್ತರಶತಸ್ಥಳಗಳಲ್ಲಿಯೂ ಇನ್ನೂ ವಿಶಾಲ ದೃಷ್ಟಿಯಿಂದ ನೋಡಿದರೆ ವೀರಶೈವರ ಜನನ ಕಾಲದಲ್ಲಿ ಲಿಂಗಧಾರಣ ಮಾಡುವುದು ಲಿಂಗಧಾರಿಗಳ ಮೊದಲನೆಯ ಕೆಲಸವಾಗಿರುವದರಿಂದ ಹೀಗೆ ಮಾಡದೆ ಹೋದರೆ ಆಯುತ ಲಿಂಗಸಂಬಂಧವಿಲ್ಲದವರ ಮುಟ್ಟಲಾಗದೆಂದು ಅನೇಕಾಧಾರಗಳಿರುವಲ್ಲಿ ಲಿಂಗಧಾರಣವೇ ಮಾರ್ಗಕ್ರಿಯೆಯಾಗುತ್ತದಷ್ಟೇ. ಮಾರ್ಗವಿಲ್ಲದ ಪ್ರಯೋಗವು ಅಪ್ರಯೋಜಕವಾಗುತ್ತದೆ. ಮಾರ್ಗಕ್ರಿಯೆಯಿಂದಲೇ ಮೀರಿದ ಕ್ರಿಯೆಗೆ ಹೋಗಬೇಕಾಗಿರುವುದು. ಹೇಗೆಂದರೆ ನಿಜಗುಣ ಕೃತ ವಿವೇಕಚಿಂತಾಮಣಿಯಲ್ಲಿ ಸಾಮಾನ್ಯ, ವಿಶೇಷ, ನಿರಾಭಾರಿ ಎಂದು ಕ್ರಿಯಾಭೇದದಿಂದೆಂದು ಪೇಳಿರುವಲ್ಲಿ ಈಗಿನ ಜನರ ನಡವಳಿಯ ಸನ್ನಿವೇಶಕ್ಕೆ ತಕ್ಕ ಹಾಗೆ ಇದೆ. ಇದನ್ನೇ ನೋಡುವದಾದರೆ ಸಮಾಜವೆಲ್ಲವು ಒಂದು ಹದಕ್ಕೆ ಬಂದಾಗ ಲಿಂಗಧಾರಣೆಯೂ ಶಿವದೀಕ್ಷೆಯೂ ಒಂದೇ ಎಂದು ಹೇಳಲು ಯಾವ ಅಭ್ಯಂತರವೂ ಇರಲಾರದು. ಮತ್ತು ಷಟ್‌ಸ್ಥಳಗಳಲ್ಲಿ ಕ್ರಿಯಾಶಕ್ತಿಯೇ ಮೊದಲನೆಯದಾಗಿರುತ್ತದೆ. ಆದರೂ ಕ್ರಿಯಾಶಕ್ತಿ ಮೊದಲ್ಗೊಂಡು ಚಿತ್ ಶಕ್ತಿ ಕಡೆಯಾಗಿ ಒಂದಕ್ಕೊಂದು ಪ್ರಾಣಸ್ವರೂಪವಾಗಿರುತ್ತವೆಯೋ ಇದರಂತೆ ಲಿಂಗಧಾರಣವೆಂದರೂ ಶಿವದೀಕ್ಷೆಯೆಂದರೂ ಬೀಜ ವೃಕ್ಷಗಳ ಹಾಗೆ ಒಂದನ್ನೊಂದು ಒಳಗೊಂಡಿವೆಯೇ ವಿನಾ ಶಿವದೀಕ್ಷೆಯು ಬೇರೆಯಾಗಲಾರದು. ನಿ... ವಿವೇಕ ಚಿಂತಾಮಣಿಯ ೨ನೆಯ ಪ್ರಕರಣದಲ್ಲಿ ಸಪ್ತವಿಧದೀಕ್ಷೆಯ ಹೇಳಿರುವಲ್ಲಿ ಲಿಂಗಾಯುತ ಲಿಂಗಸ್ವಾಯುತವೆಂದು ಕಡೆಯ ಪಂ. ಚನ್ನಬಸವೇಶ್ವರರು ಸಿದ್ಧರಾಮಯ್ಯಗಳಿಗೆ ೨೧ ದೀಕ್ಷೆಯನ್ನು ಬೋಧಿಸುವಾಗಲೂ ಲಿಂಗಧಾರಣವನ್ನೇ ಪ್ರಶಸ್ತ್ಯಗೊಳಿಸಿರುವಾಗ ಲಿಂಗಧಾರಣ ಕ್ರಿಯೆಗಳೆ ದೀಕ್ಷೆಯತಿರುಳು. ದೀಕ್ಷೆಯು ಬೇರೆ ಉಳಿದಿರುವುದಿಲ್ಲ. ಹಾಗಿದ್ದ ಪಕ್ಷದಲ್ಲಿ ಜನನವಾದ ಕೂಡಲೇ ಲಿಂಗವ ಧರಿಸದೇ ಏಳೆಂಟು ವರುಷಗಳ ಮೇಲೆಯೆ ಲಿಂಗವ ಕಟ್ಟಬಹುದಾಗಿತ್ತು. ಅದು ಇಲ್ಲ. ' ಅಥವ ಜನ್ಮ ಲಿಂಗಧಾರಣವು ದೀಕ್ಷೆಯಾಗಲಾರದೆಂದು ಹೇಳಲಿಕ್ಕೆ ಬರುವುದೇ ? ಬಾರದು. ಅದು ಹೇಗೆಂದರೆ ವೀರಶೈವ ತತ್ವವೂ ಬಾಲ್ಯದಿಂದ ಕೂಡಿರುವಂತಾದ್ದಲ್ಲ. ಒಬ್ಬ ಮನುಷ್ಯನು ಪ್ರಾಪ್ತ ವಯಸ್ಕಳನ್ನು ನಿಶ್ಚಯಿಸಿ ತಾಲಿ ಕಟ್ಟಿದವಡನೆ ಸಾಮೋಪಾಯ ದಂಡೋಪಾಯಗಳನ್ನು ತೋರಿ ಹೇಗೆ

ತನ್ನ ವಶವರ್ತಿ ಮಾಡಿಕೊಳ್ಳುವನೊ ಹಾಗೆ ಧರ್ಮ ಸರ್ಕಾರದ ಕಾನೂನಿನಂತೆ ಗುರುವು ಲಿಂಗ ಕಟ್ಟಿದ ಬಳಿಕ ಅವರನ್ನು ದಾರಿಗೆ ತರಲು ಸದಾ ಎಚ್ಚರಿಕೆಯಲ್ಲಿರಬೇಕು. ಈ ರೀತಿ ಇರದೆ ಭಕ್ತರ ಮನೆಗಳಲ್ಲಿ ಬಿನ್ನಹವೆಂದರೆ ಮನೆಗೆ ಹೋಗುವುದು ಮೌನವಾಗಿ ಕುಳ್ಳುವದು ಲಿಂಗ ಕಟ್ಟುವುದು ಪಾದೋದಕ ಪ್ರಸಾದಗಳನ್ನು ಎಲ್ಲರ ಕರೆದು ಕೊಡುವುದು ನಂತರ ಊಟದ ರುಚಿಗಳನ್ನು ವರ್ಣಿಸುವುದು ದಕ್ಷಿಣೆಗೋಸ್ಕರ ಬಡಬಗ್ಗರೆನ್ನದೆ ಕಿತ್ತಾಡುವುದು ಆ ನಂತರ ಯಾವಾಗಲಾದರು ತಮ್ಮ ಮನಸ್ಸಿಗೆ ಬಂದಾಗ ಪುರೋಹಿತರು ನೋಡುವ ಪಂಚಾಂಗವನ್ನು ದಿನ ವಾರ ತಿಥಿ ನಕ್ಷತ್ರಗಳನ್ನು ನೋಡಿ ಹವನಹೋಮಾದಿಗಳೊಡನೆ ದೀಕ್ಷೆಯು ನಡೆಸುವೆವೆಂದು ಪೇಳುವುದು ಇವಕ್ಕೆಲ್ಲಾ ಶಿವಶರಣರ ವಚನಗಳಲ್ಲಿ ಮಾನ್ಯವಿಧೆಯೇ? ದೀಕ್ಷೆಯೆಂದರೇನು ಸ್ಥೂಲಪಂಚಭೂತ ಕಾಯದ ಪ್ರಕೃತಿ ಗುಣವ ನಷ್ಟವ ಮಾಡಿ ಇಷ್ಟಲಿಂಗವ ಪ್ರತಿಷ್ಠಿಸುವುದು. ಸೂಕ್ಷ್ಮ ಪಂಚ ಭೂತ ಕಾಯದ ಪ್ರಕೃತಿ ಗುಣವ ನಷ್ಟವ ಮಾಡಿ ಪ್ರಾಣಲಿಂಗ ಪ್ರತಿಷ್ಠೆಯ ಮಾಡುವುದು. ಕಾರಣ ಪಂಚಭೂತ ಕಾಯದ ಪ್ರಕೃತಿ ಗುಣವ ನಷ್ಟವ ಮಾಡಿ ಭಾವಲಿಂಗ ಸಂಬಂಧವ ಮಾಡಿ ಇದಕ್ಕೆ ಅನುಮೋದಿಸುವ ಸ್ಥಳಕುಳ ಭೇದವನ್ನು ವಿಚಾರಿಸಿ ವಿವರಿಸಿಕೊಡುವದು ಇದೇ ಶಿವಶರಣರು ಮಾಡುವ ದೀಕ್ಷೆಯು ಎಂದು ಗೊತ್ತಾಗುತ್ತದೆ. ಇಂದಿನವರಿವಿಗೂ ದೀಕ್ಷೆಯನ್ನು ಹೊಂದಿರುವ ಭಕ್ತರುಗಳು ಒಂದು ದೊಡ್ಡ ಗ್ರಾಮಕ್ಕೆ ಸರಾಸರಿ ೧೦೦ ಜನರಿರಬಹುದು. ಅವರೆಲ್ಲರಿಗೂ ಗುರುಗಳು ಹೇಳಿರುವುದೇನು ಮಾಡಿರುವುದೇನು ಇದ್ದ ಲಿಂಗವ ತೆಗೆದು ತಿರುಗಿ ಕಟ್ಟುವರು ಆಇದು ಅಕ್ಷರಗಳನ್ನು ಕಿವಿಯಲ್ಲಿ ಬೋಧಿಸುವುದು ಹೀಗೆ ತಾನೆ ಕೆಲವು ದಿನಗಳಿಂದ ದೀಕ್ಷೆಯು ನಡೆದಿರುವುದು. ಇದಕ್ಕೆ ದೀಕ್ಷೆ ಆಗಿರುವ ಕೆಲವು ಜನರನ್ನು ವಿಮರ್ಶಿಸಿದರೆ ದೀಕ್ಷೆಯ ಪರಿಣಾಮ ಗೊತ್ತಾಗುವುದು. ಮುಂದೆ ನೋಡೋಣ. ಬಸವಯ್ಯನವರ ಉದಾಹರಣೆಯು ಬಹಳ ಗರ್ಭೀಕೃತವಾಗಿದೆ. ಲಿಂಗವ ಮಗುವಿಗೆ ಧರಿಸಿದ ಕೂಡ್ಲೆ ನಡೆಯಬೇಕಾದ ಕರ್ತವ್ಯಗಳೆಲ್ಲವೂ ನಡದೇ ತೀರುವವು ನಿಜ. ಕೆಲವು ಲೇಖಕರ ಅಭಿಪ್ರಾಯವೇನು ಜ್ಞಾನವಿರುವದಿಲ್ಲವೆಂದು ಜ್ಞಾನ ಅರಿವು ಬೇಕು ಸತ್ಯ. ದಿನೇ ದಿನೇ ಅರಿವು ಉಂಟುಮಾಡಲು ಯಾರ ಕರ್ತವ್ಯ? ಯಾವಾಗ ಲಿಂಗಧಾರಣ ಮಾಡುವರೋ ಆಗಲೇ ಗುರುಗಳು ತಂದೆ ತಾಯಿಗ

ಳಿಗೂ ಸಮಯಕ್ಕೆ ನೆರೆದಿರುವ ಬಂಧು ವರ್ಗದವರಿಗೂ ಹೀಗೆಯೇ ನಡೆಯಬೇಕೆಂದು ಸಿಕ್ಷಯಿಸಬೇಕಲ್ಲವೆ ? ಮತ್ತು ಮಗುವಿನ ಲಿಂಗವನ್ನು ತಾಯಿಯು ತನ್ನ ಲಿಂಗಪೂಜಾ ಕಾಲದಲ್ಲಿಯೇ ಅರ್ಪಣೋಪಚಾರವನ್ನು ನಡಸೇಬೇಕೆಂದು ತಿಳಿಸಬೇಕಲ್ಲವೆ ? ಈ ವಿಷಯುಗಳನ್ನು ಕಣ್ಣುಗಳಿಂದ ನೋಡಿ ಕಿವಿಯಿಂದ ಕೇಳುತ್ತಿರುವ ಮಗುವು ದಿನೆ ದಿನೆ ತಿರುಗಾಡುವುದಾದರೆ ಲಿಂಗವನ್ನು ಒಂದು ಕಾಯಿತಿಯಲ್ಲಿ ಸೇರಿಸಿ ಕೊರಳಿಗೆ ಹಾಕಿ ದೇವರು ಇಲ್ಲಿದ್ದಾನೆ ನೋಡಯ್ಯ ಎಂದು ತೋರಿಸುತ್ತಾ ಹೀಗೆಯೇ ವಯಸ್ಸು ಬಂದ ಹಾಗೆಲ್ಲ ಅರುಹು ಆಚಾರಗಳನ್ನು ತಿಳಿಸುತ್ತಿರಬೇಕಲ್ಲವೇ ? ಇದಕ್ಕೆ ದೀಕ್ಷೆ ಶೀಕ್ಷೆ ಸ್ವಾನುಭವವೆಂದು ಹೇಳಬೇಕಾಗುತ್ತದಷ್ಟೆ ! ಗುರುಗಳಾಗಲೀ ತಂದೆತಾಯಿಗಳಾಗಲಿ ಹೀಗೆ ಮಾಡದೆ ಜನನವಾದಾಗ ಕಟ್ಟಿದ ಲಿಂಗವು ಎಲ್ಲಿಯೋ ಹೋಗಿ ಬಿಡುತ್ತದೆ. ಅಲ್ಲಿಂದ ಕೋಣೆಗೂಡುಗಳಲ್ಲಾಗಲಿ ಫೋಟೋಗಳಲ್ಲಿಯಾಗಲಿ ಅಥವಾ ಬೀದಿ ದೇವರುಗಳನ್ನೇ ಆಗಲಿ 'ಇಗೋ ಅಪ್ಪಾ ದೇವರುಯೆಂದು' ನಾವೇ ತೋರಿಸಹತ್ತುತ್ತೇವೆ. ಈ ರೀತಿ ಜ್ಞಾನದಲ್ಲಿ ಬೆಳೆದ ಹುಡುಗನಿಗೆ ಶಿವದೀಕ್ಷೆ ಮಾಡುವದೆಂದರೆ ಕಟ್ಟುಬಣ್ಣದಂತೆಯೇ ಸರಿ. ಯಾಕಂದರೆ ಆತನಪಾಲಿಗೆ ಅದು ಹೊಸತಾಗಿರುವದು. ಹಾದಿ ಬೀದಿ ದೇವರುಗಳ ಮೇಲಿಯೆ ವಿಶ್ವಾಸವು ಹೆಚ್ಚಿ ದೀಕ್ಷೆಯೇತಕ್ಕೆಂದು ಲಿಂಗವಂತ ತತ್ವಗಳನ್ನೇ ಅಲ್ಲಗಳೆಯುವನು. ಇಷ್ಟೆಲ್ಲವು ಶಿಕ್ಷಣವಿಲ್ಲದ ಕಾರಣ. ಈಗ ತಾನೆ ಕೆಲವು ಮಹನೀಯರು ಶಿಕ್ಷಣ ಕಾರ್ಯವನ್ನು ಕೈಕೊಂಡಿರುವರು. ಅವರೆ ನಮಗೆ ಶರಣರೆಂದು ನಂಬಿದ್ದೇವೆ. ಅದು ಇರಲಿ. ಶಿಕ್ಷಣವಿಲ್ಲದೆ ದೀಕ್ಷೆ ಎಂತು ಉಳಿಯುವದು ? ಯಾರೋ ಒಬ್ಬರು ಹೆಚ್ಚಿನ ದೀಕ್ಷೆಯಾಗಿದೆಯೆಂದು ಹೇಳಿದರೆ ಅವರು ಆಚರಿಸುವುದು ಗುರುಮಾರ್ಗವೇ ಬೇರೆಮಾರ್ಗವೇ ಇಡೀ ಆಯತಲಿಂಗಸಂಬಂದಿಗಳಿಗೂ ಗುರುಮಾರ್ಗವೇ ಬೇರೆ ಮಾರ್ಗವೇ ಬೇರೆ ಇಲ್ಲವು. ಲಿಂಗವಂತ ಸಮಾಜಕ್ಕೆಲ್ಲ ಮೊದಲು ಸಾಮಾನ್ಯ ಕ್ರಿಯೆಯೆಂತಲೂ ನಂತರ ಸ್ಥಳಕುಳ ವಿಚಾರದ ವಿಶೇಷ ಕ್ರಿಯೆಯು ಬೇಕಾಗಿರುವದರಿಂದ ಸಾರಾಂಶ ಲಿಂಗಧಾರಣ ಪ್ರಾರಂಭಿಸಿಕ್ಕೊಂಡು ಲಿಂಗದುತ್ಪತ್ತಿಯಂತಲೂ ಲಿಂಗೈಕ್ಯ ಕಡೆಯವರೆಗೂ ಶರಣರ ಅನುಭವ ಶಿಕ್ಷಣದಿಂದಲೆ ಪರ್ಯವಸಾನವನ್ನು ಹೊಂದಬೇಕಾಗಿರುತ್ತದೆಯೇ ವಿನಾ ಬೇರೆ ಇಲ್ಲವು. ಮತ್ತೆ ಗುರುವು ದಯಾಮಯನಾಗಿರುವದರಿಂದ ನಾವುಗಳು

ವಿಲೋಮದಿಂದಾದ ೧೦೦ ಪ್ರಣಮಗಳನು ಮಾನಸ ಸ್ಮರಣೆಯಿಂದ ಜಪಂಗೈಯ್ದು ಕಡೆಗೆ ಆ ನೂರು ಪ್ರಣವಂಗಳನು ಜಪಿಸಿದ ನಂತರ ಮಾಯಾಖ್ಯ ಪಂಚಾಕ್ಷರಿಯನುಚ್ಚರಿಸಿ ಓಂ ಹ್ರಾಂ ಹ್ರೀಂ ನಮಃಶಿವಾಯ ಯೆಂಬ ಅಷ್ಟಾಕ್ಷರಿಯ ಮಂತ್ರವ ಸ್ಮರಿಸಲಾಗಿ ಉಭಯಂ ಕೂಡಿ ೨೦೫ ಆಯಿತ್ತು ಹರನಕ್ಷಿಜಪವೆನಿಪುದು. ತ್ರಿಪುರ ಸಂಹಾರ ಮಾಡಿದ ಪರಮೇಶ್ವರನ ತ್ರಿನಯನವಲ್ಲಾಡಿಸಿದ ಕ್ರಿಯಾರುದ್ರಾಕ್ಷಿಯ ಧಾರಣ ಜಪವಂ ಮಾಡೆ ಪಾಪಕ್ಷಯವಹುದು. ಇಂತಪ್ಪ ಅಕ್ಷರ ಮಾಲಿಕಾ ಇಂತಪ್ಪ ಜ್ಞಾನ ರುದ್ರಾಕ್ಷಿಯನಂತರಂಗದಲ್ಲಿ ಜಪಿಸಲು ಮೋಕ್ಷವಾಗುವದು. ಇದು ಚಿದ್ರುದ್ರಾಕ್ಷಿಯ ಜಪವೆನಿಸುವದು. ಬಿಡದೆ ಇಂತಪ್ಪ ಪ್ರಾಣಲಿಂಗಾರ್ಚನೆಯನು ಮಾಡಿ ಜ್ಞಾನ ರುದ್ರಾಕ್ಷಿಯ ಜಪವನಂತರಂಗದಲ್ಲೆಡೆಬಿಡದೆ ಪೀತಾದಿ ಪೀತ ವರ್ಣವೇ ಆದಿಯಾಗಿ ಮಾಣಿಕ್ಯ ವರ್ಣವೇ ಅಂತ್ಯಮಾದಾರು ವರ್ಣದ ಷಟ್ ಕಮಲ ಆ ಆರು ವರ್ಣವ ತಾವರೆಯ ಕರ್ಣಿಕೆಯೊಳಿಹ ಕಿಂಜಲ್ಕದ ಒಳಗಿರುವ ಚತುಃಕೋಣೆ ಧನುರ್ಗತಿ ತ್ರಿಕೋಣೆ ಷಟ್ಕೋಣೆ ವೃತ್ತಾಕಾರ ತಮಂಧಾಕಾರವೆಂಬ ಗರ್ಭ ಗೃಹಂಗಳಲ್ಲಿರುವ ಮೃಡನ ಪರಶಿವನ ಚಿತ್ತಿನಿಸುವ ಆ ಪರಶಿವನ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ್ಯ ಗೌಪ್ಯವೆಂಬಾರು ಮುಖಂಗಳಿಗೆ ಆರು ಬೀಜವೆನಿಸುವ ನಕಾರಾದಿ ಓಂಕಾರ ನಕಾರಾದಿಯಾಗಿ ಓಂಕಾರಾಂತ್ಯವಾದ ಓಂ ನಮಃ ಶಿವಾಯ ಎಂಬ ಅಕ್ಷರಂಗಳಿಗೆ ಒಡೆಯ ಮೂಲಮೂರ್ತಿಯಾದಂಥ ಷಣ್ಮೂರ್ತಿ ಷಡ್ವಿಧ ಬ್ರಹ್ಮವನೊಳಕೊಂಡ ಪರಬ್ರಹ್ಮವನು ಅಂತರ್ಭಾವದಿಂದೆ ಜಪಿಸೆ ಅಂತಪ್ಪ ಪರಬ್ರಹ್ಮದ ಷಣ್ಮುಖಂಗಳನು ಶರಣನು ತನ್ನಂತರಂಗದಲ್ಲಿ ಷಡಾಧಾರ ಚಕ್ರಂಗಳಲ್ಲಿ ನಕಾರಾದಿ ಓಂಕಾರಾಂತ್ಯವಾದ ಷಡು ಪ್ರಣವ ಮೂರ್ತಿಗಳಾದ ಆಚಾರಾದಿ ಮಹಾಲಿಂಗಾಂತ್ಯವಾದ ಷಡ್ವಿಧ ಲಿಂಗಂಗಳನು ಸುಚಿತ್ತಾದಿ ಸದ್ಭಾವಾಂತ್ಯವಾದ ಷಡ್ವಿಧ ಹಸ್ತದಿಂ ಷಡ್ವಿಧ ಕಮಲಂಗಳಿಂದೆ ಮಾನಸದಿಂ ಪೂಜಿಸಲು ಒಡೆವರೆವ ಕ್ಷೀರದಲ್ಲಿ ಕ್ಷೀರ ಬೆರೆವಂತೆ ಕೂಡುವನು ಮಹಲಿಂಗದಿ ಆ ಪರಬ್ರಹ್ಮದಲ್ಲಿಯೇ ಸಾಮರಸ್ಯವಹನೆಂಬರ್ಥ

**ಸಾಕ್ಷಿಃ**— ಶ್ಲೋ॥ ಪಂಚೇಂದ್ರಿಯ ಮುಖಂ ಜ್ಞಾತ್ವಂ। ಪದಾರ್ಥಂಚ ಸಮರ್ಪಿತಂ। ತಲ್ಲಿಂಗ ಮನುತೇಯಸ್ತು। ತಸ್ಮಿನ್ ಲಿಂಗ ಪ್ರತೀಯತೆ

# ಚಂದಾದಾರರಿಗೆ ಸೂಚನೆ



ಈ ವರೆಗೆ ಚಂದಾ ಅವಧಿಯು ಮುಗಿದ ಬಳಿಕ ಮುಂದಿನ ಸಂಚಿಕೆ ಚಂದಾದಾರರಿಗೆ ವ್ಹಿ, ಪಿ. ಮಾಡುವ ಪದ್ಧತಿಯು ಇದ್ದಿತು. ಆದರೆ ಆಫೀಸಿನ ಹೊಸ ನಿಯಮದ ಪ್ರಕಾರ ಇನ್ನು ಮೇಲೆ ಈ ಪದ್ಧತಿಯು ...ಡುವದು. ಚಂದಾ ಅವಧಿಯು ಯಾವ ಸಂಚಿಕೆಗೆ ಮುಗಿಯುವದೆಂ... ನಾವು ಮೊದಲು ತಿಳಿಸುವೆವು. ತಿಳಿಸಿದ ಕೂಡಲೆ ಚಂದಾದಾ... ತಾವಾಗಿಯೇ ಚಂದಾಹಣವನ್ನು ಮನಿಆರ್ಡರ ಮಾಡಿ ನಮ್ಮ ಕಡೆಗೆ ...ಬೇಕು. ಇಲ್ಲದಿದ್ದರೆ ವ್ಹಿ. ಪಿ. ಮೂಲಕ ಕಳಿಸಲು ಸೂಚನಾ ಪತ್ರ ನಮಗೆ ಅವರು ಬರೆಯಬೇಕು. ಇಂಥ ಪತ್ರವನ್ನು ಪೋಷ್ಟಿನ ಅಧಿ... ನೋಡಿಕೊಂಡು ಆ ಮೇಲೆ ವ್ಹಿ. ಪಿ. ಸ್ವೀಕರಿಸುವರು. ಆದ್ದ... ಚಂದಾದಾರರು ಚಂದಾ ಅವಧಿಯು ಮುಗಿಯುವದರೊಳಗಾಗಿ ತಾವಾ... ಚಂದಾ ಹಣವನ್ನು ಮನಿಆರ್ಡರ ಮಾಡಿದಲ್ಲಿ ಎಲ್ಲರಿಗೂ ಅನುಕೂಲ ...ದು. ಇದರಿಂದ ಚಂದಾದಾರರಿಗೆ ವ್ಹಿ. ಪಿ. ಖರ್ಚು ಉಳಿಯುವದು.

ತಮ್ಮ ವಿಧೇಯ

ಮ್ಯಾನೇಜರ ಶಿವಾನುಭವ

**BOOK-POST.**

R. N. B. 2554

ಶ್ರೀ. ರಾ॥ ರಾ॥

vanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬಾ॥ ಪಿ.
ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರ ವಾರ್ಡ
ಮನೆ ನಂ. ೧೩೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿ
ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

# ಶಿವಾನುಭವ.

ಪುಟ ೨೫ ]. ( ಮಾಸಪತ್ರಿಕೆ ) [ ಸಂಚಿಕೆ ೮



ಗಸ್ಟ ೧೯೫೧] ವಿಜಾಪೂರ [ ಶ್ರಾವಣ ೧೮೭೩

## ವಿಷಯಾನುಕ್ರಮಣಿಕೆ



---

## ಶಿವಾನುಭವ ಪತ್ರಿಕೆ, ವಿಜಾಪುರ.

ಮಾಸಿಕ ೬೪ ಪುಟಗಳು.

ವಾರ್ಷಿಕ ಚಂದಾ [illegible]

# ಶಿವಾನುಭವ

| ವರ್ಷ ೨೫ | ಅಗಸ್ಟ ೧೯೫೧ | ಸಂಚಿಕೆ ೮ |
| --- | --- | --- |

## ಜನ್ಮಗಳು

( ಲೇಖಕ :— ಶ್ರೀ ಬಸಪ್ಪ ಶಿವಪ್ಪ ಪಟ್ಟೇದ ಹುಕ್ಕೇರಿ )

—:†÷×÷†:—

ಜನ್ಮವೆಂದರೆ ಹುಟ್ಟುವಿಕೆ. ಜೀವರಾಶಿಗಳು ೮೪ ಲಕ್ಷ ಉಂಟೆಂದು ನಮ್ಮ ಶಾಸ್ತ್ರವು ಹೇಳುತ್ತಿದೆ. ಜೀವನು ತನ್ನ ಕರ್ಮಾನುಸಾರವಾಗಿ ಒಮ್ಮೆಲ್ಲೊಮ್ಮೆ ಅವೆಲ್ಲವುಗಳಲ್ಲಿಯೂ ಹುಟ್ಟುವನೆಂದು ತಿಳಿಯುವದುಂಟು. ಅಂತೂ ಇರಲಿ. ಈಗ ಅವುಗಳೊಡನೆ ನಮ್ಮ ಕರ್ತವ್ಯವಿಲ್ಲ. ಜನರು ಮಾತನಾಡುವಾಗ 'ಏಳು ಜನ್ಮ' 'ಮೂರು ಜನ್ಮ' ಎಂದು ಅನೇಕ ಸಾರೆ ಅನ್ನುವದುಂಟು. "ಸಪ್ತ ಜನ್ಮಕೃತಂ ಪಾಪಂ। ಸ್ಮರಣೇನ ವಿನಶ್ಯತಿ।" ಎಂದು ಜ್ಯೋತಿರ್ಲಿಂಗ ಸ್ತೋತ್ರದ ಫಲಶ್ರುತಿಯಲ್ಲಿ ಹೇಳಿದ್ದಾರೆ. ಹೆಣ್ಣುಮಕ್ಕಳಿಗೆ ವಿನಾಕಾರಣ ಇನ್ನೊಬ್ಬರಿಂದ ಪೀಡೆಯಾದಾಗ ನನ್ನ ಪಾಪ ನಿಮಗೆ ಏಳೇಳ ಜನ್ಮಕ್ಕೂ ಬಿಡಲಾರದು ಎಂದು ಶಪಿಸುವದುಂಟು. ಇದೇ ಮೇರೆಗೆ, ದೇವದರ್ಶನಕ್ಕೆ ಗುಡಿಗೆ ಹೋದಾಗ ಹೇಳುವದು, "ಪ್ರಾತಃಕಾಲೆ ಶಿವಂ ದೃಷ್ಟ್ವಾ। ನಿಶಿಪಾಪ ವಿನಶ್ಯತಿ॥ ಜನ್ಮಕೃತ ಮಧ್ಯಾಹ್ನೆ। ಸಾಯಾಹ್ನೆ ಸಪ್ತ ಜನ್ಮನಿ।" ಎಂತಲೂ ಉಚ್ಚರಿಸುವರು. ಶ್ರೀ ಬಸವೇಶ್ವರ ದೇವರೂ ಸಹ ಒಂದು ವಚನದಲ್ಲಿ

"ಅಯ್ಯಾ! ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿದ್ದರೆ ನಿಮ್ಮಾಜ್ಞೆ, ನಿಮ್ಮ ಪ್ರಮಥರಾಜ್ಞೆ, ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ!" ಎಂದು ನುಡಿದಿದ್ದಾರೆ. ಇವೆಲ್ಲ ಏಳು ಜನ್ಮದ ಬಗೆಗೆ ಉದಾಹರಣೆಗಳಾದವು. ಇನ್ನ ಮೂರು ಜನ್ಮಗಳ ಬಗೆಗೆ ವಿಚಾರಿಸಿದರೆ, ಶಿವ ಪೂಜೆಯ ಕಾಲದಲ್ಲಿ ಲಿಂಗಕ್ಕೆ ಬಿಲ್ವದಳವನರ್ಪಿಸುವಾಗ, "ತ್ರಿಜನ್ಮ ಪಾಪ ಸಂಹಾರಂ" ಎಂದು ಬರುತ್ತದೆ. ಈ ಏಳು ಮತ್ತು ಮೂರು ಜನ್ಮಗಳ ವಿಷಯವಾಗಿಯೇ ಈಗ ಯೋಚಿಸುವಪದೆ.

ಇವುಗಳನ್ನು ಕುರಿತು ನಾನು ನನ್ನಲ್ಲಿಯೇ ಹಲವುಸಾರೆ ಆಲೋಚಿಸಿದೆನು. ಒಮ್ಮೆ ಆಲೋಚಿಸುವಾಗ ಸಹಜವಾಗಿಯೇ "ಜನ್ಮನಾ ಜಾಯತೆ ಶೂದ್ರಃ । ಸಂಸ್ಕಾರಾದ್ವಿಜ ಉಚ್ಯತೆ ॥ ವೇದಾಧ್ಯನೇನ ವಿಪ್ರಸ್ತು। ಬ್ರಹ್ಮಜಾನಾತಿ ಬ್ರಾಹ್ಮಣಃ ॥" ಸ್ಮರಣೆಗೆ ಬಂದಿತು. ಇದರಲ್ಲಿ ಶೂದ್ರ-ದ್ವಿಜ-ವಿಪ್ರ-ಬ್ರಾಹ್ಮಣ ಎಂದು ನಾಲ್ಕು ಜನ್ಮಗಳು, ಒಂದೇ ವ್ಯಕ್ತಿಗೆ ಒಂದೇ ಒಂದು ಜನ್ಮದಲ್ಲಿ ಒದಗುವವಾದ್ದರಿಂದ ಮೇಲೆ ಹೇಳಿದುವೂ ಸಹ "ಇದೇರೀತಿ ಇರಬಹುದೇ ?" ಎಂಬ ವಿಚಾರವು ಹೊಳೆಯಿತು. ಶ್ರೀ ಶಂಕರಾಚಾರ್ಯರು ಉಸುರಿದ ಬಾಲಸ್ತಾವತ್ ಕ್ರೀಡಾಸಕ್ತಃ। ತರುಣಸ್ತಾವತ್ ತರುಣೀರಕ್ತಃ॥ ವೃದ್ಧಸ್ತಾವತ್ ಚಿಂತಾ ಮಗ್ನಃ। ಪರೆ ಬ್ರಹ್ಮಣಿ ಕೋಪಿನ ಲಗ್ನಃ ॥" ಎಂಬುದು ಸ್ಮರಣೆಗೆ ಬಂದಿತು. ಇದೇ ರೀತಿಯಾಗಿ ನಾವು ಸಹ ವ್ಯವಹಾರದಲ್ಲಿ ಬಾಲ್ಯಾವಸ್ಥೆ, ಯೌವನ ಹಾಗೂ ವೃದ್ಧಾಪ್ಯ ಎಂದು ಮೂರೆ ವಿಧವಾಗಿ ಜೀವಿತವನ್ನು ವಿಭಾಗಿಸುತ್ತೇವೆ. ಮೇಲಿನ "ಜನ್ಮನಾ ಜಾಯತೇ ಎಂಬ ಪದ್ಯದ ಘೋಷಣೆಯಂತೆ, ಈ ಮೂರು ಅವಸ್ಥೆಗಳನ್ನೇ ಮೂರು ಜನ್ಮಗಳೆನ್ನಲು ಪ್ರತ್ಯವಾಯವಿಲ್ಲ. ಇನ್ನು ಏಳು ಜನ್ಮಗಳ ಪ್ರಶ್ನೆ ಉಳಿಯಿತು. ಶ್ರೀ ಬಸವಣ್ಣನವರೇ ಮುಂದೆ ಅದೇ ವಚನದಲ್ಲಿ, ಏಳು ಜನ್ಮಗಳನ್ನು ವಿವರಿಸುವರು. ಅವಾದರೂ ಒಂದೇ ಜನ್ಮದೊಳಗಿನ ವಿವಿಧ ಭಾಗಗಳೇ ಇರಬೇಕು, ಎಂದು ನಾನು ಭಾವಿಸಿದೆನು. ಅದಾಗ್ಯೂ ಅವುಗಳ ಹೊಂದಿಕೆಯು, ಒಮ್ಮೆಲೇ ಸಾಮಾನ್ಯರಿಗೆ ಆಗುವಂತಿಲ್ಲದಿರುವದರಿಂದ, ಒಂದೆ ಸವನೆ ಅವುಗಳ ದುಂಬಾಲಗೊಂಡು ಕೆಳಗಿನಂತೆ ಬಗೆಹರಿಸುವೆ.

೧) ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಕಳಿಸಿಟ್ಟು ಕರೆದು, ನಿಮ್ಮ ಭೃತ್ಯನಮಾಡಿ ಎನ್ನನಿರಿಸಿ ಕೊಂಡಿದ್ದಿರಯ್ಯಾ! ಇದರಿಂದ ಮೊದಲನೆಯ ಜನ್ಮವು 'ಶಿಲಾದ' ಎಂದು ಹೇಳಿದಂತಾಯಿತು. ಶಿಲಾ+ಆದ = ಶಿಲಾದ ಎಂದು ಅದರ ಸಂಧಿ ಬಿಡಿಸಬಹುದು. (ಕ್ರವ್ಯಾದ ಶಬ್ದದಂತೆ) ಕೂಸು ಹರಿದಾಡಹತ್ತಿದ ಮೇಲೆ ಅದು ತನ್ನ ಕೈಗೆ ಸಿಕ್ಕುವದನ್ನೆಲ್ಲ, ಮುಖ್ಯವಾಗಿ ಹರಳು ಮಣ್ಣು ತನ್ನ ಬಾಯಲ್ಲಿ ಹಾಕಿಕೊಳ್ಳುವದು. ಮಣ್ಣು ತಿನ್ನಲು ಕಲಿಯುವದು. ಈ ಹರಳು ಮಣ್ಣುಗಳು ಶಿಲೆಯಿಂದ ಜನಿಸಿದ ಪದಾರ್ಥಗಳು. ಇವುಗಳನ್ನು ತಿನ್ನುವದರಿಂದ ಅದಕ್ಕೆ 'ಶಿಲಾದ' ಎಂದು ಕರೆಯುವದು ಸ್ವಾಭಾವಿಕವೇ ಸರಿ!

ಆ ಶಿಶುವಿಗೆ ನಾವು, ವೀರಶೈವರು, ಹುಟ್ಟಿದೊಡನೆಯೇ ಲಿಂಗಧಾರಣಮಾಡಿ, ಅದನ್ನು ಹೊತ್ತುಕೊಂಡು ಜೀವಿಸುವ ಉದ್ಯೋಗಕ್ಕೆ ಹಚ್ಚುವೆವು. ಆದರೆ ಆ ಕೂಸಿಗೆ ಲಿಂಗದ ಆದಾವ ಕಲ್ಪನೆಯೂ ಇರುವದಿಲ್ಲ. ಆದಾಗ್ಯೂ ನಾಗಪಾಶ ಮಾಡಿ ಅದನ್ನು ಅದರ ಕೊರಳಿಗೆ ತೊಡಕಿಸುವೆವು. (ಈಗ ನಾಗಪಾಶದ ಬದಲು ತಿಳುವು ತಗಡಿನ ಬೆಳ್ಳಿಯ ಹೋಳು ಕರಡಿಗೆಗಳನ್ನು ಉಪಯೋಗಿಸುತ್ತಿರುವರು.) ಕೇವಲ ಜಟ್ಟಿಯ ಆಳಿನಂತೆ, (ಭೃತ್ಯನಂತೆ) ಆ ಬಾಲಕನು ನಾಗಪಾಶವನ್ನು ಇಲ್ಲವೆ ಕರಡಿಗೆಯನ್ನು ತನ್ನ ದೇಹದಲ್ಲಿಟ್ಟು ಧರಿಸುವನು. ಆದುದರಿಂದ ಆಗ ಅದು ಲಿಂಗದ ಭೃತ್ಯತ್ವದಲ್ಲಿ ಜೀವಿಸುವದೆಂಬುದು ಸ್ಪಷ್ಟವಿದೆ. ಅದರಿಂದಲೇ "ಭೃತ್ಯನ ಮಾಡಿ ಎನ್ನನಿರಿಸಿಕೊಂಡಿದ್ದಿರಯ್ಯಾ" ಎಂದು ನುಡಿಯುವುದು.

೨) "ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನಮಾಡಿ ಕಳಿಸಿಟ್ಟು ಕರೆದು, ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯಾ!" ಬಾಲಕನು ಮುಂದೆ ತಕ್ಕಮಟ್ಟಿಗೆ ದೊಡ್ಡವನಾಗಿ, ಲಿಂಗವನ್ನು ಜತನದಿಂದ ಕಾಪಾಡುವನೆಂಬುದು ನಮಗೆ ಅನಿಸಿದರೆ, ನಾಗಪಾಶದಿಂದ ಆ ಲಿಂಗದ ಸೆರೆ ಬಿಡಿಸಿ, (ಹೊರದೆಗೆದು) ಕಾಂತಿಧರಿಸಿ, ಸಣ್ಣದೊಂದು [illegible]ಸಿನ ಗುಂಡಗರಡಿಗೆಯಲ್ಲಿ ಅದನ್ನು ಹಾಕಿ ಆತನಿಗೆ ಧರಿಸುವೆವು. [illegible] ಆ ಹುಡುಗನಿಗೆ, ಮನೆಯೊಳಗಿನ ಇತರರನ್ನು ಕಂಡು, ಅವ

ರಂತೆ ತಾನೂ ಲಿಂಗವನ್ನು ಪೂಜಿಸಬೇಕೆಂಬ ಲವಲವಿಕೆ ಯುಂಟಾಗು ವದು ಸಾಹಜಿಕವೇ. ತಾನೂ ಲಿಂಗಕ್ಕೆ ಮಜ್ಜನಮಾಡಿ, ವಿಭೂತಿ ಧರಿಸಿ, ಶಿವಶಿವಾ! ಎಂದು ಉಚ್ಚರಿಸಿ ನಮಸ್ಕರಿಸುವನು. ಹಾಗೂ ಅದನ್ನು ಕರಡಿಗೆಯಲ್ಲಿಟ್ಟುಕೊಂಡು, ದೇವರೆಂದು ಭಕ್ತಿಯಿಂದ ರಕ್ಷಿಸು ವನು. ಈ ವಿಧವಾಗಿ ಲಿಂಗವನ್ನು ಪೂಜಿಸಬೇಕೆಂಬ ಭಾವನೆಯನ್ನು ಪರಮಾತ್ಮನು ಅವನಲ್ಲಿ ಈಗ ಹುಟ್ಟಿಸುವದರಿಂದ, ಅವನು ಈಶ ಶಿವನ ಕಾರುಣ್ಯಕ್ಕೆ ಪಾತ್ರನಾದನೆಂದು, ತುಸು ಮಟ್ಟಿಗಾದರೂ ಹೇಳಲು ಆಸ್ಪದವಾಯಿತು. ಅದು ಕಾರಣ ಶಿವನು ಆ ಹುಡುಗನನ್ನು ತನ್ನ ಕಂದನಾದ ಸ್ಕಂದ ( ಷಣ್ಮುಖ ) ನಂತೆ ತಿಳಿದು, ಆತನಲ್ಲಿ ಕಾರುಣ್ಯ ವನ್ನು ವ್ಯಕ್ತ ಮಾಡಹತ್ತಿದುದು ಯೋಗ್ಯವೇ ಆಗಿರುವದು. ಇಲ್ಲಿಂದ ಭಕ್ತಿಯು ಅಂಕುರಿಸಿ ಬೆಳೆಯುತ್ತ ಸಾಗುವದರಿಂದ ಈ ಅವಸ್ಥೆಯನ್ನು ಭಕ್ತನ ( ಈಶ್ವರನ ) ಸ್ಥಿತಿಗೆ ಹೋಲಿಸಬಹುದು.

( ೩ ) “ ಮೂರನೆಯ ಭವಾಂತರದಲ್ಲಿ ನೀಲ ಲೋಹಿತನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಲೀಲಾವಿನೋದದಿಂದಿದ್ದು ಕೊಂಡಿದ್ದಿರಯ್ಯಾ ” ಆ ಹುಡುಗನು ಮತ್ತೆ ಬೆಳೆದು, ಪ್ರಬುದ್ಧಾವಸ್ಥೆಗೆ ಬಂದನೆಂದರೆ, ಅವನಿಗೆ ಶಿವದೀಕ್ಷೆಯನ್ನು ಮಾಡಿ ಶಿವಮಾರ್ಗದ ಶಿಕ್ಷಣ ವನ್ನಾರಂಭಿಸುವರು. ಈ ಗುರುವಿಗೆ ಶಿಕ್ಷಾಗುರು ಎನ್ನುವರು. ಆತನು ಹುಡುಗನಿಗೆ ಶಿವಪಂಚಾಕ್ಷರೀ ಮಂತ್ರವನ್ನು, ಶಿವಪೂಜೆಯ ಸಂಕ್ಷಿಪ್ತ ಸ್ವರೂಪವನ್ನು ತಿಳಿಸಿಕೊಡುವನಲ್ಲದೆ, ಲಿಂಗದ ನೆಲೆ ಕಲೆಗಳನ್ನೂ, ಸದಾ ಚಾರಾದಿಗಳನ್ನೂ, ಮನಂಬುಗುವಂತೆ, ಬೋಧಿಸುವನು. ಧರ್ಮ ಗ್ರಂಥ ಗಳನ್ನೂ ಶಾಸ್ತ್ರ ಪುರಾಣಾದಿಗಳನ್ನೂ ಓದಿಸುವನು. ಸ್ತೋತ್ರಗಳನ್ನೂ ಅಷ್ಟಕ ಮಂಗಲಾರತಿಗಳನ್ನೂ ಕಲಿಸುವನು. ಅದರಿಂದ ಹುಡುಗನಿಗೆ ತನ್ನ ಧರ್ಮದ ಸ್ವರೂಪವು ಗೊತ್ತಾಗುವದಲ್ಲದೆ, ಶಿವನ ವಿವಿಧ ಲೀಲೆ ಗಳೂ ತಿಳಿದು, ಆತನ ಭಕ್ತಿಯು ಹೆಚ್ಚುವದು. ಶಿವನ ಬಗೆಗೆ ಕೃತ ಜ್ಞತೆಯು ಒಡಮೂಡುವದು. ಅದರಿಂದ ಇಷ್ಟಲಿಂಗದಲ್ಲಿ ಅವನಿಗೆ ನಿಷ್ಠೆಯು ನೆಲೆಗೊಳ್ಳಲಿಕ್ಕೆ ಅವನಿಗೆ ಬಹಳ ಸಹಾಯವಾಗುವದು. ಹಾಗೂ ಒಳ್ಳೆಯ ಆಚಾರವಂತನಾಗಿ ನಡೆಯುವ ಬುದ್ಧಿಯು ಸ್ಫುರಿಸುವದು. ಹೀಗೆ ಸದಾ ಚಾರಿಯೂ, ಕ್ರಮೇಣ ಶಿವಜ್ಞಾನ ಸಂಪನ್ನನೂ ಆಗಲಿಕ್ಕೆ ಶಿವದೀಕ್ಷೆಯು

(ಗುರು ಶಿಕ್ಷೆಯು) ಬಹು ಪ್ರಯೋಜನಕರವಾಗಿರುವದು. ಈ ದೆಸೆಯಲ್ಲಿ ಆತನ ಮನಸ್ಸು ತನ್ನ ದೇಹ ಹಾಗೂ ಜಗತ್ತಿನ ವಿಷಯಗಳ ಕಡೆಗೂ, ಲಿಂಗ (ಶಿವ) ಜ್ಞಾನ, ಸದಾಚಾರಗಳಕಡೆಗೂ, ದ್ವಿಮುಖವಾಗಿ ಹರಿಯುತ್ತಿರುವದರಿಂದ, ಅವನಿಗೆ ನೀಲ ಲೋಹಿತ (ಕೃಷ್ಣ ಪಿಂಗಲ) ನೆಂದು ಹೆಸರು ಬರುವದು ಸಹಜಿಕವು. ಅವರು ಪರಮಾತ್ಮಗೆ ಅನೇಕ ಲೀಲೆಗಳನ್ನರಿತುಕೊಂಡು, ಆತನ ವಿಷಯವಾಗಿ ಧನ್ಯತೆ ಪಡೆದು, ತಮ್ಮೊಳಗೆ ಆನಂದಭರಿತರಾಗುವರು. ಅಂತೇ ಈ ಸ್ಥಿತಿಯನ್ನು ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿದ್ದಿರಯ್ಯಾ ಎಂದು ಹೇಳಿರುವರು. ಇದೆಲ್ಲವನ್ನು ನೋಡಿದರೆ, ಈ ಅವಸ್ಥೆಗೆ ಮಹೇಶ್ವರ ಸ್ಥಳವನುಪಮಿಸಲು, ಅದಾರ ಅಡ್ಡಿಯೂ ಇಲ್ಲ.

(೪) "ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಮನಃಪ್ರೇರಕನಾಗಲೆಂದು, ಇರಿಸಿಕೊಂಡಿದ್ದಿರಯ್ಯಾ।" ಈಗ ಆ ಪ್ರಬುದ್ಧ ಹುಡುಗನು ಮತ್ತೂ ದೊಡ್ಡವನಾಗಿ, ವ್ಯಾವಹಾರಿಕ (ಲೌಕಿಕ) ಜ್ಞಾನ ಸಂಪನ್ನನಾಗಿರುವನು. ಕರದ ಇಷ್ಟಲಿಂಗವೂ ಅಂತರ್ಗತ ಪ್ರಾಣಲಿಂಗವೂ ಒಂದೇ ಆಗಿರುವದರಿಂದ, ಇನ್ನು ಬರಿಯ ಇಷ್ಟಲಿಂಗವನ್ನಷ್ಟೇ ಪೂಜಿಸದೆ, ಅದರೊಡನೆಯೇ ಪ್ರಾಣಲಿಂಗವನ್ನೂ ಪೂಜಿಸಿ, ಅದರ ಕೃಪೆಗೂ ಪಾತ್ರನಾಗಬೇಕು ಎಂಬ ಹಂಬಲವಿಡಿಯುವನು. ಪ್ರಾಣಲಿಂಗವು ನಿಜವಾಗಿ ಆತ್ಮ ರೂಪವೇ ಇದ್ದು, ಅದು ದೇಹದ ಸಂಗತಿಯಿಂದ ತನ್ನ ನಿಜವಾದ ಸ್ವರೂಪವನ್ನು ಮರೆತು, ದೇಹದ ಎಳೆತಕ್ಕೆ ಒಳಗಾಗಿದೆ. ಪ್ರಾಣದ ಪ್ರತಿನಿಧಿ ಎನಿಸುವ ಮನವು ದೇಹವನ್ನು ಪುಷ್ಟಿಗೊಳಿಸಲಿಕ್ಕೂ ಸುಖದಲ್ಲಿಡಲಿಕ್ಕೂ ವಿಷಯಗಳಕಡೆಗೆ ಹರಿದಾಡಹತ್ತುವದು. ನ್ಯಾಯಾನ್ಯಾಯ ಧರ್ಮಾಧರ್ಮವಾವುದನ್ನೂ ನೋಡದೆ, ವಿಷಯಗಳನ್ನು ಸಂಪಾದಿಸುವದು. ಇದನ್ನು ಬಿಟ್ಟು, ಸುವಿಚಾರ ಮಗ್ನವಾಗಿ, ಸರಿಯಾದ ಮಾರ್ಗದಲ್ಲಿ, (ಶಿವಭಕ್ತಿ ಮಾರ್ಗದಲ್ಲಿ) ವರ್ತಿಸಹತ್ತುವದು ಪ್ರಾಣಲಿಂಗದ, ಅಂದರೆ ಆತ್ಮಲಿಂಗದ ಪೂಜೆಗೆ ಅತ್ಯವಶ್ಯವಾಗಿದೆ. ಅದಕ್ಕಾಗಿ ಮನವು ಸ್ವೇಚ್ಛಾಚಾರವನ್ನೂ ಅಹಂಕಾರವನ್ನೂ ಬಿಸುಟ, ಸಾತ್ವಿಕ ಮಾರ್ಗದಲ್ಲಿ ನಡೆಯಲು ಕಲಿಯಬೇಕಾಗುವದು. ಇದನ್ನೇ "ಮನದಲ್ಲಿ ದೇವರು ಮನೆಮಾಡಿ

ಕೊಂಡಿಹನು " ಎಂದು ಸರ್ಪಭೂಷಣ, ಸ್ವಾಮಿಗಳು ಹೇಳಿರುವರು. ಆದಕಾರಣ ಆ ಕಿಡಿಗೇಡಿ ಮನಸ್ಸಿಗೆ, ತನ್ನಲ್ಲಿಯ ದೇವರ ಅಸ್ತಿತ್ವದ ನೆನಪುಮಾಡಿಕೊಟ್ಟು, ಅವನ್ನು ದೇವರ ( ಲಿಂಗದ ಇಲ್ಲವೆ ಜ್ಞಾನದ ) ವಶವರ್ತಿಯಾಗುವಂತೆ, ಮಾಡಿ ಬಿಟ್ಟರೆ ಈ ಕಾರ್ಯವು ಅದೆಷ್ಟೋ ಮಟ್ಟಿಗೆ ಒಳಬೀಳುವದು. ಆ ದೇವರೇ ದೇಹದ ಅಂತರ್ಯಾಮಿಯಾಗಿದ್ದು, ಆತನೇ ಎಲ್ಲ ವ್ಯವಹಾರ ಸಾಗಿಸುವನು. ಮನವು ಮಾತ್ರ ಆ ಶಿವನ ಆಜ್ಞೆಯಂತೆ ( ಪ್ರೇರಣೆಯಂತೆ ) ನಡೆಯುಹತ್ತುವದು, ಬಲು ಇಷ್ಟವೂ, ಆತ್ಮೋದ್ಧಾರಕವೂ, ಆಗಿರುವದು. ಅದುವರಿಂದಲೇ, ಈಗ ಪ್ರಾಣವಾಗಲೀ ದೇಹದ ಪಕ್ಷಪಾತಿ ಮನವಾಗಲೀ, ನಾನು ಎಂಬ ಅಹಂಕಾರಾಭಿಮಾನಗಳಿಂದ, ಬಿಡುಗಡೆ ಹೊಂದಿ, ಶಿವಾಧೀನವಾಗಿ ಸಾಗಬೇಕಾಗುವದು. ಇಂತು ಮನವನ್ನು ಶಿವನಿಂದ ಹರಣ ಮಾಡಿಸಿಕೊಂಡವನ್ನಾಗುವದರಿಂದ, ಆ ಮನುಜನಿಗೆ ಮನೋಹರ ಗಣೇಶ್ವರನೆಂಬ ಹೆಸರು ಸಾರ್ಥಕವಾಗುವದು. ಈ ಸ್ಥಿತಿಯಲ್ಲಿ ಮನವು ಶಿವಾರ್ಪಿತವಾಗಿರುವದರಿಂದ ಅದು ಶಿವನ ಮನವಾಯಿತು. ದೇಹವೂ ಆತನ ತನುವಾಯಿತು. "ದೇಹವೇ ದೇವಾಲಯು ಆತ್ಮವೇ ಅದರೊಳಗಿನ ಶಿವನು " ಎಂಬುದು ಸಾರ್ಥಕವಾಗುವದು. ದೇಹವಾಗಲೀ ಮನವಾಗಲೀ ನನ್ನದು ಎಂಬುವನ್ನು ಪೂರ್ಣ ನೀಗಿದ ಮನುಷ್ಯನು. ಶಿವನ ಶಿಷ್ಯನಾಗಿ, ಆ ಮನವನ್ನು ಶಿವಾಜ್ಞೆಯಂತೆ ಪ್ರೇರಿಸಹತ್ತುವನಾದ್ದರಿಂದ, ಅವನು ಶಿವನ ಮನಃಪ್ರೇರಕನಾದನು. ಈ ಅವಸ್ಥೆಯನ್ನು ಪ್ರಸಾದಿ ಸ್ಥಲಕ್ಕೆ ಹೊಂದಿಸಲು ಅದಾವ ತೊಂದರೆಯೂ ಇಲ್ಲ.

( ೫ ) " ಐದನೆಯ ಭವಾಂತರದಲ್ಲಿ ಕಾಲಲೋಚನನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ಸರ್ವಕಾಲ ಸಂಹಾರವ ಮಾಡಿಸುತಿದ್ದಿರಯ್ಯಾ । " ಈ ಐದನೆಯ ಗಣೇಶ್ವರನ ಹೆಸರು ಕಾಲ ಲೋಚನನೆಂದಿರುವದು. ಈ ಕಾಲಲೋಚನನೆಂದರೆ, ಯಮನ (ಮರಣ ದೇವತೆಯ) ದೃಷ್ಟಿಯುಳ್ಳವನು. ಈತನು ಮಾಡುವ ಕಾರ್ಯವಾದರೂ, ಸರ್ವಕಾಲದಲ್ಲಿಯೂ ಸಂಹಾರವನ್ನೇ ಮಾಡುತ್ತಿರುವದು. ಇದು ಶುದ್ಧ ಕಾಳನ ಕಾರ್ಯವೇ ಆಗಿಬಿಟ್ಟಿತು ! ಹೀಗೆ ಶಿವಭಕ್ತನಾದವನು, ಯಾವಾಗಲೂ ವ್ಯಾಧನಂತೆ, ಪ್ರಾಣಿ ಸಂಹಾರದ ರಾಕ್ಷಸೀಯ ಉದ್ಯೋಗದಲ್ಲಿಯೇ

ತೊಡಗಿರಬೇಕಾಯಿತು. ಇದು ಅನೆಂತು ಶಿವಭಕ್ತ ಶರಣನ ಜೀವಿತ ಕ್ರಮವಾಗುವದು ? ಛೇ ! ಇದೆಂದೂ ಶಕ್ಯವಿಲ್ಲ ! ಅಂದಮೇಲೆ ಇದರ ರ್ಥವು ಭಿನ್ನವಾದುದಿರಲಿಕ್ಕೇ ಬೇಕು. ಹಾಗಾದರೆ, ಅದಾವುದು ? ಎಂದಾಲೋಚಿಸಿದರೆ, ತನ್ನ ಲಿಂಗಧಾರಿಗಳ ಕುಲದಲ್ಲಿರುವ ವಿವಿಧ ಕಾಯು ಕದ ಮನುಜರಲ್ಲಿಯೂ ಅವರ ನಡೆನುಡಿಗಳಲ್ಲಿಯೂ ಕಂಡುಬರುವ ಸ್ವೇಚ್ಛಾವರ್ತನವನ್ನೂ ವೈಷಮ್ಯವನ್ನೂ ಅಂತಃಕರಣ ಪೂರ್ವಕ ತಿದ್ದಿ, ನಾಶಪಡಿಸಿ, ಅವರಲ್ಲಿ ಸಮತೆಯನ್ನುಂಟುಮಾಡುವದೇ ಈ ಕಾಲಲೋಚ ನನು ಮಾಡತಕ್ಕ ಸಂಹಾರ ಕಾರ್ಯವು.

ಮನೋಹರ ಗಣೇಶ್ವರನು ಅಹಂಕಾರವನ್ನು ಸಂಹರಿಸಿದಂತೆಯೇ ಕಾಲಲೋಚನನು ಶಿವಭಕ್ತರನ್ನೆಲ್ಲ, ( ಅವರ ಕಾರ್ಯವನ್ನು ನೋಡದೆ ) ಶಿವಸ್ವರೂಪಿಗಳೆಂದು ಭಾವಿಸಿ ತದನುಸಾರ ಸಮನತೆಯಿರದ ( ಅದೇಕೆ ಕಿರಿಯತನದಿಂದ ) ದಾಸೋಹಿಯಾಗಿ ವರ್ತಿಸಬೇಕು. ಅನ್ಯ ಕನ್ಯಾ ವ್ಯವಹಾರಗಳನ್ನು, ನಿಃಶಂಕೆಯಿಂದ ಸಾಗಿಸಬೇಕು. ಪರಸ್ಪರರು ಸಹ ಕಾರಿಗಳಾಗಿಯೂ, ಕರುಣಾವಂತರಾಗಿಯೂ, ನಡೆಯುವತ್ತಬೇಕು. ತಮ್ಮಲ್ಲಿ ಯಾರಿಗಾದರೂ ಆಪತ್ತು ಸಂಭವಿಸಿದರೆ, ಅದು ತನಗೇ ಒದಗಿರುವ ದೆಂದರಿದು, ಅವರ ಪರಿಹಾರಕ್ಕಾಗಿ ಮನಸಾ ಯತ್ನಿಸಬೇಕು. ಎಲ್ಲರೂ ತನ್ನ ಸ್ವರೂಪವೇ ಅಥವಾ ತಾನೇ ಎಂದು ತಿಳಿದು ದುಡಿಯಬೇಕು. ಇಂತು ನಿರಂತರವೂ, ಎಲ್ಲ ರೀತಿಯಿಂದಲೂ, ಸಮಾನತೆಯನ್ನು ಪ್ರಸ್ಥಾ ಪಿಸುವದೇ, ಈ ಕಾಲಲೋಚನನ ಕರ್ತವ್ಯವಾಗಬೇಕು. ಇದೇ ಈತನ ಲಿಂಗ ಪೂಜೆಯು. ಈ ಮೇರೆಗೆ ನಡೆಯುವಂತೆ, ಶಿವನು ಆ ಭಕ್ತ ನನ್ನು ಪ್ರೇರಿಸಿದರೆ, ಸರ್ವಕಾಲ ಸಂಹಾರವ ಮಾಡಿಸುತ್ತಿದ್ದ ಹಾಗಾ ಯಿತು. ಈ ಸ್ಥಿತಿಯನ್ನು ಪ್ರಾಣಲಿಂಗಿಯೊಡನೆ ಗಮನಿಸುವದು ಹಿತ.

( ೬ ) "ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮಗೆ ಏರಲು ವಾಹನವಾಗಲೆಂದಿರಿಸಿ ಕೊಂಡಿದ್ದಿರಯ್ಯಾ"—

ಇಲ್ಲಿ ಮೊದಲು ಗಣೇಶ್ವರ ಹಾಗೂ ವೃಷಭೇಶ್ವರ ಇವೆರಡರ ಅರ್ಥವನ್ನು ಲಕ್ಷದಲ್ಲಿ ತರಬೇಕು. ಗಣ+ಈಶ್ವರ=ಗಣೇಶ್ವರ ಅಂದರೆ ಶಿವ

ಭಕ್ತರ ಸಮಾಜದ ಪ್ರಮುಖ, ಇಲ್ಲವೇ ಶಿವಭಕ್ತ ಶ್ರೇಷ್ಠ. ವೃಷಭ ಗಣೇಶ್ವರ ಎಂದರೆ ವೃಷಭನೆಂಬ ಹೆಸರಿನ ಗಣ ಶ್ರೇಷ್ಠ (ಶರಣ). ಇಲ್ಲಿ ಶಿವನು ತನಗೆ ಏರಲು, ವೃಷಭ ಗಣೇಶ್ವರನನ್ನು, ವಾಹನವಾಗಿ ಮಾಡಿಕೊಂಡಿರುವನು. ಶಿವನು ಮೊದಲೇ ಜಗತ್ತಿನಲ್ಲಿ ಪವಿತ್ರನೂ, ನಿರ್ಮಲನೂ ಆದವನು. ಇಂತಹನು ತನಗೆ ವಾಹನಮಾಡಿಕೊಳ್ಳಬೇಕಾದರೆ, ಅದಾದರೂ ಅಂತಹ ಪವಿತ್ರವಾದುದೇ ಇರಬೇಕಾಗುವದು. ಇನ್ನು ಈ ವಿಧದ ವಸ್ತುವು ಧರ್ಮವಲ್ಲದೆ, ಬೇರೊಂದಿರಲಾರದು. ಅದ ಕಾರಣ, ಅತ್ಯಂತ ಪರಿಶುದ್ಧವಾದ ಧಾರ್ಮಿಕ ಭಾವಯುಕ್ತರನ್ನೇ ದೇವನು ಪ್ರೀತಿಸುವದು ಸಾಹಜಿಕ. ಇವರೇ ಆತನ ಪರಮ ವತ್ಸಲತೆಯುವರು. ಇವರೇ ಆತನ ವಾಹನವಾಗಲು ಯೋಗ್ಯರು. ಇವರಲ್ಲಿಯೇ ಆತನು ಅಧಿಷ್ಠಿತನಾಗಿರುವನು.

> "ಆದಿಯಲ್ಲಿ ವೃಷಭನಾವು । ಅನಾದಿಯಲ್ಲಿ ನಂದಿನಾವು ॥
> ಮೇದಿನೀ ಕಲ್ಯಾಣದಲ್ಲಿ ಬಸವನಾಮದೀ ॥

ಎಂದು ಶ್ರೀ ಬಸವೇಶ್ವರರನ್ನು ಕೊಂಡಾಡಿರುವರು. ಅನಾದಿಯಲ್ಲಿ (ಜಗದುತ್ಪತ್ತಿಯ ಪೂರ್ವದಲ್ಲಿ) ನಂದಿಯೂ ಆದಿಯಲ್ಲಿ (ಜಗವಾದಮೇಲೆ) ವೃಷಭನೂ, ಶಿವನ ವಾಹನವಾಗಿರುವರು ಈ ನಂದಿಯ ಅವತಾರವೇ ಕಲ್ಯಾಣ ಬಸವೇಶ್ವರನೆಂದು ಜನರು ನಂಬಿರುವದರಿಂದ ಅವನೂ ವಾಹನನೇ ಆಗುವನು. ನಂದೀಶ ವೃಷಭ ಬಸವೇಶ್ವರರೆಲ್ಲರೂ, ಧರ್ಮಸ್ವರೂಪರೇ ಇರುವರು. ಆದುದರಿಂದ ನಂದಿ ಎಂದು ಎಲ್ಲೆಲ್ಲಿಯೂ ಪರಿಚಿತವಾಗಿದೆ. ಈ ಧರ್ಮವು ಯುಗಾನುಸಾರವಾಗಿ ಬದಲಾಗುವದರಿಂದ, ಧರ್ಮಕ್ಕೆ ನಾಲ್ಕು ಚರಣಗಳು ಕಟ್ಟಲ್ಪಟ್ಟಿವೆ. ವಾಹನಕ್ಕೆ ನಾಲ್ಕು ಕಾಲುಗಳಿದ್ದರೆ ಮಾತ್ರ ಅದು ಏರಲು ಪ್ರಶಸ್ತವಾಗುವದೆಂಬುದು ಸಾಹಜಿಕ. ಜಗತ್ತಿನಲ್ಲಿ ಧರ್ಮವು ಬಹು ಆನಂದ ಸ್ವರೂಪ. ಅದುದರಿಂದ ಅದಕ್ಕೆ ನಂದಿ (ನಂದೀಶ್ವರ) ಎಂದು ಹೆಸರಿಸಿರುವರು.

ಈ ಆರನೆಯ ಸ್ಥಿತಿಗೆ ಬಂದ ಶಿವಭಕ್ತನು (ಗಣೇಶ್ವರನು) ಕೇವಲ ಧಾರ್ಮಿಕನಾಗಿ ಶೋಭಿಸುವನು. ಲಿಂಗಾಂಗಿಯು ಮನುಷ್ಯರನ್ನಷ್ಟೇ ಅಲ್ಲದೆ ಎಲ್ಲ ಪ್ರಾಣಿಗಳನ್ನೂ ವನಸ್ಪತಿ ಮೊದಲಾದವನ್ನೂ ಸಹ ಪರ

ನಾತ್ಮ ಸ್ವರೂಪವಾಗಿ ಭಾವಿಸುವನು. ಆದಕಾರಣ ಇಂತಹ ಪರಿಶುದ್ಧ ಸಾತ್ವಿಕ ಧರ್ಮಾತ್ಮನೇ ಶಿವನ ಆವಾಸಕ್ಕೆ ತಕ್ಕವನಾಗುವನು. ಅಂತೆಯೇ ಅವನು ಶಿವನ ವಾಹನವಾಗುವನು. ವೃಷಭ ಗಣೇಶ್ವರನಾಗುವನು. ಈತನನ್ನು ಶರಣಸ್ಥಿತಿಗೆ ಹೋಲಿಸಬೇಕು.

(೭) ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಒಕ್ಕುದ ಮಿಕ್ಕುದಕ್ಕೆ ಯೋಗ್ಯನಾಗಲೆಂದು, ಇರಿಸಿಕೊಂಡಿಪ್ಪೆಯ್ಯ" ಬಸವೇಶ್ವರ (ಬಸವರ ವಿಷಯವಾಗಿ ಮೇಲೆ ಕೆಲ ವಿಷಯವು ಬಂದಿದೆಯಷ್ಟೇ! ಈತನು ಕರ್ನಾಟಕದಲ್ಲಿ ವೀರಶೈವ ಧರ್ಮದ ಉದ್ಧಾರ ಮಾಡಿದನು. ಆದಕ್ಕೆ ಕಲ್ಯಾಣ ಮಂಟಪದ ದ್ವಾರವಾಗಿ, ಈಗಿರುವ ಬಹು ಉಜ್ವಲ ಸ್ವರೂಪ ಕೊಟ್ಟನು. (ಮೊದಲು ಲಕುಲೀಶ, ಕಾಳಾಮುಖ, ಪಾಶುಪತರು ಲಿಂಗಧಾರಿಗಳಾದರೂ, ಉಪನಯನ ಹೊಂದಿ, ಅದನ್ನು ಮುಖ್ಯಿಸಿಬಿಡುತ್ತಿದ್ದರು. ಅವರ ಲಿಂಗದ ಭಾವನೆಗಳಾದರೂ, ಅತ್ಯುನ್ನತಾವಸ್ಥೆಗೆ ಮುಟ್ಟಿದವುಗಳಲ್ಲ. ಆರಾಧ್ಯರೂ ಸಹ ಇಂತಹರೇ! ಆ ಲಕುಲೀಶಾದಿಗಳ ಅವಶೇಷರೇ ಇವರು. ನಮ್ಮ ಗುರುಗಳೆಂದು ಹೇಳಿಕೊಳ್ಳುವ ಆಯ್ಯಾಚಾರಿಗಳಾದವರೂ ಅವರ ಹೆಸರುಬಿದ್ದವರಾದವರು) ತಾನು ಕೇವಲ ದ್ವಿತೀಯ ಶಂಭುವೆನ್ನಿಸಿಕೊಂಡು ತನ್ನ ಅನುಯಾಯಿಗಳನ್ನು ಲಿಂಗಾಂಗ ಸಾಮರಸ್ಯಪಡೆವಂತೆ ಸಿದ್ಧಿದನು. ಚನ್ನಬಸವಾದಿಗಳಿಂದ ಷಟ್‌ಸ್ಥಳ ಜ್ಞಾನ ಬೆಳಗಿಸಿದನು. ಆ ಜ್ಞಾನದ ಬಲದಿಂದ, ಲಿಂಗಧಾರಿಗಳು ತಾವು ಸ್ವತಃ ಪ್ರಸಾದ ಸ್ವರೂಪರಾಗುವದಲ್ಲದೆ ತಾವು ಇಹದಲ್ಲಿರುವಾಗ ಸ್ವೀಕರಿಸುವ ಪ್ರತಿಯೊಂದು ವಸ್ತುವನ್ನೂ, ಪ್ರಸಾದ ಸ್ವರೂಪಕ್ಕೆ ತಂದುಕೊಂಡೇ ಕೈಕೊಳ್ಳುವರು. ಇಡೀ ಜಗವನ್ನೇ ಪ್ರಸಾದ (ಶಿವ) ಸ್ವರೂಪಕ್ಕೆ ಐಕ್ಯಗೊಳಿಸುವರು. ಜಗವೇ ಶಿವನ ಒಕ್ಕ (ಉತ್ಪನ್ನ ಮಾಡಿದ) ಪ್ರಸಾದವು ಮಿಕ್ಕ ಪ್ರಸಾದವೆಂದರೆ, ಜಗವಾಗಿ ಉಳಿದ ಅನಂತವಾದ ಸ್ಥಲರೂಪಿ ಸೂಕ್ಷ್ಮರೂಪಿ ಮಹಾವಸ್ತುವು "ಈ ಒಕ್ಕು ಮಿಕ್ಕುದೆಲ್ಲ, ತನ್ನ ಸ್ವರೂಪವೇ" ಎಂದು ಲಿಂಗವಂತ ಭಕ್ತನು, ತತ್ ಸ್ವರೂಪವಾಗುವದರಿಂದ, ಅವನು ಒಕ್ಕು ಮಿಕ್ಕುದಕ್ಕೆ ಯೋಗ್ಯನಾಗಲೆಂದು, ಕೂಡಲ ಸಂಗಮನು ಇರಿಸಿ

ಕೊಂಡಿರಲು, ತಕ್ಕವನಾಗುವನು. ಈ ಸ್ಥಿತಿಯು ಐಕ್ಯ ಸ್ಥಳವನ್ನು ಹಿಂಬಾಲಿಸುವುದೆಂಬುದು ತಾನೇ ತೋರಿಬರುತ್ತಿದೆ.

" ಇದು ಕಾರಣ. ಕೂಡಲ ಸಂಗಮ ದೇವಾ, ನೀವು ಬರಿಸಿದ ಭವಾಂತರದಲ್ಲಿ ಬರುತಿರ್ದೆನಯ್ಯಾ । " ಈ ವಚನವು ಬಸವೇಶ್ವರ ವಚನ ೭ ದಲ್ಲಿ ಪಿಂಡ ಜ್ಞಾನ ಸ್ಥಳದೊಳಗೆ ಮೂರನೆಯದಾಗಿರುತ್ತದೆ.

# ಪ್ರಣವ

( ಲೇಖಕರು-ಶ್ರೀ ಸಿ. ನಾ. ಮಹಾಂತಣ್ಣವರ. ಹೊಸೂರು )



ರಾತ್ರಿಯಲ್ಲಿ ಮಾನವನು ಮಲಗುವಾಗ ಘಟಾಕಾಶವೂ ಮಠಾಕಾಶವೂ ಮಹದಾಕಾಶವೂ ಸ್ತಬ್ಧವಾಗಿ, ಹಗಲಿನ ಕಲಕಲಾಟವೂ, ಸಂಸಾರದ ಸೀಕಲಾಟವೂ ಜಗದ ಜಂಝಾಟವೂ ಇಲ್ಲದಂತಾಗಿ, ಶರೀರದಲ್ಲಿ ಶಾಂತಿರಸವು ಉಕ್ಕಿ, ಸ್ವಪ್ನ ಸುಷುಪ್ತ್ಯಾವಸ್ಥೆಗಳು ದಕ್ಕಿ, ನಿದ್ರಾಂಗನೆಯೊಳು ವಿರಮಿಸಿ, ಹಗಲು ಹೊಂದಿದ ದಣಿವನ್ನು ದಾಟಿ, ಪ್ರಭಾತಕಾಲದೊಳು ನವಚೇತನಾ ಶಕ್ತಿಯಿಂದ ಉಲ್ಲಾಸಿಯಾಗಿ, ಕೋಳಿ ಕೂಗದ ಮುನ್ನ ಎದ್ದು, ತನ್ನ ಆನಂದೋದ್ರೇಕವು ಉಕ್ಕಿ ಸಾನುರಾಗದಿಂ ಸ್ವಾನುಭವದ ಪದಗಳನ್ನು ಹಾಡುತ್ತ ಏಳುವನು. ಆಗ ನಾದಾತ್ಮನಾದ ನಂದಿವಾಹನನನ್ನು ಸ್ತುತಿಸುತ್ತ ನಿತ್ಯ ನೇಮಾದಿಗಳ ಕ್ರಿಯಾ ವ್ರತಗಳನ್ನು ಆಚರಿಸಲು ಅಣಿಯಾಗುವನು. ಇಷ್ಟರಲ್ಲಿ ೫ ಹೊಡೆಯಲು ಕೋಳಿಗಳ ಕೂಗೂ, ದೇವಾಲಯದ ಝಾಂಗಟೆ ಘಂಟೆ ನಗಾರಿ ಮೊದಲಾದ ವಿಧಾನಗಳ ನಾದವೂ, ಬರಬರುತ್ತ ಹಕ್ಕಿಗಳ ಕಲಕಲಾಟದ ನಾದವೂ, ಮಕ್ಕಳನ್ನು ಪ್ರೇಮಪೂರ್ವಕವಾಗಿ ಎಬ್ಬಿಸಿ, ನಿದ್ದೆಯ ಮಬ್ಬನ್ನು ಓಡಿಸಿಬಿಡಿಸುವ ತಾಯಿತಂದೆಗಳ ನಾದವೂ, ನಲಿಯುತ್ತ ಎಲ್ಲ ಮನೆ ಮಠ ಅಂಗಡಿ ಮುಂತಾದ ಕಡೆಗೆಲ್ಲ ಒಂದಿಲ್ಲ ಒಂದು ನಾದವು ನಿಲ್ಲದೆ ಚಲ್ಲಾಟವಾಡುವದು. ನಾಮ ರೂಪ ಕ್ರಿಯಾದಿಗಳಿಂದ ಕೂಡಿದ ಸಚೇತನಾ ಚೇತನಾತ್ಮಕವಾದ ಈ ವಿಶ್ವವು, ನಾದಮಯವೇ ಎಂಬ ಭಾಸವಾಗುವದು. 'ಉಸುರೊಳಡಗಿರ್ದ ಚೈತನ್ಯವೆಂಬಂತೆ ಶ್ವಸನ ಉಚ್ಛ್ವಸನ ಕ್ರಿಯೆಗಳಿಂದ ಸರ್ವ ಪ್ರಾಣಿಗಳಲ್ಲಿಯೂ ಸೋಹಂ ಎಂಬ ನಾದವು, ಅನೈಚ್ಛಿಕವಾಗಿ ಸದೈವ ಇರುವದು. ಇದಲ್ಲದೆ ಮಾನವಕೃತ ಯಂತ್ರತಂತ್ರಾದಿಗಳ ನಾದವೂ ಕಲಾಕೌಶಲ್ಯಗಳ ಕ್ರಿಯಾನಾದವೂ ಪಶುಪಕ್ಷಿ ಮಾನವರಲ್ಲಿ ಪರೇ, ಪಶ್ಯಂತಿ, ಮಧ್ಯೇ ವೈಖರಿಗಳೂ ವಿಕಸಿತವಾಗುವದನ್ನು ವಿಶೇಷವಾಗಿ ಕೇಳುತ್ತೇವೆ. ನಾಭಿಗೆ ಬರಲು ಪರೆ, ಮನಸಿನ ನೆನಹಿಗೆ ಬರಲು ಅದು ಪಶ್ಯಂತಿ,

ಕಣ್ಣಿನ ಕೊನೆಗೆ ಬರಲು ಅದು ಮಧ್ಯಮೆ, ತನುವಿಗೆ ಸೋಂಕಲು ಅದು ವೈಖರಿ.

ಷಟ್ ಸ್ಥಲಗಳಲ್ಲಿ ಆಧಾರಾದಿ ಆಗ್ನೇಯ ಪರ್ಯಂತ ವಿಚಾರಿಸಲು, ನಾದಗಳಲ್ಲಿ ಭ್ರಮರ, ವೀಣೆ, ಘಂಟಾ, ಭೇರಿ, ಮೇಘ ಪ್ರಣವ ನಾದಗಳ ಭೇದಗಳು ತನು ಮನೋಭಾವಗಳಿಂದ ವಿಭೇದಿಸಲ್ಪಡುತ್ತವೆ. ಬಾನ ನಾದಗಳೇ ಇಂತಿ ಭಾವ ಮನ ತನುಗಳಿಂದ ಉದ್ಭವಿಸಿ, ತಾರಕ ದಂಡಕ, ಕುಂಡಲ, ಅರ್ಧಚಂದ್ರ, ದರ್ಪಣ ಜ್ಯೋತಿರಾಕೃತಿಗಳನ್ನೂ ಆಯಾ ವರ್ಣಗಳನ್ನೂ ಹೊಂದುತ್ತ ೫೧ ಅಕ್ಷರಗಳಾಗುವವು. ಈ ೫೧ ಅಕ್ಷರಗಳ ಮೂಲವಾದ ಪ್ರಣವ ನಾದವೇ ಆದಿನಾದವು. ಇದರ ಅವಯವಗಳೇ ತ್ರಿಪುಟಿಗಳಾದ ಅ, ಉ, ಮ, ಗಳೆಂಬ ಬೀಜಾಕ್ಷರಗಳು. ಶಿವ ಶಕ್ತ್ಯಾತ್ಮಕದಿಂದ "ಆತ್ಮನಾಂ ಪುತ್ರನಾಮಾಸಿ" ಎಂಬಂತೆ ಅ, ಉ, ಗಳಿಂದ ಮಕಾರವು ಉದ್ಭವಿಸುತ್ತದೆ. ಅಂತೂ ಏಕವೇ ದ್ವಂದ್ವಗಳಾಗಿ ಆ ದ್ವಂದ್ವಗಳ ಸಂಯೋಗವೇ ತೃತೀಯವಾಗುವದ. ಸೃಷ್ಟಿಯು ನೈಸರ್ಗಿಕವಾದ ನಿಜ ಸ್ವಭಾವವು. ಇದನ್ನೇ ಆಗಮಕಾರರ "ಆದೌ ಬ್ರಹ್ಮಪದಂ ಶುದ್ಧ ಮಾದಿವರ್ಣತ್ವ ಮಾಗತಂ" ಎಂಬ ಉಕ್ತಿಯಂತೆ ಸೃಷ್ಟ್ಯೋನ್ಮುಖವಾದ ಪರಶಿವನ ಇಚ್ಛಾಶಕ್ತಿಯಿಂದ ಶೋಭಿತವಾದ ಬಿಂದುವೇ ಪ್ರಣವವೆನಿಸುವದು. ಆ ಪ್ರಣವದಿಂದ ಅಕಾರಾದಿ ಳಕಾರಾಂತವಾದ ಅಕ್ಷರಗಳಾದವು. ಈ ಅಕ್ಷರಗಳ ಭೇದಗಳೇ ಸ್ವರ, ವ್ಯಂಜನ, ಅಯೋಗವಾಹಗಳು.

"ಆರಂಭದಲ್ಲಿ ಜಗತ್ತು ತಲೆದೋರದೆ ಇದ್ದಕಾಲದಲ್ಲಿ ನಿತ್ಯ ನಿರಂಜನ ಪರವಸ್ತುವು ಒಂದೇ ಇದ್ದು, ಅದು ನಿರಂಜನ ಪ್ರಣವವೆಂದು ಹೇಳಲ್ಪಡುತ್ತದೆ. ಅದರ ಚಿತ್ಕಳೆಗೆ ಶುದ್ಧ ಪ್ರಣಮವೆಂಬ ಹೆಸರು. ಈ ಶುದ್ಧ ಪ್ರಣಮದಲ್ಲಿ ಚಿತ್ತು ಉದಯವಾಗುತ್ತದೆ ಆ ಚಿತ್ತು ಸಚ್ಚಿದಾನಂದ ಸ್ವರೂಪವುಳ್ಳದಾಗಿ ಚಿತ್ಪ್ರಣಮವೆಂದೆನಿಸಿಕೊಳ್ಳುತ್ತದೆ. ಅದರಲ್ಲಿ ಚಿಚ್ಛಕ್ತಿಯು ಉದಯವಾಗುತ್ತದೆ. ಇದರಲ್ಲಿ ನಾದಬಿಂದು ಕಲೆಗಳು ಉಂಟಾಗುತ್ತವೆ. ಅಕಾರವೇ ನಾದವು. ಉಕಾರವೇ ಬಿಂದುವು ಮಕಾರವೇ ಕಳೆಯು. ಮತ್ತು ಚಿತ್‌ಶಕ್ತಿ ಈ ನಾಲ್ಕು ಒಂದಾದಲ್ಲಿ ಪ್ರಣವು ಅಂದರೆ ಓಂಕಾರವು ಉಂಟಾಗುತ್ತದೆ. ಈ ಪ್ರಣಮವು ತಾರಕ ದಂಡಕ ಕುಂಡಲ,

ಅರ್ಧಚಂದ್ರ, ಬಿಂದ್ವಾಕೃತಿಗಳೆಂದು ಐದು ಆಕೃತಿಗಳನ್ನೊಳಗೊಂಡಿದೆ. ಅವು ಅದರಲ್ಲಿ ಅಡಕವಾಗಿವೆ. ತಾರಕಾಕೃತಿಯಲ್ಲಿ ನಕಾರ ಜನನ, ದಂಡಕಾಕೃತಿಯಲ್ಲಿ ಮಕಾರ ಜನನ, ಕುಂಡಲಾಕೃತಿಯಲ್ಲಿ ಶಿಕಾರ ಜನನ, ಅರ್ಧ ಚಂದ್ರಾಕೃತಿಯಲ್ಲಿ ವಕಾರ ಜನನ, ಬಿಂದ್ವಾಕೃತಿಯಲ್ಲಿ ಯಕಾರ ಜನನ, ಈ ಪ್ರಕಾರ ಪಂಚಾಕ್ಷರಗಳ ಉತ್ಪತ್ತಿಯು. ಈ ಅಕ್ಷರಗಳಲ್ಲಿ ಓಂ ಪ್ರಣವುವು ಕೂಡಲು ಅದು ಶಿವಪಂಚಾಕ್ಷರೀ ಮಂತ್ರವೆಂದೂ ಅಥವಾ ಪ್ರಣವು ಪಂಚಾಕ್ಷರೀ ಮಂತ್ರವೆಂದೂ ಅಥವಾ ಷಡಕ್ಷರೀ ಮಂತ್ರವೆಂದೂ ಬೇರೆ ಬೇರೆ ಹೆಸರುಗಳಿವೆ ಎಂಬುದಾಗಿ ಶಿವಾನುಭವ ಶಬ್ದಕೋಶಗಾರರು ಸ್ಪಷ್ಟಗೊಳಿಸಿದ್ದಾರೆ

ವ್ಯವಹಾರದಲ್ಲಿ ಕುಂಬಾರರ ಗಡಿಗೆ ಮಡಿಕೆಗಳನ್ನು ಕೊಳ್ಳುವಾಗ ಚನ್ನಾಗಿ ಸುಟ್ಟ ಗಟ್ಟಿಮುಟ್ಟಾದ ಪಾತ್ರೆಯೆಂಬುದನ್ನು ಬಾರಿಸಿ ನೋಡಿ, ಖಣಗುಡುತ್ತಿದ್ದರೆ ಮಾತ್ರ ಕೊಳ್ಳುವೆವು. ಇದರಂತೆ ಟೆಂಗಿನಕಾಯಿಗಳನ್ನು ಕೊಳ್ಳುವಾಗ ಬಾರಿಸಿ ಅಗಳಾಡಿಸಿ ನೋಡಿ, ಠಣಾಯಿಸುತ್ತಿದ್ದರೇನೇ ಕೊಳ್ಳುವೆವು. ಅದರಲ್ಲಿ ಮಂದಸ್ವರವಿದ್ದರೆ, ಕೆಟ್ಟ ಕಾಯಿಯೆಂದು ತಿಳಿದು ತಟ್ಟನೆ ಒಗೆಯುವೆವು. ಇದರಿಂದ ನಾದವು ಆಯಾ ಪದಾರ್ಥಗಳ ಚೈತನ್ಯವನ್ನು ಬೀರುವದೆಂಬ ಭಾವನೆಯು, ಅನುಭವಸಿದ್ಧವಾದ್ದರಿಂದ ರೋಗಿಗಳ ವಾಗ್ಝರಿಯಲ್ಲಿ ದುಃಖ ದೌರ್ಬಲ್ಯಗಳ ನಾದವು, ನಂದಿಹೋಗುವ ದೀಪದಂತೆ, ದೃಷ್ಟಿ ಪಥದಲ್ಲಿ ಬಂದದ್ದಾದರೆ, ಡಾಕ್ಟರನು ರೋಗಿಯ ಹೀನಾವಸ್ಥೆಯನ್ನು ನೋಡಿ, ನಾಡ ನುಡಿಗಳ ನಾದಾನುಭವದಿಂದ ರೋಗಿಯು ಜೀವನಾತ್ಮಕ ಸ್ಥಿತಿಯನ್ನು ಅರಿಯುವನು. ಮೋಟಾರ ವಿಮಾನ, ವಿಧವಿಧದ ಎಂಜಿನ್, ರೇಲ್ವೆಗಳಲ್ಲಿ ಅವುಗಳನ್ನು ನಡೆಸುವವನಿಗೆ ಅವುಗಳ ಸಪ್ಪಳಗಳಲ್ಲಿ ವಿಷಮತೆಯು ಕಂಡುಬಂದರೆ ಕೂಡಲೆ ಅದರ ಕಾರಣಗಳನ್ನು ಅರಿತು, ದುರಸ್ತಮಾಡಲು ದುಡುಕುವನು. ಸಂಗೀತ ನಾಟಕ ಮುಂತಾದ ನಾಟ್ಯ ಕಲೆಗಳಲ್ಲಿ, ಅಪಸ್ವರದ ವಾದ್ಯವನ್ನು ಕೂಡಲೆ ಕಂಡುಹಿಡಿದು ಸರಿಗೊಳಿಸಬೇಕಾಗುವದು. ಈ ನಾದಗಳಲ್ಲಿ ಸಪ್ತ ಸ್ವರಗಳೂ ೮೪ ಲಕ್ಷ ವಿಭೇದ ಸ್ವರಗಳೂ, ರಾಗ ರಂಜನೆಗಳೂ, ಇದ್ದು ಆಯಾ ಸಂಗೀತಗಳಲ್ಲಿ ಪ್ರವೀಣರಾದ ಗವಾಯಿಗಳಿಗೆ ಅವಗತವಾಗುವವು. ಅಂತೂ ನಾದಗಳನ್ನು ಕೇಳಿದಕೂಡಲೆ ಭಾವಾಂತರಗಳು

ಒದಗಿ, ಕರುಣಾಮಯ, ಶೋಕಮಯ ಭಯಾನಕ, ಶೃಂಗಾರಕ, ಆನಂದಮಯ, ಭಕ್ತಿಮಯ, ಶಾಂತಿಮಯ, ವೀರಮಯ, ಅದ್ಭುತ ಮಯಗಳು ಆಯಾಯ ಸನ್ನಿವೇಶಗಳಲ್ಲಿ ಆಯಾಯ ರಸಗಳು ಉಕ್ಕಿ ಮಿಕ್ಕಿ ಮಿನುಗುವವು.

ನಮ್ಮ ವೀರಶೈವ ಶಿವಶರಣರ ಪಾರಮಾರ್ಥಿಕ ಪ್ರಪಂಚದಲ್ಲಿ, ನಾದಾಂಗವು ಪ್ರಥಮಾಂಗವಾಗಿ, ಸಾಧಾಂಗವೂ, ಮಹಿಮಾಂಗವೂ, ಪ್ರೇಮಾಂಗವೂ, ವೀರಾಂಗವೂ, ಭಕ್ತ್ಯಂಗವೂ, ಶಿವಾಂಗವೂ, ಶಕ್ತ್ಯಂಗವೂ, ಕ್ರಿಯಾಂಗವೂ, ಜ್ಞಾನಾಂಗವೂ, ಶಾಂತಿ ಶಾಂತ್ಯಾತೀತಾಂಗವಾಗಿ ಕಂಗೊಳಿಸುವದು. ಹಸುಗೂಸುಗಳು ಅಳುವಾಗ ಆಡುವಾಗ, ಅಂ ಎಂಬ ಸ್ವರವೂ, ಆಡಿಪಾಡಿ ಪವಡಿಸುವಾಗ ಉಂ ಎಂಬ ಸ್ವರವೂ, ಹಸಿದಾಗ ಮಂ ಎಂಬ ಸ್ವರವೂ, ಉಂಟಾಗುವವು. ಅಂದ ಬಳಿಕ ಸೃಷ್ಟಿಯ ನೈಸರ್ಗಿಕವಾದ ಸ್ವರಗಳಾದ ಅ, ಉ, ಮ ಗಳೇ ಬೀಜಾಕ್ಷರಗಳೆಂದೂ ಓಂ ಪ್ರಣಮದ ಅವಯವಗಳೆಂದೂ, ತತ್, ತ್ವಂ, ಅಸಿ ಪದಗಳ ಅರ್ಥಗಳೆಂದೂ, ಓಂ, ತತ್, ಸತ್ ಎಂದೂ ಪರತತ್ವದ ಅರಿವನ್ನು ಅರುಹುವವು. ಹಾಗು ಅಕಾರವೇ ನಾದ, ಉಕಾರವೇ ಬಿಂದು ಮಕಾರವೇ ಕಳೆಗಳೆಂದು ಹೇಳಿಸಿಕೊಳ್ಳಲ್ಪಟ್ಟಿರುವವು.

“ಓಂಕಾರವೆಂಬ ಪ್ರಣಮದಲ್ಲಿ ಅಕಾರ ಉಕಾರ ಮಕಾರ ಈ ಮೂರು ಬೀಜಾಕ್ಷರಗಳು. ಅಕಾರವೇ ನಾದ ಉಕಾರವೇ ಬಿಂದು, ಮಕಾರವೇ ಕಳೆ- ಮತ್ತಂ ಅಕಾರವೇ ರುದ್ರ, ಉಕಾರವೇ ಈಶ್ವರ, ಮಕಾರವೇ ಸದಾಶಿವ ಇಂತೀ ಅಕಾರ ಉಕಾರ ಮಕಾರಕ್ಕೆ ನಾದ ಬಿಂದು ಕಳೆಯೇ ಆಧಾರ. ಆ ನಾದ ಬಿಂದು ಕಳೆಗೆ ಪ್ರಕೃತಿಯೇ ಆಧಾರ, ಆ ಪ್ರಕೃತಿಗೆ ಪ್ರಾಣವೇ ಆಧಾರ. ಆ ಪ್ರಾಣಕ್ಕೆ ಲಿಂಗವೇ ಆಧಾರ” ಎಂಬದಾಗಿ ಶಿವಶರಣರ ಅನುಭವ.

ಇದನ್ನರಿತ ಶ್ರೀ ದೇವರ ದಾಸಿಮಾರ್ಯರು, “ಪ್ರಾಣನ ಕಳೆ ಪ್ರಕೃತಿಯಲ್ಲಿ ಅಡಗಿ ಪ್ರಕೃತಿಯ ಕಳೆ ಪ್ರಾಣನಲ್ಲಿ ಅಡಗಿ, ಪ್ರಾಣನ ಕಳೆಯು ಪ್ರಕೃತಿಯ ಕಳೆಯು ಲಿಂಗವೆಂದರಿದು, ಲಿಂಗೈಸಿ ಅನುಭವಿಸಬಲ್ಲವರ

ಲೆಂಕ ನಾನಾಗಿಪ್ಪೆನಯ್ಯ ರಾಮನಾಥಾ" ಎಂದೂ, "ಬಿಂದುವಿನೊಳಗೆ ನಾದ ಕೊಂದಿರ್ಪ ಭೇದವನು, ಹೊಂದಿಯೂ ಹೊಂದದಿರ್ಪ" ಭೇದವನು ಲಿಂಗದೊಳಗೆ ಶರಣ ಸಂದಿರ್ಪ ಭೇದವನು, ಲೋಕದ ಸಂದೇಹಿಗಳೆತ್ತ ಬಲ್ಲರೈ ರಾಮನಾಥಾ ಎಂದೂ ಕಳೆ ಬಿಂದು ನಾದಾನುಭವಗಳನ್ನು ವ್ಯಕ್ತಪಡಿಸಿದ್ದಾರೆ.

ಸಬೀಜವುಳ್ಳ ತೆಂಗಿನಕಾಯಿಯನ್ನು ಒಬ್ಬ ತೋಟಿಗನು ತನ್ನ ತೋಟದಲ್ಲಿ ಹೂಳಿ ಕಾಲಕಾಲಕ್ಕೆ ಪರಾಮರಿಕೆಯನ್ನು ಮಾಡುತ್ತಿದ್ದರೆ ಅದರ ಅಂಕುರವು ಭೂ ಜಲಾಶ್ರಯಗಳಿಂದ ಎರಡಾಗಿ ಒಡೆದು, ಒಂದು ಅಧೋಮುಖವಾಗಿ, ಮತ್ತೊಂದು ಊರ್ಧ್ವಮುಖವಾಗಿ ಬೆಳೆಬೆಳೆದು, ಸುತ್ತಲಿನ ವೃಕ್ಷಗಳಿಂದ ಎತ್ತರಾಗುತ್ತ ಕೆಲವರ್ಷಗಳಲ್ಲಿ ಬೆಳೆಗೆಯು ನಿಂತು ಫಲಪ್ರದವಾಗಲು ಸಿದ್ಧವಾಗಿ, ಮಾನವನ ತಲೆಯಾಕಾರದ ತೆಂಗುಗಳ ಗೊಂಚಲುಗಳನ್ನೀಯಲು ತಯಾರಾಗಿ ಮೊದಲು ಹೂವಾಗಿ ಹೀಚುಗಳಿಂದ ದೊಡ್ಡಕಾಯಿಗಳಾಗುವ ವರೆಗೆ, ಹಸರು ಬಣ್ಣದ ಹೊದಿಕೆಯಿಂದ ಜುಟ್ಟುಗಳಿಂದೊಳಪಟ್ಟು ಎಳನೀರ್ಗಳಿಂದ ತುಂಬಿ ತುಳುಕುವದು. ಬರಬರುತ್ತ ಆ ಎಳನೀರ್ಗಳಿಂದ ಜುಟ್ಟಿನೊಳಭಾಗದಲ್ಲಿ ಪರಟೆಯೂ, ಪರಟೆಯ ಒಳಭಾಗದಲ್ಲಿ ಕೊಬ್ಬರಿಯೂ ಉಂಟಾಗಿ ಕೊಬ್ಬರಿಯ ಒಳಭಾಗವು ಗೋಲಾಕಾರದ ಫಲಾಕಾಶವೇ ಮಹದಾಕಾಶವೆನ್ನುವಂತೆ, ಆ ಅವಕಾಶದಲ್ಲಿ ಚಿದಮೃತಸ್ವರೂಪವಾದ ಸುಮಧುರವಾದ ತೆಂಗಿನ ಕ್ಷೀರ ಗೋಚರವಾಗುವದು. ಈ ಸಂದರ್ಭದಲ್ಲಿ ನಿರಾಕಾರದೊಳು ಆಕಾರವನ್ನುಂಟು ಮಾಡುವ ಶಕ್ತಿಯೇ ಚಿತ್, ಬಿಂದುರೂಪವಾದ ತೆಂಗಿನ ಪರಟೆ, ಕೊಬ್ಬರಿ ನೀರಿನ ಅವಕಾಶಗಳು ನಾದಬಿಂದು ಕಳೆಗಳು. ಈ ನಾಲ್ಕು ಒಂದಾಗಲೇ ತೆಂಗಿನಕಾಯಿಯ ಆಕಾರವು ತಲೆದೋರಿತು. ಇದಕ್ಕನುಸರಿಸಿ ಶ್ರೀ ಪ್ರಭುದೇವರು "ಆಧಾರಮಂಬಲಿದು ಊರ್ಧ್ವಮುಖದಲಿ ನಿಂದು। ಮೆಯಿಯ ಕಳೆಮೊಳೆಯನೊಂದು ಮಾಡಿ॥ ಭೇದಾದಿ ಭೇದದ ಮೂಲ ಪ್ರಣವಳಿದು ನಾದ ಬೆಳಗಿನ ಕಳೆಯ ನೋಡಿಕಂಡೆ"॥ ಎಂಬದಾಗಿ ತಮ್ಮ ಮಂತ್ರಗೋಪ್ಯದಲ್ಲಿ ಮನನಗೊಳಿಸಿದ್ದಾರೆ.

ಮಾನವನು ತನ್ನ ಜೀವನಕ್ಕಾಗಿ ಅಡವೀ ಕಡಿದು ಹೊಲಮಾಡಿಕೊಂಡಿರುತ್ತಾನಷ್ಟೇ? ಆ ಹೊಲದಲ್ಲಿ ಬೇಸಿಗೆಯೊಳು ರಂಟೆ ಹೊಡೆದು

ಒಂದು ಅಡ್ಡಮಳೆಯಾಗಿ ಹೆಂಟೆ ಕರಗಲು, ಎರಡು ಮೂರು ಸಾರೆ ಹರಗಿ ಮಣ್ಣು ಮಾಡಿ ಬಿಡುವನು. ಆಗ ಸೂರ್ಯನ ಬೇಸಿಗೆಯ ಉಷ್ಣತೆಯೂ ಪ್ರಕಾಶವೂ, ಗಾಳಿಯೂ. ಆ ಮಣ್ಣನ್ನು ವಿಭೇದಿಸಿ ಅರ್ಥಾತ್ ಮಣ್ಣಿನ ಪ್ರತಿಯೊಂದು ಕಣದಲ್ಲಿ ಪರಿಣಮಿಸಿ, ಆ ಅಣುರೂಪವಾದ ಮಣ್ಣಿನಲ್ಲಿ ನವಚೈತನ್ಯವನ್ನುಂಟು ಮಾಡುವವು. ಇದಲ್ಲದೆ ಅದಕ್ಕೆ ಬೇಕಾದ ಎಲುವಿನ ಪುಡಿಯಾದ ಗೊಬ್ಬರದ ಸಂಸ್ಕಾರವು ಮಣ್ಣಿನ ಪ್ರತಿಯೊಂದು ಕಣದೊಡನೆ ಸಮರಸವಾಗಲು, ನವಚೈತನ್ಯದ ಶಕ್ತಿಯು ಮತ್ತಿಷ್ಟು ಬಲಿಯುವದು. ಮಾನವ ಶರೀರವು ರಸ ರುಧಿರ ಅಸ್ಥಿಮಾಂಸಾದಿಗಳಿಂದ ಆಗಿರುವದೆಂದೂ ಇವೆಲ್ಲ ಅಷ್ಟಾವರಣಗಳೇ ಎಂದೂ ಅಸ್ಥಿಯು ಆ ಸ್ಥೂಲ ಅಷ್ಟಾವರಣಗಳಲ್ಲಿ ಲಿಂಗವೆಂದೂ ಶಿವಶರಣರು ಕಂಡು ಹಿಡಿದಿದ್ದಾರೆ. ಅಂದಬಳಿಕ ಮಣ್ಣಿನ ಪ್ರತಿಯೊಂದು ಕಣವು ಅಣುರೂಪವಾಗಿ ಅಣುಲಿಂಗವಾಗಿ ಒಕ್ಕಲಿಗನಿಗೆ ಫಲಪದಗಳ ಅನುಗ್ರಹವನ್ನೀಯಲು ನಿಲ್ಲುವದು. ಇತ್ತ ಶಿವನ ಪಂಚಕೃತ್ಯಗಳಿಗೀಡಾದ ವಿಶ್ವಾತ್ಮರುಗಳು ಶಿವನ ರುದ್ರಾವತಾರದಿಂದ ಶರೀರಗಳು ಲಯವಾಗಿ, ಈಶ್ವರನ ತಿರೋಧಾನ ಕೃತ್ಯದಿಂದ ವಾಯುರೂಪಾಗಿ, ಕಾರ್ಮೋಡವನ್ನಾಶ್ರಯಿಸಿ, ಸದಾಶಿವನ ಅನುಗ್ರಹ ಶಕ್ತಿಯಿಂದ ಮೋಡಗಳಲ್ಲಿಯ ಮಿಂಚು ಗುಡುಗು ಗರ್ಜನೆಗಳಿಂದ, ಮೋಡವೇ ಆ ಆತ್ಮರುಗಳನ್ನೊಳಗೊಂಡು, ಮಳೆಯ ಹನಿಗಳಾಗಿ ಭೂಮಿಯ ಹದಮಾಡಿದ ಹೊಲದಲ್ಲಿ ಬೀಳಲು ಅಣುಗಳು ಹಸಿಯಾಗಿ ಬೀಜಬಿತ್ತಲು, ಆ ಹೊಲವು ಯೋಗ್ಯವಾಗುವದು. ನಂತರ ಸ್ನಾನಾದಿ ಭಕ್ತನಾದ ಒಕ್ಕಲಿಗನು ಆ ಆದಿರೂಪವಾದ ಅತಿ ಸಣ್ಣದಾದ ಸಾವಿಯ ಬೀಜಗಳನ್ನು ಬಿತ್ತಿ ಕಸಕಡ್ಡಿ ತೆಗೆಯುತ್ತ ಎಡೆಹೊಡೆಯುತ್ತ ಸ್ವಾಂಬರಿಸುತ್ತ ಹೋಗಲು, ಸಾವಿಯ ಹೊಡೆ ಹೊರಬಿದ್ದು ಹೂಗಳು ಕಾಳುಗಾಳು, ಬೆಳಸಿಗಾಳು, ಹುರಿಗಾಳಾಗಿ ಒಣಗಿದ ಕೂಡಲೆ ಕೊಯ್ದು ಸಾವಿಯ ಭತ್ತಗಳನೊಕ್ಕಿ ಮನೆಗೆ ತಂದು ಕುಟ್ಟಿ, ಸಾವಕ್ಕಿಯ ಅನ್ನವನ್ನು ಅನುದಿನದೊಳುಣ್ಣುತ್ತ ಉಬ್ಬುವನು.

ಇದರಲ್ಲಿ ಸಂಪೂರ್ಣ ಬೀಜವೇ ಓಂಕಾರವು. ಅದು ಬಿತ್ತಲ್ಪಟ್ಟ ಬಳಿಕ ಪೂರ್ವರೂಪವನ್ನು ಬದಲಿಸಿ ತನ್ನೊಳಗೆ ಆತ್ಮರುಗಳ ರುದ್ರ, ಈಶ್ವರ, ಸದಾಶಿವಾಧಿದೇವತೆಗಳ ಲಯ ತಿರೋಧಾನ ಅನುಗ್ರಹಗಳ

ಮಳೆಯ ಹನಿಗಳ ರಸರೂಪವನ್ನು ಒಳಗೊಂಡು ಬೆಳೆಬೆಳೆದು ಒಂದು ಜದಿಂದ ಸಾವಿರಾರು ಬೀಜಗಳ ಹೊಡೆಯಾಗಿ, ವಿಶ್ವಾತ್ಮರನ್ನು ನೋದ ಪಡಿಸುವದು. ಈ ಪ್ರಸಂಗದಲ್ಲಿ, ರುದ್ರರೂಪಾದ ಪೂರ್ವಾ ಗರದ ವಿಕಾರವೇ ಅಕಾರವು. ಆ ವಿಕಾರದ ತಿರೋಧಾನವೇ ಉಕಾರವು ವಿಕಾರದ ಅನುಗ್ರಹ ರೂಪವೇ ಮಕಾರವು. ಒಟ್ಟಿನಲ್ಲಿ ಅ+ಉ ಕೂಡಿ ಆಗಿ ಮುಂದೆ ಮ್ ಬರಲು ಓಂಕಾರವಾಯಿತು. ಈ ನಾದಾತ್ಮ ಕದ ಸೃಷ್ಟಿಯಲ್ಲಿ ಭೂಮಿ ಜಲ ಬೀಜಗಳಿಂದ ನವಾಂಕುರವು. ಆದಿ ಜ ಶಕ್ತಿಯಿಂದ ಅಣುರೂಪವಾಗಿ ( ಅತಿ ಸೂಕ್ಷ್ಮಾಂಕುರವಾಗಿ )ಪ್ರಾದು ರ್ಭವಿಸಿದ್ದೇ ಬಿಂದು, ಆ ಬಿಂದುವನ್ನೊಳಪಟ್ಟಿದ್ದೇ ನಾದ, ಆ ನಾದ ಬಿಂದುಗಳಿಂದುಂಟಾದ ಪ್ರಕಾಶವೇ ಕಳೆಯು. ಈ ನಾದ ಬಿಂದು ಕಳೆ ಳ ಅತಿಸೂಕ್ಷ್ಮಗಳೇ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು. ಇವುಗಳ ಕೀಕರಣವೇ ಚಿತ್ಪ್ರಣವವು.

ಈ ಬಗ್ಗೆ ಮಹಾಶಿವಶರಣರ ಅನುಭವದ ಕಡೆಗೆ ಚಿತ್ತವನ್ನು ಲ್ಲಿ ನೋಡುವಾ —

"ನಿಃಕಲ ಶಿವತತ್ವದಲ್ಲಿ ಜ್ಞಾನ ಚಿತ್ತು ಉದಯವಾಯಿತು. ಆ ತ್ತಿನಿಂದ 'ಅಕಾರ, ಉಕಾರ ಮಕಾರಗಳೆಂಬ ಅಕ್ಷರತ್ರಯಗಳಾದವು. ಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ, ಇಂತೀ ತ್ರಿವಿ ಕ್ಷೆ ಕಾಯಿಚಿತ್ತು. ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ವು ಉತ್ಪತ್ತಿಯಾಯಿತು. ಆ ಓಂಕಾರವೆಂಬ ಪ್ರಣವುವೇ ಅಖಂಡ ಪೂರ್ಣಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ ಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ ||

ಮಹಾಲಿಂಗಕ್ಕಂಗವಾಗಿ ಪೀಠವಾಗಿರುವ ಓಂಕಾರವೆಂದು ಹೇಳಿಸಿ ಕೊಳ್ಳುವ ಪ್ರಣವುದ ಪರಾಶಕ್ತಿಪ್ರಣವದಲುತ್ಪತ್ತಿಯಾದಂಥ ವಿಚಾರವು ಂದರೆ, ತಾರಕಾಕೃತಿ, ದಂಡಕಾಕೃತಿ ಕುಂಡಲಾಕೃತಿ, ಅರ್ಧಚಂದ್ರ ಜ್ಯೋತಿರಾಕೃತಿಗಳೆಂಬ ಷಡಾಕೃತಿಯೊಳಗೆ ಓಂಕಾರವೆಂಬ ಪ್ರಣ ತಾರಕಾಕೃತಿ ದಂಡಕಾಕೃತಿಗಳೆಂಬ ಉಭಯಾಕೃತಿಗಳನೊಳ

ಕೊಂಡು ಉತ್ಪತ್ತಿಯಾದಂಥಾದ್ದೇ ಅಕಾರ ಪ್ರಣವವು. ಓಂಕಾರ ಪ್ರಣವದ ಕುಂಡಲಾಕೃತಿ ಅರ್ಧಚಂದ್ರಾಕೃತಿಗಳೆಂಬ ಉಭಯಾಕೃತಿಗಳನ್ನೊಳಕೊಂಡು ಉತ್ಪತ್ತಿಯಾದಂಥಾದ್ದೇ ಉಕಾರ ಪ್ರಣವವು. ಓಂಕಾರ ಪ್ರಣವದ ದರ್ಪಣಾಕೃತಿ ಜ್ಯೋತಿರಾಕೃತಿಗಳೆಂಬ ಉಭಯಾಕೃತಿಗಳನೊಳಕೊಂಡುತ್ಪತ್ತಿಯಾದಂಥಾದ್ದೇ ಮಕಾರ ಪ್ರಣವವು. ಈ ಮೂರು ಬೀಜಾಕ್ಷರ. ಅಕಾರ ಪ್ರಣವವೇ ಚಿನ್ನಾದ ಸ್ವರೂಪವಾಗಿರ್ಪುದು. ಓಂ, ಓಂ, ಓಂ, ಎಂದು ಘೋಷಿಸುತ್ತಿಹುದು. ಅಂತಪ್ಪದೊಂದು ಸುನಾದ ಘೋಷನುಳ್ಳುದುವೇ ಅಕಾರ ಪ್ರಣವವೆಂಬುದೀಗ ಅಕಾರ ನಾದವು. ಉಕಾರ ಪ್ರಣವವೇ ಚಿದ್ಬಿಂದ ಸ್ವರೂಪವಾಗಿಹುದು. ಜಲತ್ಸ್ತಂಭಃಯುವಾನವಾಗಿ ಝುಗಝುಗಿಸಿ ಬೆಳಗುತ್ತಿಹುದೋ ಅಂತಪ್ಪದೊಂದು ಚಿದ್ಬಿಂದು ಪ್ರಕಾಶನುಳ್ಳುದೇ ಉಕಾರಪ್ರಣವವೆಂಬುದೀಗ ಉಕಾರವೇ ಬಿಂದು. ಮಕಾರ ಪ್ರಣವವೇ ಚಿತ್‌ಕಳಾಸ್ವರೂಪವಾಗಿಪ್ಪುದು. ಒಂದಾನೊಂದು ಮಧ್ಯಾಹ್ನಕಾಲದ ಚಂದ್ರಸೂರ್ಯಕೋಟಿ ಪ್ರಕಾಶವನು ಕೀಳ್ಪಡಿಸಿ ಬೆಳಗಲ್ಪಟ್ಟ ಮಹಾಪ್ರಕಾಶನುಳ್ಳುದೇ ಮಕಾರ ಪಣವವೆಂಬುದೀಗ ಮಕಾರ ಪ್ರಣವವೇ ಕಳೆಯು.

ಅಕಾರ ಪ್ರಣವವೇ ರುದ್ರ. ರುದ್ರತತ್ವಸ್ವರೂಪಿನಿಂದ ಸಕಲ ಜಗತ್ತಿನ ಸಂಹಾರಕೃತ್ಯವನ್ನುಂಟು ಮಾಡಿ ನಡಿಸುತ್ತಿಹುದು. ಉಕಾರ ಪ್ರಣವೇ ಈಶ್ವರ. ಈಶ್ವರ ತತ್ವಸ್ವರೂಪಿನಿಂದ ಸಕಲ ಜಗತ್ತಿನ ತಿರೋಧಾನಕೃತ್ಯವನ್ನುಂಟು ಮಾಡಿನಡಿಸುತ್ತಿಹುದು. ಮಕಾರ ಪ್ರಣವವೇ ಸದಾಶಿವ. ಸದಾಶಿವ ತತ್ವಸ್ವರೂಪಿನಿಂದ ಸಕಲ ಜಗತ್ತಿನ ಅನುಗ್ರಹ ಕೃತ್ಯವನ್ನುಂಟು ಮಾಡಿ ನಡಿಸುತ್ತಿಹುದು. ಈ ತ್ರಿವಿಧ ಪ್ರಣವಂಗಳ ಉದಯಾಧಾರ ವಿಶ್ರಾಂತಿಗೆ ನಾದಬಿಂದುಕಳೆಗಳೇ ಪರನಾದ ಪರಬಿಂದು ಪರಕಳೆಗಳೆಂಬ ಬಸವಾಕ್ಷರತ್ರಯಂಗಳೇ ಆಧಾರ. ಆ ಬಸವಾಕ್ಷರ ತ್ರಯಂಗಳ ಉದಯಾಧಾರ ವಿಶ್ರಾಂತಿಗೆ ಪ್ರಕೃತಿ ಎಂಬುದು ಹೇಳುತ್ತಿಹುದಾದ ಕಾರಣ ಆ ಸ್ವಭಾವ ಸಂಸಿದ್ಧಿಣಿಯಪ್ಪ ಮಹಾಜ್ಞಾನ ಚಿಚ್ಛಕ್ತಿಯೇ ಆಧಾರಾಶ್ರಯವಾಗಿಪ್ಪಳು.

ಆ ಪ್ರಕೃತಿಗಾಸ್ವಭಾವ ಸಿದ್ಧರೂಪಿಣಿಯಪ್ಪ ಮಹಾಜ್ಞಾನ ಚಿಚ್ಛಕ್ತಿಯ ಆಧಾರ, ಆ ಚಿಚ್ಛಕ್ತಿಯ ಆಧಾರ ವಿಶ್ರಾಂತಿಗೆ ಶೂನ್ಯಲಿಂಗವೇ

ಆಧಾರಾಸ್ಪದವಾಗಿಹುದು. ಪ್ರಾಣಕ್ಕೆ ಆಧಾರವುಪ್ಪ ಆಗುಣತ್ರಾಣ ಪ್ರಾಣಸ್ವರೂಪವಾದ ನಿಃಕಲಬ್ರಹ್ಮಕ್ಕೆ ಮಹಾಲಿಂಗವೇ ಆಧಾರಾಸ್ಪದವಾಗಿಹುದು. ಅ ಎಂಬ ಊರ್ಧ್ವಸ್ವರವು ಅನಾಹತವು. ಎಂದಿಗೂ ಕೇಡಿಲ್ಲದ ಶಿವಾಕ್ಷರವು. ಉ ಎಂದೊಡೆ ನಾದ ಇಳಿಯಿತು. ಅ, ಎಂಬ ಶಿವಸ್ವರವು ಉ, ಎಂಬಶಕ್ತಿಸ್ವರದೊಡನೆ ಕೂಡಿತು. ಅಲ್ಲಿ ಅವು ಧ, ಭವತಿಯೆಂಬ ವ್ಯಾಕರಣ ಸೂತ್ರದಿಂದ ಅಕಾರ ಉಕಾರ ಕೂಡಿ ಓಂಕಾರವಾಯಿತು. ಆ ಪ್ರಣವುದ ಸಮಕ್ಷದೊಳಗೆ ಮ, ಎಂಬ ಬಿಂದು ಬಂದು ಕೂಡಲು ಮಕಾರ ಪ್ರಣವುವೆಂಬುದು ಶಿವಶಕ್ತಿಯಾಯಿತ್ತು. ಅಕಾರ ಉಕಾರ ಮಕಾರ ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು. ಈ ನಾಲ್ಕು ಒಂದಾದಲ್ಲಿ ಪರಶಿವ, ಪರಶಕ್ತಿ ಸ್ವರೂಪವಾಗುತ್ತಲಿರುವಂಥಾ ಓಂಕಾರವಾಯಿತ್ತು. ಓಂ ಎಂಬುವೂರ್ಧ್ವಸ್ವರೂಪವುಳ್ಳ ಷಟ್ಕೃತಿಗಳು ಸಂಪೂರ್ಣವಾದ ಸಾಕಲ್ಯಪ್ರಣವುವು ಸೌಜನ್ಯವಾಯಿತು.

ಅಕಾರವೆಂಬ ಪ್ರಣವದಲ್ಲಿ ವರ್ಣವೆಂದಡು, ಬೀಜವೆಂದಡು, ಅನ್ನವೆಂದಡು, ಲಿಂಗವೆಂದಡು, ಮಾತೃಕವೆಂದಡು, ಒಂದೇ ನಾಮಪರ್ಯಾಯವಾಗಿರ್ಪುದು. ಅದು ಕಾರಣವಾಗಿ ಅಕಾರವೆಂದು ಹೇಳಿಸಿಕೊಂಬ ಪ್ರಣವುದ ಅಕ್ಷರದೊಳಗೆ ಅಗ್ನಿ ತೇಜವೆಂಬುವೊಂದು ತತ್ವವು ಋಗ್ವೇದಃ ಋಗ್ವೇದವೆಂಬ-ದೊಂದು ವೇದವು. ರುದ್ರಮೂರ್ತಿಎಂಬುವದೊಂದು ಅಧಿದೇವತೆಯು ಇಂದ್ರಾದಿ ನಿರ್ಜರರೆಂಬ ದೇವತೆಗಳು ಉತ್ಪತ್ತಿಯಾದವು. ಉತ್ಪತ್ತಿಯಾಗಿ ಪರಶಿವನ ಸಗುಣಾನಂದ ಸೃಷ್ಟಿಯು ಲೀಲಾವಿಲಾಸ ಉಂಟಾಗಿರುವ ಪರ್ಯಂತರ ಉಂಟಾಗಿರ್ದು ಲೀಲೆ ಸಾಕಾದ ಬಳಿಕ ಓಂಕಾರ ಪ್ರಣವುದ ಒಂದನೇ ಅಂಶವಾದ ಅಕಾರ ಪ್ರಣವುದ ಲ್ಲಿಯೇ ವಿಶ್ರಾಂತಿಯನ್ನೈದುತ್ತಿಹವು. ಉಕಾರ ಪ್ರಣವುದಲ್ಲಿ ವರ್ಣದೊಳಗಂತರಿಕ್ಷ ಪಂಚಭೂತಗಳೊಳಗೆ ಆಕಾಶವೆಂಬುದೊಂದು ತತ್ವವು ನಾಲ್ಕು ವೇದಂಗಳೊಳಗೆ ಯಜುರ್ವೇದವೆಂಬುವೊಂದು ವೇದವು, ಈಶ್ವರನೆಂಬುವೊಂದಧಿದೇವತೆಯು, ಇಂದ್ರಾದಿ ಅಪ್ಸರರೆಂಬ ದೇವತೆಗಳುತ್ಪತ್ತಿಯಾದವು. ಲೀಲೆ ಸಾಕಾದ ಬಳಿಕ ಪ್ರಣವುದ ಎರಡನೆಯ ಅಂಶವಾದ ಉಕಾರ ಪ್ರಣವುದಲ್ಲಿಯೇ ವಿಶ್ರಾಂತಿಯನ್ನೈದುತ್ತಿಹವು ಮಕಾರವೆಂದು ಹೇಳಿಸಿಕೊಳ್ಳುವ ಪ್ರಣವುದಲ್ಲಿ ಲಿಂಗದೊಳಗೆ ವಿದ್ಯಾ ಸುಜ್ಞಾನ

ಕಲಾತ್ಮವೆಂಬುವದೊಂದು ತತ್ವವು, ಮತ್ತಂತುಮಲ್ಲದೆ ಚತುಃಷಷ್ಠಿ ಕಳಾವಿದ್ಯೆಗಳು, ಆ ವಿದ್ಯೆಗಳನರಿವಂತಹ ಜ್ಞಾನವು, ಸಾಮವೇದವೆಂಬು ವದೊಂದು ವೇದವು, ಸದಾಶಿವನೆಂಬಧಿದೇವತೆಯು, ಇಂದ್ರಾದಿ ಅಷ್ಟ ದಿಕ್ಪಾಲಕರೆಂಬಧಿದೇವತೆಗಳು ಉತ್ಪತ್ತಿಯಾದವು. ಲೀಲೆ ಸಾಕಾದ ಬಳಿಕ ಪ್ರಣವದ ತೃತೀಯಾಂಶವಾದ ಮಕಾರ ಪ್ರಣವದಲ್ಲಿ ವಿಶ್ರಾಂತಿಯನ್ನು ಐದುತ್ತಿಹುದು.

ಅಕಾರವೆಂಬ ಪ್ರಣವವು, ಉಕಾರವೆಂಬ ಪ್ರಣವವು, ಮಕಾರ ವೆಂಬ ಪ್ರಣವವು ಈ ತ್ರಿವಿಧ ಪ್ರಣವಗಳು ಒಂದೇ ಆಗಿ ಸ್ವಯಂಜ್ಯೋತಿ ಸ್ವರೂಪವಾದ ಓಂ. ಓಂ ಎಂಬ ಊರ್ಧ್ವ ಸ್ವರೂಪವನುಳ್ಳ ಷಟ್ಕೃತಿಗಳು ಸಂಪೂರ್ಣವಾದ ಸಾಕಲ್ಯ ಪ್ರಣವದತ್ತಣಿಂದೇ ನಾಲ್ಕು ವೇದಂಗಳು ಮತ್ತಂತು ಮಲ್ಲದೆ ನೂರೊಂದು ವೇದ. ಹದಿನಾರು ಸಾವಿರ ಶಾಸ್ತ್ರ ಮುಂತಾದ ಸಕಲ ನಿಗಮಂಗಳು ಉತ್ಪತ್ತಿಯಾದವು. ಸಪ್ತಸ್ವರಂಗಳು, ನಾಲ್ಕು ವೇದಂಗಳು, ನಾಲ್ಕು ವೇದಂಗಳನೋದುವ ಸ್ವರಗಳು ಎಂಭತ್ತು ನಾಲ್ಕು ಲಕ್ಷಪ್ರಕಾರವಾದ ಸ್ವರಭೇದಗಳು ಉತ್ಪತ್ತಿಯಾದವು. ಅಕಾರ ಪ್ರಣವದಿಂದ ಸ್ವರಾಕ್ಷರ ಹದಿನಾರು, ಉಕಾರ ಪ್ರಣವದಿಂದ ವಿಷಯಾ ಕ್ಷರ ಇಪ್ಪತ್ನಾಲ್ಕು ಮಕಾರ ಪ್ರಣವದಲ್ಲಿ ಹುಟ್ಟಿದ ವ್ಯಾಪಕಾಕ್ಷರ ಹನ್ನೊಂದು ಇಂತೀ ೫೧ ಅಕ್ಷರಗಳಿಂದಾದ ಸಕಲ ವೇದಶಾಸ್ತ್ರ, ಪುರಾಣ ಶಾಸ್ತ್ರಗಳು, ಅನೇಕ ಬ್ರಹ್ಮಾಂಡಗಳನಂತ ಮೂರ್ತಿಗಳು, ಷಡಧ್ವ ಷಡ್ಗುಣ ವಸ್ತು ತತ್ವ ಪಂಚಕವು ಸೃಷ್ಟಿಯಾಗುತ್ತಿದ್ದ ಕಾರಣ ಸ್ವರೂಪ ಮಾದ ಪ್ರಣವಂಗಳು ಉತ್ಪತ್ತಿಯಾದವು.

ಓಂಕಾರಂ ಸಾಕಲ್ಯ ಪ್ರಣವವೆಂಬುದು ತಾನು ಸಮಸ್ತದಲ್ಲಿಯೂ ಮೇಲು ಹೊದಿಕೆಯಾಗಿ ಹೊದಿಸಿಕೊಂಡಿರುತ್ತಿಹುದು. ಪರಬ್ರಹ್ಮಾದಿ ಪಂಚ ಬ್ರಹ್ಮವನೊಳಕೊಂಡು, ತೋರುವಂಥ ಮಹಾಲಿಂಗ ಸ್ವರೂಪವೆ ಐದಿಹುದು ಪ್ರಸಿದ್ಧವಲಾ! ಚಿನ್ನಾದ ಸ್ವರೂಪವಾಗಿಪ್ಪುದು. ಷಡಕ್ಷರಿ ಮಂತ್ರ ಸ್ವರೂಪವಾಗಿರ್ಪುದು ಸಪ್ತಕೋಟಿ ಮಹಾಮಂತ್ರಗಳು ಮಂತ್ರಕೋಟ್ಯಾನು ಕೋಟಿಗಳ ಸ್ವರೂಪವಾದಂಥಾದ್ದು. ಎಲ್ಲ ಸ್ಥಳ ಗಳಲ್ಲಿಯೂ ವ್ಯಾಪಕವಾದ ಚೈತನ್ಯ ಸ್ವರೂಪಿನಿಂದ ವೇಧಿಸಿಕೊಂಡಿ

ರ್ಪಣದು. ಪರಶಿವನ ಅತ್ಯಂತ ರಹಸ್ಯವಾದ ನಿಜ ಚಿನ್ಮಯವಪ್ಪ ಹೃದಯ ಮುಖವಾಗಿರುತಿಹುದು. ಅದು ಹೇಗೆಂದೊಡೆ ನಕಾರಾದಿ ಯಕಾರಾಂತ್ಯ ವಾದ ಪಂಚ ಪ್ರಣವಂಗಳೇ ಸದಾ ಶಿವನ ಸದ್ಯೋಜಾತಾದಿ ಈಶಾ ನಾಂತ್ಯವಾದ ಪಂಚಮುಖ ಸ್ವರೂಪದಲ್ಲಿ ಹುಟ್ಟಿದವು. ಹೀಗೆಂದು ಹೇಳುವಂಥಾದ್ದೇ ; ಪ್ರಣವದ ತ್ಪತ್ತಿ, ಪ್ರಣವದ ಸೃಷ್ಟಿ, ಪ್ರಣವದ ನಿರ್ದೇಶ, ಪ್ರಣವದ ಲಕ್ಷಣವೆಂದು ಹೇಳುವದಾದ ಕಾರಣ ಇದು ಪ್ರಣವೋತ್ಪತ್ತಿ.

ವ. ಶಾ. ಸಾರಭಾಗ ೨. ಪು ೯-೧೨

ಸಾಮಾನ್ಯ ಜನರಲ್ಲಿ ಒಬ್ಬನಿಗೆ ಚಹಾದ ನಾದವಿದ್ದರೆ ಮತ್ತೊಬ್ಬ ನಿಗೆ ಕಾಫೀನಾದ. ಒಬ್ಬನಿಗೆ ಚುಟ್ಟಾದ ನಾದವಿದ್ದರೆ ಮತ್ತೊಬ್ಬನಿಗೆ ಸಿಗರೇಟಿನ ನಾದ, ಒಬ್ಬನಿಗೆ ಇಸ್ಪೇಟಿನ ನಾದವಿದ್ದರೆ, ಬೇರೊಬ್ಬನಿಗೆ ಚದ ರಂಗದ ನಾದ. ಒಬ್ಬನಿಗೆ ಸಿನೇಮಾದ ನಾದವಿದ್ದರೆ ಮತ್ತೊಬ್ಬನಿಗೆ ನಾಟಕದ ನಾದ. ಒಬ್ಬನಿಗೆ ಗಳಿಸುವನಾದವಿದ್ದರೆ ಇನ್ನೊಬ್ಬನಿಗೆ ಕಳೆ ಯುವ ನಾದ. ಅಂತೂ ಪ್ರತಿಯೊಬ್ಬನಿಗೆ ;ಒಂದೊಂದರ ನಾದವಿರುವದು ಸ್ವಾಭಾವಿಕವು. ಭಾವದೊಳು ಬಿಂಬಿಸಿದ ಮನಸ್ಸಿನ ಒಲವುಗಳೇ ಕೃತಿ ಯಲ್ಲಿ ಕಂಡುಬರುವವು

ಒಂದು ಊರಲ್ಲಿ ಶಿವಕ್ಕ ಗಂಗಕ್ಕ ಎಂಬ ನೆರಮನೆಯ ಹೆಣ್ಣು ಮಕ್ಕಳು. ಅವರಲ್ಲಿ ಶಿವಕ್ಕನು ಸಾಧ್ವಿಮಣಿಯು. ಯಾವಾಗಲೂ ಅವಳ ನಾಲಿಗೆಯು ಶಿವನಾಮದಿಂದ ಕುಣಿಯುತ್ತಿತ್ತು. ಆಕೆಯ ಶರೀರವು ಸತ್ಯದ ಸದನವೂ, ಸತ್ಕಾಯಕದ ಸಚ್ಚಿತ್ರವೂ, ಇಷ್ಟಲಿಂಗದ ಘಟ್ಟಿಯೂ, ಭಾವಲಿಂಗದ ಭವನವೂ, ಪ್ರಾಣಲಿಂಗದ ಪ್ರತಿಮೆಯೂ ಆಗಿ, ತನ ತ್ರಯ ಮನತ್ರಯ ಭಾವತ್ರಯಗಳು ಶಿವಾನಂದಮಯವಾಗಿ, ಪಂಚ ಕಳಶಗಳು ಮಿಂಚಿ ಮಿನುಗುತ್ತಿದ್ದವು. ನೆರೆಮನೆಯ ಗಂಗಕ್ಕನ ಶರೀ ರವು ಅಸತ್ಯದ ಆಗರವೂ ಚೋರತ್ವದ ಚರಕವೂ ಜಗಳದ ಮನೆಯೂ ಇದ್ದಲ್ಲದೆ ಮಾತಿನಲ್ಲಿ ಬಹು ಉದರ. ಬಾಯಿಬಿಟ್ಟರೆ ಯಾವ ಹೆಂಗಸೂ ಆಕೆಯ ಮುಂದೆ ಬಂದು ನಿಲ್ಲುವ ಧೈರ್ಯವಾಗುತ್ತಿದ್ದಿಲ್ಲ. ಶಿವಕ್ಕನು ಒನಾಲು ಮನೆಯ ಹಿಂದಿನ ಹಾಳುಗೋಡೆಯಲ್ಲಿ ಕುಳ್ಳುಬಡಿದು ಹಚ್ಚಿ

ಒಣಗಿದ ಬಳಿಕ ಮನೆಗೆ ತರುತ್ತಿದ್ದಳು. ಇದನ್ನು ಗಂಗಕ್ಕನು ನೋಡಿ ತಾನೂ ಓಣಿಯಲ್ಲಿ ಬಿದ್ದ ಹೆಂಡೀ ಹಿಡಿದು ಕುಳ್ಳುಗಳನ್ನು ಶಿವಕ್ಕನು ಹಚ್ಚುತ್ತಿದ್ದ ಹಾಳು ಗೋಡೆಯ ಸಮೀಪದಲ್ಲಿಯೇ ಶಿವಕ್ಕನ ಕುಳ್ಳಿನ ಆಕಾರದಂತೆಯೇ ಆಕಾರವುಳ್ಳ ಕುಳ್ಳುಗಳನ್ನು ಹಚ್ಚಿ ಒಣಗಿದಬಳಿಕ ಅಲ್ಲಿಯೇ ಗುಂಪುಗೂಡಿಸಿ ಇಡುತ್ತಿದ್ದಳು. ಒಮ್ಮೆ ಶಿವಕ್ಕನು ತನ್ನ ಒಣ ಗಿದ ಕುಳ್ಳುಗಳನ್ನು ಮನೆಗೆ ಒಯ್ಯದೆ, ಗಂಗಕ್ಕನಂತೆ ತಾನೂ ಕೂಡ ಹಾಕಹತ್ತಿದಳು. ಒಬ್ಬರ ಕುಳ್ಳಿನ ಗುಂಪುಗಳು ಬೆಳೆಯುತ್ತನಡೆದವು. ಆಗ ಗಂಗವ್ವನು ಶಿವಕ್ಕನ ಬಹಳಷ್ಟು ಕುಳ್ಳುಗಳನ್ನು ಆಕೆಗೆ ತಿಳಿಯು ದಂತೆ ತನ್ನ ಗುಂಪಿನಲ್ಲಿ ಹಾಕಿಕೊಂಡಳು. ಮರುದಿವಸ ಶಿವಕ್ಕನು ತನ್ನ ಕುಳ್ಳಿನ ಗುಂಪೀ ನೋಡುತ್ತಾಳೆ, ಸಣ್ಣದಾಗಿತ್ತು. ಗಂಗಕ್ಕನ ಗುಂಪಿ ದೊಡ್ಡದಾಗಿತ್ತು. ಆಗ ಶಿವಕ್ಕನು— ತಂಗೀ ಗಂಗಕ್ಕಾ ನನ್ನ ಕುಳ್ಳು ಗಳು ನಿನ್ನಲ್ಲಿ ಬಂದಿವೆ. ತೆಗೆದುಕೊಡವ್ವಾ? ಎಂದು ಕೇಳುವದಷ್ಟೇ ತಡ. ಗಂಗಕ್ಕನು ಬಾಯಿಬಿಡಹತ್ತಿದಳು. ಇವರ ಕಲಕಲಾಟವನ್ನು ಕೇಳಿ ಸಮೀಪದ ದಾರಿಯಿಂದ ಹೋಗುವ ಸೆಟ್ಟರು ಮುಂದೆಬಂದು—

ತಂಗೀ ಗಂಗಕ್ಕಾ ಸುಮ್ಮನೆ ಏಕೆ ಒದರುತ್ತಿರುವೆ? ಶಿವಕ್ಕನು ಸುಳ್ಳಾಡುವವಳಲ್ಲ. ಆಕೆಯ ಕುಳ್ಳುಗಳನ್ನು ತೆಗೆದುಕೊಂಡಿದ್ದರೆ ತಿರುಗಿ ಕೊಡವ್ವಾ ಎಂದು ಬುದ್ಧೀ ಹೇಳಿದರು. ಅವಕ್ಕೆ ಅವಳು— "ಗಂಗ ಕ್ಕನು ತಾನೇ ಹಚ್ಚಿದ ಕುಳ್ಳುಗಳನ್ನು ಕಂಡುಹಿಡಿದು ಬೇಕಾದರೆ ಆರಿಸಿ ಕೊಳ್ಳಲಿ, ಅಣ್ಣಾ" ಎಂದು ಅಂದುಬಿಟ್ಟಳು. ಆಗ ಶಿವಕ್ಕನು ಸೆಟ್ಟರ ಎದುರಿನಲ್ಲಿ ತನ್ನ ಕುಳ್ಳುಗಳನ್ನು ಕಂಡುಹಿಡಿದು ತೆಗೆದಿಟ್ಟಳು. ಆಗ ಗಂಗಕ್ಕನು " ನನ್ನ ಕುಳ್ಳು ಸಹ ನೀನು ಏಕೆ ತೆಗೆದುಕೊಂಡಿರಬಾರದು! ಈ ಕುಳ್ಳುಗಳೇ ನಿನ್ನವೆಂದು ಹೇಗೆ ಗೊತ್ತುಮಾಡಿವೆ? ಎಂದು ಗುಟು ಗುಡಲಿಕ್ಕೆ ಆರಂಭಿಸಿದಳು. ಆಗ ಶಿವಕ್ಕನು ತಾನು ತೆಗೆದಿಟ್ಟ ತನ್ನ ಪ್ರತಿಯೊಂದು ಕುಳ್ಳನ್ನು ಅಣ್ಣನವರ ಕಿವಿಯ ಸಮೀಪಕ್ಕೆ ಹಿಡಿಯ ಹತ್ತಿದಳು. ಅದರಲ್ಲಿ ಓಂಕಾರ ಪೂರಿತ ಪಂಚಾಕ್ಷರ ನಾದವು ಪ್ರಕಟ ವಾಗುತ್ತಿತ್ತು. ಅದರಂತೆ ಗಂಗಕ್ಕನ ಅನೇಕ ಕುಳ್ಳುಗಳನ್ನು ಕಿವಿಗೆ ಹಚ್ಚಿ ನೋಡಿದರೂ ಕಿವುಡಾಗಿದ್ದವು. ಇವನ್ನು ನೋಡಿ ಅಣ್ಣನವರಿಗೆ ಆಶ್ಚರ್ಯವಾಯಿತು. ಆಗ ತಮ್ಮ ಅನುಭವದ ನುಡಿಯಾದ "ಜ್ಞಾನದ

ಬಲದಿಂದ ಅಜ್ಞಾನದ ಕೇಡು ನೋಡಯ್ಯ, ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ, ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ, ಪರುಷದ ಬಲದಿಂದ ಅಪಲೋಹದ ಕೇಡು ನೋಡಯ್ಯ ಕೂಡಲ ಸಂಗಮ ದೇವಾ" ಎಂಬ ವಚನವನ್ನು ಒಡನುಡಿದು ಶಿವಕ್ಕನ ಶರೀರವನ್ನು ವ್ಯಾಪಿಸಿದ ನಾದವು ಭಾಷೆಪರುಷ, ಮನೋಪರುಷ,ವಾಕ್ ಪರುಷ, ಹಸ್ತ ಪರುಷ, ದೃಷ್ಟಿಪರುಷಗಳಾದಂತೆ, ಶಿವಕ್ಕನ ನಡೆನುಡಿ ಗಳನ್ನು ನೀನೂ ಆಚರಿಸವ್ವಾ ಗಂಗಕ್ಕಾ ಎಂದು ಅಣ್ಣನವರು ಅಂದ ಕೂಡಲೆ ಗಂಗಕ್ಕನ ಹೃದಯ ಕರಗಿ, ಶಿವಕ್ಕನ ಪಾದಕ್ಕೆರಗಿ ಅವಳಿಂದ ಶಿವೋಪದೇಶವ ಪಡೆದು ಆಕೆಯ ಸಂಗದಿಂದ ಸದಾಚಾರವುಳ್ಳವಳಾಗಿ ಶಿವಭಾವಿನಿಗಳಾಗಿ ಶೋಭಿಸಹತ್ತಿದಳು.

ಸಂಸಾರದಲ್ಲಿ ಸಹಜವಾಗಿ ಮನುಷ್ಯನು ಮುಂಜಾನೆ ಎದ್ದು, ತನ್ನ ಶರೀರದ ಕ್ರಿಯೆಗಳನ್ನು ತೀರಿಸಿಕೊಂಡು ಯಾವದೊಂದು ಮಹತ್ವದ ಕೆಲಸಕ್ಕೆ ಮನೆಬಿಟ್ಟು ಹೋಗುವ ದಾರಿಯಲ್ಲಿ ಶುಭಾಶುಭಗಳನ್ನು ನಿರೀಕ್ಷಿಸುತ್ತ ಹೋಗಿ ಆ ಕೆಲಸವು ಕೈಗೂಡಿದ ಬಗ್ಗೆಯೂ, ಕೊನೆಗಂಡ ಬಗ್ಗೆಯೂ, ತನ್ನ ಸಂಗಾತಿಗರೊಡನೆ ಮಾತಾಡುವಾಗ, "ಏನ ಹೇಳಲಪ್ಪಾ! ಇಂದಿನ ಕೆಲಸ ಎಲ್ಲಿ ಹೋದರೂ ಕಲ್ಲೇ ಆಯಿತು. ಮನೆಯ ಬಿಟ್ಟಕೂಡಲೆ ನನಗೆ ಓಂ ಪ್ರಥಮ ವಿಧವೆಯು ಭೆಟ್ಟಿಯಾದಳು. ಎಂದು ಸಿಟ್ಟುಸುರು ಬಿಡುವನು. ಮತ್ತೊಬ್ಬನು "ನೋಡಯ್ಯ, ನಾನು ಇಂದು ಮನೆಯಬಿಟ್ಟಕೂಡಲೆ, ಓಂ ಪ್ರಥಮ ಮುತ್ತೈದೆ ಭೆಟ್ಟಿಯಾದಳು. ಎಲ್ಲಿ ಹೋದಲ್ಲಿ ನನ್ನ ಕೆಲಸಕ್ಕೆ ಬಹು ಅನುಕೂಲ. ಪ್ರತಿ ದಿವಸಕ್ಕಿಂತ ನನ್ನ ಕೆಲಸದಿಂದ ಎರಡು ರೂಪಾಯಿ ಹೆಚ್ಚೇ ಸಿಕ್ಕವು. ಇದರಂತೆ ಮತ್ತೊಬ್ಬನು "ನಾನು ಮನೆಯ ಬಿಟ್ಟಕೂಡಲೆ ಓಂ ಪ್ರಥಮ ಸ್ವಾಮಿಗಳ" ದರ್ಶನವಾಯಿತು. ಇಂದು ಮನದಲ್ಲಿ ಬಯಸಿದ ಕಾರ್ಯಗಳೆಲ್ಲ ಕೈಗೂಡಿದವು. ಎಂದು ಆನಂದದಿಂದ ಅಂದು ತೋರಿಸುವನು. ಇದರಂತೆ ಬೆಕ್ಕು, ಆಕಳು, ಕತ್ತೆ ಮುಂತಾದವುಗಳ ಶಕುನ ನೋಡಿ, ಮಾತಾಡುವಾಗ ಓಂ ಪ್ರಥಮವೆಂಬ ಪಾರಮಾರ್ಥಿಕ ಪದವು ಪ್ರಾಪಂಚಿಕದಲ್ಲಿ ಸಹ ಒಡಮೂಡಿಬಿಟ್ಟಿದೆ. ಇದರಂತೆ ಏನಾದರೂ ಶುಭಸೂಚಕ ಲೇಖಗಳ ಆದಿಯಲ್ಲಿಯೂ, ಸಪ್ತಕೋಟಿ ಮಹಾಮಂತ್ರಗಳ ಆದಿಯಲ್ಲಿಯೂ

ಸ್ಥೂಲ ಸೂಕ್ಷ್ಮ ಪಂಚಾಕ್ಷರಿಗಳ ಆದಿಯಲ್ಲಿಯೂ, ವಿಶ್ವಾಕಾರವನ್ನು ಸೂಚಿಸುವ ಓಂಕಾರದ ನಾದವು ಕಂಡುಬರುವದು.

ಶ್ಲೋಕಃ— ಓಂಕಾರಾತ್ ಪ್ರಭವಾ ವೇದಂ ।ಓಂಕಾರಾತ್ ವಿಭವಾ ಸ್ವರಂ । ಓಂಕಾರಾತ್ ಪ್ರಭವಂ ಸರ್ವಂ । ತ್ರೈಲೋಕ್ಯಂ ಸಚರಾಚರಂ । ಸರ್ವ ವ್ಯಾಪಕ ಮೋಂಕಾರಂ । ಮಂತ್ರೋನ್ಯತ್ರನ ಶೋಭಯೇತ್ । ಪ್ರಣವೋಹಿ ಪರಬ್ರಹ್ಮ । ಪ್ರಣಮಂ ಪರಮಂ ಪದಂ ॥

ಮತ್ತಂ ಕಂದಃ— ಆದಿಯನರುಹಿದ ಗುರುವಿಗೆ ।
ಮೋದದೆ ಶಿರಬಾಗಿಸಿ ಶಿವನಾಮವ ನುಡಿಯುಲ್ ॥
ವೇಧಿಸಿ ಮನದೊಳ್ ಮಂತ್ರಂ ।
ಸಾಧಿಸಿದಂಗತ್ರಯಗಳೆ ಲಿಂಗಗಳಲ್ತೇ ॥ ೧ ॥

ದೇಹದ ಧರ್ಮವನಳಿಯುತ ।
ಸೋಹಂ ಭಾವವನಡಗಿಸಿ ದಾಸೋಹದೊಳಂ ॥
ಸಹಜ ಸಮಾಟಸ್ಥಲವಂ ।
ಸಹಕರಿಸುತ ಮೂಲ ಮಂತ್ರನೆನೆವಂ ಭಕ್ತಂ ॥ ೨ ॥

ನಾದಪ್ರಿಯನಲ್ಲದವನ ವೇದಪ್ರಿಯನೆನಿಸದವನ ಶರಣರಿ ಬಲ್ಲರ್ ।
ಸವಮಲ ಪ್ರಣವಾಂಕುರಮದು ಹೃದಯಾಕಾಶವ ಪಸರಿಸಿ ಪಲ್ಲವಿಸುವದೈ ॥ ೩ ॥

ಪ್ರಣವಂ ವಿಶ್ವದ ಬೀಜಂ ।
ಪ್ರಣವಂ ಲಿಂಗಾಂಗ ಸಾಮರಸ್ಯದ ಸದನಂ ॥
ಪ್ರಣವಂ ತ್ರ್ಯಕ್ಷರ ರೂಪಂ ।
ಪ್ರಣವಂ ಪಂಚಾಕ್ಷರಗಳ ಮಾತೃಸ್ಥಾನಂ ॥ ೪ ॥

ಪ್ರಣವಂ ಮಂತ್ರದ ಮೂಲಂ ।
ಪ್ರಣವಂ ಸಂಗನ ಬಸವನ ಪಿಡಿಯುವ ಜಾಲಂ ॥

ಪ್ರಣವಂ ಸಂಸ್ಕೃತಿ ಶೂಲಂ ।
ಪ್ರಣವಂ ಪರಶಿವನೊಲಿಸುವ ಮೂಲಂ ರೇಲಂ ॥ ೫ ॥

ಮತ್ತಂ ವಚನ:— ಉದ್ಭಿಜವು ಉದಯವಾಗದ ಮುನ್ನ ಅಂಡವು ಆಕಾರಕೆ ಬರುವಮುನ್ನ, ಪಿಂಡವು ಪ್ರತಿಮೆದೋರದ ಮುನ್ನ, ಜರಾಯುಜವು ಜನಿಸದ ಮುನ್ನ, ನಾದ ಬಿಂದು ಕಳೆಗಳು ಪುಳಕದ ಮುನ್ನ, ಚಿದಂಶವು ಹುದುಗದ ಮುನ್ನ, ಶಬ್ದ ನಿಶ್ಶಬ್ದಗಳನರಿಯದ ಮುನ್ನ ನಿಷ್ಕಲ ನಿಶ್ಶೂನ್ಯ ನಿರಂಜನನೆನಿಸಿ ನೀವೇಯಾಗಿದ್ದಿರಯ್ಯ ಸಿದ್ಧೇಶ್ವರಾ ॥ ೧ ॥

ಬೀಜದೊಳಡಗಿಹ ವೃಕ್ಷದಂತೆ, ಹಾಲಿನೊಳಡಗಿಹ ತುಪ್ಪದಂತೆ, ಪದದೊಳಡಗಿಹ ಅರ್ಥದಂತೆ, ಐತಿಹ್ಯದೊಳಡಗಿಹ ಅರಸನಂತೆ, ಘಟದೊಳಡಗಿಹ ಆಕಾಶದಂತೆ, ಪಟದೊಳಡಗಿಹ ತಂತುವಿನಂತೆ, ಎಲೆ ಮೃಡನೆ ನೀನು ವಿಶ್ವದೊಳಡಗಿಹ ಬೆಡಗನೇನ ಹೇಳುವೆ, ಸಿದ್ಧೇಶ್ವರಾ ॥ ೨ ॥

ಯಾಂತ್ರಿಕರ ವಿಜ್ಞಾನ ಶಕ್ತಿ, ತಾಂತ್ರಿಕರ ಮಹಚ್ಛಕ್ತಿ, ಭ್ರಾಂತಿಕರ ಭ್ರಮಣಶಕ್ತಿ, ಶಾಂತಿಕರ ಪ್ರತಿಸರಣ ಶಕ್ತಿ, ರಾಜಕೀಯ ಕ್ರಾಂತಿ ಶಕ್ತಿ, ವಿಭ್ರಾಂತಿಕರ ಪ್ರಸರಣ ಶಕ್ತಿ, ಸದ್ಧರ್ಮಿಗಳ ಚಿನ್ಮಯ ಶಕ್ತಿಯ ಪರಿಯ ಪರಿಣಾಮಗಳಲ್ಲಿ ಸಚರಾಚರಾತ್ಮಕನ ಇರವನರಿದು ಬೆರಗಾದೆನಯ್ಯ ಸಿದ್ಧೇಶ್ವರಾ ॥ ೩ ॥

ಶಿವಶಕ್ತಿಗಳ ಲೀಲಾವಿಲಾಸದೊಳು ನಲಿನಲಿದು ನಲವೇರಿ ಬಲಗೊಂಡು ಉಲುಕಿಸುತ ನಿಲವಾಗಿ ನಿಂತ ನಾದಾತ್ಮಂಗೆ, ನಮೋ ನಮೋ ಎಂದೆನಯ್ಯ ಸಿದ್ಧೇಶ್ವರಾ ॥ ೪ ॥

ಆ ಮಹಾನಾದವೇ ನದಿಯಂತೆ ನಲಿಯುತ್ತ, ಉಲಿಯುತ್ತ, ಭುವಿಯ ಭವಬೀಜಗಳಿಗೆ ತನ್ನ ಜೀವನವನೇ ಬೀರುತ್ತ, ಸಾರುತ್ತ, ಶಾಂತಿ ಸಾಮ್ರಾಜ್ಯವೆಂಬ ಸಮುದ್ರವಂ ಸೇರಿ ಸಮರಸವಾದ ಪರಿಯನೇನ ಹೇಳುವೆ ಸಿದ್ಧೇಶ್ವರಾ ॥ ೫ ॥

# ಬಸವಣ್ಣನವರೂ, ಬೇಸಿಕ್ ಎಜ್ಯುಕೇಶನ್

( ಲೇಖಕ— ಶ್ರೀ ಎಂ. ಮಲ್ಲಪ್ಪ. ಬೇಸಿಕ್ ಎಜುಕೇಶನ ಟೀಚರ. )



ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಜನಿಸಿದ ಮಹಾವಿಭೂತಿಯು ಬಸವಣ್ಣನು. ಕನ್ನಡಿಗರು ಕ್ರಾಂತಿಕಾರಕರು, ಅನುಭಾವಿಗಳು, ಪ್ರಗತಿಶೀಲಪರರು ಮತ್ತು ಕ್ರಿಯಾಜ್ಞಾನಸಂಯೋಗಕಾರರು ಎಂಬುದನ್ನು ಕನ್ನಡಿಗರಿಗೆ ಎತ್ತಿತೋರಿಸಿದ ಚಿಹ್ನದ ವ್ಯಕ್ತಿಯು ಬಸವಣ್ಣನು. ಜ್ಞಾನದಬಲದಿಂದ, ಕ್ರಿಯಾದೇವತೆಯ ಪ್ರಸಾದೀಯುಕ್ತಿಯಿಂದ ವಾಗ್ದೇವಿಯ ವರದಾನವನ್ನು ಪಡೆದ ಕನ್ನಡಮ್ಮನ ನಲ್ಗುವರನು ಬಸವಣ್ಣನು. ಸ್ವಾತಂತ್ರ್ಯೋದಯ ಯುಗದಲ್ಲಿಜನಿಸಿ ಸ್ವಾತಂತ್ರ್ಯದ ಸ್ವರ್ಣಕಿಯನ್ನು ಸ್ವಚ್ಛತೆಯಿಂದ ಬೆಳಗಿದ ಧನ್ಯಶಾಲಿಯು ಬಸವಣ್ಣನು. ಆದ್ಯ ಆಚಾರ್ಯರಾದ ಬಸವಣ್ಣನವರು ಕನ್ನಡ ಉಪನಿಷತ್ತುಗಳನ್ನು ಕನ್ನಡಿಗರಿಗೆ ನೀಡಿ, ನಾಡಿನ ಬೌದ್ಧಿಕ ಜೀವನಕ್ಕೆ ಸಾಹಿತ್ಯ ಬುತ್ತಿಯನ್ನು ಕಟ್ಟಿಕೊಟ್ಟ ವೀರ ಪಯಣಿಗನು ಬಸವಣ್ಣನು. ಕನ್ನಡತನಕ್ಕೆ ಅಸುವ ಕೊಟ್ಟು ಕನ್ನಡಕಾವ್ಯ ಕನ್ನಿಕೆಯ ಪಾರತಂತ್ರ್ಯ ಶೃಂಖಲೆಯನ್ನು ಕಳಚಿದ ದಿಟ್ಟಧೀರನು ಬಸವಣ್ಣನವರು. ಕಾಯಕ ಕೈಲಾಸ ಸುಖತಲ್ಪದಲ್ಲಿ ಕನ್ನಡಿಗರಿರುವಂತೆ ಎಚ್ಚರಿಸಿ ಉದ್ಯೋಗವು ನಾಡಿನ ಆಗತ್ಯಕಾರಿಯೆಂದು ಸಾರಿದರು ಇವರು. ಸ್ವಾವಲಂಬನ ಜೀವನವು ಮನೆ ಕೊನೆ ಏರಲು ಯತ್ನ ನೀಡಿ ಮಾನಸಿಕ ವಿಕಾಸಮಾಡಿಸಿ ಜನತೆಯ ಆರ್ಥಿಕ ಸ್ಥಿತಿಯನ್ನು ಬಲಗೊಳಿಸಿದ ಸಮಾಜ ಸುಧಾರಕರು ಇವರು. ಭರತಖಂಡದ ಇಂದಿನ ಸಮಾಜ ಸುಧಾರಕರು. ಬಸವನ ನುಡಿಯನ್ನೇ ನುಡಿಯುತ್ತಲೂ, ಆತನ ಅಭಿಪ್ರಾಯವನ್ನೇ ಅನುಸರಿಸುತ್ತ ಬೋಧಿಸುತ್ತಲೂ, ಇದ್ದಾರೆ ಎಂದು ಈ ಕುಶಲಕಲಾವಿದನ ವಿಚಾರದಲ್ಲಿ ಸರ್ ಜೇಮ್ಸ್ ಕ್ಯಾಂಪಬೆಲ್ಲರೊಮ್ಮೆ ಹೇಳಿರುವುದೇ ಗಾಂಧೀಜಿಯವರು ಹೇಳಿರುವ 'ಸರ್ವೋದಯ'ದ ಕರ್ತರು ಇವರಾಗಿರುವುದಕ್ಕೆ ಸಾಕ್ಷಿಯಾಗಿದೆ.

ಮಹಾತ್ಮಗಾಂಧೀಜಿಯವರ ಅಚಲಅವಿರತ ಜೀವನ ಪ್ರಯೋಗ ಶಾಲೆಯ ಶ್ರಮದಿಂದ ಫಲಿಸಿದ ಪುಣ್ಯಫಲವೇ ಬೇಸಿಕ್ ಎಜುಕೇಶನ್ ಗಾಂಧೀಜಿಯವರ ಜೀವನವೇ ಮಹದ್ಗ್ರಂಥವಾಗಿದೆ. ಈ ಗ್ರಂಥದ ಯಾವ ಪುಟವನ್ನಾದರೂ ತಿರುವಿಹಾಕಿದರೂ, ಯಾರಿಗೆ ಬೇಕಾದರೂ ಅವರಿಗೆ ಬೇಕಾದ ವಿದ್ಯೆಯು ಸಿಗುತ್ತದೆ. ಮನುಷ್ಯನ ದೈಹಿಕ, ಬೌದ್ಧಿಕ ಆಧ್ಯಾತ್ಮಿಕ ಬೆಳವಣಿಗೆಯು ಜೊತೆಗೆ ವ್ಯವಹಾರಿಕ ಜ್ಞಾನ ಸಂವರ್ಧನೆಯಾಗುವುದೇ ವಿದ್ಯಾಭ್ಯಾಸವು. ಗಾಂಧೀಜಿಯವರ ದೃಷ್ಟಿಯಲ್ಲಿ ಮನುಜ ಸಂಸ್ಕೃತಿಯ ಬೆಳವಣಿಗೆಗೆ ಬಹಳ ಸಹಕಾರಿಯಾದದ್ದು ನೈತಿಕ ನಡೆಯು. ಮನುಜನು ಆತ್ಮವಿಕಾಸದಿಂದ ಶೀಲವಂತನಾಗುವನು. ಆತ್ಮ ಸಾಕ್ಷಾತ್ಕಾರವನ್ನೂ ಭಗವಂತನ ಸ್ವರೂಪ ದರ್ಶನವನ್ನೂ ಪಡೆಯಲು ರಾಜ ಮಾರ್ಗವು ಆತ್ಮವಿಕಾಸವು- ಧರ್ಮಭ್ರಷ್ಟನಾದವನು ಅಂಬಿಗನಿಲ್ಲದ ಡೋಣಿಯಂತೆ ಗಾಂಧೀಜಿಯವರ ದೃಷ್ಟಿಯಲ್ಲಿ ಬೇಸಿಕ್ ಎಜುಕೇಶನ್ನಿನ ತಿರುಳು ಧರ್ಮಭ್ರಷ್ಟನಾಗದಿರುವಿಕೆಯೇ ಆಗಿದೆ ಮನುಜನನ್ನು ಕಾರ್ಯನಿರತನಾಗುವಂತೆ ಮಾಡುವುದು ಬೇಸಿಕ್ ಎಜುಕೇಷನ್. ವಿದ್ಯೆ ಕಲಿತವನು ತನ್ನ ಮುಂದಿನ ಜೀವನದಲ್ಲಿ ಶ್ರಮಗೌರವ — Dignity of labour ತತ್ವವನ್ನು ಚನ್ನಾಗಿ ಮನಗಂಡು ತನ್ನ ಸುತ್ತಮುತ್ತಣದವರು ಅದನ್ನು ಅನುಕರಿಸುವಂತಾಗಬೇಕು. ಜನಜೀವನದ ಸಂಗಡ ಮಿಳಿತವಾಗಿ ಜೀವನದ ಮಟ್ಟವನ್ನು ಉತ್ತಮ ಪರಿಸ್ಥಿತಿಗೆ ತರುವಂತಿನ ಶಕ್ತಿಯನ್ನು ಮನುಜನಿಗೆ ಬೇಸಿಕ್ ಎಜುಕೇಷನ್ ಕೊಡುತ್ತದೆ. ಶಿಕ್ಷಣವು ತಾಯಿನುಡಿಯಲ್ಲಿಯೇ ಕಡ್ಡಾಯವಾಗಿ ನಡೆಯುವಂತಾಗುತ್ತದೆ. ಒಟ್ಟಿನಲ್ಲಿ ಓದುವ ವ್ಯಕ್ತಿಯ ಸರ್ವತೋಮುಖ ಬಲವು ವಿಕಾಸವಾಗುವಂತೆ ಮಾಡುತ್ತದೆ ಬೇಸಿಕ್ ಎಜುಕೇಷನ್ ಇದರ ಮುಖ್ಯಗುರಿಯು ಸರ್ವೋದಯ ಸಮಾಜ ಸೃಷ್ಟೀಕರಣವೇ ಆಗಿರುತ್ತದೆ ಸನ್ನಿವೇಶಕ್ಕೆ ಹೊಂದಿಕೊಂಡು ಕಲಿಸಿ, ಅನುಭವದ ಮೂಲಕ ಜ್ಞಾನಾರ್ಜನೆ ಮಾಡುವುದೇ ಇವರ ಗುರಿ. ಸೇವೆಮಾಡುವವರ ಸತ್ಯನಿಷ್ಠೆ. ಸೇವಾವೃತ್ತಿ ನಿರ್ಭೀತಿಯಾದಿ ಗುಣಗಳಮೇಲೆ ಸಮಾಜ ಸೇವೆಯು ಅವಲಂಬಿತವಾಗಿದೆ. ಭಾರತವು ಪ್ರಾಚೀನ ಸಂಪತ್ತನ್ನು ಕಳೆದುಕೊಂಡು ಉತ್ಸಾಹ ಔದಾರ್ಯ ಸರಳತೆಯು ಶೂನ್ಯವಾದ ವೇಳೆಯಲ್ಲಿ ಗಾಂಧೀಜಿಯವರಿಗೆ ಮನಸ್ಸಿಗೆ ನೋವು. ಸುದಿ

ಗಿಂತ ನಡೆ ಲೇಸು ಎಂಬುದನ್ನು ಅರಿತು ಗಾಂಧೀಜಿಯು ಸೇವಾಗ್ರಾಮಕ್ಕೆ ತೆರಳಿ, ನಿಂತು, ಅಲ್ಲಿ ಅವರೂ ಅವರ ಬಳಗದವರೂ ಸೇರಿ ಶ್ರಮಿಸಲಿಕ್ಕೆ ಪ್ರಾರಂಭ. ಗುಡಿಸಲುಗಳ ನಿರ್ಮಾಣ, ಮರಮುಟ್ಟುಗಳ ತಯಾರಿಕೆ, ಇತರ ಸಾಮಗ್ರಿ ಸಲಕರಣೆಗಳ ಏರ್ಪಾಡು ಇವರಿಂದ ರೋಗಿಗಳ ಉಪಚಾರ, ಅಬಲರ ಸೇವೆಗೆ ನಿರಾತಂಕ ಮಾರ್ಗ. ಶಾಲೆಗಳ ಉದಯ ತತ್ಫಲವಾಗಿ ಸೇವಾಗ್ರಾಮಕ್ಕೆ ಸ್ವ ಪರಿಪೂರ್ಣತೆ, ಸಾಮೂಹಿಕ ಐಕ್ಯತೆಯ ಬೆಳವಣಿಗೆ ಬೇಸಿಕ್ ಎಜ್ಯುಕೇಷನ್ನಿನ ಪ್ರಯೋಗ ಶಾಲೆಯೇ ಸೇವಾಗ್ರಾಮವೆಂದರೆ ತಪ್ಪಾಗಲಾರದು.

ಹನ್ನೆರಡನೆ ಶತಮಾನದಲ್ಲಿಯೇ ಈ ತತ್ವಗಳನ್ನೆಲ್ಲವನ್ನೂ ಆಚರಣೆಗೆ ಬಸವಣ್ಣನು ತಂದಿದ್ದನು. ಬಾಗೇವಾಡಿಯಲ್ಲಿ ಜನಿಸಿ, ಕ್ರಾಂತಿಕಾರಕ ಜೀವನವನ್ನು ಎಳೆಯುವದರಲ್ಲಿಯೇ ತಂದಿರಿಸಿ ಕಪ್ಪಡಿ ಸಂಗಮನ ಕೃಪೆ ಪಡೆದು, ಜಾತವೇದ ಮುನಿಯ ಗುರುಕುಲದಲ್ಲಿ ಬೆಳೆದು ಬಿಜ್ಜಳನ ಮಂತ್ರಿಯಾಗಿ ರಾಜ್ಯವನ್ನು ನಡೆಯಿಸಿ, ಕಲ್ಯಾಣದ ಅನುಭವ ಮಂಟಪದಲ್ಲಿ ವಿದ್ಯಾಕ್ರಾಂತಿಯನ್ನೆಬ್ಬಿಸಿ ಕಪ್ಪಡಿಯಲ್ಲಿ ಈತನು ಐಕ್ಯವಾದನು. ಬಸವಣ್ಣನ ಮನಸ್ಸನ್ನು ಸಮಾಜದ ವಿಷಬೀಜವಾದ ಭಿಕ್ಷುಕರ ಅವಸ್ಥೆ ತೊರೆಯಿತು. ಈತನು ಉಂಡಾಡಿ ಬಿಕ್ಷುಕರು ಗಂಡುಗಲಿಗಳಾಗುವಂತೆ ಮಾಡಿದನು. ಹಕ್ಕೆಂದು ಹೊಕ್ಕು ತಿನ್ನುತ್ತಿದ್ದ ! ಹೀನವೃತ್ತಿಯ ಬಿಕ್ಷುಕರು ಕಾಯಕ ಕಲ್ಪದ್ರುಮದ ಪ್ರಭಾವದಿಂದ ಮುಂಗರವಾಯ ತಿಂಗಳ ಬೆಳಕು. ಗುರುವಾಗಲೀ, ಜಂಗಮನಾಗಲೀ, ಯಾರೇ ಆಗಲಿ ಕಾಯಕವನ್ನು ಕೈಗೊಂಡಿಯೇ ತೀರಬೇಕೆಂದು ಇವರು ಛಲ ಸಾಧಿಸಿದರು. ಇವರ ಪರಿಶ್ರಮದಿಂದ ಕಾಯಕಪುಷ್ಟಿಯು ಆರಂಭವಾಯಿತು ಬಸವಣ್ಣನವರ ಗುಂಪಿನವರು ತಮ್ಮ ತಮ್ಮ ಹೆಸರಿನ ಹಿಂದೆಯೇ ಆಯಾಯ ಕಾಯಕದ ಹೆಸರುಗಳನ್ನು ಸೂಚಿಸಿ ಆಯಾ ಕಾಯಕಗಳನ್ನು ತಪ್ಪದೇ ಮಾಗಿಸುತ್ತಿದ್ದರು. ಟಾಲಸ್ಟಾಯ, ಕಾರ್ಲಾಯಿಲ್, ಮಾರ್ಕ್ಸ ಇತ್ಯಾದಿಯ ಪರ ತತ್ವಗಳು— Do unto others as you expect others to do unto you. Work is worship, work is divine. Know thysef and know they work ಬಸವಣ್ಣನವರಿಂದಲೇ ಜಾರಿಗೆ ಬಂದಿದ್ದವು. ಆರ್ಥಿಕ ಸಂಪತ್ತಿನಮೇಲೆ ಸಮಾಜದ ಶ್ರೇಯೋಭಿವೃದ್ಧಿಯ ಅವ

ಲಂಬನೆ. ಸಮಾಜದಲ್ಲಿಯೇ ಸರಿಯಾದ ರೀತಿಯಲ್ಲಿ ಹಣವು ಹಂಚಲ್ಪಟ್ಟರೆ ಕೊರತೆ ಕೊರಗದೆ ಇರದು. ಹಣವು ಸಮಾಜದಿಂದ ಹೊರಕ್ಕೆ ಹೋಗದಂತೆ ಮಾಡಿದರೆ ಬಡತನಕ್ಕೆ ಅವಕಾಶವಿರುವದಿಲ್ಲ. ಸಕಲಕ್ಕೆ ಪರಿಹಾರವು ಕಾಯಕವೇ ಸಂಜೀವನವು. ಇದನ್ನು ಬಸವಣ್ಣನವರು ಅನುಷ್ಠಾನಕ್ಕೆ ತಂದರು. ಕಾಯಕದಲ್ಲಿ ಕೀಳು ಮೇಲೆಂಬ ಭಾವನೆಗಳನ್ನು ಕಿತ್ತೊಗೆದು ಕಾಯಕ ಮಾಡುವವನು ತನ್ನ ಕಾಯಕದಿಂದ ತನ್ನ ಸಮಾಜ, ದೇಶ ಹಾಗೂ ಈಶಸೇವೆ ಮಾಡುವೆನೆಂದು ಹೆಮ್ಮೆಪಡುವಂತಾಯಿತು. ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ, ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು, ಜಂಗಮವಾದರೂ ಕಾಯಕದಿಂದಲೇ ವೇಷ ಪಾಶವ ಹರಿಯುವದು ಎಂದು ಕಾಯಕದ ಮಹತ್ವವನ್ನು ಎತ್ತಿಹಿಡಿದು ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು, ಲಿಂಗಪೂಜೆಯಾದರೂ ಮರೆಯಬೇಕು, ಜಂಗಮವು ಮುಂದಿದ್ದರೂ ಹಂಗುಹರಿಯಬೇಕು. ಎಂದು ಸಾರಿದರು. ಬಸವಣ್ಣನವರು ಕಾಯಕದಲ್ಲಿ ಭೇದವನ್ನು ಕರದೆ ಕಾಯಕವೇ ಕೈಲಾಸವೆಂದರು ಇವರು all kinds of work from the mending of shoes to the reading of Scritures help man to proceed towords the knowledge, if he does it with interest ಎಂಬ ತತ್ವದಾಚರಣೆಯಿಂದ ಬಂದ ಬೆಳಕನ್ನು ಬಸವಣ್ಣನವರು ನಾಡಿನ ಭಾಗ್ಯ ಜ್ಯೋತಿಯನ್ನಾಗಿ ಮಾಡಿದರು. ಮೂಲ ಕಸುಬಿನ ಮೂಲಕ ಶಿಕ್ಷಣ ಮತ್ತು ಕಲಿಯುವಾಗಲೇ ಉತ್ಪಾದನೆ ಎಂಬ ಬೇಸಿಕ ಎಜುಕೇಷನ' ತತ್ವವನ್ನು ಮನಗಂಡರೆ ಬಸವಣ್ಣನವರ ಕಾಯಕ ಕಲ್ಪವು ತಿಳಿದಂತೆಯೇ ಸರಿಯು. ಪ್ರತಿಯೊಬ್ಬರೂ ಕರ್ಮಗಳನ್ನು ತಪ್ಪದೇ ಮಾಡುತ್ತಿದ್ದರೆ ಸಾಧನ ಚತುಷ್ಟಯ ಸಂಪತ್ತು ಸಿಕ್ಕಿದಂತೆಯೇ ಸರಿಯು. “ಜನರು ಸ್ವಾವಲಂಬಿಗಳಾಗುವಂತೆಯೂ, ಜೀವನೋಪಾಯಕ್ಕೆ ವೃತ್ತಿಗಳನ್ನು ಅನುಸರಿಸುವಂತೆಯೂ ಬಸವಣ್ಣನವರು ಪ್ರೋತ್ಸಾಹಿಸಿದರು. ಹಿರಿಯನಾಗಲಿ ಕಿರಿಯನಾಗಲಿ ಬಡವನಾಗಲಿ ಭಾಗ್ಯವಂತನಾಗಲಿ ಎಲ್ಲರೂ ಕಾಯಕವನ್ನು ಮಾಡಬೇಕು ಎಂದು ಅವರು ತಿಳಿಹೇಳಿದರು. ಕಾಯಕವು ಐಹಿಕಕ್ಕೆ ಮಾತ್ರ ಬೇಕಾಗುವುದೆಂದು ಬಸವಣ್ಣನವರು ಹೇಳಲಿಲ್ಲ. ಅದು ಮುಕ್ತಿಗೂ

ಸಾಧನವೆಂದು ಹೇಳಿದರು. ಎಂದು ಬಸವಣ್ಣನ ಕಾರ್ಯದ ವಿಚಾರ ವಲ್ಲಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಯವರು ಹೇಳಿದ್ದಾರೆ. ಕಾಯಕವು ಶಿವಶರಣರಿಗೆ ಆಧ್ಯಾತ್ಮಿಕ ಉನ್ನತಿಯ ಮುಖ್ಯ ಮಾರ್ಗವಾಗಿರುವದನ್ನು ಬಸವಣ್ಣನವರು ಸ್ಪಷ್ಟ ಪಡಿಸಿದರು. ಕಾಯಕಕ್ಕೆ ಬೇಕಾಗುವಷ್ಟು ಶ್ರಮವನ್ನು ಅವರವರು ದಿನವೂ ಮಾಡಿಯೇ ತೀರಬೇಕಾಗಿತ್ತು ಮಾಡತಕ್ಕ ಶ್ರಮವನ್ನು ಹಗುರ ಮಾಡಿಕೊಳ್ಳುವದಕ್ಕಾಗಲೀ, ಸೋಮಾರಿಗಳಾಗುವುದಕ್ಕಾಗಲೀ ಇವರು ಅವಕಾಶವನ್ನು ಕೊಡಲಿಲ್ಲ. ಮಕ್ಕಳ ಮುಂದಿನ ಜೀವನದಲ್ಲಿ ಸ್ವಾವ ಲಂಬನ ಜೀವನವನ್ನು ಅವಲಂಬಿಸುವಂತೆ ಮಾಡಲು ಮಕ್ಕಳಿಗೆ ಮೂಲ ಕಸಬಿನ ವಿಚಾರದ ಮೂಲಕ ವಿದ್ಯೆಯನ್ನು ನೀಡುವುದು ಬೇಸಿಕ ಎಜು ಕೇಷನ್ನಿನ ಗುರಿಯು.

ಎಲ್ಲದಕ್ಕೂ ನಡೆಯೇ ಮೂಲವು. ನಡತೆಯ ಪ್ರಗತಿಗೆ ನೈತಿಕ ಪ್ರವೃದ್ಧಿಯು ಅಗತ್ಯವು. ಎಲ್ಲವೂ ನೈತಿಕ ಹಾದಿಯನ್ನೇ ಅನುಸರಿಸಿ ನಡೆಯುತ್ತದೆ. "ಅಘೋರ ತಪವಮಾಡಿದಡೇನು, ಅಂತರಂಗ ಅಕ್ಷ ಶುದ್ಧವಿಲ್ಲದವನರನೊಲ್ಲ" ಎಂದುವಲ್ಲದೆ ಬಸವಣ್ಣನವರು ಕಳಬೇಡ ಕೊಲಬೇಡ. ಹುಸಿಯ ನುಡಿಯಲು ಬೇಡ, ಮುನಿಯಲು ಬೇಡ, ಅನ್ಯ ರಿಗೆ ಅಸಹ್ಯ ಪಡಲು ಬೇಡ, ತನ್ನ ಬಣ್ಣಿಸಲು ಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ "ಎಂದು ಶುದ್ಧಿಯ ವಿಚಾರವಾಗಿ ನುಡಿದಿದ್ದಾರೆ. ಬೇಸಿಕ ಎಜುಕೇಷನ್ನಿನ ಮೂಲ ಪುರುಷರಾದ ಗಾಂಧೀಜಿಯವರೂ ಕೂಡ ಇದೇ ಅಭಿಪ್ರಾಯವನ್ನು ಆಗಾಗ್ಗೆ ಅಂದಿದ್ದಾರೆ. ನೈತಿಕ ಬಲಸಂವರ್ಧನೆಯಾಗಬೇಕಾದರೆ ಭಕ್ತಿ ಮತ್ತು ಪ್ರಾರ್ಥನೆಯು ಅಗತ್ಯವು. ಗಾಂಧೀಜಿಯವರು ಎಲ್ಲಿಯೇ ಇರಲಿ, ಯಾರ ಸಂಗಡಲೇ ಇರಲಿ ಪ್ರಾರ್ಥನೆಯ ಹೊತ್ತು ಬಂದಿತೆಂದರೆ ಸಾಕು, ಅದನ್ನು ಬಿಡದೆ ಏಕಚಿತ್ತರಾಗಿ ಮುಗಿಸುತ್ತಿದ್ದರು. ಅದು ಕಾರ ಣವೇ ಹಲಕೆಲವು ಪಾಶ್ಚಿಮಾತ್ಯರು ಈ ವಿದ್ಯೆಯನ್ನು ದೈವೀ ಶಿಕ್ಷಣ Divine Education ಎಂದು ಕರೆಯುತ್ತಾರೆ. ಬಸವಣ್ಣನವರೂ ಕೂಡ ಪ್ರಾರ್ಥನೆಗೆ ಪ್ರಥಮ ಪಟ್ಟ ಪೀಠವನ್ನು ನೀಡಿದ್ದಾರೆ. ಪ್ರಾರ್ಥನೆಯನ್ನು ಹೊತ್ತಿಗೆ ಸರಿಯಾಗಿ, ಸಕ್ರಮವಾಗಿ ಏಕಚಿತ್ತರಾಗಿ ಮಾಡಿಸುವುದರಿಂ

ಬಸವಣ್ಣನವರು ಎತ್ತಿದ ಕೈ. ಹೊತ್ತಾರೆ ಎದ್ದು ಅಗ್ಗವಣಿ ಪತ್ರೆಯ ತಂದು ಪೂಜಿಸು ಎಂದು ಒತ್ತಿ ಹೇಳಿದ್ದಾರೆ. ಮತ್ತೊಂದುಕಡೆ ಭಗವಂತನು ಓಂಕಾರ ಪ್ರಿಯನೂ ಅಲ್ಲ, ವೇದ ಪ್ರಿಯನೂ ಅಲ್ಲ, ಭಕ್ತಿ ಪ್ರಿಯನು ಎಂದಿದ್ದಾರೆ ಕೊನೆಗೆ ಸದ್ಭಕ್ತಿ ಸದಾಚಾರವಿಲ್ಲದವನೊಲ್ಲನಯ್ಯ ಎಂದವರೇಲೆ ಇದನ್ನೇ ಗಾಂಧೀಜಿಯು ಶಿಕ್ಷಣದಲ್ಲಿ ನೀತಿಯು ಆಡಳಿತ ನಡೆಸುತ್ತಿರಬೇಕು ಎಂದು ಉಪದೇಶಿಸಿದ್ದಾರೆ. ನೀತಿಯಿಲ್ಲದ ಬೋಧೆ, ದಕ್ಷತೆ ಇಲ್ಲದ ಆಡಳಿತವು ಅಂದವಾಗದು. ಆಚಾರದಲ್ಲಿ ನೈತಿಕವಾಗಿ ನಡೆಯಬೇಕೆಂದು ಅನೇಕ ರೀತಿಯಿಂದ ಮಂಡಿಸಿದರು. ಕೋಪಿ ಶುದ್ಧನಕ್ಕರೆವರೆ ರಕ್ತಘಾರಿ. ಆಸೆಯಾಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ ಮಿಥ್ಯ ಇವನೆನ್ನ ನಾಲಿಗೆಯ ಮೇಲಿಂದತ್ತ ಕಳೆಯಯ್ಯ. ಅಯ್ಯ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ. ಜಯ ಜೀಯಾ ದೇವಾ ಭಕ್ತ ಎಂಬ ನುಡಿಯಲ್ಲಿ ಕೈಲಾಸವೈದು ವಚನವೇ ಸಕಲ ಜಪತಪಂಗಳಯ್ಯಾ ಇತ್ಯಾದಿ ನುಡಿ ನಿತಂಡಗಳು ಬಸವಣ್ಣನವರು ನೈತಿಕ ನಡೆನುಡಿಗೆ ಪ್ರೋತ್ಸಾಹವನ್ನು ಕೊಟ್ಟಿದ್ದನ್ನು ಎತ್ತಿ ತೋರಿಸುತ್ತವೆ. ಮುಂದಿನ ಸತ್ಪ್ರಜೆಗಳನ್ನಾಗಿ ತಯಾರು ಮಾಡುವ ಪ್ರಯೋಗ ಶಾಲೆಗಳಾದ ಶಿಕ್ಷಣ ಮಂದಿರಗಳು ನೀತಿಗೆ ಹೆಚ್ಚಿನ ಗಮನ ಕೊಡಬೇಕೆಂದು ಬಾರಿ ಬಾರಿನ ಗಾಂಧೀಜಿಯವರ ಉಪದೇಶವಾಗಿದೆ. ಬೇಸಿಕ ಎಜುಕೇಷನ್ನನಿಂದ ನಮ್ಮ ನಮ್ಮ ನಡೆನುಡಿಯು ನೀತಿಪರವಾಗುವಂತೆ ಆಗುತ್ತದೆ. ಮುಂದಿನ ಸಮಾಜದಲ್ಲಿ ನೆಟ್ಟನೆ ನಿಲ್ಲಲು ನಿರ್ಭೀತಿ, ಸ್ವಾತಂತ್ರ್ಯಾದಿಯು ಉಕ್ಕೇರುವಂತಾಗುತ್ತದೆ.

ಪ್ರತಿಯೊಂದು ಕೆಲಸವನ್ನೂ ಅಹಿಂಸಾ ಮಾರ್ಗದಿಂದ ಗಾಂಧೀಜಿಯು ಮುಗಿಸುತ್ತಿದ್ದರು. ಅಹಿಂಸೆಯು ಗಾಂಧೀಜಿಯವರಿಗೆ ನಾಂದಿಯು. ಅವರ ನೇತ್ರದ್ವಯಗಳು ಪ್ರೇಮ, ದಯೆಯಾಗಿವೆ. ರಕ್ತ ಪ್ರವಾಹವನ್ನು ಸೃಷ್ಟಿ ಮಾಡುವ ಖಡ್ಗಕ್ಕಿಂತಲೂ ಅಹಿಂಸಾಸ್ತ್ರವು ಸಾವಿರಪಾಲು ಮೇಲು, ಹೋದೆಡೆಯಲ್ಲೆಲ್ಲ ಅಹಿಂಸೆಯನ್ನೇ ಗಾಂಧೀಜಿಯವರು ಆರಂಭಿಸಿ ಜಯಶಾಲಿಗಳಾಗುತ್ತಿದ್ದರು. ಅದು ಇವರ ಪ್ರೇಮದಿಂದ ಎಂದರೆ ತಪ್ಪೇನಾಗಲಾರದು. "ದಯೆಯಿಲ್ಲದ ಧರ್ಮವಾವುದಯ್ಯಾ ? ದಯೆ ಯಿರಬೇಕು ಸಕಲ ಪ್ರಾಣಿಗಳಲ್ಲಿ. ದಯೆಯೇ ಧರ್ಮದ ಮೂಲವಯ್ಯ" ಎಂದಿ

ದ್ದಾರೆ ಬಸವಣ್ಣನವರು. ದಯೆಗೆ ಪ್ರೇಮವು ಪೋಷಕವು. ಮಕ್ಕಳಿಗೆ ಪ್ರೇಮಾಸ್ತ್ರವನ್ನು ಬೀರಿ, ಮೃದುವಚನದಿಂದಲೆ ಅವರಿಗೆ ಪಾಠ ಹೇಳ ಬೇಕೆಂಬುದೇ ಬೇಸಿಕ್ ಶಾಲೆಯ ತತ್ವವು. ಭೀತಿಯ ಭೂತವು ಮಕ್ಕಳ ಕನಸಿನಲ್ಲಿಯೂ ಕೂಡ ಬರಕೂಡದು. ಪ್ರೀತಿಯೇ ಮಕ್ಕಳನ್ನು ಸುಗಮ ವಾಗಿ ತೆಗೆದುಕೊಂಡು ಹೋಗುವಂತಿರಬೇಕು. ವಿದ್ಯೆಯು ಕೇವಲ ಪುಸ್ತ ಕೀಯವಾಗಿರುವುದಿಲ್ಲ! ಬೇಸಿಕ್ ಎಜುಕೇಷನ್ನಿನಲ್ಲಿ. ಇಲ್ಲಿ ಅನುಭವ ರಾಹಿತ್ಯಕ್ಕೆ ಬೆಲೆಯಿಲ್ಲ. ಪ್ರಯೋಗ ಮತ್ತು ಪ್ರತ್ಯಕ್ಷ ವಸ್ತುವು ಅನು ಭವಕ್ಕೆ ಅತ್ಯಗತ್ಯವು. ಹನ್ನೆರಡನೆ ಶತಮಾನದ ಅನುಭವ ಮಂಟಪವು ಅನುಭವ ಜ್ಞಾನಕ್ಕೆ ಹೆಚ್ಚಿಗೆ ಪ್ರಾಶಸ್ತ್ಯವನ್ನು ಕೊಟ್ಟಿದೆ. ಅನುಭವ ಮಂಟಪದ ಸಚಿವನು ಬಸವಣ್ಣನು. ಇಲ್ಲಿ ಶ್ರೇಷ್ಠ ಜ್ಞಾನಾನುಭವ, ಶ್ರೇಷ್ಠ ಕ್ರಿಯೆ, ಶ್ರೇಷ್ಠ ಆನಂದವು ಉಕ್ಕೇರುತ್ತಿತ್ತು. "ಕಿರಿದರೊಳು ಪಿರಿದು ಮಾರ್ಥ ಮಂತುಂಬಿಕೊಂಡಿರ್ದ ವಚನ"ಗಳ ಸೂರೆಯಾಗುತ್ತಿತ್ತು. ಇಲ್ಲಿ ಚರ್ಚೆಗೆ ಸಂಪೂರ್ಣ ಅವಕಾಶವೂ, ವಿನಿಮಯ ಅಭಿಪ್ರಾಯಕ್ಕೆ ಸದವಕಾಶವೂ ಇರುತ್ತಿತ್ತು. ಸರ್ವಸ್ವಾತಂತ್ರ್ಯವು ಸರ್ವರಿಗೂ ಸಿಕ್ಕುತ್ತಿತ್ತು. ಎಲ್ಲರೂ ಬಂಧು ಪ್ರೀತಿಯಿಂದ ತಾವು ಸಂಪಾದಿಸಿದ ಜ್ಞಾನದ ಅನುಭವವನ್ನು ನಿವೇದಿಸುತ್ತಿದ್ದರು. ಯೋಗ್ಯತೆಯುಳ್ಳವರ ಯೋಗ್ಯತೆಯನ್ನು ಕಿರಿದು ಅದನ್ನು ಹೊಗಳಿ ಅವರ ಸಂಗಡ ಸಮರಸವಾಗಿ ಹೋಗುವುದರಿಂದಲೇ ವ್ಯಕ್ತಿಯ ಮತ್ತು ಸಮಾಜದ ಬೆಳವಣಿಗೆಯು ಸುಗಮವಾಗುವುದೆಂಬೀ ಇಲ್ಲಿನ ಅಭಿಪ್ರಾಯವು. ಇದನ್ನೇ ಪರಿಪೋಲುವಂತಿರುವ ಸಾಂಸ್ಕೃತಿಕ ಸಮೃದ್ಧಿ ವಿಚಾರಪ್ರಸಂಗವು ಬೇಸಿಕ್ ಎಜುಕೇಷನ್ನಿನಲ್ಲಿ ತಿಂಗಿನಕಾಯಿ ಯೊಳಗಡೆಯ ತಿರುಳಿನಂತಿದೆ. ಏಕತ್ವದಲ್ಲಿ ಅನೇಕತ್ವವನ್ನೂ ಅನೇಕ ತ್ವದಲ್ಲಿ ಏಕತ್ವವನ್ನೂ ಅನುಭವಿಸುವ ಸಹಜ ದೃಷ್ಟಿಯನ್ನೇ ಅನುಭವ ಮಂಟಪವು ಕೊಡುತ್ತದೆ. ಇದನ್ನು ಬೇಸಿಕ್ ಎಜುಕೇಷನ್ನಿನಲ್ಲಿ ಸಾಮೂ ಹಿಕ ಕೆಲಸದ ವೇಳೆಯಲ್ಲಿ ಕಾಣಬಹುದು.

ಪ್ರತಿಯೊಂದು ಕೆಲಸವೂ ಕೂಡ ಸ್ವಯಂಪೂರಿತವಾಗಿ ಸ್ವಯಂಕೃ ತವಾಗಿ ನಡೆಯಬೇಕು. ಅಂದಿಗೆ ಸ್ವಯಂಪೂರ್ಣತೆ Self – Sufficiency ಯು ಸಿಗುವದು. ಕೆಲಸದಲ್ಲಿ ತಾರತಮ್ಯದನ್ನು ತೋರಿಸಲು ಅವಕಾ ಶವಿರುವುದಿಲ್ಲ. ಈ ಶಿಕ್ಷಣದಲ್ಲಿ ಗುಡಿಸುವುದರಿಂದ ಹಿಡಿದು ಗಃ೨೨

ಯಜಮಾನತ್ವದ ವರೆಗೂ ಒಂದೇ ಒಂದು ಬಗೆಯ ಮನ್ನಣೆಯು. "ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ ? ತನುವಿನಲ್ಲಿ ಹುಸಿತುಂಬಿ ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ "ಎಂದಿದ್ದಾರೆ ಬಸವಣ್ಣನವರು. ಮನೆಯಲ್ಲಿನ ಕಸದ ಹೊಲಸನ್ನು ಹೊರಗೆಹಾಕಿ ಪರಿಶುದ್ಧಮಾಡಿದರೆ ಮಾತ್ರ ಹಸನಾದ ಮನೆಗೆ ಯಜಮಾನನು ಬರುವನು ಎಂದು ಅಭಿಪ್ರಾಯ ಕೊಟ್ಟಿರುವಲ್ಲಿ ಪರಿಶುದ್ಧಕ್ರಿಯೆಗೆ clearing ಬಸವಣ್ಣನವರು ಕೊಟ್ಟಿರುವ ಸ್ಥಾನವು ತಿಳಿಯಬರುತ್ತದೆ. ಮಾತಿನಲ್ಲಿ ಮಾಧುರ್ಯವಿರಬೇಕು. ಮಧುರ ರಸಪೂರಿತಮಾತೇ ಮಹಲೋಕದ ಸುಖವನ್ನು ಕೊಡುತ್ತದೆ. " ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು. ನುಡಿದರೆ ಕೂಡಲಸಂಗಮದೇವ ಸ್ಥೆ ಎಂದು ಅಪ್ಪಿಕೊಳ್ಳುವಂತಿರಬೇಕು. ಎಂದಿದಾರೆ ಬಸವಣ್ಣನವರು. ಪ್ರಾಚೀನರ ಸದ್ನಡೆಯ ತವರೂರು ಭಾರತವು. ತತ್ವವನ್ನು ಅನುಭವಿಸಿ ಅದನ್ನು ತಮ್ಮದೇ ಆದ ನುಡಿಗಳಲ್ಲಿ ಕೋದು ಹೃದಯದೊಳಗಿಂದ ಹಾಯಿಸಿಕೊಂಡು ಬಂದಕಾರಣ ಅವುಗಳಲ್ಲಿ ಶಕ್ತಿಯು ಪ್ರಭಾವವಿದೆ. ಮಾತುಬಂದಾಗ [ಸೋತುಹೋದವನು ಜಾಣನೆಂದೂ, ಮಾತು ಅರಿಯದವನು ಜಗಳತಂದರೆ! ಮಾತುಬಲ್ಲವ ಮಾಣಿಕ್ಯ ತರುವನೆಂದೂ ಹಿರಿಯರ ಹೇಳಿಕೆಯಿದೆ. ಗಾಂಧೀಜಿಯು ಮಾತಿನ ಅನರ್ಥವೇ ಹೊಲೆತನವು ಎಂದಿದ್ದಾರೆ " ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚವನೊಲ್ಲ ಕೂಡಲಸಂಗಮದೇವ " ಎಂದಿದಾರೆ ಬಸವಣ್ಣನವರು. ಆದಕಾರಣ ಮಾತಿನ ಸಲ್ಲಕ್ಷಣವೂ, ಉಪಯೋಗವೂ ಚೆನ್ನಾಗಿ ಶಿಕ್ಷಣದಲ್ಲಿ ಗೊತ್ತಾಗುತ್ತದೆ.

ಸ್ತ್ರೀ ಸ್ವಾತಂತ್ರ್ಯ ಮತ್ತು ಸ್ತ್ರೀ ಶಿಕ್ಷಣ ಪ್ರಗತಿಯ ಪಥದಲ್ಲಿ ಬಸವಣ್ಣನವರು ಎತ್ತಿದ ಕೈ. ಸ್ವಾತಂತ್ರ್ಯವೂ ಸಮಾನತೆಯೂ ಏಕ ಕಾಲದಲ್ಲಿ ತಲೆದೋರಿ ಒಗ್ಗಟ್ಟು ಒಡಮೂಡಿತು. ಜ್ಞಾನ, ಭಕ್ತಿ, ವೈರಾಗ್ಯದಿಂದ ಮುಪ್ಪುರಿಗೊಂಡ ಪ್ರತಿಕೃತಿಯೋ ಎಂಬಂತಿರುವ ಅಕ್ಕಮಹಾ

ದೇವಿಯ ವಿಚಾರವಾಗಿ ಬಸವಣ್ಣನವರು ತೋರಿಸಿದ ಆದರಣೆಯೇ ಸಾಕಾಗಿದೆ. ಅನುಭವ ಮಂಟಪದಲ್ಲಿ ಲಿಂಗಭೇದವನ್ನೇ ಶೂನ್ಯವಾಡಿದ್ದರು. ಗಂಡಸಸಂತೆಯೇ ಹೆಂಗಸಿಗೂ ಹಕ್ಕು ಬಾಧ್ಯತೆಗಳನ್ನೂ ಕರ್ತವ್ಯಕರ್ಮಗಳನ್ನೂ ಕಲ್ಪಿಸಿದರು. ಪರವಧುವ ಮಹಾದೇವಿ ' ಯಾಗಿ ಕಂಡು ' ಪರಸ್ತ್ರೀಯುರಬೇಡ ' ವೆಂದು ಉಪದೇಶಿಸುತ್ತಿದ್ದರು. ಸ್ತ್ರೀಯುರಿಗೆ ಸಮಾನತೆಯನ್ನು ಕಲ್ಪಿಸಿಕೊಡುವಾಗ ನೂರಾರು ವರ್ಷಗಳ ಸಂಪ್ರದಾಯ ಕಟ್ಟನ್ನು ಬಸವಣ್ಣನವರು ಕಿತ್ತೊಗೆಯ ಬೇಕಾಯಿತು. ಪುರುಷನಿಗಿರುವ ಸಕಲ ಧಾರ್ಮಿಕ ಸಾಮಾಜಿಕ ಹಕ್ಕುಗಳು ಹೆಂಗಸರಿಗೆ ದೊರೆತವು. ಹೆಂಗಸರಿಗೆ ಹೊರಗಿನ ಜಗತ್ತಿನಲ್ಲಿ ಜಾಗವನ್ನು ಗಾಂಧೀಜಿಯೂ ಕೂಡ ದೊರಕಿಸಿಕೊಟ್ಟರು. ತನ್ನ ಹೆಂಡತಿ ಕಸ್ತೂರಿಬಾಯಿಯವರನ್ನೇ ಆದರ್ಶವಾಗಿನಿಲ್ಲಿಸಿದರು ಸೇವಾಗ್ರಾಮದಲ್ಲಿ. ವ್ಯಾಸಂಗವೇಳೆಯಲ್ಲಿ ಗಂಡಸೂ ಹೆಂಗಸೂ ನಿರ್ಭೀತಿಯಿಂದ ನಿರಾಳವಾಗಿ ತಮ್ಮ ತಮ್ಮ ಕರ್ತವ್ಯವನ್ನು ನಡೆಯಿಸುವಂತಾಯಿತು. ಯಾವ ಬಗೆಯ ಕೀಳು ತರದ ದೃಷ್ಟಿಯನ್ನೂ ಕೂಡ ಇಟ್ಟುಕೊಳ್ಳದೆ ಅನುಕ್ರಮವಾಗಿ ನಡೆಯುವಂತಾಯಿತು. ಬಸವಣ್ಣನವರ ಯತ್ನದಿಂದ ಹೆಂಗಸರ ವಿವಾಹದಲ್ಲಿ ಬಲಾತ್ಕಾರವು ತಪ್ಪಿಹೋಯಿತು. ವಿರಾಗಿಣಿಯಾಗಿ, ಆಜನ್ಮ ಬ್ರಹ್ಮಚಾರಿಣಿಯಾಗಿ ಹೆಂಗಸರು ಇರಲು ಇಚ್ಛಿಸಿದರೆ ಅವರಿಗೆ ಅವಕಾಶಕೊಡುವಂತೆ ಬಸವಣ್ಣನವರು ಏರ್ಪಾಡುಮಾಡಿದರು. ಹಲವು ವೇಳೆ ಗಂಡಂದಿರನ್ನೂ ಕೂಡ ಸುಜ್ಞಾನಪಥಕ್ಕೆ ತಂದ ಅನೇಕ ಶರಣೆಯರು ವಚನ ಸಾಹಿತ್ಯದಲ್ಲಿ ಕಂಡುಬಂದಿದ್ದಾರೆ. ಗುಣಕ್ಕೆ ಮತ್ಸರವಿಲ್ಲ ' ಜೇಸಿಕ್ ಎಜುಕೇಷನ್ನಿನಲ್ಲಿ. ಇವೆರಡರ ಸಾಮ್ಯವು ಇಲ್ಲಿ ಗೊತ್ತಾಗದೆ ಇರದು. ಹೆಂಗಸು ಸಚ್ಚಾರಿತ್ರದ ಪ್ರತಿರೂಪವೆಂದು ಬಸವಣ್ಣನವರು ಹೇಳಿದಂತೆಯೇ ಗಾಂಧೀಜಿಯವರು ಹೆಂಗಸು ಸದ್ಗುಣದ ಅವತಾರ ವೆಂದಿದಾರೆ.

ಇಂದು ಭಾರತದಲ್ಲಿ ಅಶಾಂತಿಯು ಅಡಗದಿರಲು ಕಾರಣವು ಕೋಮುವಾರುಭಾವನೆಯೆಂದರೆ ತಪ್ಪೇನಾಗಲಾರದು. ಈ ಜಾತಿಭೂತದ ಪ್ರಶ್ನೆಯನ್ನು ಹನ್ನೆರಡನೆ ಶತಮಾನದಲ್ಲಿಯೇ ಬಸವಣ್ಣನವರು ಬಿಡಿಸಲು ಪ್ರಯತ್ನಮಾಡಿದ್ದರು. ಜಾತಿಮತಗಳ ದೃಷ್ಟಿಯತ್ತ ಗಮನಗೊಡದೆ ವೀರಶೈವ ಧರ್ಮದತ್ತ ದೃಷ್ಟಿಯನಿಟ್ಟಿದ್ದರು. ಇವರ ಗುರಿಯು ಲಿಂಗಾಯಿ

ಕರಲ್ಲಿ ಕುಲವನ್ನರಸಬಾರದೆಂಬುದು. ಲಿಂಗರಹಿತರೆಲ್ಲರನ್ನೂ ಒಂದೇ ರೀತಿ ಯಾಗಿ ಭವಿಯೆಂದು ಗಣಿಸುತ್ತಿದ್ದರು. ಬಸವಣ್ಣನವರು 'ವಿಪ್ರನಿಂದ ಹಿಡಿದು ಅಂತ್ಯಜನವರೆಗೆ ಭವಿ ಎಂಬೆನು ಕಾಣಾ' ಎಂದು ನಿರ್ದಾಕ್ಷಿಣ್ಯದಿಂದ ನುಡಿದರು. ಭಾರತದ ಪ್ರಗತಿಗೆ ಕಂಟಕಪ್ರಾಯವಾಗಿದ್ದ ಜಾತಿಭೇದ ಗಳ ಕಟ್ಟನ್ನು ಕತ್ತರಿಸಿ ಔದಾರ್ಯದ ಹೆದ್ದಾರಿಯನ್ನು ಮೊಟ್ಟಮೊದಲು ಮೊದಲು ತೆರೆಯುವಂತಾಯಿತು. 'ಇಡೀ ಜಗತ್ತನ್ನೇ ಆರ್ಯ ಶ್ರೇಷ್ಠ ರನ್ನಾಗಿ ಮಾಡಿರಿ' ಎಂಬ ವೇದಕಾಲದ ಹೆಗ್ಗುರಿಯನ್ನು ಬಸವಣ್ಣ ನವರು ಜಾರಿಗೆ ತಂದರು. ಭಕ್ತಿಯ ಬಲದಿಂದ ಉಚ್ಚನೀಚತೆಯ ಕೀಳ್ಮೊಳೆಯನ್ನು ತೊಳೆದು ಕಸಬುಗಳಲ್ಲಿನ ಮೇಲು-ಕೀಳು ಭಾವನೆಗ ಳನ್ನು ಕಳೆದರು. ಸಮಾಜದ ಕೊಳಚೆಯನ್ನೂ ಧರ್ಮದ ಅಜ್ಞಾನವನ್ನೂ ಆಧ್ಯಾತ್ಮಿಕತೆಯ ಡಾಂಭಿಕತೆಯನ್ನೂ, ನೀತಿಯ ತಿರುವು ಮುರುವನ್ನೂ, ಸಂಸ್ಕೃತಿಯ ಅಯಥಾರ್ಥತೆಯನ್ನೂ, ಸಾಹಿತ್ಯದ ವಿಫಲತೆಯನ್ನೂ ತೊಡೆ ದುಹಾಕಿದ ಬಸವಣ್ಣನು ಜಾತೀಯ ಭೂತದ ವಿಚಾರದಲ್ಲಿಯೂ ಕೂಡ ಅಗಾಧಕ್ರಾಂತಿ ಮಾಡಿದನು. ಶ್ವಪಚನಾದರೇನೂ ಲಿಂಗಭಕ್ತನೇ ಕುಲ ಜನು' ಎಂದರು ಬಸವಣ್ಣ. ಕೊಲ್ಲುವವ ಮಾದಿಗ, ಹೊಲಸು ತಿಂಬು ವವನು ಹೊಲೆಯ ಎಂದು ಬಸವಣ್ಣನವರು ಹೇಳಿದಾಗ ಜಾತಿ ಭೂತ ಗ್ರಸ್ತರು ಕಣ್ಣುತೆರೆದಿರಬೇಕು. 'ಅವಂದಿರ ಕುಲವೇನೋ? ಸಕಲದೇವಾ ತ್ಮರುಗಳಿಗೆ ಲೇಸನೆ ಬಯಸುವ ಕೂಡಲಸಂಗಮ ಶರಣರೇ ಕುಲಜರು' ಎಂದು ಹೇಳಿದಾಗ ಜನತೆಯ ಮೇಲೆ ಪರಿಣಾಮವಾಗಿರಬೇಕು. ಇಷ್ಟಕ್ಕೆ ನಿಲ್ಲದೆ ಉತ್ತಮಕುಲದ ಮಧುವಯ್ಯನೆಂಬ ಬ್ರಾಹ್ಮಣನಿಗೂ ಕೀಳು ಕುಲದ ಹರಳಯ್ಯನೆಂಬ ಅಂತ್ಯಜನಿಗೂ ಶರೀರ ಸಂಬಂಧವನ್ನು ಬೆಳೆ ಸಿದನು. ಇನ್ನೂ ಹಲವು ಬಗೆಯಿಂದ ಅಸ್ಪೃಶ್ಯತೆ ಯೆಂಬ ಪದವನ್ನೇ ಅಳಿಸಲು ಯತ್ನಿಸಿದನು. ಭಾರತದಲ್ಲಿ ಬೆಳೆದಿರುವ ಅಸ್ಪೃಶ್ಯತೆ ಕಳೆ ಯನ್ನು ಕಂಡು ಗಾಂಧೀಜಿಯವರು ಮನಕರಗಿದರು. ಈ ಅಸ್ಪೃಶ್ಯ ರನ್ನು ಹರಿಜನರೆಂದು ಕರೆಯಲು ಪ್ರಾರಂಭಿಸಿದರು. ಹರಿಜನರಿಲ್ಲದ ಸ್ಥಾನಕ್ಕೆ ಹೋಗುವದಿಲ್ಲವೆಂದು ಹಟತೊಟ್ಟರು. ಮೇಲು ಕೀಳೆನ್ನದೆ ಸಂಬಂಧವನ್ನು ಬೆಳೆಸಿದರು. ಹರಿಜನೋದ್ಧಾರಕ್ಕೆ ಇಡೀ ತಮ್ಮ ಜೀವ ವನ್ನೇ ಸವೆಯಿಸಿದರು caste has nothing to do with religion ಎಂದವರು. ಜಾತಿಗಳು ಅಳಿಯುದಹೊರತು ಭಾರತಕ್ಕೆ ಅಭ್ಯುದಯ ವಿಲ್ಲ

ವೆಂದು ಉಪದೇಶಿಸಿದರು. ಭಾರತದಲ್ಲಿ ಜನಿಸಿದವರೆಲ್ಲರೂ ಒಂದೇ ಎಂಬ ಭಾವನೆಯಿಂದ ಬಾಳಬೇಕೆಂದು ಇಸ್ಲಾಂ ಹಿಂದೂ ಬಾಂಧವ್ಯ ಸೇತುವೆಯಾಗಿ ಸ್ವಲ್ಪಕಾಲ ನಿಂತರು. ವರ್ಣಾಶ್ರಮ ಪದ್ಧತಿಯ ನಿರಸನಕ್ಕಾಗಿ ಕೈಗೊಂಡ ತಪಸ್ಸು ಘೋರವೇ ಸರಿಯು. ಅಖಿಲ ಹಿಂದೂ ಜನಾಂಗವು ಒಂದೇ ಜಾತಿಯೆಂಬ ಭಾವನೆಯು ದೃಢವಾಗಿ ಬೇರೂರಿದರೆ ನಾಡಿಗೆ ಶ್ರೇಯಸ್ಸೆಂದರು. ' ಏಕಂ ಸದ್ವಿಪ್ರಾ ಬಹುಧಾ ವದಂತಿ ' ದೇವನೊಬ್ಬ ನಾಮಹಲವು " ಎಂದು ಸಾರಿದರು. ಗಾಂಧೀಜಿಯವರು. ಜಾತಿಪದ್ಧತಿಯ ದುಷ್ಪರಿಣಾಮವು ಶಿಕ್ಷಣ ರಂಗದಲ್ಲಿ ನುಗ್ಗದಂತೆ ಇರಲು ಬೇಸಿಕ್ ಎಜುಕೇಷನ್ನಿನಲ್ಲಿ ' ಹಿಂದೂ ' ಎಂಬ ಒಂದೇ ಹೆಸರಿನಿಂದ ಎಲ್ಲರೂ ಬಾಳಲು ಸಮಾನತೆಯನ್ನು ಸ್ಥಾಪಿಸಿ, ಏಕೀಯತೆಯಿಂದ ಕೆಲಸಮಾಡಿ, ಮುಂದಿನ ಉತ್ತಮ ನಾಗರಿಕರಾಗುವಂತೆ ಏರ್ಪಾಡನ್ನು ಮಾಡಿದರು. ಇಂದಿನ ಅತಂತ್ರವನ್ನು ನೋಡಿ ಮನ ಕರಗಿ ನವೋದಯ ಸಮಾಜ ಸೃಷ್ಟಿಗಾಗಿ ಗಾಂಧೀಜಿಯಿಂದ ಯೋಜಿಸಲ್ಪಟ್ಟಿರುವ ಶಿಕ್ಷಣವೇ ಬೇಸಿಕ್ ಎಜುಕೇಷನ್. ಈ ತತ್ವಗಳು ಹನ್ನೆರಡನೆಯ ಶತಮಾನದಲ್ಲಿಯೇ ಬಸವಣ್ಣನವರ ಬಾಳಿನಲ್ಲಿ ಬೆರೆತಿದ್ದ ವಿಚಾರವು ಎಲ್ಲರಿಗೂ ಗೊತ್ತಾಗಲಿ.

---

## ವಿನಂತಿ

ಮಹನೀಯರೇ,

ವಿಜಾಪೂರ
ತಾ|| ೧-೮-೧೯೫೩

ವಚನ ವಾಙ್ಮಯವು ವೀರಶೈವ ಧಾರ್ಮಿಕ ವಾಙ್ಮಯದಲ್ಲಿ ಅತ್ಯಂತ ಮಹತ್ವದ್ದೆಂಬುದು ಈಗ ಎಲ್ಲರಿಗೂ ತಿಳಿದ ಸಂಗತಿಯಾಗಿರುತ್ತದೆ. ಆದ್ದರಿಂದ ಇದನ್ನು ಪ್ರಚಾರಗೊಳಿಸಲು ಎಲ್ಲ ಕಡೆಗೂ ಅನೇಕ ಸಂಸ್ಥೆಗಳು ಉಂಟಾಗಹತ್ತಿವೆ. ಅನೇಕ ಕಡೆಗೆ ಶಿವಾನುಭವ ಸಂಘಗಳೂ, ಸ್ತ್ರೀಯರಿಗೋಸ್ಕರ ಅಕ್ಕನ ಬಳಗಗಳೂ, ಶಿವಾನುಭವ ಸಮ್ಮೇಳನಗಳೂ ಜರುಗುತ್ತಲಿವೆ. ಇದು ಪ್ರಗತಿಯ ಚಿನ್ಹವಾಗಿದೆ. ಆದರೆ ಪ್ರಚಾರಕ್ಕೋಸ್ಕರ ಪ್ರಯತ್ನಗಳು ವ್ಯವಸ್ಥಿತವಾಗಿ ಎಲ್ಲ ಕಡೆಗೂ ನಡೆಯಬೇಕೆಂಬ ಉದ್ದೇ

ಶದಿಂದ ನಾನು ಕೆಳಗೆ ಕಾಣಿಸಿದ ನಿಯಮಗಳನ್ನು ಇಲ್ಲಿ ಸೂಚಿಸಿದ್ದೇನೆ. ಅವುಗಳನ್ನು ತಾವು ವಿಚಾರಮಾಡಿ ತಮ್ಮ ಅಭಿಪ್ರಾಯಗಳನ್ನು ಶೀಘ್ರವಾಗಿ ನನ್ನ ಕಡೆಗೆ ಕಳಿಸಬೇಕೆಂದು ನನ್ನ ವಿನಂತಿ ಇದೆ.

ಇಂಥ ಸೂಚನೆಗಳು ಬಂದ ಬಳಿಕ ಅವು ಕ್ರೋಡೀಕರಿಸಲ್ಪಡುವವು. ಮತ್ತು ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಸಿದ್ಧಿಸಲ್ಪಡುವವು. ಆಮೇಲೆ ಜಿಲ್ಲೆಗಳಲ್ಲಿರುವ ವಚನ ವಾಙ್ಮಯ ಪ್ರೇಮಿಗಳು ಒಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಿ ಒಂದು ಘಟನೆಯನ್ನು ಗೊತ್ತುಪಡಿಸಿ, ಈ ಮಹತ್ವದ ಕಾರ್ಯವನ್ನು ಮುಂದುವರಿಸಲು ಪ್ರಯತ್ನಿಸಬೇಕೆಂದು ನನ್ನ ವಿನಂತಿ ಅದೆ.

ತಮ್ಮ ವಿಧೇಯ,

ವಿಜಾಪೂರ. ಫ. ಗು. ಹಳಕಟ್ಟಿ

ತಾ॥ ೨೬—೭—೫೧ ಸಂಪಾದಕ ಶಿವಾನುಭವ

---

## ವಚನಶಾಸ್ತ್ರ ಪ್ರಚಾರ ಸಮಿತಿಯ ನಿಯಮಗಳು.

೧ ವಚನಶಾಸ್ತ್ರ ಪ್ರಚಾರ ಸಮಿತಿಯು ....ಪರವಾಗಿ ತಾ||........ ದಿವಸ ಸ್ಥಾಪಿತವಾಗಿರುತ್ತದೆ.

೨ ಇದರ ಉದ್ದೇಶಗಳು ಯಾವವೆಂದರೆ:—

(ಅ) ಶಿವಶರಣರ ವಚನ ವಾಙ್ಮಯವನ್ನು ಪ್ರಚಾರ ಪಡಿಸುವದು.

(ಬ) ವಚನ ವಾಙ್ಮಯವನ್ನು ಸಂಶೋಧಿಸುವದು.

(ಕ) ವಚನ ಗ್ರಂಥಗಳನ್ನು ಪ್ರಕಟಿಸುವದು.

೩ ವಚನ ವಾಙ್ಮಯವನ್ನು ಕೆಳಗೆ ಕಾಣಿಸಿದ ರೀತಿಯಂತೆ ಪ್ರಚಾರಗೊಳಿಸತಕ್ಕದ್ದು. ಅವು ಯಾವವೆಂದರೆ:—

(೧) ಉಪದೇಶಕರನ್ನು ನೇಮಿಸುವದು.

(೨) ವಿದ್ಯಾರ್ಥಿಗಳಲ್ಲಿ ವಚನ ವಾಙ್ಮಯವನ್ನು ಕುರಿತು ಶಿಕ್ಷಣ ಕೊಡಲು ವಚನ ವರ್ಗಗಳನ್ನು ಏರ್ಪಡಿಸುವದು.

( ೩ ) ಗ್ರಾಮಾಂತರಗಳಲ್ಲಿ ಉಪನ್ಯಾಸಗಳನ್ನು ಕಾಲ ಕಾಲಕ್ಕೆ ಏರ್ಪಡಿಸುವದು.

( ೪ ) ಶಿವಶರಣರ ಜಯಂತಿಗಳನ್ನು ನೆರವೇರಿಸುವದು.

( ೫ ) ಶಿವಾನುಭವ ಸಭೆಗಳನ್ನು ಏರ್ಪಡಿಸುವದು.

( ೬ ) ವಚನ ಗಾಯನ ಮತ್ತು ವಚನ ಚರ್ಚಾಕೂಟಗಳಿಗೋಸ್ಕರ ಉತ್ತೇಜನ ಕೊಡುವದು.

( ೭ ) ವಚನಕಾರರ ಮತ್ತು ಶಿವಶರಣರ ಚರಿತ್ರೆಗಳನ್ನು ಪ್ರಚಾರ ಪಡಿಸುವದು.

( ೮ ) ವಚನಕಾರರ ಮತ್ತು ಶಿವಶರಣರ ಬಗ್ಗೆ ಕೀರ್ತನಗಳನ್ನೂ ನಾಟಕಗಳನ್ನೂ ಏರ್ಪಡಿಸುವದು.

( ೯ ) ಶಿವಾನುಭವ ಸಂಸ್ಥೆಗಳನ್ನು ಗ್ರಾಮಾಂತರಗಳಲ್ಲಿ ಏರ್ಪಡಿಸುವದು.

(೧೦) ವೀರಶೈವ ಸಮಾಜದಲ್ಲಿ ಈ ಮೊದಲಿಗೆ ಸ್ಥಾಪಿತವಾಗಿರುವ ವಚನ ವಾಙ್ಮಯ ಸಂಸ್ಥೆಗಳಿಗೆ ಸಹಾಯ ಮಾಡುವದು. ಉದಾಹರಣಾರ್ಥವಾಗಿ — ಶಿವಾನುಭವ ವಿದ್ಯಾಮಂದಿರಗಳು, ಶಿವಾನುಭವ ಮಂಟಪಗಳು, ಅಕ್ಕನ ಬಳಗಗಳು, ವೀರಶೈವ ಸಂಸ್ಕೃತಿಯನ್ನು ಪ್ರಸಾರ ಪಡಿಸುತ್ತಿರುವ ಪತ್ರಿಕೆಗಳು, ಆತ್ಮವಿಚಾರ ಮಂದಿರಗಳು, ವಿದ್ಯಾಪೀಠದ ಪರೀಕ್ಷಾ ಕೇಂದ್ರಗಳ ಚಟುವಟಿಕೆಗಳು, ಭಜನಾಸಂಘಗಳು ಇವೇ ಮೊದಲಾದ ಪ್ರಯತ್ನಗಳನ್ನು ಪುರಸ್ಕರಿಸುವದು.

೪ ಸಮಿತಿಯ ಕಾರ್ಯಗಳನ್ನು ಮಾಡುವದಕ್ಕೋಸ್ಕರ ಒಂದು ರೂಪಾಯಿಗಿಂತಲೂ ಕಡಿಮೆಯಲ್ಲದಷ್ಟು ಹಣವನ್ನು ಪ್ರತಿ ವರುಷ ಜಲ್ಲಾ ಸಮಿತಿಗೆ ಒಪ್ಪಿಸತಕ್ಕದ್ದು. ಹೀಗೆ ಹಣಕೊಟ್ಟವರು ಸಮಿತಿಯ ಸಾಮಾನ್ಯ ಸದಸ್ಯರಾಗುವರು.

೫ ಸಮಿತಿಯ ಕಾರ್ಯಗಳನ್ನು ಮಾಡುವದಕ್ಕೋಸ್ಕರ ಸಾಮಾನ್ಯ ಸದಸ್ಯರು ಒಂದು ಕಾರ್ಯಕಾರೀ ಕಮಿಟಿಯನ್ನು ನೇಮಿಸುವರು. ಈ ಕಮಿಟಿಗೆ ಒಬ್ಬ ಅಧ್ಯಕ್ಷ ಉಪಾಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಇರತಕ್ಕದ್ದು. ಇದರಲ್ಲಿ ಸಾಮಾನ್ಯವಾಗಿ ೧೧ ಜನ ಸಭಾಸದರು ಇರತಕ್ಕದ್ದು.

೬ ವಚನಶಾಸ್ತ್ರ ಪ್ರಚಾರ ಸಮಿತಿಯು ಪ್ರತಿಯೊಂದು ಜಿಲ್ಲೆಯಲ್ಲಿಯೂ ಇರತಕ್ಕದ್ದು. ಅದರಲ್ಲಿ ಅನೇಕ ಶಾಖೆಗಳು ಇರಬಹುದು. ಇಂಥ ಕೆಲವು ಜಿಲ್ಲಾ ಸಮಿತಿಗಳು ಕೂಡಿದಲ್ಲಿ ಪ್ರಾಂತಿಕ ಸಮಿತಿಯು, ಕೆಲವು ಪ್ರಾಂತಿಕ ಸಮಿತಿಗಳು ಕೂಡಿದಲ್ಲಿ ಇಲಾಖಾ ಅಥವಾ ಸಂಸ್ಥಾನ ಸಮಿತಿಯು ಹೀಗೆ ಇರತಕ್ಕದ್ದು.

೭ ಸಮಿತಿಯವರು ಮೇಲೆ ಕಾಣಿಸಿದ ಸಾಮಾನ್ಯ ನಿಯಮಗಳಿಗೆ ಬಾಧೆ ಬರದಂತೆ ತಮಗೆ ಯೋಗ್ಯ ಕಂಡ ನಿಯಮಗಳನ್ನೂ ಉಪ ನಿಯಮಗಳನ್ನೂ ಮಾಡಿಕೊಳ್ಳತಕ್ಕದ್ದು.

೮ ಮೇಲೆ ಹೇಳಿದಂತೆ ವಚನಶಾಸ್ತ್ರ ಪ್ರಚಾರ ಸಮಿತಿಯನ್ನು ಏರ್ಪಡಿಸುವದಕ್ಕೆ ಜಿಲ್ಲೆಯಲ್ಲಿಯ ಕೆಲವು ಪ್ರಮುಖರ ತಾತ್ಪೂರ್ತಿಕ ಕಮೀಟಿಯನ್ನು ನೇಮಿಸತಕ್ಕದ್ದು.

---

## ಶಿವಾನುಭವ ಸಂಸ್ಥೆಯ ನಿಯಮಗಳು.

೧ ಶಿವಾನುಭವ ಸಂಸ್ಥೆಯ ಉದ್ದೇಶವು ಸಮಾಜ, ಕುಟುಂಬ ಮತ್ತು ವ್ಯಕ್ತಿ ಇವರ ಸರ್ವಾಂಗ ಪೂರ್ಣ ಸುಧಾರಣೆಯನ್ನು ಮಾಡುವದು ಇರುತ್ತದೆ.

೨ ಈ ಸಂಸ್ಥೆಗೆ ಸೇರಿದವರು ಸುಧಾರಣೆಯ ಮಹತ್ವದ ಕಾರ್ಯಗಳನ್ನು ಮಾಡಬೇಕಾದುದರಿಂದ ಅವರು ಕೆಳಗೆ ಕಾಣಿಸಿದಂತೆ ಕಾರ್ಯಗಳನ್ನು ಜರಗಿಸುವೆವೆಂದು ಅಭಿವಚನ ಕೊಡತಕ್ಕದ್ದು. ಹೀಗೆ ವಚನ ಕೊಟ್ಟವರೇ ಶಿವಾನುಭವ ಸಂಸ್ಥೆಯ ಸದಸ್ಯರಾಗುವರು. ಆ ವಚನಗಳು ಯಾವವೆಂದರೆ :—

(೧) ಕುಟುಂಬದಲ್ಲಿಯ ಎಲ್ಲ ಸ್ತ್ರೀ ಪುರುಷರೂ ಬಾಲ ಬಾಲಿಕೆಯರೂ ಓದು ಬರಹ ಕಲಿಯುವದು.

(೨) ಸಂಸ್ಥೆಯ ಸದಸ್ಯರು ವಚನ ವಾಙ್ಮಯವನ್ನು ಒಪ್ಪುವದಲ್ಲದೆ ಅವುಗಳ ತತ್ವಗಳಂತೆ ನಡೆಯಲು ಶಕ್ಯವಿದ್ದಷ್ಟು ಪ್ರಯತ್ನಿಸುವದು.

(೩) ದಿನಾಲು ವಚನ ವಾಙ್ಮಯವನ್ನು ಓದುವದಲ್ಲದೆ ಕುಟುಂಬದ ಜನರಿಗೂ ತಿಳಿಸಿ ಹೇಳುವ ವ್ಯವಸ್ಥೆ ಮಾಡುವದು.

(೪) ವೀರಶೈವರಲ್ಲಿ ಜಾತಿ ಭೇದವನ್ನು ಎಣಿಸಕೂಡದು.

(೫) ಮದ್ಯಪಾನ, ತಂಬಾಕು ಸೇದುವದು ಮೊದಲಾದ ದುಶ್ಚಟ ಮತ್ತು ದುರ್ನಡತೆಗಳು ಕುಟುಂಬದಲ್ಲಿರದಂತೆ ವ್ಯವಸ್ಥೆ ಮಾಡುವುದು.

(೬) ಔತಣ, ಲಗ್ನ, ಮೊದಲಾದ ಕಾರ್ಯಗಳ ಸಲುವಾಗಿ ಹಣವನ್ನು ಮಿತಿಯಿಂದ ವ್ಯಯ ಮಾಡುವುದು.

(೭) ವೇಳೆಗೆ ಸರಿಯಾಗಿ ಕಾರ್ಯಗಳನ್ನು ಮಾಡುವುದು.

(೮) ಮನೆಯಲ್ಲಿ ಮತ್ತು ಮನೆಯ ಸುತ್ತಲೂ ಹೊಲಸು ಇರದ ಹಾಗೆ ವ್ಯವಸ್ಥೆ ಮಾಡುವುದು.

(೯) ಉಡಿಗೆ ತೊಡಿಗೆಗಳು ಸ್ವಚ್ಛವಾಗಿರುವುದು.

(೧೦) ವ್ಯಾಜ್ಯಗಳಿಗೋಸ್ಕರ ಕೋರ್ಟ ಕಚೇರಿಗೆ ಹೋಗದೆ ಅವುಗಳನ್ನು ತಮ್ಮ ತಮ್ಮಲ್ಲಿಯೇ ಬಗೆಹರಿಸಿ ಕೊಳ್ಳುವುದು.

(೧೧) ಸತ್ಯಶುದ್ಧ ಕಾಯಕ ಮಾಡುತ್ತ ಉಪಜೀವಿಸುವುದು.

(೧೨) ತನ್ನ ಒಟ್ಟು ಉತ್ಪನ್ನದಲ್ಲಿ ೧೦೦ ಕ್ಕೆ ೧ ರಂತೆ ಶಿವಾನುಭವ ಸಂಸೆಗೆ ಕಾಣಿಕೆಯಾಗಿ ಕೊಡುವುದು.

(೧೩) ವೀರಶೈವರಲ್ಲಿ ಒಕ್ಕಟ್ಟು ಮತ್ತು ಪರಸ್ಪರ ಸಹಾಯ ವನ್ನು ಉಂಟುಮಾಡಲು ಪ್ರಯತ್ನಿಸುವುದು.

೩ ಶಿವಾನುಭವ ಸಂಸ್ಥೆಗಳ ಸಂಖ್ಯೆಯನ್ನು ಹೆಚ್ಚಿಸಲು ಆಯಾ ಸಂಸ್ಥೆಗಳ ಸದಸ್ಯರು ಯಾವಾಗಲೂ ಯತ್ನಿಸತಕ್ಕದ್ದು. ಇಂಥ ಕೆಲವು ಸಂಸ್ಥೆಗಳನ್ನು ಸೇರಿಸಿ ಒಂದು ಕೇಂದ್ರ ಸಂಸ್ಥೆಯನ್ನು, ಇಂಥ ಕೆಲವು ಕೇಂದ್ರ ಸಂಸ್ಥೆಗಳನ್ನು ಸೇರಿಸಿ ತಾಲೂಕು ಸಂಸ್ಥೆಗಳನ್ನು ಕೆಲವು ತಾಲೂಕು ಸಂಸ್ಥೆಗಳನ್ನು ಸೇರಿಸಿ, ಜಿಲ್ಲಾ ಸಂಸ್ಥೆಗಳನ್ನು ಸ್ಥಾಪಿಸ ತಕ್ಕದ್ದು. ಜಿಲ್ಲಾ ಸಂಸ್ಥೆಗಳನ್ನು ಪರಸ್ಪರ ಸೇರಿಸಿ, ಪ್ರಾಂತಿಕ ಸಂಸ್ಥೆ ಸ್ಥಾಪಿಸತಕ್ಕದ್ದು. ಪ್ರತಿಯೊಂದು ಗ್ರಾಮದಲ್ಲಿಯು ಶಿವಾನುಭವ ಸಂಸ್ಥೆಯು ಇರತಕ್ಕದ್ದು.

೪ ಮೇಲ್ಕಂಡ ಸಾಮಾನ್ಯ ನಿಯಮಗಳಿಗೆ ಅನುಸರಿಸಿ ಆಯಾ ಸಂಸ್ಥೆಯವರು ತಮ್ಮ ತಮ್ಮ ನಿಯಮಗಳನ್ನು ಮಾಡಿಕೊಳ್ಳಲಿಕ್ಕೆ ಸ್ವತಂತ್ರರಿದ್ದಾರೆ.

೫ ಮೇಲೆ ಹೇಳಿದಂತೆ ಶಿವಾನುಭವ ಸಂಸ್ಥೆಗಳನ್ನು ಏರ್ಪಡಿಸ ಮಾಡಲಿಕ್ಕೆ ಕೆಲವು ಪ್ರಮುಖರ ತಾತ್ಪೂರ್ತಿಕ ಕಮಿಟಿಯನ್ನು ನೇಮಿಸ ತಕ್ಕದ್ದು.

—೦—

ತ್ವರಿ,                    ಕೋಟಿ ಮಹಾಮಂತ
ಗಳುಪಮಂತ್ರ ಕೋಟ್ಯಾನು ಕೋಟಿಗಳ ಸ್ವರೂಪವಾದಂಥಾದ್ದು ಎಲ್ಲ ಸ್ಥಳಗಳಲ್ಲಿಯೂ ವ್ಯಾಪಕವಾದ ನಾದ ಚೈತನ್ಯ ಸ್ವರೂಪಿನಿಂದ ವೇಧಿಸಿ ಕೊಂಡಿರುತಿಹುದು. ಪರಶಿವನ ಅತ್ಯಂತ ರಹಸ್ಯವಾದ ನಿಜ ಚಿನ್ಮಯ ವಪ್ಪ ಹೃದಯಮುಖವಾಗಿರುತಿಹುದು.

ಪ್ರಣವೋತ್ಪತ್ತಿ ಹೀಗೆಂದು ಹೇಳುವಂಥಾದ್ದು ತಾನೇ ಪ್ರಣವೋತ್ಪತ್ತಿ. ಅಂತುಮಲ್ಲದೆ ನಿರಂಜನ ಪ್ರಣವು, ನಿರಂಜನೋಂಕಾರ ಪ್ರಣವು ಅವಾಚ್ಯ ಪ್ರಣವು, ಕಲಾಪ್ರಣವು, ಬಕಾರ ಪ್ರಣವು. ಸಕಾರ ಪ್ರಣವು, ವಕಾರ ಪ್ರಣವು, ಅಕಾರ ಪ್ರಣವು, ಉಕಾರ ಪ್ರಣವು, ಮಕಾರ ಪ್ರಣವು, ಒಕಾರ ಪ್ರಣವು, ಓಂಕಾರ ಪ್ರಣವು ಮುಂತಾದ ಸಕಲ ಪ್ರಣವುಂಗಳು ಉತ್ಪತ್ತಿಯಾದಂಥ ವಿಚಾರವು ಒಂದನೆಯ ಸ್ಥಲದ ಪ್ರಣವೋತ್ಪತ್ತಿ ಸಮಾಪ್ತ.

## ಪ್ರಣವಗಳ ವಿಧಗಳು

(೧) ಏನೂ ಏನೂ ಎನಲಿಲ್ಲದ ಮಹಾ ಘನನಿರಂಜನಾತೀತದ ನೆನಹು ಮಾತ್ರದಲ್ಲಿ ಆ ನಿರಂಜನ ಪ್ರಣವ ಉತ್ಪತ್ಯವಾಯಿತ್ತು. ಆ ನಿರಂಜನ ಪ್ರಣವದ ನೆನಹು ಮಾತ್ರದಲ್ಲಿ ಅವಾಚ್ಯ ಪ್ರಣವು ಉತ್ಪತ್ಯವಾಯಿತ್ತು. ಆ ಪ್ರಣವದ ನೆನಹು ಮಾತ್ರದಲ್ಲಿ ಕಲಾ ಪ್ರಣವ ಉತ್ಪತ್ಯವಾಯಿತ್ತು ಆ ಕಲಾ ಪ್ರಣವದ ನೆನಹು ಮಾತ್ರದಲ್ಲಿ ಆದಿ ಪ್ರಣವ ಉತ್ಪತ್ಯವಾಯಿತ್ತು. ಆ ಆದಿ ಪ್ರಣವದ ನೆನಹು ಮಾತ್ರದಲ್ಲಿ ಅನಾದಿ ಪ್ರಣವು ಉತ್ಪತ್ಯವಾಯಿತ್ತು. ಆ ಅನಾದಿ ಪ್ರಣವದ ನೆನಹು ಮಾತ್ರ ದಲ್ಲಿ ಅಕಾರ ಉಕಾರ, ಮಕಾರ ಉತ್ಪತ್ಯವಾಯಿತ್ತು. ಆ ಅಕಾರ ಉಕಾರ ಮಕಾರದ ಕೂಟದ ಭೇದದಿಂದ ಒಂಬತ್ತು ಪ್ರಣವವಾಯಿತ್ತು ಆ ಅಕಾರ ಉಕಾರ ಮಕಾರ ಈ ಮೂರು ಕೂಡಿ ಏಕಾರ್ಥವಾಗಿಹ ಪ್ರಣವವು ಶಿವಸಂಬಂಧವಾಗಿಹವು. ಉಕಾರ ಮಕಾರ ಅಕಾರ ಏಕಾರ್ಥವಾಗಿಹ ಪ್ರಣವವು ಶಕ್ತಿ ಸಂಬಂಧವಾಗಿಹವು. ಆ ಮಕಾರ ಅಕಾರ ಉಕಾರ ಏ... ಕಾರ್ಥವಾಗಿಹ ಪ್ರಣವ ಶಿವಶಕ್ತಿ ರಹಿತವಾಗಿಹುದು.

ಆ ಶಿವ ಸಂಬಂಧವಾಗಿಹ ಅಖಂಡಗೋಳಕಾಕಾರ ಪ್ರಣವದಲ್ಲಿ ಜ್ಯೋತಿ ಸ್ವರೂಪ ಪ್ರಣವವೆಂದು ದರ್ಪಣಾಕಾರ ಪ್ರಣವವೆಂದು ಅರ್ಧ ಚಂದ್ರಕ ಪ್ರಣವವೆಂದು ಕುಂಡಲಾಕಾರ ಪ್ರಣವವೆಂದು ದಂಡ ಸ್ವರೂಪ ಪ್ರಣವ ವೆಂದು ತಾರಕಾ ಸ್ವರೂಪ ಪ್ರಣವವೆಂದು ಆರು ಪ್ರಕಾರವಾಗಿಹುದು. ಶಕ್ತಿಸಂಬಂಧವಾದ ಪರಂಜ್ಯೋತಿ ಸ್ವರೂಪವಾಗಿಹ ಪರಮ ಪ್ರಣವದಲ್ಲಿ ತಾರಕಾಸ್ವರೂಪ ಪ್ರಣವವೆಂದು ದಂಡ ಸ್ವರೂಪ ಪ್ರಣವವೆಂದು ಕುಂಡ ಲಾಕಾರ ಪ್ರಣವವೆಂದು ಅರ್ಧ ಚಂದ್ರಕ ಪ್ರಣವವೆಂದು ದರ್ಪಣಾಕಾರ ಪ್ರಣವವೆಂದು ಜ್ಯೋತಿ ಸ್ವರೂಪ ಪ್ರಣವವೆಂದು ಆರು ಪ್ರಕಾರವಾಗಿ ಹುದು. ಶಿವಶಕ್ತಿರಹಿತವಾಗಿಹನಾಗಿ ಅಖಂಡ ಮಹಾಜ್ಯೋತಿ ಪ್ರಣವ ದಲ್ಲಿ ಮೂರ್ತಿ ಬ್ರಹ್ಮ ಪ್ರಣವವೆಂದುಂ ಪಿಂಡ ಬ್ರಹ್ಮ ಪ್ರಣವವೆಂದುಂ ಕಲಾ ಬ್ರಹ್ಮ ಪ್ರಣವವೆಂದುಂ ಬ್ರಹ್ಮಾನಂದ ಬ್ರಹ್ಮ ಪ್ರಣವವೆಂದುಂ ವಿಜ್ಞಾನ ಬ್ರಹ್ಮಪ್ರಣವವೆಂದುಂ ಪರಬ್ರಹ್ಮ ಪ್ರಣವವೆಂದುಂ ಈ ಆರು ಪ್ರಣ ವಂಗಳು ಷಟ್‌ಸ್ಥಲ ಬ್ರಹ್ಮ ತಾನೇ ಷಟ್‌ಪ್ರಣವವಾಗಿಹುದೆಂದು ನಿರಾ ಮಯಾತೀತಾಗಮದಲ್ಲಿ ಪ್ರಸಿದ್ಧವಾಗಿ ಹೇಳುತ್ತಿಹುದು. ಇನ್ನು ಶಿವ ಸಂಬಂಧವಾದ ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣ ವದ ದರ್ಪಣಾಕಾರ ಪ್ರಣವದಲ್ಲಿ ಈಶಾನ್ಯ ಮುಖ ಉತ್ಪತ್ಯವಾಯಿತ್ತು. ಆ ಪ್ರಣವದ ಅರ್ಧಚಂದ್ರಕ ಪ್ರಣವದಲ್ಲಿ ತತ್ಪುರುಷ ಮುಖ ಉತ್ಪತ್ಯ ವಾಯಿತ್ತು. ಆ ಪ್ರಣವದ ಕುಂಡಲಾಕಾರ ಪ್ರಣವದಲ್ಲಿ ಅಘೋರ ಮುಖ ಉತ್ಪತ್ಯವಾಯಿತ್ತು. ಆ ಪ್ರಣವದ ದಂಡ ಸ್ವರೂಪವಾಗಿಹ ಪ್ರಣವದಲ್ಲಿ ವಾಮದೇವ ಮುಖ ಉತ್ಪತ್ಯವಾಯಿತ್ತು. ಆ ಪ್ರಣವದ ತಾರಕಾ ಸ್ವರೂಪ ವಾಗಿಹ ಪ್ರಣವದಲ್ಲಿ ಸದ್ಯೋಜಾತ ಮುಖ ಉತ್ಪತ್ಯವಾಯಿತ್ತು. ಈಶಾನ್ಯ ಮುಖದಲ್ಲಿ ಸಾಯುಜ್ಯ ಪ್ರಣವ ಉತ್ಪತ್ಯವಾಯಿತ್ತು. ತತ್ಪುರುಷ ಮುಖದಲ್ಲಿ ಸಾಕಲ್ಯ ಪ್ರಣವ ಉತ್ಪತ್ಯವಾಯಿತ್ತು. ಅಘೋರ ಮುಖ ದಲ್ಲಿ ಶಾಂಭವ ಪ್ರಣವ ಉತ್ಪತ್ಯವಾಯಿತ್ತು. ವಾಮದೇವ ಮುಖದಲ್ಲಿ ಸಾವಸ್ಯ ಪ್ರಣವ ಉತ್ಪತ್ಯವಾಯಿತ್ತು. ಸದ್ಯೋಜಾತ ಮುಖದಲ್ಲಿ ಸೌಖ್ಯ ಪ್ರಣವ ಉತ್ಪತ್ಯವಾಯಿತ್ತು. ಶಿವಸಂಬಂಧವಾದ ಅಖಂಡ ಜ್ಯೋತಿ ರ್ಮಯವಾಗಿಹ ಗೋಳಕಾಕಾರ ಪ್ರಣವವು ಶಕ್ತಿ ಸಂಬಂಧವಾದ ಅಖಂಡ ಜ್ಯೋತಿರ್ಮಯವಾಗಿಹ ಪರಬ್ರಹ್ಮದಲ್ಲಿ ಪ್ರಣವವು ಶಿವಶಕ್ತಿರಹಿತವಾಗಿಹ

ಅಖಂ
ಏಕಾರ್ಥವಾಗಿ ಅಖಂಡ ಅಪ್ರಮಾಣ ಅಗೋಚರ ಅಪ್ರಮೇಯ ಅಗಮ್ಯ ವಾಚಾಮಗೋಚರ ಕತ್ತತ್ತವಾದ ಮಹಾ ಘನಕ್ಕೆ ಘನವಾದ ಮಹಾ ಘನವೇನೆಂದುಪಮಿಸಬಾರದು. ಉಪಮಾತೀತಕ್ಕೆ ಅತ್ತತ್ತಲಾಗಿಹನು ನಮ್ಮ ಅಪ್ರಮಾಣ ಕೂಡಲ ಸಂಗಮ ದೇವಾ.

## ನಿರಂಜನ ಪ್ರಣವ.

ಏನೂ ಏನೂ ಎನಲಿಲ್ಲದ ಮಹಾ ಘನ ನಿರಂಜನಾತೀತವಾಗಿಹ ವಸ್ತು ಲೋಕಾದಿ ಲೋಕಂಗಳ ಸೃಜಿಸಬೇಕೆಂದು ನೆನಹು ಮಾತ್ರದಲ್ಲಿಯೇ ನಿರಂಜನ ಪ್ರಣವವು ಉತ್ಪತ್ತಿಯಾಯಿತ್ತು. ಇನ್ನು ನಿರಂಜನ ಪ್ರಣವದ ಸ್ಥಲದ ವಚನ.

ಮಂತ್ರಾಧ್ವ, ಪಧಾಧ್ವ ಜನನಕ್ಕೆ ಬಾರದಂದು, ವರ್ಣಾಧ್ವ ಭುವನಾಧ್ವ ಜನನಕ್ಕೆ ಬಾರದಂದು, ತತ್ವಾಧ್ವ ಕಲಾಧ್ವ ಜನನಕ್ಕೆ ಬಾರದಂದು, ನಿರಂಜನ ಪ್ರಣವವಾಗಿರ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ

ಆಧಾರ ಸ್ವಾಧಿಷ್ಠಾನ ಚಕ್ರ ಉತ್ಪತ್ಯವಾಗದ ಮುನ್ನ, ಮಣಿಪೂರಕ ಅನಾಹತ ಚಕ್ರ ಉತ್ಪತ್ಯವಾಗದ ಮುನ್ನ, ವಿಶುದ್ಧಿ ಚಕ್ರ ಉತ್ಪತ್ಯವಾಗದ ಮುನ್ನ, ಪಶ್ಚಿಮ ಚಕ್ರ ಆಜ್ಞಾ ಚಕ್ರ ಉತ್ಪತ್ಯವಾಗದ ಮುನ್ನ, ನಿರಂಜನ ಪ್ರಣವವಾಗಿರ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲ ಸಂಗಮ ದೇವಾ.

ಶಿವತತ್ವವಿಲ್ಲದಂದು ಸದಾಶಿವತತ್ವವಿಲ್ಲದಂದು ಮಹೇಶ್ವರ ತತ್ವವಿಲ್ಲದಂದು ಕೈವಲ್ಯ ತತ್ವವಿಲ್ಲದಂದು ಸಕಲ ತತ್ವ ವಿಲ್ಲದಂದು ಶುದ್ಧ ತತ್ವವಿಲ್ಲದಂದು, ಈ ತತ್ವಂಗಳೇನೂ ಏನೂ ಇಲ್ಲದಂದು ನಿರಂಜನ ಪ್ರಣವವಾಗಿರ್ದನಯ್ಯ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲ ಸಂಗಮ ದೇವಾ.

## ಹಕಾರ

(೧) ಅವಾಗ್ಞವೆಂದರೆ ವಾಚ್ಯಕ್ಕೆ ಬಾರದ ನಿರಂಜನ ಹಕಾರವು. ದಿವ್ಯನಾದ, ನಿರವಯದ ಬಿಂದು, ನಿರುಪಮ ಕಲೆ ಇತಿ ವಿಧ ಸ್ವರೂಪವು ಕಲಿಸಿ ಅವಾಗ್ಞ ಪ್ರಣವವಾಯಿತ್ತು.

(೨) ಅನಿರ್ವಾಚ್ಯವೇ ವಾಚ್ಯವಾದಲ್ಲಿ ಹಕಾರವೆನಿಸಿತ್ತು. ಆ ಹಕಾರವೇ ವಾಚ್ಯಪ್ರಣಮವೆನಿಸಿತ್ತು ಆ ನಿರಂಜನ ಪ್ರಣವುವೇ ಜಂಗಮಾಕೃತಿ ಜಗದಾಧಾರ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

## ಅವಾಚ್ಯ ಪ್ರಣವ

ನಿರಂಜನ ಪ್ರಣವದ ನೆನಹು ಮಾತ್ರ ಬಿಂದು ವಾಚ್ಯ ಪ್ರಣವ ಉತ್ಪತ್ತಿಯಾಯಿತ್ತು. ಇನ್ನು ಆ ವಾಚ್ಯಸ್ಥಲದ ವಚನ.

ನಿರಾಳ ಶಾಂತ್ಯತೀತೋತ್ತರ ಕಲೆ, ನಿರಾಳ ಶಾಂತ್ಯತೀತ ಕಲೆಗಳಿಲ್ಲದಂದು ನಿರಾಳ ಶಾಂತಿಕಲೆ ನಿರಾಳ ವಿದ್ಯಾಕಲೆಗಳಿಲ್ಲದಂದು, ನಿರಾಳ ಪ್ರತಿಷ್ಠಾಕಲೆ ನಿರಾಳ ನಿವೃತ್ತಿ ಕಲೆಗಳಿಲ್ಲದಂದು, ನಿರಾಳ ಮಹಾ ಸಾದಾಖ್ಯ ನಿರಾಳ ಶಿವಸಾದಾಖ್ಯವಿಲ್ಲದಂದು, ನಿರಾಳ ಅಮೂರ್ತಿ ನಿರಾಳ ಮೂರ್ತಿ ಸಾದಾಖ್ಯವಿಲ್ಲದಂದು, ನಿರಾಳ ಕರ್ತೃ ನಿರಾಳ ಕರ್ಮ ಸಾದಾಖ್ಯವಿಲ್ಲದಂದು, ಅಜಪ ಗಾಯತ್ರಿಯಿಲ್ಲದಂದು ಅವಾಚ್ಯ ಪ್ರಣಮವಾಗಿದ್ದನು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವನು.

## ಕಲಾ ಪ್ರಣವ

ಅವಾಚ್ಯ ಪ್ರಣಮದ ನೆನಹು ಮಾತ್ರದಲ್ಲಿ ಕಲಾ ಪ್ರಣವದುತ್ಪತ್ತಿ ಇನ್ನು ಕಲಾ ಪ್ರಣವದ ಸ್ಥಲದ ವಚನ:—

ಅವಾಚ್ಯ ಪ್ರಣಮದ ನೆನಹುಮಾದಲ್ಲಿ ಚಿನ್ನಾದ ಚಿದ್ಬಿಂದು ಚಿತ್ಕಳೆಗಳ ಉತ್ಪತ್ತಿ. ಚಿನ್ನಾದ ಕಲೆ ದ್ವಾದಶ ಕಲೆ ಚಿದ್ಬಿಂದು ಕಲೆ ಷೋಡ

ಕಲೆ ಚಿತ್ಕಲೆಯು ಕಳೆ, ದಶ ಕಲೆ ಆ ಮುವತ್ತೆಂಟು ಕಳೆಗಳು ಏಕವಾಗಿ ಕಲಾ ಪ್ರಣವ ಉತ್ಪತ್ತಿ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಆ ಕಲಾ ಪ್ರಣವದ ಮುವತ್ತೆಂಟು ಕಾಂತಿಯುದೆಂತೆಂದೊಡೆ ಒಂದೊಂದು ಕಲೆಗಳು ಹೋವುತ್ತಿಹ ಕಾಲಾಗ್ನಿಯೋಪಾದಿಯು ಕಾಂತಿಯುನುಳ್ಳುದು. ಒಂದೊಂದು ಕಲೆಗಳು ಕೋಟಿ ಮಿಂಚುಗಳಿಗೆ ಸಮಾನವಹ ಪ್ರಭೆಯುನುಳ್ಳುದು. ಜ್ಞಾನ ಸ್ವರೂಪವಾಗಿಹ ಸೂಕ್ಷ್ಮಕಲೆಗಳೇಕವಾಗಿ ಮುವತ್ತೆಂಟುಕೋಟಿ ಮಿಂಚುಗಳಿಗೆ ಸಮಾನವಾಹ ಪ್ರಭೆಯುಳ್ಳ ಚಿತ್ಕಲಾ ಪ್ರಣಮವು ಶಿಖಾಗ್ರದಲ್ಲಿಹುದು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

ಚಿತ್ಕಳಾ ಪ್ರಣಮುವನುಪಮಿಸಬಾರದ ಉಪಮಾತೀತವು, ಮನಾತೀತವು, ವರ್ಣಾತೀತವು, ತತ್ವಾತೀತವು, ಜ್ಞಾನಾತೀತವು, ನಿರಂಜನ ಕಲಾ ಪ್ರಣವ ಸೂಕ್ಷ್ಮವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಬ ಸ ವ

ಚಿನ್ನಾದ ಚಿದ್ಬಿಂದು ಚಿತ್ಕಲಾಸ್ವರೂಪವಾದ ಬಸವಾಕ್ಷರತ್ರಯವು.

ನಿರುಪಮ ಬಸವಣ್ಣನ ನಿರಾಳ ಬೆಳಗಿನೊಳಗೆ ನಿರಂತರ ಬೆಳಗುತಿರ್ದೆನಯ್ಯ. ಅದೆಂತೆಂದೊಡೆ:—

ಬಕಾರ ಸ್ಥೂಲತನು, ಸಕಾರ ಸೂಕ್ಷ್ಮ ತನು, ವಕಾರ ಕಾರಣತನು.

ಮತ್ತಂ ಬಕಾರವೇ ಎನ್ನ ಜೀವಾತ್ಮನು, ಸಕಾರವೇ ಎನ್ನಂತರಾತ್ಮನು, ವಕಾರವೇ ಎನ್ನ ಪರಮಾತ್ಮನು.

ಮತ್ತಂ ಬಕಾರವೇ ಎನ್ನ ಗುರುವಾಗಿ ಬಂದೆನ್ನ ಪ್ರಾಣವನೊಳಕೊಂಡಿತು. ಸಕಾರವೇ ಲಿಂಗವಾಗಿ ಬಂದೆನ್ನಮನವನೊಳ ಕೊಂಡಿತು. ವಕಾರವೇ ಜಂಗಮವಾಗಿ ಬಂದೆನ್ನ ಧನವನೊಳಕೊಂಡಿತು.

ಮತ್ತಂ ಬಕಾರವೇ ಇಷ್ಟಲಿಂಗವಾಗಿ ಬಂದೆನ್ನ ಸ್ಥೂಲ ತನುವನೊಳಕೊಂಡಿತು. ಸಕಾರವೇ ಪ್ರಾಣಲಿಂಗವಾಗಿ ಬಂದೆನ್ನ ಸೂಕ್ಷ್ಮತನುವನೊಳಕೊಂಡಿತು. ವಕಾರವೇ ಭಾವಲಿಂಗವಾಗಿ ಬಂದೆನ್ನ ಕಾರಣ ತನುವನೊಳಕೊಂಡಿತು.

ಮತ್ತಂ ಬಕಾರವೇ ಶುದ್ಧ ಪ್ರಸಾದವಾಗಿ ಬಂದೆನ್ನ ಜೀವಾತ್ಮತನುವನೊಳಕೊಂಡಿತು. ಸಕಾರವೇ ಸಿದ್ಧ ಪ್ರಸಾದವಾಗಿ ಬಂದೆನ್ನ ಅಂತರಾತ್ಮ ತನುವನೊಳಕೊಂಡಿತು. ವಕಾರವೇ ಪ್ರಸಿದ್ಧ ಪ್ರಸಾದವಾಗಿ ಬಂದೆನ್ನ ಪರಮಾತ್ಮ ತನುವನೊಳಕೊಂಡಿತು.

ಮತ್ತಂ ಬಕಾರವೇ ಸತ್ಕ್ರಿಯೆಯಾಗಿ ಬಂದೆನ್ನ ಬಹಿರಂಗವ ಗ್ರಹಿಸುತ್ತಿರ್ಪುದು. ಸಕಾರವೇ ಸದ್ಭಕ್ತಿಯಾಗಿ ಎನ್ನಂತರಂಗ ಗ್ರಹಿಸುತ್ತಿರ್ಪುದು ವಕಾರವೇ ಮಹಾಜ್ಞಾನವಾಗಿ ಬಂದೆನ್ನ ಒಳಹೊರಗೆಲ್ಲವೂ ಗ್ರಹಿಸುತ್ತಿರ್ಪುದು.

ಇಂತೀ ಬಸವಾಕ್ಷರ ತ್ರಯಂಗಳಲ್ಲಿ ನಾನು ನಿಕ್ಷೇಪವಾಗಿರ್ದು ಬಸವಾ ಬಸವಾ, ಬಸವಾ, ಎಂದು ಬಸವ ನಾಮಾಮೃತವ ಎನ್ನ ಮನವಣಿಯಲುಂಡು ಭವಸೂತ್ರವ ಹರಿದು ಶಿವಸ್ವರೂಪವಾಗಿರ್ದೆನಯ್ಯ ಅಖಂಡೇಶ್ವರಾ.

(೨) ಸೀಮೆ ಸಂಬಂಧಗಳ ನೀರಿಪ್ಪ ಮಂತ್ರಕ್ಕೆ ರಾಜ ಮಾತ್ರವು ತಾನು ಪಂಚಾಕ್ಷರಿ. ಪಂಚಾಕ್ಷರಿಯ ಗುಣದ ಬಸವಾಕ್ಷರತ್ರಯವ ಧ್ಯಾನ ಮೌನದ ಗುಣದ ಸತ್ವವಿಡಿದು ಆನಂದ ತ್ರೈಲಿಂಗ ಮೂಲ ಮಂತ್ರಕ್ಕೀಗ ಬಸವಾಕ್ಷರತ್ರಯವು ಮಾರ್ಕೆಯ್ಯೆ ಕಪಿಲಸಿದ್ಧಮಲ್ಲಿಕಾರ್ಜುನಾ.

## ಅನಾದಿ ಪ್ರಣವ

ಏನೂ ಏನೂ ಎನಲಿಲ್ಲದ ಮಹಾಘನ ಚಿತ್ಕಳಾ ಪ್ರಣವದ ನೆನಹು ಮಾತ್ರದಲ್ಲಿ ಅನಾದಿ ಪ್ರಣವ ಉತ್ಪತ್ತಿ. ಇನ್ನು ಅನಾದಿ ಪ್ರಣವದ ಸ್ಥಲದ ವಚನ ಅದೆಂತೆಂದೊಡೆ :—

ಆದಿ ಅಕಾರ ಉಕಾರ ಮಕಾರ ಮಿಲ್ಲದಂದು ಆದಿ ನಾದ ಬಿಂದು ಕಳೆಗಳಿಲ್ಲದಂದು ಆದಿ ಪ್ರಕೃತಿ ಪ್ರಾಣವಿಲ್ಲದಂದು ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವೆಂಬ ಜ್ಯೋತಿರ್ಲಿಂಗವಿಲ್ಲದಂದು, ಓಂಕಾರವೆಂಬ ಅನಾದಿ ಪ್ರಣಮವಾಗಿದ್ದವು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

ಆದಿ ಅಕಾರದಲ್ಲಿ ತಾರಕ ಸ್ವರೂಪ ದಂಡಕಾ ಸ್ವರೂಪ ಉತ್ಪತ್ಯ, ವಾಗದ ಮುನ್ನ ಮುನ್ನವೇ, ಆದಿ ಉಕಾರದಲ್ಲಿ ಕುಂಡಲಾಕಾರ ಅರ್ಧ ಚಂದ್ರಕ ಉತ್ಪತ್ಯವಾಗದ ಮುನ್ನ ಮುನ್ನವೇ, ಆದಿ ಮಕಾರದಲ್ಲಿ ದರ್ಪಣಾಕಾರ ಜ್ಯೋತಿಸ್ವರೂಪ ಉತ್ಪತ್ಯವಾಗದ ಮುನ್ನ ಮುನ್ನವೇ, ಆದಿ ಅಕಾರ ಉಕಾರ ಮಕಾರ ಈ ಮೂರು ಏಕವಾಗಿ ಅಖಂಡ ಜ್ಯೋತಿರ್ಮಯ ಗೋಳಕಾಕಾರ ಪ್ರಣವ ಉತ್ಪತ್ಯವಾಗದ ಮುನ್ನ ಮುನ್ನವೇ, ಓಂಕಾರವೆಂಬ ಅನಾದಿ ಪ್ರಣವವಾಗಿರ್ದವು ನೋಡಾ ಇಲ್ಲದಂತೆ ನಮ್ಮ ಅಪ್ರಮಾಣ ಕೂಡಲ ಸಂಗಮದೇವಾ.

## ಆದಿ ಪ್ರಣವ

ಅ, ಉ, ಮ

ಓಂಕಾರವೆಂಬ ಅನಾದಿ ಪ್ರಣವ ನೆನಹು ಮಾತ್ರದಲ್ಲಿ ಆದಿ ಅಕಾರ ಉಕಾರ, ಮಕಾರ, ಉತ್ಪತ್ಯವಾಯಿತ್ತು.

**ಅ, ಉ, ಮ,**

(೧) ಶಿವ ಶಕ್ತ್ಯಾತ್ಮಕವಾದ ಅ, ಉ, ಮಾಕ್ಷರ ತ್ರಯವು.

(೨) ಎನ್ನ ನಾದಕ್ಕೆ ಅಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಬಿಂದುವಿಗೆ ಉಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಕಳೆಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ.

(೩) ಬಗೆ ಬಗೆದು ನೋಡಿದ ದೇಹವೆಲ್ಲ ಮೂರು ಮಾತ್ರೆಯಿಂದಾದವಯ್ಯ. ಸ್ಥೂಲ ದೇಹ ಅಕಾರ ಪ್ರಣವು, ಸೂಕ್ಷ್ಮ ದೇಹ

ವದು ಉಕಾರ ಪ್ರಣವು, ಕಾರಣ ದೇಹ ಮಕಾರ ಪ್ರಣವು, ಮೂರು ಮಾತ್ರೆ ಏಕಾವಲ್ಲಿ ಓಂಕಾರವಾಯಿತ್ತು. ತತ್ಪ್ರಣಮಕ್ಕೆ ಸಾಕ್ಷಿಯಾಗಿ ನಿಂದೆ ನಿಂದೆನೆಂಬುದಕ್ಕೆ ಅನಿರ್ವಾಚ್ಯ ಪ್ರಣವವಾದೆ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ.

(೪) ಅಕಾರವದು ಸತ್ವ, ಉಕಾರವದು ರಜ, ಮಕಾರವದು ತಮ, ಅಕಾರವದು ಬ್ರಹ್ಮಜನಕ, ಉಕಾರವದು ವಿಷ್ಣುವಿನ ಜನಕ, ಮಕಾರವದು ರುದ್ರ ಜನಕ, ಅಕಾರವದು ಸೃಷ್ಟಿ, ಉಕಾರವದು ಸ್ಥಿತಿ, ಮಕಾರವದು ಲಯ, ಅಕಾರವದು ಪೀತ, ಉಕಾರವದು ಶ್ಯಾಮ, ಮಕಾರ ವರ್ಣಶುಕ್ಲ, ಅಕಾರವದು ವಿಧಿ, ಉಕಾರವದು ವಿಧಾನ, ಮಕಾರ ವದು ಧ್ಯಾನ, ಅಕಾರವದು ಪಾತಾಳ, ಉಕಾರವದು ಮರ್ತ್ಯ, ಮಕಾರ ವದು ಸ್ವರ್ಗ, ಅಕಾರ ಉಕಾರ ಮಕಾರ ಮೂರರ ಏಕತ್ವವೇ ಓಂಕಾರ. ಆ ಓಂಕಾರವೇ ಆದಿ ಶಕ್ತಿಯ ಗದ್ದುಗೆ, ಆ ಗದ್ದುಗೆಯೇ ಕಪಿಲಸಿದ್ಧ ಮಲ್ಲಿಕಾರ್ಜುನನ ಅರಮನೆ ನೋಡಾ.

(೫) ಅಕಾರವದು ಇಷ್ಟಲಿಂಗ, ಉಕಾರವದು ಪ್ರಾಣಲಿಂಗ, ಮಕಾರವದು ಭಾವಲಿಂಗ. ಭಕ್ತನಾಗಲಿ, ಷಟ್‌ಸ್ಥಲ ಬ್ರಹ್ಮಿಯಾದ ವಂಗೆ ಆಗಲಿ, ಲಿಂಗತ್ರಯ ಪೂಜೆ ಬೇಕು. ಲಿಂಗತ್ರಯ ಪೂಜೆಯ ರಿತು ಮಾಡದವರ ಮನವರಿದು ಮಾತಾಡೆನಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗನೇ.

(೬) ಅಕಾರ ಪ್ರಣವುದಿಂದ ಸ್ಥೂಲ ದೇಹ ದಗ್ಧವಾಯಿತ್ತು. ಉಕಾರ ಪ್ರಣವುದಿಂದ ಸೂಕ್ಷ್ಮ ದೇಹ ನಿರ್ಮಲವಾಯಿತ್ತು. ಮಕಾರ ಪ್ರಣವುದಿಂದ ಕಾರಣ ದೇಹ ಕರ್ಮವಳಿಯಿತ್ತು. ಅಕಾರದಲ್ಲಿ ಜಾಗ್ರತೆ, ಉಕಾರದಲ್ಲಿ ಸ್ವಪ್ನ, ಸ್ವಪ್ನದಲ್ಲಿದರ ರೂಹು ಸುಷುಪ್ತಿಯಲ್ಲಿ, ತ್ರಿವಿಧಾ ವಸ್ಥೆಯಲ್ಲೊಂದಾಗದ ಮಾತ್ರ ಪ್ರಾಣಲಿಂಗ ಆತನಲ್ಲ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ.

(೭) ಆದಿ ಅಕಾರ, ಉಕಾರ, ಮಕಾರ ಈ ಮೂರು ಅಕ್ಷರ. ಅಕಾರವೇ ಆದಿ ನಾದ, ಉಕಾರವೇ ಆದಿ ಬಿಂದು, ಮಕಾರವೇ ಆದಿ

ಭಾವಲಿಂಗ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

(೮) ಇಂತೀ ಆದಿ ಅಕಾರ, ಉಕಾರ, ಮಕಾರಕ್ಕೆ ಆದಿ ಬಿಂದು ಕಳೆ ನಾದವೇ ಆಧಾರ. ಆ ಆದಿ ಬಿಂದು ಕಳೆನಾದಕ್ಕೆ ಆ ಆದಿ ಪ್ರಕೃತಿಯೇ ಆಧಾರ. ಆ ಆದಿ ಪ್ರಕೃತಿಗೆ ಪ್ರಾಣಮಾತ್ರವೇ ಆಧಾರ. ಆ ಪ್ರಾಣ ಮಾತ್ರೆಗೆ ಪರಂಜ್ಯೋತಿ ಲಿಂಗವೇ ಆಧಾರ. ಊ ಎಂದರೆ ಆದಿ ಬಿಂದು, ಮಾ ಎಂದರೆ ಉಕಾರವಳಿಯಿತ್ತು. ಆ ಎಂಬಲ್ಲಿ ಮಾಸ್ವರ ಬಿಂದು ಕೂಡಲು ಶಕ್ತಿ ಶಿವನಾಗುತ್ತಿಹಂತಹ ಓಂಕಾರವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

## ಗೋಳಕಾಕಾರ ಪ್ರಣವ

ಇನ್ನು ಆದಿ ಅಕಾರ ಉಕಾರ ಮಕಾರದಲ್ಲಿ ಆ ಆದಿನಾದ ಬಿಂದು ಕಳೆ ಈ ಮೂರು ಏಕವಾಗಿ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವವಾಯಿತ್ತು. ಅದೆಂತೆಂದೊಡೆ:—

ಓಂಕಾರವೆಂಬ ಅನಾದಿ ಪ್ರಣವದ ನೆನಹುಮಾತ್ರದಲ್ಲಿ ಆದಿ ಅಕಾರ ಉಕಾರ ಮಕಾರ ಉತ್ಪತ್ತಿ. ಆ ಆದಿ ಅಕಾರ ಉಕಾರ ಮಕಾರ ಈ ಮೂರು ಬೀಜಾಕ್ಷರ. ಅಕಾರವೇ ಆದಿನಾದ, ಉಕಾರವೇ ಆದಿ ಬಿಂದು, ಮಕಾರವೇ ಆದಿಕಳೆ, ಅಕಾರವೇ ಆದಿ ರುದ್ರ, ಉಕಾರವೇ ಆದಿ ಈಶ್ವರ, ಮಕಾರವೇ ಆದಿ ಸದಾಶಿವ. ಇಂತೀ ಆದಿ ಅಕಾರ ಉಕಾರ ಮಕಾರಕ್ಕೆ ಆದಿ ನಾದ ಬಿಂದು ಕಳೆಯೇ ಆಧಾರ. ಆ ಆದಿನಾದ ಬಿಂದು ಕಳೆಗೆ ಆ ಆದಿ ಪ್ರಕೃತಿಗೆ ಪ್ರಣಮಾತ್ರೆಯವೇ ಆಧಾರ. ಆ ಪ್ರಣಮಾತ್ರೆಯಿಗೆ ಅಖಂಡ ಜ್ಯೋತಿರ್ಮಯ ಲಿಂಗವೇ ಆಧಾರ. ಆ ಎಂದರೆ ಅನಾಹತ, ಉ ಎಂದರೆ ಆ ಆದಿ ನಾದ ಇಳಿಯಿತ್ತು. ಮಾ ಎಂಬಲ್ಲಿ ಬಿಂದು ಒಂದುಗೂಡಲು ಶಿವಶಕ್ತಿಯಾಗುತ್ತಿಹಂತಹ ಓಂಕಾರವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಪ್ರಣವದ ಲಕ್ಷಣವದೆಂತೆಂದೊಡೆ, ಪ್ರಥಮವು ತಾರಕಾ ಸ್ವರೂಪವಾಗಿಹುದು. ಎರಡನೆಯದು ದಂಡಕ ಸ್ವರೂಪವಾಗಿಹುದು. ಮೂರನೆಯದು ಕುಂಡಲಾಕಾರವಾಗಿಹುದು. ನಾಲ್ಕನೆಯದು ಅರ್ಧ ಚಂದ್ರಾಕಾರವಾಗಿಹುದು. ಐವನೆಯದು ದರ್ಪಣಾಕಾರವಾಗಿಹುದು. ಆರನೆಯದು

ಜ್ಯೋತಿ ಸ್ವರೂಪವಾಗಿಹುದು ಇಂತೀ ಪ್ರಣವವು ಅತ್ಯಂತ ಗೋಪ್ಯ ವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

## ಅತಿ ಸೂಕ್ಷ್ಮ ಪಂಚಾಕ್ಷರ

(೧) ಇನ್ನು ಅತಿ ಸೂಕ್ಷ್ಮ ಪಂಚಾಕ್ಷರೋತ್ಪತ್ತಿ ಅದೆಂತೆಂದೊಡೆ:—

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾ ಸ್ವರೂಪದಲ್ಲಿ ನಕಾರೋತ್ಪತ್ತಿ. ಆ ಪ್ರಣವದ ದಂಡ ಸ್ವರೂಪ ದಲ್ಲಿ ಮಕಾರೋತ್ಪತ್ತಿ. ಆ ಪ್ರಣವದ ಕುಂಡಲಾಕಾರದಲ್ಲಿ ಶಿಕಾರೋತ್ಪತ್ತಿ. ಆ ಪ್ರಣವದ ಅರ್ಧ ಚಂದ್ರಕದಲ್ಲಿ ವಕಾರೋತ್ಪತ್ತಿ. ಆ ಪ್ರಣವದ ದರ್ಪಣಾಕಾರದಲ್ಲಿ ಯಕಾರೋತ್ಪತ್ತಿ ಆ ಪ್ರಣವದ ಜ್ಯೋತಿ ಸ್ವರೂಪ ದಲ್ಲಿ ಜೀವಾತ್ಮ ಪರಮಾತ್ಮರುತ್ಪತ್ತಿದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

(೨) ಇನ್ನು ಅತಿ ಸೂಕ್ಷ್ಮ ಪಂಚಾಕ್ಷರದ ನೆಲೆ:—

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರದ ಪ್ರಣವದ ತಾರಕಾ ಸ್ವರೂಪದಲ್ಲಿ ಅರವತ್ತು ನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ನಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದಂಡ ಸ್ವರೂಪದಲ್ಲಿ ಎಪ್ಪತ್ತುನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶ ವಾಗಿ ಮಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಕುಂಡಲಾಕಾರದಲ್ಲಿ ಎಂಭತ್ತು ನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ಶಿಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಅರ್ಧ ಚಂದ್ರಕದ ಸ್ವರೂಪದಲ್ಲಿ ತೊಂಭತ್ತು ನೂರು ಕೋಟಿ ಸಿಡಿಲೊಡೆದ ಬಯಲ ಪ್ರಕಾಶವಾಗಿ ವಕಾರವಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಈ ಅಖಂಡ ಜ್ಯೋತಿಮಯವಾಗಿಹ ಗೋಳಕಾಕಾರ ಪ್ರಣವ ಜ್ಯೋತಿ ಸ್ವರೂಪದಲ್ಲಿ ಅನೇಕ ಕೋಟಿ ಸಿಡಿಲೊಡೆದ ಬಯಲು ಪ್ರಕಾರ ವಾಗಿ ಜೀವಾತ್ಮ ಪರಮಾತ್ಮರಿಹರು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

## ಐವತ್ತೆರಡಕ್ಷರದುತ್ಪತ್ತಿ.

(೧) ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರ ಸ್ವರದಲ್ಲಿಹ ನಕಾರದಲ್ಲಿ ನಕಾರ ಉತ್ಪತ್ತಿ. ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದಂಡ ಸ್ವರೂಪದ ಲ್ಲಿಹ ಮಕಾರದಲ್ಲಿ ಮಕಾರ ಉತ್ಪತ್ತಿ. ಆ ಅಖಂಡ ಜ್ಯೋತಿರ್ಮಯ ವಾಗಿಹ ಗೋಳಕಾಕಾರ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರದಲ್ಲಿ ಶಿಕಾರ ಉತ್ಪತ್ತಿ. ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಅರ್ಧ ಚಂದ್ರಕಾಕಾರದಲ್ಲಿ ವಕಾರದಲ್ಲಿ ವಕಾರ ಉತ್ಪತ್ತಿ. ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ದರ್ಪಣಾ ಕಾರದಲ್ಲಿಹ ಯಕಾರದಲ್ಲಿ ಯಕಾರ ಉತ್ಪತ್ತಿ. ಈ ಪಂಚಾಕ್ಷರದ ಉತ್ಪತ್ತಿ ಗೋಪ್ಯಕ್ಕೆ ಗೋಪ್ಯವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

(೨) ಈ ಬೀಜಾಕ್ಷರಂಗಳ ನೆಲೆ ಅದೆಂತೆಂದೊಡೆ—ಆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದಲ್ಲಿ ಪ್ರಣವ ಉತ್ಪತ್ತ ವಾಗಿ ಆಜ್ಞಾ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ದರ್ಪ ಣಾಕಾರದಲ್ಲಿಹ ಯಕಾರದಲ್ಲಿ ಯಕಾರ ಉತ್ಪತ್ಯವಾಗಿ ವಿಶುದ್ಧಿ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ಅರ್ಧ ಚಂದ್ರಕದಲ್ಲಿಹ ವಕಾರದಲ್ಲಿ ವಕಾರ ಉತ್ಪತ್ಯವಾಗಿ ಅನಾಹತ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರದಲ್ಲಿ ಶಿಕಾರ ಉತ್ಪತ್ಯವಾಗಿ ಮಣಿ

ಪೂರಕ ಚಕ್ರಕ್ಕೆ ಬೀಜಾಕ್ಷರವಾಗಿಹುದು ಆ ಪ್ರಣವದ ದಂಡ ಸ್ವರೂಪ ದಲ್ಲಿಹ ಮಕಾರದಲ್ಲಿ ಮಕಾರ ಉತ್ಪತ್ಯವಾಗಿ ಸ್ವಾಧಿಷ್ಠಾನ ಚಕ್ರಕ್ಕೆ ಬೀಜಾಕ್ಷರವಾಗಿಹುದು. ಆ ಪ್ರಣವದ ತಾರಕಾ ಸ್ವರೂಪದಲ್ಲಿಹ ನಕಾರ ದಲ್ಲಿ ನಕಾರ ಉತ್ಪತ್ಯವಾಗಿ ಆಧಾರ ಚಕ್ರಕ್ಕೆ ಬೀಜಾಕ್ಷರವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

( ೩ ) ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣ ವದ ಜ್ಯೋತಿ ಸ್ವರೂಪದಲ್ಲಿಹ ಜೀವಾತ್ಮ, ಪರಮಾತ್ಮನಲ್ಲಿ ಜೀವ ಹಂಸ ಪರಮ ಹಂಸ ಉತ್ಪತ್ಯವಾಗಿ ಆಜ್ಞಾ ಚಕ್ರದ ದ್ವಿದಳ ಪದ್ಮದಲ್ಲಿ ನ್ಯಾಸ ವಾಗಿಹುದು ನೋಡಾ ಕೂಡಲ ಸಂಗಮ ದೇವಾ.

ವಿಶುದ್ಧಿ ಚಕ್ರದ ಯಕಾರ ಬೀಜದಲ್ಲಿ ಅ, ಆ, ಇ, ಈ, ಉ, ಊ ಋ, ೠ, ಌ, ೡ, ಎ, ಐ, ಓ, ಔ, ಅಂ, ಅಃ, ಎಂಬ ಷೋಡಶಾಕ್ಷ ರಂಗಳು ಉತ್ಪತ್ಯವಾಗಿ ವಿಶುದ್ಧಿ ಚಕ್ರ ಷೋಡಶದಳ ಪದ್ಮದಲ್ಲಿ ನ್ಯಾಸ ವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಅನಾಹತ ಚಕ್ರದ ವಕಾರ ಬೀಜದಲ್ಲಿ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಡ, ಢ, ಎಂಬ ದ್ವಾದಶಾಕ್ಷ ರಂಗಳುತ್ಪತ್ಯವಾಗಿ ಆ ಅನಾಹತ ಚಕ್ರದ ದ್ವಾದಶ ದಳ ಪದ್ಮದಲ್ಲಿ ನ್ಯಾಸ ವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಮಣಿಪೂರಕ ಚಕ್ರದ ಶಿಕಾರ ಬೀಜದಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ, ಎಂಬ ದಶಾಕ್ಷರಂಗಳುತ್ಪತ್ಯವಾಗಿ ಆ ಮಣಿಪೂರಕ ಚಕ್ರದ ದಶದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

ಸ್ವಾಧಿಷ್ಠಾನ ಚಕ್ರದ ಮಕಾರ ಬೀಜದಲ್ಲಿ ಬ. ಭ. ಮ. ಯ. ರ. ಲ. ಎಂಬ ಆರಕ್ಷರಂಗಳುತ್ಪತ್ಯವಾಗಿ ಆ ಸ್ವಾಧಿಷ್ಠಾನ ಚಕ್ರದ ಷಡುದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಆಧಾರ ಚಕ್ರದ ನಕಾರಬೀಜದಲ್ಲಿ ವ, ಶ, ಷ, ಸ ಎಂಬ ನಾಲ್ಕಕ್ಷರಂಗಳು ಉತ್ಪತ್ಯವಾಗಿ ಆಧಾರ ಚಕ್ರದ ನಾಲ್ಕು ದಳ ಪದ್ಮದಲ್ಲಿ ನ್ಯಾಸವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

(೪) ಈ ಐವತ್ತೆರಡಕ್ಷರ ಅನೇಕ ಆಗಮಂಗಳು ಆ ಐವತ್ತೆರಡಕ್ಷರವೇ ಅನೇಕ ಪುರಾಣಂಗಳು ಈ ಐವತ್ತೆರಡಕ್ಷರವೇ ಆದಿಯಾಗಿ ನಾದರೆ ಈ ಐವತ್ತೆರಡಕ್ಷರದಿಂದಾಗಿ ಆರಕ್ಷರವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

## ಪಂಚಾಕ್ಷರ ಮಂತ್ರ

ನಮಃ ಶಿವಾಯ ಎಂಬ ಪಂಚಾಕ್ಷರ ಮಂತ್ರ.

## ಮೂಲ ಪಂಚಾಕ್ಷರ ಮಂತ್ರ

ಓಂ ನಮಃಶಿವಾಯ ಎಂಬ ಮೂಲ ಪಂಚಾಕ್ಷರ ಮಂತ್ರ.

## ಸ್ಥೂಲ ಪಂಚಾಕ್ಷರ ಮಂತ್ರ

ಓಂ, ಹ್ರಾಂ, ಹ್ರೀಂ, ಹ್ರೂಂ, ನಮಃಶಿವಾಯ ಎಂಬ ಸ್ಥೂಲ ಪಂಚಾಕ್ಷರ ಮಂತ್ರ.

## ಸೂಕ್ಷ್ಮ ಪಂಚಾಕ್ಷರ ಮಂತ್ರ

ಓಂ, ಹ್ರೀಂ, ಶಿವಾಯ ಎಂಬ ಸೂಕ್ಷ್ಮಪಂಚಾಕ್ಷರ ಮಂತ್ರ.

## ಮಾಯಾಖ್ಯ ಪಂಚಾಕ್ಷರ ಮಂತ್ರ

ಓಂ, ಹ್ರೀಂ, ಹ್ರೂಂ, ನಮಃಶಿವಾಯ ಎಂಬ ಮಾಯಾಖ್ಯ ಪಂಚಾಕ್ಷರ ಮಂತ್ರ.

## ಪ್ರಸಾದ ಪಂಚಾಕ್ಷರ ಮಂತ್ರ

ಓಂ, ಹ್ರಾಂ, ಹ್ರೀಂ, ಹ್ರೂಂ, ಹ್ರೌಂ ನಮಃ ಶಿವಾಯ ಎಂಬ ಪ್ರಸಾದ ಪಂಚಾಕ್ಷರ ಮಂತ್ರ

## ಬೀಜಾಕ್ಷರ ಮಂತ್ರ.

ಬ ಸ ವ ಅ ಉ ಮ ಎಂಬ ಬೀಜಾಕ್ಷರ ಮಂತ್ರವಾರು.

## ಅಷ್ಟಾಕ್ಷರಂಗಳು

ಬ ಸ ವ ಅ ಉ ಮ ಹ ಕ್ಷ ಎಂಬ ಅಷ್ಟಾಕ್ಷರಂಗಳೇ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ತೇಜೋಮುಖ ನಾಮವುಳ್ಳ ನಿರ್ಗುಣ ಅಷ್ಟಾವರಣ ಸ್ವರೂಪವೆಂದರಿವುದು.

## ಷಟ್ ಪ್ರಸಾದ ಮಂತ್ರವು ಅಥವಾ ಕೀಲಕ ಮಂತ್ರ

ಸತ್ಯಾದಿ ಲಕ್ಷಣಗಳುಳ್ಳ ಹ್ರಂ, ಹ್ರಿಂ, ಹ್ರುಂ, ಹ್ರೈಂ, ಹ್ರೌಂ ಹ್ರೌಃ ಎಂಬ ಷಟ್ ಪ್ರಸಾದ ಮಂತ್ರವು.

## ಷಡಂಗ ಮಂತ್ರ ಅಥವಾ ನ್ಯಾಸಾಕ್ಷರ ಮಂತ್ರ

ಓಂ ಹಾಂ ಹೃದಯಾಯ ನಮಃ, ಓಂ ಹ್ರೀಂ ಶಿರಸ್ಸೇ ಸ್ವಾಹಾ ಓಂ ಹ್ರೂಂ ಶಿಖಾಯೈ ವೌಷಟ್, ಓಂ ಹ್ರೈಂ ಕವಚಾಯ ಹುಂ, ಓಂ ಹ್ರೌಂ ನೇತ್ರತ್ರಯಾಯ ವೌಷಟ್, ಓಂ ಹ್ರಃ ಅಸ್ತ್ರಾಯ ಫಟ್ ಎಂಬ ಷಡಂಗ ಮಂತ್ರ.

## ವದನಾಕ್ಷರ ಮಂತ್ರ

ಓಂ ಹ್ರಂ ನಾಂ ಸದ್ಯೋಜಾತಾಯ ನಮಃ, ಓಂ ಹ್ರೀಂ ಮಾಂ ವಾಮದೇವಾಯ ನಮಃ, ಓಂ ಹ್ರೂಂ ಶಿಂ ಅಘೋರಾಯ ನಮಃ ಓಂ ಹ್ರೈಂ ವಾಂ ತತ್ಪುರುಷಾಯ ನಮಃ, ಓಂ ಹ್ರೌಂ ಯಾಂ ಈಶಾನಾಯ ನಮಃ, ಓಂ ಹ್ರಃ ಓಂ ಹೃದಯಾಯ ನಮಃ ಎಂಬ ವದನಾಕ್ಷರ ಮಂತ್ರವಾರು.

## ಶಕ್ತಿಷಡಂಗ ಮಂತ್ರ

ಓಂ ಹ್ರಂ ನಾಂ ಸರ್ವಜ್ಞ ಸರ್ವಶಕ್ತಿ ಧಾಮ್ನೇ ನಮಃ, ಓಂ ಹ್ರೀಂ ಮಾಂ ಸ್ವಸ್ತಿ ಶಕ್ತಿ ಧಾಮ್ನೆ ನಮಃ, ಓಂ ಹ್ರೈಂ ವಾಂ ಸ್ವತಂತ್ರ ಶಕ್ತಿ

ಧಾಮ್ನೆ ನಮಃ, ಓಂ ಹ್ರಾಂ ಯಾಂ ನಿತ್ಯ ಶಕ್ತಿ ಧಾಮ್ನೆನಮಃ, ಓಂ ಹ್ರಃ ಓಂ ಅಲುಪ್ತಾ ಶಕ್ತಿ ಧಾಮ್ನೆನಮಃ ಎಂಬ ಶಕ್ತಿ ಷಡಂಗ ಮಂತ್ರವಾರು.

## ಲಿಂಗ ಷಡಕ್ಷರ ಮಂತ್ರ

ಓಂ ಹ್ರಂ ನಾಂ ಆಚಾರಲಿಂಗಾಯ ನಮಃ, ಓಂ ಹ್ರೀಂ ಮಾಂ ಗುರುಲಿಂಗಾಯ ನಮಃ, ಓಂ ಹ್ರೂಂ ಶೀಂ ಶಿವಲಿಂಗಾಯ ನಮಃ, ಓಂ ಹ್ರೈಂ ವಾಂ ಜಂಗಮ ಲಿಂಗಾಯ ನಮಃ ಓಂ ಹ್ರೌಂ ಯಾಂ ಪ್ರಸಾದ ಲಿಂಗಾಯ ನಮಃ, ಓಂ ಹ್ರಃ ಓಂ ಮಹಾಲಿಂಗಾಯನಮಃ ಎಂಬ ಲಿಂಗ ಷಡಕ್ಷರ ಮಂತ್ರವಾರು.

## ಪಂಚ ಪ್ರಸಾದ ಮಂತ್ರ

ಓಂ, ಹಂ, ಹ್ರಾಂ, ಹಂ, ಹ್ರಾಂ ಹೌಂಸ ಎಂಬ ಪಂಚ ಪ್ರಸಾದ ಮಂತ್ರ.

## ಶಿವಾಂಗ ಮಂತ್ರ

ಓಂ, ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಎಂಬ ಶಿವಾಂಗ ಮಂತ್ರ.

## ಶಿವಾಸ್ತ್ರ ಮಂತ್ರ

ಓಂ ಹಃ ಅನಂತ ಶಕ್ತಿ ಧಾಮ್ನೆಜ್ಯೋತಿರೂಪಾಯ ಶಿವಾಸ್ತ್ರಾಯ ಫಟ್ ಎಂಬ ಶಿವಾಸ್ತ್ರ ಮಂತ್ರ.

## ವ್ಯೋಮಾಸ್ತ್ರ ಮಂತ್ರ

ಓಂ ಆಂ ಈಂ ಊಂ ವ್ಯೋಮವ್ಯಾಪಿನೇ ವ್ಯೋಮಾಸ್ತ್ರಾಯ ಫಟ್ ಎಂಬ ವ್ಯೋಮಾಸ್ತ್ರ ಮಂತ್ರ.

## ಪಾಶುಪತಾಸ್ತ್ರ ಮಂತ್ರ

ಓಂ ಶ್ರೀಂ ಪಶು ಹುಂ ಫಟ್ ಎಂಬ ಪಾಶುಪತಾಸ್ತ್ರ ಮಂತ್ರ.

## ಕ್ಷುರಿಕಾಸ್ತ್ರ ಮಂತ್ರ

ಓಂ ಚಿ ಕ್ಷ ಕ್ಷಿ ಭಿ ಚಿ ವ್ಛಿ ದಿ ಕ್ಷು ಕೃತ ಕ್ಷುರಿಕಾಸ್ತ್ರಾಯ ಫಟ್ ಎಂಬ ಕ್ಷುರಿಕಾಸ್ತ್ರ ಮಂತ್ರ.

## ಅಘೋರಾಸ್ತ್ರ ಮಂತ್ರ

ಓಂ ಸ್ಫುರ ಘೋರ ಘೋರ ತಸು ತಮ ತಮ ರೂಪ ತಸ್ತ ರೂಪ ಚಟ ಚಟ ಪ್ರಚಟ ಪ್ರಚಟ ಕಹ ಕಹ ವಮ ವಮ ಬಂಧ ಬಂಧ ಘೋತಾಯ ಘೂತಾಯ ಹುಂ ಫಟ್ ಎಂಬ ಅಘೋ ಅಘೋರಾಸ್ತ್ರ ಮಂತ್ರ

## ಅಜಪ ಗಾಯಿತ್ರಿ ಮಂತ್ರ

ಓಂ ಪರಮೇಷ್ಠಿ ಪರಬ್ರಹ್ಮ ಋಷಿಃ ಪರಮಾತ್ಮ ದೇವಿ ಗಾಯತ್ರಿ ಛಂದಃ ಪ್ರಾಣಾಯಾಮ ವಿನಿಯೋಗಃ

ಓಂ ಭೂಃ ಓಂ ಭುವಃ ಓಂ ಸ್ವಾಹಾ, ಓಂ ಮಹಾ ಓಂ ಜನಃ ಓಂ ತಪಃ ಓಂ ನಿತ್ಯಂ ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋನಃ ಪ್ರಚೋದಯಾತ್॥ ಅಜಪ ಗಾಯತ್ರಿ.

ಅನಂತರದೊಳಿವು ಮಂತ್ರಂಗಳೊಳಗೆ ಆತ್ಮ ಪ್ರಸಾದ ಎಂಬುದೇ ಸರ್ವಾತ್ಮದಲ್ಲಿ ರೇಚಕ ಪೂರಕವೆಂಬ ಪ್ರಾಣೋಪಾನ ರವಿ ಶಶಿಗಳೊಡಗೂಡಿ ಸಂಚರಿಸಿ ಹಂ ಸಂ ಸೋಹಂ ಎಂದೀ ತೆರನಾಗಿ ಜೀವನ ಮಂತ್ರನೇ ಹಂಸ ಮಂತ್ರವೆಂದು ಅಜಪ ಗಾಯಿತ್ರಿ ಎಂದು ಪೆಸರ್ವಡೆದಿರ್ಪುದು. ಅದನಾದೊಡೆ ಪ್ರಾಣಾಯಾಮ ತ್ರಯ ಪೂರ್ವಕವಾಗಿ ಹುದು. ಅಸ್ಯ ಹಂಸ ಮಂತ್ರಸ್ಯ ಹಂಸ ಋಷಿಃ ಅವ್ಯಕ್ತ ಗಾಯಿತ್ರಿಛಂದಃ ಪರಮ ಹಂಸೋಧಿ ದೇವತಾ ಹಂ ಬೀಜಂ ಸಃ ಶಕ್ತಿಃ ಸೋಂಕಿಲಕಂ ಪರಮ ಹಂಸ ಪ್ರಸಾದಾರ್ಥೆ ಜಪೆವಿನಿಯೋಗಃ ಎಂದು ಮೊದಲೆ ಸ್ಮರಿಸಿ ಬಳಿಕ ಹಂಸಾ ಸೂರ್ಯಾತ್ಮನೇ ಅಂಗುಷ್ಠಾಭ್ಯಾಂ ನಮಃ, ಹಂ ಸೀಂ ಸೋಮಾತ್ಮನೇ ತರ್ಜನಿಭ್ಯಾಂ ನಮಃ । ಹಂ ಸೂಂ ನಿರಂಜನಾತ್ಮನೇ ಮಧ್ಯಮಾಭ್ಯಾಂ ನಮಃ । ಹಂ ಸೈಂ ನಿರಾಭಾಸಾತ್ಮನೇ ನಮಃ । ಅನಾಮಿಕಾಭ್ಯಾಂನಮಃ ಹಂ ಸಾಂ ಅವ್ಯಕ್ತಾತ್ಮನೇ ಕನಿಷ್ಠಿಕಾಭ್ಯಾಂ ನಮಃ ಹಂ

ವಂಥ ಪಥ್ಯ ಅನ್ನ ಪಾನಾದಿಗಳು ಮುಖ್ಯವಾದ ಷಡುರಸ ಮಧುರ, ಒಗರು ಖಾರ ಹುಳಿ ಕಹಿ ಲವಣವೆಂಬಾರು ರಸಂಗಳನು ಗುರುಲಿಂಗಕ್ಕೆ ಷಡಕ್ಷರ ಸ್ಮರಣೆಯಿಂದ ಓಂ ಹ್ರೀಂ ಮಕಾರ ಮಂತ್ರ ಮೂರ್ತಿ ಗುರು ಲಿಂಗವೇ ನಿಮಗರ್ಪಿತವೆಂದು ಇತ್ತು ಆಶೀಸಿ ಪ್ರಸಾದವ ಕೊಂಬ ಇಂತು ಲಿಂಗ ಸ್ಮರಣೆಯಿಂದ ಸ್ವೀಕರಿಸಲು ಅದು ಆ ಲಿಂಗ ಪ್ರಸಾದವೆನಿ ಸುವದು. ಅಂತಪ್ಪ ರಸ ಪ್ರಸಾದವನು ಭೋಗಿಸುವಂಥ ಮಾಹೇಶ ವೀರ ಮಾಹೇಶ್ವರನು ವರ್ತಿಸುವ ಪರಬ್ರಹ್ಮದಿ ಆ ಪರಶಿವನಲ್ಲಿಯೇ ಬೆರಿ ಸುವನೆಂಬುವದರ್ಥ. || ೪ ||

ಇದಕ್ಕೆ ಸಾಕ್ಷಿ— ಶ್ಲೋ॥ ಮಾಹೇಶ್ವರೋಜಲಾಂಗಶ್ಚ ಬುದ್ಧಿ ಹಸ್ತೇನ ಸದ್ಗುರುಃ। ಜಿಹ್ವೆ ಮುಖೇ ರಸಂ ಸ್ವಾದಂ। ಅರ್ಪಿತಂ ತೃಪ್ತಿ ಭೋಕ್ತವಾನ್ ॥

ತಾತ್ಪರ್ಯಃ— ಜಿಹ್ವೆಯೇ ಅಂಗವಾದ ಮಾಹೇಶ್ವರನು ಸುಬುದ್ಧಿ ಯೆಂಬ ಹಸ್ತದಿಂದ ಗುರುಲಿಂಗಕ್ಕೆ ರಸ ಪದಾರ್ಥವನು ಜಿಹ್ವೇಂದ್ರಿಯ ವೆಂಬ ಮುಖದಲ್ಲಿ ಸಮರ್ಪಣೆಯಂ ಮಾಡಿ ಆ ಪ್ರಸಾದ ತೃಪ್ತಿಯನೇ ಭೋಗಿಸುತಿಹನೆಂಬುವರ್ಥ || ೪ ||

---

|| **ಪದ** || ಮಣಿಪೂರಕ ಚಕ್ರನಾಭಿಯ ತ್ರಿಕೋಣೆಯೊಳಿರ್ಪ ಅನಿಲ ಸಖ, ಶರೀರ ನಿರಹಂಕಾರ ಹಸ್ತದಿಂ ಘನ ಪ್ರಸಾದಿಯು ದಶ ದಳ ಪದ್ಮದಶ ಪ್ರಣಮುಪೆಸವುತಿಹುದದರ ಮಧ್ಯದಿ || ಇನ ಕೋಟಿ ನಿಧ ಪ್ರಕಾಶ ಶಿವಲಿಂಗಕ್ಕೆ। ಮನಸೊಲಿದು, ನೇತ್ರ ಮುಖದಿಂದೆ ರೂಪಾ ರ್ಪಿಸುತೆ। ಅನುಪಮ ಪ್ರಸಾದವನು ಕೊಂಬ ಪ್ರಸಾದಿಯೇ ಚಿನುಮಯ ನೈಕ್ಯವೆನಸಲು ॥

**ಟೀಕು** ॥ ಮಣಿಪೂರಕ ಚಕ್ರ ಆ ಸ್ವಾಧಿಷ್ಠಾನ ಚಕ್ರದಿಂ ಮೇಲೆ ಅಂಗುಲ ಪ್ರಮಾಣದಲ್ಲಿರುವದೇ ಮಣಿಪೂರಕ ಚಕ್ರ. ನಾಭಿಯ ಸ್ಥಳ ಸ್ಥಾನದಲ್ಲಿರ್ಪುದೀಗ ಮಣಿಪೂರಕ ಚಕ್ರವು ತ್ರಿಕೋಣೆಯೊಳು ಗೃಹದಲ್ಲಿರ್ಪ ಆ ಗರ್ಭ ಗ್ರಹವೇ ನೆಲೆಮನೆಯಾಗಿರುವಂಥ ಅನಿಲ ಮಾರುತಂಗೆ ಸ್ನೇಹಿತನಾದ ಅಗ್ನಿಯೇ ಶರೀರ ಆ ಚಿದಗ್ನಿಯೇ

ಅಂಗವಾದ ನಿರಹಂಕಾರ ಹಸ್ತದಿಂ ನಾನೆಂಬುವಹಂಕಾರವಳಿದು ಲಿಂಗವೇ ಯೆಂಬ ನಿರಹಂಕಾರವಾದಂಥ ಹಸ್ತದಿಂ ಅಂತಪ್ಪ ನಿರಹಂಕಾರವೆಂಬ ಪಾಣಿಯಿಂದೆ ಘನ ದೊಡ್ಡಿತ್ತಾದ ಪ್ರಸಾದಿಯು ಆ ಚಿದಗ್ನಿಯೇ ಅಂಗ ವಾದ ಶಿವ ಪ್ರಸಾದಿಯು ದಶದಳದ ಹತ್ತೆಸಳನುಳ್ಳಂಥ ಪದ್ಮ ಆ ಹತ್ತೆ ಸಳನುಳ್ಳಂಥ ಕುಂಕುಮ ವರ್ಣದ ಕಮಲದಲ್ಲಿ ದಶ ಪ್ರಾಣವು ಆ ಹತ್ತು ಎಳೆಂಗಳಲ್ಲಿರುವ ಡ ಢ ಣ, ತ ಥ ದ ಧ ನ, ಪ ಫ ಎಂಬ ಹತ್ತು ಅಕ್ಷ ರಂಗಳು ಎಸೆಯುತಿಹವು ನ್ಯಾಸವಾಗಿರ್ಪವು. ಅದರ ಮಧ್ಯದಿ ಆ ಕಮಲಕರ್ಣಿಕಾ ಕುಹರ ಮಧ್ಯದಲ್ಲಿ ಇನಕೋಟಿ ತ್ರಿವಿಧ ಪ್ರಕಾಶ ಮೂರು ಕೋಟಿ ಬಾಲಸೂರ್ಯ ಪ್ರಕಾಶವನುಳ್ಳ ಶಿವಲಿಂಗಕ್ಕೆ ಆ ಕಮ ಲದ ತ್ರಿಕೋಣೆಯ ಗರ್ಭ ಗೃಹದೊಳಗಿರ್ಪ ಶಿಕಾರ ಮಂತ್ರ ಮೂರ್ತಿ ಯಾಗಿ ಒಪ್ಪಲ್ಪಟ್ಟಂಥ ಇನಕೋಟಿ ತ್ರಿವಿಧ ಪ್ರಕಾಶ ಮೂರು ಕೋಟಿ ಬಾಲಸೂರ್ಯನ ಪ್ರಕಾಶವನುಳ್ಳಂಥ ಶಿವಲಿಂಗಕ್ಕೆ ಆ ನಾಭಿಯ ಸ್ಥಾನದ ಮಣಿಪೂರಕ ಚಕ್ರದಲ್ಲಿ ಕೆಂಪು ವರ್ಣದ ಹತ್ತೆಸಳ ಕಮಲದ ಕರ್ಣಿಕ ಮಧ್ಯದಲ್ಲಿ ತ್ರಿಕೋಣೆಯ ಗರ್ಭಗೃಹದೊಳಗಿರುವಂಥ ಮಾಂಗಲ್ಯ ಸ್ವರೂಪ ವಾದಂಥ ಶಿಕಾರ ಮೂರ್ತಿ ಶಿವಲಿಂಗಕ್ಕೆ ಮನ ಒಲಿದು ಆ ಶಿವಲಿಂಗದ ಮೇಲಣ ಭಕ್ತಿಯಿಂದೆ ನೇತ್ರ ಮುಖದಿಂದೆ ನಯನವೆಂಬ ಜ್ಞಾನೇಂದ್ರಿ ಯವೇ ಶಿವಲಿಂಗಕ್ಕೆ ವದನವಾದ ನಿಮಿತ್ಯ ಆ ನಯನೇಂದ್ರಿಯ ಮುಖ ದಿಂದವೇ ರೂಪಾರ್ಪಿತಾದಿ ಷಡುವರ್ಣ ರೂಪಂಗಳನು ಅರ್ಪಿಸುವ ಆ ಶಿವಲಿಂಗಕ್ಕೆ ಷಡಕ್ಷರಿಯ ಮಂತ್ರ ಸ್ಮರಣೆಯಿಂದವೆ ನಿರೀಕ್ಷಣೆಯ ಮಾಡ ಲಾಗಿ ಅದು ಆ ಶಿವಲಿಂಗದ ಪ್ರಸಾದವೆನಿಸುವದು. ಕೊಂಬ ಆ ಶಿವ ಲಿಂಗದ ರೂಪು ಪ್ರಸಾದವನು ಸ್ವೀಕರಿಸುವಂಥ ಪ್ರಸಾದಿಯೇ ಅಂತಪ್ಪ ಶಿವಲಿಂಗ ಪ್ರಸಾದಿಯೇ ಚಿನುಮಯನೊಳೈಕ್ಯವೆನಲು ಆ ಚಿತ್‌ಪ್ರಕಾಶ ರೂಪವಾದಂಥ ಪರಶಿವನಲ್ಲಿಯೇ ಲೀಯವಾಗುವನೆಂಬುದರ್ಥ.

ಇದಕ್ಕೆ ಸಾಕ್ಷಿ. ಶ್ಲೋ ॥ ನಿರಹಂಕಾರ ಹಸ್ತೇನ ಅನಲಾಂಗ ಪ್ರಸಾ ದಿಚ ಶಿವಲಿಂಗ ಮುಖೇನೇತ್ರೆ ಅರ್ಪಿತಂ ತೃಪ್ತಿ ಭೋಕ್ತೃವಾನ್ ॥ ೧ ॥

**ತಾತ್ಪರ್ಯ**:— ಚಿದಗ್ನಿಯೇ ಅಂಗವಾದ ಪ್ರಸಾದಿಯು ನಿರಹಂ ಕಾರವೆಂಬ ಹಸ್ತದಿಂದೆ ಶಿವಲಿಂಗಕ್ಕೆ ನೇತ್ರಮುಖದಿಂದೆ ರೂಪ ಸಮ ರ್ಪಿಸಿ ಆ ತೃಪ್ತಿಯನೇ ಭೋಗಿಸುವನೆಂಬುದರ್ಥ ॥ ೫ ॥

॥ **ಪದ** ॥ ಪರಮ ಜಂಗಮ ಲಿಂಗ ಉರದೊಳನಹತ ಚಕ್ರ ಮೆರೆವ ಷಟ್ಕೋಣೆ ಹರಿಯಂಗದಿಂದೆಸೆವುತಿಹ । ವರ ಪ್ರಾಣಲಿಂಗಿಯು ಸುಮನ ಹಸ್ತದಿಂ ಪಿಡಿದು ॥ ಪರಿ ಪರಿಯ ಸ್ಪರ್ಶನವನು ಹರಿತ ವರ್ಣದ ತಾ । ವರೆಯ ದ್ವಾದಶದಳಂಗಳೊಳಗಿರುವ ಪ್ರಣಮ । ದಿರುವಿನೊಳು ರಾಜಿಸುವ ಚರಲಿಂಗ ಮೂರ್ತಿಗಿತ್ತ ಪ್ರಸಾದವ ಕೊಂಬ ಪಿರಿಯ ಸದ್ಯೋನ್ಮುಕ್ತನೂ ॥

**ಟೀಕು** ॥ ಪರಮ ಉತ್ಕೃಷ್ಟವಾದ ಜಂಗಮಲಿಂಗಕೆ ಚರಮೂರ್ತಿಯಾದ ಲಿಂಗಕ್ಕೆ ಉರದೊಳು ಎಡು ಮೇಲೆ ಕಣ್ಣಿನ ಮಧ್ಯದ ಎದೆಗುಂಡಿಗೆಯ ಹೃದಯಸ್ಥಾನದಲ್ಲಿ ಅನಾಹತ ಚಕ್ರವು ಆ ಮಣಿಪೂರಕ ಚಕ್ರದಿಂ ಮೇಲೆ ಎಂಟಂಗುಲ ಪ್ರಮಾಣಿನಲ್ಲಿರುವ ಅನಾಹತ ಚಕ್ರವು ಮೆರೆವ ಲೀಲಾ ವಿನೋದವ ಮಾಡಲೋಸುಗವಾಗಿ ಶೋಭಿಸುವ ಷಟ್ಕೋಣೆ ಆ ಚಕ್ರದಲ್ಲಿ ಆರು ಕೋಣೆಯ ಗರ್ಭ ಗೃಹವು ಹರಿಯಂಗದಿಂದೊಪ್ಪುತ್ತಿಹ ಚಿದ್ವಾಯುವೇ ಶರೀರವಾಗಿ ರಂಜಿಸುತ್ತಿರುವ ವರ ಶ್ರೇಷ್ಠವಾದ ಪ್ರಾಣಲಿಂಗಿಯು ಆ ಜಂಗಮ ಲಿಂಗವೇ ಪ್ರಾಣವಾಗುಳ್ಳ ಲಿಂಗ ಪ್ರಾಣಿಯು ಸುಮನ ಹಸ್ತದಿಂದ ಸುಮನಸವಳಿಮ ಸುಮನ ಪಾಣಿಯಿಂದೆ ಪಿಡಿದು ಆ ಲಿಂಗಕ್ಕೆ ಕೊಡಬೇಕೆಂಬ ಧೃಡವಿಡಿದು ಪರಿ ಪರಿಯ ಮೃದು ಕಠಿಣ ಸೀತೋಷ್ಣವೆಂಬ ಹಲವು ಬಗೆಯ ಸ್ಪರ್ಶನವನು ಸೋಂಕುವ ಪದಾರ್ಥವನು ಹರಿತ ವರ್ಣದ ಧೂಮ್ರ ಛಾಯದ ತಾವರೆಯ ಕಮಲದ ದ್ವಾದಶದಳಂಗಳೊಳಗಿರುವ ಆ ಕಮಲದ ಹನ್ನೆರಡೆಸಳುಗಳಲ್ಲಿ ನ್ಯಾಸವಾಗಿರುವ ಪ್ರಣಮದಿರುವಿನೊಳ್ ಕ ಖ ಗ ಘ ಙ ಚ ಛ ಜ ಝ ಞ ಟ ಠ ಎಂಬ ದ್ವಾದಶ ಅಕ್ಷರಂಗಳಧಿದೇವತಾ ಶಕ್ತಿಯರಲ್ಲಿ ರಾಜಿಸುವ ಶೋಭಿಸುವ ಚರಲಿಂಗ ಮೂರ್ತಿಗೆ ಆ ಚಕ್ರದ ಧೂಮ ವರ್ಣದ ಹನ್ನೆರಡು ದಳದ ಕಮಲದ ಷಟ್ಕೋಣಾಕಾರದ ಗರ್ಭ ಗೃಹದಲ್ಲಿರುವ ೪ ಕೋಟಿ ಬಾಲಸೂರ್ಯ ಪ್ರಕಾಶವನುಳ್ಳ ವಕಾರ ಮಂತ್ರ ಮೂರ್ತಿಯಾದ ಜಂಗಮಲಿಂಗಕ್ಕೆ ಇತ್ತು ಹಿಂದೆ ಹೇಳಿದ ಮೃದು ಕಠಿಣ ಉಷ್ಣವೆಂಬ ಪದಾರ್ಥವನು ಆ ಜಂಗಮ ಲಿಂಗಕ್ಕೆ ತ್ವಗೇಂದ್ರಿಯ ಮುಖವಾದ ಕಾರಣ ಆ ಮುಖದಿಂದವೇ ಸೋಂಕಿದ ಪದಾರ್ಥವನು ಷಡಕ್ಷರಿ ಮಂತ್ರ ಸ್ಮರಣೆಯಿಂದಲಿ ಓಂ ಹ್ರೈಂ ವಕಾರ ಮಂತ್ರ ಮೂರ್ತಿ

ಜಂಗಮಲಿಂಗವೇ ನಿಮಗರ್ಪಿತವೆಂದು ಸುಮನ ಹಸ್ತದಿಂ ಕೊಟ್ಟು ಆ ಪ್ರಸಾದವ ಕೊಂಬ ಆ ಲಿಂಗ ಧ್ಯಾನದಿಂ ಸ್ಪರ್ಶನಂಗೆಯ್ಯಲದೇ ಪ್ರ ಲಿಂಗದ ಪ್ರಸಾದವೆನಿಪುದು. ಅಂತಪ್ಪ ಆ ಚರಲಿಂಗದ ಸ್ಪರ್ಶನ ಪ್ರಸಾದ ವನು ಸೇವಿಸುವಾತನು ಹಿರಿಯ ಆ ಪ್ರಾಣಲಿಂಗಿಯಾದ ಯಜಮಾನನು ಸದ್ಯೋನ್ಮುಕ್ತನು ಇಹದಲ್ಲಿ ಬಾಳುತ್ತಲೇ ಆ ಜಂಗಮ ಲಿಂಗದ ಸೇವನೆ ಶರ್ತನಾಗಿ ತಪರಶಿವನಲ್ಲಿಯೇ ಸಮರಸನಾಗುವನೆಂಬ.ದೀ ಪದದ ತಾತ್ಪ ಯರ್ಾರ್ಥ.

**ಸಾಕ್ಷಿ:—** ಮನೋಹಸ್ತೇನ ಮಾಯ್ವಂಗ। ಪ್ರಾಣಲಿಂಗಿತಥೈವಚ। ಜಂಗಮೇ ತನ್ಮುಖ ಶ್ಚೈವ। ಅರ್ಪಿತಂ ಸ್ಪರ್ಶಭೋಕ್ತವಾನ'

**ತಾತ್ಪರ್ಯ:—** ಚಿದ್ವಾಯುವೇ ಅಂಗವಾದ ಪ್ರಾಣಲಿಂಗಿಗೆ ಸುಮನವೆಂಬ ಹಸ್ತದಿಂದೆ ಜಂಗಮಲಿಂಗಕ್ಕೆ ತ್ವಗೀಂದ್ರಿಯ ಮುಖದಲ್ಲಿ ಸ್ಪರ್ಶನ ದ್ರವ್ಯವ ಸಮರ್ಪಿಸಿ ಆ ತೃಪ್ತಿಯನೆ ಭೋಗಿಸುವನು ಎಂಬು ದೀಗ ಈ ಗ್ರಂಥದರ್ಥ ॥ ೬ ॥

---

**ಪದ:—** ಗಳದೊಳಾಮಳಕಫಳದಾಕಾರ ಚಕ್ರದೊಳು। ನಳಿನ ಷೋಡಶದಳದಿ ಷೋಡಶ ಸ್ವರಾಕ್ಷರವು। ಎಳೆ ಗಗನ ಶಶಿ ಕಿರಣ ಶರಣಗೆ ಹಸ್ತ ಸುಜ್ಞಾನ ಶ್ರೋತ್ರ ಮುಖದಿಂ ಶಬ್ದವಾ ॥ ಥಳಥಳಿಪ ಶೇಷ ಪ್ರಸಾದ ಲಿಂಗಕೆಯಿತ್ತು। ಅಳವಟ್ಟ ಆ ಪ್ರಸಾದವನೆ ಸ್ವೀಕರಿಸುತಿಹ। ನಳಿನಾರಿ ಚೂಡನೊಳಗಳುವಿಲ್ಲದಿಹುದೆಂದು ಪೊಗಳುತಿಹುದೇ ರಹಸ್ಯವು ॥

**ಟೀಕು ॥** ಗಳದೊಳು ಕಂಠಸ್ಥಾನದಲ್ಲಿ ಆಮಳಕ ಫಳಕ ನೆಲ್ಲೀ ಕಾಯೋಪಾದಿಯಲ್ಲಿ ಬಟುವಾಗಿಯುಳ್ಳಂಥಾ ಆಕಾರ ಆ ವೃತ್ತಾಕಾರ ದಿಂದೆ ಶೋಭಿಸುವ ಚಕ್ರದೊಳು. ಅನಾಹತ ಚಕ್ರದಿಂ ಮೇಲೆ ದಶಾಂ ಗುಲ ಪ್ರಮಾಣದಲ್ಲಿರ್ಪ ವಿಶುದ್ಧಿ ಚಕ್ರದಲ್ಲಿ ನಳಿನ ಸ್ಫಟಿಕ ವರ್ಣವ ನುಳ್ಳ ವಾರಿಜಕ್ಕೆ ಆ ಷೋಡಶದಳದಿ ಆ ಕಮಲದ ಹದಿನಾರು ಎಸ ಳುಗಳಲ್ಲಿ ಷೋಡಶ ಸ್ವರಾಕ್ಷರವು ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ೧೬ ಸ್ವರಾಕ್ಷರಗಳು ನ್ಯಾಸವಾ ಗಿಹವು. ಎಳೆಗಗನ ಕಾರ್ಮೇಘಂಗಳು ಕವಿಯುಗಿಲು ಮೋಡಮುಸುಂ

[illegible]

ಹಸ್ತವಾಗಿಹುದು. ಶ್ರೋತ್ರ ಮುಖದಿಂ ಜ್ಞಾನೇಂದ್ರಿಯೊಳಗಣ
ತ್ರೇಂದ್ರಿಯ ವಕ್ತ್ರದಿಂದೆ ಶಬ್ದವ ತಾಳ ಕಂಸಾಳ ಭೇರಿ ಮೃದಂ
ತಂಬೂರಿ ಶಂಖನಾದ ಸ್ವರ ರಾಗ ಪದ ವಚನ ಮುಂತಾದ
ಾಶಬ್ದಗಳು ಥಳಥಳಿಸ ಐದುಕೋಟಿ ಬಾಲಸೂರ್ಯಪ್ರಕಾಶವನ
ಶಾ ಶೇಷ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂ
ಮೇಲೆ ಉಳುಮೆಯಾದಂಥ ಪ್ರಸಾದ ಲಿಂಗಕ್ಕೆ ಶರಣನ ಶೇಷವ
ಕ್ಕೆ ಲಿಂಗದ ಶೇಷವು ಶರಣಂಗಾದ ಕಾರಣ ಅಂತಪ್ಪ ಪ್ರಸಾದ
ಕ್ಕೆ ಇತ್ತ ಆ ಕಂಠಸ್ಥಾನದ ವಿಶುದ್ಧಿಚಕ್ರದಲ್ಲಿ ಸ್ಫಟಿಕವರ್ಣದ
ದಳ ಕಮಲದ ಕರ್ಣಿಕಾಕುಹರದಲ್ಲಿ ವೃತ್ತಾಕಾರ ಗರ್ಭಗೃಹದಲ್ಲಿರು
ಾ ಯಕಾರ ಮಂತ್ರ ಮೂರ್ತಿ ಪ್ರಸಾದಲಿಂಗಕ್ಕೆ ಶ್ರೋತ್ರೇಂದ್ರಿಯ
ದಿಂದೆ ಪೂರ್ವೋಕ್ತ ಶಬ್ದ ಪದಾರ್ಥವನು ಷಡಕ್ಷರ ಮಂತ್ರ ಸ್ಮ
ಂದೆ ಓಂ ಹ್ರೌಂ ಯಕಾರ ಮಂತ್ರ ಮೂರ್ತಿ ಪ್ರಸಾದ ಲಿಂಗವೇ
ಗರ್ಪಿತವೆಂದು ಸುಜ್ಞಾನ ಹಸ್ತದಿಂ ಆ ಲಿಂಗಕ್ಕೆ ಕೊಟ್ಟು ಆಳವಟ್ಟು
ಪ್ಪ ಲಿಂಗ ಧ್ಯಾನವೇ ಸಾಧ್ಯವಾಗಿ ಆ ಪ್ರಸಾದವನೆ ಆ ಶಬ್ದ ಪದಾ
ನು ಆ ಪ್ರಸಾದಲಿಂಗದ ಧ್ಯಾನದಿಂದೆ ಆ ಶರಣನು ಕೇಳಲಾಗಿ
ಬ್ದ ಪದಾರ್ಥವೆಲ್ಲವು ಆ ಲಿಂಗದ ಪ್ರಸಾದವೆ ಆಯಿತ್ತಾಗಿ ಅಂತಪ್ಪ
ಾದವ ಸ್ವೀಕರಿಸುತ್ತಿಹ ಆ ಶಬ್ದ ಪದಾರ್ಥವನು ಆರೋಗಿಸುವಂಥ
ರಣನು ನಳಿನಾರಿ ವಾರಿಜಕ್ಕೆ ವೈರಿಯಾದಂಥ ಚಂದ್ರ ಚೂಡ
ು ಮಸ್ತಕದಲ್ಲಿಧರಿಸಿದಂಥ ಪರಶಿವನಲ್ಲಿ ಅಳುಪಿಲ್ಲದಿಹುದೆಂದು ಕೇಡಿ
ರ್ದೆಂದು ಪೊಗಳುತಿಹದ ರಹಸ್ಯಂ ಇಂತೆಂದು ವೇದಾಗಮಂಗ
ರಹಸ್ಯವಾಗಿ ಹೇಳುತ್ತಿಹುದೆಂಬರ್ಥ

ಸಾಕ್ಷಿಃ— ಜ್ಞಾನಹಸ್ತೇನ ಶರಣೋ। ವ್ಯೋಮಾಂಗಸ್ಯ ಪ್ರಸಾದತೆ
ತ್ರೇಣ ಚತುನ್ಮುಖಂಚೈವ। ಅರ್ಪಿತಂ ಶಬ್ದ ಭೋಕ್ತವಾನ್

**ತಾತ್ಪರ್ಯಃ—** ಚಿದಾಕಾಶವೇ ಯಂಗವಾದ ಶರಣನು ಸುಜ್ಞಾ
ಬ ಹಸ್ತದಿಂದೆ ಪ್ರಸಾದ ಲಿಂಗಕ್ಕೆ ಶ್ರೋತ್ರ ಮುಖದಲ್ಲಿ ಶಬ್ದ ಪದಾ
ನರ್ಪಿಸಿ ಆ ತೃಪ್ತಿಯನೇ ಭೋಗಿಸುವನೆಂಬರ್ಥ ॥ ೭ ।

---

೯

**ಪದಃ**— ಕಿಕ್ಕಿರಿದ ತಮಂಧದಾಜ್ಞಾ ಚಕ್ರವು ಫಣಿಯ | ಇಕ್ಕೆಲದ ಮಧ್ಯದೊಳಗಿರ್ಪ ದ್ವಿದಳ ಪದ್ಮ| ದಕ್ಕರವು ಹಂ ಕ್ಷ ಮಾಣಿಕ್ಯ ವರ್ಣ ಪೀಠದೊಳು ಸಿಕ್ಕಿರುವ ಮಹಲಿಂಗಕೆ| ಮಕ್ಕಳುಂಡರೆ ಮಾತೆ ಸಂತೋಷಿಸುವ ತೆರದಿ| ಇಕ್ಕುತಿಹ ಭಾವ ಹಸ್ತದಿ ಹೃದಯ ಮುಖದಿಂದೆ | ಮಿಕ್ಕ ಪ್ರಸಾದವನು ಕೊಂಡು ಸುಖಿಸುವ ಐಕ್ಯಯಕ್ಕಡಿಗ ಪರಲೋಕದಿ||

**ಟೀಕುಃ**— ಕಿಕ್ಕಿರಿದ ಕಿಷ್ಕಿಂಧವಾದಂಥ ತಮಂಧದ ಮಂಗಾರ ಬಹುಳ ಅಮಾವಾಸ್ಯೆಯ ಕಾರ್ಮುಗಿಲಿನಲ್ಲಿ ದಟ್ಟಿಸಿದ ಕತ್ತಲೆಯೋಪಾದಿಯ ಭ್ರೂಮಧ್ಯಸ್ಥಾನದಲ್ಲಿರ್ಪ ಆಜ್ಞಾಚಕ್ರವು ಫಣಿಯು ಲಲಾಟದ ಇಕ್ಕೆಲ ಮಧ್ಯದೊಳಗೆ ಎರಡು ಹುಬ್ಬಿನ ನಡುವೆ ಇರ್ಪ ಇಂಥ ದ್ವಿದಳ ಪದ್ಮ ಆ ಆಜ್ಞಾಚಕ್ರದಲ್ಲಿರುವ ಉಭಯ ಪತ್ರದ ಕಮಲವು ಅಕ್ಕರವು ಹಂ ಕ್ಷಂ ಆ ಉಭಯದಳಂಗಳಲ್ಲಿರುವ ಎರಡಕ್ಷರವು ಮಾಣಿಕ್ಯ ವರ್ಣ ಜ್ಯೋತಿರ್ಮಯ ತೇಜದಿಂದೊಪ್ಪುವ ಪೀಠದೊಳು ಆ ಭ್ರೂಮಧ್ಯ ಸ್ಥಾನದಾಜ್ಞಾಚಕ್ರದಲ್ಲಿರುವಂಥ ಮಾಣಿಕ್ಯವರ್ಣವನುಳ್ಳ ದ್ವಿದಳ ಕಮಲದ ಸಿಂಹಾಸನದಲ್ಲಿ ಸಿಕ್ಕಿರುವ ಕೀಲಿಸಿಕೊಂಡಿರುತಿರ್ಪ ಮಹ ಹಿಂದೆ ಹೇಳಲ್ಪಟ್ಟ ಪಂಚಲಿಂಗಂಗಳಿಗೆಯು ದೊಡ್ಡಿತ್ತಾದಂಥ ಲಿಂಗಕ್ಕೆ ತಮಂಧಾಕಾರದ ಗರ್ಭಗೃಹದೊಳಗಿರುವ ಅನಂತ ಕೋಟಿ ಬಾಲಸೂರ್ಯ ಪ್ರಕಾಶವನುಳ್ಳ ಓಂಕಾರ ಮಂತ್ರ ಮೂರ್ತಿಯಾದ ಮಹಾ ಲಿಂಗಕ್ಕೆ ಮಕ್ಕಳುಂಡರೆ ಶಿಶುಗಳಾರೋಗಿಸಿದೊಡೆ ಮಾತೆ ಸಂತೋಷಿಸುವ ತೆರದಿ ತಾಯಿಯು ತೃಪ್ತಿಯಾಗುವಂತೆ ಇಕ್ಕುತಿಪ ಭಾವ ಹಸ್ತದಿ ದುರ್ಭಾವವಳಿದು ಸದ್ಭಾವ ಹಸ್ತದಿಂ ಕೊಡುವ ಹೃದಯ ಮುಖದಿಂದೆ ಜ್ಞಾನೇಂದ್ರಿಯಂಗಳೇ ಕುಕ್ಷಿಯಾಗುಳ್ಳ ಹೃದಯವೇ ಮಹಾಲಿಂಗ ಮುಖವಾದ ಕಾರಣ ಆ ಹೃದಯ ಮುಖದಿಂದೆ ಆ ಪಂಚಲಿಂಗಗಳಿಗೆಯೂ ಮಾತೃಸ್ಥಾನವಾದ ಮಹಾಲಿಂಗಕ್ಕೆ ಶಬ್ದ ಸ್ಪರ್ಶರೂಪು ರಸ ಗಂಧಂಗಳನು ಆಚಾರಾದಿ ಪ್ರಸಾದಾಂತ್ಯವಾದ ಪಂಚಲಿಂಗಗಳನು ಕೊಂಡಂಥಾ ಪಂಚವಿಷಯ ಪದಾರ್ಥಂಗಳ ಪರಿಣಾಮ ತೃಪ್ತಿಯನೇ ಆ ಮಹಾ ಲಿಂಗಕ್ಕೆ ಷಡಕ್ಷರ ಮಹಾಮಂತ್ರ ಸ್ಮರಣೆಯಿಂದಲೇ ಓಂ ಹ್ರಃ ಓಂಕಾರ ಮಂತ್ರಮೂರ್ತಿ ಮಹಾಲಿಂಗವೇ ನಿಮಗರ್ಪಿತವೆಂದು ಸದ್ಭಾವ ಹಸ್ತದಿಂದ ಆ ಪರಿಣಾಮ ಪದಾ

ರ್ಥವನು ಸಮರ್ಪಿಸಿ ಮಿಕ್ಕ ಪ್ರಸಾದವನು ಆ ಐಕ್ಯನು ಆ ಮಹಾಲಿಂಗ ಧ್ಯಾನದಿಂದೆ ತೃಪ್ತಿಯಾಮದೆಲ್ಲವು ಆ ಮಹಾಲಿಂಗದ ಹೆಚ್ಚುಗೆಯ ನುಳ್ಳ ಪರಿಣಾಮ ಪ್ರಸಾದವೆನಿಸುವದು. ಅಂತಪ್ಪ ಪರಿಣಾಮ ಪ್ರಸಾದವನು ಕೊಂಡು ಸುಖಿಸುವ ಐಕ್ಯ ಅಂತಪ್ಪ ಪ್ರಸಾದವನಾರೋಗಿಸುವಂಥಾ ಚಿದಾತ್ಮನೇ ಯಂಗವಾದ ಐಕ್ಯನು ಯಿಕ್ಕಡಿಗ ಪರಲೋಕದಿ ಇಂತಪ್ಪ ಮಹತ್ಮನು ಇಹಲೋಕವ ಮೀರಿ ಪರಲೋಕವ ಪರಮ ಪದವ ಪರಬ್ರ ಹ್ಮನೊಡನೆ ಏಕಾರ್ಥವಾಗುವನೆಂಬರ್ಥ ॥

ಸಾಕ್ಷಿ:— ಶ್ಲೋ॥- ಆತ್ಮಾಂಗೋ ಭಾವ ಹಸ್ತೇನ। ಐಕ್ಯಶ್ಚಾಪಿ ಮಹಾತ್ಮನೆ॥ ಹೃನ್ಮುಖೇ ತತ್ಪರಿಣಾಮ ಪದಾರ್ಥಂ ತೃಪ್ತಿ ಭೋಕ್ತ್ರವಾನ್॥

ತಾತ್ಪರ್ಯ:— ಚಿದಾತ್ಮನೇ ಅಂಗವಾದ ಐಕ್ಯನು ಸದ್ಭಾವ ಹಸ್ತದಿಂದೆ ಮಹಲಿಂಗಕ್ಕೆ ಹೃದಯೇಂದ್ರಿಯ ಮುಖದಲ್ಲಿ ಪರಿಣಾಮವನೆ ಪದಾರ್ಥವನರ್ಪಿಸಿ ಆ ತೃಪ್ತಿಯನೆ ಭೋಗಿಸುವನೆಂಬರ್ಥ ॥ ೮ ॥

---

ಪದ:— ಷಡುಪೀಠದೊಳಗೆಸೆವ ಜಡಜದೈವತ್ತೆಸಳು। ಒಡನಿ ರುವ ಪ್ರಣವಮಲೋಮವಿಲೋಮದಿ ಜಪಿಸಿ। ಕಡೆಗೆ ಮಾಯಾಖ್ಯ ಪಂಚಾಕ್ಷರಿಯನುಚ್ಚರಿಸಿ ಹರನ ಜಪನೆನಿಪುದು॥ ಬಿಡದೆ ಪೀಠಾದಿ ಷಡ್ ಕಮಲ ಕರ್ಣಿಕೆಯೊಳಗಿಹ। ಮೃಡನ ಚಿತ್ತೆನಿಸುವ ನಕಾರಾದಿ ಓಂಕಾರ। ದೊಡೆಯ ಷಣ್ಮೂರ್ತಿಯಂತರ್ಭಾವದಿಂದೆಜಿಸಿ ಒಡೆವೆರದ ಮಹಲಿಂಗದಿ॥

ಟೀಕು:— ಷಡುಪೀಠದೊಳಗೆ ಆಧಾರಾದ್ಯಾಜ್ಞಾಂತ ಮಾದಾರು ಸಿಂಹಾಸನಂಗಳೊಳಗೆ ಎಸೆವ ಒಪ್ಪುವಂಥ ಜಡಜದ ಕಮಲದ ಐವತ್ತೆ ಸಳುಗಳೊಳಗೆ ಪಂಚದಶದಳಂಗಳಲ್ಲಿ ಅಡಗಿರುವ ಆ ಐವತ್ತುದಳಂಗಳ ಲ್ಲಿರುವ ಪ್ರಣವ ಚತುರಾಕ್ಷರಾದಿಯಾಗಿ ದ್ವಿಯಕ್ಷರವಂತ್ಯವಾದ ಐವ ತ್ತಕ್ಷರಂಗಳನುಲೋಮ। ವಿಲೋಮದಿ ದ್ವಿಯಕ್ಷರವಾದಿಯಾಗಿ ಚತುರ ಕ್ಷರವಂತ್ಯವಾಗಿ ಅಧೋಮುಖವಾಗಿ ಜಪಿಸುವದೇ ಲೋಮವೆನಿಸುವದು. ಚತುರಕ್ಷರವಾದಿಯಾಗಿದ್ವಿಯಕ್ಷರಾಂತ್ಯವಾಗಿ ಊರ್ಧ್ವಮುಖವಾಗಿ ಜಪಿ ಸುವದೇ ವಿಲೋಮವೆನಿಸುವದು. ಜಪಿಸಿ ಲೋಮದಿಂದೈವತ್ತು ವಿಲೋ ಮದಿಂದೈವತ್ತು ಉಭಯಂ ಕೂಡಲಾಗಿ ನೂರಾಯಿತ್ತು. ಈ ಲೋಮ

ಸಂಚಿಕೆ ೧ ೨. ಸಂಪುಟ ೩೫

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

# ವಿಷಯಾನುಕ್ರಮಣಿಕೆ.





# ವೀರಶೈವ ಇತಿಹಾಸ ಸಂಶೋಧನೆ.

"ಶ್ರೀ ಬಿ. ವಿ. ಶ್ರೀನಿವಾಸರಾವ್ ಎಂ. ಎ. ರವರು ಈಗ ನಿವೃತ್ತ ಇತಿಹಾಸ ಪ್ರಧ್ಯಾಪಕರು, ಶರಣ ಬಸವೇಶ್ವರ ಕಾಲೇಜು; ಗುಲ್ಬರ್ಗಾ, ಇವರು ಹೈದರಾಬಾದ ವಿಶ್ವವಿದ್ಯಾಲಯದ ಸಂಶೋಧನಾ ವಿದ್ಯಾರ್ಥಿಗಳು. ಇವರು ವಿಜಯನಗರ ಸಾಮ್ರಾಜ್ಯದ ಬಗ್ಗೆ ಸಂಶೋಧನೆ ನಡೆಸಿದ ಫಲವಾಗಿ, ಈ ಕೆಳಗೆ ಕಂಡ ತೀರ್ಮಾನಕ್ಕೆ ಬಂದಿದ್ದಾರೆ.

ವಿಜಯನಗರದ ಸಂಗಮ ವಂಶದ ಮೂವರು ಅರಸರಿಂದ ಪ್ರೌಢ-ದೇವರಾಯ, ಮಲ್ಲಿಕಾರ್ಜುನ ಮತ್ತು ವಿರುಪಾಕ್ಷ ( 1419 ರಿಂದ 1487 A. D.) ಎಂಬವರು. ಇಷ್ಟಲಿಂಗಾಧರರು ಅಥವಾ ವೀರಶೈವರು. ಇದರ ಬಗ್ಗೆ ಸೂಕ್ತವಾದ ಆಧಾರಗಳನ್ನು Journal of the Anahra Hireoriael Roseana Srieling, Rasahm-ndidg ldl 24. (1956-58) p. p. 101 to 104 ರಲ್ಲಿ ಕೊಟ್ಟು ಸಾರ್ವಜನಿಕರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಶ್ರೀಯುತರ ಸಂಶೋಧನೆಗೆ ಪರಶಿವನು ಒಳ್ಳೇಯದನ್ನೇ ಮಾಡಲಿ."

ಇತಿ. ವಿಶ್ವಾಸಿ,
ವೀರಶೈವ ಇತಿಹಾಸ ಪ್ರವೀಣ,
ಶ್ರೀ ಬಿ. ವಿ. ಶ್ರೀನಿವಾಸರಾವ್. (ತುಮಕೂರು.)

# ಕರ್ನಾಟಕದ ರಘುರಾಮ.

(ಪರಿಚಯಕಾರರು:- ಮ. ಮಲ್ಲಪ್ಪ. ಜ್ಞಾನಮಂದಿರ ಹಲಗೂರು.)

ದಶರಥನ ಪುತ್ರ ರಘುರಾಮ. ತಂದೆಯ ಮಾತನ್ನು ಮಗನು ನಡೆಯಿಸಿ ಕೊಡುವದೂ ಕೂಡ ಮಗನ ಮುಖ್ಯ ಕರ್ತ ವಾಗಿರುತ್ತದೆ. ತಂದೆಗೆ ಸಹಜ ಸುತನಾದ ಶ್ರೀರಾಮನು ತಂದೆಯ ಶ್ರೇಯಸ್ಸಿಗಾಗಿ ತಾನು ಪಡಬಾರದ ಕಷ್ಟ ನಷ್ಟವನ್ನು ಅನುಭವಿಸಿ ತಂದೆಯ ಶ್ರೇಯಸ್ಸನ್ನು ಬಯಸಿ ಕರ್ತವ್ಯವನ್ನು ಮುಗಿಸಿದ ಮಹಾ ಪುರುಷನು ರಘುರಾಮನು. ಕರ್ನಾಟಕದಲ್ಲಿಯೂ ಕೂಡ ತಂದೆಯ ಬುದ್ಧಿವಾದವನ್ನು ಚಾಚೂ ತಪ್ಪದೆ ಪಾಲಿಸಿದ ಪುತ್ರನು ಇಂದು ಇದ್ದಿಲ್ಲದೆ ಇಲ್ಲ. ತಂದೆಯ ವಾಣಿಯು ತನಗೆ ವರ್ಧಕ ವಾಹಿನಿಯು ಎಂದು ಅರಿತು ಆಚರಿಸಿದ ಕನ್ನಡ ಸಾಹಿತಿಯು ಲಿಂಗೈಕ್ಯ ಶಿವಯೋಗಸ್ಥ ಶಿವಲಿಂಗಪ್ಪ ಬಸವನಾಳರು. ಪರ ಸ್ತ್ರೀ ಸಂಪರ್ಕ ನಿಷೇಧ. ಧೂಮ್ರ ಪಾನ ನಿರೋಧ. ಸರಕಾರಿ ನೌಕರಿ ವಿರಾಗ ಇವುಗಳೇ ಬಸವನಾಳರಿಗೆ ತಂದೆಯಿಂದ ಅನುಗ್ರಹವಾದದ್ದು. ಇವು ಮೂರನ್ನೂ ಸಹ ತಪ್ಪದೆ ನಡೆಯಿಸಿ ನಿಜವಾದ ಪಿತೃ ಭಕ್ತರಾಗಿ ಜೀವನವನ್ನು ಸವೆಯಿಸಿ ಕರ್ನಾಟಕದ ರಘುರಾಮರಾದರು. ನುಡಿಯಲ್ಲಿ ಎಚ್ಚರಂತೆಯೇ ನಡೆಯಲ್ಲಿಯೂ ಎಚ್ಚತ್ತರು.

ಎಲ್ಲಿ ನೋಡಿದಡಲ್ಲಿ ಮನವಳಿಸದಿರೆ
ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ !
ಪರವಧುವನು ಮಹಾದೇವಿಯೆಂಬೆ
ಕೂಡಲ ಸಂಗಮ ದೇವಾ ||

ಅಡಕವಾದ ಮೈಕಟ್ಟು, ಪ್ರಶಾಂತ ಹಾಗೂ ಗಹನ ಗಂಭೀರ ಮುಖಮುದ್ರೆ, ಗುಂಡನೆಯ ಶರೀರ, ಘನನೇತ್ರಗಳು, ತುಟಿಗಳನ್ನು ಮುಚ್ಚಿದ ಮೀಸೆ, ಗೋದಿಗಂಪಿನ ವಿಶಾಲ ಪರಿಪೂರ್ಣವಾದ ವದನ, ನಸುಗಂಪಿನ ಶರೀರ ಕಾಂತಿಯು ಇವರಲ್ಲಿ ಉತ್ತರ ಕರ್ನಾಟಕದ ಸಂಸ್ಕೃತಿಯ ಸಂಕೇತದ ತೆಳ್ಳನೆಯ ಹಳದಿ ರೇಷ್ಮೆ ರುಮಾಲು, ಮುಚ್ಚು

ಕಾಲರಿನ ಕೋಟು ಇವರ ಕೊಡಿಗೆಯು, ಪ್ರಶಾಂತ ವಿನಯ ಮತ್ತು ವಿವೇಕದಿಂದ ಕೂಡಿದ ನಡೆನುಡಿ, ಆಶಾರಹಿತ ಚಿತ್ತ, ಪರೋಪಕಾರಕ್ಕೆ ಚಿಂತಿಸುವ ಆತ್ಮ ಇವರದು. ದೀನ ದಲಿತರಲ್ಲಿ ಕನಿಕರ, ಗುರು ಹಿರಿಯರಲ್ಲಿ ಭಕ್ತಿ ವಿಶ್ವಾಸ, ದೊಡ್ಡ ಕುಟುಂಬದಲ್ಲಿ ಹೊಂದಾಣಿಕೆ ಜೀವನ ಇವರದು.

ಇವರ ವ್ಯಕ್ತಿತ್ವವು ಅದ್ರುಶ್ಯಶ್ಚಾಭಿಗಮ್ಯಶ್ಚ ಯಾದೋರತ್ನೈರಿವಾರ್ಣವಃ ಇಂತಹವರು. ಹಾವೇರಿಯ ಖ್ಯಾತಿವೆತ್ತ ಶೀಲವಂತ ಮನೆತನಕ್ಕೆ ಸೇರಿದವರು. ಇವರ ತಂದೆಯವರು ಶಿವಯೋಗಪ್ಪನವರು. ಈ ಮಹನೀಯರು ಬಳ್ಳಾರಿಯಲ್ಲಿ ರೇಲ್ವೆ ಸ್ಟೇಶನ್ ಮಾಸ್ತರ್ ಆಗಿದ್ದರು. ಸುಶಿಕ್ಷಿತರೂ, ವಿದ್ಯಾಭ್ಯಾಸಿಗಳೂ, ವಿಶೇಷ ವಾಚನಾಸಕ್ತರೂ, ಬಹುಭಾಷಾಪರಿಣತರೂ ಆಗಿದ್ದ ಇವರು ಸಾಕಾದಷ್ಟು ಗ್ರಂಥ ಭಾಂಡಾರವನ್ನು ಹೊಂದಿಸಿ ಕೊಂಡಿದ್ದರು. ಆಂಗ್ಲೇಯ ಸಾಹಿತ್ಯದಲ್ಲಿ ಅತ್ಯಾದರ ಇವರಿಗೆ. ೧೮೯೩ ರಲ್ಲಿ ಬಳ್ಳಾರಿಯಲ್ಲಿ ಬಸವನಾಳರ ಜನನ. ಮಗುವಿನ ಮುಖವನ್ನು ನೋಡಿದವರಿಗೆ ಸ್ಟೇಶನ್ ಮಾಸ್ತರ ಮಗ ಬಹಳ ಬುದ್ಧಿವಂತನಾದರೆ ಮತ್ತೊಬ್ಬ ಸ್ಟೇಶನ್ ಮಾಸ್ತರ ಆದಾನು ಎಂಬ ಭಾವನೆಯು ಬಂದಿರಬೇಕು ಈ ಭಾಗ್ಯ ರೇಖೆಯು ತಂದೆಗೆ ಕಾಣದೆ ಇದ್ದರೂ ಇರಬಹುದು. ಏಕಂದರೆ ಮನುಜನೊಂದು ನೆನೆದರೆ ದೈವವು ಮತ್ತೊಂದು ನೆನೆಯುವದು ಸರ್ವ ಸಾಮಾನ್ಯ ತಾನೇ ! ಇವರ ಪ್ರಾಥಮಿಕ ಶಿಕ್ಷಣವು ತೆಲುಗಿನಲ್ಲಿ ಆಯಿತು. ಅನಂತರ ಶಿವಯೋಗಪ್ಪನವರಿಗೆ ಹಾವೇರಿಗೆ ವರ್ಗವಾಗಲು ಅಲ್ಲಿ ಇವರಿಗೆ ಕನ್ನಡ ಶಿಕ್ಷಣವು ಪ್ರಾರಂಭವಾಯಿತು ಪುಸ್ತಕವನ್ನು ಕೊಂಡು ಓದುವ ಚಟ ಬೇರೂರಿತು. ತಂದೆಯು ಕೂಡಿಸಿಟ್ಟಿದ್ದ ಪುಸ್ತಕಗಳೆಲ್ಲವನ್ನೂ ಮಗನು ಎಳೆ ವಯದಲ್ಲಿಯೇ ಓದಿ ಗುಣ ಗ್ರಹಣ ಮಾಡಿ ಇಂಗ್ಲೀಷ ಶಾಲೆಗೆ ಸೇರಿದನು. ಈ ಜೇಷ್ಠ ಪುತ್ರನಿಗೆ ತಂದೆಯ ಗ್ರಂಥ ಭಾಂಡಾರವು ಒಂದು ವಿದ್ಯಾಲಯವಾಯಿತು. ೧೯೧೦ ನೇ ಡಿಸೆಂಬರಿನಲ್ಲಿ ಈತನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ೧೯೧೧ ರ ಜನೇವರಿಯಲ್ಲಿ ಪುಣೆಯ ಡೆಕ್ಕನ್ ಕಾಲೇಜಿಗೆ ಸೇರಿದನು. ೧೯೧೪ ರಲ್ಲಿ ಪದವೀಧರರಾದರು. ಈ ಭಾಗದ ವೀರಶೈವ ಸಮಾಜದವರಲ್ಲಿ ಮೊದಲಿಗರಾಗಿ ೧೯೧೬ ರಲ್ಲಿ ಎಂ. ಎ. ಪರೀಕ್ಷೆಯಲ್ಲಿ ಜಯಶೀಲರಾದರು. ಪುಣೆಯಲ್ಲಿ ವ್ಯಾಸಂಗವು ನಡೆದು

ದರಿಂದ ಮರಾಠಿ ಭಾಷೆಯ ಪರಿಚಯವಾಯಿತು. ಎಂ. ಎ. ಪದವೀಧರರಾದ ಇವರಿಗೆ ಬಹುಮಾನವು ದೊರಕಿತು. ವಿಶ್ವವಿದ್ಯಾನಿಲಯದಿಂದ ಹೊರಬಂದ ಬಸವನಾಳರು ತಾವು ಮುಂದೆ ಸಾಗಬೇಕಾದ ಹಾದಿಯತ್ತ ಕಣ್ಣರಳಿಸಿ ನೋಡಿದರು. ಅಂದು ಆಳುತ್ತಿದ್ದ ಆಂಗ್ಲ ಸರಕಾರವು ಅಧಿಕಾರದ ಗೌರವವನ್ನು ಚಿನ್ನದ ಕಟ್ಟಿಯಲ್ಲಿ ತಂದಿರಿಸಿದರೆ 'ಅಧಿಕಾರವೇ! ನಿನ್ನ ಹೆಸರು ಶನಿ' ಎಂದೆನ್ನುತ್ತ ಕೈ ಸನ್ನೆ ಮಾಡುತ್ತಿದ್ದ ಸುಖ ಶ್ರೀಮಂತಿಕೆಯನ್ನು ಕಣ್ಣೆತ್ತಿಯೂ ನೋಡದೆ ಮುಖ ತಿರುವಿಸಿದರು. ಅಂದು ಅದು ಅಪ್ರತಿಮ ಸಾಹಸವೇ ಸರಿ. ಇವರ ಮುಂದಿನ ತ್ಯಾಗಪೂರಿತ ಜೀವನಕ್ಕೆ ಅದೇ ಮೊಟ್ಟ ಮೊದಲಿನ ಶಂಖಧ್ವನಿಯಾಗಿತ್ತು.

ಸಾಹಿತ್ಯ ಸಂಸ್ಕೃತಿಯ ವ್ಯಾಸಂಗಿಗೆ ಉನ್ನತಾದರ್ಶಗಳನ್ನಿಟ್ಟುಕೊಂಡು ಕಮನೀಯ ವಾಸ್ತವತೆಯನ್ನು ನೋಡತೊಡಗಿದ್ದ ಇವರಿಗೆ ನಮ್ಮ ಜನರ ವಿದ್ಯಾಹೀನತೆಯು ನಮ್ಮ ಸಮಾಜದ ಮೇಲೆ ಎರಗಿದ ಮಹಾಶಾಪದಂತೆ ಕಂಡಿತು. ಸೇವೆ, ತ್ಯಾಗ, ವಿದ್ಯಾದಾನ ಇವುಗಳಂತ ಉನ್ನತೋನ್ನತ ಉದ್ದೇಶಗಳಿಗಾಗಿ ಶಿಕ್ಷಣ ಸಂಸ್ಥೆಯನ್ನು ಕಟ್ಟಲು ನಿರತರಾದರು. ಬೆಳಗಾವಿಯಲ್ಲಿ ಆರಟಾಳ್ ಗಿಲಗಂಚಿ ಹೈಸ್ಕೂಲನ್ನು ಸ್ಥಾಪಿಸಿ. ತಂದೆಯಂತೆ 'ಮಾಸ್ತರ' ಆದರು. ಕರ್ಣಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿಯನ್ನು ೧೯೧೬ ಅಕ್ಟೋಬರ ೧೦ ರಲ್ಲಿ ಸ್ಥಾಪಿಸಿದರು. ಅಪೂರ್ವ ಉತ್ಸಾಹ ಹುಮ್ಮಸ್ಸಿನಿಂದ ಕಾರ್ಯೋನ್ಮುಖರಾದ ಇವರು ಸತ್ಯ, ತ್ಯಾಗ, ಸೇವೆಯ ಅಮೃತ ಧಾರೆಯನೆರೆದು ಬೆಳೆಯಿಸಿದ ಗಿಡವು ಇಂದು ದೊಡ್ಡ ಮರವಾಗಿ ಬೆಳೆದು ಸರಸ್ವತಿಯ ಸ್ಥಾನದಲ್ಲಿ ತೊಡಗಿರುವ ಅಸಂಖ್ಯಾತ ವಿದ್ಯಾರ್ಥಿ ತಂಡಕ್ಕೆ ನೆಳಲನ್ನಿತ್ತು ಆಯಾಸವನ್ನಾರಿಸಿದ ಆಸರಿಯನ್ನಿತ್ತಿದೆ. ಈ ಸಂಸ್ಥೆಗೆ ಸರಿಸಮನಾಗಬಹುದಾದ ಸಂಸ್ಥೆಯು ಪುಣೆಯ ಡೆಕ್ಕನ್ ಎಜ್ಯುಕೇಶನ್ ಸೊಸೈಟಿ ಕರ್ನಾಟಕ ದಶರ್ನೆಯು ಬಸವನಾಳರು.

ನಾಡಿನ ಪ್ರಗತಿಗೆ ವಿದ್ಯಾ ಪ್ರಚಾರವು ಅತ್ಯವಶ್ಯಕ ಎಂದು ಭಾವಿಸಿ ಹೆಚ್ಚು ಹೆಚ್ಚು ಪೌರುಷದಿಂದ ಕೆಲಸ ಮಾಡಿ ಕರ್ಣಾಟಕ ಲಿಂಗಾಯಿತ ಎಜ್ಯುಕೇಷನ' ಸೊಸೈಟಿಯನ್ನು ಉನ್ನತಗೊಳಿಸಿದರು.

೧೯೧೮ ರಲ್ಲಿ ಬೆಳಗಾವಿಯಲ್ಲಿ ವೀರಶೈವ ತರುಣಸಂಘವನ್ನು ಸ್ಥಾಪಿಸಿ ೧೯೨೧ ರಲ್ಲಿ ಪ್ರಬೋಧ ಮಾಸಿಕವನ್ನು ಪ್ರಾರಂಭಿಸಿದರು. ಧಾರವಾಡದ ಸಂಶೋಧನ ಸಂಸ್ಥೆಗೆ ಅತಿ ಶ್ರಮವನ್ನು ವಹಿಸಿ ದುಡಿದರು. ೧೯೨೬ರಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಅಖಿಲ ಭಾರತ ವೀರಶೈವ ತರುಣರ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೩೮ ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿ, ಸುಂದರ ರೂಹೊಂದನು ಕೊಟ್ಟರು. ೧೯೨೯-೧೯೩೮ ರ ವರೆಗೆ ಇವರು ಮುಂಬಯಿ ವಿಶ್ವವಿದ್ಯಾನಿಲಯದ ಸನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿದರು. ೧೯೪೪ ರಲ್ಲಿ ರಬಕವಿಯಲ್ಲಿ ಜರುಗಿದ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷರಾಗಿಯೂ, ಅದೇ ವರ್ಷದಲ್ಲಿ ಹಿರೇಕರೂರಿನಲ್ಲಿ ನಡೆದ ಅಖಿಲ ಭಾರತ ವೀರಶೈವ ಸಾಹಿತ್ಯ ಸಮ್ಮೇಳನದ ಉದ್ಘಾಟಕರಾಗಿಯೂ ಮರ್ಯಾದಿಸಲ್ಪಟ್ಟಿದ್ದಾರೆ. ೧೯೪೪ ರ ಡಿಶೆಂಬರ ಕೊನೆಯ ವಾರದಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘದ ಕಟ್ಟಡದಲ್ಲಿ ಜರುಗಿದ ಪ್ರಗತಿಶೀಲ ಸಭೆಯು ಇವರ ಹಿರಿತನದಲ್ಲಿ ಸಾಗಿತು ಧಾರವಾಡದ ಪ್ರೋಫೆಸರ ಸವಣೂರರಿಂದ ಚರ್ಚೆಗಾಗಿ ಟಿಪ್ಪಣಿಯ ರೂಪದಲ್ಲಿ ರಚಿತವಾದ 'ವಿಜ್ಞಾನ ಮತ್ತು ಪ್ರಗತಿ' ಎಂಬ ಕೃತಿಯು ಉದ್ಘಾಟನೆಯು ಇವರ ಅಮೃತ ಹಸ್ತದಿಂದ ಜರುಗಬೇಕಾದರೆ ಇವರ ವೈಜ್ಞಾನಿಕಾಸಕ್ತಿಯು ತಿಳಿಯದೆ ಇರಲಾರದು. ಆರು ಸಾವಿರ ಜನರ ಮಹಾ ಜಾತ್ರೆಯ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವದು ಎಂದರೆ ಬರೀ ಬಾಯಿ ಮಾತಿಗೆ ಸಿಕ್ಕುವ ಸರಕಲ್ಲ. ಅಂತಹದರಲ್ಲಿ ಬರಹಗಾರರ ಮುಂದಿನ ಅನೇಕ ಸಮಸ್ಯೆಗಳನ್ನು ಒಡೆದು ಎತ್ತಿ ತೋರಿಸುವಂತೆ ಇವರ ಈ ಕಾರ್ಯವು ಇದ್ದಿತು. ಎಂ. ಎ. ಪರೀಕ್ಷೆಯಲ್ಲಿ ಬಂದ ಬಹುಮಾನವನ್ನು ಕರ್ನಾಟಕ ಲಿಂಗಾಯಿತ ಎಜ್ಯುಕೇಶನ್ ಸೋಸಾಯಟಿಗೆ ೧೯೩೩ರಲ್ಲಿ ದಾನ ಮಾಡಿದುದು ಇವರ ತ್ಯಾಗ ಬುದ್ಧಿಯನ್ನು ಸೂಚಿಸುವದು.

ಅವ್ಯಾಹತವಾಗಿ ಇಪ್ಪತ್ತೆಂಟು ವರ್ಷಗಳ ವರೆಗೆ ಪ್ರೌಢಶಾಲೆಯ ಉಪಾಧ್ಯಾಯರಾಗಿ, ಮುಖ್ಯಾಧ್ಯಾಪಕರಾಗಿ, ಕಾಲೇಜಿನ ಪ್ರೊಫೆಸರಾಗಿ ವೈಸ್ ಪ್ರಿನ್ಸಿಪಾಲರಾಗಿ ಸೇವೆಯನ್ನು ಕಲ್ಪಿಸಿದರು. ತಾವು ತರಬೇತು

ಮಾಡಿದ ವಿದ್ಯಾರ್ಥಿಗಳನ್ನು ತಮ್ಮ ಮೇಲಿನ ಅಧಿಕಾರಿಗಳನ್ನಾಗಿ ಮಾಡಿದುದಲ್ಲದೆ. ಅತ್ತಕಡೆ ತಾವು ಕೈಹಾಕುತ್ತಿರಲಿಲ್ಲ. ಡಾಕ್ಟರ ನಂದೀಮಠರು ಬೆಳಗಾವಿಯ ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲ್ ಆದರೆ ಇವರು ಅದೇ ಕಾಲೇಜಿನ ವೈಸ್ ಪ್ರಿನ್ಸಿಪಾಲರು. ಬರುಬರುತ್ತ ಬಾಳಿನ ಈ ಬಗೆಯೇ ಬೆಳೆಯಾಗುತ್ತಿತ್ತು. ಇಂತಹವರು ಲೋಕ ರೂಢಿಯಲ್ಲಿ ಒಂದೋ ಎರಡೋ ಎನ್ನಬಹುದು ಆಳುವ ಸರಕಾರವು ಜನತೆಯ ಶಿಕ್ಷಣದತ್ತ ಸಾಕಾದಷ್ಟು ಗಮನಕೊಡದೇ ಇದ್ದ ಸಮಯದಲ್ಲಿ ನಮ್ಮ ಜನರ ಸ್ವಯಂ ಕ್ರಿಯಾಶೀಲತೆಯ ಬುದ್ಧಿಯ ನೆರವು ಪಡೆದು ಅನೇಕ ಶಾಲಾ ಕಾಲೇಜುಗಳ ಸ್ಥಾಪನೆಗೆ ಕಾರಣರಾದರು. ಧಾರವಾಡದ ರಾಜಾ ಲಖಮನಗೌಡ ಹೈಸ್ಕೂಲ್, ಬಾಗಿಲಕೋಟೆಯ ಬಸವೇಶ್ವರ ಕಾಲೇಜ ಹುಬ್ಬಳ್ಳಿಯ ಭೂಮರೆಡ್ಡಿ ಇಂಜನೀರಿಂಗ್ ಕಾಲೇಜ, ಜೆ ಜೆ ಕಾಮರ್ಸ ಕಾಲೇಜ, ಸೊಲ್ಲಾಪೂರದ ಕೆ ಎಲ್. ಇ. ಸೊಸೈಟಿಯ ಹೈಸ್ಕೂಲ್, ಬೆಳಗಾವಿಯ ಲಿಂಗರಾಜ ಕಾಲೇಜ ಟ್ರೆನಿಂಗ ಕಾಲೇಜ, ವಿಜಾಪುರದ ಸಿದ್ಧೇಶ್ವರ ಹೈಸ್ಕೂಲ್, ವಿಜಯ ಕಾಲೇಜ ಇವುಗಳ ಸ್ಥಾಪನೆಯ ಬಗ್ಗೆ ಇವರು ಅವಶ್ಯಕವಾದ ಸಲಹೆ ಸಹಾಯಗಳನ್ನು ಕೊಟ್ಟು ಕಾರ್ಯಮಾಡಿ ಅಭ್ಯುದಯಕ್ಕೆ ಆತುರರಾಗಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಬೋರ್ಡ ಪರೀಕ್ಷಾ ಸದಸ್ಯರಾಗಿ ಕರ್ನಾಟಕ ವಿಶ್ವವಿದ್ಯಾನಿಲಯದ ಸ್ಥಾಪಕರೂ ಹಾಗೂ ಮುಖ್ಯ ಸದಸ್ಯರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ನಿಷ್ಕಾಮ ಬುದ್ಧಿಯಿಂದ ಸೇವೆಯನ್ನು ಸಲ್ಲಿಸುವುದು ದಲ್ಲದೆ ಅವರ ಬಗ್ಗೆ ಚಳುವಳಿಯನ್ನು ಪ್ರಾರಂಭಿಸಿ ಪುರೋಗಾಮಿಗಳಾಗಿದ್ದಾರೆ. ಅನಾರೋಗ್ಯದ ನಿಮಿತ್ತವಾಗಿ ಬೆಳಗಾವಿಯ ಲಿಂಗರಾಜ ಕಾಲೇಜಿನ ಪ್ರಾಧ್ಯಾಪಕ ವೃತ್ತಿಯಿಂದ ಬಿಡುಗಡೆಯಾಗಿ ಧಾರವಾಡ ದಲ್ಲಿ ತಮ್ಮ ಸ್ವಂತ ನಿವಾಸದಲ್ಲಿ ನಿಂತರು. ಹುಬ್ಬಳ್ಳಿಯಲ್ಲಿರುವ ಕಾಡ ಸಿದ್ಧೇಶ್ವರ ಆರ್ಟ್ಸ ಕಾಲೇಜಿಗೆ ಪ್ರಿನ್ಸಿಪಾಲರಾಗಲು ಸಮ್ಮತಿಸಿದ್ದರಂತೆ ಕರ್ನಾಟಕದ ವಿಶ್ವವಿದ್ಯಾಲಯದ ಉಪಸ್ಥಾನ ಪತಿಜಾಗಕ್ಕೆ ಉಮೇದವಾರರಾಗಿ ನಿಂತಿದ್ದರು. ರಾಷ್ಟ್ರವು ಕೈಗೊಳ್ಳುವ ಅತ್ಯಗತ್ಯ ಉದ್ಯಮಗಳಲ್ಲಿ ಮೊದಲನೆಯದು ಶಿಕ್ಷಣ ಎಂಬುದಾಗಿ ನುಡಿದಿರುವ ನೆಪೋಲಿಯನ್ನನನ್ನು ನೆನಪಿಗೆ ತಂದುಕೊಂಡು ಮುಂದೆ ಸಾಗಿದ ಕರ್ನಾಟಕದಲ್ಲಿ ಇವರು ಯಥಾರ್ಥ ಕ್ರಿಯೆಯನ್ನು ತಪ್ಪದೆ ಮಾಡಿ ಮುಗಿಸಿದರು.

ಹಿರಿಯ ಕರ್ಮಯೋಗಿಯ ಜೀವನವು ಬಸವನಾಳರದು. ನುರಿತ ಪತ್ರಿಕೋದ್ಯೋಗಿಯಾಗಿ, ಪತ್ರಿಕಾ ಸಂಪಾದಕರಾಗಿ ಬಸವನಾಳರನ್ನು ನೆನೆಯಿಸಿಕೊಂಡರೆ ಅದೂ ಸಹ ಒಂದು ಅಪೂರ್ವ ಭಾಗ್ಯ ಎನ್ನಲೇ ಬೇಕು. ಬೆಳಗಾವಿಯ ಪ್ರಬೋಧ, ಧಾರವಾಡದ ವಾಗ್ಭೂಷಣ ಪತ್ರಿಕೆಗಳು ಇವರ ನೇತೃತ್ವದಲ್ಲಿ ನಡೆದವು. ಅಷ್ಟಕ್ಕೆ ಅದು ನಿಲ್ಲಲಿಲ್ಲ. ಆಲೂರು ವೆಂಕಟರಾಯರಿಂದ ಆರಂಭಿಸಲ್ಪಟ್ಟು ಬೆಳಗಾವಿಯ ರಾಮ-ಚಂದ್ರರಾಯರಿಂದ ಮುಂದುವರಿಸಲ್ಪಟ್ಟ ಜಯ ಕರ್ನಾಟಕ ಮಾಸಿಕವನ್ನು ತಾವೇ ವಹಿಸಿಕೊಂಡು ಇನ್ನೂ ಉನ್ನತವಾಗಿ ನಡೆಯಿಸಿದರು. ಇದರ ಜೊತೆಗೆ ಜಯ ಕರ್ನಾಟಕ ಸಾಪ್ತಾಹಿಕವನ್ನೂ ಸಹ ಪ್ರಾರಂಭಿಸಿದರು. ಈ ಎರಡು ಪತ್ರಿಕೆಗಳ ಸಂಪಾದನೆಯ ಕಾರ್ಯದಲ್ಲಿ ತಮ್ಮ ಹೆಚ್ಚಿನ ಅವಕಾಶವನ್ನು ವಿನಿಯೋಗಿಸಿದರು. ಈ ಮೂಲಕ ಇವರು ಜಯ ಕರ್ನಾಟಕ ಸಾಹಿತ್ಯ ಮಂಡಳವನ್ನೇ ನಿರ್ಮಿಸಿದರು ಎನ್ನಬಹುದು. ಸುಪ್ತ ಶಕ್ತಿಗಳನ್ನು ಗುರುತು ಹಚ್ಚಿ ಅವುಗಳನ್ನು ಪರಿಸ್ಫೋಟಗೊಳಿಸುವ ಕಾರ್ಯದಲ್ಲಿ "ಜಯ ಕರ್ನಾಟಕ" ಇವರಿಗೆ ಅನುಕೂಲ ಸಾಧನವಾಗಿ ಪರಿಣಮಿಸಿತು. ತರುಣ ಲೇಖಕರನ್ನು ಹುರಿದುಂಬಿಸುವಲ್ಲಿ ಬಲ್ಲಿದ ಬರಹಗಾರರನ್ನು ಯೋಗ್ಯ ಬಗೆಯಲ್ಲಿ ವಿಮರ್ಶೆ ಮಾಡುವಲ್ಲಿ ಇವರ ನೈಪುಣ್ಯವು ಎದ್ದು ಕಾಣುತ್ತಿತ್ತು. ಈ ಎರಡು ಪತ್ರಿಕೆಗಳಿಗಾಗಿಯೇ ಧಾರವಾಡದ ಉಳವಿ ಬಸವೇಶ್ವರ ಗುಡ್ಡದಲ್ಲಿರುವ ತಮ್ಮ ಸ್ವಗೃಹದಲ್ಲಿ 'ರವೀಂದ್ರ ಮುದ್ರಣಾಲಯ' ಎಂಬ ಮುದ್ರಣ ಮಂದಿರವನ್ನು ಸ್ಥಾಪಿಸಿದರು. ಈ ಮಧ್ಯೆ ಲಿಂಗಾಯಿತ ಸಾಹಿತ್ಯ ಸಮಿತಿಯ ಪತ್ರಿಕೆಯ ಸಂಪಾದಕರಾಗಿಯೂ ಸಾಹಸ ಜೀವನವನ್ನು ಸಾಗಿಸಿದರು. ತಮ್ಮ ಸುದೀರ್ಘವಾದ ಜೀವನದಲ್ಲಿ ಕನ್ನಡ ಹಾಗೂ ಇಂಗ್ಲೀಷ ಪತ್ರಿಕೆಗಳಿಗೆ ಇವರು ಅನೇಕ ಮಹತ್ವಪೂರಿತ ಬರಹಗಳನ್ನು ಬರೆದುಕೊಟ್ಟು ಉಪಕಾರ ಮಾಡಿದರು. ಪತ್ರಿಕಾ ಜೀವಿಯು ಗಾಳಿಯನ್ನು ತಿಂದು ಜನತೆಗೆ ಸೇವೆಯನ್ನು ಸಲ್ಲಿಸಬೇಕೆಂಬುದನ್ನು ಅರಿತಿದ್ದರು. ಬರಹಗಾರರ ಕಷ್ಟ ಸುಖಗಳನ್ನು ತಿಳಿದು ಅವರ ಕಷ್ಟಸುಖದಲ್ಲಿ ತಾವೂ ಭಾಗಿಯಾಗದೆ ಇರುತ್ತಿರಲಿಲ್ಲ. ಕರ್ನಾಟಕ ಪತ್ರಿಕಾ ಪ್ರಪಂಚಕ್ಕೆ ಈ ವಿದ್ವಾನ್ ಸಂಪಾದಕರು ಅಮೋಘ ಸೇವೆಯನ್ನು ಸಲ್ಲಿಸಿದರು.

ಶ್ರೇಷ್ಠ ಮೇಧಾವಿಗಳೂ, ದೀರ್ಘ ವಾಚನ ಮಗ್ನಶೀಲರೂ ಆದ ಇವರ ಜ್ಞಾನ ಸಂಗ್ರಹವು ಘನತರವಾದುದು. ಸಂಸ್ಕೃತ ಕನ್ನಡ ಇಂಗ್ಲೀಷ ಭಾಷೆಗಳ ಪ್ರಭುತ್ವದ ಸಂಗಡ ನೆರೆಯ ಭಾಷೆಗಳಾದ ಮರಾಠಿ ಮತ್ತು ತೆಲುಗು ಭಾಷೆಗಳ ಪರಿಚಯವನ್ನು ಪಡೆದು, ಈಚೆಗೆ ಪರ ದೇಶದ ಭಾಷೆಗಳ ಪರಿಚಯವನ್ನು ಪಡೆಯಲು ಪ್ರಯತ್ನಿಸಿದ್ದರು. ಜ್ಞಾನಕ್ಷೇತ್ರದಲ್ಲಿ ಯಾವ ರಂಗದ ವಿಷಯವನ್ನೆತ್ತಿದರೂ ಅದನ್ನು ಆಳ ವಾಗಿ ಅಭ್ಯಸಿಸಿದ ಇವರಧೀಶಕ್ತಿಯು ಉಚ್ಚತರವಾದದ್ದು. ವ್ಯಾಸಂಗ ಬಲ ಭಾಷಾಪ್ರಭುತ್ವ, ಅನುಭವದ ಆಳ, ರಸಿಕದೃಷ್ಟಿ ಇರುವ ಇವರು ನಮ್ಮ ನಾಡಿನ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರು. ಇದರ ಮಾತು ಕತೆ, ಬರಹವು ರಸಭರಿತ ಸಾಹಿತ್ಯದ ಸೂತ್ರವು ರಸವಂತಿಕೆಯು. ಪ್ರಾಚೀನ ಸಾಹಿತ್ಯದ ಅಧ್ಯಯ ನೋಟ ನವೀನ ಸಾಹಿತ್ಯ ಸೃಷ್ಟಿಯು ಯೋಗ್ಯ ದೃಷ್ಟಿ ಇವರಿಗೆ ಇದ್ದವು. ಪ್ರಾಚೀನ ಕಾವ್ಯಗಳ ಕೂಲಂಕುಷ ಅಭ್ಯಾಸ ನಡೆದು, ವ್ಯಾಕರಣ ಅಲಂಕಾರ ಛಂದಸ್ಸು ಇವುಗಳನ್ನು ಬಿಡಿಬಿಡಿ ಯಾಗಿ ಕಾರ್ಯ ಕಾರಣಸಹಿತವಾಗಿ ಇವರು ತಿಳಿದುಕೊಂಡಿದ್ದರು. ಆಂಗ್ಲ ಸಾಹಿತ್ಯಾಭ್ಯಾಸದ ಯೋಗ್ಯ ಫಲಪಡೆದ ಇವರ ವಿಮರ್ಶಕ ದೃಷ್ಟಿಯು ಸೂಕ್ಷ್ಮವೂ, ನಿರ್ಮಲವೂ ಆಗಿತ್ತು. ಈ ಬಗೆಯ ಪ್ರಾಚೀನ ಮತ್ತು ನವೀನ ವ್ಯಾಸಂಗ ಪದ್ಧತಿಗಳ ಸಮರಸಗೊಂಡ ಇವರ ಪಾಂಡಿತ್ಯದ ಲೇಖಣಿಗೆ ಸಿಕ್ಕಿದ ಸರಸಸಾಹಿತ್ಯವು ಯಾರಿಗೆ ತಾನೇ ತಿಳಿಯದು! ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ವೀರಶೈವ ಸಾಹಿತ್ಯ ಸಮಿತಿಯ ಮೂಲಕವಾಗಿಯೂ, ಸ್ವತಂತ್ರವಾಗಿಯೂ ಹಲವು ಗ್ರಂಥಗಳನ್ನು ಪ್ರಕಟಿಸಿದರು. ಪ್ರಾಚೀನ ಗ್ರಂಥ ಪ್ರಕಟಣೆಯ ಕಾರ್ಯರಂಗಕ್ಕೆ ಇಳಿದು ಕೆಲಸ ಮಾಡಿದರು.

| **ಇವರ ಸಂಪಾದಕತ್ವದಲ್ಲಿನ ಗ್ರಂಥಗಳು:**— 1. ಕರ್ನಾಟಕ ಕಾವ್ಯಾವಲೋಕನ, 2. ಕರ್ನಾಟಕ ಶಬ್ದಾನುಶಾಸನ ದೀಪಿಕೆ. 3. ಚಾಮರಸನ ಪ್ರಭುಲಿಂಗ ಲೀಲೆ. 4. ಷಡಕ್ಷರದೇವನ ಶಬರ ಶಂಕರ ವಿಲಾಸ. 5. ಹರಿಹರನ ಪಂಪಾ ಶತಕ, ರಕ್ಷಾಶತಕ, ಕುಂಬಾರ ಗುಂಡಯ್ಯನ ರಗಳೆ. 6. ಬಸವಣ್ಣನವರ ಷಟ್ಸ್ಥಲದ ವಚನಗಳು. 7. ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ. 8. ಮಹಾಂತ ಶಿವಯೋಗಿಗಳ ಕೈವಲ್ಯ ದರ್ಪಣ.

|| ಇವರ ಸ್ವತಂತ್ರ ಗ್ರಂಥಗಳು:— 1. ಹಿಂದುಸ್ಥಾನದ ಇತಿಹಾಸ. 2. Musings of Basava.

||| ಇವರ ಸ್ಫೂರ್ತಿಯಿಂದ ಹೊರಬಿದ್ದ ಹೊತ್ತಿಗೆಗಳು:— 1. ವಿರುಪಾಕ್ಷ ಕವಿಯ ಚೆನ್ನಬಸವ ಪುರಾಣ. 2. ಹರಿಹರನ ಗಿರಿಜಾ ಕಲ್ಯಾಣ. 3. ವೀರಶೈವ ತತ್ವ ಪ್ರಕಾಶಿಕೆ. 4. Hand Book of Veerashiavarn. 5. Acase for Karnataka University.

ಈ ಪತ್ರಿಕೆಗಳನ್ನು ಸಿದ್ಧಗೊಳಿಸುವದರಲ್ಲಿ ಪ್ರಸ್ತಾವನೆ, ಟೀಕೆ, ಟಿಪ್ಪಣಿಗಳನ್ನು ಬರೆಯುವದರಲ್ಲಿ, ಸಂಸ್ಕರಣಗಳಿಗೆ ಹಾದಿ ತೋರಿಸಿ ಕೊಡುವದರಲ್ಲಿ, ಪಾಂಡಿತ್ಯ ಪರಿಪೂರ್ಣ ಭಾಷಣಗಳನ್ನು ತಯಾರಿಸುವದರಲ್ಲಿ ಕಾಣಬರುವ ಬಹು ಸುತತ್ವ, ಸಮತೂಕದ ಭಾವ, ಸೂಕ್ಷ್ಮ ಬುದ್ಧಿ ಇವುಗಳನ್ನು ಅಷ್ಟೊಂದು ಬೇರೆಯಾಗಿ ಕಾಣಲಾರೆವು. ಈ ಹುಟ್ಟು ಸಾಹಿತಿಗಳ ಸಾಹಿತ್ಯ ಅಪಾರವೇ ಸರಿ.

His Vast learning in diffeaent fiolds of Knowledge, his un failing sesse of humour, hisacute observation of men andt hings, the noble sereniter of his bearing, his steod refusal to take a mean adyan tage over othess, these nade me more and meare his odmirer. He is beyond ouraigrets and pregiets, basavanal. a selfless serrvant of Karnateka.

T. R. Sreenivas Iyyengar. M. A.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರೀ ಸಮಿತಿಯ ಕೋಶ ಸಮಿತಿಯ ಸದಸ್ಯರಾಗಿಯೂ ಕೆಲಸ ಮಾಡಿದರು. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಎಂತೋ ಅಂತೆಯೇ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವು ಬಹಳ ಹಿಂದಿನಿಂದ ಬೆಳೆದು ಬಂದಿರುವ ಒಂದು ಹಿರಿಯ ಸಂಸ್ಥೆ ಸಾಂಸ್ಕೃತಿಕ ಸಾಹಿತ್ಯ ಕೇಂದ್ರವು. ಕನ್ನಡದ ನವೋದಯದ ವೇಳೆಯಲ್ಲಿ ಉಜ್ವಲ ಬೆಳಕನ್ನು ಪ್ರಸರಿಸಿದ

ಪ್ರದೀಪ್ತಯು ವಿದ್ಯಾವರ್ಧಕ ಸಂಘವು. ಇಂತಹದರ ಮೇಲ್ಮೆಗೆ ದುಡಿದ ಹಲವು ಹಿರಿಯರಲ್ಲಿ ಇವರಿಗೆ ಅಗ್ರಪೀಠವು. ಕರ್ನಾಟಕ ಪ್ರಾದೇಶಿಕ ಗ್ರಂಥಾಲಯದ ನಿರ್ಮಾಣಕ್ಕೆ ಇವರೂ ಕಾರಣರು. ಅಖಿಲ ಭಾರತದ ಪಿ. ಇ. ಎಸ್. ಸಂಸ್ಥೆ ಅಂಗವೊಂದರ ಸಂಘಟಕರು ಇವರು. ಕರ್ನಾಟಕನ್ನೆಲ್ಲವನ್ನೂ ಸುತ್ತಿ ನಾಡಹಬ್ಬ, ಬಸವ ಜಯಂತಿ, ವಿಶೇಷ ಸಮಾರಂಭೋತ್ಸವಾದಿ, ವಿಶೇಷ ಸಂದರ್ಭಗಳಲ್ಲಿ ತಮ್ಮ ಪಾಂಡಿತ್ಯ ಪರಿಪೂರ್ಣವಾದ ಭಾಷಣಗಳಿಂದ ಇವರು ಜನರನ್ನು ಎಚ್ಚರಿಸಿದರು. ಕರ್ನಾಟಕ ಸಂಘಗಳನ್ನು ಸ್ಥಾಪಿಸಿ, ತರುಣ ಸಂಘಗಳನ್ನು ಪ್ರೋತ್ಸಾಹಿಸಿ ಕರ್ನಾಟಕ ಏಕೀಕರಣಕ್ಕೆ ಬೆಂಬಲವನ್ನಿತ್ತರು. ಇವರು ವಿಶಾಲ ಭಾರತವನ್ನು ಸುತ್ತಿ ವಿಶೇಷ ಲೋಕಾನುಭವವನ್ನು ಪಡೆದಿದ್ದರು. ಇವರ ಕಾರ್ಯ ಅಪಾರ ಜ್ಞಾನ ಘನವು. "ಸೋಲರಿಯದ ಶಿವ...‥...ಬಸವನಾಳರು. ಅವರ ಸೋಲರಿಯದ ಶಕ್ತಿಯಲ್ಲಿಯೇ ಗೆಲುವಿನ ಗುಟ್ಟು. ಕೀರ್ತಿಯು ಮಂತ್ರಗಳವೆ. ಬಸವನಾಳ ಅವರ ವಿದ್ವತ್ತಿನ ಪೂರ್ಣ ಸಂಶೋಧನೆಯ ಫಲವಾಗಿ ಅನೇಕ ಹಳೆಗನ್ನಡ ಗ್ರಂಥಗಳು ಸುಸಂಸ್ಕೃತ ರೂಪಿನಲ್ಲಿ ಬೆಳಕಿಗೆ ಬಂದು, ಶ್ರೀ ಬಸವೇಶ್ವರರ ವಚನ ರತ್ನಗಳು ಸಾಣೆ ಹಿಡಿದಂತಾದವು. ಇವರ ತ್ಯಾಗವೀರ ವೃತ್ತಿಯಿಂದ ಕರ್ನಾಟಕ ವಿಶ್ವವಿದ್ಯಾನಿಲಯವು ಮೂರ್ತಿ ಸ್ವರೂಪಕ್ಕೆ ಬಂದು, ಇನ್ನೂ ವಿದ್ಯಾ ಸಂಸ್ಥೆಗಳೂ, ವಿದ್ಯಾವರ್ಧಕ ಸಂಘ, ಕನ್ನಡ ಸಾಹಿತ್ಯ ಸಮ್ಮೇಳನ ಇವುಗಳು ಪ್ರಗತಿ ಅರ್ಥವನ್ನು ಕಂಡುಕೊಂಡಿವೆ. ಇವರು ಸಂಸ್ಕೃತಿ ಕ್ಷೇತ್ರದಲ್ಲೂ ಅಲ್ಲದೆ ಸಹಕಾರ ಕ್ಷೇತ್ರಗಳಲ್ಲಿಯೂ ಅಮೂಲ್ಯ ಕಾರ್ಯಗಳನ್ನು ಮಾಡಿದ್ದಾರೆ.

—ಪಂಡಿತ ಚನ್ನಬಸವಪ್ಪ ಕವಲಿ.

ವಿದ್ಯಾದಾನದ ಕಾರ್ಯವನ್ನು ಕೈಕೊಂಡಂತೆಯೇ ಸಮಾಜ ಸಂಘಟನೆಯ ಕಾರ್ಯಕ್ಕೆ ಕೈಹಾಕಿ, ಸುಭದ್ರವಾದ ಆರ್ಥಿಕ ತಳಹದಿಯು ಸಮಾಜೋದ್ಧಾರದ ಮಾರ್ಗದಲ್ಲಿ ಮಹತ್ವದ ಅಂಗ ಎಂಬುದನ್ನು ಅರಿತ ಇವರು ಬ್ಯಾಂಕಿನ ಮ್ಯಾನೇಜಿಂಗ ಡೈರೆಕ್ಟರರಾಗಿ ಕೆಲಸ ಮಾಡಿ ಸಹಕಾರ ಕ್ಷೇತ್ರದಲ್ಲಿ ವಿಪುಲ ಜ್ಞಾನ ಸಂಗ್ರಹ ಮಾಡಿ, ಅನುಭವ ಪಡೆದ ಇವರು ಶ್ರೇಷ್ಠ ಸಹಕಾರಿಗಳೆಂದು ಗಣಿಸಲ್ಪಟ್ಟರು. ಇಷ್ಟಿದ್ದರೂ ಪ್ರಾಥಮಿಕ, ಮಾಧ್ಯಮಿಕ, ಔದ್ಯೋಗಿಕ ಶಿಕ್ಷಣ ರಂಗಗಳ ಸಂಪರ್ಕ

ವನ್ನು ಕೂಡ ಪಡೆದಿದ್ದರು. ದುಡಿದು ಹಣ್ಣಾದೆ, ವಿಶ್ರಾಂತಿಯು ಬೇಕು ಎಂದು ಇವರು ಬೆಳಗಾವಿಯಿಂದ ಧಾರವಾಡಕ್ಕೆ ಬಂದರು. ಇಷ್ಟಾದರೂ ಇವರನ್ನು ಬಿಡದೆ ಕಾರ್ಯಗಳು ಗಂಟು ಕಟ್ಟಿಕೊಂಡವು. ಕರ್ನಾಟಕ ವಿಶ್ವವಿದ್ಯಾನಿಲಯವೇನೋ ಒಂದು ರೀತಿ ರೂಪವನ್ನು ತಳೆಯಿತು. ಅದನ್ನು ಹದಕ್ಕೆ ತರಲು ದುಡಿದರು. ಆದರೆ ಅದರ ಮತ್ತೊಂದು ಕೈ ಆದ ಏಕೀಕರಣ, ಏಕೀಕರಣದ ಸಮಸ್ಯೆ ಪರಿಹಾರ, ವಿಮುಕ್ತ ಶಕ್ತಿಗಳ ಪರಿಪೂರ್ಣ ವಿಕಾಸ, ನಮ್ಮ ಜನಜೀವನದ ತುಂಬು ಬೆಳವಣಿಗೆ ಇವುಗಳ ರೂಹುಗೊಂಡಿರುವದನ್ನು ಇನ್ನೂ ಕಂಡಿರಲಿಲ್ಲ. ಕನ್ನಡ ಪ್ರಾಂತದ ನಿರ್ಮಾಣವು ಅತ್ಯವಶ್ಯಕವೆಂದು ಹೆಜ್ಜೆ ಹೆಜ್ಜೆಗೂ ಇವರಿಗೆ ತೋರುತ್ತಿತ್ತು. ಪ್ರಾಂತೀಕರಣ ವಾದವನ್ನು ಪ್ರತಿಪಾದಿಸುವುದೆಂದರೆ ಮನಸ್ಸಿಲ್ಲದ ಕೇಂದ್ರ ಸರ್ಕಾರದ ಸಂಗಡ, ಆಳುವ ವರ್ಗದ ಜೊತೆಯಲ್ಲಿ ಅಪ್ರಿಯರಾಗುವುದು. ಆದರೆ ಆ ಬಗೆಯ ಶಂಕೆ ಯಾವುದಕ್ಕೂ ಮನಗೊಡದೆ ಕನ್ನಡ ಜನದ ಹಿತರಕ್ಷಣೆಯ ವಿಚಾರದಲ್ಲಿ ಉಚ್ಚ ಕಂಠದಿಂದ ವಾದಿಸಲು ಇವರು ಎಂದೆಂದೂ ಹಿಂದೆಗೆಯುತ್ತಿರಲಿಲ್ಲ. ಈ ಬಗೆಯ ವೀರ ಶರಣರು ತಾವು ನೆನೆಸಿದ್ದ ನನಸುಗಳು ಕನಸುಗಳನ್ನಾಗಿ ಮಾಡಲು ಅವಿಶ್ರಾಂತದಿಂದ ದುಡಿಯುತ್ತ ನಾಡಿನ ಅಭ್ಯುದಯದ ಹಾದಿಯನ್ನು ಹಿಡಿಯುತ್ತಿದ್ದರು.

ದಿನಾಂಕ ೨೨-೧೨-೧೯೫೧ ರ ಮಧ್ಯಾಹ್ನ ಮೂರು ಗಂಟೆಗೆ ಕರ್ನಾಟಕ ವಿಶ್ವವಿದ್ಯಾನಿಲಯದ ಸಭೆಗೆ ಭಾಗ ವಹಿಸಿದ್ದ ಬಸವನಾಳರು ಚರ್ಚೆಯ ವೇಳೆಗೆ ಎಂದಿನಂತೆ ತುಂಬು ತೂಕದ ನುಡಿಯನ್ನು ಮೇಲು ಧ್ವನಿಯಲ್ಲಿ ಹಿತಮಿತವಾಗಿ ನುಡಿದರು. ಸಭೆಯಲ್ಲಿ ನಲವತ್ತೈದು ನಿಮಿಷ ಕಾಲ ಕಳೆಯಿತು, ಕಾರ್ಯರಂಗದಲ್ಲಿ ಕರಗಿಹೋಗಿದ್ದ ಇವರು ಸಭೆಯ ಕೆಲಸಕ್ಕೆ ತೊಂದರೆಯು ಬರಬಾರದೆಂದು ಯಾರಿಗೂ ಹೇಳದೆ ಕೇಳದೆ ಹೊರಗೆ ಹೋಗಿ ಕಾರು ತೆಗೆದುಕೊಂಡು ಹೋಗಿ ವೈದ್ಯರ ಮನೆಯನ್ನು ಸೇರಿದರು. ಎದೆಯ ನೋವಿಗೆ ಸೂಜಿಮದ್ದನ್ನು ತೆಗೆದುಕೊಂಡು, ಉಳವಿ ಬಸವನ ಎಣ್ಣೆಯಲ್ಲಿನ ಸ್ವಗೃಹದ ಹೊಸ್ತಲನ್ನು ಮೆಟ್ಟಿದರು. ಅನೇಕ ದಿವಸಗಳಿಂದ ಎದೆನೋವಿನಿಂದ ನರಳುತ್ತಿದ್ದ ಇವರು ಹೆಂಡತಿಗೆ ನಗುಮುಖದಿಂದ 'ನಿನ್ನ ನೋವನ್ನು ನಾನು ತೆಗೆದುಕೊಂಡು ಬಂದಿದ್ದೇನೆ. ಒಂದು ಲೋಟ ಕಾಫಿಯನ್ನು ತೆಗೆದುಬಾ.'

ಎಂದು ಹಾಸಿಗೆ ಹಿಡಿದರು, ಕಾಫಿಯು ಬರುವುದರಲ್ಲಿಯೇ ಇವರ ಪ್ರಾಣಪಕ್ಷಿಯು ಹಾರಿಹೋಗಿತ್ತು. ಹೆಂಡತಿಯು ಗುಣಮುಖವಾಗುತ್ತಿರುವಲ್ಲಿ ಗಂಡನು ಗಟಿಗಟ್ಟಿ ಗುಡುಗೂರಿ ಹೋಗುವುದೂ ಕೂಡ ಶರಣ ಲೀಲೆಯಲ್ಲವೇ? 'ಶರಣರ ಗುಟ್ಟು ಮರಣದಲ್ಲಿ ನೋಡು?' ಎಂಬ ನಾಣ್ಣುಡಿಯು ಇವರಲ್ಲಿ ಸತ್ಯವಾಯಿತು. 'ಹಿಂದೂಸ್ಥಾನದ ಇತಿಹಾಸ' ಎಂಬ ಗ್ರಂಥವನ್ನು ಇವರು ಬರೆದಾಗ ಶಿವಾಜಿ ಮಹಾರಾಜನ ವಿಷಯದ ಬರಹಕ್ಕೆ ಅಪಾರ್ಥ ಕಲ್ಪಿಸಿಕೊಂಡ ತಲೆತಿರುಕ ಮರಾಠಿ ತರುಣನೊಬ್ಬನು ಚಾಕುವಿನಿಂದ ಇವರನ್ನು ಇರಿದನು. ಪರಶಿವನ ಕೃಪೆಯಿಂದ ಅದರಲ್ಲಿ ಇವರು ಪಾರಾದರು. ಆಗ ಗಂಡಾಂತರದಿಂದ ಪಾರಾದ ಇವರು ಈ ಬಗೆಯಾಗಿ ಮೃತ್ಯುವಿನ ಕರಾಳ ಸೆರೆಗೆ ಸಿಕ್ಕಬೇಕಾಯಿತು. 'ಜಾತಸ್ಯ ಮರಣಂ ಧೃವಂ' ಎಂಬುದೂ, Death is Near ಎಂಬುದೂ ಜೀವನದ ಚಾಂಚಲ್ಯವನ್ನು ತಾನೇ ಹೇಳುತ್ತಿರುವುದು? ಮನೆ ಮಕ್ಕಳನ್ನು ಸಂಕಟಕ್ಕೆ ಗುರಿಮಾಡಿ, ಯಾರಿಗೂ ಹೇಳದೆ ಕೇಳದೆ ಬಸವನಾಳರು ಹೊರಟುಹೋದರು. ಸಾಧನದ ತಪಶ್ಚರ್ಯೆಯು, ಕರ್ಮಯೋಗದ, ಅವಿಶ್ರಾಂತದ ಜೀವನವನ್ನು ನಡೆಯಿಸಿ, ಎಷ್ಟನ್ನೋ ಸಾಧಿಸಿ, ಸಾಧಿಸಬೇಕಾದ ಇನ್ನೆಷ್ಟನ್ನೋ ಉಳಿಸಿಯೇ ಕಾಲನ ಕರೆಗೆ ಬಸವನಾಳರು ಓಗೊಟ್ಟರು.

ದಿನಾಂಕ ೨೩-೧೨-೫೧ ರ ಸಂಜೆ ನಾಲ್ಕು ಗಂಟೆ ಮಾರ್ತಾಂಡನು ಪಡುಗಡಲಿಗಿಳಿಯುವ ಮೊದಲೇ ಧಾರವಾಡದ ಬೀದಿಬೀದಿಗಳಲ್ಲಿ ದುಃಖವಾರ್ತೆಯೊಂದು ಹರಡಿ, ಬರುಬರುತ್ತ ಇಡೀ ಕರ್ನಾಟಕದಲ್ಲಿಯೇ ಹಬ್ಬಿ ಪುನಃ ಬಸವನಾಳರು ಕಾಣದಂತಾದರು. ಜನಗಳ ಮಾತುಕತೆಯನ್ನು ಹೇಳತೀರದಾಗಿದೆ. "ಭೀಮಕವಿಯ ಬಸವ ಪುರಾಣ, ಬಸವಣ್ಣನ ವಚನಗಳ ಲೈಬ್ರರಿ, ಎಡಿಸನ್, ಹರಿಹರನ ರಗಳೆ ಇವುಗಳ ಸಂಶೋಧನೆಯು ಕಾರ್ಯವು ಮುಗಿದಿದೆ. ಆದರೆ ಅವು ಇನ್ನೂ ಜನಗಳ ಕರಗತವಾಗಿಲ್ಲ. ಕಾಡಸಿದ್ಧೇಶ್ವರ ಆರ್ಟ್ಸ ಕಾಲೇಜಿನ ಪ್ರಿನ್ಸಿಪಾಲರಾಗಿ ಕಾರ್ಯವನ್ನು ಪ್ರಾರಂಭಿಸಿ, ಸಂಸ್ಥೆಯ ಸ್ಥಿರ ಸ್ಥಾಯಿತ್ವಕ್ಕೆ ಸ್ಥಾನ ಮಾಡಲಿಲ್ಲ. ಏಕೀಕರಣದ ಕಾರ್ಯ ಇನ್ನೂ ಕೈಗೂಡಲಿಲ್ಲ. ಸಮಾಜವು ಕೊಡಬಯಸುವ ಮರ್ಯಾದೆಯನ್ನು ಇನ್ನೂ ಇವರು ಸ್ವೀಕರಿಸಲಿಲ್ಲ. ಚೆನ್ನಬಸವ ಪುರಾಣ ಪುನರ್ಮುದ್ರಿತವಾಗಬೇಕಾಗಿದೆ. ಶಬ್ದ ಮಣಿದ-

ರ್ಣವನ್ನು ಸಂಪಾದಿಸಬೇಕೆಂದಿದ್ದಾರೆ. ಇನ್ನು ಇವರು ಮಾಡಬೇಕಾದ ಕಾರ್ಯಗಳು ಅನೇಕವಿರುವಾಗ ಇವರಿಲ್ಲ ಎಂಬುದನ್ನು ನಂಬುವದು ತಾನೇ ಹೇಗೆ? ಬಸವನಾಳರ ಆತ್ಮ ಪಕ್ಷಿಯು ಗರಿಗೆದರಿ ಸ್ವರ್ಗೀಯಗಾನ ಹಾಡುತ್ತಾ ಮೇಲೆ ತೆರಳಿದೆ. ಆರ್ತಾಲಾಪ ಅರಳುತ್ತಿದೆ.

ಕರುಣೆಬಾರದೇನೋ । ಸದಾಶಿವ ನಿನಗೆ
ಕರುಣೆಬಾರದೇನೋ ॥

ಕನ್ನಡದ ಭಾಗ್ಯಶ್ರೀ ಬಸವನಾಳರು ಲಿಂಗೈಕ್ಯರಾದುದು ಎಲ್ಲೆಡೆಯಲ್ಲಿಯೂ ಎರಕೆಗೊಂಡಿತು. ಮುಂಬಯಿಯಲ್ಲಿದ್ದ ಬಸವನಾಳ ಸೋದರರು ಅಗ್ರಜರನ್ನು ನೋಡಲು ಬಂದರು. ದಿನಾಂಕ. ೨೩-೧೨-೫೧ ರ ಸಾಯಂಕಾಲ ಪ್ರತಿದಿನವೂ ಇವರು ಸೇರುತ್ತಿದ್ದ ಕಾಣದ ನೆರೆಯಲ್ಲಿ ಧಾರವಾಡದ ಲಿಂಗಾಯಿತ ಭವನದ ಆವರಣದಲ್ಲಿ ಲಿಂಗರಾಜರ ಅಮೃತ ಶಿಲಾಪುತ್ಥಳಿಯಿರುವ ಜಾಗದಲ್ಲಿ ಇವರ ಶರೀರವನ್ನು ಭೂದೇವಿಯ ಮಡಿಲಿಗೆ ಹಾಕಿದುದಾಯಿತು. ಅಸಂಖ್ಯಾತರು ನೆರೆದು ಲಿಂಗೈಕ್ಯರಿಗೆ ಅಂತ್ಯ ಗೌರವವನ್ನು ಸೂಚಿಸಿ ಹಗುರ ಶರೀರದಿಂದ ಬಂದವರು ಭಾರ ಶರೀರದಿಂದ ಹಿಂತಿರುಗಿದರು.

ಸಂಜೆವಣ್ಣಿನ, ಕರಿಯ ಕರುಳಿನ, ನೆರಳುಬುವಿಯನ್ನರಳಿಸಿ, ಚಣವು ಲೀಲೆಯನಾಡಿ, ಚಂದ್ರೋದಯದ ಸೊಬಗನುವರ್ಧಿಸಿ, ಬೆಳಕಿನೊಳು ಕತ್ತಲೆಯು ಕರಗುವ ತೆರದಿ ನಿಮ್ಮನುಸಂಧಿಸಿ, ಮಾಯವಾಯಿತುಮಿಳ್ತು, ಅಮರ ಜ್ಯೋತಿಯೊಡನೆ ತಲೆವಾಗಿಸಿ, ಮಮತೆ ಮಕ್ಕಳ ಮಾಯೆ ಮುಸುಕದೆ ಶಾಂತಿ ಸುಧೆಯನು ಬೀರುತ "ಕಾಯಕವೇ ಕೈಲಾಸ" ವೆಂಬುವ ತತ್ವದಿಂದ ನಡೆಯುತ, ಕರೆಯು ಬರೆನಸುವಳು; ಕದಲೆ ನಸು ನಗುತೆಲಸವನು ನೀಗುತೆ, ನಡೆದಿರೈ; ಸುಮುವಾಯ್ತುಸಾವದು; ಸೈಪು ಸಂಚೆಯವಾಗುತ, "ಬಸವನಾಳರು" ಎಂಬ ಹೆಸರನು ಪಡೆದ ನಿಜಶಿವ ಯೋಗಿಯು, ನಿಮ್ಮ ನನ್ನಿಯ ಜೀವನವು ಎಮಗಾಗಸೆನ್ನುತ ದಾರಿಯು.

—ಕೋ. ಚನ್ನಬಸವಪ್ಪ.

ಮಕ್ಕಳ ಮಧ್ಯದ ಚಿಕ್ಕೆಗಳ ಚಂದ್ರಮನಾಗಿ ಬಸವನಾಳರು ಬೆಳಗುತ್ತಿದ್ದರು. ಚಿತ್ರದುರ್ಗದ ಜಗದ್ಗುರುಗಳ ವಿಶೇಷ ಪ್ರೇಮಕ್ಕೊ ಪಾತ್ರರಾಗಿದ್ದರು. ಪಾಂಡಿತ್ಯದಲ್ಲಿ ಗೌರಿಶಂಕರದ ಹಿರಿಮೆಯನ್ನು ಸ್ಮೃತಿಗೆ ತಂದು ಕೊಡುವ ಮೈಸೂರಿನ ಪಂಚಗವಿ ಮಠಾಧ್ಯಕ್ಷರು ಬಸವನಾಳರ

ಪಾಂಡಿತ್ಯವನ್ನು ಮೆಚ್ಚಿಕೊಂಡಿದ್ದರು. ಧಾರವಾಡದ ಮೃತ್ಯುಂಜಯ ಸ್ವಾಮಿಗಳು ಇವರ ಸಲಹೆಯನ್ನು ಪಡೆಯದೆ ಯಾವ ಕೆಲಸಕ್ಕೂ ಕೂಡ ಕೈ ಹಾಕುತ್ತಿರಲಿಲ್ಲ. ಸರ್ವ ಧರ್ಮ ಸಮ್ಮೇಳನದ ಸಂಯೋಜಕ ರಾದ ನವಿಲಗುಂದದ ಶ್ರೀಗಳ ಬಲಗೈ ಆಗಿದ್ದರು. ಸಮರಸವು ಜೀವ ನದ ಸೂತ್ರ, ಸಮನ್ವಯವು ಜೀವನದ ಶಕ್ತಿ, ಸೌಜನ್ಯವು ಜೀವನದ ಆಸ್ತಿ, ತೂಕ, ಅಚ್ಚುಕಟ್ಟು, ನಿರ್ಮಲಾಭಿ ರುಚಿಯು ಇವರ ವ್ಯಕ್ತಿತ್ವದ ಪರಿಸ್ಪಷ್ಟ ಗುರುತು. ಕಾರ್ಯ ಕುಶಲ ಮೂರ್ತಿ ಇವರು. "ಶ್ರೀ ಬಸವ ನಾಳರು ಮೂವತ್ತೈದು ವರ್ಷಗಳ ಕಾಲ ವಾಗ್ದೇವಿಗೆ ಅಖಂಡ ಸೇವೆ ಯನ್ನು ಸಲ್ಲಿಸಿ ಆಕೆಯ ಮಡಿಲಲ್ಲೇ ತಮ್ಮ ಆತ್ಮಾರ್ಪಣೆ ಮಾಡಿದರು. ಶಾರದಾ ಮಂದಿರದಲ್ಲಿ ಬಯಲಾದುದು ನಿಜವಾದ ಶೂನ್ಯಸಂಪಾದನೆ; ಶಿವಸಾಕ್ಷಾತ್ಕಾರಃ ಶುದ್ಧ ಜೀವನದ ನಿಷ್ಕಳಂಕ ಪರಿಸಮಾಪ್ತಿ."

—ಜಯಚಾಮರಾಜ ಒಡೆಯರ.

ಯಾರು ಯಾವ ಅಭಿಪ್ರಾಯವನ್ನಿಟ್ಟುಕೊಂಡು ಹೋದರೂ ಅವರವರಿಗೆ ಸಮರ್ಪಕ ಮಾರ್ಗದರ್ಶನ ಇವರಿಂದ ಸಿಗುತ್ತಿತ್ತು. ಇವರ ಸಹವಾಸವು ಹುಣ್ಣಿಮೆಯ ಬೆಳದಿಂಗಳು. ಧಾರವಾಡ ಹುಬ್ಬಳ್ಳಿಯ ಹೃದಯವನ್ನು ಬೆಸುಗೆಗೊಳಿಸಿದೆ. ಮೈಸೂರು ಮಂಗಳೂರು ಮಾರ್ಗದ ಸೇತು ಬಂಧನಕ್ಕೆ ಶಿಲ್ಪಗೊಳಿಸಿದ ಕರ್ಣಾಟಕದ ಕರೆಯನ್ನು ಕಟ್ಟಿದ ಕನ್ನಡದ ಕುಲಪುರುಷರು ಬಸವನಾಳರು. ಭಕ್ತಿಭಾಂಡಾರಿ ಸಂದೇಶ ವಾದ; ನಾಡಿನ ನಿಸ್ವಾರ್ಥ ಸೇವಕ ಬಸವನಾಳರು.

ಎಲ್ಲರೂ ವೀರರು, ಎಲ್ಲರೂ ಧೀರರು ;
ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು;
ಕಾಳಗದ ಮುಖದಲ್ಲಿ ಕಾಣಬಾರದು.
ಓಡುವ ಮುಖದಲ್ಲಿ ಕಾಣಬಹುದು.
ನಮ್ಮ ಕೂಡಲಸಂಗನ ಶರಣರು ಧೀರರು.
ಉಳಿದವರೆಲ್ಲಾ ಅಧೀರರು.

---

ದಿನಾಂಕ ೨೪-೧೨-೬೦ ರಲ್ಲಿ ಹಲಗೂರು ವೀರಶೈವ ತರುಣಸಂಗದಲ್ಲಿ ಮಾಡಿದ ಭಾಷಣ.

———

# ಮಾತಿನ ಮರ್ಮ

(ಲೇಖಕರು:— ಶ್ರೀ ಸ. ವೀ. ಹಂಜಿ, ಎಂ. ಎ., ಬಿ.ಟಿ.)

ಮಾತನಾಡುವ ಶಕ್ತಿಯು ಮಾನವನಿಗೆ ದೇವರಿಂದ ಬಂದ ಒಂದು ದೇಣಿಗೆ. ಉಳಿದ ಯಾವ ಪಶು-ಪಕ್ಷಿಗಳಿಗೂ ಇಲ್ಲದ ಶಕ್ತಿಯಿದು. ಆದುದರಿಂದ ಮಾನವನು ಇದರ ಸದುಪಯೋಗ ಮಾಡಿಕೊಳ್ಳುವದು ಉತ್ತಮ. ಬಾಯಿಗೆ ಬಂದಂತೆ ಮಾತನಾಡಿದರೆ ಯಾವ ಪರಿಣಾಮಗಳು ಆಗುವವು ಎಂಬುದನ್ನು ಹೇಳಲು ಅಸಾಧ್ಯ. ಒಮ್ಮೆ ಒಳಿತೂ ಆಗಬಹುದು, ಒಮ್ಮೆ ಕೆಡಕೂ ಆಗಬಹುದು. ವಿಚಾರ ಮಾಡಿ ಯಾರ ಮನಸ್ಸಿಗೂ ಹತ್ತದಂತೆ ಮಾತಾಡುವದು ಜಾಣತನದ ಲಕ್ಷಣ. ಪ್ರಸಂಗ ಬಂದಾಗ ಬುದ್ಧಿ ಚಾತುರ್ಯದಿಂದ ಮಾತಿಗೆ ತಕ್ಕ ಪ್ರತ್ಯುತ್ತರ ಕೊಡುವದು ಬಹಳ ಕಠಿಣ. ಆದುದರಿಂದ ಚನ್ನಾಗಿ ರೂಢಿ ಮಾಡಿ ಉತ್ತಮ ರೀತಿಯಿಂದ ಮಾತನಾಡಲು ಕಲಿಯಬೇಕು. ಮಾತನಾಡುವದೂ ಒಂದು ಕಲೆಯಾದುದರಿಂದ ರೂಢಿ ಮಾಡಿದ ಹಾಗೆ ಸಾಧಿಸುವದು. ಮಾತಿನ ಮಹತ್ವವನ್ನು ಕುರಿತು ನಮ್ಮ ಪ್ರಾಚೀನ ಕೆಲವು ಮಹನೀಯರು ಬಹು ಸೊಗಸಾಗಿ ಕಾವ್ಯಮಯವಾಗಿ ಹೇಳಿದ್ದಾರೆ. "ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ." ಎಂಬ ನಾಣ್ಣುಡಿಯು ಸರ್ವರಿಗೂ ಶ್ರುತವಿದೆ. ವೀರಶೈವ ಶ್ರೇಷ್ಠ ತತ್ವಜ್ಞಾನಿಗಳೂ, ಮಹಾ ವೈರಾಗ್ಯಶಾಲಿಗಳೂ ಆದ ಅಲ್ಲಮ ಪ್ರಭುಗಳು "ಮಾತೇ ಜ್ಯೋತಿರ್ಲಿಂಗ" ಎಂದು ಉಸುರಿದ್ದಾರೆ. ವೀರಶೈವ ಮತೋದ್ಧಾರಕರೂ, ಸುಪ್ರಸಿದ್ಧ ಸಮಾಜ ಸುಧಾರಕರೂ, ಕನ್ನಡ ನಾಡಿನ ಶ್ರೇಷ್ಠ ಮಹಾಪುರುಷರೂ ಆದ ಬಸವಣ್ಣನವರು, ತಮ್ಮ ಒಂದು ವಚನದಲ್ಲಿ ಮಾತು ಹೇಗಿರಬೇಕೆಂಬುದನ್ನು ಬಹು ಮಾರ್ಮಿಕವಾಗಿ ಹೇಳಿದ್ದಾರೆ.

ನುಡಿದರೆ ಮುತ್ತಿನ ಹಾರದಂತಿರಬೇಕು.

ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.

ನುಡಿದರೆ ಲಿಂಗಮೆಚ್ಚಿ 'ಅಹುದೆನ್ನ'ಬೇಕು.

ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯಾ ?

ಕನ್ನಡ ನಾಡಿನ ಜನಪ್ರಿಯ ಕವಿಯಾದ ಸರ್ವಜ್ಞನು ಮಾತಿನ ಬಗೆಗೆ ಅನೇಕ ವಚನಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ನೋಡಬಹುದು.

ಮಾತುಮಾತಿಗೆ ತಕ್ಕ ಅನೇಕ ಮಾತುಗಳಿರುವವು. ಇದರಿಂದ ಮನಸ್ಸಿಗೆ ನೋವಾಗಿ ಕೋಪವೂ ಬರುವದು. ಆದುದರಿಂದ ಮಾತಿನಲ್ಲಿ ಸೋತು ಹೋದವನೇ ಜಾಣನು.

ಮಾತು ಮಾತಿಗೆ ತಕ್ಕ ಮಾತು ಕೋಟಿಗಳುಂಟು
ಮಾತಾಡಿ ಮನಕೆ ಮುನಿಸಕ್ಕು ಮಾತಿನಲಿ
ಸೋತವನೆ ಜಾಣ ಸರ್ವಜ್ಞ.

ಮಾತಿನಿಂದ ಮಹತ್ವದ ಘಟನೆಗಳು ಸಂಭವಿಸುವವು. ಮಾತಿನಿಂದ ನಗುವ ಪ್ರೇಮದ ಮಾತುಗಳು ಬರಬಹುದು. ಮಾತಿನಿಂದ ವೈರತ್ವ ಉಂಟಾಗಿ ಕೊಲೆ, ಸುಲಿಗೆಗಳು ಒದಗಬಹುದು. ಮಾತಿನಿಂದ ಎಲ್ಲ ತರದ ಸಂಪತ್ತು ದೊರಕುವದು. ಇಡಿಯ ಜಗತ್ತಿಗೆ ಮಾತೇ ಬೆಲೆಯುಳ್ಳ ರತ್ನವಿದ್ದಂತೆ.

ಮಾತಿನಿಂ ನಗೆನುಡಿಯು ಮಾತಿನಿಂ ಹಗೆ ಕೊಲೆಯು
ಮಾತಿನಿಂ ಸರ್ವಸಂಪದವು ಲೋಕಕ್ಕೆ
ಮಾತೇ ಮಾಣಿಕವು ಸರ್ವಜ್ಞ.

ಮಾತು ಬಲ್ಲವರು ಮಾತನಾಡಿದರೆ ಏತವು ನೀರನ್ನು ಸುರಿಸಿದಂತೆ ಮನೋಹರವಾಗುವದು. ಅದೇ ಮಾತನಾಡಲು ಬಾರದವನಿಗೆ ಬರಿ ಏತವು ಜೋತಾಡಿದಂತೆ ಕಾಣುವದು.

ಮಾತು ಬಲ್ಲಾತಂಗೆ ಏತವದು ಸುರಿದಂತೆ
ಮಾತಾಡಲರಿಯದಾತಂಗೆ ಬರಿ ಏತು
ನೇತಾಡಿದಂತೆ ಸರ್ವಜ್ಞ.

ಕಲಾಪೂರ್ಣವಾಗಿ, ಮಧುರವಾಗಿ, ಸರಸವಾಗಿ ಮಾತಾಡಬಲ್ಲವನು ಆಡಿದ ನುಡಿಗಳು ಚಂದ್ರೋದಯದ ಸೊಗಸನ್ನೂ, ಆನಂದವನ್ನೂ ತರುವವು. ಅದೇ ನೀರಸವಾಗಿ ಮಾತನಾಡುವವನ ಮಾತುಗಳು ಕಿವಿಯಲ್ಲಿ ಹದನಾದ ಖಡ್ಗವನ್ನು ತಿವಿದ ಹಾಗೆ ಆಗುವದು.

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದನ ಬರಿ ಮಾತು ಕಿವಿಗೆ ಕೂರ್
ದಸಿಯು ಬಡಿದಂತೆ ಸರ್ವಜ್ಞ.

ಪ್ರಸಂಗಕ್ಕೆ ತಕ್ಕಂತೆ ಮಾತುಗಳನ್ನು ಆಡಿದರೆ ಸತ್ತ್ರವನು ಎದ್ದಂತಾಗುವದು. ಅವಧಿಯನ್ನು ಮೀರಿ ಇಲ್ಲವೆ ಅಯೋಗ್ಯ ಸಮಯದಲ್ಲಿ ಮಾತಾಡಿದರೆ ಕೈಯಿಂದ ಜಾರಿ ಬಿದ್ದ ಮುತ್ತಿನಂತೆ ಪರಿಸ್ಥಿತಿಯಾಗುವದು.

ಹೊತ್ತಿಗೊದಗಿದ ಮಾತು ಸತ್ತ್ರವನು ಎದ್ದಂತೆ.
ಹೊತ್ತಾಗಿ ನುಡಿದ ಮಾತು ಕೈಜಾರಿದಾ
ಮುತ್ತಿನಂತಿಹುದು ಸರ್ವಜ್ಞ.

ಮಾತಾಡತಕ್ಕದ್ದನ್ನು ಮರೆಯದೆ ಮಾತನಾಡಬೇಕು. ಕಾದ ಕಬ್ಬಿಣವನ್ನು ಜಡಿದರೆ ಅದು ಕೂಡಿಕೊಳ್ಳುವದು. ಮಾತನಾಡಲು ಹೋದಾಗ ಮುಖ್ಯ ಸಂಗತಿಗಳನ್ನೇ ಮರೆತರೆ ಕಾದ ಕಬ್ಬಿಣವು ಆರಿದಂತಾಗುವದು.

ಕಾದ ಕಬ್ಬುನವು ತಾ ಹೊಯ್ದೊಡನೆ ಕೂಡುವದು.
ಹೋದಲ್ಲಿ ಮಾತ ಮರೆದರಾ ಕಬ್ಬುನವು
ಕಾದಾರಿದಂತೆ ಸರ್ವಜ್ಞ.

ಚನ್ನಾಗಿ ಮಾತನಾಡುವವರಿಗೆ ಮಾತು ಒಂದು ರತ್ನವಿದ್ದಂತೆ. ಮಾತಾಡಲು ಬಾರದ ನೀಚನಿಗೆ ಮಾಣಿಕವು ತೂತು ಬಿದ್ದಂತಾಗುವದು.

ಮಾತು ಬಲ್ಲಾತಂಗೆ ಮಾತೊಂದು ಮಾಣಿಕವು
ಮಾತನರಿಯದಧಮರಿಗೆ ಮಾಣಿಕವು
ತೂತು ಬಿದ್ದಂತೆ ಸರ್ವಜ್ಞ.

ಮಾತುಗಳು ಬೆಲೆಯುಳ್ಳ ಮುತ್ತು ರತ್ನಗಳು. ಮಾತು ಬಹು ಸಸಾರವಾದದ್ದು. ನುಡಿದಂತೆ ನಡೆಯುವವನು ಇಡಿಯ ಜಗತ್ತನ್ನೇ ಕುಳಿತಲ್ಲಿಯೇ ಆಳುವನು.

ಮಾತು ಮಾಣಿಕ, ಮುತ್ತು. ಮಾತೆ ತಾ ಸದರವು
ಮಾತಾಡಿದಂತೆ ನಡೆದಾತ ಜಗವನ್ನು
ಕೂತಲ್ಲಿ ಆಳ್ವ! ಸರ್ವಜ್ಞ.

———

# ಶ್ರೀ ಬಸವಣ್ಣನವರಿಗೆ ಬಿನ್ನಹ.

ಪದ್ಯ. 'ಉದಯವಾಗಲಿ' ಎಂಬಂತೆ,

ಬಾ ಮತ್ತೆ ಉದ್ಭವಿಸಿ ನೀ ಬಸವೇಶನೇ ಭೂತಲಕೆ ।
ಪ್ರೇಮಮಯನೇ ನೀನು ನಿನ್ನ ಕರ್ನಾಟಕಕೆ ॥ಪ॥

೧

ಶಿವ ಮತದಿ ಸೇರಿರುವ ಜಾತಿಗಳ ಕಳೆಯಲಿಕೆ ।
ಶಿವ ಮತದೊಳನ್ಯ ಮತದವರ ಕರಕೊಳ್ಳಲಿಕೆ ॥
ಶಿವ ಮತದ ತತ್ವಗಳ ಜಗದೊಳಗೆ ಬೀರಲಿಕೆ ।
ದಿವಿಜ ಲೋಕವ ತೊರೆದು ಕಲ್ಯಾಣ ಪಟ್ಟಣಕೆ ॥

೨

ಸತ್ಯ ಹಿಂದೂ ಧರ್ಮ ಜನಕನೇ ಮಂಗಲನೆ ।
ಸತ್ಯಮಯ ಶಿವ ಮತೋದ್ಧಾರಕನೆ ಸನ್ನುತನೆ ॥
ಮೃತ್ಯು ಲೋಕದ ಶಿವನೆ ಜಗದಿಂದೆ ವಂದಿತನೆ ।
ಸ್ತುತ್ಯನೇ ಧರ್ಮ ಸುಜ್ಞಾನ ಘನ ಪಂಡಿತನೆ ॥

೩

ಜಾತಿಗಳ ದೇಶದೊಳು ನಿಃಶೇಷ ಮಾಡಲಿಕೆ ।
ಪೂತ ಶಿವಮತವನ್ನು ದೇಶಮಯ ಗೆಯ್ಯಲಿಕೆ ॥
ಪ್ರೀತಿ ವಿಶ್ವಾಸಗಳ ಜನರಲ್ಲಿ ಬೆಳೆಸಲಿಕೆ ।
ನೀತಿ ಧರ್ಮದ ನಡೆಯ ಲೋಗರರ ಹೆಚ್ಚಲಿಕೆ ॥

೪

ಬಾ ಪುಟ್ಟಿ ಶಿವಮತದ ತಾಯ್ತಂದೆಯುದರದೊಳ್ ।
ಸೈ ಪು ಹೃದ್ದಾರಿಂ ಜನರನ್ನು ಸಾಗಿಸಲು ॥
ತಾಪನು ಬಡತನದ ದೇಶದಿಂದೋಡಿ ।
ಪಾಪಿಗಳನುದ್ಧರಿಸಿ ಸರ್ವರನು ರಕ್ಷಿಸಲು ॥

೫

ಬಾ ನೀನು ಕರಕೊಂಡು ಪ್ರಭು ಚನ್ನಬಸವರನು ।
ಬಾ ನೀನು ಕರಕೊಂಡು ಮತ್ತುಳಿದ ಶರಣರನು॥
ಬಾ ನೀನು ಕರಕೊಂಡು ಅಕ್ಕ ಮಹಾದೇವಿಯನು ।
ಬಾ ನೀನು ಕರಕೊಂಡು ಮಿಕ್ಕ ಶರಣೆಯರನ್ನು ॥

೬

ಜೀವ ಶಿವ ಸಮರಸದ ಪೇರ್ಮೆಯನ್ನರುಹಲಿಕೆ ।
ಜೀವ ಶಿವರೊಳು ಬೆರೆಸಲಿಕೆ ನೆರೆ ಕಲಿಸಲಿಕೆ ॥
ಜೀವ ಶಿವ ಸಮರಸದ ಸೌಖ್ಯ ಸುಧೆಗೂಡಿಸಲಿಕೆ ।
ದೇವ ನಾನಾದೆನೆಂಬನುಭವವನುಣಿಸಲಿಕೆ ॥

೭

ಶಿವ ಮತಗಂಭೋಧಿ ಹಿಮಕರನೆ ಶುಭಗಾತ್ರನೇ ।
ಶಿವನಾಮ ಸುಧೆಯನ್ನು ಸತತ ಸೇವಿಸುವವನೆ ॥
ಶಿವಭಕ್ತ ಗಣ ಕಮಲ ದಿನನಿರನೇ ಮಹಿಮನೆ ।
ಶಿವನಲ್ಲಿ ಬೆರೆದು ಶಿವನಾದ ಬಹು ಪೂಜ್ಯನೇ ॥

೮

ಪರವಾದಿ ಜನನಿಕರ ಮತ್ತಾಕಾರಿ ಕೇಸರಿಯೆ ।
ದುರಿತಗಿರಿ ಪವಿಯೆ । ಸಜ್ಜನ ಸಲಿಲರು ಹರವಿಯೆ ॥
ಕರುಣಾ ಜಲಧಿಯೆ ಗುಣ ಸದ್ರತ್ನ ಘನಖಣಿಯೆ ।
ಪರಮ ಶಾಂತಿಯ ನಿಧಿಯೆ ಶಿವಮತದ ವೈಸಿರಿಯೆ ॥

—ತು. ರ. ಕೋಪರಡೆ, ಬನಹಟ್ಟಿ

# ಇದು ಕನಸೊ! ನನಸೊ?

(ಲೇಖಕ:— ಶ್ರೀ ಬಳವಂತ ಧಡುತಿ ಮಹಾಲಿಂಗಪೂರ)

ರಜತಾದ್ರಿಯಿಂದ ರವಿಯ ಹೊಂಗಿರಣದ ರಶ್ಮಿಗಳು ಹೊರಸೂಸುವದಕ್ಕೆ ನಾಲ್ಕು ಗಳಿಗೆ ಮುಂಚಿತವಾಗಿ ನಿಯಮಾನುಸಾರ ಎದ್ದು, ಶಿವಾಸನ ಮಂಡಿತನಾಗಿ ಶಿವನಾಮಸ್ಮರಣೆಯಂ ಗೈಯ್ಯುವಾಗ ಒಂದ ಘಟಿತ ಘಟನೆ ಕಂಡದ್ದುದೇನಂದರೆ

"ಕರಕಮಲದಲ್ಲಿ ಸಕಲ ಬ್ರಹ್ಮಾಂಡಕ್ಕೆ ಅಧಿಪತಿಯಾದ ಆ ಚಿದ್ಘನ ರೂಪನ ಎದುರಿನಲ್ಲಿ ಬಹೂ ಅಂತರದ ಕೆಳಗೆ ಒಂದು ಚಿಕ್ಕ ಕಣವಾಗಿ ನಿಂತಿದ್ದಂತೆ;:— ಆ ಸಚ್ಚಿದಾನಂದ ಮೂರ್ತಿಯು ಸಪ್ತಫಣಿಗಳುಳ್ಳ ಆದಿ ಶೇಷನ ಮಧ್ಯಫಣಿಯ ಕೆಳಗೆ ತೀರ ಸ್ವಲ್ಪ ಅಂತರದಲ್ಲಿ ಅನಂತಕೋಟಿ ಸೂರ್ಯರ ಪ್ರಕಾಶದ ಶಕ್ತಿಯನ್ನು ಒಂದೇ ವಂದು ಘನರೂಪದಲ್ಲಿ ಅಳವಡಿಸಿದಂಥ ಗೋಲಾಕಾರದ ಸದಾ ತೇಜೋಮಯನಾದ ಆ ಪರಮಾತ್ಮನು ಆದಿಶೇಷನನ್ನೇ ಸಿಂಹಾಸನವನ್ನಾಗಿರಿಸಿ, ಅಖಂಡ ಬ್ರಹ್ಮಾಂಡವನ್ನೆ ತಮವನ್ನು ಮಾಡಿ (ಅಂಧಕಾರಮಾಡಿ) ಸ್ವಯಂಪ್ರಕಾಶಮಾನನಾಗಿ ಲೋಲಾಡುತ್ತಿರುವನು."

—ಪದ್ಯ.—

ಯಜಮಾನನು ಕಂಡೆಯಾ | ಜೀವಾತ್ಮಾ ನೀ | ಯಜಮಾನನು ಕಂಡೆಯಾ ||ಪಲ್ಲ||
ಆದಿಶೇಷನನೆ ಸಿಂಹಾಸನ ಮಾಡಿ | ಅದ್ಯನಂತಕೋಟಿ ಸೂರ್ಯರ ಶಕ್ತಿ |
ವಂದೆವಂದು ಘನರೂಪದಲ್ಲಿರಿಸಿ | ಬ್ರಹ್ಮಾಂಡದ ಮೇಲೆ ತಾಮವಹೊರಿಸಿ||
ಅಖಂಡ ಜ್ಯೋತಿ ತಾ ಸದಾ ಬೆಳಗುತ್ತಿಪ್ಪಂಥಾ ||೧||
ಯಜಮಾನನು ಕಂಡೆಯಾ | ಜೀವಾತ್ಮಾನೀ | ಯಜಮಾನನು ಕಂಡೆಯಾ ||

ಈ ವಿಶ್ವಲೀಲೆಯನ್ನು ಕಂಡವರಿಗೆ ಅಂಗಾಂಗಗಳಲ್ಲಿ ರೋಮಾಂಚನಗಳೇಳುತ್ತವೆ. ಅಲ್ಲದೆ, ಆ ಸಚ್ಚಿದಾನಂದನೆಡೆಗೆ ಹೋಗುವ ಲವಲವಿಕೆ

ಯಾರಿಗೆ ಆಗಲಾರದು? ಆತನ ರೂಪವು ಸದಾ ತನ್ನೆದುರಿಗೆ ಇರ ಬೇಕು (ತನ್ನ ಹೃದಯದಲ್ಲಿ ಕಾಣಬೇಕು.) ಇದೆಲ್ಲಾ ತಾನು ವರ್ಣಿ ಸಿದ್ದರ ಸಾವಿರದ ಒಂದನೇ ಭಾಗವಿರಬಹುದು. ತನ್ನಿಂದಾ ಈಶ್ವರ ಲೀಲೆಯನ್ನು ವರ್ಣಿಸಲು ಶಕ್ತಿ ಸಾಲದು. ಆದರೆ ಶ್ರೇಷ್ಠರಾದ ಮಹಾ ಜ್ಞಾನಿಗಳಿಂದ ಎಷ್ಟು ವರ್ಣಿಸಲ್ಪಡಬಹುದು ?

ಆ ನಿಶ್ಚಲವಾದ ಬಿಂಬ ಸ್ವರೂಪ ತೇಜೋರಾಶಿಯನ್ನು ಕಂಡು ಜೀವ ತಳಮಳಿಸುತ್ತದೆ. ಒಂದು ನಿಕಟಸಂಬಂಧವಿದ್ದುದರಿಂದ ದೈನಂದಿ ನದ ಕರ್ಮಗಳೆಲ್ಲ ಮರೆತು ಬಿಡುತ್ತವೆ. ಈ ಸ್ಥೂಲ ತನುಸಹಿತ ಆ ತೇಜೋಮಯಾನಂತ ಪರಬ್ರಹ್ಮನಲ್ಲಿ ಒಮ್ಮೆಲೇ ಹ್ಯಾಗೆ ಲೀನವಾಗಲು ಶಕ್ಯ ! (ಆಗಲಾರದು) ಯಾಕಂದರೆ, ಈ ತನುವಿಗೆ ವಿಷವನ್ನೇ ಅಮೃತ ವೆಂಬ ಭ್ರಾಂತಿಯಿಂದ ಧಾರೆಯೆರೆಯುತ್ತಿರುವದರಿಂದ ಅದು ಅಶಕ್ಯ! ಅಶಕ್ಯ ! ಪಂಚಭೂತಾದಿಗಳಿಂದೊಡಗೂಡಿದ ಈ ಶರೀರಕ್ಕೆ ಆಗಲೇ (ಯೌವನಾವಸ್ಥೆಯಲ್ಲಿಯೇ)ಪಂಚಭೂತಾದಿಗಳಿಂದಲೇ ಧಾರೆಯೆರೆಯುತ್ತ ಸಾಗಿದ್ದಾರೆ. "ಲಿಂಗೋಪಲಿಂಗ ಭೋಗಿಯಾಗು, ಸಾಧನ ಚತುಷ್ಟ ಯಗಳನ್ನು ಪ್ರತಿಪಾದಿಸುತ್ತ ಅತನ ಸೇವೆ, ನೆನಹುಮಾತ್ರದಿಂದ ಈ ಶರೀರ ಸವೆಯಿಸು ಅಂತಾ ಮಹಾತ್ಮರೂ, ಜ್ಞಾನಿಗಳೂ ಹೇಳಿದ ಪ್ರಕಾರ ಅದನ್ನು ಮಾಡುತ್ತ ಮುಂದೆ ಮುಂದೆ ಸಾಗಿದ ಹಾಗೆ ಶರೀ ರಕ್ಕೆ ಯರೆದಂಥ ವಿಷವು ಅಮೃತವಾಗಿ ಪರಿಣಮಿಸಿ, ಅವನ ತಪ ಸ್ಸಿನ ಫಲದಿಂದಲೋ ಅಥವಾ ಅವನ ಸುಕೃತಿಯ ಪುಣ್ಯದಿಂದಲೋ ಆ ಚಿದ್ಬಿಂದುವಿನಲ್ಲಿ ತಾನು ಲೀನವಾಗಲು ಶಕ್ಯವಾಗಬಹುದು. ಆದರೂ ಇಂಥ ಜಿಜ್ಞಾಸುಗಳು ಧರ್ಮದ ಬುಡದಲ್ಲಿ ನಿಂತಿದ್ದಾರೆ. ಕರ್ಮದ ಪರಿ ಉಚ್ಚುತ್ತ ನಡೆದಿದೆ. ಯಾವಾಗ ಕರ್ಮದ ಬಂಧನಗಳು ಶೇಷ ಮಾತ್ರದಿಂದಲೂ ಕಳಚಿ ಬೀಳುವವೋ, ಆಗ ಮಾತ್ರ ಸಹಜ ವೃತ್ತಿ ಯಿಂದ ಆ ಪರಮಾತ್ಮನ ಸಾನ್ನಿಧ್ಯ ಹೋಗಲೂ ಬಹುದು. ಅಥವಾ ಈ ಪ್ರಪಂಚ ಕನಸೆಂದರಿದು (ಆತನ ಚರಣಕಮಲಗಳಲ್ಲಿ ಧ್ಯಾನವನ್ನು ಇರಿಸಿ) ತೋರಿಕೆಗೆ ಮಾತ್ರ ಈ ಪ್ರಪಂಚದಲ್ಲಿ ಕೂಡಿದವನೂ ಆಗಿರಲೂ ಬಹುದು. ಇದೇ ಜೀವನ್ಮುಕ್ತಾವಸ್ಥೆ !

———

# ಶಿವಶರಣರ (ಸಮನ್ವಯ) ಯೋಗ.

(ಲೇಖಕರು:- ನಾ. ಮ. ಪಂ. ದೊಡ್ಡಯ್ಯ ಶಾಸ್ತ್ರಿಗಳು, ನಾಗರಹಾಳು.)

[೧೯೪೪ ರ 'ಶಿವಾನುಭವ' ಮಾರ್ಚ ತಿಂಗಳಿಂದ ಈ ಲೇಖನ ಮುಂದುವರಿದಿದೆ.]

ಶಿವಶರಣರ ಸಮನ್ವಯ ಯೋಗವನ್ನು ಕಂಡು ಹಿಡಿಯಲಿಕ್ಕೆ ವೇದಾಗಮೋಪನಿಷತ್ತುಗಳು ದರ್ಶನಿಕರಿಗೆ ಸಾಧನಗಳಾದರೂ ಎಲ್ಲರಿಗೂ ಮೇಲ್ಕಂಡ ಜ್ಞಾನ ಭಾಂಡಾರವು ವಶವಾಗಲಾರದು. ಯಾಕೆಂದರೆ "ಶಬ್ದಜಾಲ ಮಹಾರಣ್ಯಂ, ಚಿತ್ತ ವಿಭ್ರಮ ಕಾರಣಂ" ಎಂಬಂತೆ ಪಂಡಿತರಿಗೂ ಬಿಡಿಸಲಾರದ ಜಟಿಲವಾದ ಸಮಸ್ಯೆಗಳಾಗಿವೆ. ಆದರೆ ಈಶ್ವರ ಸೃಷ್ಟಿಯೇ ಒಂದು ದೊಡ್ಡ ಸಿದ್ಧಾಂತ ರೂಪದಿಂದ ಸಾಕ್ಷರಿಗಳಿಗೂ, ನಿರಕ್ಷರಿಗಳಿಗೂ ಸುಲಭ ಸುಕರವಾದ ದರ್ಶನವಾಗಿದೆ ಎಂದೂ ಘಂಟಾಘೋಷದಿಂದ ಸಾರುತ್ತದೆ. ಅದೆಂತೆನೆ, ಸೃಷ್ಟಿಯ ಘಟಕವಾದ ಮಾನವ ದೇಹವೇ ಯೋಗ ಸಮನ್ವಯದ ಘನವಾದ ಅನುಭವವಾಗಿದೆ ಎಂದು ಹೇಳಲು ಯಾವ ವಾದಿಗಳಿಗಾದರೂ ಸಂದೇಹಕ್ಕೆ ಅವಕಾಶವಿಲ್ಲ. ಯಾಕಂದರೆ ಒಬ್ಬೊಬ್ಬ ಮತಾನುಯಾಯಿ ಒಂದೊಂದು ವಿಧವಾಗಿ ತಮ್ಮ ತಮ್ಮ ರುಚಿಗೆ ತಕ್ಕಂತೆ ವೇದಾಗಮಗಳಿಗೆ ಅರ್ಥವನ್ನು ಹೇಳುತ್ತಾ ಪುಷ್ಟಿಕರಿಸುವರು. ಇದು ರುಚಿಗಳ ವೈಚಿತ್ರ್ಯವಲ್ಲದೆ ಮತ್ತಾವದೂ ಅಲ್ಲ. ಹ್ಯಾಗಂದರೆ ಇದು ವರೆಗೆ ಆಗಿ ಹೋದ ಒಬ್ಬ ದಾರ್ಶಕನು "ಲವಣಾನಂದಸ್ವಾಮಿ" ಎಂಬಾತನು ಸಿದ್ಧಾಂತ ಪಡಿಸುತ್ತಿದ್ದ ವಿಷಯವೇನಂದರೆ ಷಡ್ರಸಗಳಲ್ಲಿ ಲವಣ (ಉಪ್ಪ) ವೇ ಶ್ರೇಷ್ಠವಾದದ್ದೆಂದ. ಇದು ಬಿಡಲು ಯಥಾ ಭೋಗಿಗೂ ಸಾಧ್ಯವಿಲ್ಲವೆಂದು, ರಸಗಳಲ್ಲಿ ಸಾಧುವೂ ವ್ಯಂಜಕವು ಆಗಿ ಇತರ ರಸಗಳು ಇಲ್ಲದಿದ್ದರೂ ಇದರಿಂದಲೇ ಭೋಜ್ಯಾದಿಗಳಿಗೆ ರುಚಿಯುಂಟೆಂದು ವಾದಿಸುತ್ತಿದ್ದನು. ಇದು ಸಂಭವನೀಯವೋ ಅಥವಾ ಅಸಂಭವವೋ ರಸಜ್ಞರು ವಹಿಸಬೇಕು. ಉಪ್ಪು, ಹುಳಿ, ಖಾರ, ಸಿಹಿ, ವಿಷ, ಒಗರು ಇವುಗಳೇ ಆರು ರಸಗಳು. ಇವುಗಳಿಂದ ಸಿದ್ಧವಾದದ್ದೇ ಭೋಜ್ಯಾದಿ ಪದಾರ್ಥಗಳು. ಇವುಗಳಲ್ಲಿ ಒಂದು ಕೊರತೆಯಾದರೂ ರುಚಿಸದು.

ರುಚಿಸುಪ್ಪವೆಂದರೆ ಲವಣಾನಂದ ಸ್ವಾಮಿ ಮಿತ್ರರೇ ಎಂದು ಹೇಳ ಬೇಕಾಗುತ್ತದೆ. ಇವೆಲ್ಲ ಒಂದು ಪದಾರ್ಥದಲ್ಲಿ ಸಮ್ಮಿಳಿತವಾದರೆ ಅದು ಪೂರ್ಣವೆನಿಸುತ್ತದೆ. ಇಲ್ಲವಾದರೆ ಅಪೂರ್ಣವಾಗಿ ಉಳಿಯುತ್ತಿದೆ. ಈ ದೃಷ್ಟಾಂತದಂತೆ ಮತ್ತೊಂದು ಮಾನವ ದೇಹದಲ್ಲಿ ಇರುವ ಅವ ಯವಗಳಲ್ಲಿ ಯಾವುದು ಶ್ರೇಷ್ಠವೆಂದು ಹೇಳಲು ಬಾರದು. ಬರುತ್ತದೆಂದು ವಾದಿಸಿದರೆ ಕೊರತೆಯಾಗಿ ಪೂರ್ಣವೆನಿಸುವುದಿಲ್ಲ. ತಲೆಯೇ ಉತ್ತ ಮಾಂಗವೆಂದು, ನಯುವೇ ಪ್ರಧಾನವೆಂದೂ, ಹೃದಯುವೇ ಪ್ರಬಲವೆಂದೂ, ಕರಚರಣಾದಿಗಳೇ ಕಾರ್ಯನಿರ್ವಾಹಕವೆಂದೂ ಸಿದ್ಧಾಂತಪಡಿಸಲಿಕ್ಕೆ ಹೋಗುವುದು ಅಷ್ಟು ಕ್ಷೇಮವಲ್ಲ. ಇವೆಲ್ಲ ಕೂಡಿದ್ದರೆ ಮನುಷ್ಯ ದೇಹದ ಸರ್ವಾಂಗ 'ಸಂಪೂರ್ಣವೆನಿಸುತ್ತದೆ. ಇಲ್ಲವಾದರೆ ಅಂಗದೈ ಕಲ್ಯವೆಂದು ಹೇಳಬಹುದು. ಹೀಗೆ ದಾರ್ಶನಿಕರೂ ಶರಣನ ಮೂಲಕ ವಾಗಿ ಜ್ಞಾನವೇ ಪ್ರಧಾನವೆಂದೂ ಅದ್ವೈತಿಗಳೂ, ಕರ್ಮವೇ (ಕರ ಚರಣಾದಿಗಳು) ಶ್ರೇಷ್ಠವೆಂದು ಕರ್ಮಮೀಮಾಂಸಕರೂ ಹೃದಯ (ಭಾವ)ವೇ ಪ್ರಬಲವೆಂದು ಭಕ್ತಿ ಪಂಥಿಗಳೂ. ವಾದಿಸುತ್ತಾರೆ. ಇದು ಅವರವರ ರುಚಿಗೆ ತಕ್ಕಂತೆ ವ್ಯಾಖ್ಯಾನ ಭಾಷ್ಯ, ಟೀಕೆ, ಟಿಪ್ಪಣಿ ಗಳು, ವಿಪುಲವಾಗಿ ಚರ್ಚೆ ಮಾಡುತ್ತ ಇದರ ಭಿನ್ನಾಭಿಪ್ರಾಯದವರ ಮೇಲೆ ತಮ್ಮ ತಮ್ಮ ವಾದದ ವಿಷಯದಲ್ಲಿ ಮೇಲು ಕೀಳು ಎಂದು ಅಲ್ಲಗಳೆಯುತ್ತಿರುವರು. ಹೀಗೆ ಅನೇಕ ಮತಮತಾಂತದವರು ಮೇಲ್ಕಂಡ ವಿಷಯಗಳಲ್ಲಿ ಕೋಲಾಹಲವನ್ನೆಬ್ಬಿಸಿ ನಿಜವನ್ನು ಮರೆಸಿ, ಅಯಥಾ ರ್ಥವನ್ನು ಪ್ರದರ್ಶಿಸಿ, ಮತ್ತು ನಾನೆಂಬ ಅಹಂಕಾರ ರಾವಣನನ್ನು ಸಿಂಹಾಸನದಲ್ಲಿ ಕೂಡ್ರಿಸಿ, ಸಂಕುಚಿತ ಆನಂದವೆಂಬ ಜಲದಿಂದ ಮೂರ್ಧಾಭಿಷೇಕ ಮಾಡಿಸಿ, ಈತನೇ ನಮಗೆಲ್ಲ ಸಾಮ್ರಾಜ್ಯಶಾಹಿ ಯಾದ ಅರಸನೆಂದು ಘೋಷಿಸಿ, ಸ್ವಾಭಿಮಾನಂದ ತಟಾಕದಲ್ಲಿ ಈಸಿ ಪವಿತ್ರರಾದೆವೆಂದು ಸಂತೋಷಿಸಿ ಇರುವರನ್ನು ಸರ್ವವು ನೋಡಿರು ವೆವು. ಇಷ್ಟೆಲ್ಲ ಆದರೂ ಚಿಂತೆಯಿಲ್ಲ. ಅನ್ಯರ ಮೇಲೆ ಸ್ಪರ್ಧಾ ಸೂಯಾದಿ ಬಾಂಬಿನ ಮಳೆಯನ್ನು ಸುರಿಸಿ, ಸಂತಾಪಗಳನ್ನುಂಟು ಮಾಡುವವರನ್ನು ಅನೇಕರನ್ನು ಕಾಣುತ್ತೇವೆ-

ಆದರೆ ದಾರ್ಶನಿಕರು ಹೀಗೆ ಕುಕಲ್ಪನೆಗೆ ಅವಕಾಶ ಕೊಟ್ಟಿಲ್ಲ ವಾದರೂ ಪರನುಯಾಯಿಗಳು ಅರ್ಥವನ್ನು ಅಪಾರ್ಥಗೊಳಿಸಿ ಸಮಾಜ

ಪುರುಷನನ್ನು ಅಂಗದ್ವೈಕಲ್ಯವನ್ನಾಗಿ ಮಾಡಿ ವಿಕೃತಿಗೊಳಿಸಿರುವರು. ಮತಸ್ಥಾಪಕರು ಹೀಗೆ ಸಮಾಜ ಘಾತಕರಲ್ಲ. ಸಮಾಜವನ್ನು ಪವಿತ್ರೀಕರಣವನ್ನಾಗಿ ಮಾಡಲು ಉದ್ದಿಮಿಸಿದ್ದಾರೆ. ರಾಜನಿಗಿಂತಲೂ ರಾಜದೂತರಿಗೆ ಅಹಂಭಾವ ವಿಶೇಷ. ಸೂರ್ಯ ತಾಪಕ್ಕಿಂತಲೂ ಮಳಲಿನ ತಾಪವೇ ಹೆಚ್ಚಾಗಿರುತ್ತದೆ. ದರ್ಶನವು ಸುದರ್ಶನವಾಗಿರುವುದಲ್ಲದೆ ದುರ್ದರ್ಶನವಾಗಿರಲಾರದು. ವಿಷ್ಣುವಿನ ಕರಗತವಾದ ಸುದರ್ಶನ ಅಸುರ ಸಂಹಾರ ಕಾರ್ಯವನ್ನೆಸಗಲಿಲ್ಲವೇ? ಎಂಬ ಪ್ರಶ್ನೆಯು ಸಂಭವಿಸಬಹುದು. ಇದು ತಾತ್ವಿಕವಾದ ಅರ್ಥವಲ್ಲ. ಒಂದು ವೇಳೆ ಹಾಗಿದ್ದರೆ ದೈವಲಕ್ಷಣವೆಂದು ಹೇಳಲು ಶಕ್ಯವಿಲ್ಲ. ಯಾಕಂದರೆ ವಿಷ್ಣು ಸುದರ್ಶನದಿಂದ ಅಸುರರನ್ನು ಸಂಹರಿಸಿದನೆಂಬ ಬಗ್ಗೆ ಆದರೆ ಅಸುರತ್ವ (ರಾಕ್ಷಸೀ ಮಹತ್ವಕಾಂಕ್ಷೆಯನ್ನು) ಹೋಗಲಾಡಿಸದೆಂಬುದೇ ನೈಜವಾದ ಅರ್ಥ. ಹಾಗಿಲ್ಲವಾದರೆ ವಿಷ್ಣುವೇ ಮೊದಲಾದ ದೇವತೆಗಳಿಂದ ಸತ್ತವರು ಯಾರಾದರೂ ನರಕವನ್ನು ಅನುಭವಿಸಿರುವರೇ? ಎಂದು ವಿಚಾರಿಸಲು ಯಾರು ಇಲ್ಲವೆಂದು ತೋರುತ್ತದೆ. ಶಿಶುಪಾಲ, ರಾವಣ, ಹಿರಣ್ಯಕಶ್ಯಪ ಇತ್ಯಾದಿ ಅಸುರರು ನರಕವನ್ನು ಹೊಂದಲಿಲ್ಲ. ದೇವತ್ವ (ದಿವ್ಯ) ವನ್ನು ಹೊಂದಿದರೆಂದು ಪುರಾಣಗಳೆಲ್ಲ ಸಾರುವುವು. ಅಸುರತ್ವವೆಂದರೆ ಅವರವರ ದುರಾಚಾರಗಳನ್ನು ಸುದರ್ಶನದಿಂದ ಹೋಗಲಾಡಿಸಿದ (ಸಂಹರಿಸಿದ) ನೆಂಬುದು ಸಾರ್ಥವೆಂದು ಹೇಳಬೇಕು. ಹೀಗೆ ಎಲ್ಲ ದೇವತೆಗಳ ವಿಷಯದಲ್ಲಿ ತಿಳಿಯಬಹುದು. ಇದನ್ನು ಲಕ್ಷಿಸುವುದೊಳಿತು. ರಾವಣನನ್ನು ಸಂಹರಿಸಿ ವಿಭೀಷಣನಿಗೆ ಲಂಕಾ ಪಟ್ಟಣದ ಸಿಂಹಾಸನದಲ್ಲಿ ಕೂಡಿಸುವುದಕ್ಕಿಂತಲೂ ರಾವಣನನ್ನೇ ವಿಭೀಷಣನನ್ನಾಗಿ ಪರಿವರ್ತಿಸುವುದು ಯೋಗ್ಯವಲ್ಲವೇ? ಹೀಗೆ ಗುಣಗಳ ಪರಿವರ್ತನೆ ಎಂಬುದೇ ಯಥಾರ್ಥವು. ಆದ್ದರಿಂದ ಅಂಥ ಗಜನ್ಯಾಯವಾಗದೇ ಸರ್ವಾಂಗ ಸುಂದರವಾದ ಸುದರ್ಶನದಿಂದ ಪೂರ್ಣವಾಗಿ ಸೃಷ್ಟಿಸಬೇಕೆಂದು ಸಮನ್ವಯ ಶಿವಯೋಗದ ರಹಸ್ಯಮಯವಾದ ಸೂಚನೆ ಮಾನವನು ಮಾನನೀಯನಾಗಲು ಅಥವಾ ಅತಿಮಾನವನಾಗಲು ಈಶ್ವರನು ಸೃಷ್ಟಿಯ ಪುಟಗಳಲ್ಲಿ ಅತ್ಯಂತ ಶ್ಲಾಘ್ಯವಾದ ಮಾನವದೇಹ ಪುಟವನ್ನು ತಿರುಗಿಸಿ ನೋಡಿದರೆ ಈತನಲ್ಲಿದ್ದ ಮಹತ್ವವಾದ ಸರ್ವಾಂಗ ಸುಂದರವಾದ ದೊಡ್ಡ ಅಕ್ಷರದಿಂದ ಬರೆದಂತೆ ಉರ-ಶಿರ-ಕರ ಕ್ರಮವಾಗಿ

ಹೃದಯ, ಶಿರಸ್ಸು, ಕರಚರಣಾದಿಗಳೇ ನಮಗೆ ಬೋಧವಾಗುವ ಸೂಚನಾತ್ಮಕವಾದ ಅಂದರೆ ಉರದಿಂದ ಹೃದಯ ಸರ್ವಾವಯವಗಳ ಕೇಂದ್ರದಂತೆ ರಾಜಿಸುತ್ತಿದೆ. ಇದರ ಸ್ಫುರಣದಿಂದ ಶಿರ (ಜ್ಞಾನ) ಇದರ ಪ್ರೇರಣೆಯಂತೆ, ಕರಚರಣಾದಿಗಳು ಕಾರ್ಯ ಮಾಡುವ ಬಗ್ಗೆ ನಮಗೇನೂ ಈ ವಿಷಯದಲ್ಲಿ ಸಂದೇಹವಿಲ್ಲ. ಹಾಗೆ ಭಾವ ಪ್ರಧಾನವಾದ ಹೃದಯ (ಭಕ್ತಿ) ಬುದ್ಧಿ ಪ್ರಧಾನವಾದ ಜ್ಞಾನವೂ, ಕರ್ಮಪ್ರಧಾನವಾದ ಕ್ರಿಯೆ ಕರಚರಣಾದಿಗಳಿಂದಲೇ, ಶಿವಯೋಗ ಸಮನ್ವಯ ಸದ್ಧರ್ಮವಿದು. "ಮಹಾಜನೋ ಏನಗತಸ್ಸ ಪಂಥಾಃ" ಎಂಬ ಅನುಭವಿಗಳ ಆಳವಾದ ಶಿವಸ್ವರೂಪದ ಜ್ಞಾನಸೂರ್ಯನ ದಿವ್ಯ, ಭವ್ಯ, ನವ್ಯವೆಂದೂ ಈ ಶಿವಾನಂದ ಲಹರಿಯಲ್ಲಿ ಈಸಿದರೆ ದಣಿವಿಲ್ಲ. ಮುಳುಗಿದರೆ ಮರಣವಿಲ್ಲ. ಇಂತಹ ಭಕ್ತಿ, ಜ್ಞಾನ, ಕ್ರಿಯೆ ಇವುಗಳ ತ್ರಿವೇಣಿ ಸಂಗಮದಿಂದ ಜೀವತ್ವ ವಿಕಾಸವಾಗಿ ಶಿವಭಕ್ತಿ, ಶಿವಜ್ಞಾನ, ಶಿವಕ್ರಿಯೆಗಳಿಂದಲೇ ಆತ್ಮೋನ್ನತಿಯಾಗಿ ಆನಂದ, ಶಾಂತಿ ಮಾನವ ಮಾತ್ರದವರಾದ ಎಲ್ಲರಿಗೂ ಚತುಷ್ಪಥ ವನದ ಮುಕ್ತದ್ವಾರವೆಂದು ಶಿವಾನುಭವಿಗಳು ಹೃತ್ಪೂರ್ವಕವಾಗಿ ತಮ್ಮ ಸಂದೇಶದಲ್ಲಿ ಸಂದೇಹವಿಲ್ಲದಂತೆ ತ್ರಿಕಾಲದಲ್ಲಿ ಅಬಾಧಿತವಾದ ಪ್ರಭೋದಾನಂದ ಸೂರೆಗೈದಿರುವರು. ಇದು ವಿಶಾಲ ದೃಷ್ಟಿಯವರ ಜನೋದ್ದೇಶದಲ್ಲಿ ಕಿಲಾಂಶವಾದರೂ ಸಂಶಯ ವಿಪರ್ಯಕ್ಕೆ ಎಡೆಯಿಲ್ಲದೇ ಎಚ್ಚರಿಸುತ್ತಾರೆ. ಆದ್ದರಿಂದ ಮೇಲ್ಕಂಡ ಭಕ್ತಿ, ಜ್ಞಾನಕ್ರಿಯೆ ಎಂಬ ಸಮನ್ವಯ ಸಂದರ್ಶನದ ಸಾಧನಗಳಿಂದ ಶಿವಶರಣರ ಸಂಪೂರ್ಣ ಯೋಗವನ್ನು ಆದರ್ಶನವಾಗಿಟ್ಟು ಮುಂದಿನ ಸಾಧನ ಪಥದಲ್ಲಿ ಗಮಿಸಿ ಕೇಂದ್ರವನ್ನು ಸೇರಲಿಕ್ಕೆ ಶಿವಾನುಗೃಹವು ನಮಗೆಲ್ಲ ಪ್ರಾಪ್ತವಾಗಲೆಂದು ಶಿವಶರಣರ ಸಂಗವೇ ನಮಗೆ ಈ ದಾರಿಯಲ್ಲಿ ನಡೆಯಲು ಸಹಾಯಕವಾದುದೆಂದು ನಂಬಿರುವೆನು. ಯಾಕಂದರೆ, ಗಮ್ಯಸ್ಥಾನವನ್ನು ದೊಡ್ಡವರು ಮುಟ್ಟಿದ ಬಳಿಕ ಹಿಂದುಳಿದ ಜನಾಂಗವನ್ನು ಆ ಮಾರ್ಗದಲ್ಲಿ ಕರೆದುಕೊಂಡು ಹೋಗಲು ಸಮರ್ಥರು. ಅಂಗವೈಕಲ್ಯವುಳ್ಳವರೆಲ್ಲ ಅಸಮರ್ಥರು. ಅವರ ಬೆಂಬಳಿಯಲ್ಲಿ ನಡೆಸೈ ಎಂದು ಶಿವನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

— —

# ಶ್ರೀ ಅ. ನ. ಕೃಷ್ಣರಾಯರ ಭಾಷಣದ ಬಗ್ಗೆ ತರುಣ ಸಂಘದ ಪ್ರತಿಭಟನೆ.

ದಿನಾಂಕ ೧-೨-೧೯೬೧ ನೇ ರವಿವಾರ ರಾತ್ರಿ ೯ ಘಂಟೆಗೆ ಗದಗ-ಶಹಪೂರಪೇಟೆ ತರುಣ ಸಂಘದ ಪರವಾಗಿ ಶ್ರೀಮಾನ್ ಟಿ. ವ್ಹಿ. ಕೋಟಿ, ಬಿ. ಎ. ಎಲ್. ಎಲ್. ಬಿ. ವಕೀಲ ಅವರ ಅಧ್ಯಕ್ಷತೆಯು ಕೆಳಗೆ ಶ್ರೀ ಬಸವರಾಜ ವಾಚನಾಲಯದ ನೂತನ ಕಟ್ಟಡದಲ್ಲಿ ಸಾರ್ವಜನಿಕ ಸಭೆ ಸೇರಿ ಕೆಳಗಿನಂತೆ ತನ್ನ ಅಭಿಪ್ರಾಯ ವ್ಯಕ್ತಪಡಿಸಿತು.

ಮಣಿಪಾಲದಲ್ಲಿ ಕೂಡಿದ ೨ನೇ ಕನ್ನಡ ಸಾಹಿತ್ಯ ಸಮ್ಮೇಲನವು ಸಾಹಿತ್ಯ ಪ್ರೇಮಿಗಳಿಗೆ ವಸಂತೋತ್ಸವವಾಗಿ ಪರಿಣಮಿಸಬಹುದೆಂದು ಬಹು ಜನರ ಬಯಕೆಯಾಗಿತ್ತು. ಆದರೆ ವಸಂತೋತ್ಸವದಲ್ಲಿ ಕೇಳಬರಬೇಕಾದ ಕೋಗಿಲೆಯ ಪಂಚಮ ದಿಂಚರ ಸ್ವರಕ್ಕೆ ಬದಲಾಗಿ ಬೇರೆ ಕರ್ಕಶ ಸ್ವರ ಕೇಳಿಬಂದು ಸಮ್ಮೇಳನವು ವಿರಸದಲ್ಲಿ ಕೊನೆಗಂಡಿತು.

ಚೆನ್ನಬಸವ ನಾಯಕ ಕಾದಂಬರಿಯನ್ನು ಅನ್ಯಭಾಷೆಗಳಿಗೆ ಅನುವಾದಿಸಬೇಕೆಂಬ ಭಾರತ ಅಕಾಡೆಮಿ ನಿರ್ಣಯವು ಕನ್ನಡ ನಾಡಿನ ಸಾರ್ವಜನಿಕ ಜೀವನವನ್ನು ಸಾಕಷ್ಟು ಕಲುಷಿತಗೊಳಿಸಿ ಕೊನೆಗೆ ಮುಕ್ತಾಯವಾಗಿ ಹೋಗಿದ್ದರೂ ಶ್ರೀ. ಅ. ನ. ಕೃಷ್ಣರಾಯರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠದಿಂದ ಪುನಃ ಅದೇ ವಿಷಯವನ್ನು ಎತ್ತಿಕೊಂಡು ಚೆನ್ನಬಸವನಾಯಕ ಕಾದಂಬರಿಯ ಪ್ರಕಟನೆಗೆ ಅಡ್ಡಬಂದವರನ್ನೆಲ್ಲ "ಅಗ್ನಿಭಕ್ಷಕರು, ಜಾತ್ಯಂಧರು, ರಾಷ್ಟ್ರವಿಘಾತಕರು" ಎಂದು ಮುಂತಾಗಿ ಆಕ್ರೋಶಮಾಡಿ ತಮ್ಮ ಬಣ್ಣವೇನೆಂಬದನ್ನು ಬಯಲಿಗೆ ಇಟ್ಟರು.

ಒಂದು ಜನಾಂಗವನ್ನು ಹಳಿಯುವ ದುರುದ್ದೇಶದಿಂದ ಕೂಡಿದ "ಚೆನ್ನಬಸವ ನಾಯಕ ಕಾದಂಬರಿ"ಯು ಭಾರತ ಅಕಾಡಮಿಯ ಪ್ರಶಸ್ತಿ ಪಡೆಯುವದು ಬೇಡವೆಂದು ಹೇಳುವ ಪ್ರತಿಕ್ರಿಯೆನ್ನನುಲಕ್ಷಿಸಿ ಗ್ರಂಥ

ಪ್ರಕಟನೆಯ ಕಾರ್ಯವನ್ನು ಸ್ಥಗಿತಗೊಳಿಸುವಂತೆ ತಮ್ಮ ಪ್ರಾಮಾಣಿಕ ಅಭಿಪ್ರಾಯ ಕೊಟ್ಟ ವೀರಶೈವೇತರ ಸಾಹಿತಿಗಳಲ್ಲಿ ಪ್ರಿನ್ಸಿಪಾಲ ಶ್ರೀ. ವಿ. ಕೃ. ಗೋಕಾಕ, ಶ್ರೀ. ಟಿ. ರೂಬೆನ್ ಮತ್ತು ಎಮ್. ಅಕಬರ ಆಲಿ ಮುಖ್ಯರು.

ಇಷ್ಟೇ ಅಲ್ಲ, ಈ ವಿಷಯದ ನಿರ್ಣಾಯಕರಲ್ಲಿ ಒಬ್ಬರಾದ ಶ್ರೀ ಹುಮಾಯೂನ, ಕಬೀರ ಅವರು ತಮ್ಮ ಅಗಿನ ಕನ್ನಡನಾಡಿನ ಸಂಚಾರದಲ್ಲಿ ಈ ವಿಷಯವನ್ನು ಸಂಪೂರ್ಣವಾಗಿ ಪರ್ಯಾಲೋಚಿಸಿ ತಮ್ಮನ್ನು ಕಾಣಬಂದ ಉಚ್ಚಪಟ್ಟದ ಶಿಷ್ಟಮಂಡಳಿಗೆ ವಾದಾಸ್ಪದವಾದ "ಚೆನ್ನಬಸವ ನಾಯಕ ಕಾದಂಬರಿ"ಯನ್ನು ತಡೆಹಿಡಿಯುವ ಕುರಿತು ಪ್ರಯತ್ನ ಮಾಡುವದಾಗಿ ಆಶ್ವಾಸನ ಕೊಟ್ಟು ಹೋದರು.

ಮುಂದೇ ಇದೇ ವಿಷಯವು ಲೋಕಸಭೆಯಲ್ಲಿ ವಿರೋಧಿಪಕ್ಷದ ಧುರೀಣರಾದ ಶ್ರೀ ಜಿ. ಇಮಾಮು ಅವರಿಂದ ಸಾಕಷ್ಟು ಚರ್ಚೆಯಾದ ನಂತರ ಕೊನೆಯದಾಗಿ ಸಂಪೂರ್ಣ ನಿಲ್ಲಿಸಲ್ಪಟ್ಟಿತು.

ಹೀಗೆ "ಚೆನ್ನಬಸವನಾಯಕ" ಕಾದಂಬರಿ ಪ್ರಕಟನೆ ಆಗದಿರಲಿಕ್ಕೆ ಮೇಲ್ಕಂಡ ಸಬಲಕಾರಣಗಳಿರುವಾಗ "ಅಗ್ನಿಭಕ್ಷಕ" "ಜಾತ್ಯಂಧ, ರಾಷ್ಟ್ರ ವಿಘಾತಕ, "ಕೋಮುವಾರ ಭೂತ," "ಕೋಮುವಾರ ವಿಷ ಬೀಜ ಬಿತ್ತುವ ದೈತ್ಯಶಕ್ತಿ," ಮುಂತಾದ ಅಸಭ್ಯ ಶಬ್ದಗಳನ್ನು ಯಾವ ಕೋಮಿನವರನ್ನು ಮನಸ್ಸಿನಲ್ಲಿ ಗುರಿಯಾಗಿಟ್ಟು ಆಡಿದರೋ ಶ್ರೀ ಅ. ನ. ಕೃ. ಅವರಿಗೇಗೊತ್ತು. ಮಾನ್ಯ ಅಧ್ಯಕ್ಷರು ಸಮ್ಮೇಳನದ ಪೂರ್ವದಲ್ಲಿ ತಮ್ಮ ೪೬ ಪುಟದ ಅಧ್ಯಕ್ಷೀಯ ಭಾಷಣ ಸಿದ್ಧಗೊಳಿಸುವಾಗ ನಾಲ್ಕು ನಿಮಿಷವಾದರೂ ತಮ್ಮ ಸ್ಥಾನದ ಔಚಿತ್ಯವನ್ನರಿತು ಪ್ರಾಂಜಲ ಮನಸ್ಸಿನಿಂದ ವಿಚಾರಿಸಿದ್ದರೆ ಅದರ ಪಾವಿತ್ರ್ಯವು ಇಷ್ಟೊಂದು ಶೀಘ್ರಗತಿಯಲ್ಲಿ ಅಳಿದುಹೋಗುತ್ತಿರಲಿಲ್ಲ.

ಸಾಹಿತ್ಯಸಮ್ಮೇಳದ ಗದ್ದುಗೆಯೇರಿದ ರಾಯರು ಹಿಂದುಮುಂದಿನ ಯಾವ ವಿಚಾರವಿಲ್ಲದೆ ಮನಬಂದಂತೆ ಮಾತಾಡಿರುವದನ್ನು ನೋಡಿದರೆ ಅಂಣನವರ "ಅಂದಣವ ನೇರಿದ ಸೊಣಗನಂತೆ ಕಂಡೊಡೆ ಬಿಡದು. ತನ್ನ ಮುನ್ನಿನ ಸ್ವಭಾವವನು" ಎಂಬ ವಚನ ನೆನವಿಗೆ ಬರುತ್ತದೆ.

"ಕವಿ ನಿರಂಕುಶಮತಿಯಾಗಿದ್ದಲ್ಲದೆ ರಾಷ್ಟ್ರ ಬದುಕಲಾರದು. ಚೆನ್ನಬಸವ ನಾಯಕ ಪ್ರಕರಣ ಮತ್ತೆ ಸಂಭವಿಸಿದರೆ ಕವಿ ತನ್ನ ವೃತ್ತಿಗೆ

ಶರಣು ಹೊಡೆಯುಬೇಕಾಗುತ್ತದೆ." ಎಂಬ ನೂತನ ಸಿದ್ಧಾಂತವನ್ನು ಶ್ರೀ ಅ- ನ ಕೃ. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಪ್ರತಿವಾದಿ ಸ್ವತಂತ್ರ ಲೇಖನ ಸ್ವಾತಂತ್ರ್ಯವನ್ನು ಪರ್ಯಾಯವಾಗಿ ಶ್ರೀ ಮಾಸ್ತಿಯವರ ಕೊರಳಿಗೆ ಕಟ್ಟಿದ್ದಾರೆ.

ಪ್ರಪಂಚದಲ್ಲಿ ಶ್ರೀ ಮಾಸ್ತಿಯವರೊಬ್ಬರೇ ಲೇಖಕರಲ್ಲ ಲೇಖನ ಸ್ವಾತಂತ್ರ್ಯ ಎಲ್ಲರಿಗೂ ಇದೆ. ಆಧುನಿಕ ಶ್ರೇಷ್ಠ ಕವಿಗಳಲ್ಲಿ ಒಬ್ಬರಾದ ಡಾ॥ ಕೆ. ವ್ಹಿ. ಪುಟ್ಟಪ್ಪನವರು"ಶೂದ್ರ ತಪಸ್ವಿ"ಎಂಬ ತಮ್ಮ ನಾಟಕದಲ್ಲಿ ಒಬ್ಬ ಬ್ರಾಹ್ಮಣನು ಶ್ರೀರಾಮಚಂದ್ರನಿಂದ ತಪಸ್ಸನ್ನು ಆಚರಿಸಿದ ಶೂದ್ರನನ್ನು ಕೊಲೆ ಮಾಡಿಸಿದನೆಂದು ಟೀಕಿಸಿದುದಕ್ಕೆ ಶ್ರೀ ಮಾಸ್ತಿಯುವರು ಆಗ ಡಾ॥ ಕೆ. ವ್ಹಿ. ಪುಟ್ಟಪ್ಪನವರ ಮೇಲೆ ಮಾಡಿದ ರಾದ್ಧಾಂತ ಹೇಳತೀರದು. ಈಗ ಲೇಖನ ಸ್ವಾತಂತ್ರ್ಯ ಪಡೆಯ ಬಯಸುವ ಶ್ರೀ ಮಾಸ್ತಿಯವರು ಆಗ ಡಾ॥ ಕೆ. ವ್ಹಿ. ಪುಟ್ಟಪ್ಪನವರ ಲೇಖನ ಸ್ವಾತಂತ್ರ್ಯದ ಬಗೆಗೆ ಏಕೆ ಗೌರವ ತೋರಲಿಲ್ಲ?

ಸಾಹಿತ್ಯರಂಗದಲ್ಲಿ ಕೋಮುವಾರ ಭೂತ ಎಂಬ ವಿಚಾರವಾಗಿ ಮಾನ್ಯ ಅಧ್ಯಕ್ಷರು ಮಾತನಾಡುತ್ತ "ಸಾಹಿತ್ಯರಂಗದಲ್ಲಿ ಕೋಮುವಾರ ಭಾವನೆ ಬೆಳದಿಲ್ಲನೆಂದು ಭಾವಿಸಿ ಸುಮ್ಮನೆಯಿರುವದು ಅಪಾಯಕರ. ಈ ರಂಗದಲ್ಲಿಯೂ ಕೋಮುವಾರ ಭಾವನೆ ಬಿತ್ತುವ ದೈತ್ಯ ಶಕ್ತಿಗಳನ್ನು ನಾವು ನಿರ್ಭಯದಿಂದ ನಿರ್ದಾಕ್ಷಿಣ್ಯದಿಂದ ಎದುರಿಸಬೇಕು........ ವಿದ್ವತ್ತರಂಗದಲ್ಲಿಯ ವಾದ ವಿದ್ವತ್ತರಂಗದಲ್ಲಿಯೇ ಅಡಕವಾಗಿರಬೇಕು. ಬೀದಿಯ ಗಾಂಪರು ಅದರಲ್ಲಿ ಕೈಯಿಕ್ಕಿ ದೇಶದ ಶಾಂತಿಯನ್ನು ಕದಡುವದು ಶುದ್ಧ ಅನ್ಯಾಯ ......." ಎಂದು ತಾವು ಮುಂದೆ ಹೇಳುವ ವಿಷಯಕ್ಕೆ ಪೀಠಿಕೆ ಹಾಕಿ ಶ್ರೀ ರೇವಣಸಿದ್ಧರು, ಶ್ರೀ ಅಲ್ಲಮಪ್ರಭುಗಳು, ಶ್ರೀ ಬಸವೇಶ್ವರರು, ನಾಥ ಪಂಥಿಯರು ಎಂದು ವಾದಿಸಿದ ಶ್ರೀ ಕಪಟರಾಳ ಕೃಷ್ಣರಾಯರನ್ನು ಶ್ರೀ ಸಿದ್ಧರಾಮ ಶಿವಯೋಗಿಗಳು ಶೈವರೆಂದು ವಾದಿಸಿದ ಶ್ರೀ ಡಿ. ಎಲ್. ನರಸಿಂಹಾಚಾರ್ಯರನ್ನು ಮತ್ತು ಚನ್ನಬಸವ ಕಾದಂಬರಿಯ ಮೂಲಕ ನಾಡಿನಲ್ಲಿ ಇಲ್ಲದ ಗೊಂದಲವೆಬ್ಬಿಸಿದ ಶ್ರೀ ಮಾಸ್ತಿಯವರನ್ನು ಸಮರ್ಥಿಸಿರುವರು.

ಸಮಸ್ತ ವೀರಶೈವರಿಗೆ ಪೂಜ್ಯರಾದ ಶ್ರೀ ರೇವಣಸಿದ್ಧರು, ಶ್ರೀ ಅಲ್ಲಮಪ್ರಭುಗಳು, ಶ್ರೀ ಬಸವೇಶ್ವರರು ನಾಥ ಪಂಥೀಯರಲ್ಲವೆಂಬು

ದನ್ನು ಶ್ರೀಯುತ ವಿ. ಗು. ಕೊಪ್ಪಳ ಎಮ್ ಎ. ಅವರು, ಶ್ರೀ ಸಿದ್ಧರಾಮ ಶಿವಯೋಗಿಗಳು ವೀರಶೈವರೆಂಬ ಬಗ್ಗೆ ಮಾಜಿ ಕನ್ನಡಸಾಹಿತ್ಯ ಸಮ್ಮೇಳನಾಧ್ಯಕ್ಷ ರೆವರೆಂಡ ಉತ್ತಂಗಿ ಮತ್ತು ಡಾ|| ಆರ್. ಸಿ. ಹಿರೇಮಠ ಎಂ. ಎ. ಪಿ. ಎಚ್.ಡಿ. ಅವರೂ ಮತ್ತು ಚನ್ನಬಸವ ನಾಯಿಕ ಕಾದಂಬರಿಯು ಐತಿಹಾಸಿಕ ಅಂಶಗಳಿಗೆ ದೂರವಾಗಿದೆ ಎಂಬ ಬಗ್ಗೆ ೧೯೫೦ನೇ ಶಿವಾನುಭವ ಸಂಚಿಕೆಯಲ್ಲಿ ಡಾ|| ಹಳಕಟ್ಟಿಯವರೂ ಸಪ್ರಮಾಣವಾಗಿ ಪ್ರತಿಪಾದಿಸಿದ್ದಾರೆ.

ಹೀಗೆ ಮೇಲ್ಕಂಡ ಸಮಸ್ಯೆಗಳು ಒಮ್ಮೆ ಮುಗಿದುಹೋಗಿ ಕದಡಿದ ವಾತಾವರಣ ಸರೋವರದಂತೆ ಪ್ರಶಾಂತವಾಗಿರುವಾಗ ಪುನಃ ಕಲ್ಲುಚಲ್ಲಿ ವಾತಾವರಣವನ್ನು ಕದಡುವ ಈ ಅಸಭ್ಯ ವರ್ತನವನ್ನು ಕನ್ನಡ ಸಮ್ಮೇಳನಾಧ್ಯಕ್ಷರು ಆಚರಿಸಿದ್ದು ಲಾಂಛನಾಸ್ಪದವಾಗಿದೆ. ಇದರಿಂದ ಕೋಮುವಾರ ವಿಷಬೀಜ ಬಿತ್ತುವ ದೈತ್ಯಶಕ್ತಿಗಳಾರು? ಕೋಮುವಾರ ಭೂತಗಳಾರು? ಎಂಬದನ್ನು ಸಹೃದಯದ ವಿವೇಕಿಗಳೇ ನಿರ್ಧರಿಸಬೇಕು. "ಹಗಲುಗಾಣದ ಗೂಬೆ ಜಗಕೆ ಇರುಳಪ್ಪುದೇ ಎಂದರೆ ಇರಳಪ್ಪುದೇ ಮರುಳೇ" ಎಂದು ಅಣ್ಣನವರು ಹೇಳಿದ ಮಾತು ಇಲ್ಲಿ ಸಮಂಜಸವಾಗಿ ಸಲ್ಲುತ್ತದೆ. ಸಾಮಾನ್ಯನಿಗೂ ಅರ್ಥವಾಗಬಹುದಾದ ಇಂಥ ಕುತ್ಸಿತ ಕಾರ್ಯಗಳ ಬಗೆಗೆ ಏನಾದರೂ ಜನತೆಯಿಂದ ಪ್ರತಿಕ್ರಿಯೆ ಕಂಡುಬಂದರೆ ಅದನ್ನು ಬೀದಿಯ ಗಾಂಪರ ಕಾರ್ಯವೆಂದು ಸಮ್ಮೇಳನಾಧ್ಯಕ್ಷರು ಅಪಹಾಸ್ಯ ಮಾಡಿದ್ದು ಶ್ರೀ ಅ ನ. ಕೃ. ಅವರಿಂದ ಪವಿತ್ರವಾದ ಕನ್ನಡ ಸಾಹಿತ್ಯ ಪೀಠಕ್ಕೆ ದೊರೆತ ಮರೆಯಲಾರದ ಅವಮಾನ.

ಒಳಿತು ಹೀನಗಳನ್ನು ತಿಳಿಯಬಹುದಾದ ವಿವೇಕಶಕ್ತಿ ಕೇವಲ ವಿದ್ವತ್ತರಂಗಕ್ಕೆ ಗುತ್ತಿಗೆಯಾಗಿಲ್ಲ. ಅದು ಅನುಭವೇದ್ಯವಾದ ಮಾತು ಇಷ್ಟೆಲ್ಲ ಹೇಳ ಹೊರಟ ಶ್ರೀ ಅ. ನ. ಕೃ. ಅವರು ಯಾವ ವಿಶ್ವವಿದ್ಯಾಲಯದ ಪದವೀಧರರೆಂಬದನ್ನು ಹೇಳಬಹುದೇ? ಶ್ರೀ ಅ. ನ. ಕೃ. ಅವರು ಕನ್ನಡ ಲೇಖಕರ ಅವಗಾಹನೆಗೆ ಬಂಗಾಲದ ಸುಪ್ರಸಿದ್ಧ ಸಾಹಿತಿ ಶ್ರೀ ಬಕಿಂ ಚಂದ್ರರ ಕೆಲವು ಸೂತ್ರಗಳನ್ನು ಆ ತಮ್ಮ ಅಧ್ಯಕ್ಷ ಭಾಷಣದಲ್ಲಿ ಉದಾಹರಿಸಿದ್ದಾರೆ.

೩ ದೇಶಕ್ಕಾಗಲಿ, ಮನುಷ್ಯ ಜಾತಿಗಾಗಲಿ, ಮಂಗಳಸಾಧನೆ ಆಗುವದಾದರೆ ಬರೆಯಿರಿ.

೪ ಅಸತ್ಯ, ಅಧರ್ಮ, ಅಹಿತವಾದುದನ್ನು ಬರೆಯಬೇಡಿ, ಅದು ಮಹಾಪಾಪ.

೬ ತಿಳಿಯದ ವಿಷಯಕ್ಕೆ ಕೈಹಾಕಬೇಡಿ.

೧೨ ಸಪ್ರಮಾಣವಲ್ಲದ್ದನ್ನು ಬರೆಯಬೇಡಿ.

ಮೇಲ್ಕಂಡ ಶ್ರೀ ಬಕೀಂಚಂದ್ರರ ಸೂತ್ರಗಳು ಶ್ರೀ ಅ. ನ. ಕೃ. ಅವರಿಗಾಗಲಿ ಇಲ್ಲವೆ ಅವರ ಸಮರ್ಥಿಸ ಹೋಟ ಲೇಖಕ ಮಹಾ ಶಯರಿಗಾಗಲಿ ಎಷ್ಟರ ಮಟ್ಟಿಗೆ ಅನ್ವಯಿಸಬಹುದೆಂಬುದನ್ನು ವಿಚಾರ ಶೀಲ ಕನ್ನಡ ಬಾಂದವರೇ ನಿರ್ಧರಿಸಬೇಕು.

ಇತ್ತೀಚೆಗೆ ವೀರಶೈವ ಸಾಹಿತ್ಯ ಹಾಗೂ ಸಂಸ್ಕೃತಿಗಳ ಮೇಲೆ ಕುಚೇಷ್ಟೆಗಳು ಆಗಾಗ್ಗೆ ನಡೆವೇ ಇವೆ ಇಂಥವರಿಗೆ ಶ್ರೀ ಬೆನಗಲ್ಲ ರಾಮರಾಯರು ಹೇಳಿದ ಒಂದು ಮಾತನ್ನು ಇಲ್ಲಿ ವಿಶದ ಪಡಿಸುವದು ಸಮಯೋಚಿತವೆನಿಸುವದು.

"ಇತರ ಪಂಗಡದವರಂತೆಯೇ ಲಿಂಗಾಯತರು ಕನ್ನಡ ಜನರೊಳಗಣ ಒಂದು ಪಂಗಡದವರು ಕುಟಲಾತ್ಮರ ದುರ್ಬೋಧನಗಳಿಗೆ ಕಿವಿಗೊಟು ಅವರು ತಮ್ಮವರಲ್ಲವೆಂದು ಇತರರು ಭ್ರಮಿಸಲಾಗದು ಪರಪ್ರಾಂತಗಳಲ್ಲಿರುವ ಸ್ವಜನರಿಗಿಂತ ಸ್ವದೇಶದಲ್ಲಿರುವ ಲಿಂಗಾಯತರೇ ತಮಗೆ ಅಧಿಕ ಆಪ್ತ ಬಂಧುಗಳೆಂದು ಬ್ರಾಹ್ಮಣರು ತಿಳಿಯಬೇಕು. ಲಿಂಗಾಯತರು ಇತರ ಪಂಗಡಗಳ ವಿಷಯದಲ್ಲಿ ತಮ್ಮ ಉತ್ಕರ್ಷೆಯ ಕಾಲದಲ್ಲಿಯೂ ಕೂಡಾ ಕ್ರೂರವಾಗಿ ನಡೆದ ಉದಾಹರಣೆಗಳು— ಪೂರ್ವ ಚರಿತ್ರೆಯಲ್ಲಿ ಎಲ್ಲಿಯೂ ಸಿಕ್ಕುವದಿಲ್ಲ. ವೀರಶೈವರ ಸರ್ವತೋಮುಖವಾದ ಉನ್ನತಿಯೇ ಕರ್ನಾಟಕದ ಉನ್ನತಿಯೆಂದು ನಾನು ತಿಳಿದಿದ್ದೇನೆ. ಹೆಚ್ಚೇಕೆ ಕರ್ನಾಟಕ ಏಕೀಕರಣದ ಚಳವಳಿಯೂ ಕೂಡಾ ಲಿಂಗಾಯತರ ಕೈಗೆ ಬಂದ ನಂತರವೇ ಅದರ ಬೆಂಬಲದಿಂದಲೇ ತುಂಬಾ ಪುಷ್ಟವಾಗಿ ಬೆಳದಿದೆಯೆಂದು ನಾನು ಎಣಿಸುತ್ತೇನೆ"

—ತರುಣ ಸಂಘ ಶಹಪೂರಪೇಟೆ,
ಗದಗ.

# " ಧರ್ಮಸೂಕ್ಷ್ಮ "

(ಬರೆದವರು:— ಶ್ರೀ ಪಾ. ರಾ. ಪಾಟೀಲ, ಚೋಳಚಗುಡ್ಡ.)

(ಹಿಂದಿನ ಸಂಚಿಕೆಯಿಂದ ಮುಂದುವರೆದುದು)

ಕುಲವ ಮರಿಹೊಕ್ಕವಗೆ। ಫಲವು ಕಾಣಲುಬಹುದೆ। ನೆಲೆ ತನ್ನ ಆತ್ಮನದು ತಾನೆ। ನೆಲೆ ತನ್ನ ಆತ್ಮನದು ತಾನೆ। ಅರಿಯದ ವಿನಃ। ಗೆಲಲಹುದೆ ಜನನ ಮರಣಗಳ ।। ೧೮ ।।

ಹುಟ್ಟನಿಂಬಸ್ಪಕುಲ। ಮುಟ್ಟಿದರೆ ಕೆಡುವದೆಂ। ದಿಟ್ಟನಂಬಿಗೆಯು ಶರಣ ಜನರು। ಇಟ್ಟ ನಂಬಿಗೆಯು ಶರಣ ಜನರು। ಅಟ್ಟಿದರತ್ತ। ಧಿಟ್ಟ ವ್ಯಾಸಾದಿ ವಾಲ್ಮಿಕರು ।।೧೯।।

ಬುದ್ಧಿಯುಳ್ಳವಜಗವ । ನೊದ್ದು ಆಳುತಲಿಹನು। ಉದ್ಯೋಗ ಗುಣಗಳಿಂದೆಲ್ಲ। ಉದ್ಯೋಗಗುಣಗಳಿಂದೆಲ್ಲ! ಕುಲಧರ್ಮಗಳ, ಗೆದ್ದು ಮಾನವತೆ ದಾಟಬಹುದು ।।೨೦।।

ಹರಿವ ಹೊಳೆಗಳು ಹುಟ್ಟಿ। ನಿರುಕಿಸದೆವೇಗದಲಿ। ಶರಧಿಯೆಡೆ ಸಾಗಿ ಬರ್ಪಂತೆ। ಶರಧಿಯೆಡೆ ಸಾಗಿ ಬರ್ಪಂತೆ। ಹುಟ್ಟಿವಕುಲವ। ಪರಕಿಸದೆ ಮುಕ್ತನಹುದಾತ್ಮ ।।೨೧।।

ಮಡಿಯುಮೈಲಿಗೆಯೆಲ್ಲ। ಧರ್ಮದ ಆರ್ಯೋಗ್ಯತೆಗೆ। ಕಡುಸತ್ಯವೆಂಬುದನ್ನರಿತು। ಕಡುಸತ್ಯವೆಂಬುದನ್ನರಿತು। ಧರ್ಮದ ಮೂಲ। ಹುಡುಕು ನಿನ್ನೊಳಗೆ ನೀ ನಿತ್ಯ ।।೨೨।।

ನಿಂದ ನೆಲವೊಂದಿರಲು। ಬೆಂದನ್ನವೊಂದಿರಲು। ಬಂದ ಮಳೆಗಾಳಿಯೊಂದಿರಲು। ಬಂದ ಮಳೆಗಾಳಿಯೊಂದಿರಲು। ನಮ್ಮನ್ನೆಲ್ಲ। ಹೊಂದಿದಾಕಾಶ ವೊಂದಿರಲು ।।೨೩।।

ಪರಸ್ಪಸೃಷ್ಟಿಯುದಯದೊಳೆ । ಪರಮಾತ್ಮವೊಂದಿತ್ತು । ಅರಿದು ಪರಮಾತ್ಮ ಓಂಕಾರ । ಅರಿದು ಪರಮಾತ್ಮ ಓಂಕಾರ । ದಲಿ ತಂತಾನೆ । ಬೆರೆಯುವದೆ ಮೂಲಮಂತ್ರಾರ್ಥ ।।೨೪।।

ಕನಸಿನೊಳು ಕಂಡಿರುವ । ಎನಿತೊವಸ್ತುಗಳೆಲ್ಲ । ನನಸೆಂಬರಿವು ಹೇಗೆ ಮಿಥ್ಯ । ನನಸೆಂಬರಿವು ಹೇಗೆ ಮಿಥ್ಯ । ಶ್ರುತ್ಯಕ್ತಿಯಿದು । ಅನಿತೆ ಮಿಥ್ಯವು ಜಗದ ಇರವು ।।೨೫।।

ಹುಟ್ಟನಿಂ ಹಲವುಂಟು ।ಕಟ್ಟಿಗೆಯ ಜಾತಿಗಳು।ಸುಟ್ಟ ಮೇಲ್ಬೂದಿ ಬೇರಹುದೆ। ಸುಟ್ಟ ಮೇಲ್ಬೂದಿ ಬೇರಹುದೆ। ಕಟ್ಟಿಗೆ ದೇಹ। ಬಿಟ್ಟರು ಳಿಯುವದೆ ಶುದ್ಧಾತ್ಮ ॥೨೬॥

ಹೆಚ್ಚುಕಡಿಮೆಗಳಾದಿ। ಎಚ್ಚರಕೆ ತಂಪುಗಳು। ಎಚ್ಚರಿಪ ಪುಣ್ಯ ಪಾಪಗಳು। ಎಚ್ಚರಿಪ ಪುಣ್ಯಪಾಪಗಳು। ಸುಖಲಾಭಗಳು। ವಾಚಕರೆ ತುಲನೆ ಶಬ್ದಗಳು ॥೨೭॥

ಆನೆಪಂಡಿತಗೋವು ಶ್ವಾನಸೂಕರ ಮೀನ। ಹೇನು ಸ್ತ್ರೀಪಕ್ಷಿ ಚಾಂಡಾಲ। ಹೇನು ಸ್ತ್ರೀಪಕ್ಷಿ ಚಾಂಡಾಲ। ಜೀವಿಗಳಾದಿ। ಕಾಣು ಆತ್ಮನಲಿ ಸಮತೆಯನು ॥೨೮॥

ಸೃಷ್ಟಿಯೊಳು ಕಂಗೊಳಿಪ। ಶ್ರೇಷ್ಠವಸ್ತುಗಳೆಲ್ಲ। ಇಷ್ಟವೆಮಗನು ಕೂಲವಾಗೆ। ಇಷ್ಟವೆಮಗನು ಕೂಲವಾಗೆ। ಪ್ರತಿಕೂಲದೊಳು। ಕಷ್ಟ ಕೊಡತಿಹವುತಿಳಿದುನೋಡು ॥೨೯॥

ಮೊದಲಿಲ್ಲದೀಜಗವು। ಕಡೆಗೆಲಯವಾಗುವದು। ನಡುವೆ ಹೇಗಿದು ಸತ್ಯ ರಜ್ಜು। ನಡುವೆಹೇಗಿದು ಸತ್ಯರಜ್ಜು। ಸರ್ಪತೆರದಿ। ಇದನರಿದು ನೋಡಿದರೆ ಮಿಥ್ಯ ॥೩೦॥

ಆತ್ಮಬೆಂಕಿಗೆ ಸುಡನು। ಆತ್ಮನೀರಲಿನೆನೆಯ। ಆತ್ಮಗಾಳಿಂಗೆ ಹಾರನೆಂದು। ಆತ್ಮಗಾಳಿಂಗೆ ಹಾರನೆಂದು। ನೆಲದಲಿ ಮುಳುಗ। ಆತ್ಮ ಅಮರನು ನಿತ್ಯಮುಕ್ತ ॥೩೧॥

ಭಾವಲಯವಾಗುವಿಕೆ। ಜೀವೇಶರೈಕ್ಯತೆಯು। ಶಿವಲಿಂಗಾಂಗ ಸಮರಸತೆ। ಶಿವಲಿಂಗಾಂಗ ಸಮರಸತೆ। ಸಕಲವು ಒಂದೆ। ಜೀವನಿಗೆ ಮುಕ್ತಿಯರಿಯುವಿಕೆ ॥೩೨॥

ಅತ್ಯಂತ ದುಃಖದನಿ। ವೃತ್ತಿಪರಮಾನಂದ। ಪ್ರಾಪ್ತಿಕೊಂಬುವದೆ ಪರಮುಕ್ತಿ। ಪ್ರಾಪ್ತಿಕೊಂಬುವದೆ ಪರಮುಕ್ತಿ॥ ಜೀವನವೀಗ। ಸಾಕ್ಷಿ ಕೂಟಸ್ಥ ಪರಮಾತ್ಮ ॥೩೩॥

ಶಾಂತತೆಯು ಬೇಕೆಮಗೆ। ಶಾಂತಿ ಕೊಡುವದೆ ಧರ್ಮಶಾಂತಿ ಓಂ ಶಾಂತಿ ಓಂಶಾಂತಿ। ಶಾಂತಿ ಓಂ ಶಾಂತಿ ಓಂ ಶಾಂತಿ। ಪಡೆವುದೆ ಮುಖ್ಯ। ಶಾಂತಿಸಾಧಿಸಿರಿ ಧರ್ಮದಲಿ ॥೩೪॥

# ಜಗತ್ತೂ ಕೂಡ ಅವಿನಾಶಿ
## ಸತ್ಯನಿತ್ಯವೇ ಹೌದು.





[ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ),]

### ಪರಮಾತ್ಮ.

ಮೊದಲು ಪರಮಾತ್ಮನು ಸತ್ಯ ನಿತ್ಯನೆನ್ನುವದನ್ನು ವಿಚಾರಿಸುವಾ. ಪರಮಾತ್ಮನ ಸ್ವರೂಪ ಅಸ್ತಿತ್ವ ಎಂಥಹದು ಅವನೂ ಇದ್ದೇ ಇರುವನು ಎನ್ನುವದಕ್ಕೆ ವಚನಕಾರರ ಅಭಿಪ್ರಾಯವನ್ನು ನೋಡೋಣ — "ಅಯ್ಯಾ, ನಿರವಯ ಶೂನ್ಯಲಿಂಗ ಮೂರ್ತಿಯು ನಿಲುಕಡೆ ಎಂತೆಂದೊಡೆ, ಸಾಕಾರನಲ್ಲ ನಿರಾಕಾರನಲ್ಲ ನೋಡಾ ನಿರವಯ ಶೂನ್ಯಲಿಂಗ ಮೂರ್ತಿ ಆದಿಯಲ್ಲ ಅನಾದಿಯಲ್ಲ ಪದವನಲ್ಲ ಸುಖದವನಲ್ಲ ದುಃಖದವನಲ್ಲ ನಿರವಯ ಶೂನ್ಯಲಿಂಗಮೂರ್ತಿ ಪುಣ್ಯಪಾಪದವನಲ್ಲ, ಕರ್ತೃ ಭೃತ್ಯನಲ್ಲ, ಕಾರಣ-ಕಾರ್ಯನಲ್ಲ, ಧರ್ಮಿಕವಿಧಿಯಲ್ಲ, ಪೂಜ್ಯಪೂಜಕನಲ್ಲ, ಇಂತು ಉಭಯವಳಿದು ಬೆಳಗುವ ನೋಡಾ ನಮ್ಮ ಗುಹೇಶ್ವರಲಿಂಗವು" ಈ ಶೂನ್ಯಲಿಂಗವನ್ನು ವರ್ಣಿಸಲಿಕ್ಕೆ ಬಾರಲಾರದ್ದೇ ಇರುವದು. ತ್ರಿಕಾಲದಲ್ಲಿಯೂ ಬದಲಾವಣಿ ಹೊಂದದ ಅವ್ಯಯ ಅವ್ಯಕ್ತ ಅಖಂಡವಾಗಿ

ಏಕರೂಪವಾಗಿ ಅಭಾಧಿತವಾಗಿ ಇರುವ ಪರಾತ್ಪರ ಸತ್ಯವಾದ ಚೈತನ್ಯ ಸ್ವರೂಪವಾದ ಚಿನ್ಮಯವಾದ .ವಸ್ತುವೇ ಪರಮಾತ್ಮವೆಂದು ಸಾಮಾನ್ಯ ವಾಗಿ ಹೇಳಬಹುದೇ ಹೊರತು, ಹೀಗೇ ಹಾಗೇ ಇರುವದೆಂದು ಖಂಡಿತ ವಾಗಿ ಹೇಳಲಿಕ್ಕೆ ಬಾರದ ಚಿದ್ಘನ ವಸ್ತು. ಅದಕ್ಕೆ ಅವರ್ಣನೀಯು ಅನಿರ್ವಚನೀಯು ವಾಙ್ಮನಕ್ಕೆ ಗೋಚರ ಎಂದು ಹೇಳುವರು. ಅದಕ್ಕೆ ಶಿವ-ಸ್ಥಿರ-ಲಿಂಗವೆಂದು ಶರಣರು ಕರೆದಿರುವರು. ಇಲ್ಲಿ ಶೂನ್ಯಲಿಂಗ ಮೂರ್ತಿ ಅಂದರೆ ಯಾವ ಗೋಚರ ವಸ್ತುವೂ ಇಲ್ಲದುದನ್ನು ಕೇವಲ ಚಿದ್ಘನ ವಸ್ತುವನ್ನು ಹೆ ಳುವ ಚಿನ್ಹವೆ ಲಿಂಗವು. ಅಂದರೆ ಇಂದ್ರಿಯು ಗಳಿಗೂ ಅಗೋಚರ, ಮನಕ್ಕೂ ಅಗೋಚರ ಬುದ್ಧಿಗೂ ಅಗೋಚರ ವಾದದ್ದು ಆದರೂ ತನ್ನಲ್ಲಿ ಎಲ್ಲ ಅಘಟಿತಘಟನೆಗಳ ಸಕಲ ಶಕ್ತಿ ಯನ್ನು ಒಳಗೊಂಡು ಪ್ರಕಾಶಿಸುವಂಥಾದ್ದೇ ಈ ಶೂನ್ಯ. ಶೂನ್ಯ ಎಂದರೆ ಬೌದ್ಧರ ಏನೂ ಇಲ್ಲದ ಪೂಜಿಯುನ್ನು ಬೋಧಿಸುವ ವಸ್ತುವಲ್ಲ. ಬೀಜರೂಪದಿಂದ ಎಲ್ಲವನ್ನೂ ಸಕಲವನ್ನೂ ಒಳಗೊಂಡು ಸೂಕ್ಷ್ಮ ಅತಿಸೂಕ್ಷ್ಮಗಳಿಗಿಂತಲೂ ಕಾರಣರೂಪದಿಂದ ಕೂಡಿಕೊಂಡು ಬೆಳಗು ವಂಥಾದ್ದೇ ಈ ಶೂನ್ಯವಾಗಿದೆ. ಉದಾ- ಆಣೆಕಲ್ಲು ಭರ್ಪಗಳು ಸ್ಥೂಲ ರೂಪ ಅದರ ಸೂಕ್ಷ್ಮ ನೀರೆಂದು ಹೇಳಬಹುದು. ಇನ್ನು ಅದರ ಉಗಿ ರೂಪಾಗಿ ಕರಿ ಮೋಡವಾಗಿ ತೋರುವದೇ ಕಾರಣ ರೂಪ ಇದಕ್ಕೂ ಬಿಳಿ ತೆಳ್ಳಗಿನ ರೂಪವೇ ಮಹಾಕಾರಣರೂಪವೆಂದು ಹೇಳಬಹುದು. ಇವು ಒಂದಕ್ಕಿಂತ ಒಂದು ಅತಿ ಸೂಕ್ಷ್ಮವಾದವುಗಳೇ ಇರುತ್ತವೆ. ಇದಕ್ಕೂ ಮುಂದೆ ಹೋದರೆ ಕಣ್ಣಿಗೆ ಅಗೋಚರವಾದ ಉಗಿರೂಪ ವಿರುವದು. ಇದೇ ಈ ಎಲ್ಲ ಮೋಡ ಮಳೆ ನೀರ ಆಣೆಕಲ್ಲುಗಳಿಗೆ ಮೂಲ ಕಾರಣವಾಗಿದೆ. ಅದರಂತೆ ಈ ಮಹಾಕಾರಣ-ಕಾರಣ-ಸೂಕ್ಷ್ಮ-ಸ್ಥೂಲ ಜನಗಳಿಗೆಲ್ಲ ಈ ಶೂನ್ಯಲಿಂಗವೇ ಮೂಲಕಾರಣವಾಗಿರುವದು ಅದನ್ನೇ ಪ್ರಭುದೇವರು ತಮ್ಮ ವಚನದಲ್ಲಿ ವರ್ಣಿಸಿದ್ದಾರೆ.

ವಚನದ ರಚನೆ ಎಂಬ ಮಾತಿನ ಬಣಬೆಯು ಹರಿಯಲ್ಲ ನೋಡಾ! ಜೊಗಳಿ ಕಂಡವರಿಲ್ಲರು ಮೂರ್ತಿಗೊಳಗಾದರು. ವೇದಶಾಸ್ತ್ರ ಶ್ರುತಿ ಸ್ಮೃತಿಗಳು ಹೊಗಳ ಕಾಣವೆಂಬುದ ಗುಹೇಶ್ವರ ಸಾಕ್ಷಿಯಾಗಿ ಮೂರು ಲೋಕಬಲ್ಲುದು ಕಾಣಾ ಸಿದ್ಧರಾಮಯ್ಯ ॥ ಎಂದು ಬೇಕಾದಷ್ಟು ಪರ

ಮಾತ್ಮನ ನಿಲುವಿನ ಬಗ್ಗೆ ವಚನ ರಚಿಸಿದರೂ ಅವನ ಸ್ವರೂಪವನ್ನು ವರ್ಣಿಸುವದು ಎಂದೂ ಶಕ್ಯವಿಲ್ಲೆಂದು ಹೇಳುವನು.

ಆ ನಿಜವಸ್ತು ಒಂದೇ ತನ್ನ ಲೀಲೆಯವೆರಡಾಗಬಲ್ಲುದದೊಂದೇ ತನ್ನ ಮರೆಯ ಬಲ್ಲುದದೊಂದೇ. ತಾನಲ್ಲದನ್ಯವಿಲ್ಲೆಂದರಿದರಿವು ತಾನೆ ಸಿಮ್ಮಲಿಗೆಯ ಚನ್ನರಾಮಾ '' ಒಂದೇ ವಸ್ತುವಾಗಿರುವದೊಂದೇ ಚಿದ್ಘನವು ಆದರೂ ತನ್ನ ಲೀಲೆಯಲ್ಲಿ ಎರಡಾಗಬಲ್ಲುದು ತನ್ನ ತಾ ಲೀಲೆ ಸಾಕಾದೊಡೆ ಮರೆಯುಬಲ್ಲುದು ತನ್ನ ಹೊರತನ್ಯವಿಲ್ಲೆಂಬ ಅರಿವೆಯೇ ತಾನೇ ಎಂದು ಇದರ ಭಾವವಾಗಿರುವದು. ಹೀಗೆ ಪರಾತ್ಪರ ಪರ ಶಿವನಲ್ಲಿ ಅನಂತಲೋಕಂಗಳು ಹೇಗೆ ಇದ್ದವೆಂಬುದನ್ನು ವಚನಕಾರರು ಹೇಳುವರು.

## ಸೃಷ್ಟಿ ಪರಮಾತ್ಮನಲ್ಲಿ ಇದ್ದುದೆಂತು ?

ಮರೀಚಿಯೊಳಗಿನ ಬಿಸಿಲಿನಂತೆ ಇದ್ದಿತ್ತು. ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು. ಚಿತ್ರಕನೊಳಡಗಿದ ಚಿತ್ರದಂತೆ ಇದ್ದಿತ್ತು. ನುಡಿಯೊಳಡಗಿದ ಅರ್ಥದಂತೆ ಇದ್ದಿತ್ತು. ಆಲಿಯೊಳಡಗಿದ ತೇಜದಂತಿದ್ದಿತ್ತು. ಕೂಡಲಚನ್ನಸಂಗಯ್ಯ ನಿಮ್ಮ ನಿಲವು.

ನಿಮ್ಮ ನೆನಹೇ ನಿಮಗೆ ಶಕ್ತಿಯಾಯಿತಲ್ಲ ನಿಮ್ಮೆಚ್ಚರ ಸಮರತಿಯೇ ನಿಮಗೆ ಅಖಂಡವೆಂಬ ಗಾಯವಾಯಿತ್ತಲ್ಲ. ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ ಚಿಮ್ಮಲಿಗೆಯ ಚನ್ನರಾಮಾ.

ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ ಮರೀಚಿಯಂತೆ, ಕಂಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರಾ ನಿಮ್ಮ ನಿಲವು."

"ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ, ಅಮೃತದೊಳಗಣ ರುಚಿಯಂತೆ ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ ನಿಲವಿಲ್ಲದ ರೂಪ ಕಳೆಯಲ್ಲಿ ಭೇದಿಸುವ ಪರಿ ರಾಮನಾಥಾ" ಈ ಪ್ರಕಾರ ಪರಾತ್ಪರ ಸತ್ಯ ಪರಶಿವನಲ್ಲಿ ಅತಿ ಸೂಕ್ಷ್ಮವಾಗಿ ಕಾರಣ ಸೂಕ್ಷ್ಮಸ್ಥೂಲ ಜಗಗಳು ಬೀಜರೂಪದಲ್ಲಿ ಅಡಗಿ ಒಂದಾಗಿ ತೋರುತಿರುವದು. ಇದನ್ನೇ ಕಾಳಿದಾಸನು ಹೇಳಿದ್ದೆಂತು.?

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತಿ ಪರಮೇಶ್ವರೌ ॥

ಪಾರ್ವತಿ ಪರಮೇಶ್ವರರು ಶಬ್ದ ಹಾಗೂ ಅದರ ಅರ್ಥಕ್ಕೆ ಹೇಗೆ ಸಂಬಂಧವಿರುವದೋ ಹಾಗೆ ಸಂಬಂಧವಿರುವದು. ಶಬ್ದವನ್ನು ಬಿಟ್ಟು ಅರ್ಥವೂ ಅರ್ಥವನ್ನು ಬಿಟ್ಟು ಶಬ್ದವೂ ಹೇಗೆ ಇರಲಾರದೋ ಅದ ರಂತೆ ಶಿವನನ್ನು ಬಿಟ್ಟು ಶಕ್ತಿ ಇಲ್ಲ. ಶಕ್ತಿಯನ್ನು ಬಿಟ್ಟು ಶಿವನಿಲ್ಲ.

ಓಂ ಪೂರ್ಣಮದಃ ಪೂರ್ಣಮಿದಂ ।
ಪೂರ್ಣಾತ್ ಪೂರ್ಣ ಮುದಚ್ಯತೆ ।
ಪೂರ್ಣಸ್ಯ ಪೂರ್ಣ ಮಾದಾಯ ।
ಪೂರ್ಣ ಮೇವಾವ ಶಿಷ್ಯತೇ ॥

ಎಂದು ಉಪನಿಷತ್ತಿನಲ್ಲಿ ಸಹ ಹೇಳಿರುವದನ್ನು ನೋಡಿದರೆ ಅದೇ ಅರ್ಥ ಹೊರಡುವದು.

ಕಾಯುವು – ಜೀವನ್ವು, ಜೀವವು – ಕಾಯುವು ಅವು ಇಂತು ಬೆರೆ ಸಿಪ್ಪವಂತೆ, ಲಿಂಗದೊಳಗೆ ಜಂಗಮ ಜಂಗಮದೊಳಗೆ ಲಿಂಗ ಬೆರೆ ಸಿಪ್ಪದು ಭಿನ್ನ ಭಾವವಿಲ್ಲದೆ । ನ ಶಿವೇನ ವಿನಾ ಶಕ್ತಿ । ನ ಶಕ್ತಿ ರಹಿತಃ ಶಿವಃ । ಪುಷ್ಪ ಗಂಧ ವಿನಾ ದೈವ ಮರುತಾಂಬರ ಯೋರಿವ । ಬಂದುದಾಗಿ ಭಾವ ಭೇದವಿಲ್ಲದೆ ಜಂಗಮವೇ ಲಿಂಗವು ಕೂಡಲ ಚನ್ನ ಸಂಗಮದೇವಾ ॥ ಎಂದು ಚನ್ನ ಬಸವಣ್ಣನು ಹೇಳಿದ್ದಾನೆ. ಇದ ರಂತೆ ನಿಜಗುಣ ಶಿವಯೋಗಿಗಳು ಹೇಳಿದ್ದನ್ನಷ್ಟು ವಿಚಾರಿಸುವಾ—

ಇಂಗಡಲೊಳಿಂಪು ಬೆಳದಿಂಗಳೊಳು ತಂಪು । ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಪಿಂಗದಗಸುತೆ ನತನಪ್ಪ ॥

ನಿಜದೊಳು ಸದ ಸತ್ತಾಗಿಹ ಶಕ್ತಿ । ಅಜೆ ಎನಿಸುವದದು ಮಾಯಾ ಶಕ್ತಿ । ಅದುವೆ ಜಗತ್ಕಾರಣ ಮಾಗಿಹುದು । ಆನುದಾ- ಚ್ಛಾದಕ ಮಾಗಿಹುದು । ಸದ್ಭಾವವನದು ಮುಸುಕಿರುತಿಹುದು । ಉಳ್ಳಬ್ರಹ್ಮವನಿಲ್ಲೆನಿಸುವದು । ಇಲ್ಲದ ಲೋಕವನುಂಟೆನಿಸುವದು । ಮಾನ್ಯನೆ ಇದು ನಿನ್ನನು ನೆಮ್ಮಿಹುದು । ಅನ್ಯಾನನ್ಯೇತರ ಮಾಗಿ ಹುದು ॥

ಉಂಟೆನಿಸದಿಲ್ಲೆನಿಸದುಂಟೆನಿಸದಖಿಳ | ಕಂಟಕದ ಬೀಜವೆನಿಪ-ನಾದಿಯವಿದ್ಯೆ | ಯುಂಟಾತ್ಮ ಸತ್ತೆಯೊಡಗೂಡಿ | ಅಧಾರದಾ ಬ್ರಹ್ಮ-ವಾದೇಯವಿದ್ಯಾ ಮಾಯೆಯೆ | ಮಾಧಾರದಲ್ಲಿ ಬೆಂಸಿ ಬೇರಿಲ್ಲದಂತಾ ಥೇಹ ಮಿದರ್ುದಲೆ ಪುತ್ರ | ದೇವಾತ್ಮ ಶಕ್ತಿಯೆಂಬಾ ವಾಕ್ಯದಿಂ ಸಾರು | ವಾ ವೇದದಲ್ಲಿ ತಿಳಿ ಮಾಯೆ ತತ್ವದೊಳೋಡಿ ಬೇರಿಲ್ಲದಿಹುದೆಂದು ||

ಹೀಗೆ ಇನ್ನೂ ಅನೇಕ ಅನುಭವಿಕರ ಅಧಾರಗಳಿರುವವು. ಅವುಗಳನ್ನು ಪರಿಶೀಲಿಸಿದರೆ ಪರಾತ್ಪರ ಪರಶಿವನಲ್ಲಿ ಸಕಲ ಸೃಷ್ಟಿಗಳು ಅತ್ಯಂತ ಸೂಕ್ಷ್ಮವಾಗಿ ಶಕ್ತಿರೂಪದಿಂದ ಇದ್ದವೆಂದು ಇದರ ಮೇಲಿಂದ ಸಹಜ ಅನಿಸುವದು. ಹೀಗೆ ಅನಂತ ಶಕ್ತಿಯು ಸ್ವಲೀಲೆಯಿಂದ ಶಾಂತಸೃಷ್ಟಿಯನ್ನು ಸಜಸಿರುವದು. ಯಾಕಂದರೆ ಈ ಪರಿ ಸೃಷ್ಟಿಯಾಗಿ ತೋರುವದು. ಆ ಸತ್ಯದ ಸ್ವಭಾವವಿರುವದೆಂದು ಹೇಳಬಹುದು. ತನ್ನಲ್ಲಿ ತಾನೇ ಸೃಷ್ಟಿಯನ್ನು ಸೃಜಸಿ ಅದರಲ್ಲಿಯೇ ಅವ್ಯಕ್ತವಾಗಿದ್ದು ಚೈತನ್ಯಾತ್ಮಕವಾಗಿ ವಿಶ್ವವನ್ನು ವ್ಯಾಪಿಸಿ ಸತ್ಯವು ತಾನು ಏನನ್ನೂ ಹೊದ್ದದೆ ಅಳಿಯದೆ ಉಳಿದಿರುವದೆಂದು ಮೇಲಿನ ವಚನಗಳು ಸೂಚಿಸುವವು.

## ಸೃಷ್ಟಿಯ ರಚನೆ.

|| ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ' ಅನಂತ ಲೋಕಗಳನ್ನು ಜೀವರಾಶಿಗಳನ್ನು ಸಮಸ್ತ ಪ್ರಪಂಚಗಳನ್ನು ತನ್ನ ವಿನೋದಕ್ಕೆ || "ಘನಗಂಭೀರ ಮಹಾ ವಾರಿಧಿಯಲ್ಲಿ ಫೇನ-ತರಂಗ-ಬುದ್ಬುದಗಳುದಯುಲ್ಲದೆ ಬೇರಾಗಬಲ್ಲದೆ ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದವಲ್ಲದೆ ಬೇರಾಗ ಬಲ್ಲುವೆ ?"

"ಕನಕದಲ್ಲಿ ಅಲಂಕಾರವಿದ್ದಂತೆ ಬೀಜದಲ್ಲಿ ಎಲೆ ಶಾಖೆ ಬೀಜ ವಿದ್ದಂತೆ ಒಂದೇ ವಸ್ತುರನಲ್ಲಿ ಗುಣತ್ರಯಗಳಾದವು. ಗುಣತ್ರಯದಿಂದ ಮಲತ್ರಯಗಳಾದವು. ಮಲಯದಿಂದ ಲೋಕ ರಚನೆ ಹೆಚ್ಚಿತ್ತು"

"ಲೋಕಾದಿಲೋಕಂಗಳೇನೂ ಇಲ್ಲದಂದು ನೆನಹು ನಿಷ್ಪತ್ತಿಯಾಗಿತ್ತು | ನೆನಹಿಲ್ಲದ ಘನವನ್ನು ನೆನೆದ ನೆನಹು ಸವಯವಾಗಿ ಚಿತ್ತೈನಿಸಿ ಕೊಂಡಿತ್ತು. ಆ ಚಿತ್ತೇ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ

ವೆಂದು ಐದಂಗನಂಗೀಕರಿಸಿ ನಿಃಕಲ ಶಿವತತ್ವವೆನಿಸಿತ್ತು. ಆ ನಿಃಕಲ ಶಿವತತ್ವ ತಾನೊಂದೆ ತನ್ನ ಶಕ್ತಿಯ ಚಲನೆ ಮಾತ್ರದಿಂದ ಒಂದೆರಡಾಯಿತ್ತು. ಆ ಪರಶಿವ ಚಿತ್ ಶಕ್ತಿ ತಾನೇ ಎರಡು ತೆರನಾಯಿತ್ತು. (೧) ಶಕ್ತಿಯೇ ಪ್ರವೃತ್ತಿ ಎನಿಸಿತ್ತು. (೨) ಭಕ್ತಿಯೇ ನಿವೃತ್ತಿ ಎನಿಸಿತ್ತು. ಆ ಶಕ್ತಿ ಆರು ತೆರನಾಯಿತ್ತು. ಚಿತ್‌ಶಕ್ತಿ – ಆದಿಶಕ್ತಿ – ಪರಾಶಕ್ತಿ – ಜ್ಞಾನಶಕ್ತಿ – ಇಚ್ಛಾಶಕ್ತಿ – ಕ್ರಿಯಾಶಕ್ತಿ. ಇನ್ನು ಕ್ರಿಯಾಶಕ್ತಿಯಿಂದ ನಿವೃತ್ತಿಕಲೆಯ ಸಂಕಲ್ಪ ಮಾತ್ರದಿಂದ ಮಾಯಾಶಕ್ತಿ ಹುಟ್ಟಿತ್ತು. ಆ ಮಾಯಾಶಕ್ತಿಯಿಂದ ಸಮಸ್ತ ಜಗತ್ತಿನ ಉತ್ಪತ್ತಿ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ?"

"ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ, ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ, ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು, ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ; ಈ ಮೂರು ಪೀಠವಂತಿರಲಿ, ಆ ಶರಣನರಿದು ಶರಣೆನುತಿರ್ದೆನಯ್ಯಾ ಕೂಡಲ ಸಂಗಮ ದೇವ."

"ಆದಿಯಲ್ಲೊಬ್ಬ ಶರಣ ಮೂರ್ತಿಯಾದ. ಆತನ ಮೂರ್ತಿಯಿಂದ ಸದಾಶಿವನಾದ ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು. ಆ ಸದಾಶಿವಂಗೆಯೂ ಜ್ಞಾನಶಕ್ತಿ ಇಬ್ಬರಿಗೂ ಶಿವನಾದ. ಆ ಶಿವಂಗೆ ಇಚ್ಛಾಶಕ್ತಿಯಾದಳು. ಆ ಶಿವಂಗೆಯೂ ಇಚ್ಛಾಶಕ್ತಿ ಇಬ್ಬರಿಗೂ ರುದ್ರನಾದ ಆ ರುದ್ರಂಗೆ ಕ್ರಿಯಾಶಕ್ತಿಯಾದಳು. ಆ ರುದ್ರಂಗೆಯೂ ಕ್ರಿಯಾಶಕ್ತಿ ಇಬ್ಬರಿಗೆಯೂ ವಿಷ್ಣುವಾದ. ಆ ವಿಷ್ಣುವಿಂಗೆ ಮಹಾಲಕ್ಷ್ಮಿಯಾದಳು. ಆ ವಿಷ್ಣುವಿಗೆಯೂ ಮಹಾಲಕ್ಷ್ಮಿ ಇಬ್ಬರಿಗೆಯೂ ಬ್ರಹ್ಮನಾದ. ಆ ಬ್ರಹ್ಮಂಗೆ ಸರಸ್ವತಿಯಾದಳು. ಆ ಬ್ರಹ್ಮಂಗೆಯೂ ಸರಸ್ವತಿ ಇಬ್ಬರಿಗೆಯೂ ನರರು ಸುರರು; ದೇವಕರ್ತಳು. ಹೆಣ್ಣು, ಗಂಡು, ಸಚರಾಚರಂಗಳು ಸಹಿತವಾಗಿ ಎಂಬತ್ತು ನಾಲ್ಕು ಲಕ್ಷ ಜೀವಜಂತುಗಳು ತೋರುವ ತೋರಿಕೆ ಎಲ್ಲಾ ಹುಟ್ಟಿತ್ತು. ಕೂಡಲ ಚನ್ನ ಸಂಗಯ್ಯ." ಇದೊಂದು ಬಗೆಯ ಉತ್ಪತ್ತಿ.

"ಮಹಾಘನವು ತನ್ನ ಲೀಲೆಯಿಂ ತಾನೇ ಸ್ವಯಂಭು ಲಿಂಗ ಸ್ಥಲವಾಯಿತ್ತು. ಆ ಲಿಂಗದಿಂದಾಯಿತ್ತು, ಶಿವಶಕ್ತ್ಯಾತ್ಮಕ, ಆ ಶಿವ

ಶಕ್ತ್ಯಾತ್ಮಕದಿಂದಾದುದು. ಆತ್ಮ, ಆತ್ಮದಿಂದಾದುದು. ಆಕಾಶ ಆಕಾಶದಿಂದಾದುದು, ವಾಯು ವಾಯುವಿನಿಂದಾದು, ಅಗ್ನಿ ಅಗ್ನಿಯಿಂದಾದುದು, ಅಪ್ಪು ಅಪ್ಪುವಿನಿಂದಾದುದು, ಪ್ರಥ್ವಿ ಪ್ರಥ್ವಿಯಿಂದಾಯ್ತು ಸಕಲ ಚರಾಚರ ಜೀವ ಜಗವೆಲ್ಲವು ನಿಮ್ಮ ನೆನಹು ಮಾತ್ರದಿಂದಾಯ್ತು ಚೆನ್ನಮಲ್ಲಿಕಾರ್ಜುನಾ" ಇದನ್ನೇ ಹೋಲುವ ಕೆಳಗಿನ ವಚನವನ್ನು ನೋಡಿರಿ.

ಅನಾದಿಯ ಮಗನು ಆದಿ, ಆದಿಯ ಮಗನತೀತ, ಅತೀತನ ಮಗನು ಆಕಾಶ, ಆಕಾಶನ ಮಗನು ವಾಯು, ವಾಯುವಿನ ಮಗನು ಅಗ್ನಿ, ಅಗ್ನಿಯ ಮಗ ಅಪ್ಪು, ಅಪ್ಪುವಿನ ಮಗ ಪೃಥ್ವಿ, ಪೃಥ್ವಿಯಿಂದ ಸಕಲ ಜೀವರೆಲ್ಲರೂ ಉದ್ಭವ ಗುಹೇಶ್ವರಾ,

"ಮರನೊಳಗಣ ಪತ್ರೆ ಫಲಂಗಳು ಮರಕಾಲವಶದಲ್ಲಿ ತೋರುವಂತೆ, ಹರನೊಳಗಣ ಲೀಲಾ ಪ್ರಕೃತಿ ಸ್ವಭಾವಂಗಳು ಹರಲೀಲಾವಕಾಶದಲ್ಲಿ ತೋರುವವು. ಲೀಲೆಯಾದಡುಮಾಪತಿ, ಲೀಲೆನಿಂದಡೆ ಸ್ವಯಂಭು ನಮ್ಮ ಗುಹೇಶ್ವರ ಲಿಂಗವು." ಈ ಪ್ರಕಾರ ಮೊದಲು ಮರದೊಳಗೆ ಕಾಣಿಸದಿರ್ದ ಪತ್ರೆ, ಪುಷ್ಪ, ಫಲಗಳು ಮರದ ಋತುಕಾಲದಲ್ಲಿ ಲೀಲೆಯಿಂದ ತೋರಿ ಬಾಳಿ ಅಡಗುವದು;ಆ ಮರಕ್ಕೆ ಸ್ವಭಾವ. ಇದರಂತೆ ಶಿವನಲ್ಲಿಯ ಪ್ರಕೃತಿ ಸ್ವಭಾವ; ಮೊದಲಾದವು (ಶಕ್ತಿ) ಶಿವಲೀಲಾ ವಿಲಾಸದಲ್ಲಿ ತೋರುವವು. ಈ ಪ್ರಕಾರ ಲೀಲೆ ನಡೆದರೆ ಉಮಾಪತಿ ಎನಿಸುವನು. ಲೀಲೆ ಸಾಕಾದ ಕೂಡಲೇ ಅವೆಲ್ಲ ಪ್ರಕೃತಿ ಮೊದಲಾದ ಶಕ್ತಿಗಳು ಹರನಲ್ಲಿ ಬೆರೆದು ಸಮರಸವಾಗಿ ಲೀನವಾಗಿ ಹೋಗುವವು. ಆಗ ಅವನಿಗೆ ಸ್ವಯಂಭು ಎನಿಸುವನು. ಶಿವನು ಸರ್ವಕಲಾ ಪರಿಪೂರ್ಣನಾಗಿ ಉಳ್ಳವನು.

ಈ ವಚನಗಳು ಬೇರೆ ಬೇರೆ ಶರಣರ ಹೃದಯದಿಂದ ಹೊರಟ ಉದ್ಗಾರಗಳು. ಇವುಗಳಲ್ಲಿ ಸೃಷ್ಟಿ ಹೇಗೆ ಆಯಿತೆಂಬುದನ್ನೂ ಕ್ರಮ ಕ್ರಮವಾಗಿ ಅದು ಹೇಗೆ ಹೇಗೆ ಪ್ರಕಟವಾಯಿತೆಂಬುದನ್ನೂ ಇವು ಬೋಧಿಸುವವು. ಅವುಗಳೆಲ್ಲವೂ ಎಲ್ಲೋ ಅಲ್ಪ ಸ್ವಲ್ಪ ತೋರಿಕೆಗೆ ಬೇರೆ ಬೇರೆ ಕಂಡರೂ ಅವುಗಳ ಸಾರವೆಲ್ಲ ಒಂದೇಯಾಗಿರುವದು. ಇವುಗಳಲ್ಲಿ ಶಿವ ಶಕ್ತಿಯ ಬೇರೆ ಬೇರೆ ಸ್ವರೂಪಗಳನ್ನೇ ಅವು ಹೇಳು

ವವು. ಪರಶಿವನು ಪರಶಕ್ತಿಯರು ಅತಿ ಕೆಳಮಟ್ಟದ ಮಾಯಾ ಪ್ರಕೃತಿಯ ಸ್ಥಿತಿಗೆ ಹೇಗೆ ಇಳಿದು ಬಂದರೆಂಬುದನ್ನು ಇವುಗಳಲ್ಲಿ ಸರಿಯಾಗಿ ಕಾಣಬಹುದು. ಇಸೆಲ್ಲ ಸೃಷ್ಟಿ ಪರಶಿವನಿಂದ ಬೇರೆಯಲ್ಲ- ಇದು ಮಿಥ್ಯವೂ ಅಲ್ಲ, ಸತ್ಯವಾದ ಪರಶಿವನಿಂದ ಸತ್ಯವಾದ ಜಗತ್ತುಗಳು ಹೊರಹೊಮ್ಮಿದವಲ್ಲದೆ, ಅಸತ್ಯವಾದ ಜಗತ್ತುಗಳು ಎಂದೂ ಹೊರ ಹೊಮ್ಮಲಾರವು, ಏನೂ ಇಲ್ಲದ ವಸ್ತುವಿನಿಂದ ಏನೂ ಪ್ರಕಟವಾಗಿ ಹೊರಹೊಮ್ಮಲಾರದು. ಎಲ್ಲವೂ ಇದ್ದ ವಸ್ತುವಿನಿಂದ ಈ ಎಲ್ಲವೂ ಪ್ರಕಟವಾಗಿ ಹೊರಹೊಮ್ಮಿರುವದು. ಅದಕ್ಕೆ ಈ ಸೃಷ್ಟಿ ಸಟೆಯಲ್ಲ ದಿಟವೆಂದು ಹೇಳಬಹುದು.

ಮಾನವನ ಅನುಭವದ ಆತ್ಯಂತಿಕ ಗುರಿಯು ಏಕಮೇವ ಅಖಂಡ ಘನವಾದುದಾಗಿದೆ. ಆದರೆ ಸ್ವಾನುಭವಗೊಳ್ಳುವಾಗ ಇದು ಅನಂತವಾದ ನಾನಾತ್ವವನ್ನು ತಾಳುವ ಸಾಮರ್ಥ್ಯವುಳ್ಳದ್ದೆಂದು ಮರೆಯಲಾಗದು. ಒಂದರಲ್ಲಿ ಅತಿ ಸೂಕ್ಷ್ಮವಾಗಿ ಹುದುಗಿಕೊಂಡು ಹಲವಾಗಿ ತೋರುವ ಈ ಕಾರ್ಯಕ್ಕೆ ಸೃಷ್ಟಿ ಜಗತ್ತುಗಳೆಂದು ಹೇಳಬಹುದು. ಆ ಪರಶಿವ ನಲ್ಲಿ ಹುದುಗಿದ ಈ ಅನಂತ ಹಲವನ್ನು ತನ್ನಿಂದ ಹೊರಹೊಮ್ಮಿಸುವ ಆ ಅರುವಿಗೆ ಯಾವ ಸಾಮರ್ಥ್ಯವಿರುವದೋ ಅದಕ್ಕೆ ಚಿತ್‌ಶಕ್ತಿ ಎಂದು ಹೇಳುವರು. ಶಿವನಲ್ಲಿ ನೆನಹುದೋರಲು ಅಂದರೆ ಈ ಚಿತ್‌ಶಕ್ತಿಯ ಇಚ್ಛಾ ಪ್ರವೃತ್ತಿಯು ಶಿವನಿಂದ ಹೊರಹೊಮ್ಮಿತೆಂದು ಹೇಳಬೇಕು. ಈ ಇಚ್ಛಾಶಕ್ತಿಯು ತನ್ನನ್ನು ತಾನು ತಿಳಿಯುವದಲ್ಲದೆ ತನ್ನಿಂದ ಇತ ರವಾದ ಎಲ್ಲವನ್ನೂ ತಿಳಿಯುವಳು. ಇದೇ ವಿಮರ್ಶಾಶಕ್ತಿ ಎನಿಸುವದು. ಶಿವನಲ್ಲಿ ಸಹಜವಾಗಿರುವ ಈ ಪ್ರಕಾಶ ಶಕ್ತಿಯಾದ ಚಿತ್‌ಶಕ್ತಿಯಿಂದ ಲೋಕಾದಿಲೋಕಗಳು ಸಚರಾಚರಗಳು ರಚನೆಗೊಳ್ಳುವವು. ಹೀಗೆ ಶಿವನಲ್ಲಿ ಈ ಚಿತ್‌ಶಕ್ತಿಯು ಬಿಚ್ಚಿ ಬೇರಾಗದೆ ಬೆರಸಿ ಒಂದಾಗದ ರೀತಿ ಯಲ್ಲಿರುವಳು. ಶಿವನ ಆತ್ಮವೆಂದರೆ ಈ ಚಿತ್‌ಶಕ್ತಿಯೇ ಹೊರತು ಬೇರಿಲ್ಲ. ಈ ಪ್ರಕಾರ ವಿಶ್ವದ ಗತಿಯು ಗಮನಗೊಳ್ಳುವುದು. ಈ ಚಿತ್ ಶಕ್ತಿಯಿಂದಲೇ ಸರಿ. ವಿಶ್ವಪ್ರೇರಕವಾದುದೂ ಕೂಡ ಈ ಚಿತ್‌ಶಕ್ತಿ ಯೆಂದು ಹೇಳಬೇಕು. ಅದಕ್ಕೆ ಇವಳಿಗೆಸರ್ವಕರ್ತೃ ಸರ್ವ ಭೋಕ್ತೃ ಸರ್ವನಿಯಾಮಕಳು ಎಂದು ವರ್ಣಿಸಿಕೊಳ್ಳುವಳು. ಹೀಗೆ ಇವಳು ಶಿವನ ಪರಿಪೂರ್ಣ ಅರುಹು ಆಗಿದ್ದಾಳೆ. ಈಕೆಯಿಂದ ಈ ಸಕಲ

ಪ್ರಪಂಚಕ್ಕೆ ಇದರ ಆಗುಹೋಗುಗಳಿಗೆ, ಈ ದಿವ್ಯ ಚಿತ್‌ಶಕ್ತಿಯ ಯೋಗದಿಂದ ಶರಣನು ಹೊರಹೊಮ್ಮುವನು. ಇವನೇ ಎಲ್ಲಕ್ಕೂ ಸಾಕ್ಷೀಭೂತನಾಗಿರುವನು. ಮೇಲೆ ವಚನದಲ್ಲಿ ಈ ಶರಣನ ಉತ್ಪತ್ತಿಯನ್ನು ಹೇಳಲಾಗಿದೆ. ಈ ಶರಣನಿಗೆ ವೀರಶೈವರು ಅಂಗ (ಶುದ್ಧ ಜೀವ) ಎಂದು ಕರೆಯುವರು. ಶಿವನೇ ಇಳಿದು ಬಂದು ಹೀಗೆ ಶರಣ (ಶುದ್ಧ ಜೀವ) ನಾದುವನ್ನು ಇದು ಹೇಳುವದು ಇವನಿಗೆ (ಶರಣನಿಗೆ) ಗೀತೆಯವರು ಅಕ್ಷರ ಪುರುಷನೆನ್ನುವರು. ಆದರೆ ಅನೇಕತ್ವದ ಪ್ರಾಣವೆಂದರೆ ಈ ಜೀವನು ಪ್ರಕೃತಿಯ ಜ್ಯಾಡ್ಯಕ್ಕೆ ಒಳಗಾದವನು. ಎರಡರ ಬಡಿದಾಟದಲ್ಲಿ ಓಡಾಡುವ ಕ್ಷರಪುರುಷನೆಂದು ಈ ಜೀವಕ್ಕೆ ಹೇಳುವರು. ಹೀಗೆ ಶಿವನ ಚಿತ್‌ಶಕ್ತಿಯು ಸೃಷ್ಟಿಯಾಗುವದು. ಅದಕ್ಕೆ ಶಿವನಿಗೆ ಲಿಂಗ-ಅಂಗ ಎಂದು ಎರಡರ ತತ್ವಗಳಾಗುವವು. ಅದರಂತೆ ಶಕ್ತಿಗೂ ದೃಷ್ಟಿ-ಸೃಷ್ಟಿ ಎಂಬ ಎರಡು ತತ್ವಗಳಾಗುವದು ಸಹಜವದೆ. ಹೀಗೆ ಏಕವೇ ನಾನಾತ್ವದಲ್ಲಿ ರೂಪಗೊಂಡಿತು. ಇವೆರಡೂ ಸತ್ಯವೇ ಸರಿ. ನಾನಾತ್ವದಲ್ಲಿ ಸ್ವಲ್ಪ ಸತ್ಯವಿದ್ದರೆ ಏಕತ್ವದಲ್ಲಿ ಮಹಾ ಸತ್ಯವಿರುವದು. ನಾನಾತ್ವವು ಅಸತ್ಯ, ಮಿಥ್ಯ, ಭ್ರಮೆ, ಭ್ರಾಂತಿಯಲ್ಲ. ಇವೆರಡೂ ನಿಜವಾದ ಸತ್ಯವೇ ಸರಿ. ಇಲ್ಲಿ ಯಾವದೂ ಮಾಯೆಯಲ್ಲ ಮರುಳಲ್ಲ ಮಾಟವೂ ಅಲ್ಲ. ಯಾಕಂದರೆ ಈ ಸೃಷ್ಟಿ ಶಿವನ ನೆನಹಿನಿಂದ ಅಂದರೆ (ಚಿತ್ ಶಕ್ತಿಯ ಇಚ್ಛಾ ಪ್ರವೃತ್ತಿಯಿಂದ ಹೊರಹೊಮ್ಮಿರುವದು. ಆನಂದ ಆತ್ಮಜ್ಯೋತಿಯನ್ನು ಕಂಡುಕೊಳ್ಳಲು ಸಕಲ ವಿಷಯಗಳ ಕಾಮನೆಗಳನ್ನು ಪರಿಹರಿಸಿಕೊಳ್ಳಬೇಕೇಬೇಕು. ಇದಕ್ಕೆ ಈ ಸೃಷ್ಟಿ ಒಂದು ಭವ್ಯ ದಿವ್ಯ ನವ್ಯ ಕಾರ್ಯರಂಗವೆಂದೂ ಇದು ಅವಶ್ಯವೆಂದೂ ಶರಣರು ಹೇಳುವದು ಸತ್ಯ ಸತ್ಯವೆನ್ನಬಹುದು- ಹೀಗೆ ಏಕತ್ವದಲ್ಲಿ ಅನೇಕತ್ವವು ಸ್ಪಷ್ಟವಾಗಿಯಾಗಲಿ ಇಲ್ಲವೆ ಅಸ್ಪಷ್ಟವಾಗಿಯಾಗಲಿ ಇದ್ದೇ ಇರುವದು. ಇದು ಹೀಗೆ ಇಲ್ಲದಿದ್ದರೆ ಏಕತ್ವವು ಏನೂ ಇಲ್ಲ ಬಚ್ಚ ಬರಿಯ ಬಯಲು ಎನಿಸುವದು ಇಲ್ಲವೆ ಏನೂ ಇಲ್ಲದ ಶಾಂತಿಯುಕ್ತ ಶೂನ್ಯ (ಸೊಜಿ (○) ಎನಿಸುವದು. ಏಕತ್ವದ ಅರಿವೆ ಆದಲ್ಲಿ ಎಲ್ಲವೂ ನೀನೆ ಎಲ್ಲರೊಳೂ ನೀನೇ ಎಂಬ ಭಾವ ಸಹಜವಾಗಿ ಬರುವದು. ಅದಕ್ಕಾಗಿ ಶರಣರು ಕೆಳಗಿನಂತೆ ತಮ್ಮ ವಚನಗಳಲ್ಲಿ ಹೇಳಿದ್ದನ್ನು ಲಕ್ಷಿಸಬೇಕು.

"ಶಿವ ಜಗವಾಗಬಲ್ಲ ಶಿವಜಗವಾಗದಿರಲೂ ಬಲ್ಲ. ಶಿವರೂಪಾಗಲೂ ಬಲ್ಲ ಶಿವರೂಪಾಗದಿರಲೂ ಬಲ್ಲ ಶಿವನಜಾಂಡ ಕೋಟಿಗಳ ಮಾಡಬಲ್ಲ. ಮಾಡದಿರಲೂ ಬಲ್ಲ. ಶಿವಕೆಡಿಸಬಲ್ಲ ಕೆಡಿಸದಿರಲೂ ಬಲ್ಲ. ಶಿವಜಂಗಮವಾಗಿ ಶಿವನ ಪೂಜಿಸಬಲ್ಲ. ಶಿವಲಿಂಗವಾಗಿ ತಾನೇ ಪೂಜಿಸಿಕೊಳ್ಳಬಲ್ಲ. ಶಿವಹೋಗಾಗಿ ಅನ್ಯವುಂಟೆಂಬ ವೇದವುಂಟೇ? ಇಲ್ಲ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ವಿಶ್ವಕ್ಕೆಲ್ಲ ಮಾತಪಿತನು"

ಶಿವ ತನ್ನ ವಿನೋದಕ್ಕೆ ರಚಿಸಿದ ಅನಂತ ವಿಶ್ವವ ರಚಿಸಿದ ಏನು ವಿಶ್ವಕ್ಕೆ ಹೊರಗಾಗಿದ್ದನೇ? ಇಲ್ಲ, ವಿಶ್ವಮಯ ತಾನಾದನು. ವಿಶ್ವವೆಲ್ಲವು ತಾನಾದನೆಂದರೆ ವಿಶ್ವದ ಉತ್ಪತ್ತಿ ಸ್ಥಿತಿಲಯಕ್ಕೆ ಒಳಗಾದಾತನೇ? ಅಲ್ಲ, ಅದೇನುಕಾರಣವೆಂದಡೆ ಅಜಾತನಾಗಿ ಉತ್ಪತ್ಯನಲ್ಲ. ಸ್ಥಿತಿಕರ್ಮರಹಿತನಾಗಿ ಸ್ಥಿತಿಗೊಳಗಲ್ಲ. ಮರಣವಿರಹಿತನಾಗಿ ಲಯಕ್ಕೆ ಒಳಗಲ್ಲ ಇಂತೀ ಗುಣತ್ರಯಂಗಳು ಹೊದ್ದಲರಿಯವು. ತಾನಲ್ಲದೆ ವಿಶ್ವಕ್ಕೆ ಆಧಾರವಿಲ್ಲವಾಗಿ ದೂರಸ್ಥನಲ್ಲ. ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ ಇದಿರಿಲ್ಲ. ಇದಿರಿಲ್ಲವಾಗಿ ವಿಶ್ವಮಯವು ತಾನಾದುದೇ ಸತ್ಯ ಅರಸು ಕಾಲಾಳಾಗಬಲ್ಲ ತನ್ನ ವಿನೋದಕ್ಕೆ ಮರಳಿ ಅರಸಾಗಬಲ್ಲ ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ ಜಗವಾಗದಿರಲೂ ಬಲ್ಲ." ಹೀಗೆ ಪರಶಿವನು ಅನಂತ ಲೀಲೆಯಾಡುವನು. ಎಲ್ಲವೂ ತಾನೇತಾನಾಗಿ ತೋರುವನು. ಇದೆಲ್ಲ ಶಿವನ ಒಕ್ಕುಮಿಕ್ಕ ಪ್ರಸಾದವೆನಿಸುವ ಈ ಜಗವು ಈ ವಿಶ್ವವು ಅವನ ತೊಟ್ಟಿಲ, ಲೀಲಾಭೂಮಿ, ರಂಗಮಂಟಪವೆನಿಸಿದೆ. ಹೀಗೆ ಶಿವನೇ ತೊಟ್ಟಿಲವಾಗಿ ಶಿವನೇ ಶಿಶುವಾಗಿ, ಶಿವನೇ ಮಲಗಿ, ಶಿವನೇ ತೂಗಿ, ಶಿವನೇ ನಲಿದು ಲೀಲೆಯಾಡಿ ಶಿವನೇ ನೋಡಿ, ಶಿವನೇ ಅಳುವನೊಮ್ಮೆ, ಶಿವನೇ ನಗುವನೊಮ್ಮೆ, ಇಂಥ ಶಿವನು ಅಳತೆಗೆ ನಿಲುಕನು. ಮನಮಾತುಗಳಿಗೆ ಅತೀತನು. ಅವನಿಗೆ ಎರಡೆಂಬುದಿಲ್ಲ ಯಾಕಂದರೆ ಒಂದೂ ಅವನೇ ಹಲವೂ ಅವನೇ ಎಲ್ಲವೂ ಅವನೇ ಏನೂ ಇಲ್ಲದ ನಿರವಯಲನೂ ಅವನೇ ಹೀಗೆ ಆ ಪರಾತ್ಪರ ಸತ್ಯ ಶಿವನಿಂದ ಈ ಸತ್ಯ ಜಗ ಪ್ರಕಟವಾದುದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ, ಅದಕ್ಕೆ ವಿಶ್ವಗತಿಯು ಭ್ರಾಮಕವಲ್ಲ. ಅದೊಂದು ಅಖಂಡ ಲೀಲೆಯಾಗಿರುವದು. ಅತ್ಯಂತಿಕ ಸತ್ಯದ ಜೊತೆಗೆ ಅಖಂಡ ಲೀಲೆಯಾಗಿರುವದು. ಅತ್ಯಂತಿಕ ಸತ್ಯದ

ಜೊತೆಗೆ ಅಖಂಡ ಲೀಲೆಯು ಶರಣನಿಗೆ ಮಾತ್ರ ಪರಾತ್ಪರ ಪರಶಿವನ ಕೇವಲ ಪ್ರಾಣವಾಗಿದೆ. ಯಾಕಂದರೆ ಈ ಲೀಲೆಯು ಅವನ ಅಖಂಡತೆ ಪರಿಪೂರ್ಣತೆ ಇವುಗಳನ್ನು ಪ್ರಕಟಿಸುವ ದಿವ್ಯ ಶಕ್ತಿಯಾಗಿರುವದು. ಶರಣನು ತನ್ನ ಜೀವನವನ್ನು ಎಲ್ಲ ಬಗೆಯಿಂದ ನೋಡಿಕೊಂಡು ಅದರಲ್ಲಿಯ ಸೃಷ್ಟಿಯ ಚೇತನವನ್ನೂ ಪರಿಪೂರ್ಣ ಶಕ್ತಿಯನ್ನೂ ಅರಿತು ಅನುಭವಿಸುವನು. ಅದಕ್ಕೆ ಶರಣನು ಜೀವನವು ನಿರರ್ಥಕವಾದುದು ಭ್ರಾಮಕವಾದುದು ಮಾಯೆಯಿಂದ ಕೂಡಿದ್ದೆಂದು ಎಂದೂ ಹೇಳನು. ಇಂಥ ಹೇಡಿ ವಿಚಾರಕ್ಕೆ ಶರಣನಲ್ಲಿ ಎಲ್ಲಿಯೂ ಅವಕಾಶವೇ ಇಲ್ಲ. ಈ ಜೀವನವು ಈ ಜಗವು ಸತ್ಯವಾದದು. ಸಂಪತ್ತಿನಿಂದ ಕೂಡಿದ್ದು ಎಂದು ಇವನು ಪೂರ್ಣ ನಂಬಿರುವನು. ಹೀಗಾಗಿ ಶರಣನಿಗೆ ಪರಮಾತ್ಮನು ಸಗುಣನೂ ನಿರ್ಗುಣನೂ ಆಗಿರುವನು. ಹೀಗೆ ಪರಮಾತ್ಮನು ಸ್ಥಿರ-ಚರ, ಸ್ಥಬ್ಧ-ಸಂಚಲನ, ಲಿಂಗ-ಜಂಗಮ, ಶಿವ-ಶಕ್ತಿ ಆಗಿರುವನು. ಸ್ಥಬ್ಧ ಸ್ವರೂಪಕ್ಕೆ ಸ್ಥಿರ-ಲಿಂಗ-ಶಿವ, ಸಂಚಲನ ಸ್ವರೂಪಕ್ಕೆ ಚರ-ಜಂಗಮ-ಶಕ್ತಿ ಹೆಸರುಗಳುಂಟು. ಶಿವನು ಸದಾ ಇದ್ದಂತೆ ಇರುವನು 'ಏಕಮೇವ'ವಾಗಿರುವನು. ಅವ್ಯಯ ಅವ್ಯಕ್ತವಾಗಿಯೇ ಇರುವನು. ಅವನ ಶಕ್ತಿ ಮಾತ್ರ ಸದಾ ಚರಿಸುವಳು. ಬದಲಾವಣೆ ಹೊಂದುವಳು. ಜನನ, ಕೌಮಾರ, ಬಾಲ್ಯ, ಯೌವ್ವನ, ಪ್ರೌಢ, ಮುಪ್ಪು, ಜರಾಮರಣಗಳಿಂದಲೇ ಕೂಡಿದ್ದಿರುವದು. ಆದರೂ ನಿತ್ಯವಾಗಿರುವಳು. ನಿತ್ಯ ಹೊಸ ಹೊಸ ರೂಪ ಬಣ್ಣ ಇರುವಿಕೆಗಳಿಂದ ತೋರುವಳು. ಅಲ್ಲದೆ ಮರಣದ ಪೂರ್ವದಲ್ಲಿ ತನ್ನಂಥ ಮರಿಗಳನ್ನು ಹಿಂದೆಬಿಟ್ಟು ಮುಂದೆ ಸಾಗುವಳು ಹೊಸ ಹೊಸುದಕ್ಕೆ ಸ್ಥಾನಮಾಡಿ ಕೊಡುವ ಸ್ವಭಾವದವಳಿರುವಳು. ನಿತ್ಯ ಪರಮಾತ್ಮನಿಗೆ ಹೊಸ ಹೊಸ ವಡವೆಗಳಿಂದ ಪೂಜಿಸುವಳು. ಇಂದಿನ ಹೂ ನಾಳೆ ಪೂಜೆಗೆ ಬರುವದಿಲ್ಲ. ಅದು ಹಳೇದಾಯಿತು. ನಾಳೆ ಹೊಸ ಹೂ ಪೂಜೆಗೆ ಇದ್ದೇ ಇರುವವು. ಹಳೆ ಹಣ್ಣು ಮುಂದೆ ಸಾಗುವದು. ಹೊಸ ಹಣ್ಣು ಹಿಂದೆ ಬೆಂಬತ್ತುವದು, ಹಳೆ ಗಿಡ ಮುಂದೆ ಹೋಗುವದು. ಹೊಸ ಗಿಡ ಅದರ ಮರಿ ಹಿಂದೆ ಬೆಂಬತ್ತುವದು. ಹೀಗೆ ಸದಾ ಸೃಷ್ಟಿ ಸಾಗುತ್ತಲೇ ಇರುವದು. ಇದಕ್ಕೆ ಇವಳಿಗೆ ಚರಶಕ್ತಿ, ಜಂಗಮಸ್ವರೂಪ, ಸದಾ ಸಂಚಲನವಿರುವವಳು ಎಂದು ಹೇಳಬಹುದು. ಹೀಗೆ ರೂಪಾಂತರ

ಸದಾ ಹೊಂದಿದರೂ ಸದಾ ಇರತಕ್ಕವಳು. ಅದಕ್ಕೆ ಅವಳು ಸೃಷ್ಟಿ) ನಿತ್ಯ ಮತ್ತು ಸತ್ಯ. ಈ ಶಕ್ತಿ ಶಿವನಲ್ಲಿ ಇರದಿದ್ದರೆ ಶಿವನಿಗೆ ನಿಜ. ವಾಗಿ ಪೂರ್ಣತೆ ಬರುತ್ತಿದ್ದಿಲ್ಲ ಎಲ್ಲವನ್ನೂ ಒಳಗೊಂಡಿರುವದರಿಂದ ಈ ಪರಮಾತ್ಮ ಪರಶಿವನಿಗೆ ಪೂರ್ಣತೆ ಬಂದಿದೆ. ಕತ್ತಲೆ ಇರದಿದ್ದರೆ ಜಗತ್ತು ಒಂದು ದೃಷ್ಟಿಯಿಂದ ಅಪೂರ್ಣವೆಂದೇ ಹೇಳಬೇಕು. ಯಾಕಂದರೆ ಜಗತ್ತಿಗೆ ಕತ್ತಲೆಯು ಕೊರತೆಯಾಗುವದು. ಅದಕ್ಕೆ ಪರ ಮಾತ್ಮನಿಗೆ ಪರಿಪೂರ್ಣತೆ ಬರಬೇಕಾದರೆ ಈ ಚರಶಕ್ತಿ ಮೊದಲಾದ ಎಲ್ಲಾ ಅನಂತ ಲೋಕಾದಿ ಲೋಕಗಳು ಅವನಲ್ಲಿ ಇರುವದರಿಂದಲೇ ಹೊರತು ಬೇರೆ ಇಲ್ಲವೆಂದೇ ಹೇಳಬೇಕು.

## ಇನ್ನೂ ಕೆಲವು ಅನುಭವಿಗಳ ಸೂತ್ರಗಳು.

(೧) ಆತ್ಮಕೃತೇಃ ಪರಿಣಾಮಾತ್ । ಜನ್ಮಾದ್ಯಸ್ಯಯತ:
(ಬ್ರಹ್ಮಸೂತ್ರ)

(೨) ಸ್ವ ಶಕ್ತಿ ಪ್ರಚಯೋ ಸ್ಯ ವಿಶ್ವಮ್ (ಶಿವಸೂತ್ರ)

(೩) ಸತ್ಯ ಚಾ ನೃತಂ ಚ ಸತ್ಯಮಭವತ್ (ತೈತ್ತರೀಯ)

(೪) ತದೇವ ಜಗತ್ಕಾರಣಂ ಬ್ರಹ್ಮೇತ್ಯುಚ್ಯತೇ (ತೈ. ಆನಂದ)

(೫) ತನ್ನೊಳ ವಿನಾಭೂತದಿಂ ನಿತ್ಯಮಿಹ ಶಕ್ತಿಯಿಂ | ಅಖಿಳ ಸೃಷ್ಟಿಯನೆ ರಚಿಸಿ ಅದರೊಳಿರ್ದುಂ ನೋಡಲೀಶನ ವಿಕಾರಿ
(ಅನುಭವಸಾರ)

(೬) ನಾನಾಶಕ್ತಿ ಸಮನ್ವಿತನೆನಿಸಿ ನೀನೇ ಸಕಲ ಜಗನ್ಮಯ ನಪ್ಪೆ. (ಪರಮಾರ್ಥ ಗೀತೆ )

(೭) ವ್ಯಾವಹಾರಿಕ ಸತ್ತಾ ಬ್ರಹ್ಮಜ್ಞಾನವಾಗುವವರೆಗೆ ಇರುವಿಕೆ ಯುಳ್ಳದ್ದು. (ವಿಚಾರ ಸಾಗರ)

(೮) ವಿದೇಹ ಕೈವಲ್ಯ ಪರ್ಯಂತ ಜಾಗ್ರದಲ್ಲಿ ತೋರುವ ಇರುವಿಕೆಯು ಸತ್ಯ. (ವಿವೇಕ ಚಿಂತಾ)

(೯) ಬ್ರಹ್ಮವು ತಮ್ಮ ಆತ್ಮವೆಂಬ ಅರಿವೆ ಉಂಟಾಗುವವರೆಗೆ ಎಲ್ಲ ಲೌಕಿಕ ವ್ಯವಹಾರ ಸತ್ಯವಾಗಿರುವವು. (ಶಾಂಕರ ವೇದಾಂತ)

(೧೦) ಜಗವೂ ಶಿವಸ್ವರೂಪ ನೀನೂ ಶಿವಸ್ವರೂಪ (ಸಿ. ಸಿ.)

(೧೧) ಶಿವನಿಂದ ಎಂದೂ ಅಗಲದ ಪ್ರಪಂಚ ಯಥಾರ್ಥ ಪ್ರಪಂಚ । ವಿಷಯದಲ್ಲಿ ಮುಳುಗಿದ ಪ್ರಪಂಚ ಅಯಥಾರ್ಥ ಪ್ರಪಂಚ ಹೀಗೆ ಎರಡು ಪ್ರಪಂಚಗಳುಂಟು. (ಸಿ. ಸಿ.)

(೧೨) ನಾನಾ ತೋರ್ಕೆಯ ವಿಶ್ವವಿದನಾತ್ಮಮಯವಾಗಿ । ಜೀವಿಸಿ ಸುಖಿಸಬಲ್ಲನೆ ಮುಕ್ತನಹನು ॥ಪ॥ ಕರುವಿಟ್ಟು ಪ್ರತಿಮೆ ಪೀಠ ವಾಹನ ವಸ್ತ್ರಾಭರಣಾಯುಧಗಳೊಂದೆ ಲೋಹವಾದಂತೆ । ಮೊರಕಲ್ಪನೆಯ ನಾಮರೂಪಿ ಸೀ ಜಗವೆಲ್ಲ । ಪರಭಾವಿಸಲು ಚಿತ್ತಿಗೆರವಿಲ್ಲವೆಂದು ॥೧॥

ತೆರೆ ನೊರೆ ದ್ರವ ಬಿಂದು ಬುದ್ಬುದ ಮಧುರ ಶೀಕರ ಶೈತ್ಯಾದಿಗಳೊಂದೆ ಸಲಿಲವಾದಂತೆ । ಶರೀರ ಜಿವೇಶ ಕೂಟಸ್ಥ ಬ್ರಹ್ಮಗಳಾಗಿ । ಮೆರೆವುದೆಲ್ಲವು ಗುರುಸಿದ್ಧನೆಂದು ॥ (ಕೈವಲ್ಯ ಕಲ್ಪವಲ್ಲರಿ)

(೧೩) ಆತ್ಮನು ತಾನೇ ಸೃಷ್ಟಿಯ ಜಗವಾತನೆಂಬುವದು ಶಿಷ್ಯರ ಮತ.

(೧೪) ಮೊದಲು ಭಿನ್ನ ಜ್ಞಾನ, ಆ ಮೇಲೆ ಅಭಿನ್ನ ಜ್ಞಾನ. (ಬ್ರಹ್ಮ ಸಿದ್ಧಾಂತ ಮಾಲಾ)

(೧೫) ಭೇದವ ಬೇಧವೆಂಬೆರಡರಲ್ಲಿಯು ಅಭೇದ ಭಾವನೆಯೊಳೊಂದಿರೆ ಮುಕ್ತಿ. (ಪರಮಾನುಭವ)

(೧೬) ಸರ್ವವಿದನು ಬ್ರಹ್ಮಮಯವೆಂದು ಕಾಣ್ಬುದೇ ಸರ್ವಾತ್ಮಕ ಸುಷಮಾಧಿ. (ಪರಮಾನುಭವ)

(೧೭) ಪರಬ್ರಹ್ಮವು ಅವಿಕೃತರೂಪ ಪರಿಣಾಮದೊಡನೆ ಜಗದ್ರೂಪದಿಂ ತೋರುತ್ತಾನೆಂಬ ಪ್ರಜ್ಞೆಯುಳ್ಳದೇ ನಿರ್ಗುಣಯೋಗ. (ಶಾಂತಮಲ್ಲ).

**ಪಂಚ ದಶಿದ್ವೈತ ವಿವೇಕದಲ್ಲಿ ಕೆಳಗಿನವುಗಳನ್ನು ಹೇಳಿದೆ.**

(೧೮) ಈಶ್ವರ ನಿರ್ಮಿತ ಪ್ರಪಂಚ ಅದ್ವೈತಕ್ಕೆ ಜ್ಞಾನಕ್ಕೆ ಬಾಧಕವಲ್ಲ.

(೧೯) ಜ್ಞಾನಸಾಧನೆಯು ಪ್ರಪಂಚವಿಲ್ಲದಿದ್ದರೆ ಬ್ರಹ್ಮಜ್ಞಾನವಾಗದು.

(೨೦) ಈಶ್ವರ ನಿರ್ಮಿತ ದ್ವೈತ ಪ್ರಪಂಚದಿಂದಲೇ ಬ್ರಹ್ಮಜ್ಞಾನ ಪ್ರಾಪ್ತಿ.

(೨೧) ಜಗತ್ತನ್ನು ನಿವಾರಿಸಲು ಯಾರಿಗೂ ಶಕ್ಯವಿಲ್ಲ.

(೨೨) ಜಗತ್ತು ಸತ್ಯವಾಗಿದ್ದು ಬ್ರಹ್ಮನಿಗೆ ಭಿನ್ನಕಾಣದೆ ಅಭಿನ್ನವಾಗಿ ಕಂಡರೆ ಮುಕ್ತಿಗೆ ಬಾಧಕವಿಲ್ಲ.

(೨೩) ಜಗತ್ತು ಮಿಥ್ಯವೆಂದರೆ ಈಶ್ವರ ಗುರು ವೇದ ಎಲ್ಲವೂ ಮಿಥ್ಯವೇ ಸರಿ.

(೨೪) ಜಗತ್ತು ಮಿಥ್ಯವೆಂದರ ಈಶ್ವರನ ಸತ್ಯಸಂಕಲ್ಪಕ್ಕೆ ನಿಂದೆ ಮಾಡಿದಂತೆ.

(೨೫) ಜಗತ್ತು ಮಾನವನಿಗೆ ಜೀವಿತ ಸಾಧನವಾದ್ದರಿಂದ ಪ್ರಸಾದ ರೂಪದಿಂದ ಮಹೋಪಕಾರವಾಗಿದೆ.

(೨೬) ಜಗತ್ತಿನಿಂದಲೇ ಹುಟ್ಟಿ ಅಲ್ಲೇ ಬೆಳೆದು ಅದನ್ನೇ ಉಪಯೋಗಿಸಿ ತಿಂದು ಕುಡಿದು ಭೋಗಿಸಿ ಅದರಿಂದಲೇ ಜೀವಿಸಿ ಅದನ್ನೇ ಮಿಥ್ಯವೆನ್ನುವದು ಹುಚ್ಚುತನವೇ ಸರಿ. ಇದರಿಂದ ಮಾನವನು ಕೃತಘ್ನನೆನಿಸಿ ಲೋಕದಲ್ಲಿ ನಿಂದಿತನಾಗುವನು.

(೨೭) ಬೆಳೆ ನಿಮ್ಮ ದಾನ, ಮಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ಇಳೆ ನಿಮ್ಮ ದಾನ, ಹೊಳೆ ನಿಮ್ಮ ದಾನ ನಿಮ್ಮ ದಾನವನುಂಡು ನಿಮಗೆ ಬೈಯುವವರನೇನೆಂಬೆ ಎಂದು ಶರಣರು ಹಾಡಿದ್ದಾರೆ.

(೨೮) ಈಶ್ವರ ಪ್ರಪಂಚಕ್ಕೆ ದ್ವೇಷಿಸುವದು, ನಿಂದಿಸುವದು, ಹೆಸರಿಡುವದು ಮಿಥ್ಯೆ ಎನ್ನುವದು. ಅಸತ್ಯ ಎನ್ನುವದು ಮೊದಲಾದವುಗಳಿಂದ ಈಶ್ವರ ದ್ವೇಷಿಯಾಗಿ ಮುಕ್ತಿಗೆ ಬಾಹಿರರಾಗುವರು. (ಪಂಚದಶಿದ್ವೈತ ವಿವೇಕದಲ್ಲಿ ಹೇಳಿದ್ದು ಪೂರ್ಣ.)

(೨೯) ಒಂದು ವಿಷಯವು ಬೇರೆಂದು ಭರವಿಸದೆ ಈಶನೆಂದು ಅವು ಚಿಂತನೆಗೈವುದು।..ಆತ್ಮೈವೇದಂ ಸರ್ವಂ ಎಂದು ನಿಗಮವಾಕ್ಯವಿಹುದು ||೧|| ಸಿಮತೆಯಿಂದಲಿ ಸರ್ವವಿದನೀಶ ಮಯುವೆಂದು। ಸುಮತೆಯೊಳೊಮ್ಮೆ ಭಾವಿಸುವರ್ಗೆ ಕಮನೀಯಮುಕ್ತ ಕೈವಲ್ಯವಹುದು ಸತ್ಯವು ಎಂದು ನಂಬು. (ಪರಮಾನುಭವ)

(೩೦) ಸರ್ವವನ್ನೂ ಶಿವಮಯವಾಗಿ ಕಾಣುವದೇ ಭಾವಶುದ್ಧಿ. ಇವರಿಗೆ ಮುಕ್ತಿ ಶಿವ ಬೇರೆ ಜೀವ ಬೇರೆ ಜಗತ್ತು ಬೇರೆ ಎಂಬ ಭಿನ್ನಭಾವದವರಿಗೆ ಮುಕ್ತಿ ಇಲ್ಲ.

(೩೧) ಲಿಂಗಮಧ್ಯೆ ಜಗತ್ಸರ್ವ ಲಿಂಗಮಯಂ ಜಗತ್ । ಲಿಂಗ ಬಾಹ್ಯಾತ್ಪರಂ ನಾಸ್ತಿ । ಲಿಂಗಂ ಶೈವಮಿದಂ ಸಾಕ್ಷಾತ್ ಶಿವ ಶಕ್ತ್ಯುಭಯಾತ್ಮಕಂ ॥

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯ ಸಚರಾಚರ ।

ಲಿಂಗವೆಂಬುದು ಸರ್ವಕಾರಣ ನಿರ್ಮಲ । ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ । ಲಿಂಗವೆಂಬುದು ಸರ್ವ ಲೋಕೋತ್ಪತ್ತಿಗೆ ಕಾರಣ । ಲಿಂಗವೆಂಬುದು ಸರ್ವ ತತ್ವ ಪೂರ್ಣ । ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜ ದೇಹ । ಲಿಂಗವೆಂಬುದು ಪರಶಿವನ ಘನತೇಜ । ಲಿಂಗ ವೆಂಬುದು ಪರಶಿವನ ನಿರತಿಶಯಾನಂದ ಸುಖವು । ಲಿಂಗವೆಂಬುದು ಪರಶಿವನ ಪರಮಜ್ಞಾನ ವಿನಾರ್ಥ ಗಮಕಂ ಚಿಹಂ ಲಿಂಗ ಮಿತ್ಯಾಭ ದಾಯತೇ । ಉತ್ಪತ್ತಿಸ್ಥಿತಿಲಯಗಳೆಲ್ಲಕ್ಕೂ ಲಿಂಗವೇ ಕಾರಣ

(೩೨) ಶಿವಶಕ್ತಿ ಸಂಘಟನೆಂಬುದೆಂತು ಹೇಳಿರಣ್ಣಾ । ಶಿವನೇ ಚೈತನ್ಯಾತ್ಮನು । ಶಕ್ತಿಯೇ ಚಿತ್ತು । ಇಂತು ಚೈತನ್ಯಾತ್ಮನೇ ಚಿತ್ ಸ್ವರೂಪನೆಂದರಿಯ ಬಲ್ಲರೆ ಭಿನ್ನವೆಲ್ಲಿಯದು ಗುಹೇಶ್ವರ ಗುಹೇಶ್ವರ ಲಿಂಗವು ಶಕ್ತಿಯೊಳಗಾಯಿತ್ತು । ಬಟ್ಟಬರಿಯ ಬಯಲೆಂಬುದಕ್ಕೆ ಉಪ ಮಾನವಿಲ್ಲ.

(೩೩) ಶಿವನು ತನ್ನದೇ ಆದ ತನಿಗಿಂತ ಭಿನ್ನವಲ್ಲದ ಒಂದು ಪ್ರಕಾಶ ಶಕ್ತಿಯಿಂದ ಕೂಡಿದ್ದಾನೆ. ಇದರ ವಿಮರ್ಶೆಯೂ ಕೂಡ ಆತ ನಿಗುಂಟು. ರತ್ನ, ಸೂರ್ಯ, ವಿದ್ಯುದೀಪ, ನಕ್ಷತ್ರ,ಗಳಿಗೆ ಸ್ವಂತ ಪ್ರಕಾಶವಿದ್ದರೂ ಅವುಗಳಿಗೆ ಅದರ ಬಗ್ಗೆ ಅರಿವು ವಿಮರ್ಶ ಶಕ್ತಿ ಇಲ್ಲ ಯಾಕೆಂದರೆ ಅವು ಜಡವಾಗಿರುವವು. ಪರಶಿವನು ಚೈತನ್ಯಾತ್ಮಕ ನಿರುವದರಿಂದ ತನ್ನ ಶಕ್ತಿಯ ಅರಿವು ಆತನಿಗುಂಟು. ಇದೇ ಅವಿನಾ ಭಾವ ಸಂಬಂಧದಿಂದ ಶಿವನಲ್ಲಿ ಜಗತ್ತಿರುವದೆಂದು ಬೋಧಿಸುವದು.

ಹೀಗಾಗಿ ಶಿವ-ಶಕ್ತಿ, ಲಿಂಗ-ಜಂಗಮ, ಸ್ಥಿರ-ಚರ, ಮತ್ತು ಸತ್ಯ-ನೆನಹುಗಳು ಅವಿನಾಭಾವ ಸಂಬಂಧದಿಂದ ಕೂಡಿಕೊಂಡಿರುವವು. ಇವು ಬಿಚ್ಚಿ ಬೇರಾಗದಂತೆ ಬೆಸುಗೆಗೊಂಡಿವೆ. ಒಂದು ವಿಶ್ವಾಧಿಕ ಸತ್ಯವಾದರೆ ಇನ್ನೊಂದು ವಿಶ್ವಗತ ಸತ್ಯವಾಗಿರುವದು. ಹೀಗೆ ಇವೆ ರಡೂ ಸತ್ಯಗಳೇ ಸರಿ. ಆದರೂ ಶಿವನು ಶಕ್ತಿಯನ್ನು ಮೀರಿರುವನು. ಈ ವಿಶ್ವಗತ ಶಕ್ತಿಗೆ ಸಂಪೂರ್ಣ ಸ್ವತಂತ್ರವಿಲ್ಲ. ಆಕೆಗೆ ತಾನೇ ತಾನಾದ ಇರುವಿಕೆ ಇಲ್ಲ. ಆದರೆ ಶಿವನು ಶಕ್ತಿಯೊಳಗೆ ಒಂದುಗೂಡಿ

ಹೊಂದಿಕೆಯಾದಾಗ ಅದು ಶಕ್ತಿ ಎಂದು ಹೆಸರುಗೊಳ್ಳುವದು. ಇದು ಸೋಪಾಧಿಕ ಸತ್ಯವೆನಿಸುವದು. ಪರಶಿವನು ನಿರುಪಾಧಿಕ ಸತ್ಯವಾಗಿರುವನು. ಆದ್ದರಿಂದ ಬ್ರಹ್ಮಾಂಡ ದೃಷ್ಟಿಯಿಂದ ಈ ಶಕ್ತಿಯು ಸೃಷ್ಟಿ-ಸ್ಥಿತಿ-ಲಯ ಕಾರಣಕಾರಳೆಂದೂ ದೇವಜ್ಞಾನ ದೃಷ್ಟಿಯಿಂದ ಅನುಗ್ರಹಕಳೆಂದೂ ಮತ್ತು ಸ್ವಾನುಭವ ದೃಷ್ಟಿಯಿಂದ ವಿಷಯಾತೀತವೆಂದೂ ಕರೆಯಿಸಿಕೊಳ್ಳುತ್ತಾಳೆ. ಶಿವನು ಕಾರಣ ರೂಪನು., ಅನಂತ ಪ್ರಕಾಶಮಯನು, ಅನಂತ ಪರಮ ಶಾಂತಮಯನು. ಅರುಹು ಇರುಹುಗಳಿಂದೊಡಗೂಡಿರುವನು. ಅದಕ್ಕೆ ಸರ್ವ ಸ್ವತಂತ್ರದ ಆನಂದಮಯನು. ಹುಟ್ಟು ಬೆಳವಣಿಗೆಗಳಿಲ್ಲದ ಪೂರ್ಣನು ಎಡೆತಡೆಗಳಿಲ್ಲದಾತನು. ಆದರೆ ಈ ಶಕ್ತಿಯು ಮಾತ್ರ ಅವನ ಪ್ರಕಾಶಮಯ ಕಾಂತಿಮಯ ಗತಿಯಲ್ಲಿ ಗಮನಗೊಳ್ಳುವಳು. ಪರಾತ್ಪರ ಪರಮಾತ್ಮನಿಂದ ಹೊರಚಲ್ಲಿ ಹೊರಸೂಸಿ ಹರಿಯುವ ಪ್ರವಾಹವಾಗಿರುವಳು. ಶಾಶ್ವತದಿಂದ ಹೊರಸೂಸುವ ದಿವ್ಯ ಗತಿಯ ಗಮನ ಉಳ್ಳವಳು. ವಿಶ್ವ ವ್ಯಾಪಕವಾಗಿರುವಳು. ಆದಿ ಬೌದ್ಧಿಕ ಶಾಸ್ತ್ರದ ದ್ರವ್ಯ ಗುಣವೆಂದರೂ ಇವಳೇ, ಆಧ್ಯಾತ್ಮ ಶಾಸ್ತ್ರದ ವಿಷಯ ವಿಷಯಿಗಳೆಂದರೆ ಇವಳೇ ಸರಿ. ಹೀಗೆ ಮಹಾ ಕಾರಣ, ಕಾರಣ, ಸೂಕ್ಷ್ಮ, ಸ್ಥೂಲ, ಜಗತ್ತುಗಳಲ್ಲಿ ಅನಂತ ಶಕ್ತಿಯ ರೂಪದಿಂದ ಹುದುಗಿಕೊಂಡು ಎಲ್ಲವನ್ನೂ ಕ್ರಮಬದ್ಧವಾಗಿ ಮುಕ್ತಗೊಳಿಸುವವಳು ಇವಳೇ ಸರಿ. ಹೀಗೆ ಶಿವ-ಶಕ್ತಿಯರ ಸ್ವರೂಪವಿರುವದರಿಂದಲೇ ಈಗ ನಡೆದ ಆಟ ಬಹು ಸೊಗಸಾಗಿ, ರಮ್ಯವಾಗಿ, ದಿವ್ಯವಾಗಿ ಸಾಗಿರುವದು. ಬರೇ ಶಿವನಿಂದಲೂ ಏನೂ ಆಗಲಾರದು. ಬರೇ ಶಕ್ತಿಯಿಂದಲೂ ಏನೂ ಆಗಲಾರದು. ಶಕ್ತಿ ರಹಿತ ಶಿವನು ಶವಸಾಗಿ ಬಿಡುವನು. ಶಿವನೊಳಗಿನ ಇಕಾರ ತೆಗೆದರೆ ಶವವಾಗುವದಲ್ಲವೇ ? ಆದರೆ ಇಬ್ಬರೂ ಕೂಡಿದಾಗ ಮಾತ್ರ ಈ ಜಗತ್ತಿನ ಲೀಲೆ, ಆಟ, ವಿನೋದ ಬಹು ಆಶ್ಚರ್ಯಕರವಾಗಿ ಆನಂದದಾಯಕವಾಗಿ ಸಾಗುವದರಲ್ಲಿ ಸಂದೇಹವಿಲ್ಲ. ಅದಕ್ಕೆ ಇವೆರಡೂ ಸತ್ಯ ನಿತ್ಯವೆಂದು ಹೇಳಬಹುದು. ಶಿವ-ಶಕ್ತಿ ಪ್ರಕೃತಿ-ಪುರುಷರಲ್ಲಿ ಭೇದವನ್ನು ಶರಣನು ಮನ್ನಿಸುವದಿಲ್ಲ. ಆದ್ದರಿಂದ ಶರಣನಿಗೆ ಜೀವ ಪ್ರಪಂಚವು ಶಿವ ಪ್ರಪಂಚವಾಗಬೇಕೆಂದು ಸದಾ ಬಯಕೆ ಇರುವದು. ಇದು ಕುರುಡ+ಕುಂಟ ಕೂಡಿ ಹೊಳೆ ದಾಟಿದಂತೆ ಇದೆ.

# ನಮ್ಮ ಶಿವಾನುಭವ ಮಾಸಪತ್ರಿಕೆಯ.

## ಚಂದಾದಾರರಲ್ಲಿ ವಿನಂತಿ.

**ಮಹಿನೀಯರೇ.**

ನಮ್ಮ ಶಿವಾನುಭವ ಪತ್ರಿಕೆಯು, ಇದವರೆಗೂ ಯೋಗ್ಯರೀತಿಯಿಂದ ತನ್ನ ಕೀರ್ತಿಯನ್ನು, ಸಂಪಾದಿಸಿರುವದು. ತಮೆಲ್ಲರ ಉದಾರ ದೇಣಿಗೆಯೇ ಪ್ರಾಮುಖ್ಯವಾಗಿದೆ. ಆದರೆ ಇಲ್ಲಿಯವರೆಗೂ ನಮ್ಮ ಸಂಚಿಕೆಯ ವಾರ್ಷಿಕಚಂದಾ (೫-೧೨)ಯಂತೆಯೇ ನಾವು ಸ್ಥಿಕರಿಸಿ ಕಳಿಸುತ್ತಾ ಬಂದೆವು ಈಗ ನಮಗೆ ಪ್ರತಿಯೊಂದು ಸಂಸ್ಥೆಯ ಖರ್ಚುಗಳು ಹೆಚ್ಚಾಗಿ ಬರಹತ್ತಿದ್ದರಿಂದ ಮುಂದಿನ ಮಾರ್ಚ ೧೫-೩-೬೧ರಿಂದ ವಾರ್ಷಿಕ ಚಂದಾ (೬)ರೂಪಾಯಿಯಂತೆ ನಮ್ಮ ಕಾರ್ಯಾಲಯದಿಂದ ನಿರ್ಧರಿಸಲ್ಪಟ್ಟಿದೆ. ಮೊದಲು ನಮ್ಮಲ್ಲಿ ವರ್ಷದ ಹಣವನ್ನು ತುಂಬಿದವರಿಗೆ ಅದು ಮುಗಿಯುವವರೆಗೂ ಕಳಿಸುತ್ತೇವೆ. ಅದು ಮುಗಿದಮೇಲೆ (೬)ರೂಪಾಯಿಯಂತೆಯೇ ಎಲ್ಲರೂ ಶಿವಾನುಭವದ ಪ್ರೋತ್ಸಾಹನೆಗಾಗಿ ಕಳಿಸುವಿರೆಂದು ನಂಬಿದ. **ಶಿವಾನುಭವ ಕಾರ್ಯಾಲಯ ವಿಜಾಪುರ.**

**ಹಿತಚಿಂತಕ. ಪ್ರಿಂಟಿಂಗ. ಪ್ರೆಸ್.**

**ವಿಜಾಪುರ.**

